# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ದ್ರೋಣಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೬

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 16**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*
**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*
**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*
**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*
**ದಿ|| ವಿದ್ವಾನ್ ರಾಮೇಶ್ವರಾವಧಾನೀ**

ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ದಯಾಮಯನಾದ, ದಿವ್ಯಮಂಗಳವಿಗ್ರಹನಾದ, ಸಚ್ಚಿದಾನಂದ ಸ್ವರೂಪನಾದ, ತೇಜೋರೂಪನಾದ ಭಗವಂತನ ದಿವ್ಯಾನುಗ್ರಹದಿಂದ ಹದಿನಾರನೆಯ ಸಂಪುಟವನ್ನು ಮುಗಿಸಿ, ಸುಗಂಧಪುಷ್ಪರೂಪವಾದ ಈ ಕುಸುಮವನ್ನು ಆ ದಿವ್ಯಪುರುಷನ ದಿವ್ಯಪಾದಾರವಿಂದಗಳಲ್ಲಿ ಭಕ್ತಿಪೂರ್ವಕ ವಾಗಿ ಸಮರ್ಪಿಸಿ, ಅವನ ದಿವ್ಯಪ್ರಸಾದರೂಪವಾದ ಈ ಸಂಪುಟವನ್ನು ನಮ್ಮ ಪ್ರಿಯಗ್ರಾಹಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಈ ಸಂಪುಟವನ್ನು ೧೯೭೮ನೆಯ ಡಿಸೆಂಬರ್ ಮಾಹೆಯಲ್ಲಿಯೇ ಹೊರತರಲಾಗುವುದೆಂದು ಪ್ರಕಟಿಸಲಾಗಿತ್ತು. ಸುಳ್ಳುಹೇಳುವುದು ಮಹಾಪರಾಧವೇ ಸರಿ. ಆದರೆ ಸಾವಕಾಶಕ್ಕೆ ಒಂದು ಮುಖ್ಯಕಾರಣವಿದೆ. ಹದಿನಾರನೆಯ ಸಂಪುಟವನ್ನು ಮುಗಿಸಿ ಏಳನೆಯ ಸಂಪುಟದ ಪುನರ್ಮುದ್ರಣವನ್ನು ತೆಗೆದುಕೊಳ್ಳ ಬೇಕೆಂಬುದು ಹಿಂದಿನ ನಿರ್ಧಾರವಾಗಿದ್ದಿತು. ಆದರೆ ನೂತನ ಗ್ರಾಹಕರ ಒತ್ತಡವು ಹೆಚ್ಚಾದುದರಿಂದ ಏಳನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸಿ ಹದಿನಾರನೆಯ ಸಂಪುಟವನ್ನು ಮುದ್ರಣಕ್ಕೆ ತೆಗೆದುಕೊಳ್ಳಲಾಯಿತು. ಸಂಪಾದಕ ಮಂಡಲಿಯವರ ವಿಶೇಷಶ್ರಮದಿಂದಲೂ, ನಮ್ಮ ಮುದ್ರಣಾ ಲಯದ ಕೆಲಸಗಾರರ ವಿಶೇಷಪ್ರಯತ್ನದಿಂದಲೂ ಈ ಸಂಪುಟವು ನಮ್ಮ ನಿರೀಕ್ಷೆಗಿಂತಲೂ ಮೊದಲೇ ಹೊರಬಂದಿರುತ್ತದೆ. ಈ ವರ್ಷ ಇನ್ನೂ ನಾಲ್ಕು ಸಂಪುಟಗಳನ್ನು ಹೊರತರುವ ಆಶಯವಿದೆ .'ತಂದೇ ತರುತ್ತೇವೆ'-ಎಂದು ಹೇಳಲಾರೆವು. ಸುಳ್ಳಾಡಿದ ಪಾಪಕ್ಕೆ ಗುರಿಯಾಗಬೇಕಾದೀತು. ಬಹಳ ಆಕಾಂಕ್ಷೆಯಿಂದ ಸಂಪುಟಗಳನ್ನು ನಿರೀಕ್ಷಿಸುವ ಸತ್ಪುರುಷರಿಗೆ ನಿರಾಶೆ ಯನ್ನುಂಟುಮಾಡಿದರೆ ಅದೂ ಸಹ ಮಹಾಪರಾಧವೇ ಆಗುತ್ತದೆ. ಆದುದರಿಂದ ನಮ್ಮ ಆಶಯವನ್ನು ಮಾತ್ರವೇ ವ್ಯಕ್ತಪಡಿಸಿದ್ದೇವೆ. ಗುರುವಿನ ದಿವ್ಯಾನುಗ್ರಹ, ಪರಮಾತ್ಮನ ದಯೆ ಮತ್ತು ನಮ್ಮ ಗ್ರಾಹಕರ ಸಂಪೂರ್ಣ ಸಹಕಾರ-ಇವುಗಳಿಂದ ನಮ್ಮ ಆಶೆಯು ಕಾರ್ಯಗತವಾಗಬೇಕಾಗಿದೆ.

ಈ ಸಂಪುಟದಲ್ಲಿ ಹದಿನಾಲ್ಕನೆಯ ದಿವಸದ ಯುದ್ಧವಿನ್ನೂ ಮುಗಿದಿಲ್ಲ. ಸಂಪುಟದ ಆದ್ಯಂತವಾಗಿ ಯುದ್ಧಪ್ರಕರಣವೇ ಇದೆ. ಅಭಿಮನ್ಯುವಿನ

ಪರಾಕ್ರಮವು ರೋಮಾಂಚಕಾರಕವಾದುದು. ಯುದ್ಧಪ್ರಕರಣದಲ್ಲಿ ಚರ್ವಿತ-ಚರ್ವಣವಿದ್ದರೂ ಓದುಗರಿಗೆ ಬೇಸರಿಕೆಯಾಗಲಾರದೆಂಬುದು ನಮ್ಮ ಅಭಿಪ್ರಾಯವಾಗಿದೆ. ಹಿಂದಿನಂತೆಯೇ ಆಯಾ ದಿನದ ಯುದ್ಧದ ವಿಶ್ಲೇಷಣೆ ಯನ್ನೂ ಮಾಡಿದ್ದೇವೆ. ಕೃಷ್ಣಾರ್ಜುನರು ಸೇರಿ ಮಾಡುವ ಪರಮಮಂಗಳ ವಾದ ಶಿವಸ್ತೋತ್ರವು ಈ ಸಂಪುಟದಲ್ಲಿದೆ. ಒಬ್ಬರ ಮನಸ್ಸನ್ನು ಒಲಿಸಲು ಹೇಗೆ ಮಾತನಾಡಬೇಕೆಂಬುದನ್ನು ಯುಧಿಷ್ಠಿರ-ಸಾತ್ಯಕಿಯರ ಸಂಭಾಷಣೆ ಯಿಂದ ತಿಳಿಯಬಹುದಾಗಿದೆ. ಯುದ್ಧದ ಮಧ್ಯದಲ್ಲಿ ಬರುವ ಇನ್ನೂ ಅನೇಕ ಗಹನ ವಿಷಯಗಳು ಈ ಸಂಪುಟದಲ್ಲಿ ತುಂಬಿವೆ. ಮಹಾಭಾರತವು ಜ್ಞಾನದ ಖನಿ. ಅಗೆದಗೆದಂತೆ ವಜ್ರ-ವೈಡೂರ್ಯಗಳು ಸಿಕ್ಕುತ್ತಾ ಹೋಗುತ್ತವೆ. ಅವುಗಳನ್ನಾರಿಸಿಕೊಂಡು ಬುದ್ಧಿಯಿಂದ ಸಾಣೆಹಿಡಿದು ಹೃದಯ ದಲ್ಲಡಗಿಸಿಕೊಳ್ಳುವುದು ನಮ್ಮ ಕರ್ತವ್ಯವಾಗಿದೆ.

ಈ ಸಂಪುಟಕ್ಕೆ ಸುವಿಖ್ಯಾತರಾದ ಶ್ರೀ ಜಯತೀರ್ಥರಾಜ ಪುರೋಹಿತರು ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ಇವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳು.

ಏಳನೆಯ ಸಂಪುಟವು ಪುನರ್ಮುದ್ರಣವಾಗಿರುವುದರಿಂದ ನಮ್ಮಲ್ಲಿ ಈಗ ಎಲ್ಲಾ ಸಂಪುಟಗಳೂ ಸಿಕ್ಕುತ್ತವೆ. ದಾಸ್ತಾನು ಹೆಚ್ಚಾಗಿಯೇ ಉಳಿದಿದೆ. ಇದರ ವಿತರಣೆಗೆ ನಮ್ಮ ಗ್ರಾಹಕರು ಸಂಪೂರ್ಣವಾಗಿ ಸಹಕರಿಸಬೇಕಾಗಿದೆ. ಸುಮಾರು ನೂರುಮಂದಿ ಗ್ರಾಹಕರು ನಮ್ಮ ಪ್ರಾರ್ಥನೆಗೆ ಮನ್ನಣೆ ಕೊಟ್ಟು ಇಬ್ಬಿಬ್ಬರು ಗ್ರಾಹಕರನ್ನು ಮಾಡಿಕೊಟ್ಟಿದ್ದಾರೆ. ಅವರಿಗೆ ನಮ್ಮ ಅಭಿನಂದನೆಗಳು. ಉಳಿದವರೂ ಶ್ರಮವಹಿಸಿ ಕಡೆಯಪಕ್ಷ ಇಬ್ಬರು ನೂತನ ಗ್ರಾಹಕರನ್ನಾದರೂ ಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ ಕಾರ್ಪೊರೇಷನ್ ಆಡಳಿತಾಧಿಕಾರಿಗಳಾಗಿದ್ದು ಇತ್ತೀಚೆಗೆ ವಿಶ್ರಾಂತರಾದ ಶ್ರೀ ಎನ್. ಲಕ್ಷ್ಮಣರಾವ್ ಅವರು ನೀಡಿದ್ದ ಆಶ್ವಾಸನೆಯಂತೆ ಬೆಂಗಳೂರಿನಲ್ಲಿರುವ ನಗರ ಕೇಂದ್ರ ಗ್ರಂಥಾಲಯಗಳಿಗೆ ಮಹಾಭಾರತದ ಸಂಪುಟಗಳನ್ನು ತರಿಸಿಕೊಂಡಿರುತ್ತಾರೆ. ಇವರಿಗೂ ನಮ್ಮ ಅಭಿನಂದನೆಗಳು.

ಬ್ಯಾಂಕುಗಳ ಮೂಲಕವಾಗಿ ಗ್ರಾಹಕರಾಗುತ್ತಿರುವವರ ಸಂಖ್ಯೆ ಕಡಿಮೆಯಾಗಿದೆ. ಬ್ಯಾಂಕಿನ ಮ್ಯಾನೇಜರುಗಳು ಸಹಕರಿಸುತ್ತಿಲ್ಲವೆಂದು ಅನೇಕರು ಹೇಳುತ್ತಿದ್ದಾರೆ. ಈ ಸಂದರ್ಭದಲ್ಲಿ ಬ್ಯಾಂಕಿನ ಮ್ಯಾನೇಜರುಗಳನ್ನು ನಾವು ಪ್ರಾರ್ಥಿಸಿಕೊಳ್ಳುತ್ತೇವೆ. ' ದೇವರು ವರ ಕೊಟ್ಟರೂ ಪೂಜಾರಿ ವರ ಕೊಡ- ಎಂಬಂತೆ ದಯಮಾಡಿ ಮಾಡಬೇಡಿರಿ. ಕೇಂದ್ರಕಛೇರಿಯ ಮುಖ್ಯಾಧಿಕಾರಿಗಳಿಗೆ ಈ ಮಹಾಕಾರ್ಯಕ್ಕೆ ನೆರವು ನೀಡಬೇಕೆಂಬ ಆಶಯವು ಬಹಳವಾಗಿದೆ. ಅದನ್ನು ಕಾರ್ಯಗತಮಾಡಿಕೊಡಬೇಕಾದವರು ತಾವೇ ಆಗಿದ್ದೀರಿ. ಇದಕ್ಕೆ ನೆರವು ನೀಡಿದಲ್ಲಿ ಜ್ಞಾನಪ್ರಸಾರದ ಮಹಾಪುಣ್ಯವು ತಮಗೂ ಲಭಿಸುತ್ತದೆ. ಆದುದರಿಂದ ದಯಮಾಡಿ ಮಹಾಭಾರತದ ಸಂಪುಟಗಳನ್ನು ಕೊಳ್ಳಲು ತಮ್ಮ ಬಳಿಗೆ ಬಂದು ಕೇಳಿಕೊಳ್ಳುವ ನಿಮ್ಮ ಸದಸ್ಯರಿಗೆ ಕೇವಲ ೨೪೦/-೦೦ ಅಥವಾ ೩೦೦/-೦೦ ರೂ.ಗಳ ಸಾಲವನ್ನು ಒದಗಿಸಲು ನಿರಾಕರಿಸಿ ನಿರಾಶರನ್ನಾಗಿ ಮಾಡಬೇಡಿರಿ. ಇಂತಹ ಮಹಾಕಾರ್ಯಕ್ಕೆ ನಿಮ್ಮಿಂದ ಸಾಧ್ಯವಾಗುವ ಈ ನೆರವು ನೀಡುವುದರಿಂದ ಧರ್ಮಕ್ಕೂ ಮತ್ತು ತಮ್ಮ ಕೇಂದ್ರಕಛೇರಿಗೂ ಪುರಸ್ಕಾರನೀಡಿದಂತಾಗುತ್ತದೆ. ಕೆನರಾ, ಸಿಂಡಿಕೇಟ್, ಕಾರ್ಪೊರೇಷನ್, ಕರ್ಣಾಟಕ, ದಿ ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕುಗಳ ಎಲ್ಲ ಶಾಖೆಗಳ ಮ್ಯಾನೇಜರುಗಳೂ ನಮ್ಮ ಈ ಪ್ರಾರ್ಥನೆಯನ್ನು ಖಂಡಿತವಾಗಿಯೂ ಪುರಸ್ಕರಿಸುವರೆಂದು ನಾವು ಭಾವಿಸಿದ್ದೇವೆ.

ಸಂಪಾದಕಮಂಡಲಿಯವರು ನೀಡುತ್ತಿರುವ ನೆರವಿನ ವಿಷಯವಾಗಿ ಎಷ್ಟು ಬರೆದರೂ ಅಲ್ಪವೇ ಆಗುತ್ತದೆ. ಈ ಮಂಡಲಿಯು ದೈವೇಚ್ಛೆಯಿಂದ ಒದಗಿ ಬಂದಿದೆ. ಪರಮಾತ್ಮನ ಪ್ರೀತಿಗಾಗಿ ಈ ವಿದ್ವಾಂಸರೆಲ್ಲರೂ ನಿಷ್ಠೆ ಯಿಂದ, ಶ್ರದ್ಧೆಯಿಂದ ಈ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಇದೊಂದು ದೈವಿಕ ಸಂಘಟನೆ. ಮನುಷ್ಯನು ಯೋಚಿಸಿ ಸಿದ್ಧಮಾಡತಕ್ಕುದಲ್ಲ. ಕೇವಲ ಪರಮಾತ್ಮನ ಇಚ್ಛೆಯಂತೆಯೇ ನಡೆಯತಕ್ಕುದು. ಮಹಾಭಾರತದ ಪ್ರಕಟನೆಯಲ್ಲಿ ಇಂತಹ ದೈವಿಕವಾದ ವಿಚಿತ್ರಸಂಘಟನೆಗಳು ಎಷ್ಟೋ ನಡೆದಿವೆ. ನಡೆಯುತ್ತಿವೆ. ಮೂಕಂ ಕರೋತಿ ವಾಚಾಲಂಎಂದು ಯಾರೋ ಎಂದೋ ಹಾಡಿರುವುದಕ್ಕೆ ಜೀವಂತಸಾಕ್ಷ್ಯವೆಂದರೆ ಮಹಾಭಾರತದ ಈ ಪ್ರಕಟನೆ.

ಸಂಪಾದಕ ಮಂಡಲಿಯ ವಿದ್ವಾಂಸರಿಗೆ ಸಕಲಸೌಭಾಗ್ಯಗಳನ್ನೂ ಅನುಗ್ರಹಿಸಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುವುದೊಂದರ ಹೊರತಾಗಿ ಮತ್ತೇನನ್ನು ತಾನೇ ಹುಲುಮನುಜನೊಬ್ಬನು ಮಾಡಬಲ್ಲನು? ದಿನ-ದಿನಕ್ಕೂ ಇವರ ಕಾರ್ಯವು ಹೆಚ್ಚಾಗುತ್ತಿದೆ. ಆದರೂ ಸಹ ಸ್ವಲ್ಪವೂ ಬೇಸರಪಟ್ಟುಕೊಳ್ಳದೇ ನಗು-ನಗುತ್ತಲೇ ಕಾಲ-ಕಾಲಕ್ಕೆ ನಾನಾವಿಷಯಗಳಲ್ಲಿ ಸಲಹೆಗಳನ್ನು ನೀಡುತ್ತಾ ಸಂಪಾದಕಮಂಡಲಿಯವರು ಪ್ರೋತ್ಸಾಹ ನೀಡುತ್ತಿದ್ದಾರೆ. ಇವರೆಲ್ಲರಿಗೂ ಹೃತ್ಪೂರ್ವಕವಾದ ವಂದನೆಗಳು.

ಹದಿನೈದನೆಯ ಸಂಪುಟದ ಪ್ರಕಾಶನಸಮಾರಂಭವು ೧೬ನೇ ಸೆಪ್ಟೆಂಬರ್ ೧೯೭೮, ವಾಸವೀ ಧರ್ಮಶಾಲೆಯಲ್ಲಿ ವಿಜೃಂಭಣೆಯಿಂದ ನಡೆಯಿತು. ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳವರು ಅಧ್ಯಕ್ಷತೆ ವಹಿಸಿದ್ದರು. ಕರ್ಣಾಟಕದ ಮುಖ್ಯಮಂತ್ರಿಗಳಾದ ಶ್ರೀ ಡಿ. ದೇವರಾಜ ಅರಸುರವರು ಸಂಪುಟವನ್ನು ಪ್ರಕಾಶನಗೊಳಿಸಿದರು. ಸಮಾರಂಭವು ವೇದಪಠನದಿಂದ ಪ್ರಾರಂಭವಾಯಿತು. ಕುಮಾರಿ ಸತ್ಯವತಿಯವರು ಸ್ವಾಗತಪದ್ಯಮಾಲಿಕೆಯನ್ನು ಸುಶ್ರಾವ್ಯವಾಗಿ ಹಾಡಿದ ನಂತರ ಹಿರಿಯ ಸಂಪಾದಕರಾದ ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರು ಮಹಾಭಾರತದ ಇದುವರೆಗಿನ ಪ್ರಗತಿಯನ್ನೂ ಮುಂದೆ ಆಗಬೇಕಾಗಿರುವುದನ್ನೂ ಮನಮುಟ್ಟುವಂತೆ ವಿವರಿಸಿದರು. ಅನೇಕ ಕಡೆಗಳಿಂದ ಬಂದಿದ್ದ ಸಂದೇಶಗಳನ್ನು ಶ್ರೀ ನೆ. ವೆಂ. ಶ್ರೀನಿವಾಸರಾಯರು ಓದಿದರು. ಶ್ರೀಮತಿ ಶೈಲಜಾ ಇವರು ಪ್ರಸಕ್ತಸಂಪುಟದಿಂದ ಆಯ್ದ ಕೆಲವು ಶ್ಲೋಕಗಳನ್ನು ಸುಶ್ರಾವ್ಯವಾಗಿ ಹಾಡಿದರು. ಸಂಪುಟದ ಪರಿಚಯವನ್ನು ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರು ಮಾಡಿಕೊಟ್ಟರು. ಮುಖ್ಯಮಂತ್ರಿಗಳು ಮಾಡಿದ ಸುಮಾರು ನಲವತ್ತು ನಿಮಿಷಗಳ ಭಾಷಣದಲ್ಲಿ ಮಹಾಭಾರತದ ಹಿರಿಮೆಯನ್ನು ಹೃದಯಂಗಮವಾಗಿ ವರ್ಣಿಸಿದರು. ಕರ್ನಾಟಕದ ಎಲ್ಲ ಶಾಲೆಗಳಿಗೂ ಮಹಾಭಾರತವನ್ನು ಸರ್ಕಾರವು ತೆಗೆದುಕೊಳ್ಳುವುದೆಂಬ ಆಶ್ವಾಸನೆಯನ್ನಿತ್ತರು. "ನಿಮ್ಮ ಸಾಧನೆಗೆ ನಾವು ಬೆಂಬಲ ಕೊಡುವುದು ಧರ್ಮ. ಇರತಕ್ಕಂಥ ಎಲ್ಲ ಪ್ರೌಢಶಾಲೆಗಳಿಗೂ ಕೊಟ್ಟರೆ ಸುಮಾರು ೨,೫೦೦ ಆಗಬಹುದು. ಹಾಗೇ ಮಾಡೋಣ.

೨,೫೦೦ ಶಾಲೆಗಳಿಗೆ ಅಥವಾ ೩,೦೦೦ ಶಾಲೆಗಳಿಗೆ ತೆಗೆದುಕೊಳ್ಳುವುದ ರಿಂದ ಸರ್ಕಾರಕ್ಕೆ ಬಡತನ ಬರೋದಿಲ್ಲ. ನಾವು ತೆಗೆದು ಕಳುಹಿಸಿದ್ದನ್ನು ನಮ್ಮ ವಿದ್ಯಾರ್ಥಿಗಳು ಓದಬೇಕು"–ಎಂದು ಅವರು ಹೇಳಿದ ಮಾತು ಇಂದೂ ನಮ್ಮ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದೆ. ಅವರ ಈ ವಾಣಿಯು ಕಾರ್ಯರೂಪಕ್ಕೆ ಬರುವ ಕಾಲವನ್ನು ನಿರೀಕ್ಷಿಸುತ್ತಿದ್ದೇವೆ. ಸತ್ಪುರುಷರ ಮಹಾಸಭೆಯಲ್ಲಿ ಸ್ವಾಮೀಜೀಯವರ ಸಮ್ಮುಖದಲ್ಲಿ ಆಡಿದ ಮಾತು ಖಂಡಿತವಾಗಿಯೂ ಹುಸಿಯಾಗಲಾರದೆಂಬ ಭರವಸೆಯಿಂದಿರುತ್ತೇವೆ. ಶ್ರೀ ಶ್ರೀ ಸ್ವಾಮೀಜೀ ಯವರು ಆಶೀರ್ವಾದಭಾಷಣಮಾಡುತ್ತಾ ಈ ಮಹಾಕಾರ್ಯಕ್ಕೆ ಸರ್ವತೋ ಮುಖವಾದ ನೆರವನ್ನು ನೀಡಬೇಕೆಂದು ಹೇಳಿದರಲ್ಲದೇ ಮುಂದಿನ ಸಂಪುಟಗಳು ನಿರ್ವಿಘ್ನವಾಗಿ ಹೊರಬರಲೆಂದೂ ಆಶೀರ್ವದಿಸಿದರು.

ಅನಂತರ ರಾಮಚಂದ್ರಾಪುರಮಠದ ಸಂಸ್ಥಾನದ ವತಿಯಿಂದ ಸಂಪಾದಕಮಂಡಲಿಯವರಿಗೂ ಮತ್ತು ಪ್ರಕಾಶನದ ಅಧ್ಯಕ್ಷರಿಗೂ ಸ್ವಾಮೀಜೀಯವರು ಶಾಲುಗಳನ್ನು ಹೊದ್ದಿಸಿ ಆಶೀರ್ವದಿಸಿದರು. ವಿದ್ವಾನ್ ರಾಮೇಶ್ವರಾವಧಾನಿಗಳು ವಂದನಾರ್ಪಣೆ ಸಲ್ಲಿಸಿದರು.

ಶ್ರೀ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಪ್ರಕಾಶನದ ಕಾರ್ಯವನ್ನು ಪ್ರಶಂಸಿಸಿ ಸುವರ್ಣ ಮಂತ್ರಾಕ್ಷತೆಯನ್ನು (೨೫೦/-೦೦) ರೂ.ಗಳನ್ನು ಆಶೀರ್ವಾದಪೂರ್ವಕವಾಗಿ ಕಳುಹಿಸಿಕೊಟ್ಟಿದ್ದರು. ಸ್ವಾಮೀಜೀಯವರಿಗೆ ನಮ್ಮ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಶಾಂತಿಪಾಠದೊಡನೆ ಸಮಾರಂಭವು ಮುಕ್ತಾಯವಾಯಿತು.

ಮಹಾಭಾರತದ ಪ್ರಚಾರವನ್ನು ಅನೇಕರು ಬಹಳ ಶ್ರದ್ಧೆಯಿಂದ ಮಾಡಿ ಈ ಸಂಪುಟಗಳು ಪ್ರತಿಮನೆಗೂ ತಲುಪುವಂತೆ ಸಹಕಾರನೀಡುತ್ತಿದ್ದಾರೆ. ಇಂತಹ ನಿಃಸ್ವಾರ್ಥಪ್ರಚಾರಕರೆಲ್ಲರಿಗೂ ಪರಮಾತ್ಮನು ಸಕಲ ಸೌಭಾಗ್ಯ ಗಳನ್ನೂ ದಯಪಾಲಿಸಲಿ. ಈ ಮಹಾಕಾರ್ಯವು ನೂರಾರು ಮಂದಿ ಸತ್ಪುರುಷರ ಸಹಕಾರದಿಂದ ನಡೆಯುತ್ತಿದೆ. ಒಬ್ಬರ ಸಹಕಾರವು ಸ್ವಲ್ಪವಾಗಿರ ಬಹುದು: ಮತ್ತೊಬ್ಬರದು ಅಗಾಧವಾಗಿರಬಹುದು. ಎಲ್ಲರೂ ಸ್ಮರಣೀಯರೇ

ಆಗಿರುತ್ತಾರೆ. ನೂರಾರು ಮಂದಿಯನ್ನು ಹೆಸರಿಸಲಾಗದಿದ್ದರೂ ಪರಮಾತ್ಮನು ಎಲ್ಲ ಹಿತಚಿಂತಕರಿಗೂ ಸಕಲಸನ್ಮಂಗಳಗಳನ್ನೂ ದಯಪಾಲಿಸಲಿ. ಅವನಿಗೆ ಅರ್ಪಿಸಬೇಕಾಗಿರುವ ಇನ್ನೂ ಹದಿನಾಲ್ಕು ಕುಸುಮಗಳು ಶೀಘ್ರವಾಗಿ ಹೊರಬರುವಂತೆ ಅನುಗ್ರಹಿಸಲಿ.

## ದ್ವಿತೀಯಮುದ್ರಣದ ಪ್ರಸ್ತಾವನೆ

ಈ ಹದಿನಾರನೆಯ ಸಂಪುಟದ ಎರಡನೆಯ ಮುದ್ರಣವೂ ಮೈಸೂರಿನ ವಿಜಯಲಕ್ಷ್ಮಿ ಮುದ್ರಣಾಲಯದವರ ಸಹಯೋಗದಿಂದ ಮುಗಿದಿರುತ್ತದೆ. ಹಿಂದಿನಂತಲ್ಲದೆ ಈಗ ಅವರು ನಮ್ಮ ಕಾರ್ಯವನ್ನು ನಿರೀಕ್ಷಿಸಿದುದಕ್ಕಿಂತಲೂ ಶೀಘ್ರವಾಗಿ ಮುಗಿಸಿಕೊಡುತ್ತಿದ್ದಾರೆ. ಇವರಿಂದ ಇದೇ ರೀತಿಯ ಸಹಕಾರವು ಮುಂದೆಯೂ ಸಿಕ್ಕುವುದಾದರೆ ನಮ್ಮ ನೂತನ ಗ್ರಾಹಕರೆಲ್ಲರಿಗೂ ಸಾಧ್ಯವಾದಷ್ಟು ಬೇಗ ಹಿಂದಿನ ಸಂಪುಟಗಳನ್ನು ಸಿದ್ಧಮಾಡಿಕೊಡುತ್ತೇವೆ.

ಈ ಸಂಪುಟವು ಪುನರ್ಮುದ್ರಣವಾಗಿ ಹೊರಬರುವ ವೇಳೆಗೆ ಮೊದಲನೆಯ ಮೂರು ಸಂಪುಟಗಳೂ ಮುಗಿದಿದ್ದು ಯಥಾಪೂರ್ವ ಹತ್ತು ಸಂಪುಟಗಳ ಪುನರ್ಮುದ್ರಣವಾಗಬೇಕಾಗಿದೆ. ಎಲ್ಲ ಸಂಪುಟಗಳನ್ನೂ ಸಾಧ್ಯವಾದಷ್ಟುಬೇಗ ಗ್ರಾಹಕರಿಗೆ ಒದಗಿಸಿಕೊಡಲಾಗುವುದು.

ಜುಲೈನಲ್ಲಿ ಮಹಾಮಂಗಳದ ಕಾರ್ಯಕ್ರಮ ಸ್ಮರಣಸಂಚಿಕೆಯ ಮುದ್ರಣಗಳು ಆಗಬೇಕಾಗಿರುವುದರಿಂದ ಹಿಂದಿನ ಸಂಪುಟಗಳ ಮುದ್ರಣ ಒಂದೆರಡು ತಿಂಗಳು ಸಾವಕಾಶವಾಗಬಹುದು.

ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟಿದ್ದಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು-ಸಮಸ್ತಸನ್ಮಙ್ಗಲಾನಿ ಭವನ್ತು

– ಪ್ರಕಾಶಕರು.

# ಮುನ್ನುಡಿ

ರಾಮಾಯಣ-ಮಹಾಭಾರತಗಳು ಭಾರತೀಯಸಂಸ್ಕೃತಿಪ್ರವಾಹದ ಅವಿಚ್ಛಿನ್ನ ಭಾಗೀರಥೀ. ಬಹುಶಃ ಎರಡುಸಾವಿರವರ್ಷಗಳಿಗಿಂತ ಅನೇಕ ಶತಮಾನಗಳ ಪೂರ್ವದಲ್ಲಿಯೇ ಈ ಸಂಸ್ಕೃತಮಹಾಕಾವ್ಯಗಳ ರಚನೆಯಾಗಿರಬೇಕು. ಯುಗ-ಯುಗಗಳಲ್ಲಿ, ಭಾರತದ ವಿವಿಧ ಭಾಷೆಗಳಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳ ರಚನೆಗೆ ವಸ್ತುವನ್ನು ಒದಗಿಸುತ್ತಾ ಬಂದಿವೆ. ಕವಿಗಳ ಪ್ರತಿಭೆಗಳನ್ನು ಅರಳಿಸುತ್ತಾ ಬಂದಿವೆ. ಚಿತ್ರಕಲೆ ವಾಸ್ತುಶಿಲ್ಪಗಳ ಮೇಲೆಯೂ ಈ ಮಹಾಕಾವ್ಯಗಳು ಬೀರಿದ ಪ್ರಭಾವ ಅಷ್ಟಿಷ್ಟಲ್ಲ. ಇಂದಿಗೂ ಭಾರತೀಯ ಜನಮಾನಸದ ಮೇಲೆ ಈ ಮಹಾಕಾವ್ಯಗಳು ಉಳಿಸಿಕೊಂಡಿರುವ ಹಿಡಿತ ಅಚ್ಚರಿಪಡುವಂತಹುದು.

ಇದಕ್ಕೆ ಮುಖ್ಯಕಾರಣ ಈ ಮಹಾಕಾವ್ಯಗಳ ಪಾತ್ರಗಳ ಎತ್ತರ-ಬಿತ್ತರಗಳು ವಸ್ತುವಿನ ಹಾಸು-ಬೀಸುಗಳು, ಮಾನವಜೀವನದ ವಿವಿಧ ಸಮಸ್ಯೆಗಳಿಗೆ, ಮಾನವಸ್ವಭಾವಗಳ, ಗುಣಗಳ ವೈವಿಧ್ಯಕ್ಕೆ ಇಲ್ಲಿ ದೊರೆಯುವ ಪರಿಹಾರಗಳು, ಸೂಚನೆಗಳು, ನಮ್ಮ ಜೀವನದ ದೃಷ್ಟಿಯಿಂದ ತರ್ಕಕ್ಕೆ ನಿಲ್ಲಬಲ್ಲ ನೆಲೆ-ನಿಲುಮೆಗಳ ಸಾಧ್ಯತೆಗಳಿಗೆ ಇಲ್ಲಿ ಯಾವಾಗಲೂ ಎಡೆಯುಂಟು.

ಮಹಾಭಾರತವಂತೂ ನಮಗಿನ್ನೂ ಹತ್ತಿರವೆನಿಸುತ್ತದೆ. ರಚನೆ ಹಾಗೂ ಅದರಲ್ಲಿ ನಿರೂಪಿತವಾದ ಘಟನೆಗಳ ಮತ್ತು ಸನ್ನಿವೇಶಗಳ ದೃಷ್ಟಿಯಿಂದಷ್ಟೇ ಅಲ್ಲ. ಅದರಲ್ಲಿನ ಪಾತ್ರಗಳ ಸ್ವಭಾವ-ವೈವಿಧ್ಯ-ವೈಚಿತ್ರ್ಯಗಳು, ಅಂತಶ್ಚಲನಗಳು, ರಹಸ್ಯಗಳು, ಸಂಚುಗಳು ಇವುಗಳೆಲ್ಲಾ ಇಂದಿನ ಮಾನವಜೀವನಕ್ಕೆ ಬಹುದೂರವೆನಿಸುವುದಿಲ್ಲ. ಸುಧರ್ಮಿಗಳು, ಅಧರ್ಮಿಗಳು, ಶೂರರು, ಹೇಡಿಗಳು, ಉದಾತ್ತರು, ಕ್ಷುದ್ರರು, ಜ್ಞಾನಿಗಳು, ಸಾಮಾನ್ಯರು-ಎಲ್ಲರೂ ಮಹಾಭಾರತದ ಮಹಾರಂಗಸ್ಥಳದ ಮೇಲೆ ಹಾಯ್ದುಹೋಗುತ್ತಾರೆ. ಅದಕ್ಕೆಂದೇ ಭಾರತಕ್ಕೆ ಇತಿಹಾಸವೆಂದು ಕರೆಯುವುದೂ ಸಮರ್ಪಕವೇ ಆಗಿದೆ.

ಹೀಗೆ ಮೇಲುನೋಟಕ್ಕೆ ದಾಯಾದಿಮಾತ್ಸರ್ಯ, ದ್ವೇಷ, ವೈಷಮ್ಯ, ಯುದ್ಧ-ಮುಂತಾದುವುಗಳ ಪರಾಕಾಷ್ಠೆಯ ವಿನಾಶಕಪರಿಣಾಮವನ್ನೇ ಮಹಾಭಾರತದಲ್ಲಿ ಅನೇಕ ಕಥೆ-ಉಪಕಥೆಗಳ ಮೂಲಕ ನಿರೂಪಿಸುವು

ದನ್ನೂ ಕಾಣುತ್ತೇವೆ. ಆದರೆ ಇಷ್ಟರಿಂದಲೇ ಬಹುಶಃ ಭಾರತಕ್ಕೆ ಮಹತ್ವ ಬರುತ್ತಿರಲಿಲ್ಲವೆಂದು ತೋರುತ್ತದೆ. ಭಾರತಯುದ್ಧವು ಮುಗಿದನಂತರ ಮಹಾಭಾರತದ ಯಾವ ವೀರನೂ ಸುಖಪಡಲು ಉಳಿದಿರುವುದಿಲ್ಲ. ಕೃಷ್ಣನೂ ಸಹ ಅಷ್ಟೇ. ಹೀಗಾಗಿ ಇಷ್ಟೆಲ್ಲಾ ಹೋರಾಟ ಏಕೆ ಬೇಕಾಗಿತ್ತು? ಯಾತಕ್ಕಾಗಿ ಬೇಕಾಯಿತು? –ಎಂಬ ಪ್ರಶ್ನೆ ಮಹಾಭಾರತವನ್ನೆಲ್ಲಾ ಓದಿ ಅಥವಾ ಕೇಳಿ ಮುಗಿಸಿದನಂತರ ಓದುಗನ ಅಥವಾ ಶ್ರೋತೃವಿನ ಎದುರಿಗೆ ನಿಲ್ಲುವುದು ಸಹಜ. ಇದನ್ನು ಅರಿತ ವೇದವ್ಯಾಸರು ಗ್ರಂಥದ ಮೂಲೋದ್ದೇಶ ಹಾಗೂ ಮಾನವರ ಮೂಲಧ್ಯೇಯವಾದ, ಪರಮಪುರುಷಾರ್ಥವಾದ ಮೋಕ್ಷವನ್ನು ಪ್ರತಿಪಾದಿಸುವ ಅಧ್ಯಾತ್ಮ ಶಾಸ್ತ್ರವನ್ನು ಶ್ರೀಕೃಷ್ಣನ ಮುಖದಿಂದ ಭಗವದ್ಗೀತೆಯ ರೂಪದಲ್ಲಿ ಪ್ರವಹಿಸುವಂತೆ ಮಾಡಿದರು. ಭಗವದ್ಗೀತೆ ಮಹಾಭಾರತದ ಭಾಗವಾಗಿ ಅದರ ಕಲಶವಾಗಿ ಸಾಧಕರ ಮಾರ್ಗದರ್ಶಿಯಾಗಿ ಸೇರಿಕೊಂಡಿತು.

೧೮೨೫ರಷ್ಟು ಹಿಂದಿನಿಂದಲೇ ಮಹಾಭಾರತವು ಪಾಶ್ಚಿಮಾತ್ಯ ವಿದ್ವಾಂಸರ ಗಮನಸೆಳೆದು ಯುರೋಪಿನ ವಿವಿಧಭಾಷೆಗಳಲ್ಲಿ ಕಾಲ-ಕಾಲಕ್ಕೆ ಅನುವಾದಗೊಂಡಿತು. ಪ್ರಪಂಚದ ಅನೇಕ ಭಾಷೆಗಳಲ್ಲಿ ಭಗವದ್ಗೀತೆಯ ಅನುವಾದಗಳೂ, ವ್ಯಾಖ್ಯಾನಗಳೂ, ವಿಮರ್ಶೆಗಳೂ ಬಂದಷ್ಟು ಪ್ರಾಯಶಃ ಇನ್ನಿತರ ಯಾವ ದೇಶದ ಯಾವ ಗ್ರಂಥಗಳ ಅನುವಾದಗಳೂ ಆಗಿರಲಿಕ್ಕಿಲ್ಲ. ಇದೆಲ್ಲ ಮಹಾಭಾರತದ ಹಾಗೂ ಭಗವದ್ಗೀತೆಯ ಲೋಕಪ್ರಿಯತೆಗೆ ಸಾಕ್ಷಿ.

ಕನ್ನಡದಲ್ಲಿ ಪಂಪಯುಗದಿಂದ ಬಿ. ಎಂ. ಶ್ರೀ., ಕು. ವೆಂ. ಪು., ಬೇಂದ್ರೆಯುಗದ ವರೆಗಿನ ಅವಧಿ ಆವರಣಗಳಿಗೂ ಮಹಾಭಾರತದ ಪ್ರಭಾವಲಯ ವ್ಯಾಪಿಸಿದೆ. ಕನ್ನಡದಲ್ಲಿ ಮಹಾಭಾರತದ ಗದ್ಯಾನುವಾದಗಳು ಈ ಶತಮಾನದ ಪೂರ್ವಾರ್ಧದಲ್ಲಿ ಪ್ರಕಟವಾದುದನ್ನು ಅನೇಕ ಓದುಗರು ಗಮನಿಸಿರಬಹುದು. ಭಾರತ ದರ್ಶನ ಪ್ರಕಾಶನದವರ ಬೃಹದ್ಯೋಜನೆಯ ಮೂವತ್ತು ಸಂಪುಟಗಳಲ್ಲಿ ಪ್ರಕಾಶಿತಗೊಳ್ಳುತ್ತಿರುವ ಶ್ರೀಮನ್ಮಹಾಭಾರತ ಈ ದಿಶೆಯಲ್ಲಿ ತೀರಾ ಇತ್ತೀಚಿನ ವ್ಯವಸ್ಥಿತಪ್ರಯತ್ನವಾಗಿದೆ.

ವ್ಯಾಸಭಾರತಕ್ಕೆ ಅತ್ಯಂತ ಪ್ರಾಮಾಣಿಕವಾಗಿ, ವಿವಿಧ ಮತಾಚಾರ್ಯರ ಅಭಿಪ್ರಾಯಗಳನ್ನು ಉಲ್ಲೇಖಿಸುತ್ತಾ, ಸರಳ ಕನ್ನಡಶೈಲಿಯಲ್ಲಿ ಸಮಗ್ರ

ಭಾರತವನ್ನು ಅಲ್ಲಲ್ಲಿ ಸಂಸ್ಕೃತಮೂಲದೊಂದಿಗೆ ವಿವರಿಸುವ ಸಮರ್ಥ ಪ್ರಯತ್ನ ಇಲ್ಲಿ ಸಾರ್ಥಕವಾದುದನ್ನು ಕಾಣಬಹುದು.

ಹದಿನೈದು ಸಂಪುಟಗಳು ಈಗ ಪ್ರಕಟವಾಗಿದ್ದು ಮಹಾಭಾರತದ ಮುಖ್ಯವಾದ ಅರ್ಧಭಾಗ ಹೊರಬಂದಂತಾಗಿದೆ. ಈಗ ಬಿಡುಗಡೆ ಯಾಗುತ್ತಿರುವ ಹದಿನಾರನೆಯ ಸಂಪುಟ ಶ್ರೀಮನ್ಮಹಾಭಾರತದ ದ್ರೋಣ ಪರ್ವವನ್ನು ಒಳಗೊಂಡಿದೆ. ಇಲ್ಲಿ ಕುರುಕ್ಷೇತ್ರದಲ್ಲಿ ನಡೆದ ಕುರು-ಪಾಂಡವಯುದ್ಧದ ಮೂರುದಿನಗಳ ವಿವರಣೆಯಿದೆ. ದ್ರೋಣಾಚಾರ್ಯರ ಪರಾಕ್ರಮ ಕಥನದಿಂದ ಪ್ರಾರಂಭವಾಗುವ ಈ ಸಂಪುಟದಲ್ಲಿ-ಅವರ ಸಮರಚಾತುರ್ಯವನ್ನು ನಿರೂಪಿಸುವ ಚಕ್ರವ್ಯೂಹರಚನೆ: ಅದರಲ್ಲಿ ಅಭಿಮನ್ಯು ಪ್ರವೇಶ: ಅಭಿಮನ್ಯುವಿನ ಸಾಹಸಪರಾಕ್ರಮಗಳನ್ನು ಅವನ ಶತ್ರುಗಳೇ ಅಲ್ಲದೇ ದ್ರೋಣಾಚಾರ್ಯರೂ ಪ್ರಶಂಸಿಸುವುದು : ಕೊನೆಗೆ ಅಭಿಮನ್ಯುವಿಗಾದ ಮೋಸ, ಹತ್ಯೆ : ಅರ್ಜುನ, ಜಯದ್ರಥನ ಸಂಹಾರಕ್ಕಾಗಿ ಮಾಡುವ ಪ್ರತಿಜ್ಞೆ : ಅವನನ್ನು ಹುಡುಕುವ ಪ್ರಯತ್ನದಲ್ಲಿ ಅನೇಕ ಮಹಾರಥರೊಂದಿಗೆ ಘೋರವಾಗಿ ಕಾದಾಡಿ ಸೋಲಿಸುವುದು—ಇವೆಲ್ಲಾ ವಿವರಿಸಲ್ಪಟ್ಟಿವೆ.

ಮೊದಲೇ "ಯುದ್ಧಸ್ಯ ವಾರ್ತಾ ರಮ್ಯಾ" ಅದು ವೇದವ್ಯಾಸರ ವಾಣಿಯಲ್ಲಿ "ಕಲಿಯುಗ ದ್ವಾಪರವಾಗುವ" ಸಿದ್ಧಿಯನ್ನು ಪಡೆಯುತ್ತದೆ. ಅದನ್ನು ಕನ್ನಡದಲ್ಲಿ ಅಷ್ಟೇ ಪರಿಣಾಮಕಾರಿಯಾಗುವಂತೆ ಚಿತ್ರವತ್ತಾಗಿ ಇಳಿಸಬೇಕಾದರೆ ಅಸಾಧಾರಣ ಗ್ರಂಥಪರಿಚಯ, ಭಾಷೆಯಮೇಲೆ ಹಿಡಿತ, ಬಹುಶ್ರುತಅನುಭವ ಇರಬೇಕಾದುದು ಸಹಜ.

ಭಾರತದರ್ಶನ ಪ್ರಕಾಶನದ ಸಂಪಾದಕಮಂಡಲಿಯ ಅಧ್ಯಕ್ಷರೂ ಹಾಗೂ ಸದಸ್ಯವಿದ್ವಾಂಸರೂ ಎಲ್ಲ ರೀತಿಯಿಂದಲೂ ಸಮರ್ಥವಾಗಿ ಹಾಗೂ ಸಮರ್ಪಕವಾಗಿ ಶ್ರೀಕೃಷ್ಣಪರಮಾತ್ಮ ಮತ್ತು ವೇದವ್ಯಾಸರಿಗೆ ಪರಮ ಪ್ರೀತ್ಯಾಸ್ಪದವಾದ ಈ ಕಾರ್ಯವನ್ನು ಸಾಧಿಸುತ್ತಿದ್ದಾರೆ. ಇಂಥ ಉದ್ಯಮಕ್ಕೆ ನನ್ನ ಮಾತುಗಳನ್ನು ಸೇರಿಸುವ ಗೌರವನೀಡಿದ ಮಿತ್ರ ಕೌಶಿಕರಿಗೆ ವಂದನೆಗಳು.

**ಯತೋ ಧರ್ಮಃ ತತೋ ಜಯಃ**

**ಜಯತೀರ್ಥರಾಜಪುರೋಹಿತ, ಐ.ಎ.ಎಸ್.**

## ‘ಪ್ರಜಾವಾಣಿ’-ಯಿಂದ ಉದ್ಧೃತ ೧೨-೧೦-೧೯೭೮
## ಸಾವಿರದ್ವೈನೂರು ಪುಟಗಳ ಗೀತಾವಿವರಣೆ

ಗೀತೆಯ ರತ್ನಕಾಂತಿ ಕಾಲದೇಶಗಳ ಮಿತಿಯನ್ನು ಮೀರಿ ಬೆಳೆಯುತ್ತಿದೆ. ಅದನ್ನು ಇಡಿಯ ಮಹಾಭಾರತದ ಅವಿಭಾಜ್ಯ ಅಂಗವಾಗಿ ಭಾವಿಸಿ ಸಾಮಾನ್ಯ ರೀತಿಯಿಂದ, ಅದರ ಸ್ಥೂಲಪರಿಚಯವಷ್ಟನ್ನೇ ಈ ಸಂಪುಟಗಳ ಲೇಖಕರು ಕೊಟ್ಟಿದ್ದರೂ ಸಾಮಾನ್ಯಜನರು ತೃಪ್ತರಾಗುತ್ತಿದ್ದರೋ ಏನೋ! ಆದರೆ ಸ್ವತಂತ್ರವಾಗಿ ಭಗವದ್ಗೀತೆಯನ್ನೇ ಕೂಲಂಕಶವಾಗಿ ಅರ್ಥಮಾಡಿ ಕೊಳ್ಳಬೇಕೆಂಬ ಹಂಬಲವಿರುವವರಿಗೆ ಆಗ ನಿರಾಸೆಯಾಗುತ್ತಿತ್ತು. ಹಲವು ಹದಿನೆಂಟು ರೀತಿಯ ಆಧುನಿಕ ವಿಮರ್ಶೆ, ಸಂಶೋಧನೆಗಳಲ್ಲಿ ಆಸಕ್ತರಾದವರಿಗೆ ಗೀತೆಯನ್ನು ಕುರಿತ ದೊಡ್ಡ ಗ್ರಂಥಭಂಡಾರವೇ ಇದೆ. **“ಯಾದೃಶೋ ಯಕ್ಷಸ್ತಾದೃಶೋ ಬಲಿಃ”** – ಎಂಬಂತೆ ಅವರವರ ಅಭಿರುಚಿಗೆ ಸರಿಕಂಡದ್ದನ್ನು ಅವರು ಆಯ್ದುಕೊಳ್ಳಲು ಸ್ವತಂತ್ರರು. ಆದರೆ ಗುರು-ಶಿಷ್ಯ ಪರಂಪರೆಯಲ್ಲಿ ಬೇರೆ-ಬೇರೆ ಭಾಷ್ಯಕಾರರ ವಚನಾಮೃತಗಳಲ್ಲಿ ಶ್ರದ್ಧಾಭಕ್ತಿಯನ್ನುಳಿಸಿಕೊಂಡಿರುವ ಜನರಿಗೆ ಒಂದೆಡೆಯಲ್ಲಿ ಪ್ರತಿಶ್ಲೋಕಕ್ಕೂ ವಿವಿಧ ಭಾಷ್ಯಕಾರರ ಪ್ರತಿಭಾ ಸಮುನ್ಮೇಷವನ್ನು, ತಿಳಿಗನ್ನಡದಲ್ಲಿ ತಿಳಿಯಪಡಿಸುವ, ಒಂದು ಸರಿ; ಇನ್ನೊಂದು ತಪ್ಪು ಎಂದು ವಾದಿಸುವ ಆವೇಶವಾಗಲೀ ಅಭಿನಿವೇಶವಾಗಲೀ ಇಲ್ಲದೇ ಸಮತೋಲನದಿಂದ ವಿಷಯಪ್ರತಿಪಾದನೆ ಮಾಡುವ, ಒಂದು ಪ್ರಾಮಾಣಿಕಗೀತಾವಿವರಣೆಯ ಕೊರತೆ ಬಾಧಿಸುತ್ತಿತ್ತು. ಆಧ್ಯಾತ್ಮಕಸಾಧನೆಯಿಂದಲೇ ಮಾನವಜನ್ಮದ ಸಾರ್ಥಕ್ಯವೆಂದು ನಂಬುವವರಿಗೆ, ಅಂತರ್ಜ್ಯೋತಿಯ ದರ್ಶನಕ್ಕಾಗಿ ಹಂಬಲಿಸುವವರಿಗೆ, ಗೀತೆಯು ಬಿಂಗಡಿಸಿ ಕೊಡುವ ಜ್ಞಾನಯೋಗ-ಕರ್ಮಯೋಗ-ಭಕ್ತಿಯೋಗಗಳು ಚಿಂತಾಮಣಿಗಳಿದ್ದಂತೆ. ಅವೆಲ್ಲವೂ ಪರಸ್ಪರ ಸಮ್ಮಿಳಿತವಾಗುವ ಅದ್ಭುತವಂತೂ ಅನುಭವೈಕವೇದ್ಯ. ಕಾಶ್ಮೀರದ ವ್ಯಾಖ್ಯಾಕಾರ ಆನಂದ ಹೇಳುವಂತೆ–ದರ್ಶನದ ವಿವಿಧ ಭೂಮಿಕೆಗಳಲ್ಲಿ ಸಮಬುದ್ಧಿ, ವಾದದಲ್ಲಿ ವಿರಕ್ತಿ, ಸ್ವಧರ್ಮದಲ್ಲಿ ನಿಷ್ಠೆ, ದ್ವಂದ್ವಗಳ ಪ್ರಶಮನ–ಇಷ್ಟೇ ಗೀತಾ ಸಂದೇಶ. ಅದರ ಫಲ ಗೃಹಸ್ಥನಿಗೂ ಜೀವನ್ಮುಕ್ತಿ. ಮುಖ್ಯವಾದುದು ಬಾಹ್ಯಾಚಾರವಲ್ಲ, ಅನುಭವ.

ಪ್ರಕೃತ ಮೂರು ಸಂಪುಟಗಳು ಮೇಲೆ ಸೂಚಿಸಿದ ಕೊರತೆಯನ್ನು ನೀಗಿಸಿವೆ. ಗೀತಾರಚನೆಯ ಬಳಿಕ ಸಾವಿರಾರು ವರ್ಷಗಳವರೆಗೆ ಭಾರತೀಯ ದಾರ್ಶನಿಕರು ನಡೆಸಿದ ವಿಚಾರಮಂಥನದ ನವನೀತವನ್ನು ಯಥೋಚಿತ ವಾಗಿ ಸಂಗ್ರಹಿಸಿವೆ. ಸಾಮಾನ್ಯ ಓದುಗರಿಗೆ ಬರಬಹುದಾದ ಅರ್ಥಕ್ಲೇಶವನ್ನು ತಪ್ಪಿಸಿವೆ. ಒಂದು ಉದಾಹರಣೆ;"ಊರ್ಧ್ವಮೂಲಮಧಃಶಾಖಂ "ಎಂಬ ಅಶ್ವತ್ಥವೃಕ್ಷದ ವರ್ಣನೆ. (ಣಡ) ಸಾಂಕೇತಕವಿರುವುದು ಸ್ಪಷ್ಟ. ಕಠೋಪನಿಷತ್ತಿನಲ್ಲಿ ಇದನ್ನೇ 'ಬ್ರಹ್ಮ' ಎಂದು ಬಣ್ಣಿಸಲಾಗಿದೆ. ಅಲ್ಲಿ ಈ ವೃಕ್ಷವೇ ಸಂಸಾರ, ಕಡಿಯಬೇಕಾದ್ದು-ಎಂದಿದೆ.'ಅಶ್ವತ್ಥ' =ನ-ಶ್ವ-ಸ್ಥ= ನಶ್ವರ ಎಂದು ಯೌಗಿಕಾರ್ಥ. ಆದರೆ ಅವ್ಯಯವೆಂದು ಅದನ್ನು ಕರೆದಾಗ ವಿರೋಧ ಬರುತ್ತದೆ. ಮೂರು ಭಾಷ್ಯಗಳೂ ಸಂಸಾರವೆಂಬ ಅರ್ಥವನ್ನೇ ಪ್ರಕಾರಾಂತರ ಗಳಿಂದ ಸಮರ್ಥಿಸಿವೆ. ಆದರೆ ಇಷ್ಟಕ್ಕೇ ಇಲ್ಲದೇ ಈ ಸಂಪುಟಗಳ ಲೇಖಕರು ನಾರದಪುರಾಣ, ಮಹಾಭಾರತ -ಅಶ್ವಮೇಧಪರ್ವಗಳ ಉಪಬೃಹ್ಮಣವನ್ನು ಆಧರಿಸಿ ಈ ವೃಕ್ಷವನ್ನು ಮನುಷ್ಯಶರೀರದ ಪ್ರತೀಕವೆಂದು ಮೊದಲು ವಿವರಿಸಿದ್ದಾರೆ. ಮನುಷ್ಯದೇಹದಲ್ಲೇ ಇಂದ್ರಿಯ-ಬುದ್ಧಿ ಮುಂತಾದ ಬೇರು-ಕಾಂಡಗಳಿರುವಂತೆ ' ಬ್ರಹ್ಮ' ವೂ ಇದೆ. ಒಂದರ ಕೋಟಲೆಯನ್ನು ಕಡಿದಾಗ ಇನ್ನೊಂದರ ಸಾಕ್ಷಾತ್ಕಾರ ಶಕ್ಯವಾಗುತ್ತದೆ. ಹೀಗೆ ತತ್ತ್ವಶಾಸ್ತ್ರಕ್ಕೆ ಮೂಲಭೂತವಾದ ಜೀವ-ಜಗತ್ತು-ಈಶ್ವರ ಪ್ರತಿಕ್ರಿಯೆಗಳ ಗಹನತರ ಸ್ವರೂಪವನ್ನು ಪ್ರಸಿದ್ಧ ಕಾವ್ಯಮಯ ರೂಪಕ ಶೈಲಿಯಿಂದ ಒಡಮೂಡಿಸುವ ಗೀತೆ ಹೆಜ್ಜೆ-ಹೆಜ್ಜೆಗೂ ಬುದ್ಧಿಯನ್ನು ಪರೀಕ್ಷಿಸುತ್ತದೆ. ವಿವರಣೆಯನ್ನು ಅಪೇಕ್ಷಿಸುತ್ತದೆ. ಹೀಗೆ ತುಂಬಾ ದುಷ್ಕರವಾದ ಈ ಗೀತಾವಿವರಣೆಯ ಮಹಾಕಾರ್ಯದಲ್ಲಿ ಸಂಪಾದಕ ಮಂಡಲಿಯವರು, ವಿದ್ವಾಂಸರೂ ಮೆಚ್ಚುವಂತೆ ಸಾಕಷ್ಟು ಶ್ರಮವಹಿಸಿರುವುದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

–ಡಾ. ಕೆ. ಕೃಷ್ಣಮೂರ್ತಿ

## ಮೂರನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದಲೂ, ಗುರುಭಗವಂತನ ದಿವ್ಯಾಶೀರ್ವಾದ ದಿಂದಲೂ, ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ೧೬ನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಈ ಸಂಪುಟದ ಮುದ್ರಣವು ಭಗವಂತನ ಕೃಪೆಯಿಂದ D.T.P. ಮೂಲಕ ಆಗಿದೆ. ಸಾಧಾರಣವಾಗಿ D.T.P. ಮೂಲಕ ಮುದ್ರಣವೆಂದರೆ ಅಧಿಕವೆಚ್ಚದ್ದು. ನಮ್ಮ ಆರ್ಥಿಕ ವ್ಯವಸ್ಥೆಗೆ ಮೀರಿದ್ದು. ಆದರೂ ಪರಮಾತ್ಮನ ದಯೆಯಿಂದ ನಮ್ಮ ಸತ್ಸಂಕಲ್ಪವು ಕೈಗೂಡಿದೆ.

ನನ್ನ ಹಿರಿಯ ಮಗ ಚಿ। ರಮೇಶನು (ಶ್ರೀಯೋಗ) ಇದಕ್ಕೆ ಬೇಕಾದ ಕಂಪ್ಯೂಟರ್ ಒದಗಿಸಿಕೊಟ್ಟಿದ್ದಾನೆ. ಶ್ರೀ ಗೋವಿಂದನ್‌ರವರು ಸುಲಭ ಬೆಲೆಯಲ್ಲಿ ಕನ್ನಡದ SoftWare ಕೊಟ್ಟಿದ್ದಾರೆ. ನನ್ನ ಕಿರಿಯ ಮಗ ಚಿ॥ಚಿನ್ಮಯ (ಶ್ರೀ ಕೇಶವಕುಮಾರ) ಮತ್ತು ಅವನ ಸಹೋದ್ಯೋಗಿಗಳಾದ ಶ್ರೀ ಗೋಪಿಯವರು ತಾಂತ್ರಿಕನೆರವು ನೀಡುತ್ತಿದ್ದಾರೆ. ಸಂಪಾದಕ ಮಂಡಲಿಯ ವಿದ್ವಾಂಸರು ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಉಪಕರಿಸಿರುತ್ತಾರೆ. ಎಲಿಗೆಂಟ್ ಮುದ್ರಣಾಲಯದ ಮಾಲೀಕರಾದ ಶ್ರೀಮನೋಜ್ ಇವರು ಧಾರ್ಮಿಕ ಮನೋಭಾವನೆಯಿಂದ ಸಾಧ್ಯವಾದಷ್ಟೂ ಕಡಿಮೆ ದರಕ್ಕೆ ಸುಂದರವಾಗಿ ಮುದ್ರಣಮಾಡಿಕೊಟ್ಟಿದ್ದಾರೆ. ದಯಾಮಯನಾದ ಪರಮಾತ್ಮನು ಇಷ್ಟು ಸೌಕರ್ಯಗಳನ್ನೂ ಒದಗಿಸಿಕೊಟ್ಟು ಈ ಕೆಲಸವನ್ನು ಆಗುಮಾಡಿಸಿಕೊಟ್ಟಿದ್ದಾನೆ. ಮುಂದೆಯೂ ಇವರೆಲ್ಲರ ಸಹಕಾರ-ಸದಾಶಯಗಳಿಂದ ಸಾಧ್ಯವಾದಷ್ಟು ಬೇಗ ನಮ್ಮ ಗ್ರಾಹಕರಿಗೆ ಸಂಪುಟಗಳನ್ನು ಒದಗಿಸಿಕೊಡಬಹುದೆಂಬ ಧೈರ್ಯವು ಬಂದಿದೆ. ನನ್ನ ಮಕ್ಕಳ ಧ್ಯೇಯವೂ ಇದೇ ಆಗಿರುತ್ತೆ. ತಂದೆಯ ಭಾರವನ್ನು ಇಳಿಸಲು ನಿಶ್ಚಯಮಾಡಿದ್ದಾರೆ. ಇದು ದೈವಕೃಪೆ.

ಇದಕ್ಕೆ ಸಹಕಾರ ನೀಡಿರುವವರೆಲ್ಲರಿಗೂ ದಯಾಮಯನಾದ ಪರಮಾತ್ಮನು ಅವರ ಇಷ್ಟಾರ್ಥಗಳನ್ನು ನೆರವೇರಿಸಿಕೊಡಲಿ-ಎಂಬ ಹೃತ್ಪೂರ್ವಕವಾದ ಪ್ರಾರ್ಥನೆಯೊಡನೆ ವಿರಮಿಸುವೆವು.

-ಪ್ರಕಾಶಕರು

## ಮಹಾಭಾರತ - ದ್ರೋಣಪರ್ವ- ಹದಿನಾರನೆಯ ಸಂಪುಟದ ವಿಷಯಾನುಕ್ರಮಣಿಕೆ

## ಪ್ರತಿಜ್ಞಾಪರ್ವ

ಶ್ರೀ ಮಹಾಗಣಪತಯೇ ನಮಃ। ಶ್ರೀ ಸರಸ್ವತ್ಯೈ ನಮಃ। ಶ್ರೀ ಸದ್ಗುರವೇ ನಮಃ।

ॐ

# ಮಹಾಭಾರತ ದ್ರೋಣಪರ್ವ-ಹದಿನಾರನೆಯ ಸಂಪುಟ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್॥**

೨೨ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ದ್ರೋಣರ ಯುದ್ಧವಿಷಯದಲ್ಲಿ ದುರ್ಯೋಧನ-ಕರ್ಣರ ಸಂವಾದ

ದ್ರೋಣರ ಪರಾಕ್ರಮಕಥನವನ್ನು ಏಕಾಗ್ರತೆಯಿಂದ ಕೇಳುತ್ತಿದ್ದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

**ಭಾರದ್ವಾಜೇನ ಭಗ್ನೇಷು ಪಾಣ್ಡವೇಷು ಮಹಾಮೃಧೇ।**
**ಪಾಞ್ಚಾಲೇಷು ಚ ಸರ್ವೇಷು ಕಚ್ಚಿದನ್ಯೋಽಭ್ಯವರ್ತತ ॥೧॥**

**ಆರ್ಯಾಂ ಯುದ್ಧೇ ಮತಿಂ ಕೃತ್ವಾ ಕ್ಷತ್ರಿಯಾಣಾಂ ಯಶಸ್ಕರೀಮ್।**
**ಅಸೇವಿತಾಂ ಕಾಪುರುಷೈಃ ಸೇವಿತಾಂ ಪುರುಷರ್ಷಭೈಃ ॥೨॥**

"ಸಂಜಯ! ಆ ಮಹಾಯುದ್ಧದಲ್ಲಿ ಭರದ್ವಾಜರ ಮಕ್ಕಳಾದ ದ್ರೋಣರು ಎಲ್ಲ ಪಾಂಡವಸೈನಿಕರನ್ನೂ ಮತ್ತು ಪಾಂಚಾಲಸೈನಿಕರನ್ನೂ ಭಗ್ನಗೊಳಿಸಲಾಗಿ, ಪುನಃ ಅವರನ್ನೆದುರಿಸಿ ಯುದ್ಧಮಾಡಲು ಯಾರು ಹೋದರು? ಕ್ಷತ್ರಿಯರಿಗೆ ಯಶಸ್ಸನ್ನುಂಟುಮಾಡತಕ್ಕ, ನೀಚಪುರುಷರಿಗೆ ಅನುಸರಿಸಲು ಸಾಧ್ಯವಾಗದೇ ಇರುವ, ಪುರುಷಶ್ರೇಷ್ಠರು ಅನುಸರಿಸುವ, ಒಳ್ಳೆಯ ಬುದ್ಧಿಯನ್ನು ಹೊಂದಿದ ಯಾರು ದ್ರೋಣರೊಡನೆ ಆ ಸಮಯದಲ್ಲಿ ಯುದ್ಧದಲ್ಲಿ ತೊಡಗಿದರು?

**ಸ ಹಿ ವೀರೋನ್ನತಃ ಶೂರೋ ಯೋ ಭಗ್ನೇಷು ನಿವರ್ತತೇ।**

ಸಂಜಯ! ಸೈನ್ಯವು ಭಗ್ನವಾಗಿ ಹೋಗಿದ್ದರೂ ಸಹ ಯುದ್ಧಕ್ಕೆ

ಹಿಂದಿರುಗಿ ಬಂದು ಶತ್ರುವನ್ನು ಎದುರಿಸಿ ನಿಲ್ಲುವವನೇ ಅತ್ಯಂತಶ್ರೇಷ್ಠನಾದ ಶೂರನು; ಶೂರಾಗ್ರಣಿಯು. ಎಲ್ಲ ಸೈನ್ಯವನ್ನೂ ಭಗ್ನಗೊಳಿಸಿ ದಿಟ್ಟತನವನ್ನು ತೋರಿಸುತ್ತಾ ರಣಾಂಗಣದಲ್ಲಿ ನಿಂತಿದ್ದ ದ್ರೋಣರನ್ನು ಎದುರಿಸಿ ಯುದ್ಧಮಾಡಲು ಪಾಂಡವರ ಕಡೆಯಲ್ಲಿ ಒಬ್ಬ ಮಹಾಪುರುಷನೂ ಇರಲೇ ಇಲ್ಲವೇ?

ಸಂಜಯ! ಬಾಯ್ದೆರೆದುಕೊಂಡು ಆಕಳಿಸುತ್ತಿರುವ ಹುಲಿಯಂತೆ ಕಾಣುತ್ತಿದ್ದ, ಮದೋದಕವನ್ನು ಸುರಿಸುವ ಆನೆಯೋಪಾದಿಯಲ್ಲಿದ್ದ, ಯುದ್ಧದಲ್ಲಿ ಪ್ರಾಣಗಳನ್ನು ತೊರೆಯಲೂ ಸಿದ್ಧರಾಗಿದ್ದ, ಕವಚಾದಿಗಳನ್ನು ತೊಟ್ಟು ಯುದ್ಧಸನ್ನದ್ಧರಾಗಿದ್ದ, ಚಿತ್ರ-ವಿಚಿತ್ರವಾಗಿ ಯುದ್ಧಮಾಡುವ, ಮಹಾಧನುಷ್ಮಂತರಾದ, ಮನುಜಶ್ರೇಷ್ಠರಾದ, ಶತ್ರುಗಳಿಗೆ ಭಯವನ್ನು ಹೆಚ್ಚಿಸುವ, ಮಾಡಿದ ಉಪಕಾರವನ್ನು ಸ್ಮರಿಸುವ, ಸತ್ಯನಿರತರಾದ, ದುರ್ಯೋಧನನ ಹಿತೈಷಿಗಳಾದ, ಶೂರರಾದ, ರಣರಂಗದಲ್ಲಿ ಯುದ್ಧಕ್ಕೆ ಸಜ್ಜಾಗಿ ನಿಂತಿದ್ದ ದ್ರೋಣರನ್ನು ನೋಡಿ ಆ ಸಮಯದಲ್ಲಿ ಪಾಂಡವರ ಕಡೆಯ ಯಾವ-ಯಾವ ಯೋಧರು ಅವರೊಡನೆ ಯುದ್ಧಮಾಡುವ ಇಚ್ಛೆಯಿಂದ ರಣರಂಗಕ್ಕೆ ಹಿಂದಿರುಗಿದರು? ಈ ವಿಷಯವನ್ನು ನನಗೆ ವಿವರಿಸಿ ಹೇಳು."

"ಮಹಾರಾಜ! ದ್ರೋಣರ ಬಾಣದಿಂದ ಪೀಡಿತರಾಗಿ ಚದುರಿ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದ ಪಾಂಚಾಲ-ಪಾಂಡವ-ಮತ್ಸ್ಯ- ಸೃಂಜಯ-ಚೇದಿ-ಕೇಕಯಸೈನಿಕರನ್ನು ಕೌರವರು ನೋಡಿದರು. ನದಿಯ ಮಹಾಪ್ರವಾಹ ದಿಂದ ದೋಣಿಗಳು ಸೆಳೆಯಲ್ಪಡುವಂತೆ–ದ್ರೋಣಾಚಾರ್ಯರ ಧನುಸ್ಸಿನಿಂದ ಪ್ರಮುಕ್ತವಾದ, ಪ್ರಾಣಾಪಹಾರಿಗಳಾದ ಬಾಣಗಳ ಸಮೂಹದಿಂದ ಪಾಂಡವರ ಕಡೆಯ ಸೈನಿಕರ ಪ್ರಾಣಗಳೂ ಬಹಳ ವೇಗವಾಗಿ ಸೆಳೆಯಲ್ಪಡುತ್ತಿದ್ದುದನ್ನು ಕುರುವೀರರು ನೋಡಿ ನಾನಾವಿಧವಾದ ವಿಜಯಸೂಚಕವಾದ ರಣವಾದ್ಯಗಳ ಘೋಷಗಳಿಂದಲೂ, ಸಿಂಹನಾದಗಳಿಂದಲೂ ನಾಲ್ಕುದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಾ ರಥ-ಗಜ- ಪದಾತಿ ಸೈನ್ಯಗಳ ಮೇಲೆ ಎಲ್ಲ ಕಡೆಗಳಿಂದಲೂ ಆಕ್ರಮಣನಡೆಸಿದರು. ಸೈನ್ಯಗಳ ಮಧ್ಯಭಾಗದಲ್ಲಿದ್ದ, ಸ್ವಜನರಿಂದ ಸುತ್ತುವರಿಯಲ್ಪಟ್ಟಿದ್ದ ದುರ್ಯೋಧನನು

ಭಯಗೊಂಡಿದ್ದ ಪಾಂಡವಸೈನಿಕರನ್ನು ನೋಡಿ ಪರಮಸಂತುಷ್ಟನಾಗಿ ಗಹಗಹಿಸಿನಗುತ್ತಾ ಕರ್ಣನೊಡನೆ ಈ ಮಾತನ್ನು ಹೇಳಿದನು:

"ರಾಧೇಯ! ಸಿಂಹವು ವನ್ಯಪ್ರಾಣಿಗಳನ್ನು ಭಯಪಡಿಸಿ ಓಡಿಸಿ ಬಿಡುವಂತೆ ದೃಢವಾಗಿ ಧನುಸ್ಸನ್ನು ಹಿಡಿದಿರುವ ದ್ರೋಣರು ತಮ್ಮ ಬಾಣಗಳ ಪ್ರಹಾರದಿಂದ ಪಾಂಚಾಲಸೈನಿಕರನ್ನು ಪೀಡಿಸಿ ಅವರು ಭಯಗೊಂಡು ಓಡಿಹೋಗುವಂತೆ ಮಾಡುತ್ತಿರುವುದನ್ನು ನೋಡು! ಚಂಡಮಾರುತದಿಂದ ದೊಡ್ಡ-ದೊಡ್ಡ ಮರಗಳು ಭಗ್ನವಾಗಿ ಹೋಗುವಂತೆ–ದ್ರೋಣರಿಂದ (ದ್ರೋಣರ) ರಭಸಯುಕ್ತವಾದ ಬಾಣಗಳ ಪ್ರಹಾರದಿಂದ ಭಗ್ನರಾಗಿ ಹೋಗಿರುವ ಪಾಂಚಾಲಸೈನಿಕರು ಮುಂದೆ ಯಾವಾಗಲೂ ಯುದ್ಧಮಾಡಲು ಇಚ್ಛಿಸುವುದೇ ಇಲ್ಲವೆಂದು ನಾನು ಭಾವಿಸುತ್ತೇನೆ. ಅಲ್ಲಿ ನೋಡು, ಕರ್ಣ! ಮಹಾತ್ಮರಾದ ದ್ರೋಣರ ಚಿನ್ನದ ರೆಕ್ಕೆಗಳುಳ್ಳ ಬಾಣಗಳಿಂದ ಬಾರಿಬಾರಿಗೂ ಸಮ್ಮರ್ದಿತರಾಗುತ್ತಿರುವ ಪಾಂಡವಯೋಧರು ದಿಕ್ಕುಗಾಣದೆ ಅಲ್ಲಲ್ಲಿ ಸುತ್ತಾಡುತ್ತಾ ಒಂದೇ ದಾರಿಯನ್ನು ಹಿಡಿದು ಪಲಾಯನಮಾಡುತ್ತಿಲ್ಲ. (ಅವಕಾಶಸಿಕ್ಕಿದಕಡೆಯಲ್ಲಿ ಹಾದಿಯನ್ನು ಮಾಡಿಕೊಂಡು ಅನೇಕ ಮಾರ್ಗಗಳ ಮೂಲಕವಾಗಿ ಪಲಾಯನಮಾಡುತ್ತಿದ್ದಾರೆ.) ಭಿಲ್ಲರು ಕಾಡಿನ ಸುತ್ತಲೂ ಬೆಂಕಿಯನ್ನು ಹೊತ್ತಿಸಿ ಕಾಡಾನೆಗಳೆಲ್ಲವನ್ನೂ ಒಂದೆಡೆಯಲ್ಲಿ ಒಟ್ಟು ಗೂಡಿಸು ವಂತೆ–ಮಹಾತ್ಮರಾದ ದ್ರೋಣರು ಮತ್ತು ಕುರುಯೋಧರು ಪಾಂಡವ ಸೈನ್ಯದ ಗತಿಯನ್ನು ನಾಲ್ಕು ದಿಕ್ಕುಗಳಿಂದಲೂ ಪ್ರತಿರೋಧಿಸಿ ಅವರೆಲ್ಲರೂ ಒಂದೆಡೆಯಲ್ಲೇ ಮಂಡಲಾಕಾರವಾಗಿ ನಿಲ್ಲುವಂತೆ ಮಾಡಿರು ತ್ತಾರೆ. ದುಂಬಿಗಳು ಮುತ್ತಿಕೊಳ್ಳುವಂತೆ ದ್ರೋಣರ ಬಾಣಗಳಿಂದ ಮುತ್ತ ಲ್ಪಟ್ಟಿದ್ದ ಪಾಂಡವರ ಕಡೆಯ ಸೈನಿಕರು ಪಲಾಯನವನ್ನೇ ಆಶ್ರಯವನ್ನಾಗಿ ಹೊಂದಿದ ವರಾಗಿ ಬಾಣಗಳಿಂದ ತಪ್ಪಿಸಿಕೊಳ್ಳಲು ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಹಿಂದೆ ಅವಿತುಕೊಳ್ಳುತ್ತಿದ್ದಾರೆ.

ಮಹಾಕೋಪಿಷ್ಠನಾದ ಭೀಮಸೇನನು ಪಾಂಡವಸೈನಿಕರಿಂದಲೂ ಮತ್ತು ಸೃಂಜಯಯೋಧರಿಂದಲೂ ರಹಿತನಾಗಿ (ಏಕಾಕಿಯಾಗಿ) ಉಳಿದು ಕೊಂಡು ನಮ್ಮ ಕಡೆಯ ಯೋಧರಿಂದ ಸುತ್ತುವರಿಯಲ್ಪಟ್ಟಿದ್ದಾನೆ. ಈ ದೃಶ್ಯವು ನನಗೆ ಅತಿಯಾದ ಆನಂದವನ್ನು ಉಂಟುಮಾಡುತ್ತಿದೆ. ದುರ್ಬುದ್ಧಿಯ ಪಾಂಡವನೀಗ

(ಭೀಮಸೇನನು) ಲೋಕವೆಲ್ಲವೂ ದ್ರೋಣಮಯವಾಗಿಯೇ ಇರುವುದನ್ನು ಕಾಣುತ್ತಿದ್ದಾನೆ. ಈ ಸಮಯದಲ್ಲಿ ನಿಶ್ಚಯವಾಗಿಯೂ ಇವನಿಗೆ ಜೀವಿತ ದಲ್ಲಿಯೂ ಮತ್ತು ರಾಜ್ಯದ ವಿಷಯದಲ್ಲಿಯೂ ಅತಿಯಾದ ನಿರಾಶೆಯುಂಟಾಗಿದೆ."

ದುರ್ಯೋಧನನು ಸಂತೋಷಭರಿತನಾಗಿ ಹೇಳಿದ ಮಾತಿಗೆ ಕರ್ಣನು ಸಮಯೋಚಿತವಾಗಿ ಉತ್ತರವನ್ನಿತ್ತನು:

"ಮಹಾರಾಜ! ಭೀಮಸೇನನೀಗ ಏಕಾಕಿಯಾಗಿರುವುದೇನೋ ನಿಜ. ಆದರೆ ಮಹಾಬಾಹುವಾದ ಭೀಮಸೇನನು, ತಾನು ಜೀವಿಸಿರುವ ಪರ್ಯಂತ ವಾಗಿ ಒಮ್ಮೆಯಾದರೂ ಯಾವುದೇ ಕಾರಣದಿಂದಲೂ ಯುದ್ಧವನ್ನು ಬಿಟ್ಟು ಹೋಗತಕ್ಕವನಲ್ಲ. ನಿನ್ನ ಕಡೆಯ ಸೈನಿಕರು ಈಗ ಮಾಡುತ್ತಿರುವ ಸಿಂಹನಾದ ಗಳನ್ನು ಅವನು ಹೆಚ್ಚುಕಾಲ ಸಹಿಸಿಕೊಂಡಿರತಕ್ಕವನೂ ಅಲ್ಲ. ಶೂರರಾದ, ಮಹಾಬಲಿಷ್ಠರಾದ, ಅಸ್ತ್ರವಿದ್ಯಾವಿಶಾರದರಾದ ಮತ್ತು ಯುದ್ಧಸಮಯದಲ್ಲಿ ಉನ್ಮತ್ತರಾಗಿ ಕಾದಾಡುವ ಪಾಂಡವರು ಸಂಪೂರ್ಣವಾಗಿ ಭಗ್ನ ರಾಗಿ ಹೋಗುವುದಿಲ್ಲವೆಂಬುದೇ ನನ್ನ ಅಭಿಪ್ರಾಯವಾಗಿದೆ. ಅವರಿಗೆ ವಿಷವು ಣಿಸಿದುದು, ಅರಗಿನಮನೆಗೆ ಬೆಂಕಿಯಿಟ್ಟುದು, ಅವರೊಡನೆ ಕಪಟದ್ಯೂತ ವಾಡಿದುದು ಮತ್ತು ಅದರ ಫಲವಾಗಿ ಅವರು ವನವಾಸವನ್ನು ಅನುಭವಿಸಿ ದುದು–ಈ ಎಲ್ಲವನ್ನೂ ಬಾರಿ-ಬಾರಿಗೂ ಸ್ಮರಿಸಿಕೊಳ್ಳುವ ಪಾಂಡವರು ಯುದ್ಧಮಾಡುವುದನ್ನು ಬಿಟ್ಟು ಭಯದಿಂದ ಓಡಿಹೋಗ ಲಾರರೆಂದೇ ನಾನು ಭಾವಿಸುತ್ತೇನೆ. ಮಹಾಬಾಹುವಾದ, ಮಹಾತೇಜಸ್ವಿ ಯಾದ, ಕುಂತಿಯ ಮಗನಾದ ವೃಕೋದರನು ರಣರಂಗಕ್ಕೆ ಹಿಂದಿರುಗಿ ಶ್ರೇಷ್ಠರಾದ ನಮ್ಮ ಕಡೆಯ ಮಹಾರಥರನ್ನು ಕೊಲ್ಲುವನು. ಕತ್ತಿಯಿಂದಲೂ, ಧನುಸ್ಸಿನಿಂದಲೂ, ಶಕ್ತ್ಯಾ ಯುಧದಿಂದಲೂ, ಕುದುರೆಗಳಿಂದಲೂ, ಆನೆಗಳಿಂದಲೂ, ಮನುಷ್ಯ ರಿಂದಲೂ, ರಥಗಳಿಂದಲೂ, ಲೋಹಮಯವಾದ ದಂಡದಿಂದಲೂ ನಮ್ಮ ಕಡೆಯ ಸೈನಿಕರನ್ನು ಭೀಮಸೇನನು ಗುಂಪು-ಗುಂಪಾಗಿ ಸಂಹರಿಸುವನು.*

* ಕುದುರೆಗಳಿಂದಲೂ, ರಥಗಳಿಂದಲೂ, ಮನುಷ್ಯರಿಂದಲೂ ಸಂಹರಿಸುವುದೆಂದರೆ: ಶತ್ರುಪಕ್ಷದ ಕುದುರೆಗಳನ್ನೇ ಸೈನಿಕರಮೇಲೆ ತಳ್ಳಿಬಿಡುವುದು. ಆನೆಗಳನ್ನೇ ತಳ್ಳಿಬಿಡುವುದು. ರಥಗಳನ್ನೇ ತಳ್ಳಿಬಿಡುವುದು. ಹತ್ತು ಸಾವಿರ ಆನೆಗಳ ಬಲವಿದ್ದ ವೃಕೋದರನಿಗೆ ಈ ಕಾರ್ಯವು ಅಸಾಧ್ಯವಾದುದೇನೂ ಆಗಿರಲಿಲ್ಲ.

ದುರ್ಯೋಧನ! ಅಲ್ಲಿ ನೋಡು. ಇದುವರೆಗೂ ಭೀಮಸೇನನು ಏಕಾಕಿಯಾಗಿ ನಮ್ಮ ಸೈನಿಕರ ಮಧ್ಯದಲ್ಲಿ ಸಿಕ್ಕಿಕೊಂಡು ಸೆಣೆಸಾಡುತ್ತಿದ್ದರೂ ಈಗ ಸಾತ್ಯಕಿಪ್ರಮುಖರಾದ ಮಹಾರಥರೂ, ಪಾಂಚಾಲ-ಕೇಕಯ-ಮತ್ಸ್ಯ ಯೋಧರೂ, ಅದರಲ್ಲಿಯೂ ವಿಶೇಷವಾಗಿ ಪಾಂಡವಯೋಧರೂ–ಭೀಮಸೇನನನ್ನು ಹಿಂಬಾಲಿಸಿ ಹೋಗುತ್ತಿದ್ದಾರೆ. ಮಹಾಕೋಪಿಷ್ಠನಾಗಿರುವ ಭೀಮಸೇನನಿಂದ ಪ್ರಚೋದಿತರಾದ, ಶೂರರಾದ ಮಹಾಬಲಿಷ್ಠರಾದ, ಮಹಾಪರಾಕ್ರಮಿಗಳಾದ ಮಹಾರಥರು ನಮ್ಮ ಕಡೆಯ ಸೈನಿಕರನ್ನು ಸಂಹಾರ ಮಾಡುತ್ತಲೇ ಮುಂದುವರಿಯುತ್ತಿದ್ದಾರೆ. ಭೀಮಸೇನನನ್ನು ರಕ್ಷಿಸುವ ಇಚ್ಛೆಯುಳ್ಳ ಆ ಪಾಂಡವಯೋಧರು–ಸೂರ್ಯನನ್ನು ಮೋಡಗಳ ಸಮೂಹ ಗಳು ಆವರಿಸುವಂತೆ–ಎಲ್ಲ ಕಡೆಗಳಿಂದಲೂ ದ್ರೋಣರನ್ನು ಮುತ್ತುತ್ತಿದ್ದಾರೆ. ದ್ರೋಣರನ್ನು ಪರಾಭವಗೊಳಿಸುವುದರಲ್ಲಿಯೇ ದೃಢವಾದ ಮನಸ್ಸುಳ್ಳ, ಪ್ರಾಣವನ್ನೂ ತೊರೆಯಲು ಸಿದ್ಧರಾಗಿರುವ ಪಾಂಡವಯೋಧರು–ದೀಪದಹುಳುಗಳು ದೀಪವನ್ನು ಮುತ್ತಿಕೊಂಡು ತಾವು ಸಾಯುವುದನ್ನೂ ಗಮನಿಸದೇ ದೀಪವನ್ನು ಆರಿಸಲು ಪ್ರಯತ್ನಪಡುವಂತೆ–ರಕ್ಷಿಸುವವರಿಲ್ಲ ದಿರುವ, ನಿಯತವ್ರತಿಗಳಾದ ದ್ರೋಣರನ್ನು ಪೀಡಿಸಬಹುದು. ಪಾಂಡವರ ಕಡೆಯ ಯೋಧರು ಅಸ್ತ್ರವಿದ್ಯಾವಿಶಾರದರೆಂಬುದರಲ್ಲಾಗಲೀ, ದ್ರೋಣರನ್ನು ತಡೆದು ನಿಲ್ಲಿಸಲು ಸಮರ್ಥರೆಂಬುದರಲ್ಲಾಗಲೀ ಸಂಶಯವೇ ಇಲ್ಲ. ಆದುದರಿಂದಲೇ ದ್ರೋಣರ ಮೇಲೆ ಈಗ ದೊಡ್ಡ ಭಾರವು (ಹೊಣೆಯು) ಬಿದ್ದಿರುವುದೆಂದು ನಾನು ಭಾವಿಸುತ್ತೇನೆ. ಹತ್ತಾರು ತೋಳಗಳು ಸೇರಿ ದೊಡ್ಡ ಆನೆಯನ್ನು ಸಂಹರಿಸುವಂತೆ–ಅಥವಾ ಹತ್ತಾರು ಕಾಗೆಗಳು ಸೇರಿ ದೊಡ್ಡ ಸರ್ಪವನ್ನು ಸಂಹರಿಸುವಂತೆ–ಆ ಪಾಂಡವಯೋಧರೆಲ್ಲರೂ ಒಟ್ಟಾಗಿ ಸೇರಿ ರಕ್ಷಕರಿಲ್ಲದಿರುವ, ವ್ರತಿಗಳಾದ ದ್ರೋಣರನ್ನು ಸಂಹರಿಸಬಾರದು. ಆದುದ ರಿಂದ ನಾವೆಲ್ಲರೂ ದ್ರೋಣರಿರುವ ಸ್ಥಳಕ್ಕೆ ಶೀಘ್ರವಾಗಿ ಹೋಗೋಣ."

ಮಹಾರಾಜ! ರಾಧೇಯನು ಹೇಳಿದ ಮಾತುಗಳನ್ನು ಕೇಳಿ ಸಹೋ ದರರಿಂದೊಡಗೂಡಿದ ದುರ್ಯೋಧನನು ದ್ರೋಣರ ರಥದ ಕಡೆಗೆ ಧಾವಿಸಿದನು. ಅನೇಕ ವಿಧವಾದ ಬಣ್ಣಗಳಿಂದ ಕೂಡಿದ್ದ ಕುದುರೆಗಳ ಮೇಲೆ ಕುಳಿತು ದ್ರೋಣರೊಬ್ಬರನ್ನು ಸಂಹಾರಮಾಡುವ ಇಚ್ಛೆಯಿಂದ

ರಣಾಂಗಣಕ್ಕೆ ಹಿಂದಿರುಗಿದ ಪಾಂಡವಸೈನಿಕರ ಕೋಲಾಹಲಶಬ್ದವು ದೊಡ್ಡದಾಗಿ ಅಲ್ಲಿ ಕೇಳಿಸುತ್ತಿದ್ದಿತು."

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಸಂಶಪ್ತಕವಧಪರ್ವ ( ಮುಂದುವರಿದಿದೆ.)

## ಪಾಂಡವರ ಸೈನ್ಯದಲ್ಲಿದ್ದ ಮಹಾರಥರ ಮತ್ತು ರಥಾಶ್ವ-ಧ್ವಜ-ಧನುಸ್ಸುಗಳ ವರ್ಣನೆ

ಆ ಸಮಯದಲ್ಲಿ ಧೃತರಾಷ್ಟ್ರನಿಗೆ ಶತ್ರುಪಕ್ಷದವರ ರಥಗಳಲ್ಲಿರುವ ಧ್ವಜ-ಕುದುರೆಗಳು, ಅವುಗಳ ಬಣ್ಣ ಇವುಗಳನ್ನು ಕೇಳಿ ತಿಳಿಯಬೇಕೆಂಬ ಆಶಯವುಂಟಾಯಿತು. ಅಂತೆಯೇ ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಕ್ರುದ್ಧರಾದ ಭೀಮಪುರಸ್ಸರರಾದ ಮತ್ತು ದ್ರೋಣರನ್ನು ಆಕ್ರಮಿಸಲು ಹೊರಟ ಎಲ್ಲ ಯೋಧರ ರಥ-ಧ್ವಜಾದಿ ಚಿಹ್ನೆಗಳನ್ನು ವಿವರವಾಗಿ ತಿಳಿಸು."

"ಮಹಾರಾಜ! ಕರಡಿಯ ಬಣ್ಣದಂತೆ ಬಣ್ಣವಿದ್ದ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ದ್ರೋಣರ ಕಡೆಗೆ ಭೀಮಸೇನನು ಬರುತ್ತಿದ್ದುದನ್ನು ಕಂಡು ಶೂರನಾದ ಸಾತ್ಯಕಿಯು, ಬೆಳ್ಳಿಗೆ ಸಮಾನವಾದ ಅಚ್ಚ ಬಿಳಿಯ ಬಣ್ಣದಿಂದ ಕೂಡಿದ್ದ ಕುದುರೆಗಳನ್ನು ಕಟ್ಟಿರುವ ರಥದಲ್ಲಿ ಕುಳಿತು ದ್ರೋಣರ ಸಮೀಪಕ್ಕೆ ಧಾವಿಸಿದನು. [1]ಸಾರಂಗಬಣ್ಣದ ಕುದುರೆಗಳನ್ನು ಹೊಂದಿದ್ದ, ದುರ್ಧರ್ಷನಾದ, ಕ್ರುದ್ಧನಾಗಿದ್ದ ಯುಧಾಮನ್ಯುವು, ತಾನೇ ಕುದುರೆಗಳನ್ನು ಚುರುಕುಗೊಳಿಸುತ್ತಾ ಬಹಳ ಶೀಘ್ರವಾಗಿ ದ್ರೋಣರ ರಥದ ಸಮೀಪಕ್ಕೆ ಧಾವಿಸಿದನು. [2]ಕಪೋತಪಕ್ಷಿಯ ಬಣ್ಣದಂತೆ ಬಣ್ಣವುಳ್ಳವುಗಳಾಗಿದ್ದ, ಸುವರ್ಣಾಭರಣಗಳಿಂದ ಸಮಲಂಕೃತವಾದ, ಮನಸ್ಸಿನ ವೇಗಕ್ಕೆ ಸಮಾನವಾದ ವೇಗವುಳ್ಳವುಗಳಾಗಿದ್ದ ಕುದುರೆ

---

[1] ಸಾರಂಗಾಶ್ವ, ನೀಲಿ ಮತ್ತು ಕೆಂಪುಬಣ್ಣ ಮಿಶ್ರವಾಗಿರುವ ಕುದುರೆ.

ಸಿತನೀಲಾರುಣೋ ವರ್ಣಃ ಸಾರಂಗಸದೃಶಶ್ಚ ಸಃ ।

[2] ಪಾರಾವತಸವರ್ಣಃ=ಕಪೋತದ ಬಣ್ಣ, ಬಿಳಿ ಮತ್ತು ನೀಲಿಬಣ್ಣ ಮಿಶ್ರಿತವಾದುದು.
ಪಾರಾವತಕಪೋತಾಭಃ ಸಿತನೀಲಸಮನ್ವಯಾತ್ ।

ಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತಿದ್ದ ಪಾಂಚಾಲರಾಜನ ಮಗನಾದ ಧೃಷ್ಟದ್ಯುಮ್ನನು ದ್ರೋಣರ ಬಳಿಗೆ ಹೋದನು. ನಿಯಮಪೂರ್ವಕವಾಗಿ ವ್ರತಾದಿಗಳನ್ನು ಮಾಡುತ್ತಿದ್ದ, ತನ್ನ ತಂದೆಯಾದ ಧೃಷ್ಟದ್ಯುಮ್ನನ ರಕ್ಷಣೆಯನ್ನೂ ಮತ್ತು ಅವನ ಕಾರ್ಯಸಿದ್ಧಿಯನ್ನೂ ಸರ್ವಕಾಲದಲ್ಲಿಯೂ ಆಶಿಸುತ್ತಿದ್ದ ದ್ರುಪದಪೌತ್ರನಾದ ಕ್ಷತ್ರಧರ್ಮನು ಕೆಂಪುಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತು ದ್ರೋಣರ ಬಳಿಗೆ ಧಾವಿಸಿದನು.

ಶಿಖಂಡಿಯ ಮಗನಾದ ಕ್ಷತ್ರದೇವನು ಕಮಲಪತ್ರಕ್ಕೆ ಸಮಾನವಾದ ಬಣ್ಣದಿಂದ ಕೂಡಿದ್ದ, ಆಭರಣಗಳಿಂದ ಸಮಲಂಕೃತವಾಗಿದ್ದ [1]ಮಲ್ಲಿಕಾಕ್ಷಗಳೆಂಬ ಕುದುರೆಗಳನ್ನು ತಾನೇ ತ್ವರೆಗೊಳಿಸುತ್ತಾ ದ್ರೋಣರನ್ನು ಎದುರಿಸಿದನು. ಗಿಣಿಯ ರೆಕ್ಕೆಗಳಿಗೆ ಸಮಾನವಾದ ಬಣ್ಣವನ್ನು ಹೊಂದಿದ್ದ, ನೋಡಲು ಬಹಳ ಸುಂದರವಾಗಿ ಕಾಣುತ್ತಿದ್ದ [2]ಕಾಂಬೋಜದೇಶದ ಕುದುರೆಗಳು ನಕುಲನನ್ನು ಹೊತ್ತು ನಿನ್ನ ಸೈನಿಕರಿದ್ದೆಡೆಗೆ ಓಡಿಹೋಗುತ್ತಿದ್ದುವು. ಹೇಡಿಗಳಿಂದ ಎದುರಿಸಲು ಅಸಾಧ್ಯನಾದ, ಯುದ್ಧಕ್ಕೆ ಹೋಗಬೇಕೆಂದು ನಿಶ್ಚಯಿಸಿ ಪರಮಕ್ರುದ್ಧನಾಗಿ ಹೊರಟಿದ್ದ ಉತ್ತಮೌಜಸನನ್ನು ಮೇಘಸದೃಶವಾಗಿದ್ದ ಕಪ್ಪುಬಣ್ಣದ ಕುದುರೆಗಳು ರಣರಂಗಕ್ಕೆ ಒಯ್ದುವು. ತಿತ್ತಿರಿ(ಕವುಜಗ) ಪಕ್ಷಿಯಂತೆ ಕಪ್ಪು ಮತ್ತು ಬಿಳುಪು ಬೆರೆತ ಬಣ್ಣದಿಂದ ಕೂಡಿದ್ದ, ವಾಯುವಿಗೆ ಸಮಾನವಾಗಿರುವ ಕುದುರೆಗಳು ಆಯುಧವನ್ನು

---

[1]ಮಲ್ಲಿಕಾಕ್ಷಕುದುರೆಯ ಲಕ್ಷಣವನ್ನು ಹೀಗೆ ಹೇಳುತ್ತಾರೆ: ಪ್ರಶಸ್ತಃ ಕೃಷ್ಣತಾರಸ್ತು ಮಲ್ಲಿಕಾಕ್ಷಃ ಪ್ರಕೀರ್ತಿತಃ। ಪ್ರಶಸ್ತವಾದ ಕಣ್ಣುಗುಡ್ಡೆಗಳು ಇರುವುದಕ್ಕೆ ಮಲ್ಲಿಕಾಕ್ಷ ಎಂದು ಹೆಸರು. ಶ್ವೇತಜಾವೇಷ್ಟಿತಂ ಕೃಷ್ಣರೇಖಾಯಾತಾರಕಂ ಚ ಯತ್ । ಮಲ್ಲಿಕಾಕ್ಷಃ ಸ ವಿಜ್ಞೇಯಃ ಸ್ವಾಮಿನಃ ಸುಖವರ್ಧನಃ॥ ಬಿಳಿಯ ಬಣ್ಣದಿಂದ ಆವರಿಸಲ್ಪಟ್ಟಿದ್ದಾಗಿ ಕಣ್ಣಿನ ಪಾಪೆಯಂತೆ ಕಪ್ಪುಗೆರೆಯಿಂದ ಕೂಡಿದ ಮೈಬಣ್ಣವುಳ್ಳ ಕುದುರೆಗೆ ಮಲ್ಲಿಕಾಕ್ಷ ಎಂದು ಹೆಸರು. ಇಂತಹ ಕುದುರೆಯು ಯಜಮಾನನ ಸುಖವನ್ನು ವರ್ಧಿಸುತ್ತದೆ.

[2]ಕಾಂಬೋಜಾಶ್ವಗಳು: ಕಾಂಬೋಜದೇಶದ ಕುದುರೆಗಳು. ಮಹಾಲಲಾಟಜಘನಸ್ಕನ್ಧವಕ್ಷೋಜವಾ ಹಯಾಃ। ದೀರ್ಘಗ್ರೀವಾಯತಾ ಹ್ರಸ್ವಮುಷ್ಕಾಃ ಕಾಮ್ಬೋಜಕಾಃ ಸ್ಮೃತಾಃ॥ ಯಾವ ಕುದುರೆಗಳಿಗೆ ಹಣೆ, ನಿತಂಬಪ್ರದೇಶ, ಹೆಗಲು, ಎದೆ–ಇವುಗಳು ವಿಶಾಲವಾಗಿ ಇರುವುವೋ, ಯಾವ ಕುದುರೆಗಳು ಹೆಚ್ಚಿನ ವೇಗವುಳ್ಳವುಗಳಾಗಿರುವುವೋ, ಉದ್ದವಾದ ಮತ್ತು ಅಗಲವಾದ ಕತ್ತುಗಳಿಂದ ಕೂಡಿವೆಯೋ ಮತ್ತು ಯಾವ ಕುದುರೆಗಳಿಗೆ ಅಂಡಕೋಶಗಳು ಹ್ರಸ್ವವಾಗಿರುವುವೋ ಅಂತಹ ಕುದುರೆಗಳು ಕಾಂಬೋಜದೇಶದಲ್ಲಿ ಹುಟ್ಟಿದ ಕುದುರೆಗಳೆಂದು ಹೇಳುತ್ತಾರೆ.

ಎತ್ತಿ ಹಿಡಿದಿದ್ದ ಸಹದೇವನನ್ನು ವೇಗದಲ್ಲಿ ರಣರಂಗಕ್ಕೆ ಹೊತ್ತು ತಂದುವು. ಆನೆಯ ದಂತದಂತೆ ಬಿಳಿಯ ಬಣ್ಣದಿಂದ ಕೂಡಿದ್ದ, ಕಪ್ಪು ಬಾಲವನ್ನು ಹೊಂದಿದ್ದ, ವೇಗದಲ್ಲಿ ವಾಯುವಿಗೆ ಸಮಾನವಾಗಿದ್ದ ಕುದುರೆಗಳು ನರಶ್ರೇಷ್ಠ ನಾದ ಯುಧಿಷ್ಠಿರಮಹಾರಾಜನನ್ನು ರಣರಂಗಕ್ಕೆ ಒಯ್ದುವು. ಸುವರ್ಣಮಯ ವಾದ ವಸ್ತ್ರಗಳಿಂದ ಆಚ್ಛಾದಿತವಾಗಿದ್ದ, ವೇಗದಲ್ಲಿ ವಾಯುವಿಗೆ ಸಮಾನ ವಾಗಿದ್ದ ಕುದುರೆಗಳಲ್ಲಿ (ಕುದುರೆಗಳನ್ನು ಕಟ್ಟಿದ್ದ ರಥಗಳಲ್ಲಿ) ಕುಳಿತು ಎಲ್ಲ ಸೈನಿಕರೂ ಯುಧಿಷ್ಠಿರನನ್ನು ಹಿಂಬಾಲಿಸಿದರು. ಯುಧಿಷ್ಠಿರರಾಜನ ಹಿಂಬದಿ ಯಲ್ಲಿ ದ್ರುಪದನಿದ್ದನು. ಅವನಿಗೆ ಸುವರ್ಣಮಯವಾದ ಛತ್ರವಿದ್ದಿತು. ಅವನನ್ನೂ ಸಹ ಎಲ್ಲ ಸೈನಿಕರೂ ಜಾಗರೂಕತೆಯಿಂದ ರಕ್ಷಿಸುತ್ತಿದ್ದರು. ಮಹಾಧನುಷ್ಮಂತನಾದ ದ್ರುಪದನು [3]ಲಲಾಮ ಎಂಬ ಸಂಜ್ಞೆಯನ್ನು ಹೊಂದಿದ್ದ, ಎಂತಹ ಮಹಾಶಬ್ದವನ್ನಾದರೂ ಸಹಿಸಿಕೊಳ್ಳಲು ಸಮರ್ಥ ವಾಗಿದ್ದ ಕುದುರೆಗಳಿಂದ ಕೂಡಿದವನಾಗಿ, ಭಯದ ಲೇಶವೂ ಇಲ್ಲದವನಾಗಿ ರಾಜರುಗಳ ಮಧ್ಯದಲ್ಲಿ ದ್ರೋಣರ ಬಳಿಗೆ ಹೋಗುತ್ತಿದ್ದನು.

ವಿರಾಟರಾಜನು ಎಲ್ಲ ಮಹಾರಥರೊಡನೆಯೂ ಕೂಡಿಕೊಂಡು ದ್ರುಪದನನ್ನು ಅನುಸರಿಸಿ ಬಹಳ ಶೀಘ್ರಗತಿಯಿಂದ ಹೋಗುತ್ತಿದ್ದನು. ಕೇಕಯರೂ, ಶಿಖಂಡಿಯೂ, ಧೃಷ್ಟಕೇತುವೂ ತಮ್ಮ-ತಮ್ಮ ಸೈನ್ಯಗಳಿಂದ ಪರಿವೃತರಾಗಿ ಮತ್ಸ್ಯರಾಜನಾದ ವಿರಾಟನನ್ನು ಅನುಸರಿಸಿ ಹೋಗುತ್ತಿ

[3]ಲಲಾಮ ಎಂಬುದು ಒಂದು ಜಾತಿಯ ಕುದುರೆ. ಇದರ ಲಕ್ಷಣವು ಈ ರೀತಿಯಾಗಿದೆ. ಶ್ವೇತಂ ಲಲಾಟಮಧ್ಯಸ್ಥಂ ತಾರಾರೂಪಂ ಹಯಸ್ಯ ಯತ್। ಲಲಾಮಂ ಚಾಪಿ **ತತ್ಪ್ರಾಹುರ್ಲಲಾಮೋಽಶ್ವಸ್ತದನ್ವಿತಃ॥** -ಯಾವ ಕುದುರೆಯ ನೆತ್ತಿಯ ನಡುಭಾಗದಲ್ಲಿ ನಕ್ಷತ್ರಕ್ಕೆ ಸಮಾನವಾದ ಬಿಳಿಯ ಚಿಹ್ನೆಯಿರುತ್ತದೆಯೋ ಆ ಚಿಹ್ನೆಗೆ ಲಲಾಮ ಎಂದು ಹೆಸರು. ಇಂತಹ ಗುರುತಿನಿಂದ ಕೂಡಿದ ಕುದುರೆಯನ್ನೂ ಲಲಾಮ ಎಂದೇ ಕರೆಯುತ್ತಾರೆ. **ಲಲಾಮೈಃ ಹರಿಭಿಃ** ಎಂದರೆ ಲಲಾಮ ಎಂಬ ಹೆಸರಿನ ಕುದುರೆಗಳಿಂದ ಎಂದು ಅರ್ಥವಾಗುತ್ತದೆ. ಆದರೆ ವ್ಯಾಖ್ಯಾನಕಾರರು ಲಲಾಮ ನಾಮಾಂಕಿತವಾದ ಮತ್ತು ಹರಿನಾಮಾಂಕಿತವಾದ ಕುದುರೆಗಳಿಂದ - ಎಂದು ಅರ್ಥ ಮಾಡಿ ಹರಿ ಎಂಬ ಕುದುರೆಗಳ ಲಕ್ಷಣವನ್ನು ಹೇಳುತ್ತಾರೆ. ಸಕೇಶರಾಣಿ **ರೋಮಾಣಿ ಸುವರ್ಣಾಭಾನಿ ಯಸ್ಯ ತು। ಹರಿಃ ಸ ವರ್ಣತೋಽಶ್ವಸ್ತು ಪೀತ ಕೌಶೇಯಸನ್ನಿಭಃ॥** ಯಾವ ಕುದುರೆಯ ಕತ್ತಿನ ಮೇಲಿರುವ ಕೂದಲುಗಳೂ ಮತ್ತು ಶರೀರದ ಮೇಲಿರುವ ರೋಮಗಳೂ ಚಿನ್ನದ ಬಣ್ಣದಂತೆ ಹೊಂಬಣ್ಣವಾಗಿರು ತ್ತವೆಯೋ ಅಂತಹ ಬಣ್ಣದ ರೇಷ್ಮೆಯ ಪೀತಾಂಬರಕ್ಕೆ ಸಮಾನವಾಗಿರುವ ಕುದುರೆಗೆ "ಹರಿ" ಎಂದು ಹೆಸರು.

ದ್ದರು. ಶತ್ರುಸಂಹಾರಕನಾದ ವಿರಾಟನ ರಥವನ್ನು ಭರಿಸಿದ್ದ ಶ್ರೇಷ್ಠವಾದ ಕುದುರೆಗಳು ಪಾಟಲಪುಷ್ಪದ (ಬಿಳುಪು ಮತ್ತು ಕೆಂಪು ಬೆರೆತ ಮಿಶ್ರವರ್ಣದ ಪಾದರೀಹೂವಿನ) ಬಣ್ಣದಿಂದ ಪ್ರಕಾಶಿಸುತ್ತಿದ್ದುವು. ಅರಿಸಿನ ಬಣ್ಣದಿಂದ ಕೂಡಿದ್ದ, ಚಿನ್ನದ ಸರದಿಂದ ಸಮಲಂಕೃತವಾಗಿದ್ದ, ವೇಗಯುಕ್ತವಾಗಿದ್ದ ಕುದುರೆಗಳು ವಿರಾಟನ ಮಗನನ್ನು ಬಹಳ ಶೀಘ್ರಗತಿಯಿಂದ ದ್ರೋಣರ ಕಡೆಗೆ ಒಯ್ಯುತ್ತಿದ್ದುವು. ಸುವರ್ಣಕ್ಕೆ ಸಮಾನವಾದ ಕಾಂತಿಯುಳ್ಳವರಾಗಿದ್ದ, ಕೆಂಪಾದ ಧ್ವಜಗಳನ್ನು ಹೊಂದಿದ್ದ ಐವರು ಕೇಕಯ ಸಹೋದರರು, ಇಂದ್ರಗೋಪಗಳ (ಮಿಂಚುಹುಳುಗಳ) ಬಣ್ಣದಿಂದ ಕೂಡಿದ್ದ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ರಥಗಳಲ್ಲಿ ಕುಳಿತು ದ್ರೋಣರ ಬಳಿಗೆ ಹೋದರು. ಸುವರ್ಣಮಯವಾದ ಮಾಲೆಗಳನ್ನು ಧರಿಸಿದ್ದ, ಯುದ್ಧವಿಶಾರದರಾಗಿದ್ದ, ಶೂರರಾಗಿದ್ದ ಮತ್ತು ಕವಚಗಳನ್ನು ಧರಿಸಿ ಸುಸಜ್ಜಿತರಾಗಿದ್ದ ಆ ಎಲ್ಲ ವೀರರೂ ಮೇಘಗಳು ಮಳೆಗರೆಯುವಂತೆಯೇ ಬಾಣಗಳ ಮಳೆಯನ್ನು ಸುರಿಸುತ್ತಿದ್ದಾರೆಯೋ ಎಂಬಂತೆ ಕಾಣುತ್ತಿದ್ದರು. ಪಾಂಚಾಲರಾಜಕುಮಾರನಾದ, ಮಹಾತೇಜಸ್ವಿಯಾದ ಶಿಖಂಡಿಯನ್ನು ತುಂಬುರುವಿನಿಂದ ಕೊಡಲ್ಪಟ್ಟಿದ್ದ ಹಸಿಮಡಿಕೆಯ ಬಣ್ಣದ ಕುದುರೆಗಳು ಒಯ್ಯುತ್ತಿದ್ದುವು. ಹನ್ನೆರಡುಸಾವಿರ ಪಾಂಚಾಲಮಹಾರಥರಲ್ಲಿ ಆರು ಸಾವಿರ ಮಹಾರಥರು ಶಿಖಂಡಿಯನ್ನು ಅನುಸರಿಸಿ ಹೋಗುತ್ತಿದ್ದರು. ಸಾರಂಗದಂತೆ ಚುಕ್ಕೆಗಳನ್ನು ಹೊಂದಿದ್ದ ಕುದುರೆಗಳು, ಪುರುಷಸಿಂಹನಾದ ಶಿಶುಪಾಲನ ಮಗನನ್ನು ಕುಣಿ-ಕುಣಿಯುತ್ತಾ ಒಯ್ಯುತ್ತಿದ್ದುವು. ಚೇದಿಗಳ ರಾಜನಾದ, ಅತ್ಯಂತ ಬಲಿಷ್ಠನಾದ, ದುರ್ಜಯನಾದ ಧೃಷ್ಟಕೇತುವು ಶರೀರದಲ್ಲಿ ಚುಕ್ಕೆಗಳನ್ನು ಹೊಂದಿದ್ದ ಕಾಂಬೋಜದೇಶದ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ರಥದಲ್ಲಿ ಕುಳಿತು ದ್ರೋಣರೊಡನೆ ಯುದ್ಧಕ್ಕೆ ಹೋದನು. ಕೇಕಯದೇಶೀಯನಾದ ಸುಕುಮಾರನಾದ ಬೃಹತ್ಕ್ಷತ್ರನನ್ನು ಬೆಂಕಿ ಬಿದ್ದ ಹುಲ್ಲುಮೆದೆಯಿಂದ ಹೊರಡುವ ಹೊಗೆಯ ಬಣ್ಣದಿಂದ ಕೂಡಿದ್ದ [4]ಸಿಂಧೂದೇಶದ ಉತ್ತಮೋತ್ತಮವಾದ ಕುದುರೆಗಳು ಬಹಳ ಶೀಘ್ರವಾಗಿ ರಣರಂಗಕ್ಕೆ ಒಯ್ಯುತ್ತಿದ್ದುವು.

[4]ಸಿಂಧೂದೇಶದಲ್ಲಿ ಹುಟ್ಟಿದ ಅಥವಾ ಸೈಂಧವನಾಮಾಂಕಿತವಾದ ಕುದುರೆಯ ಲಕ್ಷಣಗಳನ್ನು ಲಕ್ಷಣಕಾರರು ಹೀಗೆ ಹೇಳಿದ್ದಾರೆ: ದೀರ್ಘಗ್ರೀವಾಮುಖಾಲಂಬಮೇಹನಾಃ ಪೃಥುಲೋಚನಾಃ। ಮಹಾನಸ್ತನುರೋಮಾಣೋ ಬಲಿನಃ ಸೈಂಧವಾ ಹಯಾಃ॥

ಶಿಖಂಡಿಯ ಇನ್ನೊಬ್ಬ ಮಗನಾದ ಶೂರನಾದ ಋಕ್ಷದೇವನನ್ನು ಕುಡಿಕೆಯಂತೆ ದುಂಡಾದ ಕಣ್ಣುಗಳುಳ್ಳ [5]ಕಮಲದ ಬಣ್ಣದಿಂದ ಕೂಡಿದ್ದ, ಸುವರ್ಣಾಭರಣಗಳಿಂದ ಸಮಲಂಕೃತವಾಗಿದ್ದ [6]ಬಾಹ್ಲಿಕದೇಶದಲ್ಲಿ ಹುಟ್ಟಿದ್ದ ಕುದುರೆಗಳು ರಣಾಂಗಣಕ್ಕೆ ಒಯ್ಯುತ್ತಿದ್ದುವು. ಅರಿಂದಮನಾದ ಸೇನಾಬಿಂದುವನ್ನು ಸುವರ್ಣಮಯವಾದ ಆಭರಣಗಳಿಂದಲೂ, ಕವಚಗಳಿಂದಲೂ ಸಮಲಂಕೃತವಾಗಿದ್ದ, ರೇಷ್ಮೆಯಂತೆ ಥಳ-ಥಳಿಸುತ್ತಿದ್ದ, ಕ್ಷಮಾಗುಣ ಯುಕ್ತವಾಗಿದ್ದ ಕುದುರೆಗಳು ಒಯ್ಯುತ್ತಿದ್ದುವು. ಕಾಶೀರಾಜನಾದ ಅಭಿಭೂವಿನ ಮಗನಾದ, ಮಹಾರಥನಾದ, ಯುವಕನಾದ ಸುಕುಮಾರನನ್ನು ಯುದ್ಧ ಸಮಯದಲ್ಲಿ [7]ಕ್ರೌಂಚಪಕ್ಷಿಯ ಬಣ್ಣದ ಉತ್ತಮವಾದ ಕುದುರೆಗಳು ಹೊತ್ತಿದ್ದುವು. ಮನೋವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಕಪ್ಪು ಬಣ್ಣದ ಕಂಠಪ್ರದೇಶವಿದ್ದ, ಬಿಳುಪಾಗಿದ್ದ ಮತ್ತು ಸಾರಥಿಯ ಆಜ್ಞಾ ಧಾರಕಗಳಾಗಿದ್ದ ಕುದುರೆಗಳು ಯುಧಿಷ್ಠಿರನ ಮಗನಾದ ಪ್ರತಿವಿಂಧ್ಯನನ್ನು ಒಯ್ಯುತ್ತಿದ್ದುವು. ಕೌಂತೇಯನಾದ ಭೀಮಸೇನನ ಮಗ

---

ಸಿಂಧೂದೇಶದ ಕುದುರೆಗಳ ಕುತ್ತಿಗೆಯು ನೀಳವಾಗಿರುತ್ತದೆ. ಅವುಗಳ ಶಿಶ್ನಗಳು ಮುಖಕ್ಕೆ ತಾಗುವಷ್ಟು ಉದ್ದವಾಗಿರುತ್ತವೆ. ಅವುಗಳ ಕಣ್ಣುಗಳು ವಿಶಾಲವಾಗಿರುತ್ತವೆ. ಅವು ಬಹಳ ಎತ್ತರವಾಗಿರುತ್ತವೆ. ಅವುಗಳ ಕೂದಲುಗಳು ಸೂಕ್ಷ್ಮವಾಗಿರುತ್ತವೆ ಮತ್ತು ಅವು ಬಹಳ ಬಲಿಷ್ಠವಾಗಿಯೂ ಇರುತ್ತವೆ.

[5]ಪದ್ಮದ ವರ್ಣವು ಹೇಗಿರುತ್ತದೆಂಬುದನ್ನು ಲಕ್ಷಣಕಾರರು ನಿರೂಪಿಸಿದ್ದಾರೆ: **ಸಿತರಕ್ತಸಮಾಯೋಗಾತ್ಪದ್ಮವರ್ಣಃ ಪ್ರಕೀರ್ತ್ಯತೇ।** ಬಿಳಿ ಮತ್ತು ಕೆಂಪು ವರ್ಣಗಳ ಮಿಶ್ರಣದಿಂದ ಉಂಟಾಗುವ ಬಣ್ಣಕ್ಕೆ ಪದ್ಮವರ್ಣವೆಂದು ಹೆಸರು ಹೇಳುತ್ತಾರೆ.

[6]ಬಾಹ್ಲಿಕದೇಶದ ಕುದುರೆಗಳಿಗೂ, ಕಾಂಬೋಜದೇಶದ ಕುದುರೆಗಳಿಗೂ ಸ್ವಲ್ಪ ಮಾತ್ರ ವ್ಯತ್ಯಾಸವೆಂದು ಲಕ್ಷಣಕಾರರು ಹೇಳುತ್ತಾರೆ: **ಕಾಮ್ಬೋಜಸಮಸಂಸ್ಥಾನಾ ಬಾಹ್ಲಿಜಾತಾಶ್ಚ ವಾಜಿನಃ। ವಿಶೇಷಃ ಪುನರೇತೇಷಾಂ ದೀರ್ಘಪೃಷ್ಠಾಙ್ಗತೋಚ್ಯತೇ॥** ಕಾಂಬೋಜದೇಶದ ಕುದುರೆಗಳಿಗಿಂತಲೂ ಬಾಹ್ಲಿಕದೇಶದ ಕುದುರೆಗಳ ಪೃಷ್ಠಭಾಗವು ನೀಳವಾಗಿರುತ್ತದೆ.

[7]ಕ್ರೌಂಚವರ್ಣದ ಕುದುರೆಗಳ ಲಕ್ಷಣವು ಹೀಗಿರುತ್ತದೆ.: **ಸಿತಲೋಮಕೇಸರಾಢ್ಯಾಃ ಕೃಷ್ಣತ್ವಗ್ಗುಹ್ಯಲೋಚನೋಷ್ಠಖುರಾಃ। ಯೇ ಸ್ಯುರ್ಮುನಿಭಿರ್ವಾಹಾ ನಿರ್ದಿಷ್ಟಾಃ ಕ್ರೌಞ್ಚವರ್ಣಾಸ್ತೇ॥** ಯಾವ ಕುದುರೆಗಳ ಕೂದಲುಗಳು ಮತ್ತು ಕತ್ತಿನ ಮೇಲಿರುವ ಕೇಶಗಳು ಬಿಳುಪಾಗಿರುತ್ತವೆಯೋ ಚರ್ಮ, ಗುಹ್ಯಸ್ಥಳ, ಕಣ್ಣುಗಳು, ತುಟಿಗಳು ಮತ್ತು ಗೊರಸುಗಳು ಕಪ್ಪಾಗಿರುತ್ತವೆಯೋ ಅಂತಹ ಕುದುರೆಗಳನ್ನು ಮುನಿಗಳು ಕ್ರೌಂಚವರ್ಣದವುಗಳೆಂದು ಹೇಳುತ್ತಾರೆ.

ನಾದ ಸೌಮ್ಯಸ್ವಭಾವದ ಸುತಸೋಮನನ್ನು ಉದ್ದಿನ ಹೂವಿನ ಬಣ್ಣದಿಂದ ಕೂಡಿದ್ದ ಕುದುರೆಗಳು ಒಯ್ಯುತ್ತಿದ್ದುವು.

ಮಹಾರಾಜ! ಭೀಮಸೇನನ ಮಗನಿಗೆ ಸುತಸೋಮನೆಂದು ಹೆಸರಿಡಲು ಒಂದು ಕಾರಣವಿದೆ.

**ಸಹಸ್ರಸೋಮಪ್ರತಿಮೋ ಬಭೂವ**
**ಪುರೇ ಕುರೂಣಾಮುದಯೇನ್ದು ನಾಮ್ನಿ ।**
**ತಸ್ಮಿಞ್ಜಾತಃ ಸೋಮಸಂಕ್ರನ್ದಮಧ್ಯೇ**
**ಯಸ್ಮಾತ್ತಸ್ಮಾತ್ಸುತಸೋಮೋಽಭವತ್ಸಃ ॥೨೯॥**

ಅವನು 'ಉದಯೇಂದು' (ಉದಯಿಸುತ್ತಿರುವ ಚಂದ್ರ-ಇಂದ್ರಪ್ರಸ್ಥ) ಎಂಬ ಕೌರವರ ಪಟ್ಟಣದಲ್ಲಿಯೇ ಹುಟ್ಟಿದನು. ಯಜ್ಞದಲ್ಲಿ ಸೋಮಾಭಿಷ್ವನವಾಗುತ್ತಿದ್ದಾಗ (ಸೋಮಲತೆಯನ್ನು ಹಿಂಡುತ್ತಿದ್ದ ಸಮಯದಲ್ಲಿ) ಹುಟ್ಟಿದನು. ಮೇಲಾಗಿ ಅವನು ಸಾವಿರ ಚಂದ್ರರಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದನು. ಈ ಕಾರಣಗಳಿಂದ ಅವನು ಸುತಸೋಮನಾದನು.

ನಕುಲನ ಮಗನಾದ ಶ್ಲಾಘನೀಯನಾದ ಶತಾನೀಕನನ್ನು ಶಾಲಪುಷ್ಪಕ್ಕೆ ಸಮಾನವಾದ ಬಣ್ಣದಿಂದ ಕೂಡಿದ್ದ, ಬಾಲಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಕುದುರೆಗಳು ರಣರಂಗಕ್ಕೆ ಒಯ್ದುವು. ಸುವರ್ಣಮಯವಾದ ಹಗ್ಗಗಳಿಂದ ಬಿಗಿಯಲ್ಪಟ್ಟಿದ್ದ, ನವಿಲಿನ ಕುತ್ತಿಗೆಯ ಬಣ್ಣಕ್ಕೆ ಸಮಾನವಾದ ಬಣ್ಣವಿದ್ದ ಕುದುರೆಗಳು ದ್ರೌಪದಿಯ ಮಗನಾದ, ನರಶ್ರೇಷ್ಠನಾದ ಶ್ರುತಕರ್ಮನನ್ನು ಯುದ್ಧಕ್ಕೆ ಒಯ್ದುವು. ಯುದ್ಧ ಮಾಡುವುದರಲ್ಲಿ ಅರ್ಜುನನಿಗೆ ಸಮಾನನೆನಿಸಿದ್ದ, ಶಸ್ತ್ರಾಸ್ತ್ರಜ್ಞಾನದಲ್ಲಿ ನಿಧಿಪ್ರಾಯನಾಗಿದ್ದ ದ್ರೌಪದಿಯ ಮತ್ತೊಬ್ಬ ಮಗನಾದ ಶ್ರುತಕೀರ್ತಿಯನ್ನು ಕಳಿಂಗಪಕ್ಷಿಯ ರೆಕ್ಕೆಯ ಬಣ್ಣವಿದ್ದ ಕುದುರೆಗಳು ರಣರಂಗಕ್ಕೆ ಒಯ್ದುವು. ಯಾವನನ್ನು ಯುದ್ಧದಲ್ಲಿ ಶ್ರೀಕೃಷ್ಣನಿಂದಲೂ ಮತ್ತು ಅರ್ಜುನನಿಂದಲೂ ಅರ್ಧಗುಣ ಹೆಚ್ಚಿನವನೆಂದು ಹೇಳುತ್ತಾರೆಯೋ–

ಅಂತಹ ಮಹಾವೀರನಾದ ಸುಭದ್ರಾಕುಮಾರನಾದ ಅಭಿಮನ್ಯುವನ್ನು ಕಪಿಲವರ್ಣದ ಕುದುರೆಗಳು ರಣಾಂಗಣಕ್ಕೆ ಒಯ್ಯುತ್ತಿದ್ದುವು. ನಿನ್ನ ಮಕ್ಕಳಲ್ಲಿ ಯಾವ ಒಬ್ಬನೇ ಒಬ್ಬ ಯುಯುತ್ಸುವು ಪಾಂಡವರ ಕಡೆಗೆ ಸೇರಿದನೋ–ಅವನನ್ನು ಜೋಳದ ಕಡ್ಡಿಯ ಬಣ್ಣದಿಂದ ಕೂಡಿದ್ದ, ವಿಶಾಲವಾಗಿಯೂ ಮತ್ತು ದೊಡ್ಡದಾಗಿಯೂ ಇರುವ ಶರೀರವನ್ನು ಹೊಂದಿದ್ದ ಕುದುರೆಗಳು ದ್ರೋಣರ ಬಳಿಗೆ ಒಯ್ದುವು. ವೇಗವಂತನಾದ ವಾರ್ಧಕ್ಷೇಮಿಯನ್ನು ಸುವರ್ಣಮಾಲೆಗಳಿಂದ ಸಮಲಂಕೃತವಾಗಿದ್ದ ಕಪ್ಪುಬಣ್ಣದ ಕುದುರೆಗಳು ಆ ಭಯಂಕರಯುದ್ಧದಲ್ಲಿ ಭರಿಸಿದ್ದುವು. ಸುಚಿತ್ತಿಯ ಮಗನಾದ ಕುಮಾರನಾದ ಸತ್ಯಧೃತಿಯನ್ನು ಸುವರ್ಣಮಯವಾದ ವಿಚಿತ್ರಕವಚಗಳಿಂದ ಸುಸಜ್ಜಿತವಾಗಿದ್ದ, ಕಪ್ಪಾದ ಕಾಲುಗಳನ್ನು ಹೊಂದಿದ್ದ, ಸಾರಥಿಯ ಆಜ್ಞಾನುಸಾರವಾಗಿ ಹೆಜ್ಜೆಯಿಡುತ್ತಿದ್ದ ಕುದುರೆಗಳು ರಣಾಂಗಣಕ್ಕೆ ಒಯ್ದುವು. ಸುವರ್ಣಮಯವಾದ ಪೀಠವನ್ನು ಬೆನ್ನುಮೇಲೆ ಹೊತ್ತಿದ್ದ, ರೇಷ್ಮೆಗೆ ಸಮಾನವಾದ (ನವುರಾದ) ಕೂದಲಿನಿಂದ ಕೂಡಿದ್ದ, ಸುವರ್ಣಮಾಲೆಯನ್ನು ಧರಿಸಿದ್ದ, ಸಹನಶಕ್ತಿಯಿದ್ದ ಕುದುರೆಗಳು ಶ್ರೋಣಿಮಂತನನ್ನು ಯುದ್ಧಭೂಮಿಗೆ ಒಯ್ದುವು. ಚಿನ್ನದ ಮಾಲೆಯನ್ನು ಧರಿಸಿದ್ದ, ಬಲಿಷ್ಠವಾಗಿದ್ದ, ಸುವರ್ಣವರ್ಣದ ಪೃಷ್ಠಭಾಗವನ್ನು ಹೊಂದಿದ್ದ, ಚೆನ್ನಾಗಿ ಸಿಂಗರಿಸಲ್ಪಟ್ಟಿದ್ದ ಕುದುರೆಗಳು ನರಶ್ರೇಷ್ಠನಾದ, ಶ್ಲಾಘನೀಯನಾದ ಕಾಶಿರಾಜನನ್ನು ರಣಭೂಮಿಗೆ ಒಯ್ದುವು. ಅಸ್ತ್ರಗಳ ಜ್ಞಾನದಲ್ಲಿಯೂ, ಧನುರ್ವೇದದಲ್ಲಿಯೂ, ಬ್ರಹ್ಮತತ್ತ್ವಕ್ಕೆ ಸಂಬಂಧವಾದ ಜ್ಞಾನದಲ್ಲಿಯೂ ಪಾರಂಗತನಾದ ಸತ್ಯಧೃತಿಯನ್ನು ಅರುಣವರ್ಣದ (ಎಣ್ಣೆಗೆಂಪಿನ) ಕುದುರೆಗಳು ದ್ರೋಣರ ಬಳಿಗೆ ಒಯ್ಯುತ್ತಿದ್ದುವು. ಯಾವನು ಯುದ್ಧಮಾಡಲು ತನ್ನ ಭಾಗಕ್ಕೆ ದ್ರೋಣರನ್ನೇ ಆರಿಸಿಕೊಂಡಿದ್ದನೋ ಅಂತಹ ಪಾಂಚಾಲಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಪಾರಿವಾಳಪಕ್ಷಿಗಳ ಬಣ್ಣಕ್ಕೆ ಸಮಾನವಾದ ಬಣ್ಣವಿದ್ದ ಕುದುರೆಗಳು ಒಯ್ಯುತ್ತಿದ್ದುವು. ಸೇನಾ ಪತಿಯಾದ ಧೃಷ್ಟದ್ಯುಮ್ನನನ್ನು ಅನುಸರಿಸಿ ಸುಚಿತ್ತಿಯ ಮಗನಾದ

ಯುದ್ಧದುರ್ಮದನಾದ ಸತ್ಯಧೃತಿಯೂ ಶ್ರೇಣಿಮಂತ, ವಸುದಾನ, ಕಾಶೀರಾಜನ ಮಗನಾದ ಅಭಿಭೂ ಇವರುಗಳೂ ಹೋಗುತ್ತಿದ್ದರು.

ಯಮ-ಕುಬೇರೋಪಮರಾದ ಇವರೆಲ್ಲರೂ ಶೀಘ್ರವಾಗಿ ಹೋಗುವ, ಚಿನ್ನದ ಮಾಲೆಗಳನ್ನು ಧರಿಸಿದ್ದ, ಶ್ರೇಷ್ಠವಾದ ಕಾಂಬೋಜಕುದುರೆಗಳಿಂದ ಯುಕ್ತವಾಗಿದ್ದ ರಥಗಳಲ್ಲಿ ಕುಳಿತು, ಶತ್ರುಗಳ ಸೈನ್ಯವನ್ನು ಭಯಪಡಿಸುತ್ತಾ ಧೃಷ್ಟದ್ಯುಮ್ನನ ಹಿಂಭಾಗದಲ್ಲಿ ಹೋಗುತ್ತಿದ್ದರು. ಇವರೇ ಅಲ್ಲದೇ ಆರು ಸಾವಿರ ಕಾಂಬೋಜದೇಶೀಯರಾದ ಪ್ರಭದ್ರಕಯೋಧರು ಆಯುಧ ಗಳನ್ನೆತ್ತಿಕೊಂಡು ಹೋಗುತ್ತಿದ್ದರು. ಅವರೆಲ್ಲರೂ ಹಲವು ಬಣ್ಣಗಳ ಶ್ರೇಷ್ಠವಾದ ಕುದುರೆಗಳಿಂದ ಯುಕ್ತವಾಗಿದ್ದ ಮತ್ತು ಧ್ವಜಗಳನ್ನೊಳಗೊಂಡಿದ್ದ ಸುವರ್ಣಮಯವಾದ ರಥಗಳಲ್ಲಿ ಕುಳಿತಿದ್ದರು. ಶ್ರೇಷ್ಠವಾದ ಧನುಸ್ಸುಗಳನ್ನು ಹೊಂದಿದ್ದ ಅವರೆಲ್ಲರೂ ಬಾಣಗಳ ಸಮೂಹಗಳಿಂದ ಶತ್ರುಗಳನ್ನು ಭಯ ಗೊಳಿಸುತ್ತಾ ಮೃತ್ಯುವಿಗೆ ಸಮಾನರಾಗಿ ಧೃಷ್ಟದ್ಯುಮ್ನನ ಹಿಂದೆ ನಡೆದರು. ಪಿಂಗಳವರ್ಣದ (ಕೆಂಪುಬೆರೆತ ಕಂದುಬಣ್ಣದ) ಮತ್ತು ರೇಷ್ಮೆಯ ಬಣ್ಣದ, ಶ್ರೇಷ್ಠವಾದ ಚಿನ್ನದ ಸರಗಳಿಂದ ಅಲಂಕೃತವಾಗಿದ್ದ ಮತ್ತು ಪ್ರಸನ್ನವಾದ ಮನಸ್ಸಿನಿಂದ ಕೂಡಿದ್ದ ಶ್ರೇಷ್ಠವಾದ ಕುದುರೆಗಳು ಚೇಕಿತಾನನನ್ನು ರಣರಂಗಕ್ಕೆ ಒಯ್ದುವು. ಅರ್ಜುನನ ಸೋದರಮಾವನಾದ 'ಪುರುಜಿತ್' ಎಂಬ ಅಭಿಧಾನ ವನ್ನು ಪಡೆದಿದ್ದ ಕುಂತಿಭೋಜನು ಕಾಮನಬಿಲ್ಲಿನ ಬಣ್ಣಕ್ಕೆ ಸಮಾನವಾದ ಬಣ್ಣಗಳಿಂದ ಕೂಡಿದ್ದ ಶ್ರೇಷ್ಠವಾದ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ರಣಾಂಗಣಕ್ಕೆ ತೆರಳಿದನು. ರಾಜನಾದ ರೋಚಮಾನನನ್ನು ತಾರೆಗಳಿಂದ ಚಿತ್ರಿತವಾದ ಅಂತರಿಕ್ಷದ ಬಣ್ಣದಿಂದ ಕೂಡಿದ್ದ ಕುದುರೆಗಳು ರಣಾಂಗಣಕ್ಕೆ ಒಯ್ದುವು. ಜರಾಸಂಧನ ಮಗನಾದ ಸಹದೇವನನ್ನು ಸುವರ್ಣಮಯವಾದ ಬಲೆಯಿಂದ ಸಮಲಂಕೃತವಾಗಿದ್ದ, ಚಿತ್ರವರ್ಣದ, ಕಪ್ಪಾದ ಕಾಲುಗಳನ್ನು ಹೊಂದಿದ್ದ ಶ್ರೇಷ್ಠವಾದ ಕುದುರೆಗಳು ರಣಾಂಗಣಕ್ಕೆ ಒಯ್ದುವು. ಕಮಲದ ದಂಟಿನ ಬಣ್ಣವನ್ನು ಹೊಂದಿದ್ದ, ವೇಗದಲ್ಲಿ ಗಿಡಗಪಕ್ಷಿಗೆ ಸಮಾನವಾಗಿದ್ದ, ವಿಚಿತ್ರವಾಗಿ ಕಾಣುತ್ತಿದ್ದ ಶ್ರೇಷ್ಠವಾದ ಕುದುರೆಗಳು ಸುದಾಮಾನನನ್ನು ರಣರಂಗಕ್ಕೆ ಒಯ್ದುವು. ಮೊಲದ ಬಣ್ಣವನ್ನೂ ಮತ್ತು ಕೆಂಪುಬಣ್ಣವನ್ನೂ ಹೊಂದಿದ್ದ, ಬಿಳುಪಾದ ಕೂದಲುಗಳಿಂದ ಪ್ರಕಾಶ

ಮಾನವಾಗಿ ಕಾಣುತ್ತಿದ್ದ ಕುದುರೆಗಳು ಪಾಂಚಾಲದೇಶೀಯನಾದ ಮತ್ತು ಗೋಪತಿ ಎಂಬುವನ ಮಗನಾದ ಸಿಂಹಸೇನನನ್ನು ರಣಾಂಗಣಕ್ಕೆ ಒಯ್ದುವು. ನರಶ್ರೇಷ್ಠನಾದ ಜನಮೇಜಯನು ಪಾಂಚಾಲರಲ್ಲಿ ವಿಖ್ಯಾತನಾಗಿದ್ದನು. ಅವನ ರಥದಲ್ಲಿ ಸಾಸಿವೆ ಹೂವಿನ ಬಣ್ಣದ ಶ್ರೇಷ್ಠವಾದ ಕುದುರೆಗಳಿದ್ದುವು. ಉದ್ದಿನ ಬಣ್ಣವನ್ನು ಹೊಂದಿದ್ದ, ಚಿನ್ನದ ಸರಗಳಿಂದ ಅಲಂಕೃತವಾಗಿದ್ದ, ಮೊಸರಿನಂತೆ ಬಿಳುಪಾದ ಪೃಷ್ಠಭಾಗವನ್ನು ಹೊಂದಿದ್ದ, ಚುಕ್ಕೆಗಳಿಂದ ಕೂಡಿದ್ದ ಮುಖವನ್ನು ಹೊಂದಿದ್ದ, ಎತ್ತರವಾಗಿಯೂ ಮತ್ತು ವೇಗವುಳ್ಳವುಗಳಾಗಿಯೂ ಇದ್ದ ಆ ಕುದುರೆಗಳು ಪಾಂಚಾಲ ರಾಜಕುಮಾರನನ್ನು ರಣರಂಗಕ್ಕೆ ಬಹಳ ಶೀಘ್ರವಾಗಿ ಒಯ್ದುವು.

ಬಲಿಷ್ಠವಾದ, ಶ್ರೇಷ್ಠವಾದ ಸುಂದರವಾದ ತಲೆಯನ್ನು ಹೊಂದಿದ್ದ ಶರದ ಕಾಂಡದ (ಬಿದಿರಿನ ಗಿಣ್ಣಿನ) ಬಣ್ಣದಿಂದ ಕೂಡಿದ್ದ, ಕಮಲಪುಷ್ಪದ (ಕೇಸರದ) ಬಣ್ಣದಂತೆ ಕಾಂತಿಯುಕ್ತವಾಗಿದ್ದ ಕುದುರೆಗಳು ದಂಡಧಾರನನ್ನು ಯುದ್ಧಕ್ಕೆ ಒಯ್ಯುತ್ತಿದ್ದುವು. ಕತ್ತೆಯಂತೆ ಮಾಸಿದ ಎಣ್ಣೆಗೆಂಪಿನ ಬಣ್ಣವನ್ನು ಹೊಂದಿದ್ದ, ಬೆನ್ನಿನಲ್ಲಿ ಇಲಿಯ ಬಣ್ಣವುಳ್ಳ, ವಿನೀತವಾಗಿವೆಯೋ ಎಂಬಂತೆ ಸಂಯಮದಿಂದ ನಡೆಯುತ್ತಿದ್ದ ಕುದುರೆಗಳು ವ್ಯಾಘ್ರದತ್ತನನ್ನು ರಣರಂಗಕ್ಕೆ ಒಯ್ದುವು. ಕಪ್ಪಾದ ಶಿರೋಭಾಗವಿದ್ದ, ಶರೀರದಲ್ಲಿ ಚಿತ್ರ-ವಿಚಿತ್ರವಾದ ಬಣ್ಣ ಗಳನ್ನು ಹೊಂದಿದ್ದ, ವಿಚಿತ್ರವಾದ ಮಾಲೆಗಳಿಂದ ಅಲಂಕರಿಸಲ್ಪಟ್ಟಿದ್ದ ಕುದುರೆ ಗಳು ಪಾಂಚಾಲದೇಶೀಯನಾದ, ನರಶ್ರೇಷ್ಠನಾದ ಸುಧನ್ವನನ್ನು ರಣಾಂಗಣಕ್ಕೆ ಒಯ್ದುವು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಕಠಿನಸ್ಪರ್ಶವುಳ್ಳ, ಮಿಣುಕುಹುಳುಗಳ ಬಣ್ಣವಿದ್ದ, ಶರೀರದಲ್ಲಿ ವಿಚಿತ್ರವಾದ ಚಿಹ್ನೆಗಳನ್ನು ಹೊಂದಿದ್ದ, ನೋಡಲು ಬಹಳ ವಿಚಿತ್ರವಾಗಿ ಕಾಣುತ್ತಿದ್ದ ಕುದುರೆಗಳು ಚಿತ್ರಾ ಯುಧನನ್ನು ಭರಿಸಿದ್ದುವು. ಸುವರ್ಣಮಾಲೆಗಳನ್ನು ಧರಿಸಿದ್ದ, ಚಕ್ರವಾಕ ಪಕ್ಷಿಯ ಹೊಟ್ಟೆಯ ಮೇಲಿರುವ ಬಣ್ಣದಿಂದ (ಬಿಳಿಯ ಬಣ್ಣದಿಂದ) ಕೂಡಿದ್ದ ಕುದುರೆಗಳು ಕೋಸಲರಾಜನ ಮಗನಾದ ಸುಕ್ಷತ್ರನನ್ನು ರಣಾಂಗಣಕ್ಕೆ ಒಯ್ದುವು. ಅನೇಕ ಚುಕ್ಕೆಗಳಿಂದ ಕೂಡಿದ್ದ, ದೊಡ್ಡವುಗಳಾಗಿದ್ದ, ವಶವರ್ತಿ ಗಳಾಗಿದ್ದ, ಶೀಘ್ರಗಾಮಿಗಳಾಗಿದ್ದ, ಚಿನ್ನದ ಸರಗಳನ್ನು ಹೊಂದಿದ್ದ, ಎತ್ತರ ವಾಗಿದ್ದ ಶುಭಾವಹಗಳಾಗಿದ್ದ ಕುದುರೆಗಳು ಕ್ಷೇಮನ ಮಗನಾದ ಸತ್ಯಧೃತಿಯನ್ನು

ರಣಾಂಗಣಕ್ಕೆ ಒಯ್ದುವು. ಯಾವನ ಧ್ವಜ, ಕವಚ, ಧನುಸ್ಸು ಎಲ್ಲವೂ ಒಂದೇ ಬಣ್ಣದುವುಗಳಾಗಿದ್ದುವೋ ಅಂತಹ ಶುಕ್ಲನು ಬಿಳುಪಾದ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ದ್ರೋಣರ ಬಳಿಗೆ ಧಾವಿಸಿದನು. ಸಮುದ್ರ ಸೇನನ ಮಗನಾದ, ಭಯಂಕರವಾದ ತೇಜಸ್ಸಿನಿಂದ ಕೂಡಿದ್ದ ಚಂದ್ರಸೇನ ನನ್ನು ಚಂದ್ರನಿಗೆ ಸಮಾನವಾದ ಬಿಳಿಯಬಣ್ಣದಿಂದ ಕೂಡಿದ್ದ ಸಮುದ್ರ ಪ್ರದೇಶದ ಕುದುರೆಗಳು ರಣಾಂಗಣಕ್ಕೆ ಒಯ್ದುವು. ಕನ್ನೈದಿಲೆಯ ಬಣ್ಣದಿಂದ ಕೂಡಿದ್ದ, ಸುವರ್ಣಮಯವಾದ ಆಭರಣಗಳಿಂದ ಸಿಂಗರಿಸಲ್ಪಟ್ಟಿದ್ದ, ವಿಚಿತ್ರ ವಾದ ಮಾಲೆಗಳನ್ನು ಧರಿಸಿದ್ದ ಕುದುರೆಗಳು ಶಿಬಿವಂಶದ ಚಿತ್ರರಥನನ್ನು ದ್ರೋಣರ ಸಮೀಪಕ್ಕೆ ಒಯ್ದುವು. ನೆಲಗಡಲೇಗಿಡದ ಹೂವಿನ ಬಣ್ಣದಿಂದ ಕೂಡಿದ್ದ, ಕೆಂಪು ಮತ್ತು ಬಿಳುಪು ಮಿಶ್ರವಾದ ಕೂದಲಿನಿಂದ ರಾರಾಜಿಸುತ್ತಿದ್ದ ಶ್ರೇಷ್ಠವಾದ ಕುದುರೆಗಳು ಯುದ್ಧದುರ್ಮದನಾದ ರಥಸೇನನನ್ನು ರಣಾಂಗಣಕ್ಕೆ ಒಯ್ದುವು. ಯಾವನನ್ನು ಎಲ್ಲ ಮನುಷ್ಯರಿಗಿಂತಲೂ (ರಾಜರಿ ಗಿಂತಲೂ) ಶೂರತರನಾದ ರಾಜನೆಂದು ಹೇಳುತ್ತಾರೆಯೋ ಅಂತಹ *ಪಟಚ್ಚರರೆಂಬ ಅಸುರರ ಸಂಹಾರಕನಾದ ಸಮುದ್ರಾಧಿಪತಿಯನ್ನು ಗಿಣಿಯ ಬಣ್ಣದಂತೆ ಬಣ್ಣವಿದ್ದ ಕುದುರೆಗಳು ರಣಾಂಗಣಕ್ಕೆ ಒಯ್ದುವು.

ಚಿತ್ರ-ವಿಚಿತ್ರಮಾಲೆಗಳನ್ನು ಧರಿಸಿದ್ದ, ಚಿತ್ರ-ವಿಚಿತ್ರವಾದ ಕವಚವನ್ನೂ, ಆಯುಧಗಳನ್ನೂ ಮತ್ತು ಧ್ವಜವನ್ನೂ ಹೊಂದಿದ್ದ ಚಿತ್ರಾಯುಧನನ್ನು ಮುತ್ತುಗದ ಹೂಗಳ ಬಣ್ಣಕ್ಕೆ ಸಮಾನವಾದ ಬಣ್ಣವಿದ್ದ ಶ್ರೇಷ್ಠವಾದ ಕುದುರೆಗಳು ದ್ರೋಣರ ಸಮೀಪಕ್ಕೆ ಒಯ್ದುವು. ಯಾವನ ಧ್ವಜ, ಕವಚ, ಧನುಸ್ಸುಗಳು ಒಂದೇ ಬಣ್ಣದುವುಗಳಾಗಿದ್ದುವೋ ಅಂತಹ ನೀಲನು ನೀಲೀಬಣ್ಣದ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ರಣಾಂಗಣಕ್ಕೆ ಹೋದನು. ಯಾವನ ಕಟಾಂಜನ (ರಥದ ಆವರಣ), ರಥ ಮತ್ತು ಧನುಸ್ಸುಗಳು ನಾನಾರೂಪವಾದ ರತ್ನಗಳಿಂದ ಮೆಟ್ಟಲ್ಪಟ್ಟಿದ್ದುವೋ

---

ಪಟಚ್ಚರಹಂತಾರಂ-ಎಂದು ಇಷ್ಟುಮಾತ್ರವಿದೆಯೇ ಹೊರತು ಈ ಶ್ಲೋಕದಲ್ಲಿ ರಾಜನ ಹೆಸರು ಹೇಳಿಲ್ಲ. ಪಟಚ್ಚರ ಎಂದರೆ ಚೋರರು, ಕಳ್ಳರು ಎಂದಾಗುತ್ತದೆ. ಆದರೆ ವ್ಯಾಖ್ಯಾನಕಾರರು ಪಟಚ್ಚರಾಣಾಂ ಅಸುರವಿಶೇಷಾಣಾಂ ಹನ್ತಾರಂ ಸಮುದ್ರಾಧಿಪಂ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಈ ಅರ್ಥವನ್ನೇ ನಾವೂ ಗ್ರಹಿಸಿದ್ದೇವೆ.

ಅಂತಹ ಚಿತ್ರರಾಜನು ಚಿತ್ರಿತವಾಗಿ ಕಾಣುತ್ತಿದ್ದ ಚಿತ್ರವರ್ಣದ ಕುದುರೆ, ಧ್ವಜ ಮತ್ತು ಪತಾಕೆಗಳೊಡನೆ ಯುದ್ಧಕ್ಕೆ ಹೋದನು. ಕಮಲಪತ್ರಕ್ಕೆ ಸಮಾನವಾದ ವರ್ಣದಿಂದ ಕೂಡಿದ್ದ ಶ್ರೇಷ್ಠವಾದ ಕುದುರೆಗಳು ರೋಚಮಾನನ ಮಗನಾದ ಹೇಮವರ್ಣನನ್ನು ರಣಾಂಗಣಕ್ಕೆ ಒಯ್ದುವು. ಯುದ್ಧಪ್ರಯೋಜಕಗಳಾದ, ಮಂಗಳದಾಯಕಗಳಾದ, ಲಾಳದ ಕಡ್ಡಿಯ ಬಣ್ಣಕ್ಕೆ ಸಮಾನವಾದ ಬಣ್ಣ ದಿಂದ ಕೂಡಿದ್ದ ( ಸಿತ-ಗೌರವರ್ಣದ ) ಬಿಳಿಯ ಅಂಡಗಳನ್ನು ಹೊಂದಿದ್ದ, ಕೋಳಿಯ ಮೊಟ್ಟೆಯಂತೆ ಬಿಳುಪಾಗಿಯೂ ಅಂಡಾಕಾರವಾಗಿಯೂ ಇದ್ದ ಕುದುರೆಗಳು ದಂಡಕೇತುವನ್ನು ರಣಾಂಗಣಕ್ಕೆ ಒಯ್ದುವು. ಬೆಳದಿಂಗಳಿಗೆ ಸಮಾನವಾದ ಬಣ್ಣವುಳ್ಳ, ವೈಡೂರ್ಯಮಣಿಗಳನ್ನೊಳಗೊಂಡ ಬಲೆಗಳಿಂದ ಆಚ್ಛಾದಿತವಾದ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ವೀರ್ಯ ವೆಂಬ ಐಶ್ವರ್ಯವನ್ನೇ ಆಶ್ರಯಿಸಿರುವ, ಸಾಗರಧ್ವಜನಾದ ಪಾಂಡ್ಯನು ತನ್ನ ದಿವ್ಯವಾದ ಧನುಸ್ಸನ್ನು ಟೇಂಕರಿಸುತ್ತಾ ದ್ರೋಣರ ಸಮೀಪಕ್ಕೆ ವೇಗವಾಗಿ ಹೋದನು. ಮಹಾರಾಜ! ಈ ಪಾಂಡ್ಯನ ಪೂರ್ವಚರಿತ್ರೆಯನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ಈ ಪಾಂಡ್ಯನ ತಂದೆಯನ್ನು ಕೇಶವನು ಯುದ್ಧದಲ್ಲಿ ಸಂಹರಿಸಿಬಿಟ್ಟನು. ಪಾಂಡ್ಯರ ರಾಜಧಾನಿಯ ಹೆಬ್ಬಾಗಿಲು ಭಗ್ನವಾಗಿ ಹೋಯಿತು. ಬಂಧು-ಮಿತ್ರರೆಲ್ಲರೂ ಪಲಾಯನಮಾಡಿದರು. ಆ ಸಮಯಕ್ಕೆ ಪಾಂಡ್ಯನು ಕ್ರುದ್ಧನಾಗಿ ಸೇಡುತೀರಿಸಿಕೊಳ್ಳಲು ಭೀಷ್ಮರಿಂದಲೂ, ದ್ರೋಣರಿಂದಲೂ, ಪರಶುರಾಮನಿಂದಲೂ ಮಹಾಸ್ತ್ರಗಳನ್ನು ಪಡೆದು ಕೊಂಡು ರುಕ್ಮಿ, ಕರ್ಣ, ಅರ್ಜುನ ಮತ್ತು ಅಚ್ಯುತರಿಗೆ ತಾನು ಪರಾಕ್ರಮದಲ್ಲಿ ಸಮಾನನೆನಿಸಿಕೊಂಡನು. ಅನಂತರ ಪಾಂಡ್ಯನು ಶ್ರೀಕೃಷ್ಣನನ್ನು ಸಂಹರಿ ಸುವುದಕ್ಕೂ ಅನಂತರ ಅಖಿಲಜಗತ್ತನ್ನು ಜಯಿಸುವುದಕ್ಕೂ ದ್ವಾರವತಿಗೆ ಹೋದನು. ಆದರೆ ಇವನಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಅಲ್ಲಿದ್ದ ಪ್ರಾಜ್ಞರೂ ಮತ್ತು ಸುಹೃದರೂ ಇವನನ್ನು ಶ್ರೀಕೃಷ್ಣನಮೇಲೆ ಯುದ್ಧಮಾಡ ದಂತೆ ತಡೆದರು ಮತ್ತು ಈರ್ವರಿಗೂ ಸಂಧಿಯನ್ನು ಏರ್ಪಡಿಸಿದರು. ಅಲ್ಲಿಂದ ಮುಂದೆ ಪಾಂಡ್ಯನು ಶ್ರೀಕೃಷ್ಣನ ಮೇಲೆ ತನಗಿದ್ದ ವೈರವನ್ನು ಸಂಪೂರ್ಣವಾಗಿ ಪರಿತ್ಯಜಿಸಿ ತನ್ನ ರಾಜ್ಯವನ್ನು ಧರ್ಮದಿಂದ ಶಾಸನಮಾಡುತ್ತಿದ್ದಾನೆ.

ಆಡುಸೋಗೇಗಿಡದ ಬಣ್ಣದಂತೆ ಪ್ರಕಾಶಮಾನವಾಗಿದ್ದ ಕುದುರೆಗಳು ಪಾಂಡ್ಯರಾಜನನ್ನು ಅನುಸರಿಸಿ ಹೋಗುತ್ತಿದ್ದ ಒಂದು ಲಕ್ಷ ನಲವತ್ತುಸಾವಿರ ರಥಮುಖ್ಯರನ್ನು ರಣರಂಗಕ್ಕೆ ಒಯ್ಯುತ್ತಿದ್ದುವು. ನಾನಾವಿಧವಾದ ಬಣ್ಣಗಳಿಂದಲೂ, ನಾನಾವಿಧವಾದ ರೂಪಗಳಿಂದಲೂ, ನಾನಾವಿಧವಾದ ಆಕೃತಿಗಳಿದ್ದ ಮುಖಗಳಿಂದಲೂ ಕೂಡಿದ್ದ ಕುದುರೆಗಳು, ರಥಚಕ್ರದ ಚಿಹ್ನೆಯನ್ನೇ ಧ್ವಜದಲ್ಲಿ ಹೊಂದಿದ್ದ ಘಟೋತ್ಕಚನನ್ನು ರಣರಂಗಕ್ಕೆ ಒಯ್ದುವು. ಯಾವನು ಎಲ್ಲ ಭಾರತರ ಸಮೂಹವನ್ನೂ ತೊರೆದು ಮತ್ತು ಸರ್ವಾಭೀಷ್ಟವಸ್ತುಗಳನ್ನೂ ತ್ಯಾಗಮಾಡಿ, ಕೇವಲ ಭಕ್ತಿಭಾವದಿಂದ ಯುಧಿಷ್ಠಿರನನ್ನು ಸೇರಿದನೋ ಅಂತಹ ಲೋಹಿತಾಕ್ಷನಾದ, ಮಹಾಬಾಹುವಾದ, ಸುವರ್ಣಮಯವಾದ ರಥದಲ್ಲಿ ಕುಳಿತಿದ್ದ ಬೃಹಂತನನ್ನು ಅರಟ್ಟದೇಶದಲ್ಲಿ ಹುಟ್ಟಿದ, ದೊಡ್ಡದಾದ ಶರೀರದಿಂದ ಕೂಡಿದ್ದ ಮಹಾಬಲಿಷ್ಠವಾದ ಕುದುರೆಗಳು ದ್ರೋಣರ ಬಳಿಗೆ ಒಯ್ದುವು. ಧರ್ಮಜ್ಞನಾದ, ಸೇನೆಯ ಮಧ್ಯಭಾಗದಲ್ಲಿದ್ದ, ರಾಜಶ್ರೇಷ್ಠನಾದ ಯುಧಿಷ್ಠಿರನನ್ನು ಚಿನ್ನದ ಬಣ್ಣವಿದ್ದ ಶ್ರೇಷ್ಠವಾದ ಕುದುರೆಗಳು ಅವನು ಹೋದಂತೆ ಅವನ ಸುತ್ತಲೂ ಸುತ್ತುಗಟ್ಟಿಕೊಂಡು ಹೋಗುತ್ತಿದ್ದುವು. ನಾನಾವಿಧವಾದ ಬಣ್ಣಗಳಿಂದ ಕೂಡಿದ್ದ, ಸುಂದರವಾದ ಕುದುರೆಗಳಿಂದ ಯುಕ್ತವಾಗಿದ್ದ ರಥಗಳಲ್ಲಿ ಕುಳಿತು, ದೇವರೂಪಿಗಳಾದ ಅನೇಕ ಪ್ರಭದ್ರಕರು ದ್ರೋಣರೊಡನೆ ಯುದ್ಧಮಾಡಲು ಹೋಗುತ್ತಿದ್ದರು. ಪಾಂಡವರ ಕಡೆಯ ವಿಜಯಕ್ಕಾಗಿ ಪ್ರಯತ್ನಿಸುತ್ತಿದ್ದ, ಸುವರ್ಣಮಯವಾದ ಧ್ವಜಗಳನ್ನು ಹೊಂದಿದ್ದ ಮತ್ತು ಭೀಮಸೇನಸಹಿತರಾಗಿದ್ದ ಆ ರಾಜರೆಲ್ಲರೂ ಇಂದ್ರನೊಡನಿರುವ ದೇವತೆಗಳೋಪಾದಿಯಲ್ಲಿ ವಿರಾಜಿಸುತ್ತಿದ್ದರು. ದ್ರೋಣರೊಡನೆ ಯುದ್ಧಮಾಡಲು ಬಂದ ಆ ಎಲ್ಲ ರಾಜರನ್ನೂ ಮೀರಿಸಿ ಧೃಷ್ಟದ್ಯುಮ್ನನು ರಾರಾಜಿಸುತ್ತಿದ್ದನು. ಸೈನ್ಯಗಳೆಲ್ಲವನ್ನೂ ಮೀರಿಸಿ ದ್ರೋಣರು ಬಹಳವಾಗಿ ಶೋಭಿಸುತ್ತಿದ್ದರು. ಕೃಷ್ಣಾಜಿನದ ಮೇಲಿದ್ದ ಕಮಂಡಲುವನ್ನೇ ಲಾಂಛನವಾಗಿ ಹೊಂದಿದ್ದ, ಸುವರ್ಣಮಯವಾದ, ಶುಭಕರವಾದ ದ್ರೋಣರ ಧ್ವಜವೂ ಸಹ ಬಹಳವಾಗಿ ಶೋಭಿಸುತ್ತಿದ್ದಿತು. ಮಹಾರಾಜ! ವೈಡೂರ್ಯಮಣಿಮಯವಾದ ಕಣ್ಣುಗಳಿಂದ ಸುಶೋಭಿತವಾಗಿದ್ದ ಮಹಾಸಿಂಹದ ಚಿಹ್ನೆಯನ್ನು ಹೊಂದಿ ಫಳ-ಫಳನೆ ರಾರಾಜಿಸುತ್ತಿದ್ದ (೧೫೦)–೧೬

ಭೀಮಸೇನನ ಧ್ವಜವನ್ನು ನಾನು ನೋಡಿದೆನು. ಮಹಾತೇಜಸ್ವಿಯಾದ, ಕುರುರಾಜನಾದ, ಪಾಂಡುವಿನ ಮಗನಾದ ಯುಧಿಷ್ಠಿರನ–ಗ್ರಹಗಳಿಂದೊಡಗೂಡಿದ ಚಂದ್ರನ ಚಿಹ್ನೆಯಿದ್ದ–ಧ್ವಜವನ್ನೂ ನಾನು ಕಂಡೆನು. ಆ ಧ್ವಜದಲ್ಲಿ ನಂದ ಮತ್ತು ಉಪನಂದ ಎಂಬ ವಿಶಾಲವಾದ ಮತ್ತು ದಿವ್ಯವಾದ ಎರಡು ಮೃದಂಗಗಳಿದ್ದುವು. ಯಂತ್ರದಿಂದಲೇ ಬಾರಿಸಲ್ಪಡುತ್ತಿದ್ದ ಅವುಗಳು ಇಂಪಾದ ಶಬ್ದವನ್ನುಂಟುಮಾಡತಕ್ಕುವುಗಳಾಗಿಯೂ ಮತ್ತು ಹರ್ಷವನ್ನುಂಟುಮಾಡತಕ್ಕುವುಗಳಾಗಿಯೂ ಇದ್ದುವು. ನಕುಲನ ವಿಶಾಲವಾದ ಧ್ವಜವು ಶರಭದ ಚಿಹ್ನೆಯನ್ನು ಹೊಂದಿದ್ದಿತು. ಅದರ ಹಿಂಭಾಗವು ಸುವರ್ಣಮಯವಾಗಿದ್ದಿತು. ಆ ಉಗ್ರವಾದ ಶರಭಧ್ವಜವು ರಥದಮೇಲೆ ಹಾರಾಡುತ್ತಿದ್ದು ಶತ್ರುಗಳಿಗೆ ಭಯವನ್ನುಂಟುಮಾಡುತ್ತಿದ್ದಿತು. ಅಂತಹ ನಕುಲನ ಧ್ವಜವನ್ನು ನಾವು ಕಂಡೆವು. ಸಹದೇವನ *ಧ್ವಜದಲ್ಲಿ ಕಾಂತಿಯುಕ್ತವಾದ ಬೆಳ್ಳಿಯ ಹಂಸವೂ, ಪತಾಕೆಯಲ್ಲಿ ಘಂಟೆಯ ಚಿಹ್ನೆಯೂ ಇದ್ದಿತು. ದುರ್ಧರ್ಷವಾದ ಆ ಧ್ವಜವು ಶತ್ರುಗಳ ಶೋಕವನ್ನು ಹೆಚ್ಚಿಸುವುದಾಗಿದ್ದಿತು. ದ್ರೌಪದಿಯ ಐವರು ಮಕ್ಕಳ ಧ್ವಜಗಳು ಅನುಕ್ರಮವಾಗಿ ಧರ್ಮ, ವಾಯು, ಇಂದ್ರ ಮತ್ತು ಮಹಾತ್ಮರಾದ ಅಶ್ವಿನೀದೇವತೆಗಳ ಪ್ರತಿಮೆಗಳಿಂದ ವಿಭೂಷಿತವಾಗಿದ್ದುವು. ಕುಮಾರನಾದ ಅಭಿಮನ್ಯುವಿನ ರಥದಲ್ಲಿದ್ದ ಧ್ವಜವು ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಲ್ಪಟ್ಟಿದ್ದು ಬಹಳ ಉಜ್ಜ್ವಲವಾಗಿ ಕಾಣುತ್ತಿದ್ದಿತು. ಅದರ ಮಧ್ಯಭಾಗದಲ್ಲಿ ಸುವರ್ಣಮಯವಾದ ಶಾರ್ಙ್ಗ ( ಕೊಂಬುಗಳಿಂದ ಕೂಡಿದ) ಪಕ್ಷಿಯ ಚಿಹ್ನೆಯಿದ್ದಿತು. ಮಹಾರಾಜ! ಘಟೋತ್ಕಚನ ಧ್ವಜವು ರಣಹದ್ದಿನ ಚಿಹ್ನೆಯಿಂದ ಪ್ರಕಾಶಿಸುತ್ತಿದ್ದಿತು. ಹಿಂದೆ ರಾವಣನ ರಥದ ಕುದುರೆಗಳು ಇಚ್ಛೆಬಂದಲ್ಲಿಗೆ (ಆಕಾಶ-ಪಾತಾಳ ಮುಂತಾದ ಲೋಕಗಳಿಗೂ ಸಹ) ಹೋಗುವ ಸಾಮರ್ಥ್ಯವನ್ನು ಪಡೆದಿದ್ದಂತೆ–ಘಟೋತ್ಕಚನ ರಥದ ಕುದುರೆಗಳೂ ಇಚ್ಛೆಬಂದಲ್ಲಿಗೆ ಹೋಗುವ ಸಾಮರ್ಥ್ಯವುಳ್ಳವುಗಳಾಗಿದ್ದುವು.

*ಧ್ವಜ ಮತ್ತು ಪತಾಕೆಗಳು ಪರ್ಯಾಯಶಬ್ದಗಳೇ ಆದರೂ ಆಕಾರದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ತ್ರಿಕೋಣಾ ವೈ ಪತಾಕಾ ಸ್ಯುಃ ಚತುಷ್ಕೋಣಾ ಧ್ವಜಾಃ ಸ್ಮೃತಾಃ। ತ್ರಿಕೋಣಾಕಾರವಾಗಿರುವುದು ಪತಾಕೆ. ಚತುಷ್ಕೋಣಾಕಾರವಾಗಿರುವುದು ಧ್ವಜ. ಅನೇಕ ಯೋಧರು ತಮ್ಮ ರಥಗಳಲ್ಲಿ ಎರಡನ್ನೂ ಹೊಂದಿರುತ್ತಿದ್ದರು.

ಯುಧಿಷ್ಠಿರನಲ್ಲಿ ಮಾಹೇಂದ್ರವೆಂಬ ದಿವ್ಯವಾದ ಧನುಸ್ಸಿದ್ದಿತು. ಭೀಮಸೇನನ ಬಳಿಯಲ್ಲಿ ವಾಯುವಿನಿಂದ ಕೊಡಲ್ಪಟ್ಟಿದ್ದ ವಾಯವ್ಯವೆಂಬ ದಿವ್ಯವಾದ ಧನುಸ್ಸಿದ್ದಿತು. ಮೂರು ಲೋಕಗಳ ರಕ್ಷಣೆಯ ಸಲುವಾಗಿಯೇ ಬ್ರಹ್ಮನಿಂದ ಆಯುಧವೊಂದು ಸೃಷ್ಟಿಸಲ್ಪಟ್ಟಿತು. ಅದು ದಿವ್ಯವಾಗಿಯೂ ಮತ್ತು ಯಾವಕಾಲಕ್ಕೂ ಜೀರ್ಣವಾಗದೆಯೂ ಇದ್ದಿತು. ಆ ಆಯುಧವೇ ದಿವ್ಯವಾದ ಗಾಂಡೀವಧನುಸ್ಸು. ಅದು ಪಾರ್ಥನಿಗೆ ಲಭಿಸಿತು. ನಕುಲನ ಬಳಿಯಲ್ಲಿ ವೈಷ್ಣವವೆಂಬ ಧನುಸ್ಸೂ, ಸಹದೇವನ ಬಳಿಯಲ್ಲಿ ಅಶ್ವಿನೀಕುಮಾರರಿಗೆ ಸಂಬಂಧಿಸಿದ ಧನುಸ್ಸೂ ಇದ್ದುವು. ಘಟೋತ್ಕಚನ ಬಳಿಯಲ್ಲಿದ್ದ ಪೌಲಸ್ತ್ಯ ವೆಂಬ ಧನುಸ್ಸು ದಿವ್ಯವಾಗಿಯೂ, ಶತ್ರುಗಳಿಗೆ ಭಯವನ್ನುಂಟು ಮಾಡುವುದಾಗಿಯೂ ಇದ್ದಿತು. ದ್ರೌಪದಿಯ ಐವರು ಮಕ್ಕಳ ಬಳಿಯಲ್ಲಿ ಅನುಕ್ರಮವಾಗಿ ರುದ್ರ, ಅಗ್ನಿ, ಕುಬೇರ, ಯಮ ಮತ್ತು ಶಂಕರರಿಗೆ ಸಂಬಂಧಿಸಿದ ಧನೂರತ್ನಗಳಿದ್ದುವು. ರೋಹಿಣಿಯ ಮಗನಾದ ಬಲರಾಮನು ರುದ್ರನ ಸಂಬಂಧವಾದ ಧನುಸ್ಸನ್ನು ಪಡೆದುಕೊಂಡಿದ್ದನು. ಅಭಿಮನ್ಯುವಿನ ವಿಷಯದಲ್ಲಿ ಸಂತುಷ್ಟನಾದ ಬಲರಾಮನು ಮಹಾತ್ಮನಾದ ಅಭಿಮನ್ಯುವಿಗೆ ತನ್ನಲ್ಲಿದ್ದ ರೌದ್ರವೆಂಬ ಧನುಸ್ಸನ್ನೇ ಪಾರಿತೋಷಿಕವಾಗಿ ಕೊಟ್ಟನು. ನಾನು ಹೇಳಿದ ಇವುಗಳೇ ಅಲ್ಲದೇ ಇನ್ನೂ ಅನೇಕ ಸುವರ್ಣಭೂಷಿತವಾದ, ಶತ್ರುಗಳಿಗೆ ದುಃಖವನ್ನು ಹೆಚ್ಚಿಸುವ, ನಮ್ಮ ಶತ್ರುಪಕ್ಷದವರಾದ ಪಾಂಡವರ ಸೈನ್ಯದ ಧ್ವಜಗಳು ಹಾರಾಡುತ್ತಿದ್ದುದು ಅಲ್ಲಿ ಕಾಣುತ್ತಿದ್ದಿತು. ಆ ಸಮಯದಲ್ಲಿ ವೀರಪುರುಷರಿಂದ ಸಮಾಕುಲವಾಗಿದ್ದ, ದ್ರೋಣಾಚಾರ್ಯರ ಧ್ವಜವಿಶಿಷ್ಟ ವಾಗಿದ್ದ ಆ ಮಹಾಕುರುಸೈನ್ಯವು ಪಟದಲ್ಲಿರುವ ಚಿತ್ರದೋಪಾದಿಯಲ್ಲಿ ಸ್ತಬ್ಧವಾಗಿ ನಿಂತಿದ್ದಿತು. ಸ್ವಯಂವರಸಮಯದಲ್ಲಿ ಸಾಲಂಕೃತಳಾದ ಕನ್ಯೆಯು ಸ್ವಯಂವರಮಾಲೆಯನ್ನು ಹಿಡಿದು ಹೆಜ್ಜೆಯಿಡುವ ಸಮಯದಲ್ಲಿ ಅವಳ ಸಮೀಪದಲ್ಲಿರುವ ರಾಜರ ಕುಲಗೋತ್ರಗಳು ಘೋಷಿಸಲ್ಪಡುವಂತೆ– ದ್ರೋಣರ ಮೇಲೆ ಆಕ್ರಮಣಮಾಡಲು ಹೋಗುತ್ತಿದ್ದ ವೀರರ ನಾಮ-ಗೋತ್ರಗಳು ಘೋಷಿಸಲ್ಪಡುತ್ತಿದ್ದುವು.”

೨೩ನೆಯ ಅಧ್ಯಾಯವು ಮುಗಿಯಿತು.

೨೪ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ತನ್ನ ಖೇದವನ್ನು ಹೊರಗೆಡಹುತ್ತಾ ಯುದ್ಧದ ಸಮಾಚಾರವನ್ನು ಕೇಳಿದುದು

ಧೃತರಾಷ್ಟ್ರನು ಸಂಜಯನೊಡನೆ ಹೇಳುತ್ತಾನೆ:

"ಸಂಜಯ! ಭೀಮಸೇನಪ್ರಮುಖರಾದ ಯಾವ ರಾಜರು ದ್ರೋಣರೊಡನೆ ಯುದ್ಧಮಾಡುವ ಸಲುವಾಗಿ ರಣರಂಗಕ್ಕೆ ಪುನಃ ಹಿಂದಿರುಗಿ ಬಂದರೋ ಅವರೆಲ್ಲರೂ ಯುದ್ಧಸಮಯದಲ್ಲಿ ದೇವಸೇನೆಗೂ ಸಹ ಪೀಡೆಯನ್ನುಂಟುಮಾಡಲು ಸಮರ್ಥರಾದವರು.

**ಸಂಪ್ರಯುಕ್ತಃ ಕಿಲೈವಾಯಂ ದಿಷ್ಟೈರ್ಭವತಿ ಪೂರುಷಃ ।**
**ತಸ್ಮಿನ್ನೇವ ಚ ಸರ್ವಾರ್ಥಾಃ ಪ್ರದೃಶ್ಯನ್ತೇ ಪೃಥಗ್ವಿಧಾಃ ॥೨॥**

ಸಂಜಯ! ನಿಶ್ಚಯವಾಗಿಯೂ ಕೇವಲ ಅದೃಷ್ಟಗಳ ಕಾರಣದಿಂದಲೇ ಮನುಷ್ಯನು ಪ್ರಚೋದಿತನಾಗುತ್ತಾನೆ. ಅದೃಷ್ಟಗಳೇ (ದೈವವೇ) ಮನುಷ್ಯನನ್ನು ಕಾರ್ಯೋನ್ಮುಖನನ್ನಾಗಿ ಮಾಡುತ್ತವೆ–ಎಂಬುದು ನನ್ನ ಅಭಿಪ್ರಾಯವಾಗಿದೆ. ಹೇಗೆಂದರೆ ನಾನಾವಿಧವಾದ ಸರ್ವಾರ್ಥಗಳು ಆ ಅದೃಷ್ಟಗಳಿಂದಲೇ ಕಂಡುಬರುತ್ತವೆ. (ಸರ್ವಾರ್ಥಗಳೂ ಅದೃಷ್ಟಗಳನ್ನು ಅಥವಾ ದೈವವನ್ನೇ ಅವಲಂಬಿಸಿವೆ.)

**ದೀರ್ಘಂ ವಿಪ್ರೋಷಿತಃ ಕಾಲಮರಣ್ಯೇ ಜಟಿಲೋಽಜಿನೀ ।**
**ಅಜ್ಞಾತಶ್ಚೈವ ಲೋಕಸ್ಯ ವಿಜಹಾರ ಯುಧಿಷ್ಠಿರಃ ॥೩॥**
**ಸ ಏವ ಮಹತೀಂ ಸೇನಾಂ ಸಮಾವರ್ತಯದಾಹವೇ ।**
**ಕಿಮನ್ಯದ್ದೈವಸಂಯೋಗಾನ್ಮಮ ಪುತ್ರಸ್ಯ ಚಾಭವತ್ ॥೪॥**

ಸಂಜಯ! ಬಹಳ ಕಾಲದವರೆಗೆ ಯುಧಿಷ್ಠಿರನು ಜಟೆಯನ್ನು ಧರಿಸಿ ಮೃಗಚರ್ಮವನ್ನೇ ಹೊದೆದುಕೊಂಡು ಅರಣ್ಯದಲ್ಲಿ ವಾಸಮಾಡುತ್ತಿದ್ದನು. ಅನಂತರ ಸ್ವಲ್ಪಕಾಲ ಅಜ್ಞಾತನಾಗಿಯೂ ಲೋಕದಲ್ಲಿ ಸಂಚರಿಸುತ್ತಿದ್ದನು. (ಅವನಿಗೆ ಹದಿಮೂರು ವರ್ಷಗಳವರೆಗೆ ಜನರ ಸಂಪರ್ಕವೇ ಇರಲಿಲ್ಲ.) ಅಂತಹವನೇ ಇಂದು ಯುದ್ಧದ ಸಲುವಾಗಿ ಬೃಹತ್ತಾದ ಸೈನ್ಯವನ್ನು ಸಂಗ್ರಹಿಸಿದ್ದಾನೆ. ಇದೆಲ್ಲವೂ ನನ್ನ ಮತ್ತು ನನ್ನ ಮಗನ ಜನ್ಮಾಂತರದ

ಪಾಪಕರ್ಮಗಳ ಫಲದಿಂದಲೇ ಆಗಿರುತ್ತದೆ. ಹಾಗಿಲ್ಲದಿದ್ದರೆ ಮತ್ತಾವ ಕಾರಣವು ತಾನೇ ಇರಲು ಸಾಧ್ಯ? ಸಂಜಯ!

**ಯುಕ್ತ ಏವ ಹಿ ಭಾಗ್ಯೇನ ಧ್ರುವಮುತ್ಪದ್ಯತೇ ನರಃ ।**
**ಸ ತಥಾಕೃಷ್ಯತೇ ತೇನ ನ ಯಥಾ ಸ್ವಯಮಿಚ್ಛತಿ ॥೫॥**

ಮನುಷ್ಯನು ಭಾಗ್ಯದಿಂದ (ಅದೃಷ್ಟದಿಂದ) ಯುಕ್ತನಾಗಿಯೇ ಹುಟ್ಟುವನೆಂಬುದು ನಿಶ್ಚಯ. ಆದರೆ ಆ ಅದೃಷ್ಟವು ನಾವು ಇಚ್ಛಿಸಿದಂತೆ ನಮ್ಮನ್ನು ಎಳೆದುಕೊಂಡು ಹೋಗುವುದಿಲ್ಲ. ತನಗಿಚ್ಛೆಬಂದಂತೆ ಎಳೆದುಕೊಂಡು ಹೋಗುತ್ತದೆ. (ಮನುಷ್ಯನು ಅದೃಷ್ಟಕ್ಕೆ ಅಧೀನ. ಅದೃಷ್ಟವೆಂಬುದು ಪೂರ್ವಜನ್ಮದ ಕರ್ಮಫಲ. ತನ್ನದೇ ಆದ ಹಾದಿಯಲ್ಲಿ ಅದು ಹೋಗುತ್ತಿರುವುದೇ ಹೊರತು ನಾವು ಇಚ್ಛಿಸಿದ ಹಾದಿಯಲ್ಲಿ ನಮ್ಮನ್ನು ಅದು ಹೋಗಲು ಬಿಡುವುದಿಲ್ಲ. ಉಪಾಯಾಂತರಗಳಿಂದ ದುರ್ಯೋಧನನು ಹದಿಮೂರು ವರ್ಷಗಳ ಕಾಲ ಯುಧಿಷ್ಠಿರನಿಗೆ ಜನಸಂಪರ್ಕವೇ ಇಲ್ಲದಂತೆ ಮಾಡಿದರೂ ಏಳು ಅಕ್ಷೌಹಿಣೀ ಸೈನಿಕರು ಧರ್ಮಜನನ್ನು ಅನುಸರಿಸಿ ಯುದ್ಧಕ್ಕೆ ಬಂದರು. ಅದು ಅವನ ಕರ್ಮದ ಫಲ. ಹನ್ನೊಂದು ಅಕ್ಷೌಹಿಣೀಸೈನ್ಯವು ದುರ್ಯೋಧನನ ಬಳಿಯಲ್ಲಿದ್ದರೂ ಅವನು ಗೆಲುವಿನ ಹಾದಿಯನ್ನು ಕಾಣುತ್ತಿಲ್ಲ. ಇದು ದುರ್ಯೋಧನನ ಕರ್ಮದ ಫಲ. ಆದುದರಿಂದ ತಾನು ಮಾಡಿದ ಕರ್ಮಕ್ಕೆ ಅಥವಾ ಕರ್ಮಫಲಕ್ಕೆ ಮನುಷ್ಯನು ಅಧೀನನು–ಎಂಬುದು ಧೃತರಾಷ್ಟ್ರನ ಅಭಿಪ್ರಾಯವಾಗಿದೆ.)

ದ್ಯೂತದ ವ್ಯಸನಕ್ಕೆ ಸಿಕ್ಕಿ ಯುಧಿಷ್ಠಿರನು ಬಹಳವಾಗಿ ಕ್ಲೇಶಪಟ್ಟನು. ಅಂತಹವನೇ ಇಂದು ಭಾಗ್ಯವಶಾತ್ ಅನೇಕ ವಿಧವಾದ ಸಹಾಯ ಸಂಪತ್ತಿಗಳನ್ನು ಪಡೆದುಕೊಂಡಿದ್ದಾನೆ. ಬಹಳ ಹಿಂದೆಯೇ ಮೂರ್ಖನಾದ ನನ್ನ ಮಗ ದುರ್ಯೋಧನನು ನನ್ನೊಡನೆ ಹೀಗೆ ಹೇಳಿಕೊಂಡು ಬಡಾಯಿ ಕೊಚ್ಚುತ್ತಿದ್ದನು.

“ಅಪ್ಪ! ಇಂದು ಕೇಕಯರು ನಮಗೆ ಸಾಮಂತರಾದರು. ಕಾಶಿಕರು, ಕೋಸಲರು ಮತ್ತು ಚೇದಿಗಳು ಇವರೆಲ್ಲರೂ ಇದಕ್ಕೂ ಹಿಂದೆಯೇ ನನ್ನ ಅಧೀನರಾಗಿದ್ದರು. ಇವರುಗಳೇ ಅಲ್ಲದೇ ವಂಗರೇ ಮೊದಲಾದವರೂ

ನನ್ನನ್ನೇ ಆಶ್ರಯಿಸಿರುತ್ತಾರೆ. ಇಂದು ಭೂಮಂಡಲದ ಬಹುಭಾಗವು ನನ್ನ ಅಧೀನವಾಗಿ ಹೋಗಿದೆ. ಪಾರ್ಥನ (ಯುಧಿಷ್ಠಿರನ) ಸಾರ್ವಭೌಮತ್ವವು ಈ ದೇಶಗಳಲ್ಲಿ ಉಳಿದಿರುವುದಿಲ್ಲ."–ಹೀಗೆಲ್ಲಾ ಹೇಳಿಕೊಂಡು ನನ್ನನ್ನು ಮುಗ್ಧನನ್ನಾಗಿ ಮಾಡುತ್ತಿದ್ದನು. ದುರ್ಯೋಧನನ ಸೇನಾಸಮೂಹದ ಮಧ್ಯದಲ್ಲಿ ಸುರಕ್ಷಿತರಾಗಿದ್ದ ದ್ರೋಣರು ಯುದ್ಧದಲ್ಲಿ ಧೃಷ್ಟದ್ಯುಮ್ನನಿಂದಲೇ ಹತರಾದರು. ಹೀಗಾಗಲು ನಮ್ಮ ದೌರ್ಭಾಗ್ಯವನ್ನು ಬಿಟ್ಟು ಮತ್ತಾವ ಕಾರಣವಿದೆ? ದ್ರೋಣರೇನು ಸಾಮಾನ್ಯರೇ? ಸಂಜಯ! ಅವರು ರಾಜರ ಮಧ್ಯದಲ್ಲಿ ಸುರಕ್ಷಿತರಾಗಿದ್ದರು. ಮಹಾಬಾಹುಗಳಾಗಿದ್ದರು. ಯುದ್ಧಶ್ಲಾಘಿಗಳಾಗಿದ್ದರು. ಸಕಲವಿಧವಾದ ಅಸ್ತ್ರಗಳನ್ನೂ ತಿಳಿದವರಾಗಿದ್ದರು. ಅಂತಹ ದ್ರೋಣರನ್ನು ಮೃತ್ಯುವು ಮುಟ್ಟಿದುದಾದರೂ ಹೇಗೆ?

ಸಂಜಯ! ಸಂಕಟವು ನನ್ನನ್ನು ಆಕ್ರಮಿಸಿಬಿಟ್ಟಿದೆ. ಇದರಿಂದಾಗಿ ನನ್ನ ಬುದ್ಧಿಯೂ ಮೋಹಗೊಂಡಿದೆ. ಭೀಷ್ಮ-ದ್ರೋಣರು ಹತರಾದರೆಂದು ಕೇಳಿದನಂತರ ನನಗೆ ಜೀವನದಲ್ಲಿಯೇ ಜುಗುಪ್ಸೆಯುಂಟಾಗಿದೆ. ಜೀವಿಸಿರಲು ಇಚ್ಛೆಯೇ ಇಲ್ಲವಾಗಿದೆ. ನಾನು ನನ್ನ ಮಗನ ವಿಷಯದಲ್ಲಿ ವಿಶೇಷವಾದ ಅನುರಕ್ತಿಯಿಂದ ಇದ್ದುದನ್ನು ಕಂಡು ಆ ಸಮಯದಲ್ಲಿ ವಿದುರನು ನನ್ನೊಡನೆ ಏನು ಹೇಳಿದ್ದನೋ ಅದರಂತೆಯೇ ದುರ್ಯೋಧನನಿಗೆ ಎಲ್ಲವೂ (ಎಲ್ಲ ಸಂಕಷ್ಟಗಳೂ) ಪ್ರಾಪ್ತವಾಗಿವೆ. ಆ ಸಮಯದಲ್ಲಿ ವಿದುರನು ನನ್ನೊಡನೆ ದುರ್ಯೋಧನನನ್ನು ತ್ಯಜಿಸಬೇಕೆಂದೇ ಹೇಳಿದ್ದನು. ಅವನ ಸಲಹೆಯಂತೆ ನಾನು ದುರ್ಯೋಧನನೊಬ್ಬನನ್ನು ಪರಿತ್ಯಜಿಸಿ ಉಳಿದ ಮಕ್ಕಳನ್ನು ರಕ್ಷಿಸಲು ಇಚ್ಛೆಸಿದ್ದರೆ ಅದು ಅತ್ಯಂತ ಕ್ರೂರವಾದ ಕಾರ್ಯವೇನೋ ಆಗುತ್ತಿದ್ದಿತು. ಹಿರಿಯ ಮಗನನ್ನು ತ್ಯಜಿಸುವುದು ಸುಲಭವಾದ ಕಾರ್ಯವಾಗಿರಲಿಲ್ಲ. ಆದರೆ ಆ ಸಮಯದಲ್ಲಿ ವಿದುರನು ಹೇಳಿದಂತೆ ನಾನು ಮಾಡಿದ್ದರೆ (ದುರ್ಯೋಧನನೊಬ್ಬನನ್ನು ಪರಿತ್ಯಜಿಸಿದ್ದರೆ) ಉಳಿದ ಈ ಎಲ್ಲ ಮಕ್ಕಳಿಗೂ ಮೃತ್ಯುವು ಸನ್ನಿಹಿತವಾಗುತ್ತಿರಲಿಲ್ಲ. ಇದಂತೂ ನಿಶ್ಚಯ.

**ಯೋ ಹಿ ಧರ್ಮಂ ಪರಿತ್ಯಜ್ಯ ಭವತ್ಯರ್ಥಪರೋ ನರಃ।**
**ಸೋಽಸ್ಮಾಚ್ಚ ಹೀಯತೇ ಲೋಕಾತ್ಕ್ಷುದ್ರಭಾವಂ ಚ ಗಚ್ಛತಿ ॥೧೪॥**

ಯಾವನು ಧರ್ಮವನ್ನು ಪರಿತ್ಯಜಿಸಿ ಕೇವಲ ಅರ್ಥಪರಾಯಣ ನಾಗಿರುತ್ತಾನೆಯೋ–ಅವನು ಈ ಲೋಕದಲ್ಲಿಯೂ (ಲೌಕಿಕಸ್ವಾರ್ಥದಿಂದ) ಭ್ರಷ್ಟನಾಗಿ ಅಧೋಗತಿಯನ್ನೂ ಹೊಂದುತ್ತಾನೆ. (ರಾಷ್ಟ್ರದ ಪ್ರಧಾನ ನಾಯಕನೇ ಮರಣಹೊಂದಲಾಗಿ ಕುಂದಿದ ಉತ್ಸಾಹದಿಂದ ಕೂಡಿರುವ ನಮ್ಮ ಕಡೆಯಲ್ಲಿ ಸೈನ್ಯಶೇಷವು ಉಳಿಯುವುದೆಂಬುದನ್ನು ನಾನು ಕಾಣುತ್ತಿಲ್ಲ. ನಮ್ಮ ಪಕ್ಷದಲ್ಲಿ ಯಾರೂ ಉಳಿಯಲಾರರು.)

**ಕಥಂ ಸ್ಯಾದವಶೇಷೋ ಹಿ ಧುರ್ಯಯೋರಭ್ಯತೀತಯೋಃ ।**
**ಯೌ ನಿತ್ಯಮುಪಜೀವಾಮಃ ಕ್ಷಮಿಣೌ ಪುರುಷರ್ಷಭೌ ॥೧೬॥**

ಸಂಜಯ! ಸೈನ್ಯದ ಅವಶೇಷವು ಉಳಿಯುವುದಾದರೂ ಹೇಗೆ ಸಾಧ್ಯ? ನಾವು ಸದಾಕಾಲದಲ್ಲಿಯೂ ಯಾವ ಪುರುಷರ್ಷಭರನ್ನು ಆಶ್ರಯಿಸಿ ಜೀವಿಸಿಕೊಂಡಿದ್ದೆವೋ–ಕ್ಷಮಾವಂತರಾದ ಧುರಂಧರರಾದ ಅಂತಹ ವೀರರು ಈ ಲೋಕವನ್ನೇ ಬಿಟ್ಟು ಹೊರಟುಹೋದನಂತರ ನಾವು ಹೇಗೆ ತಾನೇ ಉಳಿದೇವು? ನಾವು ನಿಶ್ಶೇಷವಾಗಿ ನಾಶವಾಗುವೆವೆಂಬುದು ನಿಶ್ಚಯದ ಮಾತು. ನಮ್ಮ ಕಡೆಯ ಇಬ್ಬರು ಪ್ರಧಾನರು ಗತಿಸಿದುದರಿಂದಲೇ ಇದು ವ್ಯಕ್ತವಾಗಿಬಿಟ್ಟಿದೆ. ಆದರೂ ಯುದ್ಧವಾರ್ತೆಯನ್ನು ವಿವರವಾಗಿ ಕೇಳ ಬೇಕೆನ್ನುವ ಆಶಯವು ನನಗಿದೆ; ಸಂಜಯ! ಆದುದರಿಂದ ಯಾವ ರೀತಿಯಲ್ಲಿ ಯುದ್ಧವು ನಡೆಯಿತು? ಯಾರು-ಯಾರು ಯುದ್ಧ ಮಾಡುತ್ತಿದ್ದರು? ಯುದ್ಧದಲ್ಲಿ ಯಾರು ಯಾರನ್ನು ಸೋಲಿಸುತ್ತಿದ್ದರು? ಕ್ಷುದ್ರರಾದ ಯಾವ ಸೈನಿಕರು ಪಲಾಯನಮಾಡುತ್ತಿದ್ದರು? -ಈ ಎಲ್ಲ ಸಂಗತಿಗಳನ್ನೂ ನನಗೆ ಯಥಾವತ್ತಾಗಿ ತಿಳಿಸು. ಧನಂಜಯನ ವಿಷಯ ಗಳನ್ನೂ ಹೇಳು. ರಥರ್ಷಭನಾದ ಅವನು ಯಾವ ಯಾವ ಸಾಹಸಕಾರ್ಯಗಳನ್ನು ಮಾಡಿದನು? ನನಗೆ ಅರ್ಜುನನಿಂದಲೂ ಮತ್ತು ಶತ್ರುಸ್ವರೂಪನಾಗಿರುವ ಅವನ ಅಣ್ಣನಾದ ಭೀಮಸೇನನಿಂದಲೂ ಹೆಚ್ಚು ಭಯವಿದೆ. ಸಂಜಯ! ಪಾಂಡವರು ಪುನಃ ರಣರಂಗಕ್ಕೆ ಹಿಂದಿರುಗಿದನಂತರ ಅವರಿಗೂ ಮತ್ತು ನನ್ನ ಅಳಿದುಳಿದಿದ್ದ ಸೈನಿಕರಿಗೂ ಸುದಾರುಣವಾದ ಯುದ್ಧವು ಯಾವ ರೀತಿಯಲ್ಲಿ ನಡೆಯಿತು?–ಎಂಬುದನ್ನು ಹೇಳು. ಪಾಂಡವರು ಯುದ್ಧಮಾಡಲು ರಣರಂಗಕ್ಕೆ ಹಿಂದಿರುಗಿದ ಆ ಸಮಯ

ದಲ್ಲಿ ನಿಮ್ಮ ಮನಃಸ್ಥಿತಿಯು ಯಾವರೀತಿಯಲ್ಲಿದ್ದಿತು? ನನ್ನ ಮಗನ ಪಕ್ಷದಲ್ಲಿದ್ದ ಶೂರಯೋಧರಲ್ಲಿ ಯಾರು-ಯಾರು ಯಾವ-ಯಾವ ಪಾಂಡವ ಯೋಧರನ್ನು ಎದುರಿಸಿ ಯುದ್ಧಮಾಡಿದರು?–ಎಂಬುದನ್ನೂ ವಿಶದವಾಗಿ ಹೇಳು."

೨೪ನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ಸಂಶಪ್ತಕವಧಪರ್ವ ( ಮುಂದುವರಿದಿದೆ.)

## ಕೌರವ–ಪಾಂಡವಸೈನಿಕರ ದ್ವಂದ್ವಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಪಾಂಡವರು ಹಿಂದಿರುಗಿದನಂತರ ಮೋಡಗಳಿಂದ ಸೂರ್ಯನು ಆಚ್ಛಾದಿತನಾಗುವಂತೆ–ಪಾಂಡವರ ಬಾಣಗಳಿಂದ ಆಚ್ಛಾದಿತರಾದ ದ್ರೋಣರನ್ನು ನೋಡಿ ನಮಗೆ ಬಹಳ ಭಯವಾಯಿತು. ಪಾಂಡವರ ಸೈನ್ಯದ ರಭಸದ ನಡೆದಾಟದಿಂದ ಹುಟ್ಟಿದ ಧೂಳಿಯು ನಿನ್ನ ಸೈನ್ಯವನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟಿತು. ಅದರಿಂದಾಗಿ ನಮ್ಮ ದೃಷ್ಟಿಪಥವೂ ನಾಶವಾಗಿ ಹೋಗಲಾಗಿ ಆ ಸಮಯದಲ್ಲಿ ದ್ರೋಣರು ಹತರಾಗಿ ಹೋಗಿರಬಹುದೆಂದೇ ನಾವು ಭಾವಿಸಿದೆವು. ಕ್ರೂರವಾದ ಕರ್ಮವನ್ನು (ದ್ರೋಣರ ವಧೆಯನ್ನು ) ಮಾಡಲಿಚ್ಛಿಸಿದ್ದ ಮಹಾಧನುಷ್ಮಂತ ರಾದ, ಶೂರರಾದ ಆ ಪಾಂಡವಯೋಧರನ್ನು ಕಂಡು ದುರ್ಯೋಧನನು ತನ್ನ ಕಡೆಯ ಸೈನಿಕರನ್ನು ಪ್ರಚೋದಿಸುತ್ತಾ ಹೇಳಿದನು:

"ನರಾಧಿಪರೇ! ನಿಮ್ಮ ಶಕ್ತಿ , ಉತ್ಸಾಹ ಮತ್ತು ಬಲ ಇವುಗಳಿಗೆ ಅನುಸಾರವಾಗಿ ಸಮಯೋಚಿತವಾದ ಉಪಾಯದಿಂದ ಪಾಂಡವರ ಸೈನ್ಯವನ್ನು ತಡೆಹಿಡಿಯಿರಿ."

ದುರ್ಯೋಧನನು ಹೀಗೆಂದು ಹೇಳುತ್ತಲೇ ನಿನ್ನ ಮಗನಾದ ದುರ್ಮರ್ಷಣನು ಭೀಮಸೇನನನ್ನು ದೂರದಿಂದಲೇ ನೋಡಿ, ಅವನ ಪ್ರಾಣವನ್ನು ಅಪಹರಿಸುವ ಆಶಯವನ್ನು ಹೊಂದಿ, ಬಾಣಗಳಿಂದ ಅವ ನನ್ನು ಆಚ್ಛಾದಿಸುತ್ತಾ ಭೀಮಸೇನನ ಮೇಲೆ ಆಕ್ರಮಣನಡೆಸಿದನು. ಕ್ರುದ್ಧನಾಗಿದ್ದ ದುರ್ಮರ್ಷಣನು ಮೃತ್ಯುವಿನೋಪಾದಿಯಲ್ಲಿ ಬಾಣಗಳಿಂದ

ಭೀಮಸೇನನನ್ನು ತಡೆದುಬಿಟ್ಟನು. ಅದಕ್ಕೆ ಪ್ರತಿಯಾಗಿ ಭೀಮಸೇನನೂ ಸಹ ನಿನ್ನ ಮಗನನ್ನು ಬಾಣಗಳಿಂದ ತೀವ್ರವಾಗಿ ಗಾಯಗೊಳಿಸಿದನು. ಅನಂತರ ಅವರಿಬ್ಬರಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಯಿತು.

ಪ್ರಾಜ್ಞರಾದ, ಶೂರರಾದ, ಪ್ರಹಾರಕುಶಲರಾದ ನಮ್ಮ ಕಡೆಯ ರಾಜರು ಸ್ವಾಮಿಯಾದ ದುರ್ಯೋಧನನಿಂದ ಆದೇಶವನ್ನು ಪಡೆದವರಾಗಿ, ರಾಜ್ಯಾಡಳಿತವು ತಮ್ಮ ಕೈಬಿಟ್ಟು ಹೋಗುವುದೆಂಬ ಭಯವನ್ನೂ–ಸಾವು ಉಂಟಾಗಬಹುದೆನ್ನುವ ಭಯವನ್ನೂ ಸಂಪೂರ್ಣವಾಗಿ ತ್ಯಜಿಸಿದವರಾಗಿ ಆ ಭಯಂಕರಯುದ್ಧದಲ್ಲಿ ಶತ್ರುಗಳನ್ನು ಎದುರಿಸಿ ನಿಂತರು. ದ್ರೋಣರನ್ನು ಎದುರಿಸಲು ಬರುತ್ತಿದ್ದ, ಶೂರನಾದ, ರಣಾಂಗಣಕ್ಕೇ ಶೋಭೆಯನ್ನುಂಟು ಮಾಡುತ್ತಿದ್ದ, ಶಿನಿಯ ಮೊಮ್ಮಗನಾದ ಸಾತ್ಯಕಿಯನ್ನು ಕೃತವರ್ಮನು ಎದುರಿಸಿದನು. ಅದರಿಂದ ಕ್ರುದ್ಧನಾದ ಸಾತ್ಯಕಿಯು ತನ್ನಂತೆಯೇ ಕೋಪ ಗೊಂಡಿದ್ದ ಕೃತವರ್ಮನನ್ನು ತನ್ನ ಬಾಣಗಳ ಸಮೂಹದಿಂದ ಮುಂದೆ ಬರದಂತೆ ತಡೆದನು. ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯನ್ನು ಎದುರಿಸುವಂತೆ–ಕೃತವರ್ಮನೂ ಸಹ ಶೈನೇಯನನ್ನು ತನ್ನ ಬಾಣಗಳ ಸಮೂಹದಿಂದ ಎದುರಿಸಿದನು. ಉಗ್ರವಾದ ಧನುಸ್ಸನ್ನು ಹೊಂದಿದ್ದ ಸೈಂಧವನು ದ್ರೋಣರ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಕ್ಷತ್ರವರ್ಮನನ್ನು ನಿಶಿತವಾದ ಬಾಣಗಳಿಂದ ಪ್ರಯತ್ನಪೂರ್ವಕವಾಗಿ ಪ್ರಹರಿಸಿ ಅವನನ್ನು ದ್ರೋಣರ ಸಮೀಪಕ್ಕೆ ಬರದಂತೆ ತಡೆದನು. ಅದರಿಂದ ಮತ್ತೂ ಕ್ರುದ್ಧನಾದ ಕ್ಷತ್ರವರ್ಮನು ಸೈಂಧವನ ಧ್ವಜ ಮತ್ತು ಧನುಸ್ಸುಗಳನ್ನು ಕತ್ತರಿಸಿ ಹತ್ತು ನಾರಾಚಗಳಿಂದ ಸೈಂಧವನ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಸಿದ್ಧಹಸ್ತನೋ ಎಂಬಂತೆ ಎವೆಯಿಕ್ಕುವುದರೊಳಗಾಗಿ ಸೈಂಧವನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಸಂಪೂರ್ಣವಾಗಿ ಲೋಹದಿಂದಲೇ ಮಾಡಿದ್ದ ಬಾಣಗಳಿಂದ ಕ್ಷತ್ರವರ್ಮನನ್ನು ಪ್ರಹರಿಸಿದನು. ಪಾಂಡವರ ಸಲುವಾಗಿ ಪ್ರಯತ್ನ ಪೂರ್ವಕವಾಗಿ ಯುದ್ಧಮಾಡುತ್ತಿದ್ದ, ಮಹಾರಥನಾದ ಭರತವಂಶೀಯ ನಾದ, ದ್ರೋಣರ ಬಳಿಗೆ ರಭಸದಿಂದ ಹೋಗುತ್ತಿದ್ದ, ಶೂರ ನಾದ ಯುಯುತ್ಸುವನ್ನು ಸುಬಾಹುವು ಪ್ರಯತ್ನಪೂರ್ವಕವಾಗಿ ತಡೆದು

ನಿಲ್ಲಿಸಿದನು. ಅದರಿಂದ ಕ್ರುದ್ಧನಾದ ಯುಯುತ್ಸುವು ನಿಶಿತವಾಗಿಯೂ ಪೀತವರ್ಣದಿಂದ ಕೂಡಿದುದಾಗಿಯೂ ಇದ್ದ ಕ್ಷುರಗಳೆಂಬ ಎರಡು ಬಾಣಗಳಿಂದ ಧನುರ್ಬಾಣಯುಕ್ತವಾಗಿದ್ದ ಮತ್ತು ಕಬ್ಬಿಣದ ಗದೆಗಳಂತಿದ್ದ ಸುಬಾಹುವಿನ ಎರಡು ಭುಜಗಳನ್ನೂ ಕತ್ತರಿಸಿದನು. ಮದ್ರಾಧಿಪತಿಯಾದ ಶಲ್ಯನು ಪಾಂಡವಶ್ರೇಷ್ಠನಾದ, ಧರ್ಮಾತ್ಮನಾದ ಯುಧಿಷ್ಠಿರರಾಜನನ್ನು–ಕ್ಷೋಭೆಗೊಂಡ ಸಮುದ್ರವನ್ನು ತೀರವು ತಡೆದು ನಿಲ್ಲಿಸುವಂತೆ–ತಡೆದು ನಿಲ್ಲಿಸಿದನು. ಒಡನೆಯೇ ಯುಧಿಷ್ಠಿರನು ಮರ್ಮಭೇದಿಗಳಾದ ಅನೇಕ ಬಾಣಗಳನ್ನು ಶಲ್ಯನ ಮೇಲೆ ಸುರಿಸಿದನು. ಅದಕ್ಕೆ ಪ್ರತಿಯಾಗಿ ಮದ್ರೇಶನು ಅರುವತ್ತು ನಾಲ್ಕು ಬಾಣಗಳಿಂದ ಯುಧಿಷ್ಠಿರನನ್ನು ಪ್ರಹರಿಸಿ ಗಟ್ಟಿಯಾಗಿ ಗರ್ಜನೆಯನ್ನು ಮಾಡಿದನು. ಈ ರೀತಿಯಾಗಿ ಗರ್ಜನೆಮಾಡುತ್ತಿದ್ದ ಶಲ್ಯರಾಜನ ಧ್ವಜವನ್ನೂ ಮತ್ತು ಧನುಸ್ಸನ್ನೂ ಕ್ಷುರವೆಂಬ ಬಾಣಗಳಿಂದ ಪಾಂಡವಜ್ಯೇಷ್ಠನಾದ ಯುಧಿಷ್ಠಿರನು ಕತ್ತರಿಸಿದನು. ಅದನ್ನು ಕಂಡ ಪ್ರೇಕ್ಷಕಜನರು ಗಟ್ಟಿಯಾಗಿ ಜಯಕಾರಗಳನ್ನು ಮಾಡಿದರು. ಸಸೈನ್ಯನಾದ ಬಾಹ್ಲೀಕರಾಜನು ಸೇನೆಯೊಡನೆ ದ್ರೋಣರ ಕಡೆಗೆ ಧಾವಿಸುತ್ತಿದ್ದ ದ್ರುಪದನನ್ನು ನಿಶಿತವಾದ ಬಾಣಗಳಿಂದ ತಡೆದು ನಿಲ್ಲಿಸಿದನು. ಸಸೈನ್ಯರಾಗಿದ್ದ ಆ ವೃದ್ಧರಾಜರ ನಡುವೆ–ಮದೋದಕವನ್ನು ಸುರಿಸುತ್ತಿರುವ ಯೂಥಪತಿಗಳಾದ ಎರಡು ಸಲಗಗಳ ನಡುವೆ ನಡೆಯುವ ಕಾಳಗದಂತೆ–ಬಹಳ ಘೋರತರವಾದ ಯುದ್ಧವು ನಡೆಯಿತು.

ಅವಂತೀದೇಶದ ರಾಜಕುಮಾರರಾದ ವಿಂದಾನುವಿಂದರು ಸೈನ್ಯ ಸಮೇತರಾಗಿ ಸಸೈನ್ಯನಾಗಿದ್ದ ಮತ್ಸ್ಯಾಧಿಪತಿಯಾದ ವಿರಾಟನನ್ನು–ಹಿಂದೆ ಇಂದ್ರಾಗ್ನಿಗಳಿಬ್ಬರೂ ಸೇರಿ ಬಲಿಚಕ್ರವರ್ತಿಯನ್ನು ಆಕ್ರಮಿಸಿದಂತೆ–ಆಕ್ರಮಿಸಿದರು. ಆ ಸಮಯದಲ್ಲಿ ಮತ್ಸ್ಯದೇಶದ ಸೈನಿಕರ ಮತ್ತು ಕೇಕಯದೇಶದ ಸೈನಿಕರ ನಡುವೆ ದೇವಾಸುರರ ಯುದ್ಧಕ್ಕೆ ಸಮಾನವಾದ ಬಹಳ ಭಯಂಕರವಾದ ಯುದ್ಧವಾಯಿತು. ಅಶ್ವಸೈನಿಕರು, ಗಜಯೋಧರು ಮತ್ತು ರಥಿಕರು ಆ ಸಮಯದಲ್ಲಿ ಸ್ವಲ್ಪವಾದರೂ ಭೀತಿಯೇ ಇಲ್ಲದೇ ಪರಸ್ಪರವಾಗಿ ಹೋರಾಡುತ್ತಿದ್ದರು. ಬಾಣಗಳ ಸಮೂಹವನ್ನೇ ತನ್ನ ಧನುಸ್ಸಿನಿಂದ ಪುಂಖಾನುಪುಂಖವಾಗಿ ಬಿಡುತ್ತಾ ದ್ರೋಣರ ಸಮೀಪಕ್ಕೆ ಹೋಗುತ್ತಿದ್ದ ನಕುಲನ ಮಗನಾದ ಶತಾನೀಕನನ್ನು ಸಭಾಪತಿಯಾದ ಭೂತಕರ್ಮನು

ತಡೆದನು. ಅದರಿಂದ ಕೋಪಗೊಂಡ ವೀರನಾದ ಶತಾನೀಕನು ತೀಕ್ಷ್ಣವಾಗಿ ಮಾಡಲ್ಪಟ್ಟಿದ್ದ ಭಲ್ಲಗಳೆಂಬ ಮೂರು ಬಾಣಗಳಿಂದ ಭೂತಕರ್ಮನನ್ನು ಕತ್ತಿನಿಂದಲೂ ಬಾಹುಗಳಿಂದಲೂ ವಿಹೀನನನ್ನಾಗಿ ಮಾಡಿದನು. (ಭೂತಕರ್ಮನ ತೋಳುಗಳನ್ನೂ ಕತ್ತನ್ನೂ ಕತ್ತರಿಸಿದನು.) ಬಾಣಗಳ ಸಮೂಹದೊಡನೆಯೇ ಕೂಡಿಕೊಂಡು ದ್ರೋಣರಿಗೆ ಅಭಿಮುಖವಾಗಿ ಬರುತ್ತಿದ್ದ, ವೀರನಾದ, ಪರಾಕ್ರಮಿಯಾದ, ಭೀಮನ ಮಗನಾದ ಸುತಸೋಮನನ್ನು ವಿವಿಂಶತಿಯು ತಡೆದು ನಿಲ್ಲಿಸಿದನು. ಅದರಿಂದ ಕ್ರುದ್ಧನಾದ ಸುತಸೋಮನು ತನ್ನ ಚಿಕ್ಕಪ್ಪನಾದ ವಿವಿಂಶತಿಯನ್ನು ನೇರವಾಗಿ ಹೋಗುವ ಬಾಣಗಳಿಂದ ಪ್ರಹರಿಸಿದನಲ್ಲದೇ ವೀರಕವಚವನ್ನು ತೊಟ್ಟಿದ್ದ ಅವನು ಸ್ವಲ್ಪವಾದರೂ ಹಿಂದಕ್ಕೆ ಸರಿಯಲಿಲ್ಲ. ಅನಂತರ ಭೀಮರಥನು ಲೋಹಮಯವಾಗಿದ್ದ ಮತ್ತು ನಿಶಿತವಾಗಿದ್ದ ಆರು ಬಾಣಗಳಿಂದ ಶಾಲ್ವನನ್ನು ಅವನ ಸಾರಥಿಯೊಡನೆ ಯಮಲೋಕಕ್ಕೆ ಕಳುಹಿಸಿದನು. ನವಿಲಿನ ಬಣ್ಣದ ಕುದುರೆಗಳಿಂದ ಕೂಡಿದ್ದ ರಥದಲ್ಲಿ ಕುಳಿತು ದ್ರೋಣರ ಅಭಿಮುಖವಾಗಿ ಬರುತ್ತಿದ್ದ ನಿನ್ನ ಮೊಮ್ಮಗನಾದ ಶ್ರುತಕರ್ಮನನ್ನು ಚಿತ್ರಸೇನಿಯು ತಡೆದು ನಿಲ್ಲಿಸಿದನು. ಪರಸ್ಪರಸಂಹಾರದಲ್ಲಿ ಆಸಕ್ತರಾಗಿದ್ದ ಮತ್ತು ತಮ್ಮ ಪಿತೃಗಳ ಕಾರ್ಯಸಿದ್ಧಿಗಾಗಿ ಪ್ರಯತ್ನಿಸುತ್ತಿದ್ದ ದುರ್ಧರ್ಷರಾದ ಆ ನಿನ್ನ ಇಬ್ಬರು ಮೊಮ್ಮಕ್ಕಳೂ ಉತ್ತಮವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದರು. ಯುಧಿಷ್ಠಿರನ ಮಗನಾದ ಪ್ರತಿವಿಂಧ್ಯನು ಧನುಷ್ಪಾಣಿಯಾಗಿ ದ್ರೋಣರ ಮುಂದೆ ನಿಂತುದನ್ನು ಕಂಡು ತನ್ನ ತಂದೆಯವರನ್ನು ಗೌರವಿಸುವ ಸಲುವಾಗಿ ಅಶ್ವತ್ಥಾಮನು ನಿಶಿತವಾದ ಬಾಣಗಳಿಂದ ಯೌಧಿಷ್ಠಿರಿಯನ್ನು ತಡೆದು ನಿಲ್ಲಿಸಿದನು. ಸಿಂಹದ ಬಾಲವನ್ನೇ ಧ್ವಜದ ಚಿಹ್ನೆಯಾಗಿ ಹೊಂದಿದ್ದ ತಂದೆಯ ರಕ್ಷಣೆಯ ಸಲುವಾಗಿ ಯುದ್ಧಸನ್ನದ್ಧನಾಗಿ ನಿಂತಿದ್ದ, ಕ್ರುದ್ಧನಾಗಿದ್ದ ಅಶ್ವತ್ಥಾಮನನ್ನು ಪ್ರತಿವಿಂಧ್ಯನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು.

ಬಿತ್ತುವ ಕಾಲದಲ್ಲಿ ರೈತರು ಗದ್ದೆಯಲ್ಲಿ ಸ್ವಲ್ಪಜಾಗವನ್ನೂ ಬಿಡದೆ ಬೀಜಾವಾಪಮಾಡುವಂತೆ–ದ್ರೋಣರ ಮಗನಾದ ಅಶ್ವತ್ಥಾಮನು ದ್ರೌಪದಿಯ ಮಗನಾದ ಪ್ರತಿವಿಂಧ್ಯನನ್ನು ಬಾಣಗಳ ಸಮೂಹಗಳಿಂದ ಮುಚ್ಚಿಬಿಟ್ಟನು. ಅರ್ಜುನನ ಮಗನಾದ, ದ್ರೌಪದಿಯ ಕುಮಾರನಾದ,

ದ್ರೋಣರಿಗೆ ಎದುರಾಗಿ ಹೋಗುತ್ತಿದ್ದ ಮಹಾರಥನಾದ ಶ್ರುತಕೀರ್ತಿಯನ್ನು ದೌಃಶಾಸನಿಯು (ದುಃಶಾಸನನ ಮಗನು) ತಡೆದು ನಿಲ್ಲಿಸಿದನು. ಅರ್ಜುನನಿಗೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ ದ್ರೌಪದಿಯ ಮಗನಾದ ಶ್ರುತಕೀರ್ತಿಯು ತನ್ನನ್ನು ಅಡ್ಡಗಟ್ಟಿದ ದೌಃಶಾಸನಿಯ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ಅವನ ಸಾರಥಿಯನ್ನೂ ಸಂಹರಿಸಿ ದ್ರೋಣರ ಸಮೀಪಕ್ಕೆ ಧಾವಿಸಿದನು. ಎರಡೂ ಸೈನ್ಯಗಳಲ್ಲಿಯೂ ಶೂರತಮನೆಂಬ ಪ್ರಸಿದ್ಧಿಯನ್ನು ಪಡೆದಿದ್ದ, ಕಳ್ಳಕಾಕರ ಧ್ವಂಸಕನಾದ, ಸಮುದ್ರಪ್ರಾಂತಗಳ ಅಧಿಪತಿಯನ್ನು ದುರ್ಯೋಧನನ ಮಗನಾದ ಲಕ್ಷ್ಮಣನು ತಡೆದನು. ಅದರಿಂದ ಕ್ರುದ್ಧನಾದ ಪಟಚ್ಚರಹಂತೃವು ಲಕ್ಷ್ಮಣನ ಧನುಸ್ಸನ್ನೂ ಮತ್ತು ಅವನ ಧ್ವಜದ ಚಿಹ್ನೆಯನ್ನೂ ಕತ್ತರಿಸಿ ಅನಂತರ ಅವನ ಮೇಲೆ ಬಾಣಗಳ ಸಮೂಹವನ್ನೇ ಸುರಿಸಿ ಆ ರಣರಂಗದಲ್ಲಿ ಬಹುವಾಗಿ ಶೋಭಿಸಿದನು. ಯುವಕನಾದ, ದ್ರೋಣರ ಸಮೀಪಕ್ಕೆ ಬರುತ್ತಿದ್ದ ದ್ರುಪದನ ಮಗನಾದ ಶಿಖಂಡಿಯನ್ನು, ಮಹಾಪ್ರಾಜ್ಞನಾದ, ಯುವಕನಾದ ವಿಕರ್ಣನು ತಡೆದು ನಿಲ್ಲಿಸಿದನು. ಕ್ರುದ್ಧನಾದ ಶಿಖಂಡಿಯು ವಿಕರ್ಣನನ್ನು ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟನು. ಒಡನೆಯೇ ಬಲಿಷ್ಠನಾದ ನಿನ್ನ ಮಗನು ಶಿಖಂಡಿಯು ಬಿಟ್ಟ ಬಾಣಗಳ ಸಮೂಹಗಳನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ ಮೋಡಗಳಿಂದ ವಿಮುಕ್ತನಾದ ಸೂರ್ಯನಂತೆಯೇ ಪ್ರಕಾಶಿಸಿದನು. ಅಂಗದನು ತನಗೂ ಮತ್ತು ದ್ರೋಣರಿಗೂ ಅಭಿಮುಖವಾಗಿ ಬರುತ್ತಿದ್ದ ವೀರನಾದ ಉತ್ತಮೌಜಸನನ್ನು ಬಾಣಗಳ ಸಮೂಹದಿಂದ ತಡೆದು ನಿಲ್ಲಿಸಿದನು. ಆ ಸಮಯದಲ್ಲಿ ಅಂಗದನಿಗೂ ಮತ್ತು ಉತ್ತಮೌಜಸನಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವು ಯುದ್ಧದಲ್ಲಿ ತೊಡಗಿದ್ದ ಇಬ್ಬರು ಯೋಧರಿಗೂ ಮತ್ತು ಅವರ ಯುದ್ಧವನ್ನೇ ವೀಕ್ಷಿಸುತ್ತಿದ್ದ ಎಲ್ಲ ಸೈನಿಕರಿಗೂ ಪ್ರೀತಿಯನ್ನುಂಟುಮಾಡುವುದಾಗಿದ್ದಿತು. ಬಲಿಷ್ಠನಾದ, ಮಹಾಧನುಷ್ಮಂತನಾದ ದುರ್ಮುಖನು ದ್ರೋಣರಿಗೆ ಅಭಿಮುಖವಾಗಿ ಬರುತ್ತಿದ್ದ ವೀರನಾದ ಪುರುಜಿತನನ್ನು ವತ್ಸದಂತಗಳೆಂಬ ಬಾಣಗಳಿಂದ ಪ್ರಹರಿಸಿ ಮುಂದಕ್ಕೆ ಬಾರದಂತೆ ತಡೆದನು. ಅದರಿಂದ ಕ್ರುದ್ಧನಾದ ಪುರುಜಿತನು ದುರ್ಮುಖನನ್ನು ಅವನ ಹುಬ್ಬಿನ ನಡುಭಾಗದಲ್ಲಿ ಪ್ರಹರಿಸಿ ದನು. ಆ ಬಾಣವು ದುರ್ಮುಖನ ಭ್ರೂಮಧ್ಯದಲ್ಲಿಯೇ ಚುಚ್ಚಿಕೊಂಡಿದ್ದು ಆ ಸಮಯದಲ್ಲಿ ಅವನ ಮುಖವು ಮೃಣಾಲದಿಂದ ಕೂಡಿದ ಕಮಲದಂತೆಯೇ

ಪ್ರಕಾಶಿಸಿತು. ಕೆಂಪುಬಣ್ಣದ ಧ್ವಜಗಳಿಂದ ಕೂಡಿದ್ದ, ದ್ರೋಣರ ಬಳಿಗೆ ಹೋಗುತ್ತಿದ್ದ ಐವರು ಕೇಕಯರಾಜಸಹೋದರರನ್ನು ಕರ್ಣನು ಬಾಣಗಳ ಸುರಿಸುವಿಕೆಯಿಂದ ತಡೆದು ನಿಲ್ಲಿಸಿದನು. ಕರ್ಣನ ಬಾಣಪ್ರಹಾರದಿಂದ ಬಹಳವಾಗಿ ಸಂತಾಪಗೊಂಡ ಆ ಐವರು ಕೇಕಯಸಹೋದರರು ಕರ್ಣನನ್ನು ಬಾಣಗಳಿಂದ ಮುಚ್ಚಿಬಿಟ್ಟರು. ಮರುಕ್ಷಣದಲ್ಲಿಯೇ ಕರ್ಣನು ತನ್ನೆದುರಾಗಿ ಬಂದ ಬಾಣಗಳೆಲ್ಲವನ್ನೂ ತುಂಡರಿಸಿ ಕೇಕಯಸಹೋದರರನ್ನು ಬಾಣಗಳ ಸಮೂಹದಿಂದ ಮುಚ್ಚಿಬಿಟ್ಟನು. ಈ ವಿಧವಾದ ಯುದ್ಧವು ಅನವರತವಾಗಿ ನಡೆಯುತ್ತಲೇ ಇದ್ದಿತು. ಈ ರೀತಿಯಲ್ಲಿ ಒಬ್ಬರ ಮೇಲೆ ಮತ್ತೊಬ್ಬರು ಬಾಣಗಳ ಮಳೆಯನ್ನೇ ಸುರಿಸುತ್ತಿರಲಾಗಿ ಅಶ್ವ-ಸೂತ-ಧ್ವಜ-ರಥಸಹಿತನಾದ ಕರ್ಣನೂ ಮತ್ತು ಅಶ್ವ-ಸೂತ-ಧ್ವಜ-ರಥಸಹಿತರಾದ ಕೇಕಯ ರಾಜಕುಮಾರರೂ ಅದೃಶ್ಯರಾಗಿ ಹೋದರು. ಪ್ರೇಕ್ಷಕರಿಗೆ ಸ್ವಲ್ಪ ಹೊತ್ತಿನವರೆಗೆ ಅವರು ಕಾಣಿಸಲೇ ಇಲ್ಲ. ಅಸಂಖ್ಯಾತವಾದ ಬಾಣಗಳು ಮಾತ್ರವೇ ಕಾಣಿಸುತ್ತಿದ್ದುವು. ದುರ್ಜಯ, ಜಯ ಮತ್ತು ವಿಜಯ ಎಂಬ ಮೂವರು ನಿನ್ನ ಮಕ್ಕಳು ದ್ರೋಣರ ಸಮೀಪಕ್ಕೆ ಬರುತ್ತಿದ್ದ ನೀಲ, ಕಾಶ್ಯ ಮತ್ತು ಜಯತ್ಸೇನರನ್ನು ಅನುಕ್ರಮವಾಗಿ ತಡೆದರು. ಸಿಂಹ, ಹುಲಿ ಮತ್ತು ಕಿರುಬಗಳಿಗೂ ಕರಡಿ, ಕಾಡುಕೋಣ ಮತ್ತು ಗೂಳಿಗಳಿಗೂ ನಡೆಯುವ ಕಾಳಗದ ರೀತಿಯಲ್ಲಿ ಅವರು ಮಾಡುತ್ತಿದ್ದ ಯುದ್ಧವು ಬಹಳ ಭಯಂಕರ ವಾಗಿಯೂ ಮತ್ತು ಪ್ರೇಕ್ಷಕರಿಗೆ ಸಂತೋಷವರ್ಧಕವಾಗಿಯೂ ಇದ್ದಿತು. ದ್ರೋಣರಿಗೆ ಅಭಿಮುಖನಾಗಿ ಬರುತ್ತಿದ್ದ ವೀರನಾದ ಸಾತ್ವತನನ್ನು ಕ್ಷೇಮ ಧೂರ್ತಿ ಮತ್ತು ಬೃಹಂತ ಎಂಬ ಇಬ್ಬರು ಸಹೋದರರು ತೀಕ್ಷ್ಣವಾದ ಬಾಣ ಗಳ ಪ್ರಯೋಗದಿಂದ ತಡೆದು ನಿಲ್ಲಿಸಿದರು. ಮದೋದಕವನ್ನು ಸುರಿಸುತ್ತಿ ರುವ ಎರಡು ಸಲಗಗಳಿಗೂ ಮತ್ತು ಸಿಂಹಕ್ಕೂ ನಡುವೆ ಅರಣ್ಯದಲ್ಲಿ ಕಾಳಗವು ನಡೆಯುವ ರೀತಿಯಲ್ಲಿ, ಕ್ಷೇಮಧೂರ್ತಿ-ಬೃಹಂತರ ಮತ್ತು ಸಾತ್ವತರ ನಡುವೆ ನಡೆಯುತ್ತಿದ್ದ ಯುದ್ಧವು ಅತ್ಯದ್ಭುತವಾಗಿರುವಂತೆ ಕಾಣುತ್ತಿದ್ದಿತು. ಸಮರ ಶ್ಲಾಘಿಗಳಾದ ದ್ರೋಣರ ಸಮೀಪಕ್ಕೆ ಬರುತ್ತಿದ್ದ ಅಂಬಷ್ಠರಾಜನನ್ನು ಕ್ರುದ್ಧನಾದ ಚೇದಿರಾಜನು ಬಾಣಗಳ ಸುರಿಸುವಿಕೆಯಿಂದ ತಡೆದು ನಿಲ್ಲಿಸಿ ದನು. ಅದರಿಂದ ಕ್ರುದ್ಧನಾದ ಅಂಬಷ್ಠನು ಮೂಳೆಯನ್ನೂ ಭೇದಿಸುವ ಶಲಾಕೆ ಯಿಂದ ಚೇದಿರಾಜನನ್ನು ಇರಿದುಬಿಟ್ಟನು. ಒಡನೆಯೇ ಚೇದಿರಾಜನು ಶರ ಯುಕ್ತವಾದ ಧನುಸ್ಸನ್ನೂ ಕೆಡವಿಕೊಂಡು ರಥದಿಂದ ಭೂಮಿಗುರುಳಿದನು.

ದ್ರೋಣರ ಬಳಿಗೆ ರಭಸದಿಂದ ಬರುತ್ತಿದ್ದ, ಕ್ರುದ್ಧನಾಗಿದ್ದ, ವೃಷ್ಣಿವಂಶೀಯನಾಗಿದ್ದ ವಾರ್ಧಕ್ಷೇಮಿಯನ್ನು ಅಕ್ಷುದ್ರರಾದ (ಕೃಪಣರಲ್ಲದ) ಶರದ್ವಂತರ ಮಕ್ಕಳಾದ ಕೃಪರು ಕ್ಷುದ್ರಗಳೆಂಬ ಬಾಣಗಳಿಂದ ತಡೆದರು. ಚಿತ್ರಯೋಧಿಗಳಾದ ಕೃಪ-ವಾರ್ಧಕ್ಷೇಮಿಗಳು ಯುದ್ಧಮಾಡುವುದನ್ನೇ ನೋಡುತ್ತಿದ್ದ ಪ್ರೇಕ್ಷಕರು ಅವರ ಯುದ್ಧದಲ್ಲಿಯೇ ಆಸಕ್ತಮನಸ್ಕರಾಗಿ ಹೋದರು. ಬೇರೆಯ ಕಡೆಗೆ ಅವರ ಗಮನವೇ ಹೋಗಲಿಲ್ಲ. ಅಲ್ಲಿ ನಡೆಯುತ್ತಿದ್ದ ಬೇರೆ ಯಾವ ಕ್ರಿಯೆಯನ್ನೂ ಅವರು ತಿಳಿಯುತ್ತಿರಲಿಲ್ಲ. (ಪ್ರೇಕ್ಷಕರ ಮನಸ್ಸೆಲ್ಲವೂ ಆ ಇಬ್ಬರು ಮಾಡುತ್ತಿದ್ದ ಯುದ್ಧದಲ್ಲಿಯೇ ಕೇಂದ್ರೀಕೃತವಾಗಿದ್ದಿತು.) ದ್ರೋಣರ ಸಮೀಪಕ್ಕೆ ಬರುತ್ತಿದ್ದ ಆಲಸ್ಯರಹಿತನಾದ ಮಣಿಮಂತರಾಜನನ್ನು ಸೌಮದತ್ತಿಯು (ಭೂರಿಶ್ರವಸನು) ದ್ರೋಣರ ಯಶಸ್ಸನ್ನು ಹೆಚ್ಚಿಸುತ್ತಾ ತಡೆದು ನಿಲ್ಲಿಸಿದನು. ಆದರೆ ಕ್ರುದ್ಧನಾದ ಮಣಿಮಂತನು ಮರುಕ್ಷಣದಲ್ಲಿಯೇ ಭೂರಿಶ್ರವಸನ ವಿಚಿತ್ರವಾದ ಧನುಸ್ಸನ್ನೂ, ಧ್ವಜ-ಪತಾಕೆಗಳನ್ನೂ, ಛತ್ರವನ್ನೂ ಕತ್ತರಿಸಿ ಸೂತನನ್ನು ಸಂಹರಿಸಿ ರಥದಿಂದ ಬೀಳಿಸಿದನು. ಯೂಪಧ್ವಜನಾದ, ಶತ್ರುಸೂದನನಾದ ಭೂರಿಶ್ರವಸನು ಒಡನೆಯೇ ರಥದಿಂದ ಕೆಳಕ್ಕೆ ಹಾರಿ ಶ್ರೇಷ್ಠವಾದ ಕತ್ತಿಯಿಂದ ಅಶ್ವ-ಸಾರಥಿ- ಧ್ವಜ-ರಥಸಹಿತನಾದ ಮಣಿಮಂತ ರಾಜನನ್ನು ತುಂಡರಿಸಿದನು. ಅನಂತರ ಸೌಮದತ್ತಿಯು ಪುನಃ ತನ್ನ ರಥವನ್ನೇರಿ ಕುಳಿತು ಕುದುರೆಗಳನ್ನು ತಾನೇ ನಿಯಂತ್ರಿಸುತ್ತಾ ನೂತನವಾದ ಧನುಸ್ಸನ್ನು ಹಿಡಿದು ಪಾಂಡವರ ಸೈನ್ಯವನ್ನು ಸಂಹರಿಸಲು ಉಪಕ್ರಮಿಸಿದನು. ಇಂದ್ರನು ಅಸುರರ ಮೇಲೆ ಆಕ್ರಮಣ ನಡೆಸುತ್ತಿದ್ದಂತೆ ದ್ರೋಣಾದಿಗಳ ಮೇಲೆ ಆಕ್ರಮಣನಡೆಸಲು ಬರುತ್ತಿದ್ದ ದುರ್ಜಯನಾದ ಪಾಂಡ್ಯರಾಜನನ್ನು ಸಮರ್ಥನಾದ ವೃಷಸೇನನು ಬಾಣಗಳ ಸಮೂಹದಿಂದ ತಡೆದು ನಿಲ್ಲಿಸಿದನು.

ಅನಂತರ ಘಟೋತ್ಕಚನು ಗದೆ, ಪರಿಘಾಯುಧ, ಖಡ್ಗ, ಪಟ್ಟಿಶ, ಕಬ್ಬಿಣದ ಗುಂಡು, ಕಲ್ಲು, ಕಡಂಗರ, ಭುಷುಂಡಿ, ಪ್ರಾಸ, ತೋಮರ, ಸಾಯಕ, ಮುಸಲ, ಮುದ್ಗರ, ಚಕ್ರ, ಭಿಂದಿಪಾಲ, ಗಂಡುಗೊಡಲಿ, ಧೂಳು, ಗಾಳಿ, ಬೆಂಕಿ, ನೀರು, ಭಸ್ಮ, ಮಣ್ಣುಹೆಂಟೆ, ಹುಲ್ಲು, ವೃಕ್ಷ–ಇವೇ ಮೊದಲಾದುವುಗಳ ಮೂಲಕವಾಗಿ ಕೌರವರ ಸೈನ್ಯವನ್ನು ಚುಚ್ಚುತ್ತಾ, ಇರಿಯುತ್ತಾ, ಭಗ್ನಗೊಳಿಸುತ್ತಾ, ನಾನಾಪ್ರಕಾರವಾಗಿ ಹಿಂಸಿಸುತ್ತಾ, ಓಡಿಸುತ್ತಾ, ದೂರಕ್ಕೆ ಬಿಸಾಡುತ್ತಾ, ಬಹುವಾಗಿ ಭಯಗೊಳಿಸುತ್ತಾ ದ್ರೋಣ

ರನ್ನು ಎದುರಿಸುವ ಸಲುವಾಗಿ ಆಗಮಿಸಿದನು. ಪರಮಕ್ರುದ್ಧನಾಗಿದ್ದ ಅಲಂಬುಷನೆಂಬ ರಾಕ್ಷಸನು ಅನೇಕ ಯುದ್ಧಗಳಲ್ಲಿ ಉಪಯೋಗಿಸುವ ನಾನಾವಿಧವಾದ ಪ್ರಹರಣಗಳಿಂದ, ಅಸ್ತ್ರ-ಶಸ್ತ್ರಗಳಿಂದ ದ್ರೋಣರಿಗೆದುರಾಗಿ ನಿಂತಿದ್ದ ಘಟೋತ್ಕಚನನ್ನು ಪ್ರಹರಿಸಿದನು. ಹಿಂದಿನ ಕಾಲದಲ್ಲಿ ಶಂಬರಾಸುರನಿಗೂ ಮತ್ತು ಇಂದ್ರನಿಗೂ ಯಾವ ರೀತಿಯಲ್ಲಿ ಘೋರವಾದ ಯುದ್ಧವು ನಡೆಯಿತೋ –ಅದೇ ರೀತಿಯಲ್ಲಿ ಶ್ರೇಷ್ಠರಾದ ಅಲಂಬುಷ-ಘಟೋತ್ಕಚರ ನಡುವೆ ಘೋರವಾದ ಯುದ್ಧವು ಪ್ರಾರಂಭವಾಯಿತು.

ಮಹಾರಾಜ! ನಿನಗೆ ಮಂಗಳವಾಗಲಿ. ನಾನು ಹೇಳಿದ ರೀತಿಯಲ್ಲಿ ನಿನ್ನ ಕಡೆಯ ರಥ-ಗಜಾಶ್ವ-ಪದಾತಿಗಳಿಗೂ ಮತ್ತು ಪಾಂಡವರ ಕಡೆಯ ರಥ-ಗಜಾಶ್ವ-ಪದಾತಿಗಳಿಗೂ ನೂರಾರು ದ್ವಂದ್ವಯುದ್ಧಗಳು ನಡೆಯ ತೊಡಗಿದುವು. ದ್ರೋಣರ ವಧೆ ಮತ್ತು ಸಂರಕ್ಷಣೆಗಳಲ್ಲಿ ಬದ್ಧಕಟಿಗಳಾಗಿದ್ದ ಪಾಂಡವ-ಕೌರವರ ಈ ಪರಿಯಾದ ಯುದ್ಧವನ್ನು ಹಿಂದೆ ಯಾರೂ ನೋಡಿಯೂ ಇರಲಿಲ್ಲ; ಕೇಳಿಯೂ ಇರಲಿಲ್ಲ. ಪ್ರಭುವೇ! ಆ ರಣರಂಗದಲ್ಲಿ ವಿಸ್ತಾರವಾಗಿ ಹರಡಿದ್ದ ಅನೇಕ ಬಗೆಯ ಯುದ್ಧಗಳು ಕಂಡುಬರುತ್ತಿದ್ದುವು. ಅವನ್ನು ನೋಡುತ್ತಿದ್ದ ಪ್ರೇಕ್ಷಕರು–'ಈ ಯುದ್ಧವು ಬಹು ಘೋರವಾದುದು; ಇದು ಬಹಳ ವಿಚಿತ್ರವಾದ ಯುದ್ಧ; ಇದು ಭಯಂಕರವಾದ ಯುದ್ಧ'–ಎಂದು ಉದ್ಗಾರಹಾಕುತ್ತಿದ್ದರು."

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಭಗದತ್ತನ ಆನೆಯೊಡನೆ ಭೀಮಸೇನನ ಯುದ್ಧ : ಆನೆಯ ಮತ್ತು ಭಗದತ್ತನ ಭಯಂಕರಪರಾಕ್ರಮ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ನೀನು ಹೇಳಿದ ರೀತಿಯಲ್ಲಿ ಪಾಂಡವಯೋಧರು ಯುದ್ಧಕ್ಕೆ ಹಿಂದಿರುಗಲಾಗಿ ತಮ-ತಮಗೆ ಅನುರೂಪರಾದವರೊಡನೆ ಯುದ್ಧದಲ್ಲಿ ತೊಡಗಲಾಗಿ ವೇಗಶಾಲಿಗಳಾದ ನನ್ನ ಕಡೆಯವರೂ ಮತ್ತು ಪಾಂಡವರೂ ಯಾವ ರೀತಿಯಲ್ಲಿ ಯುದ್ಧಮಾಡಿದರು? ಸಂಶಪ್ತಕರನ್ನು

ಆಕ್ರಮಿಸಲು ಹೋದ ಅರ್ಜುನನೇನು ಮಾಡಿದನು ಅಥವಾ ತಮ್ಮ ಮೇಲೆ ಅವ್ಯಾಹತವಾಗಿ ಬಾಣಗಳ ಮಳೆಗರೆಯುತ್ತಿದ್ದ ಅರ್ಜುನನ ವಿಷಯದಲ್ಲಿ ಸಂಶಪ್ತಕರು ಏನು ಮಾಡಿದರು?–ಈ ಎಲ್ಲ ವಿಷಯಗಳನ್ನೂ ನನಗೆ ವಿಸ್ತಾರವಾಗಿ ಹೇಳು."

"ಮಹಾರಾಜ! ನಾನು ಹೇಳಿದ ರೀತಿಯಲ್ಲಿ ಪಾಂಡವಯೋಧರು ಪ್ರತಿನಿವೃತ್ತರಾಗಲಾಗಿ ಮತ್ತು ತಮ್ಮ-ತಮ್ಮ ಭಾಗಕ್ಕೆ ಸಿಕ್ಕಿದ ಶತ್ರುಪಕ್ಷದ ಯೋಧರೊಡನೆ ಯುದ್ಧದಲ್ಲಿ ತೊಡಗಿರಲಾಗಿ, ಅಪಾರವಾದ ಗಜಸೈನ್ಯದೊಡನೆ ನಿನ್ನ ಮಗನೇ ಸ್ವತಃ ಭೀಮನನ್ನು ಆಕ್ರಮಿಸಲು ಹೋದನು. ಸಲಗನಿಂದ ಕಾಳಗಕ್ಕೆ ಸೆಳೆಯಲ್ಪಟ್ಟ ಮತ್ತೊಂದು ಸಲಗದಂತೆ-ಗೂಳಿಯಿಂದ ಕಾಳಗಕ್ಕೆ ಸೆಳೆಯಲ್ಪಟ್ಟ ಮತ್ತೊಂದು ಗೂಳಿಯಂತೆ ಸ್ವಯಂ ರಾಜನಿಂದಲೇ ಸಮಾಹೂತನಾದ ಭೀಮಸೇನನು ಗಜಸೈನ್ಯದಮೇಲೆ ದಾಳಿಮಾಡಲು ಉಪಕ್ರಮಿಸಿದನು. ಕುರುಶ್ರೇಷ್ಠ! ಯುದ್ಧಕುಶಲನಾದ ಮತ್ತು ಹತ್ತು ಸಾವಿರ ಆನೆಗಳ ಬಲದಿಂದ ಕೂಡಿದ್ದ ಭೀಮಸೇನನು ಬಹಳ ಬೇಗ ದುರ್ಯೋಧನನ ಗಜಸೈನ್ಯವನ್ನು ಧ್ವಂಸಮಾಡಿಬಿಟ್ಟನು. ದುರ್ಯೋಧನನ ಗಜಸೈನ್ಯದಲ್ಲಿದ್ದ ಆನೆಗಳು ಪರ್ವತೋಪಮವಾಗಿದ್ದುವು. ಎಲ್ಲ ಕಡೆಗಳಿಂದಲೂ ಮದೋದಕ ವನ್ನು ಸುರಿಸುತ್ತಿದ್ದುವು. ಹೀಗಿದ್ದರೂ ಅವುಗಳು ಭೀಮಸೇನನ ನಾರಾಚಪ್ರಹಾರದಿಂದ ಮದರಹಿತವಾದುವುಗಳಾಗಿ ಯುದ್ಧದಿಂದ ಹಿಮ್ಮೆಟ್ಟಿ ದುವು. ಯಾವ ರೀತಿಯಲ್ಲಿ ವಾಯುವು ಮೋಡಗಳ ಸಮೂಹಗಳನ್ನು ಛಿದ್ರ-ಛಿದ್ರಗೊಳಿಸುವುದೋ ಅದೇ ರೀತಿಯಲ್ಲಿ ವಾಯುವಿನ ಮಗನಾದ ಭೀಮಸೇನನು ದುರ್ಯೋಧನನ ಗಜಸೈನ್ಯಗಳನ್ನು ಚೆಲ್ಲಾ-ಪಿಲ್ಲಿಯಾಗಿ ಮಾಡಿಬಿಟ್ಟನು. ಎಲ್ಲ ಲೋಕಗಳಲ್ಲಿಯೂ ತನ್ನ ಕಿರಣಗಳನ್ನು ಪ್ರಸರಿಸುತ್ತಿರುವ ಉದಯಿಸಿದ ಸೂರ್ಯನಂತೆ ಭೀಮಸೇನನು ಗಜಸೈನ್ಯಗಳ ಮೇಲೆ ಬಾಣಗಳ ಮಳೆಗರೆಯುವಿಕೆಯಿಂದ ಪ್ರಕಾಶಿಸಿದನು. ಆಕಾಶದಲ್ಲಿ ಸೂರ್ಯನ ಕಿರಣಗಳಿಂದ ನಾನಾವಿಧವಾದ ಮೋಡಗಳು ಪ್ರಕಾಶಮಾನವಾಗಿ ಕಾಣು ವಂತೆ–ಭೀಮನ ಬಾಣಗಳಿಂದ ಪ್ರಹೃತವಾದ ಆನೆಗಳು ಶರೀರಾದ್ಯಂತವಾಗಿ ಬಾಣಗಳಿಂದಲೇ ಮುಚ್ಚಲ್ಪಟ್ಟು ಬಹಳವಾಗಿ ಪ್ರಕಾಶಿಸಿದುವು.

ಈ ರೀತಿಯಲ್ಲಿ ಗಜಸೈನ್ಯಗಳನ್ನು ಸಂಹಾರಮಾಡುತ್ತಿದ್ದ, ಅನಿಲಾತ್ಮಜ

ನಾದ ಭೀಮಸೇನನ ಬಳಿಗೆ ಕ್ರುದ್ಧನಾದ ದುರ್ಯೋಧನನು ಬಂದು ನಿಶಿತವಾದ ಬಾಣಗಳಿಂದ ಭೀಮನನ್ನು ಪ್ರಹರಿಸಿದನು. ದುರ್ಯೋಧನನು ಬಿಟ್ಟ ಬಾಣಗಳ ಪೆಟ್ಟುತಿಂದೊಡನೆಯೇ ಭೀಮಸೇನನ ಕಣ್ಣುಗಳು ಗಾಯ ದಿಂದ ಹೊರಡುವ ರಕ್ತದಂತೆ ಕೆಂಪಾದುವು. ಭೀಮಸೇನನು ಕ್ಷಿತಿಪಾಲನಾದ ದುರ್ಯೋಧನನನ್ನು ಕ್ಷಣಮಾತ್ರದಲ್ಲಿ ನಾಶಪಡಿಸುವ ಇಚ್ಛೆಯಿಂದ ರೆಕ್ಕೆಗಳನ್ನೊಳಗೊಂಡ ನಿಶಿತವಾದ ಬಾಣಗಳಿಂದ ಅವನನ್ನು ಪ್ರಹರಿಸಿದನು. ದುರ್ಯೋಧನನ ಶರೀರಾದ್ಯಂತವಾಗಿ ಭೀಮನು ಬಿಟ್ಟ ಬಾಣಗಳು ಚುಚ್ಚಿಕೊಂಡುವು. ಅದರಿಂದ ಕ್ರುದ್ಧನಾದ ದುರ್ಯೋಧನನು ನಗುತ್ತಿರು ವವನಂತೆ ತೋರ್ಪಡಿಸಿಕೊಳ್ಳುತ್ತಾ ಸೂರ್ಯರಶ್ಮಿಗೆ ಸಮಾನವಾದ ಥಳ-ಥಳಿಸುವ ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ ಭೀಮಸೇನನು ರತ್ನಮಯವಾದ ಚಿತ್ರಧ್ವಜದ ಮಧ್ಯಭಾಗ ದಲ್ಲಿದ್ದ ಮಣಿಮಯವಾದ ನಾಗವನ್ನೂ (ಆನೆಯನ್ನು) ಮತ್ತು ದುರ್ಯೋಧನನ ಧನುಸ್ಸನ್ನೂ ಭಲ್ಲಗಳೆಂಬ ಎರಡು ಬಾಣಗಳಿಂದ ಬಹಳ ಶೀಘ್ರವಾಗಿ ಕತ್ತರಿಸಿದನು. ಈ ರೀತಿಯಲ್ಲಿ ಭೀಮಸೇನನು ದುರ್ಯೋಧನ ನನ್ನು ಪೀಡಿಸುತ್ತಿರುವುದನ್ನು ಕಂಡು ಅವನನ್ನು ಅಲ್ಲಿಂದ ಕದಲಿಸುವ ಇಚ್ಛೆಯಿಂದ ಮದಗಜದ ಮೇಲೆ ಕುಳಿತಿದ್ದ ಅಂಗರಾಜನು ಭೀಮನ ಬಳಿಗೆ ಬಂದನು. ಮೇಘದ ಗರ್ಜನೆಗೆ ಸಮಾನವಾಗಿ ಗರ್ಜನೆ ಮಾಡುತ್ತಾ ತನ್ನ ಮೇಲೆ ಬೀಳಲು ಬರುತ್ತಿದ್ದ ಮದಗಜವನ್ನು ನೋಡಿ ಭೀಮನು ಬಹಳ ಶೀಘ್ರವಾಗಿ ನಾರಾಚಗಳಿಂದ ಆನೆಯ ಕುಂಭಸ್ಥಳದ ಮಧ್ಯಭಾಗದಲ್ಲಿ ಪ್ರಹರಿಸಿದನು. ಭೀಮನು ಬಿಟ್ಟ ಆ ನಾರಾಚಗಳು ಆನೆಯ ಶರೀರವನ್ನು ಸೀಳಿಕೊಂಡು ಹೊರಬಂದು ಭೂಮಿಯೊಳಗೆ ಸೇರಿಹೋದುವು. ಅನಂತರ ಆ ಮದಗಜವು–ವಜ್ರಾಯುಧಪ್ರಹಾರದಿಂದ ಕೆಳಕ್ಕೆ ಬಿದ್ದ ಪರ್ವತದಂತೆ ಅಸುನೀಗಿ ಕೆಳಗುರುಳಿತು. ಆದರೆ ಆ ಸಮಯದಲ್ಲಿಯೂ ಆನೆಯ ಮೇಲಿದ್ದ ಮ್ಲೇಚ್ಛಾಧಿಪತಿಯಾದ ಅಂಗರಾಜನು ಆನೆಯಿಂದ ಕೆಳಗಿಳಿದಿರಲಿಲ್ಲ. ಅಂಗರಾಜನು ಆನೆಯನ್ನು ಬಿಟ್ಟು ಕೆಳಕ್ಕೆ ಹಾರಲು ಯತ್ನಿಸುತ್ತಿದ್ದಾಗ, ಬಹಳ ಶೀಘ್ರವಾಗಿ ಕಾರ್ಯಮಾಡುವ ಸ್ವಭಾವವುಳ್ಳ ಭೀಮಸೇನನು, (೧೫೧)–೧೬

ಅಂಗರಾಜನು ಕೆಳಕ್ಕೆ ಬೀಳುತ್ತಿರುವಾಗಲೇ ಭಲ್ಲವೆಂಬ ಬಾಣದಿಂದ ಅವನ ಶಿರಸ್ಸನ್ನು ಕತ್ತರಿಸಿಬಿಟ್ಟನು. ವೀರನಾದ ಅಂಗರಾಜನು ಪ್ರಾಣತೊರೆದು ಕೆಳಕ್ಕೆ ಬೀಳಲಾಗಿ, ಅವನ ಸೈನ್ಯವೆಲ್ಲವೂ ಪಲಾಯನಮಾಡತೊಡಗಿತು. ಗಜಾಶ್ವ-ರಥಸೈನ್ಯಗಳು ಗಾಬರಿಗೊಂಡು ತಮ್ಮ ಕಡೆಯ ಪದಾತಿಸೈನಿಕರನ್ನೇ ತುಳಿದುಕೊಂಡು ಧ್ವಂಸಮಾಡುತ್ತಾ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. ಅಂಗರಾಜನ ಸೈನ್ಯವೆಲ್ಲವೂ ಭಗ್ನವಾಗಿ ಹೋಗಲಾಗಿ, ಅಳಿದುಳಿದ ಸೈನಿಕರು ಪಲಾಯನಮಾಡುತ್ತಿರಲಾಗಿ, ಪ್ರಾಗ್ಜ್ಯೋತಿಷಪುರಕ್ಕೆ ಅಧಿಪತಿಯಾದ ಭಗದತ್ತನು ತನ್ನ ಆನೆಯೊಡನೆ ಭೀಮಸೇನನನ್ನು ಎದುರಿಸಿದನು. ದೇವೇಂದ್ರನು ಯಾವ ಐರಾವತವೆಂಬ ಆನೆಯಮೇಲೆ ಕುಳಿತು



ದೈತ್ಯ-ದಾನವರನ್ನು ಎದುರಿಸಿದ್ದನೋ ಅದೇ ಐರಾವತದ ವಂಶದಲ್ಲಿ ಹುಟ್ಟಿದ್ದ ಆನೆಯಮೇಲೆ ಕುಳಿತಿದ್ದ ಭಗದತ್ತನು ಭೀಮಸೇನನನ್ನು ಆಕ್ರಮಿಸಿದನು. ಭಗದತ್ತನ ಶ್ರೇಷ್ಠವಾದ ಆ ಗಜವು ತನ್ನೆರಡು ಮುಂಗಾಲುಗಳಿಂದಲೂ ಮತ್ತು

ಸುತ್ತಿಕೊಂಡಿರುವ ಸೊಂಡಿಲಿನಿಂದಲೂ ಬಹಳ ಬೇಗ ಭೀಮನ ಮೇಲೆ ಬೀಳಲು ಹೋಯಿತು. ಬಹುವಾಗಿ ಕೋಪಗೊಂಡಿದ್ದ ಭಗದತ್ತನ ಆನೆಯು ತನ್ನ ಚಿಕ್ಕ ಕಣ್ಣುಗಳನ್ನೇ ಅಗಲವಾಗಿ ತೆರೆದುಕೊಂಡು ಭೀಮಸೇನನನ್ನು ಮಥಿಸಿಬಿಡುವುದೋ ಎಂಬ ರೀತಿಯಲ್ಲಿ ಅಶ್ವಸಹಿತವಾದ ಭೀಮಸೇನನ ರಥವನ್ನು ನುಚ್ಚುನೂರಾಗಿ ಮಾಡಿಬಿಟ್ಟಿತು. ಆ ಸಮಯದಲ್ಲಿ ಭೀಮಸೇನನು ರಥದಿಂದ ನೆಗೆದು ಕಾಲ್ನಡಿಗೆಯಲ್ಲಿಯೇ ಆನೆಯ ಬಳಿಗೆ ಓಡಿಹೋಗಿ ಅದರ ಶರೀರದ ಪಕ್ಕದಲ್ಲಿಯೇ ಅವಿತಿಟ್ಟುಕೊಂಡನು. ಭೀಮಸೇನನು *ಅಂಜಲಿಕಾ ವೇಧವನ್ನು ತಿಳಿದಿದ್ದವನಾದುದರಿಂದ ಆನೆಗೆ ಹೆದರಿ ಓಡಿಹೋಗಲಿಲ್ಲ.

**ಗಾತ್ರಾಭ್ಯನ್ತರಗೋ ಭೂತ್ವಾ ಕರೇಣಾತಾಡಯನ್ಮುಹುಃ**
**ಲಾಲಯಾಮಾಸ ತಂ ನಾಗಂ ವಧಕಾಂಕ್ಷಿಣಮವ್ಯಯಮ್ ॥೨೪॥**

ಭೀಮಸೇನನು ಆನೆಯ ಕೆಳಭಾಗದಲ್ಲಿ ಸೇರಿಕೊಂಡು, ಅವಿನಾಶಿಯಾದ ಮತ್ತು ತನ್ನನ್ನು ವಧಿಸಲು ಚಡಪಡಿಸುತ್ತಿದ್ದ ಆನೆಯ 'ಅಂಜಲಿಕಾ' ಪ್ರದೇಶವನ್ನು ಕೈಯಿಂದ ಬಾರಿ-ಬಾರಿಗೂ ಪ್ರಹರಿಸುತ್ತಾ ಆ ಆನೆಯನ್ನು ಲಾಲನೆಮಾಡುತ್ತಿದ್ದನು. ಕಾಂತಿಯುಕ್ತವಾಗಿದ್ದ ಮತ್ತು ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿದ್ದ ಆ ಆನೆಯು ವೃಕೋದರನನ್ನು ಹುಡುಕುತ್ತಾ ಕುಂಬಾರನ ಚಕ್ರದೋಪಾದಿಯಲ್ಲಿ ಗರ-ಗರನೆ ಸುತ್ತತೊಡಗಿತು. ಅನಂತರ ಭೀಮಸೇನನು ತಾನು ಅವಿತಿಟ್ಟುಕೊಂಡಿದ್ದ ಸುಪ್ರತೀಕದ ಶರೀರದ ಕೆಳಭಾಗದಿಂದ ಹೊರಬಂದು ಅದರೊಡನೆ ಸೆಣಸಾಡಲು ನಿಂತನು. ಒಡನೆಯೇ ಆನೆಯು ತನ್ನ ಸೊಂಡಿಲಿನಿಂದ ಭೀಮಸೇನನನ್ನು ಬಗ್ಗಿಸಿ

---

*ಅಂಜಲಿಕಾವೇಧ ಆನೆಯ ಕೆಳಭಾಗದಲ್ಲಿ ಅಂಜಲಿಕಾ ಎಂಬ ಶರೀರದ ಭಾಗವಿದೆ. ಅದನ್ನು ಎರಡು ಕೈಗಳಿಂದಲೂ ಮೃದುವಾಗಿ ತಟ್ಟುತ್ತಿದ್ದರೆ ಆನೆಗೆ ಪರಮಾನಂದವಾಗುತ್ತದೆ. ಆ ಸಮಯದಲ್ಲಿ ಅದು ತನ್ನ ಮಾವಟಿಗನೇ ಸತ್ತುಹೋದರೂ ಲಕ್ಷ್ಯಕೊಡುವುದಿಲ್ಲ. ಭೀಮಸೇನನು ಅಂಜಲಿಕಾವೇಧದ ವಿಷಯವನ್ನು ತಿಳಿದಿದ್ದುದರಿಂದ ಭಗದತ್ತನ ಆನೆಯ ಕೆಳಭಾಗದಲ್ಲಿ ಹುದುಗಿಕೊಂಡು ಅಂಜಲಿಕಾವೇಧನ ಮಾಡುತ್ತಾ ಆನೆಗೆ ಮೈಮರೆಸಿದನು. ಮುಂದಿನ ಶ್ಲೋಕದಿಂದ ಈ ವಿಷಯವನ್ನು ಅರಿತುಕೊಳ್ಳಬಹುದಾಗಿದೆಯೇ ಹೊರತು ಅಂಜಲಿಕಾ ಶಬ್ದಕ್ಕೆ ಈ ಅರ್ಥವು ಯಾವ ನಿಘಂಟಿನಲ್ಲಿಯೂ ಕಂಡುಬರುವುದಿಲ್ಲ. ಅಂಜಲಿಕಾ ಎಂದರೆ ಚಿಟ್ಟೆಲಿ ಅಥವಾ ಸುಂಡಿಲಿ ಎಂದಾಗುತ್ತದೆ. ಅಂಜಲಿಕಾವೇಧ ಎಂದರೆ ಇಲಿಯಬಿಲ ಎಂದಾಗುತ್ತದೆ.

ತನ್ನ ಎರಡು ಮಂಡಿಗಳಿಂದಲೂ ಪ್ರಹರಿಸಿತು. ಮರುಕ್ಷಣದಲ್ಲಿಯೇ ಅದು ಭೀಮಸೇನನನ್ನು ಸೊಂಡಿಲಿನಿಂದ ಕುತ್ತಿಗೆಯಲ್ಲಿ ಹಿಡಿದು ಸಂಹರಿಸಲೂ ಇಚ್ಛಿಸಿತು. ಆದರೆ ಅಷ್ಟರೊಳಗಾಗಿ ಭೀಮಸೇನನು ಆನೆಯನ್ನು ಸುತ್ತಿಸಿ ಅದಕ್ಕೆ ಭ್ರಾಂತಿಯನ್ನುಂಟುಮಾಡಿ ಸೊಂಡಿಲಿನಿಂದ ತಪ್ಪಿಸಿಕೊಂಡು ಬಿಟ್ಟನು. ಪುನಃ ವೀರನಾದ ಭೀಮಸೇನನು ಸುಪ್ರತೀಕದ ಶರೀರದೊಳಗೆ ಸೇರಿಕೊಂಡು ಅಂಜಲಿಕಾವೇಧವನ್ನು ಮಾಡುತ್ತಾ ತನ್ನ ಪಕ್ಷದ ಮತ್ತೊಂದು ಆನೆಯು ಸುಪ್ರತೀಕಕ್ಕೆ ಎದುರಾಗಿ ನಿಲ್ಲುವುದನ್ನು ಪ್ರತೀಕ್ಷಿಸುತ್ತಿದ್ದನು.

ಆದರೆ ಅವನ ನಿರೀಕ್ಷೆಯಂತೆ ಅವನ ಪಕ್ಷದ ಯಾವ ಆನೆಯೂ ಬರಲಿಲ್ಲ ಮತ್ತು ಆ ಸ್ಥಿತಿಯಲ್ಲಿ ಹೆಚ್ಚು ಕಾಲ ಇರಲೂ ಸಾಧ್ಯವಾಗಲಿಲ್ಲ. ಆದುದರಿಂದ ಮಹಾಬಲಿಷ್ಠನಾದ, ಮಹಾರಥನಾದ ಭೀಮನು ಸುಪ್ರತೀಕದ ಶರೀರದಿಂದ ಹೊರಬಂದು ಶೀಘ್ರಗತಿಯಲ್ಲಿ ಓಡಿಹೋದನು. ಒಡನೆಯೇ ಸೈನಿಕರ ಮಧ್ಯದಲ್ಲಿ ದೊಡ್ಡ ಕೋಲಾಹಲಶಬ್ದವೆದ್ದಿತು. 'ಅಯ್ಯೋ! ಸುಪ್ರತೀಕವು ಭೀಮಸೇನನನ್ನು ಕೊಂದೇಬಿಟ್ಟಿತು.'–ಎಂಬುದಾಗಿ ಎಲ್ಲರೂ ಕಿರುಚಿಕೊಂಡರು. ಆ ಮಹಾನಾಗದಿಂದ ಭಯಗೊಂಡ ಪಾಂಡವರ ಸೈನ್ಯವು ವೃಕೋದರನಿದ್ದ ಕಡೆಗೆ ಅವಸರದಿಂದ ಧಾವಿಸಿತು. ಯುಧಿಷ್ಠಿರರಾಜನೂ ಸಹ ವೃಕೋದರನು ಸತ್ತುಹೋದನೆಂದೇ ಭಾವಿಸಿ ಪಾಂಚಾಲದೇಶದ ಸೈನಿಕರೊಡನೆ ಭಗದತ್ತನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದನು.

ಶತ್ರುಗಳಿಗೆ ಸಂತಾಪವನ್ನುಂಟುಮಾಡುವ, ರಥಿಗಳಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಮಹಾರಥನಾದ ಭಗದತ್ತನನ್ನು ಎಲ್ಲ ಕಡೆಗಳಿಂದಲೂ ಆಕ್ರಮಿಸಿ ತೀಕ್ಷ್ಣವಾದ ನೂರಾರು-ಸಾವಿರಾರು ಬಾಣಗಳಿಂದ ಅವನನ್ನು ಮುಚ್ಚಿಬಿಟ್ಟನು. ಪರ್ವತರಾಜನಾದ ಭಗದತ್ತನು ಅಂಕುಶದಿಂದಲೇ ತನ್ನ ಮೇಲೆ ಬೀಳಲಿದ್ದ ಬಾಣಗಳೆಲ್ಲವನ್ನೂ ನಿವಾರಿಸಿಕೊಂಡು ಆನೆಯನ್ನು ಮುಂದೂಡಿ ಪಾಂಡು-ಪಾಂಚಾಲಯೋಧರನ್ನು ಜಜ್ಜಿಬಿಟ್ಟನು.

ಮಹಾರಾಜ! ವೃದ್ಧನಾದ ಭಗದತ್ತನು ರಣಾಂಗಣದಲ್ಲಿ ಆನೆಯ ಮೂಲಕವಾಗಿ ತೋರಿಸಿದ ಪರಾಕ್ರಮದ ಅದ್ಭುತದೃಶ್ಯವನ್ನು ನಾವು ಆಗ

ನೋಡಿದೆವು. ಅನಂತರ ದಶಾರ್ಣರಾಜನು ಮದೋದಕವನ್ನು ಸುರಿಸುತ್ತಿದ್ದ, ಶೀಘ್ರವಾಗಿ ಹೋಗುವುದಾಗಿದ್ದ ಮತ್ತು ವಕ್ರಗತಿಯಿಂದ ಕೂಡಿದ್ದ ಆನೆಯ ಮೇಲೆ ಕುಳಿತು ಭಗದತ್ತನನ್ನು ಆಕ್ರಮಿಸಿದನು. ಹಿಂದಿನಕಾಲದಲ್ಲಿ ರೆಕ್ಕೆಗಳಿಂದ ಕೂಡಿದ್ದ, ವೃಕ್ಷಸಹಿತವಾದ ಎರಡು ಪರ್ವತಗಳ ನಡುವೆ ಯುದ್ಧವು ನಡೆಯುತ್ತಿದ್ದಂತೆ–ಭಯಂಕರಾಕಾರದ ಆ ಎರಡು ಆನೆಗಳ ನಡುವೆ ಭೀಕರವಾದ ಯುದ್ಧವು ಪ್ರಾರಂಭವಾಯಿತು. ಪ್ರಾಗ್ಜ್ಯೋತಿಷದ ಅಧಿಪತಿಯಾದ ಭಗದತ್ತನ ಸುಪ್ರತೀಕವು ಹಿಂದಕ್ಕೆ ಸರಿದು ಪುನಃ ರಭಸದಿಂದ ಮುಂದಕ್ಕೆ ಬಂದು ದಶಾರ್ಣಾಧಿಪತಿಯ ಆನೆಯ ಪಾರ್ಶ್ವಭಾಗದಲ್ಲಿ ಪ್ರಹರಿಸಿ ಅದನ್ನು ಸೀಳಿ ಕೆಳಕ್ಕೆ ಬೀಳಿಸಿತು. ಅನಂತರ ಭಗದತ್ತನು ಸೂರ್ಯಕಿರಣಗಳಂತೆ ಥಳ-ಥಳಿಸುತ್ತಿದ್ದ ಏಳು ತೋಮರಗಳಿಂದ–ಆನೆಯಮೇಲೆ ಕುಳಿತಿದ್ದ ಮತ್ತು ಆನೆಯು ಕೆಳಕ್ಕೆ ಬಿದ್ದಾಗ ಆಸನದಿಂದ ಜಾರಿ ಕೆಳಕ್ಕೆ ಬೀಳುವುದರಲ್ಲಿದ್ದ ದಶಾರ್ಣರಾಜನನ್ನು ಪ್ರಹರಿಸಿ ಸಂಹರಿಸಿದನು. ಆಗ ಯುಧಿಷ್ಠಿರನು ಭಗದತ್ತರಾಜನನ್ನು ಬಾಣಗಳಿಂದ ಗಾಯಗೊಳಿಸುತ್ತಾ ದೊಡ್ಡದಾದ ಒಂದು ರಥಸೈನ್ಯದೊಡನೆ ಅವನನ್ನು ಆಕ್ರಮಿಸಿದನು. ಪರ್ವತದ ಮೇಲಿರುವ ಅರಣ್ಯದ ಮಧ್ಯಭಾಗದಲ್ಲಿ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನೋಪಾದಿಯಲ್ಲಿ–ರಥಗಳಿಂದ ಸುತ್ತಲೂ ಪರಿವೃತನಾಗಿ ಆನೆಯ ಮೇಲೆ ಕುಳಿತಿದ್ದ ಭಗದತ್ತನು ಪ್ರಕಾಶಿಸಿದನು. ಬಾಣಗಳ ಮಳೆಗರೆಯುತ್ತಿದ್ದ ಉಗ್ರಧನುಷ್ಮಂತರಾದ ರಥಿಗಳ ಮಂಡಲವು ಎಲ್ಲ ಕಡೆಗಳಿಂದಲೂ ಭಗದತ್ತನ ಆನೆಯಮೇಲೆ ಆಕ್ರಮಣವನ್ನು ನಡೆಸುತ್ತಿದ್ದಿತು. ಆ ಸಮಯದಲ್ಲಿ ಭಗದತ್ತನ ಆನೆಯು ನಾಲ್ಕು ದಿಕ್ಕುಗಳಲ್ಲಿಯೂ ಸುತ್ತಾಡುತ್ತಿದ್ದಿತು. ಆಗ ಭಗದತ್ತನು ಆ ಮಹಾಗಜವನ್ನು ಹತೋಟಿಗೆ ತೆಗೆದುಕೊಂಡು ಬಹಳ ಶೀಘ್ರವಾಗಿ ಸಾತ್ಯಕಿಯ ರಥದ ಮೇಲೆ ನುಗ್ಗಿಸಿದನು. ಶಿನಿಯ ಮೊಮ್ಮಗನಾದ ಸಾತ್ಯಕಿಯ ರಥವನ್ನು ಆ ಮಹಾಗಜವು ಸೊಂಡಿಲಿನಿಂದ ಹಿಡಿದು ವೇಗವಾಗಿ ದೂರಕ್ಕೆಸೆಯಿತು. ಆದರೆ ಅಷ್ಟರೊಳಗಾಗಿ ಸಾತ್ಯಕಿಯು ರಥದಿಂದ ಹಾರಿ ದೂರಕ್ಕೆ ಹೋಗಿದ್ದನು. ಮಹಾಗಜವು ಸಾತ್ಯಕಿಯ ರಥವನ್ನು ದೂರಕ್ಕೆಸೆದರೂ ಸಾರಥಿಯಾಗಲೀ, ಕುದುರೆಗಳಾಗಲೀ ಸತ್ತುಹೋಗಲಿಲ್ಲ. ಕುಕ್ಕರಿಸಿದುವು. ಸಾರಥಿಯೂ ಕೆಳಕ್ಕೆ ಬಿದ್ದನು. ಮರುಕ್ಷಣ

ದಲ್ಲಿಯೇ ಸಾರಥಿಯು ಮೇಲೆದ್ದು ದೊಡ್ಡವಾಗಿದ್ದ ಸಿಂಧೂದೇಶದ ಆ ಕುದುರೆಗಳನ್ನು ಮೇಲೆಬ್ಬಿಸಿ, ತಾನೂ ಸಹ ಹಾರಿ ರಥದಲ್ಲಿ ಕುಳಿತು ಸಾತ್ಯಕಿಯ ಬಳಿಗೆ ಬಂದು ರಥವನ್ನು ಅವನ ಸಮೀಪದಲ್ಲಿ ನಿಲ್ಲಿಸಿದನು. ಈ ಮಧ್ಯದಲ್ಲಿ ಭಗದತ್ತನ ಆನೆಯು ಸಾತ್ಯಕಿಯ ರಥವಿದ್ದ ಸ್ಥಳವನ್ನೇ ನಿರ್ಗಮನ ಮಾರ್ಗವನ್ನಾಗಿ ಮಾಡಿಕೊಂಡು ಅತ್ಯವಸರದಿಂದ ರಥಮಂಡಲದಿಂದ ಹೊರಕ್ಕೆ ಬಂದಿತು. ಅನಂತರ ಅದು ಎಲ್ಲ ರಾಜರನ್ನೂ ಸೊಂಡಿಲಿನಿಂದ ಹಿಡಿದೆಳೆದು ದೂರಕ್ಕೆ ಎಸೆಯುತ್ತಿದ್ದಿತು. ಶೀಘ್ರವಾದ ಗಮನವಿದ್ದ ಭಗದತ್ತನ ಆನೆಗೆ ಭಯಗೊಂಡ ಆ ರಾಜರು, ಒಂದೇ ಆನೆಯು ತಮ್ಮೊಡನೆ ಕಾದಾಡುತ್ತಿದ್ದರೂ ನೂರಾರು ಆನೆಗಳು ತಮ್ಮೊಡನೆ ಕಾದಾಡುತ್ತಿವೆಯೆಂದು ಭಾವಿಸಿದರು. ( ನೂರಾರು ಆನೆಗಳ ಕಾರ್ಯವನ್ನು ಭಗದತ್ತನ ಆ ಒಂದು ಆನೆಯೇ ಮಾಡಿ ಮುಗಿಸುತ್ತಿದ್ದಿತು.)

ಐರಾವತದ ಮೇಲೆ ಕುಳಿತು ಇಂದ್ರನು ದಾನವರನ್ನು ನಾಶಗೊಳಿಸುತ್ತಿದ್ದಂತೆ-ಭಗದತ್ತನು ಸುಪ್ರತೀಕದ ಮೇಲೆ ಕುಳಿತು ಪಾಂಡವರ ಸೈನ್ಯವನ್ನು ಎಡೆಬಿಡದೆ ನಾಶಗೊಳಿಸುತ್ತಿದ್ದನು. ಆ ಸಮಯದಲ್ಲಿ ಆನೆಯ ಉಪಟಳವನ್ನು ಸಹಿಸಲಾರದೆ ಓಡಿಹೋಗುತ್ತಿದ್ದ ಪಾಂಡವಸೈನಿಕರ ಆನೆ-ಕುದುರೆಗಳು ಮಾಡುತ್ತಿದ್ದ ಭಯಂಕರವಾದ ಚೀತ್ಕಾರಶಬ್ದವು ಎಲ್ಲೆಲ್ಲಿಯೂ ಕೇಳಿಬರುತ್ತಿದ್ದಿತು. ಯುದ್ಧದಲ್ಲಿ ಭಗದತ್ತನು ಪಾಂಡವಸೈನಿಕರನ್ನು ಚದುರಿಸಿ ಓಡಿಸಿಬಿಡಲಾಗಿ, ಪರಮಕ್ರುದ್ಧನಾದ ಭೀಮಸೇನನು ಪುನಃ ಭಗದತ್ತನನ್ನು ಆಕ್ರಮಿಸಿದನು. ಆ ಸಮಯದಲ್ಲಿ ಭಗದತ್ತನ ಕಡೆಗೆ ರಭಸದಿಂದ ಬರುತ್ತಿದ್ದ ಭೀಮಸೇನನ ರಥದ ಕುದುರೆಗಳ ಮೇಲೆ ಭಗದತ್ತನ ಆನೆಯು ತನ್ನ ಸೊಂಡಿಲಿನಿಂದ ಧಾರಾಕಾರವಾಗಿ ನೀರನ್ನು ಸುರಿದು ಅವುಗಳನ್ನು ನೀರಿನಿಂದ ತೋಯಿಸಿ ಕ್ಷಣ-ಕ್ಷಣಕ್ಕೂ ಭಯಪಡಿಸುತ್ತಿದ್ದಿತು. ಭೀಮನ ರಥದ ಕುದುರೆಗಳು ಅದರ ಎದುರಾಗಿ ಹೆಚ್ಚು ಹೊತ್ತು ನಿಲ್ಲಲಾರದೇ ಭೀಮನನ್ನು ಬಹಳ ದೂರಕ್ಕೆ ಒಯ್ದುಬಿಟ್ಟುವು. ಅನಂತರ ಆಕೃತೀಪುತ್ರನಾದ ರುಚಿಪರ್ವನು ಬಹಳ ಶೀಘ್ರವಾಗಿ ಭಗದತ್ತನ ಆನೆಯಮೇಲೆ ಆಕ್ರಮಣ ನಡೆಸಿದನು. ರಥದಲ್ಲಿ ಕುಳಿತಿದ್ದ ರುಚಿಪರ್ವನು ಯಮರಾಜನಿಗೆ ಸಮಾನನಾಗಿ ಕಾಣುತ್ತಿದ್ದನು. ಅವನು ಬಾಣಗಳ ಸುರಿಸುವಿಕೆಯಿಂದ ಆ ಆನೆಯನ್ನು

ಬಹಳವಾಗಿ ಗಾಯಗೊಳಿಸಿದನು. ಅದನ್ನು ನೋಡಿ ಪರ್ವತರಾಜನಾದ ಮನೋಹರವಾದ ಸಂಧಿಬಂಧಗಳನ್ನು ಹೊಂದಿದ್ದ ಭಗದತ್ತನು ಬಗ್ಗಿದ ಗಿಣ್ಣುಳ್ಳ ಒಂದುಬಾಣದಿಂದ ರುಚಿಪರ್ವನನ್ನು ಯಮಾಲಯಕ್ಕೆ ಕಳುಹಿಸಿ ಬಿಟ್ಟನು.

ವೀರನಾದ ರುಚಿಪರ್ವನು ಮರಣಹೊಂದಲಾಗಿ, ಅಭಿಮನ್ಯು, ದ್ರೌಪದೀಕುಮಾರರು, ಚೇಕಿತಾನ, ಧೃಷ್ಟಕೇತು ಮತ್ತು ಯುಯುತ್ಸು–ಇವರುಗಳು ನಿಶಿತವಾದ ಬಾಣಗಳಿಂದ ಭಗದತ್ತನ ಆನೆಯನ್ನು ಪೀಡಿಸತೊಡಗಿದರು. ಆನೆಯನ್ನು ಸಂಹಾರಮಾಡಬೇಕೆನ್ನುವ ಅಭಿಲಾಷೆ ಯಿಂದ ಭಯಂಕರವಾಗಿ ಗರ್ಜನೆಮಾಡುತ್ತಾ ಮೇಘಗಳು ನೀರಿನ ಧಾರೆ ಗಳಿಂದ ಪರ್ವತವನ್ನು ತೋಯಿಸುವಂತೆ–ಸೌಭದ್ರಪ್ರಮುಖರಾದ ಆ ಎಲ್ಲ ಯೋಧರೂ ಬಾಣಗಳ ಧಾರೆಗಳಿಂದ ಆನೆಯನ್ನು ಅಭಿಷೇಚಿಸಿದರು. ಅದನ್ನು ನೋಡಿದ ಯುದ್ಧವಿಶಾರದನಾದ ಭಗದತ್ತನು ತನ್ನ ಆನೆಯನ್ನು ಹಿಮ್ಮಡಿ ಯಿಂದಲೂ, ಅಂಕುಶದಿಂದಲೂ ಮತ್ತು ಕಾಲಿನ ಹೆಬ್ಬೆರಳುಗಳಿಂದಲೂ ತಿವಿದನು. ಹೀಗೆ ಭಗದತ್ತನಿಂದ ಪ್ರಚೋದಿತವಾದ ಸುಪ್ರತೀಕವು ಸೊಂಡಿಲನ್ನೆತ್ತಿಕೊಂಡು ಕಿವಿಗಳನ್ನು ನಿಮಿರಿಸಿ ಒಂದೇ ಕಡೆಗೆ ನೋಡುತ್ತಾ ಶೀಘ್ರವಾಗಿ ಹೋಗತೊಡಗಿತು. ಹೀಗೆ ಹೋಗುತ್ತಿರುವಾಗ ಆ ಆನೆಯು ಯುಯುತ್ಸುವಿನ ಕುದುರೆಗಳನ್ನು ಕಾಲಿನ ಪ್ರಹಾರದಿಂದ ಕೆಳಕ್ಕೆ ಕೆಡವಿ ಅನಂತರ ಯುಯುತ್ಸುವಿನ ಸಾರಥಿಯನ್ನು ಕೊಂದಿತು. ಆ ಸಮಯದಲ್ಲಿ ಯುಯುತ್ಸುವು ಬಹಳ ತ್ವರೆಯಿಂದ ರಥದಿಂದ ಧುಮುಕಿ ದೂರಕ್ಕೆ ಹೊರಟು ಹೋದನು. ಅನಂತರ ಪಾಂಡವಯೋಧರು ಆ ಆನೆಯನ್ನು ಕೊಲ್ಲುವ ಇಚ್ಛೆಯಿಂದ ಭಯಂಕರವಾಗಿ ಗರ್ಜನೆಮಾಡುತ್ತಾ ಬಾಣಗಳ ವರ್ಷದಿಂದ ಆನೆಯನ್ನು ಅಭಿಷೇಚಿಸಿದರು. ಆ ಸಮಯದಲ್ಲಿ ಬಹಳವಾಗಿ ಗಾಬರಿಗೊಂಡ ನಿನ್ನ ಮಗನಾದ ಯುಯುತ್ಸುವು ಅಭಿಮನ್ಯುವಿನ ರಥದಲ್ಲಿ ಕುಳಿತನು. ಆನೆಯ ಮೇಲೆ ಕುಳಿತಿದ್ದ ಭಗದತ್ತನು ಶತ್ರುಗಳ ಮೇಲೆ ಸತತವಾಗಿ ಬಾಣಗಳನ್ನು ಪ್ರಯೋಗಿಸುತ್ತಾ ಸಕಲಲೋಕಗಳಲ್ಲಿಯೂ ಕಿರಣಗಳನ್ನು ಚೆಲ್ಲುತ್ತಿರುವ ಸೂರ್ಯನಂತೆಯೇ ಪ್ರಕಾಶಿಸಿದನು. ಅದಕ್ಕೆ ಪ್ರತಿಯಾಗಿ ಅಭಿಮನ್ಯುವು ಹನ್ನೆರಡು ಬಾಣಗಳಿಂದಲೂ, ಯುಯುತ್ಸುವು ಹತ್ತು ಬಾಣಗಳಿಂದಲೂ,

ದ್ರೌಪದಿಯ ಐವರು ಮಕ್ಕಳು ಮತ್ತು ಧೃಷ್ಟಕೇತುವು ಮೂರು-ಮೂರು ಬಾಣಗಳಿಂದಲೂ ಭಗದತ್ತನನ್ನೂ ಮತ್ತು ಅವನ ಆನೆಯನ್ನೂ ಪ್ರಹರಿಸಿದರು. ಪಾಂಡವಯೋಧರು ಪ್ರಯತ್ನಪೂರ್ವಕವಾಗಿ ಬಿಡುತ್ತಿದ್ದ ತೀಕ್ಷ್ಣವಾದ ಆ ಬಾಣಗಳಿಂದ ಭಗದತ್ತನ ಆ ಆನೆಯು ಮುಚ್ಚಿಹೋಯಿತು. (ಆನೆಯ ಶರೀರಾದ್ಯಂತವಾಗಿ ನಿಶಿತವಾದ ಬಾಣಗಳು ಚುಚ್ಚಿಕೊಂಡುವು.) ಆ ಸಮಯದಲ್ಲಿ ಆ ಆನೆಯು ಸೂರ್ಯನ ಕಿರಣಗಳಿಂದ ಸಂಸ್ಯೂತವಾದ (ಬೆರೆತಿರುವ) ದೊಡ್ಡದಾದ ಮೇಘದೋಪಾದಿಯಲ್ಲಿ ಕಾಣುತ್ತಿದ್ದಿತು.

ಶತ್ರುಗಳ ಬಾಣಗಳಿಂದ ಭಗದತ್ತನ ಆನೆಯು ಬಹಳವಾಗಿ ಪೀಡಿತವಾಗಿದ್ದರೂ, ಮಾವಟಿಗನ ಕೌಶಲದಿಂದಲೂ ಮತ್ತು ಪ್ರಯತ್ನ ದಿಂದಲೂ ಪ್ರಚೋದಿತವಾಗಿ ಅದು ತನ್ನ ಎದುರಾಗಿದ್ದ ಶತ್ರುಗಳನ್ನು ಒಬ್ಬೊಬ್ಬರನ್ನಾಗಿಯೇ ಸೊಂಡಿಲಿನಿಂದ ಹಿಡಿದು ಎಡಕ್ಕೂ ಬಲಕ್ಕೂ ಎಸೆಯುತ್ತಿದ್ದಿತು. ಗೋಪಾಲನೊಬ್ಬನು ಅರಣ್ಯದಲ್ಲಿ ಕೋಲಿನಿಂದ ದನಗಳನ್ನು ತರುಬುವಂತೆ ಭಗದತ್ತನು ಆ ಪಾಂಡವಸೇನೆಯನ್ನು ಬಾರಿ-ಬಾರಿಗೂ ತರುಬುತ್ತಿದ್ದನು. ಗಿಡಗದ ಪಂಜಕ್ಕೆ ಸಿಕ್ಕಿಬಿದ್ದಿರುವ ಕಾಗೆಗಳು ಅಥವಾ ಗಿಡಗ ಪಕ್ಷಿಯ ಆಕ್ರಮಣದಿಂದ ಭಯಗೊಂಡ ಕಾಗೆಗಳು ಯಾವ ರೀತಿಯಲ್ಲಿ ಕ್ಷಣ-ಕ್ಷಣಕ್ಕೂ ಅರಚಿಕೊಳ್ಳುತ್ತಿರುತ್ತವೆಯೋ–ಅದೇರೀತಿಯಲ್ಲಿ ಭಗದತ್ತನ ಭಯದಿಂದ ಓಡಿಹೋಗುತ್ತಿದ್ದ ಪಾಂಡವಸೈನಿಕರೂ ಬಹಳ ಗಟ್ಟಿಯಾಗಿ ಅರಚಿಕೊಳ್ಳುತ್ತಿದ್ದರು. ನಿಶಿತವಾದ ಅಂಕುಶದಿಂದ ತಿವಿಯಲ್ಪಟ್ಟ ಭಗದತ್ತನ ಆನೆಯು–ರೆಕ್ಕೆಗಳನ್ನೊಳಗೊಂಡ ಪರ್ವತದೋಪಾದಿಯಲ್ಲಿ–ಶತ್ರುಪಕ್ಷದ ಯೋಧರ ಮೇಲೆ ನುಗ್ಗಿಹೋಗುತ್ತಾ–ಕ್ಷೋಭೆಗೊಂಡ ಸಮುದ್ರವು ಅದರಲ್ಲಿ ಪ್ರಯಾಣಮಾಡುತ್ತಿರುವ ವ್ಯಾಪಾರಿಗಳಿಗೆ ಭಯವನ್ನುಂಟುಮಾಡುವಂತೆ–ಶತ್ರುಪಕ್ಷದ ಯೋಧರಿಗೆ ಮಹತ್ತರವಾದ ಭಯವನ್ನುಂಟುಮಾಡಿತು. ಆನೆಗೆ ಭಯಪಟ್ಟು ಪಲಾಯನಮಾಡುತ್ತಿದ್ದ ರಥ-ಗಜಾಶ್ವ-ಪದಾತಿಗಳ ಭಯಂಕರ ವಾದ ಆರ್ತಧ್ವನಿಯು ಭೂಮಿಯನ್ನೂ, ಆಕಾಶವನ್ನೂ, ಸ್ವರ್ಗವನ್ನೂ, ದಿಕ್ಕುಗಳನ್ನೂ ಮತ್ತು ಉಪದಿಕ್ಕುಗಳನ್ನೂ ವ್ಯಾಪಿಸಿತು. ದೇವತೆಗಳಿಂದ ಸುಗುಪ್ತವಾಗಿದ್ದ ದೇವಸೈನ್ಯವನ್ನು ವಿರೋಚನನು ಭೇದಿಸಿಕೊಂಡು ಒಳ ನುಗ್ಗಿದಂತೆ–ಶ್ರೇಷ್ಠವಾದ ಸುಪ್ರತೀಕಮಹಾಗಜದ ಮೂಲಕವಾಗಿ ಭಗದತ್ತನು

ಶತ್ರುಸೈನ್ಯವನ್ನು ಭೇದಿಸಿಕೊಂಡು ಒಳನುಗ್ಗಿದನು. ಆ ಸಮಯದಲ್ಲಿ ಅಗ್ನಿಸಖನಾದ ವಾಯುವೂ ಆಕಾಶದಲ್ಲಿ ವೇಗವಾಗಿ ಬೀಸುತ್ತಿದ್ದನು. ಅದರಿಂದಾಗಿ ವಿಪರೀತವಾದ ಧೂಳೆದ್ದು ಅದು ಸೈನಿಕರೆಲ್ಲರನ್ನೂ ವ್ಯಾಪಿಸಿತು. ಒಂದೇ ಒಂದು ಸುಪ್ರತೀಕವು ನಾಲ್ಕು ದಿಕ್ಕುಗಳಲ್ಲಿಯೂ ರಭಸದಿಂದ ಸಂಚರಿಸುತ್ತಿದ್ದುದನ್ನು ನೋಡಿ ಹಲವಾರು ಆನೆಗಳು ಗುಂಪು-ಗುಂಪಾಗಿ ರಣಾಂಗಣದಲ್ಲಿ ಸಂಚರಿಸುತ್ತಿವೆಯೋ ಎಂಬುದಾಗಿ ಪ್ರೇಕ್ಷಕರು ಭಾವಿಸಿದರು."

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ಸಂಶಪ್ತಕವಧಪರ್ವ ( ಮುಂದುವರಿದಿದೆ.)

## ಸಂಶಪ್ತಕರೊಡನೆ ಅರ್ಜುನನ ಭಯಂಕರಯುದ್ಧ: ಬಹುಭಾಗ ಸಂಶಪ್ತಕರ ನಾಶ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ನೀನು ಯುದ್ಧದಲ್ಲಿ ಪಾರ್ಥನು ಮಾಡಿದ ಕರ್ಮವನ್ನು ಕೇಳಲು ಇಚ್ಛಿಸಿರುವೆಯಲ್ಲವೇ? ಪಾರ್ಥನು ರಣರಂಗದಲ್ಲಿ ಏನು ಮಾಡಿದನೆಂಬುದನ್ನು ವಿವರವಾಗಿ ಹೇಳುವೆನು; ಕೇಳು:

ಭಗದತ್ತನು ಅದ್ಭುತವಾದ ರೀತಿಯಲ್ಲಿ ಯುದ್ಧಮಾಡುತ್ತಿರಲಾಗಿ ಆನೆಯ ಮತ್ತು ಪಲಾಯನಮಾಡುತ್ತಿದ್ದ ಯೋಧರ ಪದಘಟ್ಟನೆಗಳಿಂದ ಸಮುದ್ಭೂತವಾಗಿ ಸರ್ವತ್ರ ವ್ಯಾಪ್ತವಾಗಿದ್ದ ಧೂಳನ್ನು ನೋಡಿ ಮತ್ತು ಭಗದತ್ತನ ಆನೆಯ ಗರ್ಜನೆಯನ್ನೂ ಕೇಳಿ ಅರ್ಜುನನು ಶ್ರೀಕೃಷ್ಣನೊಡನೆ ಹೇಳಿದನು:

"ಮಧುಸೂದನ! ಪ್ರಾಗ್ಜ್ಯೋತಿಷರಿಗೆ ರಾಜನಾದ ಭಗದತ್ತನು ತನ್ನ ಆನೆಯೊಡನೆ ಅವಸರದಿಂದ ನಮ್ಮ ಸೈನ್ಯದ ಮೇಲೆ ಯುದ್ಧಮಾಡಲು ಹೊರಟಿದ್ದಾನೆ. ನಿಶ್ಚಯವಾಗಿಯೂ ಈ ಗರ್ಜನೆಯು ಅವನದೇ (ಅವನ ಆನೆಯದೇ) ಆಗಿದೆ. ಕೃಷ್ಣ! ಈ ಭಗದತ್ತನು ಯುದ್ಧದಲ್ಲಿ ಇಂದ್ರನಿಗೇನೂ ಕಡಿಮೆಯವನಲ್ಲ. ಗಜಯಾನದಲ್ಲಿ (ಗಜನಿಯಂತ್ರಣದಲ್ಲಿ) ಅವನು ಅತ್ಯಂತ ನಿಪುಣನು. ಪೃಥ್ವಿಯಲ್ಲಿರುವ ಗಜಯೋಧರಲ್ಲಿ ಇವನೇ ಮೊದಲಿಗನೆಂದು

ನಾನು ಭಾವಿಸಿದ್ದೇನೆ. ಇವನಲ್ಲಿರುವ ಶ್ರೇಷ್ಠಗಜವಾದ ಸುಪ್ರತೀಕವು ಯುದ್ಧದಲ್ಲಿ ಪ್ರತಿಗಜವೇ ಇಲ್ಲದುದು. ಇದರ ಎದುರಾಗಿ ಯಾವ ಆನೆಯೂ ನಿಂತು ಸೆಣೆಸಲಾರದು. ಎಲ್ಲ ವಿಧವಾದ ಶಸ್ತ್ರಾಸ್ತ್ರಗಳನ್ನೂ ತಿರಸ್ಕರಿಸುವ ಸಾಮರ್ಥ್ಯವುಳ್ಳದ್ದು. ಯಾವ ಶಸ್ತ್ರಾಸ್ತ್ರವೂ ಇದನ್ನು ಘಾಸಿಪಡಿಸಲಾರದು. ಯುದ್ಧದಲ್ಲಿ ಈ ಆನೆಯು ಶತ್ರುಗಳನ್ನು ಹಿಮ್ಮೆಟ್ಟಿಸಬಲ್ಲುದು. ಇದಕ್ಕೆ ಶ್ರಮವೆಂಬುದೇ ಇಲ್ಲ. ಶ್ರಮವನ್ನು ಅದು ಜಯಿಸಿದೆ. ಈ ಆನೆಗೆ ಎಲ್ಲ ವಿಧವಾದ ಶಸ್ತ್ರಗಳ ಪ್ರಹಾರವನ್ನೂ ತಡೆದುಕೊಳ್ಳುವ ಸಾಮರ್ಥ್ಯವಿದೆ. ಬೆಂಕಿಯನ್ನೂ ಇದು ಸಹಿಸಿಕೊಳ್ಳಬಲ್ಲುದು. ಬೆಂಕಿಯೂ ಇದನ್ನು ಏನೂ ಮಾಡಲಾರದು. ಈ ಕಾರಣಗಳಿಂದಾಗಿ ಈ ಆನೆಯೊಂದೇ ಪಾಂಡವರ ಎಲ್ಲ ಸೈನ್ಯವನ್ನೂ ವಿನಾಶಮಾಡಬಲ್ಲುದಾಗಿದೆ. ಈ ಸಮಯದಲ್ಲಿ ಇದರ ಉಪಟಳವನ್ನು ತಡೆಯಲು ನಮ್ಮಿಬ್ಬರಿಗಲ್ಲದೇ ಬೇರೆ ಯಾರಿಗೆ ತಾನೇ ಸಾಧ್ಯವಾದೀತು? ಆದುದರಿಂದ ಪ್ರಾಗ್ಜ್ಯೋತಿಷಾಧಿಪತಿಯಿರುವೆಡೆಗೆ ಶೀಘ್ರವಾಗಿ ಹೋಗು. ತನ್ನಲ್ಲಿ ಬಲಿಷ್ಠವಾದ ಆನೆಯಿದೆಯೆಂಬ ಕಾರಣ ದಿಂದಲೇ ಕೊಬ್ಬಿ ಹೋಗಿರುವ ಅತಿವಯಸ್ಕನೂ ಆಗಿರುವ ಈ ಭಗದತ್ತನನ್ನು ನಾನೀಗಲೇ ಬಲಹಂತಕನಾದ ಇಂದ್ರನಿಗೆ ಪ್ರಿಯನಾದ ಅತಿಥಿಯನ್ನಾಗಿ ಮಾಡಿ ಕಳುಹಿಸುತ್ತೇನೆ. (ಸಂಹರಿಸಿ ಸ್ವರ್ಗಕ್ಕೆ ಕಳುಹಿಸುತ್ತೇನೆ.)"

ಮಹಾರಾಜ! ಅರ್ಜುನನ ಮಾತಿನಂತೆ ಶ್ರೀಕೃಷ್ಣನು, ಪಾಂಡವರ ಸೈನ್ಯವನ್ನು ಭಗದತ್ತನು ವಿನಾಶಗೊಳಿಸುತ್ತಿದ್ದ ಸ್ಥಳಕ್ಕೆ ರಥವನ್ನೊಯ್ಯುತ್ತಿದ್ದನು. ಅರ್ಜುನನು ಮತ್ತೊಂದು ವಿಭಾಗಕ್ಕೆ ಯುದ್ಧಮಾಡಲು ಹೋಗುತ್ತಿರುವುದನ್ನು ಕಂಡು ಹಿಂದಿನಿಂದ ಹದಿನಾಲ್ಕುಸಾವಿರ ಸಂಶಪ್ತಕ ಮಹಾರಥರು ಅರ್ಜುನ ನನ್ನು ಯುದ್ಧಕ್ಕೆ ಆಹ್ವಾನಿಸುತ್ತಾ ಅರ್ಜುನನ ಮೇಲೆರಗಿ ಬಂದರು. ಆ ಹದಿನಾಲ್ಕುಸಾವಿರ ಮಹಾರಥರಲ್ಲಿ ಹತ್ತುಸಾವಿರ ತ್ರಿಗರ್ತಯೋಧರೂ, ನಾಲ್ಕುಸಾವಿರ ವಾಸುದೇವನ ಅನುಯಾಯಿಗಳಾದ ನಾರಾಯಣಸೈನಿಕರೂ ಇದ್ದರು. ಆ ಸಮಯದಲ್ಲಿ ಅರ್ಜುನನ ಮನಸ್ಸು ಡೋಲಾಯಮಾನ ವಾಯಿತು. ಒಂದು ಕಡೆಯಲ್ಲಿ ಭಗದತ್ತನು ತನ್ನ ಕಡೆಯ ಸೈನಿಕರನ್ನು ಆನೆಯ ಮೂಲಕವಾಗಿ ನಾಶಗೊಳಿಸುತ್ತಿರುವುದನ್ನು ಅರ್ಜುನನು ಸುಪ್ರತೀಕದ ಘೀಂಕಾರದಿಂದ ಊಹಿಸಿದ್ದನು. ಮತ್ತೊಂದು ಕಡೆಯಲ್ಲಿ ಸಂಶಪ್ತಕರು

ಯುದ್ಧಕ್ಕೆ ಬಾರಿ-ಬಾರಿಗೂ ಆಹ್ವಾನಿಸುತ್ತಿರುವುದನ್ನೂ ಕೇಳುತ್ತಿದ್ದನು. 'ಕಿಂ ನು ಶ್ರೇಯಸ್ಕರಂ ಕರ್ಮ ಭವೇತ್' 'ಯಾವುದನ್ನು ಮಾಡಿದರೆ ಶ್ರೇಯಸ್ಕರ ವಾದ ಕರ್ಮವಾಗುತ್ತದೆ? ಯುದ್ಧಕ್ಕೆ ಆಹ್ವಾನಿಸುತ್ತಿರುವ ಸಂಶಪ್ತಕರ ಕಡೆಗೆ ಹಿಂದಿರುಗಲೇ? ಅಥವಾ ಕಷ್ಟದಲ್ಲಿ ಸಿಕ್ಕಿರುವ ಯುಧಿಷ್ಠಿರನ ಬಳಿಗೆ ಹೋಗಲೇ?'–ಎಂಬುದಾಗಿ ಚಿಂತಿಸತೊಡಗಿದನು. ಹೀಗೆ ಎರಡು ವಿಷಯಗಳನ್ನೂ ಕುರಿತು ಬುದ್ಧಿಯಲ್ಲಿ ವಿಚಾರಿಸುತ್ತಿದ್ದಾಗ– 'ಈ ಸಮಯದಲ್ಲಿ ಸಂಶಪ್ತಕರನ್ನು ವಧೆಮಾಡುವುದೇ ಶ್ರೇಯಸ್ಕರವಾದ ಕರ್ಮ–ಎಂಬುದನ್ನೇ ಅವನ ಬುದ್ಧಿಯು ಸ್ಥಿರೀಕರಿಸಿತು. ತತ್ಕಾಲದಲ್ಲಿ ಸಂಶಪ್ತಕರನ್ನು ವಧಿಸುವುದೇ ಸೂಕ್ತವೆಂದು ನಿಶ್ಚಯಿಸಿದನಂತರ ಕಪಿಶ್ರೇಷ್ಠನಾದ ಆಂಜನೇಯನನ್ನೇ ಧ್ವಜದಲ್ಲಿ ಚಿಹ್ನೆಯಾಗಿ ಹೊಂದಿದ್ದ, ಇಂದ್ರನ ಮಗನಾದ ಅರ್ಜುನನು ಏಕಾಕಿಯಾಗಿ ಹದಿನಾಲ್ಕುಸಾವಿರ ರಥಿಕರನ್ನೂ ಸಂಹರಿಸಲು ಒಡನೆಯೇ ಹಿಂದಿರುಗಿದನು. ಅರ್ಜುನನನ್ನು ವಧಿಸುವ ಸಲುವಾಗಿ ದುರ್ಯೋಧನ-ಕರ್ಣರಿಬ್ಬರೂ ಸೇರಿ ಆ ಉಪಾಯವನ್ನು ಸಿದ್ಧಗೊಳಿಸಿದ್ದರು. ಈ ಉಪಾಯದ ಕಾರ್ಯಕ್ರಮದಂತೆ ರಣಾಂಗಣವು ಎರಡಾಗಿ ಮಾಡಲ್ಪಟ್ಟಿತು. ರಣರಂಗವು ಎರಡು ಭಾಗವಾಗಿ ಮಾಡಲ್ಪಟ್ಟುದರಿಂದ ಅರ್ಜುನನೂ ಸಹ ಏನು ಮಾಡಬೇಕೆಂಬುದೇ ತಿಳಿಯದೆ ಡೋಲಾಯಮಾನವಾದ ಮನಸ್ಸುಳ್ಳವ ನಾಗಿಯೇ ಇದ್ದನು. ಆದರೆ ಸಂಶಪ್ತಕರೊಡನೆ ಪ್ರತ್ಯೇಕವಾಗಿ ತಾನೊಬ್ಬನೇ ಯುದ್ಧಮಾಡಲು ನಿಶ್ಚಯಿಸಿ ಆ ವೀರಾಗ್ರಣಿಗಳೆಲ್ಲರನ್ನೂ ಸಂಹರಿಸಿ ದುರ್ಯೋಧನನ ಉಪಾಯವನ್ನು ನಿರರ್ಥಕಗೊಳಿಸಿದನು.

ಅರ್ಜುನನು ಯುದ್ಧಕ್ಕೆ ಹಿಂದಿರುಗಿದನಂತರ ಸಂಶಪ್ತಕಮಹಾರಥರು ಬಗ್ಗಿದ ಗಿಣ್ಣುಗಳಿದ್ದ ಲಕ್ಷ-ಲಕ್ಷ ಬಾಣಗಳನ್ನು ಅರ್ಜುನನ ಮೇಲೆ ಸುರಿಸಿದರು. ರಣರಂಗವೆಲ್ಲವೂ ಅಪಾರವಾದ ಬಾಣಗಳಿಂದ ತುಂಬಿಹೋಗಿದ್ದುದರಿಂದ ಕುಂತಿಯ ಮಗನಾದ ಅರ್ಜುನನಾಗಲೀ, ಶ್ರೀಕೃಷ್ಣರೂಪಿಯಾದ ಜನಾರ್ದನ ನಾಗಲೀ, ಕುದುರೆಗಳಾಗಲೀ, ರಥವಾಗಲೀ ಕಾಣುತ್ತಲೇ ಇರಲಿಲ್ಲ. ಆ ಸಮಯದಲ್ಲಿ ಬಾಣಗಳ ಸುರಿಯುವಿಕೆಯಿಂದ ಭ್ರಾಂತನಾದ ಜನಾರ್ದನನು ಬೆವೆತು ಹೋದನು. ಅದನ್ನು ನೋಡಿದ ಅರ್ಜುನನು ಬ್ರಹ್ಮಾಸ್ತ್ರಪ್ರಯೋಗ ದಿಂದ ಪ್ರಾಯಶಃ ಅನೇಕ ಸಂಶಪ್ತಕರನ್ನು ನಾಶಗೊಳಿಸಿದನು. ಕ್ಷಣಮಾತ್ರದಲ್ಲಿ

ಬಾಣ-ಶಿಂಜಿನಿ-ಧನುಸ್ಸುಗಳಿಂದ ಯುಕ್ತವಾಗಿದ್ದ ಸಂಶಪ್ತಕಮಹಾರಥರ ನೂರಾರು ಕೈಗಳು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುವು. ಧ್ವಜಗಳು, ಕುದುರೆಗಳು, ಸೂತರು ಮತ್ತು ರಥಿಕರು ಸಾವಿರಾರು ಸಂಖ್ಯೆಯಲ್ಲಿ ಹತರಾಗಿ ಕೆಳಕ್ಕೆ ಬಿದ್ದರು. ವೃಕ್ಷ, ಪರ್ವತ, ಶಿಖರ ಮತ್ತು ಮೇಘ–ಇವುಗಳಿಗೆ ಸಮಾನವಾದ ಶರೀರಗಳಿದ್ದ, ಯುದ್ಧಕ್ಕೆ ಸಜ್ಜಾಗಿದ್ದ, ಮಾವಟಿಗರಿಂದ ವಿಹೀನವಾಗಿದ್ದ ಆನೆಗಳು ಅರ್ಜುನನ ಬಾಣಗಳ ಪ್ರಹಾರದಿಂದ ಅಸುನೀಗಿ ಭೂಮಿಯ ಮೇಲೆ ಬಿದ್ದುವು. ಅರ್ಜುನನ ಬಾಣಗಳಿಂದ ಪ್ರಹೃತವಾಗಿ ಹಲವು ಆನೆಗಳು ಮಾವಟಿಗರೊಡನೆಯೇ ಪ್ರಾಣತೊರೆದು ಬಿದ್ದುವು. ಅವುಗಳ ಬೆನ್ನು ಮೇಲಿದ್ದ ಚಿತ್ರಗಂಬಳಿಗಳೂ, ಆಭರಣಗಳೂ ಚೆಲ್ಲಾಪಿಲ್ಲಿಯಾಗಿ ಆ ರಣಾಂಗಣದಲ್ಲಿ



ಬಿದ್ದಿದ್ದುವು. ಕಿರೀಟಧರನಾದ ಅರ್ಜುನನ ಭಲ್ಲವೆಂಬ ಬಾಣಗಳಿಂದ–ಋಷ್ಟಿ, ಪ್ರಾಸ, ಖಡ್ಗ, ನಖರ, ಮುದ್ಗರ ಮತ್ತು ಗಂಡುಗೊಡಲಿಗಳನ್ನು ಹೊಂದಿದ್ದ ಸಂಶಪ್ತಕಯೋಧರ ತೋಳುಗಳು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುವು. ಮಹಾರಾಜ! ಬಾಲಸೂರ್ಯ, ಕಮಲ ಮತ್ತು ಚಂದ್ರರಿಗೆ ಸಮಾನವಾದ ರೂಪವಿದ್ದ ಸಂಶಪ್ತಕರ ತಲೆಗಳು ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದುವು. ಕ್ರುದ್ಧನಾಗಿದ್ದ ಅರ್ಜುನನು ನಾನಾರೂಪವಾದ, ಪ್ರಾಣಾಪಹಾರಿಗಳಾದ ಬಾಣಗಳಿಂದ ಶತ್ರುಗಳಾದ ಸಂಶಪ್ತಕರನ್ನು ನಾಶಗೊಳಿಸುತ್ತಿರಲಾಗಿ ಧನುರ್ಬಾಣಗಳಿಂದಲೂ, ಸುವರ್ಣಮಯವಾದ

ಕವಚಗಳಿಂದಲೂ ಸಮಲಂಕೃತವಾಗಿದ್ದ ಸಂಶಪ್ತಕಸೈನ್ಯವು ಧಗ-ಧಗನೆ ಉರಿಯತೊಡಗಿತು. ಆನೆಯು ಕಮಲಗಳಿಂದ ಸಮೃದ್ಧವಾದ ಸರೋವರವನ್ನು ಅಲ್ಲೋಲ-ಕಲ್ಲೋಲಮಾಡುವಂತೆ ಸಂಶಪ್ತಕಸೇನೆಯನ್ನು ಅಲ್ಲೋಲ-ಕಲ್ಲೋಲಗೊಳಿಸುತ್ತಿದ್ದ ಧನಂಜಯನನ್ನು ಪ್ರಾಣಿಗಳ ಸಮೂಹವೆಲ್ಲವೂ– 'ಸಾಧು ಅರ್ಜುನ! ಸಾಧು'–ಎಂದು ಪ್ರಶಂಸಿಸಿದುವು.



ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿದ್ದ ಅರ್ಜುನನ ಆ ಅದ್ಭುತಕರ್ಮವನ್ನು ನೋಡಿ ಶ್ರೀಕೃಷ್ಣನು ಆಶ್ಚರ್ಯಚಕಿತನಾಗಿ ಕೈಜೋಡಿಸಿ ಅವನೊಡನೆ ಹೇಳಿದನು:

"ಪಾರ್ಥ! ಇಂದಿನ ಯುದ್ಧದಲ್ಲಿ ನೀನು ಮಾಡಿದ ಅದ್ಭುತಕರ್ಮವು ಮತ್ತು ತೋರಿಸಿದ ಸಾಹಸವು ಇಂದ್ರ, ಯಮ ಮತ್ತು ಕುಬೇರರಿಂದಲೂ ಮಾಡಲು ದುಃಸಾಧ್ಯವೆಂಬುದು ನನ್ನ ಭಾವನೆಯಾಗಿದೆ. ಇಂದಿನ ಸಂಗ್ರಾಮದಲ್ಲಿ ನೂರಾರು-ಸಾವಿರಾರು ಸಂಶಪ್ತಕಮಹಾರಥರು ಏಕಕಾಲದಲ್ಲಿ ಅಸುನೀಗಿ ತೊಪ-ತೊಪನೆ ಕೆಳಗೆ ಬಿದ್ದುದನ್ನು ನಾನು ನೋಡಿದೆನು."

ಮಹಾರಾಜ! ಪಾರ್ಥನು ಈ ಪ್ರಕಾರವಾಗಿ ತನ್ನೊಡನೆ ಯುದ್ಧಮಾಡುತ್ತಿದ್ದ ಸಂಶಪ್ತಕಮಹಾರಥರಲ್ಲಿ ಬಹುಪಾಲು ಮಹಾರಥರನ್ನು ಸಂಹರಿಸಿ 'ಭಗದತ್ತಾಯ ಯಾಹಿ' ಭಗದತ್ತನ ಬಳಿಗೆ ಹೋಗು'–ಎಂಬುದಾಗಿ ಹೇಳಿ ಶ್ರೀಕೃಷ್ಣನನ್ನು ಪ್ರಚೋದಿಸಿದನು."

೨೭ನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ ಸಂಶಪ್ತಕವಧಪರ್ವ ( ಮುಂದುವರಿದಿದೆ.)

## ಅರ್ಜುನನು ಸಂಶಪ್ತಕರನ್ನು ಸಂಹರಿಸಿ ಕೌರವಸೇನೆಯ ಮೇಲೆ ಆಕ್ರಮಣನಡೆಸಿದುದು: ಭಗದತ್ತನ ಮತ್ತು ಆನೆಯ ಪರಾಕ್ರಮ

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಬಹುಪಾಲು ಸಂಶಪ್ತಕರ ವಧೆಯಾದನಂತರ ಶ್ರೀಕೃಷ್ಣನು ಸುವರ್ಣಭೂಷಿತಗಳಾಗಿದ್ದ, ಮನೋವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಅರ್ಜುನನ ಕುದುರೆಗಳನ್ನು ದ್ರೋಣರ ಸೈನ್ಯದ ಬಳಿಗೆ ಬಹಳ ಶೀಘ್ರವಾಗಿ ಓಡಿಸಿಕೊಂಡು ಹೋಗುತ್ತಿದ್ದನು. ದ್ರೋಣರಿಂದ ಪರಿತಾಪಗೊಳ್ಳುತ್ತಿದ್ದ ತನ್ನ ಸಹೋದರರರ ಸಮೀಪಕ್ಕೆ ರಕ್ಷಣೆಯ ಸಲುವಾಗಿ ಧಾವಿಸುತ್ತಿದ್ದ ಅರ್ಜುನನನ್ನು ಪುನಃ ತ್ರಿಗರ್ತಾಧಿಪತಿಯಾದ ಯುದ್ಧಾರ್ಥಿ ಯಾದ ಸುಶರ್ಮನು ತನ್ನ ಸಹೋದರರೊಡನೆ ಹಿಂಬಾಲಿಸಿದನು. ಯುದ್ಧಮಾಡುವ ಇಚ್ಛೆಯಿಂದ ಸುಶರ್ಮನು ತನ್ನನ್ನು ಹಿಂಬಾಲಿ ಸುತ್ತಿರುವುದನ್ನು ಕಂಡು ಶ್ವೇತವಾಹನನಾದ, ಜಯನಾಮಕನಾದ ಅರ್ಜುನನು ಅಪರಾಜಿತನಾದ ಶ್ರೀಕೃಷ್ಣನಿಗೆ ಹೇಳಿದನು:

**ಏಷ ಮಾಂ ಭ್ರಾತೃಭಿಃ ಸಾರ್ಧಂ ಸುಶರ್ಮಾಹ್ವಯತೇಽಚ್ಯುತ ॥೩॥**

"ಅಚ್ಯುತನೇ! ಈ ಸುಶರ್ಮನು ತನ್ನ ಅನುಜರೊಡನೆ ಕೂಡಿಕೊಂಡು ನನ್ನನ್ನು ಯುದ್ಧಕ್ಕೆ ಕರೆಯುತ್ತಿದ್ದಾನೆ.

ಆದರೆ ಉತ್ತರವಿಭಾಗದಲ್ಲಿ ನಮ್ಮ ಸೈನ್ಯವು ಸಂಪೂರ್ಣವಾಗಿ ವಿನಾಶ ಹೊಂದುತ್ತಿದೆ. ಅವರನ್ನು ರಕ್ಷಿಸುವ ಸಲುವಾಗಿ ಹೊರಡುವುದರ

ಲ್ಲಿದ್ದಾಗ ಸಂಶಪ್ತಕಾಧಿಪತಿಯಾದ ಸುಶರ್ಮನು ಪುನಃ ನನ್ನನ್ನು ಯುದ್ಧಕ್ಕೆ ಆಹ್ವಾನಿಸಿ ನನ್ನ ಮನಸ್ಸನ್ನು ತೂಗಾಡುತ್ತಿರುವ ಉಯ್ಯಾಲೆಯಂತೆ ಮಾಡಿಬಿಟ್ಟಿದ್ದಾನೆ. ಈಗ ನಾನು ಪುನಃ ಅಳಿದುಳಿದಿರುವ ಸಂಶಪ್ತಕರನ್ನು ಸಂಹರಿಸಲೇ? ಅಥವಾ ಶತ್ರುಗಳಿಂದ ಬಾಧೆಪಡುತ್ತಿರುವ ನಮ್ಮ ಸೈನಿಕರನ್ನು ರಕ್ಷಿಸುವ ಸಲುವಾಗಿ ಉತ್ತರಭಾಗಕ್ಕೆ ಹೋಗಲೇ? ಈ ರೀತಿಯಲ್ಲಿ ನನ್ನ ಮನಸ್ಸು ಸಂಕಲ್ಪ-ವಿಕಲ್ಪಗಳ ಮಧ್ಯದಲ್ಲಿ ಹೊಯ್ದಾಡುತ್ತಿದೆ. ಈ ವಿಷಯವನ್ನು ನೀನೂ ಕೂಡ ತಿಳಿದವನೇ ಆಗಿರುವೆ. ಆದುದರಿಂದ ಯಾವುದನ್ನು ಮಾಡಿದರೆ ಒಳ್ಳೆಯದಾಗುವುದೆಂಬುದನ್ನು ನೀನೇ ಹೇಳು."

ಮಹಾರಾಜ! ಅರ್ಜುನನ ಆ ಪ್ರಶ್ನೆಗೆ ಶ್ರೀಕೃಷ್ಣನು ಯಾವ ಪ್ರತ್ಯುತ್ತರವನ್ನೂ ಹೇಳಲಿಲ್ಲ. ಆದರೆ ತ್ರಿಗರ್ತಾಧಿಪತಿಯಾದ ಸುಶರ್ಮನು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದ ಸ್ಥಳಕ್ಕೇ ರಥವನ್ನು ಪುನಃ ಹಿಂದಿರುಗಿಸಿದನು. ಸುಶರ್ಮನು ಎದುರಾಗುತ್ತಲೇ ಅರ್ಜುನನು ಅವನನ್ನು ಶೀಘ್ರಗಾಮಿಗಳಾದ ಏಳು ಬಾಣಗಳಿಂದ ಪ್ರಹರಿಸಿ ಅನಂತರ ಕ್ಷುರವೆಂಬ



ಹೆಸರಿನ ಎರಡು ಬಾಣಗಳಿಂದ ಅವನ ಧನುಸ್ಸನ್ನೂ ಮತ್ತು ಧ್ವಜ ವನ್ನೂ ಕತ್ತರಿಸಿದನು. ತ್ರಿಗರ್ತಾಧಿಪತಿಯಾದ ಸುಶರ್ಮನ ತಮ್ಮ

ನನ್ನೂ ಆರು ಬಾಣಗಳಿಂದ ಪ್ರಹರಿಸಿ ಅಶ್ವಸಹಿತನಾದ ಮತ್ತು ಸೂತ ಸಹಿತನಾದ ಅವನನ್ನು ಬಹಳ ಶೀಘ್ರವಾಗಿಯೇ ಯಮಾಲಯಕ್ಕೆ ಕಳುಹಿಸಿದನು. (ಆರು ಬಾಣಗಳಲ್ಲಿ ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ, ಒಂದು ಬಾಣದಿಂದ ಸೂತನನ್ನೂ, ಮತ್ತೊಂದು ಬಾಣದಿಂದ ಸುಶರ್ಮನ ಅನುಜನನ್ನೂ ಬಹಳ ಶೀಘ್ರವಾಗಿ ಸಂಹರಿಸಿದನು.) ಅದರಿಂದ ಕ್ರುದ್ಧನಾದ ಸುಶರ್ಮನು ಸರ್ಪಸದೃಶವಾಗಿದ್ದ ಮತ್ತು ಲೋಹಮಯವಾಗಿದ್ದ ಶಕ್ತ್ಯಾಯುಧವನ್ನು ಅರ್ಜುನನನ್ನು ಲಕ್ಷೀಕರಿಸಿ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಅರ್ಜುನನ ಸಾರಥಿಯಾದ ವಾಸುದೇವನನ್ನೂ ತೋಮರದಿಂದ ಪ್ರಹರಿಸಿದನು. ಅರ್ಜುನನು ಸುಶರ್ಮನು ಬಿಟ್ಟ ಶಕ್ತ್ಯಾಯುಧವನ್ನು ಮೂರುಬಾಣಗಳಿಂದಲೂ ಮತ್ತು ಶ್ರೀಕೃಷ್ಣನ ಮೇಲೆ ಬಿಟ್ಟ ತೋಮರವನ್ನು ಮೂರುಬಾಣಗಳಿಂದಲೂ ಕತ್ತರಿಸಿ, ಸುಶರ್ಮನನ್ನು ಬಾಣಗಳ ಮಳೆಗರೆಯುವಿಕೆಯಿಂದ ಭ್ರಾಂತನನ್ನಾಗಿ ಮಾಡಿ ಹಿಂದಕ್ಕಟ್ಟಿಬಿಟ್ಟನು.

ಸುಶರ್ಮನನ್ನು ಪರಾಜಯಗೊಳಿಸಿದನಂತರ ಇಂದ್ರನಿಗೆ ಸಮನಾಗಿ ಬಾಣಗಳ ಮಳೆಗರೆಯುತ್ತಾ ದ್ರೋಣರ ಬಳಿಗೆ ಬರುತ್ತಿದ್ದ, ಉಗ್ರರೂಪನಾಗಿದ್ದ ಅರ್ಜುನನನ್ನು ನಿನ್ನ ಸೈನಿಕರಲ್ಲಿ ಯಾವನೊಬ್ಬನೂ ತಡೆಯಲಿಲ್ಲ. (ಯಾವನಿಗೂ ತಡೆಯಲು ಸಾಧ್ಯವಾಗಲಿಲ್ಲ.) ರಣರಂಗದ ಉತ್ತರವಿಭಾಗಕ್ಕೆ ಬಂದೊಡನೆಯೇ ಅರ್ಜುನನು–ಅಗ್ನಿಯು ಹುಲ್ಲಿನ ಮೆದೆಯನ್ನು ಸುಡುವಂತೆ–ಎಲ್ಲ ಕೌರವಮಹಾರಥರನ್ನೂ ಬಾಣಗಳಿಂದ ದಹಿಸಲು ಉಪಕ್ರಮಿಸಿದನು. ಜನರು ಅಗ್ನಿಯ ಸ್ಪರ್ಶವನ್ನು ಸಹಿಸಿಕೊಳ್ಳದಂತೆ–ಧೀಮಂತನಾದ ಕುಂತೀಪುತ್ರನ, ಸಹಿಸಲು ಅಶಕ್ಯವಾದ ಬಾಣಗಳ ವೇಗವನ್ನು ಕೌರವಯೋಧರು ಸಹಿಸಿಕೊಳ್ಳಲಾಗಲಿಲ್ಲ. ಅರ್ಜುನನು ಅವ್ಯಾಹತವಾದ ಬಾಣಗಳ ಸುರಿಸುವಿಕೆಯಿಂದ ಕೌರವರ ಸೈನ್ಯವನ್ನು ಮುಚ್ಚುತ್ತಾ, ಗರುಡನ ವೇಗಕ್ಕೆ ಸಮಾನವಾದ ವೇಗದಿಂದ ಪ್ರಾಗ್ಜ್ಯೋತಿಷನ ಮೇಲೆರಗಿದನು. ಮಹಾರಾಜ! ಯುದ್ಧದಲ್ಲಿ ಶತ್ರುಗಳ ಕಣ್ಣೀರನ್ನು ಹೆಚ್ಚಿಸುವಂತಹ ಯಾವ ಧನುಸ್ಸನ್ನು ಪಾಪರಹಿತರಾದ ಭರತವಂಶೀಯರಿಗೆ ಕ್ಷೇಮವನ್ನುಂಟು ಮಾಡುವುದಕ್ಕಾಗಿಯೇ ಅರ್ಜುನನು ಬಗ್ಗಿಸುತ್ತಿದ್ದನೋ–ಅಂತಹ ಧನುಸ್ಸನ್ನೇ ಈಗ ಕಪಟದ್ಯೂತವಾಡಿದ ನಿನ್ನ ಮಗನ ಮತ್ತು ಅವನ ಪಕ್ಷವನ್ನು ಸೇರಿರುವ

ಎಲ್ಲ ಕ್ಷತ್ರಿಯರ ವಿನಾಶದ ಸಲುವಾಗಿ ಕೈಗೆತ್ತಿಕೊಂಡನು. ಆ ಸಮಯದಲ್ಲಿ ಪಾರ್ಥನು ನಿನ್ನ ಸೈನ್ಯವನ್ನು ಅಲ್ಲೋಲ-ಕಲ್ಲೋಲಗೊಳಿಸಿ ನುಚ್ಚುನೂರು ಮಾಡಿಬಿಟ್ಟನು. ಪರ್ವತಕ್ಕೆ ಬಡಿದ ನೌಕೆಯು ನುಚ್ಚುನೂರಾಗುವಂತೆ–ಅರ್ಜುನನನ್ನು ಸಂಧಿಸಿದ ನಿನ್ನ ಸೈನ್ಯವು ಸಂಪೂರ್ಣವಾಗಿ ನಾಶಹೊಂದಿತು. ಆ ಸಮಯದಲ್ಲಿ ಧನುರ್ಧಾರಿಗಳಾದ ಹತ್ತುಸಾವಿರ ವೀರರು ಜಯ ಮತ್ತು ಪರಾಜಯ ಎರಡಕ್ಕೂ ಕಾರಣವಾದ ಯುದ್ಧವನ್ನು ಮಾಡಿಯೇ ತೀರಬೇಕೆಂದು ಕಠೋರವಾದ ನಿಶ್ಚಯಮಾಡಿ ಅರ್ಜುನನೊಡನೆ ಯುದ್ಧ ಮಾಡಲು ಹಿಂದಿರುಗಿ ಬಂದರು. ಆ ಮಹಾರಥರು ತಮ್ಮ ಹೃದಯದಲ್ಲಿದ್ದ ಭಯವನ್ನು ಸಂಪೂರ್ಣವಾಗಿ ದೂರೀಕರಿಸಿ ಅರ್ಜುನನನ್ನು ಮುತ್ತಿದರು. ಯುದ್ಧದಲ್ಲಿ ಪಾಂಡವರ ರಕ್ಷಣಾಭಾರವನ್ನು ಸಂಪೂರ್ಣವಾಗಿ ವಹಿಸಿ ಕೊಂಡಿದ್ದ ಅರ್ಜುನನು ಹತ್ತುಸಾವಿರ ಯೋಧರೊಡನೆ ಯುದ್ಧಮಾಡುವ ಮಹಾಭಾರವನ್ನು ವಹಿಸಿಕೊಂಡನು. ಮದೋದಕವನ್ನು ಸುರಿಸುತ್ತಿರುವ, ಸಂಕ್ರುದ್ಧವಾದ, ಅರುವತ್ತು ವರ್ಷದ ಆನೆಯೊಂದು ಯಾವರೀತಿಯಲ್ಲಿ ಅರಣ್ಯದಲ್ಲಿರುವ ಲಾಳದ ವನವನ್ನು ಧೂಳೀಪಟಲ ಮಾಡುವುದೋ–ಅದೇ ರೀತಿಯಲ್ಲಿ ಕುಪಿತನಾದ ಪಾರ್ಥನು ನಿನ್ನ ಸೈನ್ಯವನ್ನು ಧೂಳೀಪಟಲ ಮಾಡಿಬಿಟ್ಟನು. ಅರ್ಜುನನು ಕೌರವಸೈನ್ಯವನ್ನು ಮಥಿಸುತ್ತಿರಲಾಗಿ ನರಾಧಿಪ ನಾದ ಭಗದತ್ತನು ಸುಪ್ರತೀಕದೊಡನೆ ಧನಂಜಯನನ್ನು ಆಕ್ರಮಿಸಿದನು. ನರವ್ಯಾಘ್ರನಾದ ಅರ್ಜುನನು ರಥದಲ್ಲಿ ಕುಳಿತು ಭಗದತ್ತನನ್ನು ಎದುರಿಸಿ ದನು. ಅನಂತರ ರಥಕ್ಕೂ (ಅರ್ಜುನನಿಗೂ) ಸುಪ್ರತೀಕಕ್ಕೂ ನಡುವೆ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಶಾಸ್ತ್ರವಿಧಿಗೆ ಅನುಸಾರ ವಾಗಿ ಸಜ್ಜಾಗಿದ್ದ ರಥದಲ್ಲಿ ಕುಳಿತಿದ್ದ ವೀರನಾದ ಅರ್ಜುನನೂ ಶಾಸ್ತ್ರಕ್ಕೆ ಅನುಸಾರವಾಗಿ ಶಿಕ್ಷಿತವಾಗಿದ್ದ ಸುಪ್ರತೀಕದ ಮೇಲೆ ಕುಳಿತಿದ್ದ ವೀರನಾದ ಭಗದತ್ತನೂ ಸಂಗ್ರಾಮಭೂಮಿಯಲ್ಲಿ ಪರಸ್ಪರವಾಗಿ ಅಂತರವನ್ನು ನಿರೀಕ್ಷಿಸುತ್ತಾ ಚಲಿಸತೊಡಗಿದರು. ಅನಂತರ ಇಂದ್ರನಿಗೆ ಸಮಾನವಾದ ವೀರ್ಯ-ಪರಾಕ್ರಮಗಳನ್ನು ಹೊಂದಿದ್ದ ಭಗದತ್ತನು ಮೇಘಸದೃಶವಾದ ಆನೆಯಮೇಲೆ ಕುಳಿತು ಬಾಣಸಮೂಹರೂಪವಾದ ಮಳೆಯನ್ನು ಅರ್ಜುನನ ಮೇಲೆ ಸುರಿಸತೊಡಗಿದನು. ವೀರ್ಯವಂತನಾದ ಅರ್ಜುನನು ಭಗದತ್ತನ

ಅಂತಹ ಅವ್ಯಾಹತವಾದ ಬಾಣಗಳ ವರ್ಷವನ್ನು ಪ್ರತಿಯಾದ ಶರವರ್ಷದಿಂದ, ಅವುಗಳು ತನ್ನ ಸಮೀಪಕ್ಕೆ ಬರುವ ಮೊದಲೇ ತಡೆದು, ಪುನಃ ಭಗದತ್ತನ ಮೇಲೆ ಅಪಾರವಾದ ಬಾಣಗಳ ಮಳೆಗರೆದನು. ಅರ್ಜುನನು ಬಿಟ್ಟ ಬಾಣಗಳ ಸಮೂಹವನ್ನು ಭಗದತ್ತನು ತನ್ನ ಬಾಣಗಳಿಂದ ನಿವಾರಿಸಿಕೊಂಡು ಪುನಃ ತೀಕ್ಷ್ಣವಾದ ಅನೇಕ ಬಾಣಗಳಿಂದ ಮಹಾಬಾಹುವಾದ ಪಾರ್ಥನನ್ನೂ ಮತ್ತು ಶ್ರೀಕೃಷ್ಣನನ್ನೂ ಪ್ರಹರಿಸಿದನು. ಈ ರೀತಿಯಲ್ಲಿ ಭಗದತ್ತನು ಬಾಣಗಳ ಸಮೂಹದಿಂದ ಕೃಷ್ಣಾರ್ಜುನರನ್ನು ಸಂಪೂರ್ಣವಾಗಿ ಮುಚ್ಚಿ, ಕೃಷ್ಣಾರ್ಜುನರ ವಧೆಯ ಸಲುವಾಗಿ ಸುಪ್ರತೀಕವನ್ನು ಮುಂದಟ್ಟಿದನು. ಕ್ರುದ್ಧನಾದ ಅಂತಕನೋಪಾದಿಯಲ್ಲಿ ಮೇಲೆರಗಿ ಬರುತ್ತಿದ್ದ ಸುಪ್ರತೀಕವನ್ನು ನೋಡಿ ಶ್ರೀಕೃಷ್ಣನು ಅತಿಶೀಘ್ರವಾದ ರಥಚಾಲನೆಯಿಂದ ರಥವನ್ನು ಬಲಕ್ಕೆ ತಿರುಗಿಸಿ ರಥವು ಅದಕ್ಕೆ ಲಕ್ಷ್ಯವಾಗದಂತೆ ಮಾಡಿದನು.

**ತಂ ಪ್ರಾಪ್ತಮಪಿ ನೇಯೇಷ ಪರಾವೃತ್ತಂ ಮಹಾದ್ವಿಪಮ್ ।**
**ಸಾರೋಹಂ ಮೃತ್ಯುಸಾತ್ಕರ್ತುಂ ಸ್ಮರನ್ಧರ್ಮಂ ಧನಂಜಯಃ ॥೨೯॥**

ಯದ್ಯಪಿ ಆನೆಯು ತನ್ನ ಸಮೀಪಕ್ಕೆ ಬಂದಿದ್ದರೂ ಶ್ರೀಕೃಷ್ಣನು ರಥವನ್ನು ತಿರುಗಿಸಿದ ಕಾರಣದಿಂದ ಅದು ಹಿಮ್ಮುಖವಾಗಲಾಗಿ ಯುದ್ಧಧರ್ಮವನ್ನು ಸ್ಮರಿಸಿ ಅರ್ಜುನನು ಸವಾರನೊಡನೆ (ಭಗದತ್ತನೊಡನೆ) ಕೂಡಿದ್ದ ಆ ಆನೆಯನ್ನು ಸಂಹರಿಸಲು ಇಚ್ಛಿಸಲಿಲ್ಲ. ಆದರೆ ಆ ಆನೆಯು ಮುಂದುವರಿದು ಎದುರಿಗೆ ಸಿಕ್ಕಿದ ಆನೆಗಳನ್ನೂ, ರಥಗಳನ್ನೂ, ಕುದುರೆಗಳನ್ನೂ ತುಳಿದು ಧ್ವಂಸಮಾಡಿ ಯಮಲೋಕಕ್ಕೆ ಕಳುಹಿಸಿಬಿಟ್ಟಿತು. ಅದರಿಂದ ಅರ್ಜುನನು ಬಹಳ ಕ್ರುದ್ಧನಾದನು."

ಇ೮ನೆಯ ಅಧ್ಯಾಯವು ಮುಗಿಯಿತು.

೨೯ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಅರ್ಜುನ-ಭಗದತ್ತರ ಯುದ್ಧ: ಭಗದತ್ತನು ಪ್ರಯೋಗಿಸಿದ ವೈಷ್ಣವಾಸ್ತ್ರದಿಂದ ಶ್ರೀಕೃಷ್ಣನು ಅರ್ಜುನನನ್ನು ಪಾರುಮಾಡಿದುದು : ಅರ್ಜುನನಿಂದ ಸುಪ್ರತೀಕ-ಭಗದತ್ತರ ವಧೆ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

“ಸಂಜಯ! ನನಗೆ ಮುಂದಿನ ಯುದ್ಧವಾರ್ತೆಯನ್ನು ಹೇಳು. ಕ್ರುದ್ಧನಾದ ಧನಂಜಯನು ಭಗದತ್ತನಿಗೇನು ಮಾಡಿದನು? ಪ್ರಾಗ್ಜ್ಯೋತಿಷನೂ ಅರ್ಜುನನಿಗೆ ಯಾವರೀತಿಯಲ್ಲಿ ಪ್ರತಿಕ್ರಿಯೆಯನ್ನು ತೋರಿದನು? ಈ ವಿಷಯಗಳನ್ನು ನನಗೆ ಸವಿಸ್ತರವಾಗಿ ಹೇಳು.”

“ಮಹಾರಾಜ! ಭಗದತ್ತನೊಡನೆ ಯುದ್ಧದಲ್ಲಿ ತೊಡಗಿದ್ದ ಕೃಷ್ಣಾರ್ಜುನರನ್ನು ನೋಡಿ ಅವರಿಬ್ಬರೂ ಮೃತ್ಯುವಿನ ದವಡೆಯಲ್ಲಿ ಸಿಕ್ಕಿಕೊಂಡಿದ್ದಾರೆಂದೇ ಎಲ್ಲಪ್ರಾಣಿಗಳೂ ಭಾವಿಸಿದುವು. ಅದೇ ರೀತಿಯಲ್ಲಿಯೇ ಭಗದತ್ತನು ಆನೆಯ ಹೆಗಲಿನ ಮೇಲಿನಿಂದಲೇ, ರಥಸ್ಥರಾಗಿದ್ದ ಕೃಷ್ಣಾರ್ಜುನರ ಮೇಲೆ ಅನವರತವಾಗಿ ಬಾಣಗಳ ಮಳೆಗರೆಯುತ್ತಿದ್ದನು. ಭಗದತ್ತನು ಕಪ್ಪಾದ ಲೋಹದಿಂದ (ಉಕ್ಕಿನಿಂದ) ಮಾಡಲ್ಪಟ್ಟಿದ್ದ, ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಮತ್ತು ಉಜ್ಜುಕಲ್ಲಿನಿಂದ ಚೂಪಾಗಿ ಮಾಡಲ್ಪಟ್ಟಿದ್ದ ಬಾಣಗಳನ್ನು ಧನುಸ್ಸಿನಲ್ಲಿ ಯೋಜಿಸಿ ಶಿಂಜಿನಿಯನ್ನು ಆಕರ್ಣಾಂತವಾಗಿ ಸೆಳೆದು ದೇವಕಿಯ ಮಗನಾದ ಶ್ರೀಕೃಷ್ಣನನ್ನು ಪ್ರಹರಿಸಿದನು. ಅಗ್ನಿಯ ಸ್ಪರ್ಶಕ್ಕೆ ಸಮಾನವಾಗಿದ್ದು ಸ್ಪರ್ಶಮಾತ್ರದಿಂದಲೇ ದಹಿಸುವುದಾಗಿದ್ದ, ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ, ಭಗದತ್ತನಿಂದ ಬಿಡಲ್ಪಟ್ಟ ಆ ಬಾಣಗಳು ಶ್ರೀಕೃಷ್ಣನ ಶರೀರವನ್ನು ಭೇದಿಸಿಕೊಂಡು ಹೊರಬಂದು ಭೂಮಿಯನ್ನು ಪ್ರವೇಶಿಸಿದುವು.

ಅದರಿಂದ ಪರಮಕ್ರುದ್ಧನಾದ ಅರ್ಜುನನು ಭಗದತ್ತನ ಧನುಸ್ಸನ್ನು ಕತ್ತರಿಸಿ, ಅವನ ಸುತ್ತಲೂ ಇದ್ದ ಅಂಗರಕ್ಷಕರನ್ನೂ ಸಂಹರಿಸಿ ಭಗದತ್ತರಾಜ ನನ್ನು ಹಂಗಿಸುತ್ತಿರುವನೋ–ಎಂಬ ರೀತಿಯಲ್ಲಿ ಅವನೊಡನೆ ಯುದ್ಧಮಾಡು ತ್ತಿದ್ದನು. ಅನಂತರ ಭಗದತ್ತನು ಸೂರ್ಯರಶ್ಮಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ, ತೀಕ್ಷ್ಣವಾಗಿದ್ದ ಹದಿನಾಲ್ಕು ತೋಮರಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು. ಮರುಕ್ಷಣದಲ್ಲಿಯೇ ಅರ್ಜುನನು ಬಾಣಗಳಿಂದ ಒಂದೊಂದು ತೋಮರವನ್ನೂ ಎರಡೆರಡು ಭಾಗಗಳಾಗುವಂತೆ ಹದಿನಾಲ್ಕು ತೋಮರಗಳನ್ನೂ ಕತ್ತರಿಸಿದನು. ಅನಂತರ ಅರ್ಜುನನು ಬೃಹತ್ತಾದ ಬಾಣ ಗಳ ಸಮೂಹದಿಂದ ಸುಪ್ರತೀಕದ ಕವಚವನ್ನು ಕತ್ತರಿಸಿದನು. ಆ ಕವಚವು

ನುಚ್ಚು-ನೂರಾಗಿ ಭೂಮಿಯ ಮೇಲೆ ಚದುರಿ ಬಿದ್ದಿತು. ಕವಚವು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುಹೋದನಂತರವೂ ಆ ಆನೆಯು ಅರ್ಜುನನ ಅವ್ಯಾಹತವಾದ ಬಾಣಗಳಿಂದ ಬಹುವಾಗಿ ಪೀಡಿಸಲ್ಪಟ್ಟಿತು. ಆ ಸಮಯದಲ್ಲಿ ಕವಚರಹಿತವಾಗಿದ್ದ ಮತ್ತು ರಕ್ತದಿಂದ ತೋಯ್ದುಹೋಗಿದ್ದ ಸುಪ್ರತೀಕವು ನಿರಭ್ರವಾದ ಮತ್ತು ಗೈರಿಕಾದಿ ಧಾತುಗಳ ಪ್ರವಾಹದಿಂದ ಯುಕ್ತವಾದ ಪರ್ವತದಂತೆಯೇ ಕಾಣುತ್ತಿದ್ದಿತು. ತನ್ನ ಆನೆಗಾದ ಗಾಯಗಳನ್ನು ಕಂಡ ಭಗದತ್ತನು ಸುವರ್ಣಮಯವಾದ ದಂಡದಿಂದ ಕೂಡಿದ್ದ ಲೋಹ ಮಯವಾದ ಶಕ್ತ್ಯಾಯುಧವನ್ನು ವಾಸುದೇವನ ಮೇಲೆ ರಭಸದಿಂದೆಸೆದನು. ಮರುಕ್ಷಣದಲ್ಲಿಯೇ ಅರ್ಜುನನು ಆ ಶಕ್ತ್ಯಾಯುಧವನ್ನು ಎರಡಾಗಿ ಕತ್ತರಿಸಿ ಬಿಟ್ಟನು. ಅನಂತರ ಅರ್ಜುನನು ನಿಶಿತವಾದ ಬಾಣಗಳಿಂದ ಭಗದತ್ತನ ಛತ್ರವನ್ನೂ ಧ್ವಜವನ್ನೂ ಕತ್ತರಿಸಿ, ನಸುನಗುತ್ತಾ ಹತ್ತು ಬಾಣಗಳಿಂದ ಪರ್ವತೇಶ್ವರನಾದ ಭಗದತ್ತನನ್ನು ಗಾಯಗೊಳಿಸಿದನು. ಗೃಧ್ರದ ಸುಂದರ ವಾದ ರೆಕ್ಕೆಗಳಿಂದ ಕೂಡಿದ್ದ ಮಹಾಬಾಹುವಾದ ಅರ್ಜುನನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಜನಾಧಿಪನಾದ ಭಗದತ್ತನು ಪರಮಕ್ರುದ್ಧನಾಗಿ ಅರ್ಜುನನ ತಲೆಗೆ ಗುರಿಯಿಟ್ಟು ತೋಮರಗಳನ್ನು ಎಸೆದು ವೀರಗರ್ಜನೆ ಯನ್ನು ಮಾಡಿದನು. ಆ ತೋಮರಗಳು ಅರ್ಜುನನ ಕಿರೀಟವನ್ನು ತಲೆಕೆಳಗಾಗಿ ಮಾಡಿಬಿಟ್ಟುವು. ತಲೆಕೆಳಗಾಗಿದ್ದ ತನ್ನ ಕಿರೀಟವನ್ನು ಸರಿಮಾಡಿ ಕೊಳ್ಳುತ್ತಾ ಅರ್ಜುನನು ಭಗದತ್ತರಾಜನಿಗೆ ಹೇಳಿದನು. **'ಸುದೃಷ್ಟಃ ಕ್ರಿಯತಾಂ ಲೋಕಃ' 'ಲೋಕವೆಲ್ಲವನ್ನೂ ಒಮ್ಮೆ ಚೆನ್ನಾಗಿ ನೋಡಿಬಿಡು.'**

ಅರ್ಜುನನು ಹೀಗೆಂದು ಹೇಳುತ್ತಲೇ ಪರಮಕ್ರುದ್ಧನಾದ ಭಗದತ್ತನು ಪ್ರಕಾಶಮಾನವಾಗಿದ್ದ ಧನುಸ್ಸೊಂದನ್ನೆತ್ತಿಕೊಂಡು ಅರ್ಜುನನನ್ನು ಶ್ರೀಕೃಷ್ಣನ ಸಹಿತವಾಗಿಯೇ ಬಾಣಗಳ ಮಳೆಗರೆಯುವಿಕೆಯಿಂದ ಮುಚ್ಚಿಬಿಟ್ಟನು. ಅದಕ್ಕೆ ಪ್ರತಿಯಾಗಿ ಅರ್ಜುನನು ಭಗದತ್ತನ ನೂತನ ಧನುಸ್ಸನ್ನೂ ಪುನಃ ಕತ್ತರಿಸಿ ಅವನ ಬತ್ತಳಿಕೆಯನ್ನು ಚೂರು-ಚೂರು ಮಾಡಿದನು. ಪುನಃ ಅವಸರದಿಂದ ಇಪ್ಪತ್ತೆರಡು ಬಾಣಗಳನ್ನು ಭಗದತ್ತನ ಮೇಲೆ ಪ್ರಯೋಗಿಸಿ ಮರ್ಮಸ್ಥಳ ಗಳನ್ನು ಗಾಯಗೊಳಿಸಿದನು. ಬಾಣಗಳ ಸಮೂಹದಿಂದ ಏಕಕಾಲದಲ್ಲಿ ಪ್ರಹೃತನಾಗಿ ಗಾಯಗೊಂಡು ಬಹಳ ವ್ಯಥಿತನಾದ ಭಗದತ್ತನು ಪರಮ

ಕ್ರುದ್ಧನಾಗಿ ವೈಷ್ಣವಾಸ್ತ್ರವನ್ನು ಉದ್ಬೋಧಿಸುತ್ತಾ ವೈಷ್ಣವಮಂತ್ರದಿಂದ ಅಂಕುಶವನ್ನು ಅಭಿಮಂತ್ರಿಸಿ ಅರ್ಜುನನ ಎದೆಗೆ ಗುರಿಯಿಟ್ಟು ಎಸೆದನು.

ಮಹಾರಾಜ! ಭಗದತ್ತನು ಪ್ರಯೋಗಿಸಿದ ಆ ವೈಷ್ಣವಾಸ್ತ್ರವು ಸರ್ವವನ್ನೂ ನಾಶಪಡಿಸುವ ಸಾಮರ್ಥ್ಯವುಳ್ಳದ್ದಾಗಿದ್ದಿತು. ಆ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಆವರಣವಾಗಿ ನಿಂತು ರಭಸದಿಂದ ಬಂದ ವೈಷ್ಣವಾಸ್ತ್ರವನ್ನು ತನ್ನ ವಕ್ಷಃಸ್ಥಳದಲ್ಲಿ ಧರಿಸಿದನು.



ವೈಜಯನ್ತ್ಯಭವನ್ಮಾಲಾ ತದಸ್ತ್ರಂ ಕೇಶವೋರಸಿ।
ಪದ್ಮಕೋಶವಿಚಿತ್ರಾಢ್ಯಾ ಸರ್ವರ್ತುಕುಸುಮೋತ್ಕಟಾ ॥೧೯॥
ಜ್ವಲನಾರ್ಕೇಂದುವರ್ಣಾಭಾ ಪಾವಕೋಜ್ಜ್ವಲಪಲ್ಲವಾ।
ತಯಾ ಪದ್ಮಪಲಾಶಿನ್ಯಾ ವಾತಕಮ್ಪಿತಪತ್ರಯಾ।
ಶುಶುಭೇಽಭ್ಯಧಿಕಂ ಶೌರಿರತಸೀಪುಷ್ಪಸಂನಿಭಃ ॥೨೦॥

ಭಗದತ್ತನು ಪ್ರಯೋಗಿಸಿದ ವೈಷ್ಣವಾಸ್ತ್ರವು ಶ್ರೀಕೃಷ್ಣನ ವಕ್ಷಃಸ್ಥಳದಲ್ಲಿ ಬಿದ್ದು ವೈಜಯಂತೀಮಾಲೆಯಾಗಿ ಪರಿವರ್ತಿತವಾಯಿತು. ಆ ಮಾಲೆಯು ಕಮಲದ ಮೊಗ್ಗಿನ ವಿಚಿತ್ರವಾದ ಶೋಭೆಯಿಂದ ಯುಕ್ತವಾಗಿದ್ದಿತು. ಎಲ್ಲ ಋತುಗಳಲ್ಲಿಯೂ ಸಿಕ್ಕುವ ಕುಸುಮಗಳಿಂದಲೂ ಸಂಪನ್ನವಾಗಿದ್ದಿತು. ಅಗ್ನಿ,

ಸೂರ್ಯ ಮತ್ತು ಚಂದ್ರರ ಪ್ರಭೆಗಳಂತೆ ಜಾಜ್ವಲ್ಯಮಾನವಾದ ಪ್ರಭೆಯು ಆ ಮಾಲೆಯಿಂದ ಹೊರಹೊಮ್ಮುತ್ತಿದ್ದಿತು. ಅದರ ಒಂದೊಂದು ದಳವೂ ಅಗ್ನಿಯಂತೆ ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಪದ್ಮದ ಎಲೆಗಳಿಂದ ಕೂಡಿದ ಆ ಮಾಲೆಯಿಂದಲೂ ಮತ್ತು ಗಾಳಿಯಿಂದ ಅಳ್ಳಾಡುತ್ತಿದ್ದ ಪದ್ಮದ ದಳಗಳಿಂದಲೂ ಅಗಸೇಹೂವಿಗೆ ಸಮಾನವಾದ ಶರೀರಕಾಂತಿಯಿಂದ ಕೂಡಿದ್ದ ಶ್ರೀಕೃಷ್ಣನು ಬಹಳವಾಗಿ ಶೋಭಿಸಿದನು. (ಆದರೆ ಶ್ರೀಕೃಷ್ಣನ ಆ ಕಾರ್ಯವು ಅತುಲಪರಾಕ್ರಮಿಯಾದ ಅರ್ಜುನನಿಗೆ ಸಮಾಧಾನವನ್ನುಂಟು ಮಾಡಲಿಲ್ಲ. ಶ್ರೀಕೃಷ್ಣನ ಆ ಕಾರ್ಯದಿಂದ ಅವನ ಮಾಹಾತ್ಮ್ಯವನ್ನು ಅರ್ಜುನನು ಪ್ರತ್ಯಕ್ಷವಾಗಿಯೇ ಕಾಣುವಂತಾದರೂ ತನ್ನ ಮೇಲೆ ಬಿಟ್ಟಿದ್ದ ಅಸ್ತ್ರವನ್ನು ಶ್ರೀಕೃಷ್ಣನು ಮಧ್ಯಪ್ರವೇಶಿಸಿ ತಡೆದುದು ಅರ್ಜುನನಿಗೆ ಸರಿ ಎನಿಸಲಿಲ್ಲ.) ಆಯಾಸಗೊಂಡ (ವ್ಯಥೆಗೊಂಡ) ಮನಸ್ಸಿನಿಂದ ಕೂಡಿದ ಅರ್ಜುನನು ಕೇಶವನಿಗೆ ಹೇಳಿದನು:

**ಅಯುಧ್ಯಮಾನಸ್ತುರಗಾನ್ಸಂಯನ್ತಾಸ್ಮೀತಿ ಚಾನಘ ।**
**ಇತ್ಯುಕ್ತ್ವಾ ಪುಂಡರೀಕಾಕ್ಷ ಪ್ರತಿಜ್ಞಾಂ ಸ್ವಾಂ ನ ರಕ್ಷಸಿ ॥೨೨॥**
**ಯದ್ಯಹಂ ವ್ಯಸನೀ ವಾ ಸ್ಯಾಮಶಕ್ತೋ ವಾ ನಿವಾರಣೇ।**
**ತತಸ್ತ್ವಯೈವಂ ಕಾರ್ಯಂ ಸ್ಯಾನ್ನ ತತ್ಕಾರ್ಯಂ ಮಯಿ ಸ್ಥಿತೇ ॥೨೩॥**

“ಪಾಪರಹಿತನೇ! ಪುಂಡರೀಕಾಕ್ಷ! ‘ನಾನು ಯುದ್ಧಮಾಡುವುದಿಲ್ಲ. ಅರ್ಜುನನ ರಥದ ಕುದುರೆಗಳನ್ನು ಮಾತ್ರವೇ ನಿಯಂತ್ರಿಸುತ್ತೇನೆ’–ಎಂದು ಯುದ್ಧಕ್ಕೆ ಮೊದಲೇ ನೀನೇ ಪ್ರತಿಜ್ಞೆಮಾಡಿದ್ದೆ. ಆದರೆ ನಿನ್ನ ಆ ಪ್ರತಿಜ್ಞೆಯನ್ನು ನೀನೀಗ ರಕ್ಷಿಸುತ್ತಿಲ್ಲ. ನಾನೇನಾದರೂ ವ್ಯಸನದಲ್ಲಿ ಸಿಲುಕಿದ್ದರೆ ಅಥವಾ ವೈಷ್ಣವಾಸ್ತ್ರವನ್ನು ನಿವಾರಣೆಮಾಡಿಕೊಳ್ಳಲು ಅಸಮರ್ಥನಾಗಿದ್ದರೆ ನೀನು ಹೀಗೆ ಮಾಡಬಹುದಾಗಿದ್ದಿತು. ನಾನಿಲ್ಲಿ ಸನ್ನದ್ಧನಾಗಿರುವಾಗ ವೈಷ್ಣವಾಸ್ತ್ರವನ್ನು ತಡೆಯುವ ಸಾಮರ್ಥ್ಯವೂ ನನ್ನಲ್ಲಿರುವಾಗ ನೀನು ಹೀಗೆ ಮಾಡಬಾರದಾಗಿತ್ತು.

**ಸಬಾಣಃ ಸಧನುಶ್ಚಾಹಂ ಸಸುರಾಸುರಮಾನುಷಾನ್।**
**ಶಕ್ತೋ ಲೋಕಾನಿಮಾಂಜ್ಜೇತುಂ ತಚ್ಚಾಪಿ ವಿದಿತಂ ತವ ॥೨೪॥**

ಧನುರ್ಬಾಣಸಹಿತನಾದ ನಾನು ದೇವತೆಗಳಿಂದಲೂ, ಅಸುರ

ರಿಂದಲೂ, ಮನುಷ್ಯರಿಂದಲೂ ಸಹಿತವಾದ ಈ ಎಲ್ಲ ಲೋಕಗಳನ್ನೂ ಜಯಿಸಲು ಶಕ್ತನಾಗಿದ್ದೇನೆ. ಈ ವಿಷಯವೂ ನಿನಗೆ ತಿಳಿದೇ ಇದೆ. (ಆದುದರಿಂದ ನೀನು ಈ ಸಮಯದಲ್ಲಿ ಹೀಗೆ ಮಾಡಬಾರದಾಗಿತ್ತು.)"

ಮಹಾರಾಜ! ಅರ್ಜುನನ ಮಾತುಗಳನ್ನು ಕೇಳಿ ವಾಸುದೇವನು ಅರ್ಜುನನಿಗೆ ರಹಸ್ಯಪೂರ್ಣವಾದ ಈ ಮಾತುಗಳನ್ನು ಹೇಳಿದನು:

"ಅರ್ಜುನ! ಹಿಂದೆ ನಡೆದ ಒಂದು ವೃತ್ತಾಂತವನ್ನು ಹೇಳುತ್ತೇನೆ; ಕೇಳು. ನಾನು ಹೇಳಲಿರುವ ಈ ವೃತ್ತಾಂತವು ರಹಸ್ಯವಾದುದು.

**ಚತುರ್ಮೂರ್ತಿರಹಂ ಶಶ್ವಲ್ಲೋಕತ್ರಾಣಾರ್ಥಮುದ್ಯತಃ।**
**ಆತ್ಮಾನಂ ಪ್ರವಿಭಜ್ಯೇಹ ಲೋಕಾನಾಂ ಹಿತಮಾದಧೇ ॥೨೬॥**

**ಏಕಾ ಮೂರ್ತಿಸ್ತಪಶ್ಚರ್ಯಾಂ ಕುರುತೇ ಮೇ ಭುವಿ ಸ್ಥಿತಾ।**
**ಅಪರಾ ಪಶ್ಯತಿ ಜಗತ್ಕುರ್ವಾಣಂ ಸಾಧ್ವಸಾಧುನೀ ॥೨೭॥**
**ಅಪರಾ ಕುರುತೇ ಕರ್ಮ ಮಾನುಷಂ ಲೋಕಮಾಶ್ರಿತಾ।**
**ಶೇತೇ ಚತುರ್ಥೀ ತ್ವಪರಾ ನಿದ್ರಾಂ ವರ್ಷಸಹಸ್ರಿಕಾಮ್ ॥೨೮॥**

ನಾನು ನಾಲ್ಕು ವಿಧವಾದ ಸ್ವರೂಪಗಳನ್ನು ಧರಿಸಿ ಸರ್ವಕಾಲದಲ್ಲಿಯೂ ಎಲ್ಲ ಲೋಕಗಳ ರಕ್ಷಣೆಯಲ್ಲಿಯೂ ಜಾಗರೂಕನಾಗಿರುತ್ತೇನೆ. ನನ್ನನ್ನೇ ಅನೇಕ ಪ್ರಕಾರವಾಗಿ ವಿಭಾಗಿಸಿಕೊಂಡು ಎಲ್ಲ ಲೋಕಗಳ ಹಿತವನ್ನೂ ಸಾಧಿಸುತ್ತೇನೆ. ನನ್ನ ಒಂದು ಮೂರ್ತಿಯು ಭೂಮಂಡಲದಲ್ಲಿ (ಬದರಿಕಾಶ್ರಮದಲ್ಲಿ ನಾರಾಯಣರೂಪದಲ್ಲಿದ್ದು ) ತಪಶ್ಚರ್ಯೆಯನ್ನು ಮಾಡುತ್ತದೆ. ನನ್ನ ಎರಡನೆಯ ಸ್ವರೂಪವು ಶುಭಾಶುಭಕರ್ಮಗಳನ್ನು ಮಾಡುವ ಜಗತ್ತನ್ನು, ಸಾಕ್ಷಿಭೂತವಾಗಿದ್ದುಕೊಂಡು (ಪರಮಾತ್ಮಸ್ವರೂಪದಿಂದ) ನೋಡುತ್ತದೆ. ನನ್ನ ಮೂರನೆಯದಾದ ಮೂರ್ತಿಯು (ಕೃಷ್ಣಮೂರ್ತಿಯು) ಮನುಷ್ಯಲೋಕವನ್ನು ಆಶ್ರಯಿಸಿ ನಾನಾವಿಧವಾದ ಕರ್ಮಗಳನ್ನು ಮಾಡುತ್ತದೆ. ನನ್ನ ನಾಲ್ಕನೆಯ ಮೂರ್ತಿಯು ಸಹಸ್ರವರ್ಷಪರ್ಯಂತವಾಗಿ ಸಮುದ್ರದ ಮೇಲೆ ನಿದ್ರೆ ಮಾಡುತ್ತದೆ.

ಸಹಸ್ರವರ್ಷಪರ್ಯಂತವಾಗಿ ನಿದ್ರಿಸುತ್ತಿರುವ ನನ್ನ ನಾಲ್ಕನೆಯ ಮೂರ್ತಿಯು ಸಾವಿರ ವರ್ಷಗಳು ಕಳೆದೊಡನೆಯೇ ಎಚ್ಚರಗೊಳ್ಳುತ್ತದೆ. ಆ

ಸಮಯದಲ್ಲಿ ನನ್ನ ಮೂರ್ತಿಯು ವರಪಡೆಯಲು ಅರ್ಹರಾದ, ಶ್ರೇಷ್ಠರಾದ ಭಕ್ತರಿಗೆ ಅವರು ಕೇಳಿದ ವರಗಳನ್ನು ಕೊಡುತ್ತದೆ. ಅಂತಹ ಒಂದು ಕಾಲವು ಪ್ರಾಪ್ತವಾದುದನ್ನು ತಿಳಿದು (ನನ್ನ ನಾಲ್ಕನೆಯ ಮೂರ್ತಿಯು ಯೋಗನಿದ್ರೆಯಿಂದ ಎಚ್ಚರಗೊಳ್ಳುವ ಸಮಯವನ್ನು ತಿಳಿದು) ಪೃಥ್ವೀ ದೇವತೆಯು ತನ್ನ ಮಗನಾದ ನರಕಾಸುರನ ಸಲುವಾಗಿ ಒಂದು ವರವನ್ನು ಬೇಡಿದಳು. ಆ ವರವು ಯಾವುದೆಂಬುದನ್ನು ಹೇಳುವೆನು; ಕೇಳು:

**ದೇವಾನಾಂ ದಾನವಾನಾಂ ಚ ಅವಧ್ಯಸ್ತನಯೋಽಸ್ತು ಮೇ।**
**ಉಪೇತೋ ವೈಷ್ಣವಾಸ್ತ್ರೇಣ ತನ್ಮೇ ತ್ವಂ ದಾತುಮರ್ಹಸಿ ॥೩೧॥**

"ನನ್ನ ಮಗನು ದೇವತೆಗಳಿಂದಲೂ, ದಾನವರಿಂದಲೂ ಅವಧ್ಯನಾಗ ಬೇಕು. ಅವನು ಪರಮಶ್ರೇಷ್ಠವಾದ ವೈಷ್ಣವಾಸ್ತ್ರವನ್ನು ಹೊಂದಿರಬೇಕು. ಈ ವರವನ್ನು ನೀನು ನನಗೆ ದಯಪಾಲಿಸು."

ಸಾವಿರ ವರ್ಷಗಳ ನಿದ್ರೆಯಿಂದ ಎಚ್ಚೆತ್ತಾಗ ನಾನು, ಪೃಥ್ವೀದೇವಿಯು ತನ್ನ ಮಗನ ಸಲುವಾಗಿ ಬೇಡಿದ ಈ ವರವನ್ನು ಅವಳ ಮಗನಾದ ನರಕಾಸುರನಿಗೆ ಕೊಟ್ಟು, ಅಮೋಘವಾದ ಮತ್ತು ಶ್ರೇಷ್ಠವಾದ ವೈಷ್ಣವಾಸ್ತ್ರವನ್ನೂ ಕೊಟ್ಟೆನು. ಆ ಮಹಾಸ್ತ್ರವನ್ನು ಕೊಡುವ ಸಮಯದಲ್ಲಿ ನಾನು ಪೃಥ್ವೀದೇವಿಯನ್ನು ಕುರಿತು ಹೀಗೆ ಹೇಳಿದ್ದೆನು:

"ಭೂದೇವಿ! ಈ ಅಮೋಘವಾದ (ವ್ಯರ್ಥವಾಗದ) ವೈಷ್ಣವಾಸ್ತ್ರವು ನರಕಾಸುರನ ರಕ್ಷಣಾರ್ಥವಾಗಿ ಅವನ ಬಳಿಯಲ್ಲಿರಲಿ. ಈ ಮಹಾಸ್ತ್ರವು ಅವನ ಬಳಿಯಲ್ಲಿರುವಾಗ ಯಾವನೊಬ್ಬನೂ ಅವನನ್ನು ವಧಿಸಲಾರನು. ಈ ಮಹಾಸ್ತ್ರದಿಂದ ಪರಿರಕ್ಷಿತನಾಗುವ, ಶತ್ರುಗಳ ಬಲವನ್ನು ವಿನಾಶಗೊಳಿಸುವ ನಿನ್ನ ಮಗನು ಸರ್ವಲೋಕಗಳಲ್ಲಿಯೂ ಸರ್ವಕಾಲದಲ್ಲಿಯೂ ಎದುರಿಸಲು ಅಸಾಧ್ಯನಾಗುತ್ತಾನೆ. (ಈ ಮಹಾಸ್ತ್ರವು ನರಕನ ಬಳಿಯಲ್ಲಿರುವಾಗ ದುರಾಧರ್ಷನಾದ ಅವನನ್ನು ವಿಶ್ವದಲ್ಲಿಯೇ ಯಾರೂ ಎದುರಿಸಲಾರರು.)"

ನಾನು ಹೀಗೆಂದು ಹೇಳಿದನಂತರ ಕೃತಾಭಿಲಾಷಳಾದ, ಮನಸ್ವಿನಿ ಯಾದ ಭೂದೇವಿಯು 'ಹಾಗೆಯೇ ಆಗಲಿ'–ಎಂದು ಹೇಳಿ ಹೊರಟು ಹೋದಳು. ನಾನು ಕೊಟ್ಟ ವರದಂತೆ ಶತ್ರುತಾಪನನಾದ ನರಕನು ಅತ್ಯಂತ

ದುರ್ಜಯನಾದನು. (ದೇವ-ದಾನವರಲ್ಲಿ ಯಾರೂ ಅವನನ್ನು ಎದುರಿಸಿ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ.) ಆ ನನ್ನ ವೈಷ್ಣವಾಸ್ತ್ರವೇ ನರಕನಿಂದ ಪ್ರಾಗ್ಜ್ಯೋತಿಷನಿಗೆ ಲಭಿಸಿತು. ಆರ್ಯ! ಇಂದ್ರ ಮತ್ತು ರುದ್ರಸಹಿತವಾದ ಮೂರು ಲೋಕಗಳಲ್ಲಿ ವೈಷ್ಣವಾಸ್ತ್ರದಿಂದ ವಧಿಸಲ್ಪಡದೇ ಇರತಕ್ಕವನು ಯಾರೂ ಇರುವುದಿಲ್ಲ. (ಅದು ನಿನ್ನನ್ನೂ ಸಹ ವಧಿಸುತ್ತಿದ್ದಿತು.) ಆದುದರಿಂದ ನಾನು ನಿನ್ನ ಸಲುವಾಗಿಯೇ–ನಿನ್ನನ್ನು ರಕ್ಷಿಸುವ ಸಲುವಾಗಿಯೇ ವೈಷ್ಣವ ಮಹಾಸ್ತ್ರವನ್ನು ಬೇರೆಯ ರೀತಿಯಲ್ಲಿ ತಿರುಗಿಸಿಬಿಟ್ಟೆನು. (ಆ ಮಹಾಸ್ತ್ರವು ಭಗದತ್ತನಲ್ಲಿರುವವರೆಗೂ ಅವನು ಎಲ್ಲರಿಂದಲೂ ಅವಧ್ಯನೇ ಆಗಿದ್ದನು.) ಪರಮಾಸ್ತ್ರದಿಂದ ವಂಚಿತನಾಗಿರುವ ಈ ಮಹಾಸುರನನ್ನು ಈ ಕೂಡಲೇ ಸಂಹರಿಸು. ಪಾರ್ಥ! ದುರ್ಜಯನಾಗಿದ್ದ, ನಿನ್ನ ವೈರಿಯಾದ ಮತ್ತು ದೇವತೆಗಳಿಗೂ ದ್ವೇಷಿಯಾದ ಭಗದತ್ತನನ್ನು– ಹಿಂದೆ ನಾನು ಯಾವ ರೀತಿಯಲ್ಲಿ ಸರ್ವಲೋಕಗಳ ಹಿತಾರ್ಥವಾಗಿ ನರಕಾಸುರನನ್ನು ಸಂಹರಿಸಿದೆನೋ–ಅದೇ ರೀತಿಯಲ್ಲಿ ಸಂಹರಿಸು.”

ಮಹಾರಾಜ! ಮಹಾತ್ಮನಾದ ಕೇಶವನು ಪಾರ್ಥನಿಗೆ ಹೀಗೆಂದು ಹೇಳಿದ ಕೂಡಲೇ ಅರ್ಜುನನು ನಿಶಿತವಾದ ಬಾಣಗಳಿಂದ ಭಗದತ್ತನನ್ನು ಮುಚ್ಚಿಬಿಟ್ಟನು. ಅನಂತರ ಮಹಾತ್ಮನಾದ, ಮಹಾಬಾಹುವಾದ ಪಾರ್ಥನು ಸ್ವಲ್ಪವಾದರೂ ಭ್ರಾಂತನಾಗದೆ ಸುಪ್ರತೀಕದ ಕುಂಭಸ್ಥಳದ ಮಧ್ಯಕ್ಕೆ ಸರಿಯಾಗಿ ಗುರಿಯಿಟ್ಟು ನಾರಾಚದಿಂದ ಪ್ರಹರಿಸಿದನು. ಆನೆಯ ಬಳಿಗೆ ರಭಸದಿಂದ ಹೋದ ನಾರಾಚವು–ವಜ್ರಾಯುಧವು ಪರ್ವತವನ್ನು ಹೊಕ್ಕಂತೆ–ಸರ್ಪವು ಬಿಲದೊಳಗೆ ಸೇರಿಕೊಳ್ಳುವಂತೆ–ರೆಕ್ಕೆಯ ಸಮೇತವಾಗಿ ಕುಂಭಸ್ಥಳವನ್ನು ಹೊಕ್ಕಿತು. ಹಿಂದಿನಂತೆಯೇ ಭಗದತ್ತನು ಆನೆಯನ್ನು ಶತ್ರುಗಳ ಮೇಲೆ ಬೀಳುವಂತೆ ಬಾರಿ-ಬಾರಿಗೂ ಪ್ರಚೋದಿಸುತ್ತಲೇ ಇದ್ದನು. ಆದರೆ ಆ ಆನೆಯು–**ದರಿದ್ರಸ್ಯೇವ ಯೋಷಿತಾ** ದರಿದ್ರಮನುಷ್ಯನ ದುಷ್ಟಪತ್ನಿಯು ತನ್ನ ಪತಿಯ ಮಾತನ್ನು ಕೇಳದ ರೀತಿಯಲ್ಲಿ–ಭಗದತ್ತನ ಪ್ರೇರಣೆಯಂತೆ ನಡೆದುಕೊಳ್ಳಲಿಲ್ಲ. ಆ ಮಹಾಗಜವು ತನ್ನ ಅಂಗಾಂಗಗಳನ್ನೂ ನಿಷ್ಕ್ರಿಯಗೊಳಿಸಿ ತನ್ನ ಎರಡು ದಂತಗಳನ್ನೂ ಭೂಮಿಗೆ ಊರೆಕೊಟ್ಟುಕೊಂಡು ಕೆಳಗೆ ಬಿದ್ದು ಆರ್ತಧ್ವನಿಮಾಡುತ್ತಾ ಪ್ರಾಣಗಳನ್ನು ತೊರೆಯಿತು. ಭಗದತ್ತನ ಆನೆಯು ಕೆಳಕ್ಕೆ ಬಿದ್ದು ಸತ್ತುಹೋದನಂತರ ಕೇಶವನು ಅರ್ಜುನನಿಗೆ ಹೇಳಿದನು:

"ಅರ್ಜುನ! ನರೆತುಹೋದ ಕೂದಲುಗಳಿಂದ ಸಮಾವೃತನಾಗಿರುವ ಈ ಭಗದತ್ತನು ಮಹಾಪುರುಷನು; ಮಹಾಬಲಿಷ್ಠನು; ಮಹಾಶೂರನು; ಅತ್ಯಂತ ದುರ್ಜಯನು; ಜಯಿಸಲು ದುಃಸಾಧ್ಯನಾದವನು; ಸುಕ್ಕಿಹೋಗಿ ರುವ ಚರ್ಮವುಳ್ಳ ಅವನ ಹುಬ್ಬುಗಳಿಂದ ಅವನ ಕಣ್ಣುಗಳೇ ಮುಚ್ಚಿ ಹೋಗುತ್ತಿವೆ. ಹುಬ್ಬಿನ ಸುಕ್ಕಿಹೋದ ಮತ್ತು ಜೋತುಬಿದ್ದ ಚರ್ಮದಿಂದ ಕಣ್ಣುಗಳು ಮುಚ್ಚದ ರೀತಿಯಲ್ಲಿ ಕಣ್ಣುಗಳನ್ನು ತೆರೆಯುವ ಸಲುವಾಗಿ ಹುಬ್ಬಿನ ಜೋತುಬಿದ್ದ ಚರ್ಮವನ್ನು ಸೇರಿಸಿ ಒಂದು ಪಟ್ಟಿಯನ್ನು ಈ ಭಗದತ್ತರಾಜನು ಕಟ್ಟಿಕೊಂಡಿರುತ್ತಾನೆ."



ಮಹಾರಾಜ! ಶ್ರೀಕೃಷ್ಣನು ಹೇಳಿದ ಮಾತಿನ ಇಂಗಿತವನ್ನು ಗ್ರಹಿಸಿದ ಅರ್ಜುನನು ಬಹಳ ಶೀಘ್ರವಾಗಿ, ಭಗದತ್ತನು ಹುಬ್ಬಿನ ಚರ್ಮವನ್ನು ಮೇಲಕ್ಕೆಳೆದು ಕಟ್ಟಿಕೊಂಡಿದ್ದ ಪಟ್ಟಿಯನ್ನು ಬಾಣದಿಂದ ಕತ್ತರಿಸಿಬಿಟ್ಟನು. ಪಟ್ಟಿಯಾಗಿ ಕಟ್ಟಿದ್ದ ಬಟ್ಟೆಯು ಕತ್ತರಿಸಿ ಹೋಗಲಾಗಿ ಹುಬ್ಬಿನ ಸುಕ್ಕಿಹೋಗಿದ್ದ ಮತ್ತು ಜೋತುಬಿದ್ದಿದ್ದ ಚರ್ಮದಿಂದ ಭಗದತ್ತನ ಕಣ್ಣುಗಳು ಮುಚ್ಚಿ ಹೋದುವು. ಪ್ರತಾಪವಂತನಾದ ಭಗದತ್ತನು ಜಗತ್ತೆಲ್ಲವೂ ಕತ್ತಲಿನಿಂದ ವ್ಯಾಪ್ತವಾಗಿದೆಯೆಂದೇ ಭಾವಿಸಿದನು. ಆ ಸಮಯದಲ್ಲಿ ಪಾರ್ಥನು ಬಗ್ಗಿದ ಗಿಣ್ಣೆನಿಂದ ಕೂಡಿದ್ದ ಅರ್ಧಚಂದ್ರಾಕಾರದ ಬಾಣವೊಂದನ್ನು

ಬತ್ತಳಿಕೆಯಿಂದ ತೆಗೆದು, ಧನುಸ್ಸಿನಲ್ಲಿ ಯೋಜಿಸಿ ಕಿವಿಯವರೆಗೂ ಸೆಳೆದು ಪ್ರಹರಿಸಿ, ಭಗದತ್ತರಾಜನ ಹೃದಯವನ್ನು ಸೀಳಿಬಿಟ್ಟನು. ಕಿರೀಟಿಯಿಂದ ಭಿನ್ನಹೃದಯನಾದ ಭಗದತ್ತನು ಒಡನೆಯೇ ಅಸುನೀಗಿದನು. ಅವನ ಕೈಯ್ಯಲ್ಲಿದ್ದ ಧನುಸ್ಸು ಮತ್ತು ಬಾಣಗಳು ಜಾರಿ ಕೆಳಕ್ಕೆ ಬಿದ್ದುವು. ಕಮಲದ ನಾಳದ ಬಡಿಯುವಿಕೆಯಿಂದ ಅದರ ಎಲೆಯು ಕೆಳಗೆ ಬೀಳುವಂತೆ–ಭಗದತ್ತನು ಅಸುನೀಗಿ ಕೆಳಕ್ಕೆ ಬೀಳುತ್ತಿರಲಾಗಿ–ತಲೆಯ ಮೇಲಿದ್ದ ಬಟ್ಟೆಯು ಅವನ ತಲೆಯಿಂದ ಕೆಳಕ್ಕೆ ಬಿದ್ದಿತು. ಹೂಗಳಿಂದ ಸಮೃದ್ಧವಾದ ಬೆಟ್ಟದ ಕಣಿಗಿಲೇ ಮರವು ಬಿರುಗಾಳಿಯ ಬಡಿತಕ್ಕೆ ಸಿಕ್ಕಿ ಬುಡಮೇಲಾಗಿ ಪರ್ವತದ ತುದಿಯಿಂದ ಕೆಳಕ್ಕೆ ಬೀಳುವಂತೆ–ಸುವರ್ಣಮಾಲೆಯಿಂದ ಸಮಲಂಕೃತ ನಾಗಿದ್ದ ಭಗದತ್ತನು ಸುವರ್ಣಾಭರಣಗಳಿಂದ ವಿಭೂಷಿತವಾಗಿದ್ದ, ಪರ್ವತೋಪಮವಾಗಿದ್ದ ಆನೆಯ ಮೇಲಿಂದ ಕೆಳಕ್ಕೆ ಬಿದ್ದನು.

ನಿಹತ್ಯ ತಂ ನರಪತಿಮಿನ್ದ್ರವಿಕ್ರಮಂ
ಸಖಾಯಮಿನ್ದ್ರಸ್ಯ ತದೈನ್ದ್ರಿರಾಹವೇ।

**ತತೋಽಪರಾಂಸ್ತವ ಜಯಕಾಂಕ್ಷಿಣೋ ನರಾ–**
**ನ್ಬಭಞ್ಜ ವಾಯುರ್ಬಲವಾನ್ದ್ರುಮಾನಿವ ॥೫೧॥**

ಮಹಾರಾಜ! ಈ ರೀತಿಯಾಗಿ ಇಂದ್ರನ ಮಗನಾದ ಅರ್ಜುನನು ಇಂದ್ರಸಮಪರಾಕ್ರಮಿಯಾದ, ಇಂದ್ರಸಖನಾದ ಭಗದತ್ತರಾಜನನ್ನು ಸಂಹ ರಿಸಿ ಅನಂತರ ವಿಜಯದ ಆಕಾಂಕ್ಷೆಯಿಂದಿದ್ದ ನಿನ್ನ ಕಡೆಯ ಯೋಧರನ್ನು ಚಂಡಮಾರುತವು ವೃಕ್ಷಗಳನ್ನು ಧ್ವಂಸಮಾಡುವಂತೆ–ಧ್ವಂಸಮಾಡಿದನು.

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಅರ್ಜುನನು ವೃಕನನ್ನೂ ಅಚಲನನ್ನೂ ಸಂಹರಿಸಿದುದು : ಶಕುನಿಯ ಮಾಯಾಯುದ್ಧ ಮತ್ತು ಪರಾಜಯ : ಕೌರವಸೇನೆಯ ಪಲಾಯನ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ಇಂದ್ರನಿಗೆ ಯಾವಾಗಲೂ ಪ್ರಿಯನಾಗಿದ್ದ ಮತ್ತು

ಆಪ್ತಮಿತ್ರನಾಗಿದ್ದ ಮಹಾತೇಜಸ್ವಿಯಾಗಿದ್ದ ಭಗದತ್ತನನ್ನು ಅರ್ಜುನನು ಸಂಹರಿಸಿದ ಬಳಿಕ ದಕ್ಷಿಣದಿಕ್ಕಿಗೆ ಪ್ರದಕ್ಷಿಣಾಕಾರವಾಗಿ ತಿರುಗಿದನು. ಅಲ್ಲಿಯೇ ಇದ್ದ ಪರಪುರಂಜಯರಾದ, ಗಾಂಧಾರರಾಜನಾದ ಸುಬಲನ ಮಕ್ಕಳಾದ ವೃಷಕ ಮತ್ತು ಅಚಲ ಎಂಬ ಇಬ್ಬರು ಸಹೋದರರು ಅರ್ಜುನನನ್ನು ಬಾಣಗಳಿಂದ ಪೀಡಿಸತೊಡಗಿದರು. ಇಬ್ಬರೂ ಒಟ್ಟಾಗಿ ಸೇರಿಕೊಂಡು ಅರ್ಜುನನೊಡನೆ ಯುದ್ಧಮಾಡುತ್ತಿದ್ದರು.

ಶ್ರೇಷ್ಠಧನುಷ್ಮಂತರಾದ ಆ ವೀರರಲ್ಲಿ ಒಬ್ಬನು ಅರ್ಜುನನ ಮುಂಭಾಗ ದಲ್ಲಿಯೂ-ಮತ್ತೊಬ್ಬನು ಹಿಂಭಾಗದಲ್ಲಿಯೂ ನಿಂತು ಮಹಾವೇಗಯುಕ್ತ ವಾದ, ನಿಶಿತವಾದ ಮತ್ತು ಶೀಘ್ರಗಾಮಿಗಳಾದ ಬಾಣಗಳಿಂದ ಸತತವಾಗಿ ಪ್ರಹರಿಸುತ್ತಿದ್ದರು. ಅರ್ಜುನನು ಸುಬಲನ ಮಗನಾದ ವೃಷಕನ ರಥದ ಕುದುರೆಗಳನ್ನೂ, ಸಾರಥಿಯನ್ನೂ ಸಂಹರಿಸಿ ಅವನ ಧನುಸ್ಸನ್ನೂ, ಛತ್ರವನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ರಥವನ್ನೂ ಸಹ ಧ್ವಂಸಮಾಡಿದನು. ಅನಂತರ ಅರ್ಜುನನು ಬಾಣಗಳ ಸಮೂಹಗಳಿಂದಲೂ ಮತ್ತು ನಾನಾವಿಧವಾದ ಆಯುಧಗಳಿಂದಲೂ ಸುಬಲಪುತ್ರಪ್ರಮುಖರಾದ ಗಾಂಧಾರಯೋಧರನ್ನು ಪ್ರಹರಿಸಿ ಅವರನ್ನು ಪುನಃ-ಪುನಃ ವ್ಯಾಕುಲಗೊಳ್ಳುವಂತೆ ಮಾಡುತ್ತಿದ್ದನು. ಕ್ರುದ್ಧನಾದ ಅರ್ಜುನನು ನಿಶಿತವಾದ ಬಾಣಗಳಿಂದ, ಆಯುಧಗಳನ್ನೆತ್ತಿ ಕೊಂಡು ತನ್ನೊಡನೆ ಯುದ್ಧಮಾಡಲು ಬಂದ ಐದು ನೂರು ಮಂದಿ ಗಾಂಧಾರವೀರರನ್ನು ಮೃತ್ಯುಲೋಕಕ್ಕೆ ಕಳುಹಿಸಿಕೊಟ್ಟನು. ಕುದುರೆ-ಸಾರಥಿ ಗಳೊಡನೆ ರಥವೂ ಸಂಪೂರ್ಣವಾಗಿ ಧ್ವಂಸವಾಗಿ ಹೋಗಲಾಗಿ, ಮಹಾ ಭುಜನಾದ ವೃಷಕನು, ಕೂಡಲೇ ಮುರಿದುಹೋಗಿದ್ದ ತನ್ನ ರಥದಿಂದಿಳಿದು ತನ್ನ ಸೋದರನಾದ ಅಚಲನ ರಥದಲ್ಲಿ ಕುಳಿತು ಮತ್ತೊಂದು ನೂತನ ಧನುಸ್ಸನ್ನು ಕೈಗೆತ್ತಿಕೊಂಡನು. ಒಂದೇ ರಥದಲ್ಲಿ ಕುಳಿತಿದ್ದ ಅಚಲ-ವೃಷಕ ಸಹೋದರರಿಬ್ಬರೂ ಬಾಣಗಳ ವರ್ಷದಿಂದ ಅರ್ಜುನನನ್ನು ಮತ್ತೆ ಮತ್ತೆ ಪ್ರಹರಿಸುತ್ತಿದ್ದರು. ಮಹಾರಾಜ! ನಿನ್ನ ಭಾವಮೈದಂದಿರಾದ, ಮಹಾತ್ಮರಾದ ರಾಜಕುಮಾರರಾದ ವೃಷಕಾಚಲರು ವೃತ್ರಾಸುರ-ಬಲಾಸುರರು ಇಂದ್ರನನ್ನು ಪ್ರಹರಿಸುತ್ತಿದ್ದಂತೆ–ಅರ್ಜುನನನ್ನು ಬಹಳವಾಗಿ ಗಾಯಗೊಳಿಸಿದರು.

ನಿದಾಘ-ವಾರ್ಷಿಕಮಾಸಗಳು (ಆಷಾಢ-ಶ್ರಾವಣಮಾಸಗಳು) ಲೋಕ ವನ್ನು ಯಾವರೀತಿಯಲ್ಲಿ ಉಷ್ಣವಾದ ಕಿರಣಗಳಿಂದ ತಾಪಗೊಳಿಸುತ್ತವೆಯೋ

ಅದೇ ರೀತಿಯಲ್ಲಿ ಲಕ್ಷ್ಯಭೇದನದಲ್ಲಿ ಸಿದ್ಧಹಸ್ತರಾದ ವೃಷಕಾಚಲರು ಅರ್ಜುನನನ್ನು ಪುನಃ ಬಾಣಗಳಿಂದ ಪ್ರಹರಿಸಿದರು. ನರಶ್ರೇಷ್ಠರಾದ, ರಥದಲ್ಲಿ ಒಬ್ಬರಿಗೊಬ್ಬರು ಕೂಡಿಕೊಂಡೇ ಕುಳಿತಿದ್ದ ಇಬ್ಬರು ರಾಜಕುಮಾರ ರನ್ನೂ ಅರ್ಜುನನು ಒಂದೇ ಬಾಣದಿಂದ ಪ್ರಹರಿಸಿದನು. ಸಿಂಹಸದೃಶ ಪರಾಕ್ರಮವುಳ್ಳವರಾಗಿದ್ದ, ಕೆಂಗಣ್ಣರಾಗಿದ್ದ, ಮಹಾಭುಜರಾಗಿದ್ದ, ವೀರ ರಾಗಿದ್ದ, ಒಂದೇ ವಿಧವಾದ ಲಕ್ಷಣಗಳಿಂದ ಪರಿಶೋಭಿಸುತ್ತಿದ್ದ ವೃಷಕಾಚಲ ರಾಜಕುಮಾರರು ಅರ್ಜುನನು ಬಿಟ್ಟ ಒಂದೇ ಬಾಣಕ್ಕೆ ಲಕ್ಷ್ಯರಾಗಿ ಏಕಕಾಲದಲ್ಲಿ ರಥದಿಂದ ಕೆಳಕ್ಕೆ ಬಿದ್ದರು. ಆ ಇಬ್ಬರ ದೇಹಗಳೂ ಅವರ ಬಂಧುಗಳಿಗೆ ಬಹಳ ಪ್ರಿಯವಾಗಿದ್ದುವು. ರಥದಿಂದ ಭೂಮಿಗೆ ಬಿದ್ದ ಆ ಇಬ್ಬರೂ ಪವಿತ್ರವಾದ ತಮ್ಮ ಯಶಸ್ಸನ್ನು ಹತ್ತುದಿಕ್ಕುಗಳಲ್ಲಿಯೂ ವ್ಯಾಪಿಸು ವಂತೆ ಮಾಡಿ ಪುನಃ ಎಚ್ಚರಗೊಳ್ಳದೆ ಅಲ್ಲಿಯೇ ಸ್ಥಿರವಾಗಿ ಮಲಗಿದರು. (ವೀರಶ್ರೇಷ್ಠನಾದ ಅರ್ಜುನನೊಡನೆಯೇ ಅತ್ಯಂತ ಪರಾಕ್ರಮದಿಂದ, ಧೈರ್ಯದಿಂದ ಯುದ್ಧಮಾಡಿ ಮರಣಹೊಂದಿದರೆಂಬ ಕೀರ್ತಿಯನ್ನು ಗಾಂಧಾರರಾಜಕುಮಾರರು ಪಡೆದುಕೊಂಡರು.) ಯುದ್ಧದಲ್ಲಿ ಪಲಾಯನ ಮಾಡದೇ ಅರ್ಜುನನೊಡನೆಯೇ ಧೈರ್ಯದಿಂದ ಯುದ್ಧಮಾಡಿದ ತಮ್ಮ ಇಬ್ಬರು ಸೋದರಮಾವಂದಿರು ಅರ್ಜುನನಿಂದ ಯುದ್ಧದಲ್ಲಿ ಹತರಾದುದನ್ನು ಕಂಡು ನಿನ್ನ ಮಕ್ಕಳೆಲ್ಲರೂ ಬಹಳವಾಗಿ ಕಣ್ಣೀರು ಸುರಿಸಿದರು. ನೂರಾರು ತೆರನಾದ ಮಾಯೆಗಳಲ್ಲಿ ವಿಶಾರದನಾಗಿದ್ದ ಶಕುನಿಯು ತನ್ನ ಅನುಜರಾದ ವೃಷಕಾಚಲರು ಅರ್ಜುನನಿಂದ ಹತರಾದುದನ್ನು ನೋಡಿ ಕೃಷ್ಣರಿಬ್ಬರನ್ನೂ ಸಮ್ಮೋಹಗೊಳಿಸುತ್ತಾ ಮಾಯಾಯುದ್ಧವಿದ್ಯೆಯ ಪ್ರಯೋಗಮಾಡಲು ಉಪಕ್ರಮಿಸಿದನು. ದೊಣ್ಣೆಗಳು, ಕಬ್ಬಿಣದ ಸಲಾಕಿಗಳು, ಕಲ್ಲುಗಳು, ಶತಘ್ನಿಗಳು, ಶಕ್ತ್ಯಾಯುಧಗಳು, ಗದೆಗಳು, ಪರಿಘಾಯುಧಗಳು, ನಿಸ್ತ್ರಿಂಶಗಳು (ಕತ್ತಿಗಳು), ಶೂಲಗಳು, ಮುದ್ಗರಗಳು, ಪಟ್ಟಿಶಗಳು, ಕಂಪನಗಳು, ಋಷ್ಟಿಗಳು, ನಖರಗಳು, ಮುಸಲಗಳು, ಗಂಡುಗೊಡಲಿಗಳು, ಚೂರಿಗಳು, ಕ್ಷುರಪ್ರಗಳು, ನಾಲೀಕಗಳು, ವತ್ಸದಂತಗಳು, ಅಸ್ಥಿಸಂಧಿಗಳು, ಚಕ್ರಗಳು, ಬಾಣಗಳು, ಪ್ರಾಸಗಳು–ಇವೇ ಮುಂತಾದ ಅನೇಕ ವಿಧವಾದ ಆಯುಧಗಳು ನೂರಾರು ಸಂಖ್ಯೆಯಲ್ಲಿ ದಿಕ್ಕುಗಳಿಂದಲೂ, ಉಪದಿಕ್ಕುಗಳಿಂದಲೂ ವೇಗ

ವಾಗಿ ಬಂದು ಅರ್ಜುನನ ಮೇಲೆ ಬೀಳತೊಡಗಿದುವು. ಕತ್ತೆಗಳು, ಒಂಟೆಗಳು, ಕೋಣಗಳು, ಸಿಂಹಗಳು, ಹುಲಿಗಳು, ಬೆಟ್ಟದ ಹಸುಗಳು, ಚಿರತೆಗಳು, ಕರಡಿಗಳು, ತೋಳಗಳು, ರಣಹದ್ದುಗಳು, ಕಪಿಗಳು, ಸರ್ಪ ಗಳು, ಹಲವುಬಗೆಯ ರಾಕ್ಷಸರು, ವಿಧ-ವಿಧವಾದ ಪಕ್ಷಿಗಳು—ಈ ಎಲ್ಲವೂ ಹಸಿವಿನಿಂದ ವ್ಯಾಕುಲಿತವಾಗಿ ಕೋಪಗೊಂಡು ಅರ್ಜುನನ ಕಡೆಗೆ ಧಾವಿಸಿ ದುವು. ಅನಂತರ ದಿವ್ಯಾಸ್ತ್ರವನ್ನು ತಿಳಿದಿದ್ದ, ಶೂರನಾದ, ಕುಂತಿಯ ಮಗನಾದ ಅರ್ಜುನನು ಬಾಣಗಳ ಸಮೂಹಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ತನ್ನ ಮೇಲೆ ಬೀಳಲು ಬರುತ್ತಿದ್ದ ಎಲ್ಲ ದುಷ್ಟಮೃಗಗಳನ್ನೂ ಪ್ರಹರಿಸಿದನು.

ಶೂರನಾದ ಅರ್ಜುನನು ಶ್ರೇಷ್ಠವಾದ ಮತ್ತು ದೃಢವಾದ ಬಾಣಗಳಿಂದ ಅವುಗಳನ್ನು ಪ್ರಹರಿಸಲಾಗಿ ಮಾಯಾಕಲ್ಪಿತವಾದ ಆ ಪ್ರಾಣಿಗಳೆಲ್ಲವೂ ಬಹು ಘೋರವಾಗಿ ಚೀತ್ಕಾರಮಾಡುತ್ತಾ ಅಲ್ಲಲ್ಲಿಯೇ ಅಸುಗಳನ್ನು ತೊರೆದು ವಿನಾಶಹೊಂದಿದುವು. ಅನಂತರ ಗಾಢಾಂಧಕಾರವು ಅರ್ಜುನನ ರಥವನ್ನು ಆವರಿಸಿತು. ಆ ಕತ್ತಲೆಯಲ್ಲಿ ಕರ್ಣಕಠೋರವಾದ ಬೆದರಿಕೆಯ ಮಾತುಗಳು ಅರ್ಜುನನಿಗೆ ಕೇಳಿಬಂದುವು. ಒಡನೆಯೇ ಅರ್ಜುನನು ಭಯಂಕರವಾಗಿದ್ದ, ಘೋರವಾಗಿದ್ದ, ಭಯವನ್ನುಂಟುಮಾಡುತ್ತಿದ್ದ ಆ ಕತ್ತಲೆಯನ್ನು ಉತ್ತಮೋತ್ತಮವಾದ ಜ್ಯೌತಿಷವೆಂಬ ಮಹಾಸ್ತ್ರಪ್ರಯೋಗದಿಂದ ನಿರಸನಗೊಳಿಸಿದನು. ಗಾಢಾಂಧಕಾರವು ನಿರಸನವಾದನಂತರ ಭಯಾನಕವಾದ ಜಲರಾಶಿಯು ಅರ್ಜುನನನ್ನು ಆವರಿಸಿತು. ಭಯಂಕರವಾದ ಆ ಜಲರಾಶಿಯ ನಾಶಕ್ಕಾಗಿ ಅರ್ಜುನನು ಆದಿತ್ಯಾಸ್ತ್ರವನ್ನು ಪ್ರಯೋಗಿಸಿದನು. ಅರ್ಜುನನು ಪ್ರಯೋಗಿಸಿದ ಆ ಅಸ್ತ್ರದಿಂದ ಜಲರಾಶಿಯೆಲ್ಲವೂ ಶೋಷಿತವಾಗಿಹೋಯಿತು. ಮಹಾರಾಜ! ಈ ರೀತಿಯಲ್ಲಿ ಶಕುನಿಯು ಹಲವು ಬಗೆಗಳಲ್ಲಿ ಕಲ್ಪಿಸುತ್ತಿದ್ದ ಮಾಯೆಯನ್ನು ಅರ್ಜುನನು ನಗು-ನಗುತ್ತಲೇ ಮಹಾಸ್ತ್ರಗಳ ಪ್ರಯೋಗದಿಂದ ನಿರಸನಗೊಳಿಸುತ್ತಿದ್ದನು. ತಾನು ಕಲ್ಪಿಸಿದ ಮಾಯೆಗಳೆಲ್ಲವೂ ನಷ್ಟವಾಗಿ ಹೋಗಲಾಗಿ ಅರ್ಜುನನ ಬಾಣಗಳಿಂದ ತ್ರಾಸಗೊಂಡ ಶಕುನಿಯು ಶೀಘ್ರವಾಗಿ ಹೋಗುವ ಕುದುರೆಗಳ ಸಹಾಯದಿಂದ ರಣಾಂಗಣವನ್ನು ಬಿಟ್ಟು ಸಾಮಾನ್ಯಮನುಷ್ಯನಂತೆ ಓಡಿಹೋದನು. ಅನಂತರ ಅಸ್ತ್ರವಿದನಾದ ಅರ್ಜುನನು ಶೀಘ್ರವಾಗಿ ಬಾಣಗಳನ್ನು ಬಿಡುವುದರಲ್ಲಿ ತನ್ನ ಕೌಶಲ್ಯ

ವೆಷ್ಟೆಂಬುದನ್ನು ಶತ್ರುಗಳಿಗೆ ತೋರ್ಪಡಿಸುತ್ತಾ, ಕೌರವರ ಸೈನ್ಯದ ಮೇಲೆ ಬಾಣಗಳ ಸಮೂಹವನ್ನೇ ಸುರಿಸಿಬಿಟ್ಟನು. ಅರ್ಜುನನಿಂದ ವಧಿಸಲ್ಪಡುತ್ತಿದ್ದ ನಿನ್ನ ಮಗನ ಸೈನ್ಯವು–ಗಂಗಾನದಿಯು ಪರ್ವತದ ಬಳಿಗೆ ಬಂದಾಗ ಎರಡು ಕವಲುಗಳಾಗಿ ಒಡೆಯುವಂತೆ–ಇಬ್ಭಾಗವಾಯಿತು. ಅರ್ಜುನನಿಂದ ಪೀಡಿತ ರಾಗುತ್ತಿದ್ದವರಲ್ಲಿ ಕೆಲವರು ದ್ರೋಣರ ಮರೆಹೊಕ್ಕರು. ಮತ್ತೆ ಕೆಲವರು ದುರ್ಯೋಧನನನ್ನು ಆಶ್ರಯಿಸಿದರು. ಯೋಧರ ಅವಸರದ ಚಲನ-ವಲನ ಗಳಿಂದಾಗಿ ರಣಾಂಗಣವು ದಟ್ಟವಾದ ಧೂಳಿನಿಂದ ವ್ಯಾಪ್ತವಾಯಿತು. ಅನಂತರ ನಾವು ಸೈನ್ಯದಲ್ಲಿ ಅರ್ಜುನನನ್ನು ಕಾಣಲೇ ಇಲ್ಲ. ನನ್ನ ಬಲಭಾಗ ದಲ್ಲಿ ಗಾಂಡೀವಧನುಸ್ಸಿನ ಟೇಂಕಾರಶಬ್ದವು ಮಾತ್ರ ಪದೇ-ಪದೇ ಕೇಳಿಸುತ್ತಿದ್ದಿತು. ಶಂಖ ಮತ್ತು ದುಂದುಭಿಗಳ ಧ್ವನಿ, ರಣವಾದ್ಯಗಳ ಶಬ್ದ ಇವುಗಳೆಲ್ಲವನ್ನೂ ಮೀರಿಸಿ ಅರ್ಜುನನ ಗಾಂಡೀವದ ಟೇಂಕಾರಧ್ವನಿಯು ಆಕಾಶವನ್ನು ಮುಟ್ಟಿತು.

ಅನಂತರ ದಕ್ಷಿಣದಿಕ್ಕಿನಲ್ಲಿ ವಿಚಿತ್ರರೀತಿಯಲ್ಲಿ ಯುದ್ಧಮಾಡುವ ನಮ್ಮ ಕಡೆಯ ಯೋಧರಿಗೂ–ಅರ್ಜುನನಿಗೂ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಆ ಸಮಯದಲ್ಲಿ ನಾನು ದ್ರೋಣರನ್ನು ಅನುಸರಿಸಿ ಹೋದೆನು. ಯುಧಿಷ್ಠಿರನ ಸೈನಿಕರು ಅಲ್ಲಲ್ಲಿ ನಿನ್ನ ಕಡೆಯ ಸೈನಿಕರನ್ನು ಪ್ರಹರಿಸುತ್ತಿದ್ದರು. ಯಾವ ರೀತಿಯಲ್ಲಿ–ವರ್ಷಾಕಾಲದಲ್ಲಿ ಗಾಳಿಯು ಆಕಾಶದಲ್ಲಿರುವ ಮೋಡಗಳನ್ನು ಚದುರಿಸುತ್ತಿರುತ್ತದೆಯೋ– ಅದೇ ರೀತಿಯಲ್ಲಿ ಅರ್ಜುನನು ನಿನ್ನ ಮಕ್ಕಳ ನಾನಾಪ್ರಕಾರವಾದ ಸೈನಿಕರನ್ನು ಪ್ರಹರಿಸುತ್ತಾ ಎಲ್ಲರನ್ನೂ ದಿಕ್ಕಾಪಾಲಾಗಿ ಚದುರಿಸುತ್ತಿದ್ದನು. ಇಂದ್ರನಂತೆಯೇ ಬಾಣರೂಪವಾದ ಅಪಾರವಾದ ಮಳೆಯನ್ನು ಸುರಿಸುತ್ತಾ ಬರುತ್ತಿದ್ದ ಉಗ್ರವೀರ್ಯನಾದ ಅರ್ಜುನನನ್ನು ಮಹಾಧನುಷ್ಮಂತರಾದ, ನರಶ್ರೇಷ್ಠರಾದ ಯೋಧರಲ್ಲಿ ಯಾರೂ ತಡೆಯಲು ಸಮರ್ಥರಾಗಲಿಲ್ಲ. ಪಾರ್ಥನಿಂದ ಅನವರತವಾಗಿ ಪ್ರಹೃತರಾಗುತ್ತಿದ್ದ ನಿನ್ನ ಕಡೆಯ ಯೋಧರು ಬಹಳವಾಗಿ ವ್ಯಥಿತರಾದರು. ಅರ್ಜುನನ ಪ್ರಹಾರವನ್ನು ತಾಳಲಾರದೆ ದಿಕ್ಕುಗೆಟ್ಟು ಅಲ್ಲಲ್ಲಿ ಓಡಿಹೋಗುತ್ತಿದ್ದ ಆ ಯೋಧರು ತಮ್ಮ ಕಡೆಯ ಯೋಧರನ್ನೇ ತುಳಿದು ಸಂಹರಿಸುತ್ತಿದ್ದರು. ಅರ್ಜುನನಿಂದ ಬಿಡಲ್ಪಡುತ್ತಿದ್ದ, ರಣಹದ್ದಿನ ರೆಕ್ಕೆಗಳನ್ನು ಹೊಂದಿರುತ್ತಿದ್ದ, ಶತ್ರುಗಳ ಶರೀರಗಳನ್ನು ಕತ್ತರಿಸುತ್ತಿದ್ದ ಬಾಣಗಳು

ಮಿಡತೆಗಳೋಪಾದಿಯಲ್ಲಿ ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿ ಬೀಳುತ್ತಿದ್ದುವು. ಆ ಬಾಣಗಳು ಕುದುರೆಯನ್ನೂ, ರಥಿಕನನ್ನೂ, ಆನೆಯನ್ನೂ, ಪದಾತಿಯನ್ನೂ ಭೇದಿಸಿಕೊಂಡು ಹೊರಬಂದು–ಹಾವುಗಳು ಬಿಲವನ್ನು ಪ್ರವೇಶಿಸುವಂತೆ ಭೂಮಿಯನ್ನು ಕೊರೆದುಕೊಂಡು ಹೋಗುತ್ತಿದ್ದುವು. ಆನೆಗಳ ಮೇಲಾಗಲೀ, ಕುದುರೆಗಳ ಮೇಲಾಗಲೀ, ಪದಾತಿಗಳ ಮೇಲಾಗಲೀ ಅರ್ಜುನನು ಎರಡನೆಯ ಬಾಣವನ್ನು ಬಿಡುತ್ತಲೇ ಇರಲಿಲ್ಲ. ಅರ್ಜುನನು ಬಿಟ್ಟ ಒಂದೊಂದು ಬಾಣದ ಪ್ರಹಾರದಿಂದಲೇ ಮರಣಹೊಂದಿದ ಮನುಷ್ಯ ರಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ ಆ ರಣಾಂಗಣವು ಸರ್ವತ್ರ ವ್ಯಾಪ್ತವಾಯಿತು. ಆ ಸಮಯದಲ್ಲಿ ಹೆಣಗಳನ್ನು ಕಿತ್ತು ತಿನ್ನಲು ಬಂದ ನಾಯಿಗಳ ಮತ್ತು ಗುಳ್ಳೇನರಿಗಳ ಸಮೂಹದ ಕೋಲಾಹಲಶಬ್ದಗಳಿಂದ ರಣರಂಗದ ಮುಖ್ಯಭಾಗವು ವಿಚಿತ್ರವಾಗಿ ಕಾಣುತ್ತಿದ್ದಿತು. ಅರ್ಜುನನ ಬಾಣಗಳಿಂದ ಸತತವಾಗಿ ಪೀಡಿತರಾಗುತ್ತಿದ್ದ ನಿನ್ನ ಕಡೆಯ ಯೋಧರಿಗೆ ತಮ್ಮನ್ನು ರಕ್ಷಿಸಿಕೊಳ್ಳುವುದೇ ಸಾಧು ಎನ್ನಿಸಿತು. ತಂದೆಯು ಮಗನನ್ನು ಬಿಟ್ಟು ಓಡುತ್ತಿದ್ದನು. ಇಬ್ಬರು ಸ್ನೇಹಿತರಲ್ಲಿ ಒಬ್ಬನು ಮತ್ತೊಬ್ಬನ ಯೋಗಕ್ಷೇಮವನ್ನು ನೋಡುವ ಸ್ಥಿತಿಯಲ್ಲಿರಲಿಲ್ಲ. ತನ್ನ ಪ್ರಾಣಗಳನ್ನುಳಿಸಿಕೊಳ್ಳಲು ಬಹಳ ಆಪ್ತನಾದ ತನ್ನ ಮಿತ್ರನನ್ನೇ ತೊರೆದು ಓಡಿಹೋಗುತ್ತಿದ್ದನು. ಅದೇ ರೀತಿಯಲ್ಲಿ ಮಗನು ತನ್ನ ತಂದೆಯನ್ನು ಬಿಟ್ಟು ಓಡಿಹೋಗುತ್ತಿದ್ದನು. ತಮ್ಮ-ತಮ್ಮ ರಕ್ಷಣೆಯಲ್ಲಿಯೇ ನಿರತರಾಗಿದ್ದ ಆ ಸೈನಿಕರು ತಮ್ಮ ವಾಹನಗಳನ್ನೂ ಬಿಟ್ಟು ಪಲಾಯನಮಾಡುತ್ತಿದ್ದರು."

ಃ೦ನೆಯ ಅಧ್ಯಾಯವು ಮುಗಿಯಿತು.

ಃ೧ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಕೌರವ–ಪಾಂಡವಸೈನ್ಯಗಳ ನಡುವೆ ಭಯಂಕರಯುದ್ಧ : ಅಶ್ವತ್ಥಾಮನು ನೀಲರಾಜನನ್ನು ಸಂಹರಿಸಿದುದು

ತನ್ನ ಸೈನ್ಯವು ಪಲಾಯನಮಾಡಿತೆಂಬ ವಾರ್ತೆಯನ್ನು ಕೇಳಿ ಖಿನ್ನನಾದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಪಾಂಡುವಿನ ಮಗನಾದ ಅರ್ಜುನನು ನನ್ನ ಸೈನ್ಯವನ್ನು ಭಗ್ನಗೊಳಿಸಲಾಗಿ ಏನು ಮಾಡಬೇಕೆಂಬುದನ್ನರಿಯದೆ ಅತ್ತಲಿತ್ತ ಓಡಾಡು

ತ್ತಿದ್ದ ಮತ್ತು ಪ್ರಾಣಗಳನ್ನುಳಿಸಿಕೊಳ್ಳುವ ಸಲುವಾಗಿ ಪಲಾಯನಮಾಡುತ್ತಿದ್ದ ನಮ್ಮ ಕಡೆಯ ಯೋಧರ ಮನಸ್ಸಿನ ಸ್ಥಿತಿಯು ಹೇಗಿದ್ದಿತು? ಅರ್ಜುನನ ಬಾಣಗಳ ಪ್ರಹಾರವನ್ನು ತಪ್ಪಿಸಿಕೊಳ್ಳಲು ಸಹ ಒಂದು ಸ್ಥಳವನ್ನೂ ಕಾಣದೇ ಓಡಿಹೋಗುತ್ತಿದ್ದ ಸೈನಿಕರನ್ನು ಹಿಂದಕ್ಕೆ ಕರೆಯಿಸಿ ಯುದ್ಧಕ್ಕೆ ಸಜ್ಜು ಗೊಳಿಸುವುದು ದುಃಸಾಧ್ಯವಾದ ಕಾರ್ಯವೇ ಸರಿ. ಆದರೂ ಆ ಸಮಯದಲ್ಲಿ ನಮ್ಮ ಕಡೆಯವರು ಏನು ಮಾಡಿದರೆಂಬುದನ್ನು ಹೇಳು."

"ಮಹಾರಾಜ! ಸೈನ್ಯವೆಲ್ಲವೂ ದಿಕ್ಕೆಟ್ಟು ಓಡಿಹೋಗುತ್ತಿದ್ದರೂ ನಿನ್ನ ಮಗನಿಗೆ ಪ್ರಿಯವನ್ನುಂಟುಮಾಡಲು ಇಚ್ಛಿಸಿದ ಹಲವಾರು ಮಂದಿ ಶ್ರೇಷ್ಠರಾದ ವೀರರು ಲೋಕದಲ್ಲಿ ತಾವು ಸಂಪಾದಿಸಿದ್ದ ಯಶಸ್ಸನ್ನು ಯಥಾವತ್ತಾಗಿ ರಕ್ಷಿಸಿಕೊಳ್ಳುತ್ತಾ ದ್ರೋಣರನ್ನು ಅನುಸರಿಸಿ ಹೋದರು. ಎರಡು ಕಡೆಯವರೂ ಶಸ್ತ್ರಾಸ್ತ್ರಗಳನ್ನೆತ್ತಿದರು. ಪುನಃ ಘೋರವಾದ ಯುದ್ಧವು ಪ್ರಾರಂಭವಾಯಿತು. ಭಯಂಕರವಾದ ಸನ್ನಿವೇಶವಿದ್ದರೂ ಭಯಗೊಳ್ಳದವ ರಂತೆ ನಿನ್ನ ಕಡೆಯ ಯೋಧರು ಆರ್ಯಧರ್ಮೋಚಿತವಾಗಿ ಧೈರ್ಯದಿಂದ ಯುದ್ಧಮಾಡಲು ಉಪಕ್ರಮಿಸಿದರು. ಆ ಸಮಯದಲ್ಲಿ ಯುಧಿಷ್ಠಿರನು ಅವರಿಗೆ ಎದುರಾಗಿ ನಿಂತು ಯುದ್ಧಮಾಡುತ್ತಿದ್ದನು. ಅವನ ಜೊತೆಯಲ್ಲಿ ಭೀಮನಾಗಲೀ, ಸಾತ್ಯಕಿಯಾಗಲೀ, ಧೃಷ್ಟದ್ಯುಮ್ನನಾಗಲೀ ಇರಲಿಲ್ಲ. ಅಂತಹ ಒಂದು ಸಮಯದ ಲಾಭವನ್ನು ಪಡೆದುಕೊಂಡು ಕೌರವಯೋಧರು ಪಾಂಡವಸೈನ್ಯದ ಮೇಲೆ ಬಿರುಸಾದ ಧಾಳಿಯನ್ನು ಪ್ರಾರಂಭಿಸಿದರು. ಆ ಸಮಯದಲ್ಲಿ ಕ್ರೂರಿಗಳಾದ ಪಾಂಚಾಲಯೋಧರು 'ದ್ರೋಣರನ್ನು ಹಿಡಿಯಿರಿ' 'ದ್ರೋಣರನ್ನು ಕೊಲ್ಲಿರಿ' 'ದ್ರೋಣರನ್ನು ಪ್ರಹರಿಸಿರಿ' ಎಂದು ಕೂಗಿಕೊಳ್ಳುತ್ತಿದ್ದರು. ಅದಕ್ಕೆ ಪ್ರತಿಯಾಗಿ ನಿನ್ನ ಕಡೆಯ ಯೋಧರು 'ದ್ರೋಣರನ್ನು ಕೊಲ್ಲದಂತೆ ನೋಡಿಕೊಳ್ಳಿರಿ' 'ದ್ರೋಣರ ಸಮೀಪಕ್ಕೂ ಶತ್ರುಗಳನ್ನು ಬಿಡಬೇಡಿರಿ' ಎಂಬುದಾಗಿ ಕೂಗಿಕೊಳ್ಳುತ್ತಿದ್ದರು.

**ದ್ರೋಣಂ ದ್ರೋಣಮಿತಿ ಹ್ಯೇಕೇ ಮಾ ದ್ರೋಣಮಿತಿ ಚಾಪರೇ।**
**ಕುರೂಣಾಂ ಪಾಂಡವಾನಾಂ ಚ ದ್ರೋಣದ್ಯೂತಮವರ್ತತ ॥೭॥**

'ದ್ರೋಣರನ್ನು ಹಿಡಿಯಿರಿ' 'ದ್ರೋಣರನ್ನು ಕೊಲ್ಲಿರಿ' ಎಂದು

ಒಂದು ಕಡೆಯವರು ಕೂಗುತ್ತಿದ್ದರೆ ಮತ್ತೊಂದು ಕಡೆಯವರು 'ದ್ರೋಣರನ್ನು ಮುಟ್ಟಕೂಡದು; ದ್ರೋಣರನ್ನು ಮುಟ್ಟಗೊಡುವುದಿಲ್ಲ'–ಎಂದು ಪ್ರತಿಯಾಗಿ ಕೂಗಿಕೊಳ್ಳುತ್ತಿದ್ದರು. ಈ ರೀತಿಯಲ್ಲಿ ಕೌರವ-ಪಾಂಡವರ ನಡುವೆ ದ್ರೋಣರ ಸಂಬಂಧವಾಗಿ ಒಂದು ಸ್ಪರ್ಧೆಯೇ ಪ್ರಾರಂಭವಾಗಿಬಿಟ್ಟಿತು. ದ್ರೋಣರು ಪಾಂಚಾಲರಿಗೆ ಸೇರಿದ ಯಾವ-ಯಾವ ರಥಸಮೂಹಗಳನ್ನು ಪ್ರಹರಿಸಲು ಹೋಗುತ್ತಿದ್ದರೋ–ಆ ಸಮಯಕ್ಕೆ ಸರಿಯಾಗಿ ಆಯಾ ಸ್ಥಳಗಳಲ್ಲಿ ಪಾಂಚಾಲ ರಾಜಕುಮಾರನಾದ ಧೃಷ್ಟದ್ಯುಮ್ನನು ಅವರನ್ನೆದುರಿಸುತ್ತಿದ್ದನು. ಈ ರೀತಿ ಯಾಗಿ ಭಾಗವಿಪರ್ಯಾಸದಿಂದ (ಇಂತಹ ವೀರನನ್ನು ಇಂತಹವನೇ ಎದುರಿಸಬೇಕು ಎಂದಿದ್ದ ನಿಯಮವನ್ನು ಉಲ್ಲಂಘಿಸಿ) ಮಾಡುತ್ತಿದ್ದ ಯುದ್ಧವು ಭಯಂಕರರೂಪವನ್ನು ತಾಳಲಾಗಿ, ಉಭಯಪಕ್ಷಗಳ ವೀರರೂ ತಮ್ಮ-ತಮ್ಮ ಪ್ರತಿಪಕ್ಷದ ವೀರರೊಡನೆ ಭಯಂಕರವಾಗಿ ಗರ್ಜನೆ ಮಾಡುತ್ತಾ ಯುದ್ಧವನ್ನು ಆರಂಭಿಸಿದರು. ಆ ಸಮಯದಲ್ಲಿ ಪಾಂಡವರು ಶತ್ರುಗಳಿಗೆ ಭಯಪಡದೆ ಧೈರ್ಯವಾಗಿ ನಿಂತು ಯುದ್ಧಮಾಡುತ್ತಿದ್ದರು. ಅವರನ್ನು ಕಂಪನಗೊಳಿಸಲು ಕೌರವರಿಗೆ ಸಾಧ್ಯವಾಗಲಿಲ್ಲ. ಅದಕ್ಕೆ ಬದಲಾಗಿ ಪಾಂಡವರೇ ತಮಗಾದ ಕ್ಲೇಶಗಳನ್ನು ಸ್ಮರಿಸಿ ರೋಷಾವೇಶದಿಂದ ಯುದ್ಧಮಾಡುತ್ತಾ ಕೌರವರ ಸೈನ್ಯವನ್ನು ನಡುಗಿಸಿಬಿಟ್ಟರು. ಲಜ್ಜಾಶೀಲರಾದ ಮತ್ತು ಸತ್ತ್ವಗುಣಸಂಪನ್ನ ರಾದ ಪಾಂಡವರೂ ಆ ಸಮಯದಲ್ಲಿ ಕ್ರೋಧವಶರಾಗಿ, ಪ್ರಾಣದ ಮೇಲಿನ ಹಂಗನ್ನೂ ತೊರೆದು ದ್ರೋಣಾಚಾರ್ಯರನ್ನು ವಧೆಮಾಡುವ ಸಲುವಾಗಿ ಮುನ್ನುಗ್ಗಿ ಹೋಗುತ್ತಿದ್ದರು. ಯುದ್ಧದಲ್ಲಿ ತಮ್ಮ ಪ್ರಾಣಗಳನ್ನೇ ಪಣವಾಗಿಟ್ಟು ಕಾದಾಡುತ್ತಿದ್ದ, ಅಪಾರವಾದ ತೇಜಸ್ಸಿನಿಂದ ಕೂಡಿದ್ದ ಕೌರವ-ಪಾಂಡವ ಯೋಧರ ಸಂಘರ್ಷಣಶಬ್ದವು ಕಬ್ಬಿಣದ ತುಂಡುಗಳ ಅಥವಾ ಕಲ್ಲುಗಳ ಸಂಘರ್ಷಣಶಬ್ದಕ್ಕೆ ಅನುರೂಪವಾಗಿದ್ದಿತು. ವೃದ್ಧರಾದವರು ಅಂತಹ ಒಂದು ಸಂಗ್ರಾಮವು ಹಿಂದೆ ನಡೆದಿತ್ತೆಂಬುದನ್ನು ಸ್ಮರಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಏಕೆಂದರೆ: ಅಂತಹ ಭಯಂಕರಯುದ್ಧವು ಹಿಂದೆ ನಡೆದಿದ್ದುದನ್ನು ಅವರು ಕಂಡೂ ಇರಲಿಲ್ಲ; ಕೇಳಿಯೂ ಇರಲಿಲ್ಲ.

ವೀರರ ವಿನಾಶಕರವಾದ ಆ ಮಹಾಯುದ್ಧದಲ್ಲಿ ರಣಾಂಗಣಕ್ಕೆ ಹಿಂದಿರುಗುತ್ತಿದ್ದ ದೊಡ್ಡದಾದ ಸೈನ್ಯಸಮೂಹದ ಭಾರದಿಂದ ಪೀಡಿತಳಾದ ಭೂದೇವಿಯು ಕಂಪಿಸುತ್ತಿರುವಳೋ ಎಂಬಂತೆ ಕಾಣುತ್ತಿದ್ದಳು. ಸೈನ್ಯ

ಸಮೂಹಗಳ ಭಯಂಕರವಾದ ತಿರುಗಾಟದ ಶಬ್ದವು ಆಕಾಶವನ್ನೂ ಸ್ತಬ್ಧಗೊಳಿಸುವುದೋ ಎಂಬಂತಿದ್ದಿತು. ನಿನ್ನ ಆ ಮಹಾಸೈನ್ಯವು ಅಜಾತಶತ್ರುವಿನ ಸೈನ್ಯವನ್ನು ಆಕ್ರಮಿಸಿತು. ರಣಾಂಗಣದಲ್ಲಿ ಸಂಚರಿಸುತ್ತಿದ್ದ ಭಯಂಕರರಾದ ದ್ರೋಣರು ಪಾಂಡವರ ಸೈನ್ಯವನ್ನು ಪ್ರವೇಶಿಸಿ, ತೀಕ್ಷ್ಣವಾದ ಬಾಣಗಳಿಂದ ಸಾವಿರಾರು ಸೈನಿಕರನ್ನು ಧ್ವಂಸಮಾಡಿದರು. ಅದ್ಭುತಕರ್ಮರಾದ ದ್ರೋಣರು ಪಾಂಡವರ ಸೇನೆಯನ್ನು ಈ ರೀತಿಯಲ್ಲಿ ಮಥಿಸುತ್ತಿರಲಾಗಿ ಪಾಂಡವರ ಸೇನಾಪತಿಯಾದ ಧೃಷ್ಟದ್ಯುಮ್ನನು ಮುಂದೆ ಬಂದು ದ್ರೋಣರನ್ನು ತಾನೇ ಎದುರಿಸಿದನು. ಮಹಾರಾಜ! ಆ ಸಮಯದಲ್ಲಿ ದ್ರೋಣ-ಧೃಷ್ಟದ್ಯುಮ್ನರ ನಡುವೆ ಪರಮಾದ್ಭುತವಾದ ಯುದ್ಧವು ನಡೆಯಿತು. ಆ ಮಹಾಯುದ್ಧಕ್ಕೆ ಉಪಮಾನವನ್ನು ಕೊಡಬಹುದಾದ ಬೇರೊಂದು ಯುದ್ಧವೇ ನಡೆದಿಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ.

ಅನಂತರ ಯಜ್ಞೇಶ್ವರನೆಂದೇ ಪ್ರಖ್ಯಾತನಾಗಿದ್ದ ನೀಲನು ಬಾಣಗಳನ್ನೇ ಕಿಡಿಗಳನ್ನಾಗಿಯೂ ಬಿಲ್ಲನ್ನೇ ಜ್ವಾಲೆಯನ್ನಾಗಿಯೂ ಮಾಡಿಕೊಂಡು ಯಜ್ಞೇಶ್ವರನು ಹುಲ್ಲಿನ ಮೆದೆಯನ್ನು ದಹಿಸುವಂತೆ–ಕುರುಸೈನ್ಯವನ್ನು ದಹಿಸತೊಡಗಿದನು. ನೀಲರಾಜನು ಸ್ವೇಚ್ಛೆಯಿಂದ ಕೌರವಸೈನ್ಯವನ್ನು ದಹಿಸುತ್ತಿರುವುದನ್ನು ಕಂಡು ಪ್ರತಾಪವಂತನಾದ ಪೂರ್ವಭಾಷಿಯಾದ (ಮೊದಲು ಮಾತನಾಡುವ ಸ್ವಭಾವವುಳ್ಳ) ದ್ರೋಣರ ಮಗನಾದ ಅಶ್ವತ್ಥಾಮನು ನಸುನಗುತ್ತಾ ಸುಮಧುರವಾದ ಈ ಮಾತುಗಳನ್ನು ಹೇಳಿದನು:

**ನೀಲ ಕಿಂ ಬಹುಭಿರ್ದಗ್ಧೈಸ್ತವ ಯೋಧೈಃ ಶರಾರ್ಚಿಷಾ ।**
**ಮಯ್ಯೇಕೇನ ಹಿ ಯುಧ್ಯಸ್ವ ಕ್ರುದ್ಧಃ ಪ್ರಹರ ಚಾಶು ಮಾಮ್॥**

"ನೀಲರಾಜ! ನಿನ್ನ ಬಾಣಗಳೆಂಬ ಜ್ವಾಲೆಯಿಂದ ಅನೇಕ ಯೋಧರನ್ನು ದಹಿಸಿದುದರಿಂದ ನಿನಗಾಗುವ ಪ್ರಯೋಜನವಾದರೂ ಏನು? ನನ್ನೊಬ್ಬನೊಡನೆ ಯುದ್ಧಮಾಡು. ಕ್ರುದ್ಧನಾಗಿ ನನ್ನನ್ನು ಬಲವಾಗಿ ಮತ್ತು ಶೀಘ್ರವಾಗಿ ಪ್ರಹರಿಸು." ಅಶ್ವತ್ಥಾಮನು ಹೀಗೆಂದು ಹೇಳಿದೊಡನೆಯೇ ವಿಕಸಿತವಾದ ಕಮಲದಂತೆ ಕಾಂತಿಯುಕ್ತವಾದ ಮುಖದಿಂದ ಕೂಡಿದ್ದ ನೀಲನು-ಕಮಲಗಳ ಸಮೂಹದಂತೆ ಸರ್ವಾಂಗಸುಂದರನಾಗಿದ್ದ, ಪದ್ಮ

ಪತ್ರಸದೃಶವಾದ ಕಣ್ಣುಗಳನ್ನು ಹೊಂದಿದ್ದ ಅಶ್ವತ್ಥಾಮನನ್ನು ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ಅದರಿಂದ ಬಹಳ ತೀಕ್ಷ್ಣವಾಗಿ ಗಾಯಗೊಂಡ ಭಾರದ್ವಾಜರ ಮಗನಾದ ಅಶ್ವತ್ಥಾಮನು ನಿಶಿತವಾದ ಮೂರು ಬಾಣಗಳಿಂದ ಶತ್ರುವಾದ ನೀಲನ ಧನುಸ್ಸನ್ನೂ, ಧ್ವಜವನ್ನೂ ಮತ್ತು ಶ್ವೇತಛತ್ರವನ್ನೂ ಕತ್ತರಿಸಿದನು. ಅಂತರಿಕ್ಷದಲ್ಲಿ ಹಾರುತ್ತಿರುವ ಪಕ್ಷಿಯು ಕೆಳಗೆ ಬಿದ್ದಿರುವ ಆಹಾರವನ್ನು ಪಡೆದುಕೊಳ್ಳಲು ರಭಸದಿಂದ ಹೇಗೆ ಕೆಳಕ್ಕೆ ಹಾರಿಬರುತ್ತದೆಯೋ–ಅದೇ ರೀತಿಯಲ್ಲಿ ನೀಲನು ಕತ್ತಿಯನ್ನೂ ಮತ್ತು ಗುರಾಣಿಯನ್ನೂ ಹಿಡಿದು ರಥದಿಂದ ಧುಮುಕಿ ಅಶ್ವತ್ಥಾಮನ ಶರೀರದಿಂದ ಅವನ ಶಿರಸ್ಸನ್ನು ಅಪಹರಿಸಲು ಇಚ್ಛಿಸಿದನು. (ಅಶ್ವತ್ಥಾಮನ ಕುತ್ತಿಗೆಯನ್ನು ಕತ್ತಿಯಿಂದ ಕಡಿದು ಹಾಕಲು ಇಚ್ಛಿಸಿದನು.) ಆ ಸಮಯದಲ್ಲಿ ಅಶ್ವತ್ಥಾಮನು ನಗು-ನಗುತ್ತಲೇ ಕತ್ತಿಯನ್ನು ಹಿಡಿದು ಬರುತ್ತಿದ್ದ ವೀರನಾದ ನೀಲನಮೇಲೆ ಭಲ್ಲವೊಂದನ್ನು ಪ್ರಯೋಗಿಸಿ ಉನ್ನತವಾದ ಹೆಗಲಿನಿಂದಲೂ, ಶೋಭಾಯಮಾನವಾದ ಮೂಗಿನಿಂದಲೂ ಮತ್ತು ಕರ್ಣಕುಂಡಲಗಳಿಂದಲೂ ಯುಕ್ತವಾಗಿದ್ದ ನೀಲನ ಶಿರಸ್ಸನ್ನು ಅವನ ಶರೀರದಿಂದ ಅಪಹರಿಸಿಬಿಟ್ಟನು. (ನೀಲನು ಮಾಡಲು ಯೋಚಿಸಿದುದನ್ನು ಅಶ್ವತ್ಥಾಮನು ಮಾಡಿ ಮುಗಿಸಿದನು.) ಪೂರ್ಣಚಂದ್ರನಿಗೆ ಸಮಾನವಾದ ಮುಖಕಾಂತಿಯಿಂದ ಕೂಡಿದ್ದ, ಕಮಲದಳಸದೃಶವಾದ ಕಣ್ಣುಗಳಿಂದ ವಿರಾಜಿಸುತ್ತಿದ್ದ, ಉನ್ನತಾಕಾರವಾಗಿದ್ದ, ಕನ್ನೈದಿಲೆಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ನೀಲರಾಜನು ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟವನಾಗಿ ಭೂಮಿಯ ಮೇಲೆ ಬಿದ್ದನು.

ಪ್ರಜ್ವಲಿಸುವ ತೇಜಸ್ಸಿನಿಂದ ಕೂಡಿದ್ದ ನೀಲರಾಜನು ಆಚಾರ್ಯಪುತ್ರನಿಂದ ಹತನಾಗಲಾಗಿ ಬಹಳವಾಗಿ ವ್ಯಾಕುಲಗೊಂಡ ಪಾಂಡವಸೇನೆಯು ದುಃಖಿಸಿತು. "ಇಂದ್ರನ ಮಗನಾದ ಅರ್ಜುನನು ನಮ್ಮನ್ನು ಶತ್ರುಗಳಿಂದ ಹೇಗೆ ರಕ್ಷಿಸುವನು?"–ಎಂಬುದಾಗಿ ಎಲ್ಲ ಪಾಂಡವಮಹಾರಥರೂ ದೀರ್ಘವಾಗಿ ಯೋಚಿಸತೊಡಗಿದರು. ಆದರೆ ನೀಲನ ಸಂಹಾರಸಮಯದಲ್ಲಿ ಅರ್ಜುನನು ಸೇನೆಯ ದಕ್ಷಿಣಭಾಗದಲ್ಲಿ ಅಳಿದುಳಿದಿದ್ದ ಸಂಶಪ್ತಕರೊಡನೆಯೂ ಮತ್ತು ನಾರಾಯಣನಾಮಕರಾದ ಸೈನಿಕರೊಡನೆಯೂ ಯುದ್ಧಮಾಡುತ್ತಿದ್ದನು."

ಒ೧ನೆಯ ಅಧ್ಯಾಯವು ಮುಗಿಯಿತು.

೩೨ನೆಯ ಅಧ್ಯಾಯ ಸಂಶಪ್ತಕವಧಪರ್ವ (ಮುಂದುವರಿದಿದೆ.)

## ಕೌರವ–ಪಾಂಡವರ ಭಯಂಕರಯುದ್ಧ : ಭೀಮಸೇನನು ಕೌರವಮಹಾರಥರೊಡನೆ ಯುದ್ಧಮಾಡಿದುದು: ಭಯಂಕರವಾದ ಸಂಹಾರಕ್ರಿಯೆಯ ವರ್ಣನೆ: ಪಾಂಡವರು ದ್ರೋಣರನ್ನು ಆಕ್ರಮಿಸಿದುದು: ಕರ್ಣಾರ್ಜುನರ ಯುದ್ಧ: ಕರ್ಣನ ಅನುಜರ ವಧೆ: ಕರ್ಣ–ಸಾತ್ಯಕಿಯರ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ನೀಲನ ವಧೆಯಿಂದಾದ ಪ್ರತಿಕ್ರಿಯೆಯನ್ನು ಹೇಳುತ್ತಾನೆ:

“ಮಹಾರಾಜ! ಭೀಮಸೇನನು ತನ್ನ ಸೈನ್ಯಕ್ಕಾದ ಪ್ರತಿಘಾತವನ್ನು ಸಹಿಸಿಕೊಳ್ಳಲಿಲ್ಲ. ಕ್ರುದ್ಧನಾದ ಭೀಮಸೇನನು ಗುರುಗಳಾದ ದ್ರೋಣರನ್ನು ಅರುವತ್ತು ಬಾಣಗಳಿಂದಲೂ, ಕರ್ಣನನ್ನು ಹತ್ತು ಬಾಣಗಳಿಂದಲೂ ಪ್ರಹರಿಸಿದನು. ಬಾಣಗಳ ಪ್ರಹಾರದಿಂದ ಪರಮಕ್ರುದ್ಧರಾದ ದ್ರೋಣರು ಭೀಮಸೇನನ ಜೀವಿತವನ್ನೇ ಕಡೆಗಾಣಿಸಬೇಕೆಂದು ಇಚ್ಛಿಸಿದವರಾಗಿ ತೀಕ್ಷ್ಣವಾದ ಅಲಗುಗಳಿಂದ ಕೂಡಿದ್ದ, ನಿಶಿತವಾಗಿದ್ದ, ನೇರವಾಗಿ ಹೋಗುವುದಾಗಿದ್ದ ಬಾಣಗಳಿಂದ ಭೀಮಸೇನನ ಮರ್ಮಸ್ಥಳಗಳನ್ನು ಘಾಸಿಗೊಳಿಸಿದರು. ಭೀಮಸೇನನ ಪ್ರತಿಪ್ರಹಾರಕ್ಕೆ ಅವಕಾಶವನ್ನೇ ಕೊಡಕೂಡದೆಂಬ ಇಚ್ಛೆಯಿಂದ ಪುನಃ ದ್ರೋಣರು ಇಪ್ಪತ್ತಾರು ಬಾಣಗಳಿಂದ ಭೀಮಸೇನನನ್ನು ಪ್ರಹರಿಸಿದರು. ಅವರನ್ನೇ ಅನುಸರಿಸಿ ಕರ್ಣನು ಹನ್ನೆರಡು ಬಾಣಗಳಿಂದಲೂ, ಅಶ್ವತ್ಥಾಮನು ಏಳು ಬಾಣಗಳಿಂದಲೂ ಭೀಮಸೇನನನ್ನು ಗಾಯಗೊಳಿಸಿದರು. ಅಷ್ಟಕ್ಕೇ ಮುಗಿಯಲಿಲ್ಲ. ಅದೇ ಸಮಯದಲ್ಲಿ ದುರ್ಯೋಧನನೂ ಸಹ ಭೀಮಸೇನನನ್ನು ಆರು ಬಾಣಗಳಿಂದ ಪ್ರಹರಿಸಿದನು. ಮರುಕ್ಷಣದಲ್ಲಿಯೇ ಮಹಾಬಲನಾದ ಭೀಮಸೇನನು ದ್ರೋಣರೇ ಮೊದಲಾದ ಯೋಧರೆಲ್ಲರನ್ನೂ ನಿಶಿತವಾದ ಬಾಣಗಳಿಂದ ಗಾಯಗೊಳಿಸಿದನು. ಭೀಮಸೇನನು ದ್ರೋಣರನ್ನು ಐವತ್ತು ಬಾಣಗಳಿಂದಲೂ, ದುರ್ಯೋಧನನನ್ನು ಹನ್ನೆರಡು ಬಾಣಗಳಿಂದಲೂ, ಅಶ್ವತ್ಥಾಮನನ್ನು ಶೀಘ್ರಗಾಮಿಗಳಾದ ಎಂಟು ಬಾಣಗಳಿಂದಲೂ ಪ್ರಹರಿಸಿದನು. ಭಯಂಕರವಾಗಿ ಗರ್ಜನೆಮಾಡುತ್ತಾ ಏಕಾಕಿಯಾಗಿಯೇ ಆ ಎಲ್ಲ ಯೋಧರನ್ನೂ ಏಕಕಾಲದಲ್ಲಿ ಎದುರಿಸಿದನು.

ಈ ರೀತಿಯಲ್ಲಿ ಭೀಮನು ಯುದ್ಧದಲ್ಲಿ ಪ್ರಾಣಗಳನ್ನಾದರೂ ತೊರೆಯಲು ಸಿದ್ಧನಾಗುತ್ತಿರಲಾಗಿ, ಮೃತ್ಯುವು ಸರ್ವಸಾಧಾರಣವೆಂದು ಬಗೆಯುತ್ತಿರಲಾಗಿ, ಅಜಾತಶತ್ರುವು ತನ್ನ ಕಡೆಯ ಯೋಧರನ್ನು ಉದ್ದೇಶಿಸಿ–'ಭೀಮಸೇನನನ್ನು ರಕ್ಷಿಸಿರಿ'–ಎಂದು ಪ್ರಚೋದಿಸಿದನು. ಒಡನೆಯೇ ಪಾಂಡವರ ಕಡೆಯ ಮಹಾತೇಜಸ್ವಿಗಳಾದ ಯೋಧರು ಭೀಮನ ರಕ್ಷಣೆಯ ಸಲುವಾಗಿ ಅವನ ಸಮೀಪಕ್ಕೆ ಹೋದರು. ಪುರುಷರ್ಷಭರಾದ, ಮಹಾಧನುಸ್ಸುಗಳಿಂದ ಸಂರಕ್ಷಿತರಾಗಿದ್ದ, ಪರಮಕ್ರುದ್ಧರಾಗಿದ್ದ ಸಾತ್ಯಕಿಯೇ ಮೊದಲಾದ ಮಹಾರಥರು, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ಭೀಮನೇ ಮೊದಲಾದ ಮಹಾರಥಿಗಳೂ ಒಟ್ಟಾಗಿ ಸೇರಿ ದ್ರೋಣರ ಸೈನ್ಯವನ್ನು ಭೇದಿಸುವ ಇಚ್ಛೆಯಿಂದ ಅವರ ಮೇಲೆ ಬಿದ್ದರು. ಆ ಸಮಯದಲ್ಲಿ ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರಾದರೋ ಸ್ಥಿರಚಿತ್ತರಾಗಿಯೇ ಇದ್ದು ಮಹಾರಥರಾದ, ಅತಿಬಲಿಷ್ಠರಾದ, ವೀರರಾದ, ಸಮರಯೋಧಿಗಳಾದ, ಭೀಮಪ್ರಭೃತಿಗಳಾದ ರಾಜರನ್ನು ಎದುರಿಸಿದರು. ಆ ಸಮಯದಲ್ಲಿ ಪಾಂಡವರು ಪ್ರಾಣಭಯವನ್ನು ಹೊರಗಟ್ಟಿ (ಪ್ರಾಣದ ಮೇಲಿನ ಹಂಗನ್ನು ತೊರೆದು) ನಿನ್ನ ಕಡೆಯ ಸೈನಿಕರೊಡನೆ ಯುದ್ಧಮಾಡುತ್ತಿದ್ದರು. ಕುದುರೇಸವಾರರು-ಕುದುರೇಸವಾರರನ್ನೂ, ರಥಿಗಳು ರಥಿಕರನ್ನೂ ಎದುರಿಸಿ ಯುದ್ಧದಲ್ಲಿ ಸಂಹರಿಸುತ್ತಿದ್ದರು. ಶಕ್ತ್ಯಾಯುಧಗಳಿಂದಲೂ, ಕತ್ತಿಗಳಿಂದಲೂ, ಗಂಡುಗೊಡಲಿಗಳಿಂದಲೂ ಎರಡೂ ಕಡೆಯ ಯೋಧರೂ ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ದಾರುಣವಾದ ಪರಿಣಾಮವನ್ನುಂಟುಮಾಡುವ ಪ್ರಖರವಾದ ಖಡ್ಗಯುದ್ಧವೂ ನಡೆಯುತ್ತಿದ್ದಿತು. ಗಜಸೈನ್ಯಗಳ ಪರಸ್ಪರ ಸಂಘರ್ಷಣೆಯಿಂದಾಗಿ ಸುದಾರುಣವಾದ ಯುದ್ಧವು ಪ್ರಾರಂಭವಾಯಿತು. ಒಬ್ಬನು ಆನೆಯ ಮೇಲಿಂದ ಬೀಳುತ್ತಿದ್ದನು. ಮತ್ತೊಬ್ಬನು ಕುದುರೆಯ ಮೇಲಿಂದ ತಲೆಕೆಳಗಾಗಿ ಬೀಳುತ್ತಿದ್ದನು. ಭಯಂಕರವಾಗಿದ್ದ ಆ ಯುದ್ಧದಲ್ಲಿ ರಥಿಕನೊಬ್ಬನು ಶತ್ರುಪಕ್ಷದ ರಥಿಕನ ಬಾಣಕ್ಕೆ ಲಕ್ಷ್ಯನಾಗಿ ಪ್ರಾಣತೊರೆದು ರಥದಿಂದ ಕೆಳಕ್ಕೆ ಬೀಳುತ್ತಿದ್ದನು. ಮತ್ತೊಬ್ಬನು ಅದೇ ರೀತಿಯಲ್ಲಿ ಶತ್ರುವಿನ ಬಾಣಕ್ಕೆ ಲಕ್ಷ್ಯನಾಗಿ ಕವಚರಹಿತನಾಗಿಯೇ ಕೆಳಕ್ಕೆ ಬೀಳುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ಆನೆಯೊಂದು ಬಂದು ಅವನ ಎದೆಯ ಮೇಲೆ ಕಾಲಿಟ್ಟು ಅವನ ಕುತ್ತಿಗೆಯನ್ನು ಜಜ್ಜಿಬಿಡುತ್ತಿದ್ದಿತು. ಇನ್ನೂ ಹಲವು ಆನೆಗಳು

ಭೂಮಿಯ ಮೇಲೆ ಬಿದ್ದಿರುತ್ತಿದ್ದ ಮನುಷ್ಯರನ್ನು ತುಳಿದು ಜಜ್ಜಿಹಾಕುತ್ತಿದ್ದುವು. ಕೆಲವು ಆನೆಗಳು ಯುದ್ಧಭೂಮಿಗೆ ಹೋಗಿ ತಮ್ಮ ದಂತಗಳಿಂದ ಅನೇಕ ರಥಿಕರನ್ನು ಧ್ವಂಸಮಾಡಿದುವು. ಮತ್ತೆ ಕೆಲವು ಆನೆಗಳು ನೂರಾರು ಮನುಷ್ಯರನ್ನು ಕೋರೆದಾಡೆಗಳಿಂದ ಇರಿದು ಧ್ವಂಸಮಾಡುತ್ತಿದ್ದುವು ಮತ್ತು ಕೊಂಬುಗಳಿಂದ ಇರಿದು ಕೊಲ್ಲುವಾಗ ಕೋರೆದಾಡೆಗಳಿಗೆ ಅಂಟಿಕೊಂಡು ನೇತಾಡುತ್ತಿದ್ದ ಮನುಷ್ಯರ ಕರುಳಿನ ಸಮೇತವಾಗಿ ರಣಾಂಗಣದ ಸುತ್ತಲೂ ಓಡಾಡುತ್ತಿದ್ದುವು. ರಣಾಂಗಣದಲ್ಲಿ ಕೆಳಕ್ಕೆ ಬಿದ್ದಿದ್ದ, ಕಪ್ಪಾದ ಮತ್ತು ಲೋಹ ಮಯವಾದ ಕವಚಗಳನ್ನು ಧರಿಸಿದ್ದ ಮನುಷ್ಯರನ್ನೂ, ಕುದುರೆಗಳನ್ನೂ, ರಥಿಕರನ್ನೂ ಮತ್ತು ಆನೆಗಳನ್ನೂ–ದೊಡ್ಡದಾದ ಲಾಳದ ಕಡ್ಡಿಗಳನ್ನು ತುಳಿದು ಧ್ವಂಸಮಾಡುವಂತೆ–ಮದಗಜಗಳು ತುಳಿದು ಧ್ವಂಸಮಾಡುತ್ತಿದ್ದುವು. ಅನೇಕ ದೊಡ್ಡ-ದೊಡ್ಡ ರಾಜರು ಕಾಲಯೋಗದಿಂದ ಅತ್ಯಂತದುಃಖದಾಯಕವಾದ, ಹದ್ದಿನ ರೆಕ್ಕೆಗಳಿಂದ ಮಾಡಿದ ಹಾಸಿಗೆಗಳಲ್ಲಿ ನಾಚಿಕೆಪಟ್ಟುಕೊಂಡು ಮಲಗುತ್ತಿದ್ದರು.

(ಹಂಸತೂಲಿಕಾತಲ್ಪದಲ್ಲಿ ಮಲಗುತ್ತಿದ್ದ ರಾಜರು ಪ್ರಾಣಬಿಡುವ ಕಾಲದಲ್ಲಿ ರಣಾಂಗಣದಲ್ಲಿ ಬಿದ್ದು ಸಾಯುತ್ತಿದ್ದರು. ರಣಭೂಮಿಯಲ್ಲಿ ಹೆಣಗಳನ್ನು ಕಿತ್ತು ತಿನ್ನಲು ಓಡಾಡುತ್ತಿದ್ದ ಮತ್ತು ಪರಸ್ಪರವಾಗಿ ಕಚ್ಚಾಡುತ್ತಿದ್ದ ರಣಹದ್ದುಗಳ ಉದುರಿಹೋದ ರೆಕ್ಕೆಗಳೇ ಅವರಿಗೆ ಹಾಸಿಗೆಗಳಾಗಿದ್ದುವು. ಬಾಣಗಳ ಗಾಯದಿಂದ ಅವರು ಕಷ್ಟಪಡುತ್ತಿದ್ದರಲ್ಲದೇ–ಅವರು ಬಿದ್ದ ಸ್ಥಳದ ಕೆಳಭಾಗದಲ್ಲಿ ರಣಹದ್ದುಗಳ ರೆಕ್ಕೆಗಳು ಉದುರಿದ್ದುದರಿಂದ ರಾಜರಿಗೆ ಅದು ಮತ್ತಷ್ಟು ತ್ರಾಸದಾಯಕವಾಗಿದ್ದಿತು. ಆದರೂ ಅನ್ಯಥಾ ವಿಧಿಯಿಲ್ಲದೇ ತಮ್ಮ ಹಿಂದಿನ ವೈಭವವನ್ನು ನೆನೆಸಿಕೊಂಡು, ಈಗ ಉಂಟಾದ ಪರಿಸ್ಥಿತಿಗಾಗಿ ನಾಚಿಕೆಪಡುತ್ತಾ ಸಂಕಟಪಡುತ್ತಿದ್ದು ಪ್ರಾಣಬಿಡುತ್ತಿದ್ದರು.) ಆಗ ಅಲ್ಲಿ ನಡೆ ಯುತ್ತಿದ್ದ ಘೋರಯುದ್ಧದಲ್ಲಿ ಹಿರಿಯರು-ಕಿರಿಯರು ಎಂಬ ತಾರತಮ್ಯವೇ ಇರಲಿಲ್ಲ. ರಥದಲ್ಲಿ ವೇಗವಾಗಿ ಬಂದು ತಂದೆಯೇ ಮಗನನ್ನು ಕೊಲ್ಲುತ್ತಿ ದ್ದನು. ಮಗನು ಭ್ರಾಂತಿಯಿಂದ ತಂದೆಯನ್ನೇ ಸಂಹರಿಸುತ್ತಿದ್ದನು. ಈ ರೀತಿಯಲ್ಲಿ ಆಗಿನ ಯುದ್ಧವು ಎಲ್ಲ ವಿಧವಾದ ಯುದ್ಧ ಮರ್ಯಾದೆಗಳನ್ನೂ ಮೀರಿ ನಡೆಯುತ್ತಿದ್ದಿತು. ರಥವು ಭಗ್ನವಾಗಿ ಹೋಗಿರುತ್ತಿದ್ದಿತು. ಧ್ವಜವು

ಹರಿದುಹೋಗಿರುತ್ತಿದ್ದಿತು. ಶ್ವೇತಚ್ಛತ್ರವು ಭೂಮಿಯ ಮೇಲೆ ಬಿದ್ದಿರುತ್ತಿದ್ದಿತು. ಮುರಿದುಹೋಗಿದ್ದ ರಥದ ಮೂಕಿಯ ಅರ್ಧಭಾಗವನ್ನೇ ಎಳೆದುಕೊಂಡು ಕುದುರೆಗಳು ಓಡುತ್ತಿದ್ದುವು. ಕೆಲವು ಕಡೆಗಳಲ್ಲಿ ಕತ್ತಿಯನ್ನು ಹಿಡಿದ ತೋಳುಗಳು ಕತ್ತರಿಸಲ್ಪಟ್ಟು ಕೆಳಗೆ ಬಿದ್ದಿರುತ್ತಿದ್ದುವು. ಮತ್ತೆ ಕೆಲವು ಕಡೆಗಳಲ್ಲಿ ಕರ್ಣಕುಂಡಲಗಳಿಂದ ಯುಕ್ತವಾದ ತಲೆಗಳು ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬಿದ್ದಿರುತ್ತಿದ್ದುವು. ಕೆಲವು ಕಡೆಗಳಲ್ಲಿ ಬಲಿಷ್ಠವಾದ ಆನೆಯು ಎದುರಿಗೆ ಸಿಕ್ಕಿದ ರಥವನ್ನು ಸೊಂಡಿಲಿನಿಂದ ಮೇಲೆತ್ತಿ ರಭಸದಿಂದ ನೆಲಕ್ಕೆ ಅಪ್ಪಳಿಸಿ ಚೂರು-ಚೂರಾಗಿ ಮಾಡುತ್ತಿದ್ದಿತು. ಕೆಲವು ಕಡೆಗಳಲ್ಲಿ ರಥಿಯು ಆನೆಯನ್ನು ನಾರಾಚದಿಂದ ಪ್ರಹರಿಸುತ್ತಿದ್ದನು. ಮರುಕ್ಷಣದಲ್ಲಿಯೇ ಅದು ಪ್ರಾಣತೊರೆದು ನೆಲದಮೇಲೆ ಬೀಳುತ್ತಿದ್ದಿತು. ಕೆಲವೆಡೆಗಳಲ್ಲಿ ಮದಿಸಿದ್ದ ಆನೆಯು ಅಶ್ವಸೈನಿಕರನ್ನು ಸೊಂಡಿಲಿನಿಂದ ಅಪ್ಪಳಿಸುತ್ತಿದ್ದಿತು. ಸವಾರನ ಸಮೇತವಾಗಿ ಕುದುರೆಯು ಕೆಳಕ್ಕೆ ಬೀಳುತ್ತಿದ್ದಿತು. ಈ ರೀತಿಯಲ್ಲಿ ಯುದ್ಧದ ಮರ್ಯಾದೆಯನ್ನು ಮೀರಿ ಸುದಾರುಣವಾದ ಯುದ್ಧವು ನಡೆಯುತ್ತಿದ್ದಿತು.

ಹಾ ತಾತ ಹಾ ಪುತ್ರ ಸಖೇ ಕ್ವಾಸಿ ತಿಷ್ಠ ಕ್ವ ಧಾವಸಿ ।
ಪ್ರಹರಾಹರ ಜಹ್ಯೇನಂ ಸ್ಮಿತಕ್ಷ್ವೇಡಿತಗರ್ಜಿತೈಃ ।
ಇತ್ಯೇವಮುಚ್ಚರನ್ತಿ ಸ್ಮ ಶ್ರೂಯನ್ತೇ ವಿವಿಧಾ ಗಿರಃ ॥೨೪॥

ಮಹಾರಾಜ! ಆ ಸಮಯದಲ್ಲಿ 'ಅಪ್ಪಾ! ಅಪ್ಪಾ!' 'ಮಗು! ಮಗು! ಎಲ್ಲಿ ಹೋದೆ?' 'ಮಿತ್ರ! ಮಿತ್ರ! ಎಲ್ಲಿರುವೆ? ಎಲ್ಲಿಗೆ ಹೋಗುವೆ?' 'ಅವರನ್ನು ಪ್ರಹರಿಸು' ' ಅವನನ್ನು ಬಂಧಿಸಿ ಎಳೆದುಕೊಂಡು ಬಾ' 'ಇವರನ್ನು ಕೊಲ್ಲು' ಇವೇ ಮುಂತಾಗಿ ನಗುತ್ತಲೂ, ಕೋಪದಿಂದ ಗರ್ಜಿಸುತ್ತಲೂ ಯೋಧರು ಕೂಗಿಕೊಳ್ಳುತ್ತಿದ್ದರು. ಅದೂ ಅಲ್ಲದೇ ಇನ್ನೂ ಅನೇಕ ಬಗೆಯ ಮಾತುಗಳು ಆ ರಣಾಂಗಣದಲ್ಲಿ ಕೇಳಿಬರುತ್ತಿದ್ದುವು.

ಮನುಷ್ಯನ, ಕುದುರೆಯ ಮತ್ತು ಆನೆಯ ರಕ್ತವು ಒಂದಕ್ಕೊಂದು ಬೆರೆತು ಹೋಯಿತು. ಆ ರಕ್ತದಿಂದ ಭೂಮಿಯು ತೋಯ್ದು ಧೂಳಿಯು ಉಡುಗಿತು. ಸತ್ತು ಕೆಳಗೆ ಬಿದ್ದಿದ್ದ ಶವಗಳ ಆ ಭಯಂಕರದೃಶ್ಯವನ್ನು ನೋಡಿದ ಹೇಡಿಗಳ ಮನಸ್ಸನ್ನು ಮೋಹವು ಆವರಿಸಿತು.

ಒಂದು ವಿಭಾಗದಲ್ಲಿ ಒಬ್ಬ ವೀರನು ಮತ್ತೊಬ್ಬ ವೀರನನ್ನು ಚಕ್ರಾಯುಧದಿಂದಲೇ ಎದುರಿಸುತ್ತಿದ್ದನು. ಚಕ್ರಾಯುಧವನ್ನು ಪ್ರಯೋಗಿಸಿ ದೊಡನೆಯೇ ಎದುರಾಳಿಯೂ ಚಕ್ರಾಯುಧವನ್ನೇ ಪ್ರಯೋಗಿಸಿ ಶತ್ರುವು ಬಿಟ್ಟ ಚಕ್ರಾಯುಧವನ್ನು ನಿರಸನಗೊಳಿಸುತ್ತಿದ್ದನು. ಚಕ್ರಾಯುಧವು ನಿರರ್ಥಕ ವಾದೊಡನೆಯೇ ಎದುರಾಳಿಯು ಮುನ್ನುಗ್ಗಿ ಬರುತ್ತಿದ್ದನು. ಆದುದರಿಂದ ಪರಸ್ಪರವಾಗಿ ಬಾಣಪ್ರಯೋಗಮಾಡಲು ಅವಕಾಶವೇ ಇರುತ್ತಿರಲಿಲ್ಲ. ಒಡನೆಯೇ ತನ್ನ ಬಳಿ ಇದ್ದ ಗದೆಯನ್ನೇ ಎತ್ತಿ ಎದುರಾಳಿಯ ತಲೆಯಮೇಲೆ ಅಪ್ಪಳಿಸುತ್ತಿದ್ದನು.

ಮತ್ತೊಂದು ವಿಭಾಗದಲ್ಲಿ ಆಯುಧಗಳೆಲ್ಲವೂ ಮುಗಿದುಹೋಗಿ ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಜುಟ್ಟುಹಿಡಿದು ಸೆಳೆದಾಡುತ್ತಿದ್ದರು. ಮತ್ತೊಂದು ಕಡೆಯಲ್ಲಿ ಭಯಂಕರವಾದ ಮುಷ್ಟಿಯುದ್ಧವಾಗುತ್ತಿದ್ದಿತು. ಆ ಸಮಯದಲ್ಲಿ ಯಾವ ಯೋಧನಿಗೂ ಉಳಿಗಾಲವೇ ಇರಲಿಲ್ಲ. ಆದರೂ ಹೇಗಾದರೂ ಮಾಡಿ ಪ್ರಾಣವುಳಿಸಿಕೊಳ್ಳಬೇಕೆಂಬ ಆಶಯದಿಂದಲೂ-ಶತ್ರುವನ್ನು ಯಾವುದೇ ಪ್ರಕಾರದಿಂದಲಾದರೂ ಸಂಹರಿಸಬೇಕೆಂಬ ಇಚ್ಛೆಯಿಂದಲೂ ಪಾಂಡವ-ಕೌರವಯೋಧರು ಪರಸ್ಪರವಾಗಿ ಉಗುರು ಗಳಿಂದ ಪರಚಾಡುತ್ತಿದ್ದರು. ಸಮಯ ಸಿಕ್ಕಿದಾಗ ಹಲ್ಲುಗಳಿಂದಲೇ ಕಚ್ಚಿಬಿಡುತ್ತಿದ್ದರು. ಖಡ್ಗವನ್ನೆತ್ತಿ ಪ್ರಹರಿಸಲು ಬಂದ ಶತ್ರುವಿನ ಕೈಯ್ಯನ್ನೇ ಕತ್ತರಿಸುತ್ತಿದ್ದರು. ಅಂತೆಯೇ ಧನುಸ್ಸನ್ನೂ, ಬಾಣಗಳನ್ನೂ ಮತ್ತು ಅಂಕುಶ ವನ್ನೂ ಹಿಡಿದಿರುವ ಶತ್ರುವಿನ ತೋಳುಗಳನ್ನೂ ಕತ್ತರಿಸಿಬಿಡುತ್ತಿದ್ದರು. ಒಬ್ಬನು ಮತ್ತೊಬ್ಬನನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದನು. ಮತ್ತೊಬ್ಬನು ಭಯ ಗೊಂಡು ಓಡಿಹೋಗುತ್ತಿದ್ದನು. ಒಬ್ಬನು ತನ್ನ ಎದುರಾಗಿ ಯುದ್ಧಕ್ಕೆ ಬಂದವನ ತಲೆಯನ್ನೇ ಕ್ಷಣಾರ್ಧದಲ್ಲಿ ಕತ್ತರಿಸಿಹಾಕುತ್ತಿದ್ದನು. ಅದನ್ನು ನೋಡಿದ ಮತ್ತೊಬ್ಬನು ಗಾಬರಿಗೊಂಡು ಕಿರುಚಿಕೊಳ್ಳುತ್ತಾ ಪಲಾಯನಮಾಡುತ್ತಿದ್ದನು. ಓಡುತ್ತಿದ್ದವನ ಆರ್ತನಾದವನ್ನು ಕೇಳಿ ಮಗದೊಬ್ಬ ಯೋಧನು ಬಹಳವಾಗಿ ಭಯಗೊಳ್ಳುತ್ತಿದ್ದನು. ಭ್ರಾಂತರಾದ ಕೆಲವು ಯೋಧರು ತಮ್ಮ ಕಡೆಯ ಯೋಧರನ್ನೇ ನಿಶಿತವಾದ ಬಾಣಗಳಿಂದ ಪ್ರಹರಿಸುತ್ತಿದ್ದರು. ಮತ್ತೆ ಕೆಲವು ಯೋಧರು ಅವ್ಯಗ್ರತೆಯಿಂದ ಶತ್ರುಪಕ್ಷದ ಯೋಧರನ್ನು ನಿಶಿತವಾದ ಬಾಣ

ಗಳಿಂದ ಸಂಹರಿಸುತ್ತಿದ್ದರು. ಕೆಲವು ಯೋಧರು ಬೆಟ್ಟದ ಶಿಖರಕ್ಕೆ ಸಮಾನವಾಗಿದ್ದ ಆನೆಗಳನ್ನೇ ಬಾಣಗಳ ಪ್ರಹಾರದಿಂದ ಕೆಳಕ್ಕೆ ಕೆಡವುತ್ತಿದ್ದರು. ವರ್ಷಾಕಾಲದಲ್ಲಿ ನದಿಯ ತೀರಪ್ರದೇಶವು ವಿಶೇಷವಾದ ಪ್ರವಾಹದಿಂದಾಗಿ ಕುಸಿಯುವಂತೆ–ಆ ಆನೆಗಳು ಅಸುವನ್ನು ತೊರೆದು ಭೂಮಿಯ ಮೇಲೆ ಬೀಳುತ್ತಿದ್ದುವು. ಝರಿಯಿಂದ ಕೂಡಿದ ಪರ್ವತದಂತೆ–ಮದೋದಕವನ್ನು ಸುರಿಸುತ್ತಿದ್ದ ಆನೆಯೊಂದು ಸಾರಥಿಯಿಂದಲೂ, ಕುದುರೆಗಳಿಂದಲೂ ಸಹಿತನಾದ ರಥಿಯನ್ನು ಸೊಂಡಿಲಿನಿಂದ ಕೆಳಕ್ಕೆ ಕೆಡವಿ ಭೂಮಿಯ ಮೇಲೆ ಬಿದ್ದ ಅವನನ್ನು ಪುನಃ ಕಾಲಿನಿಂದ ತುಳಿದು ಜಜ್ಜಿಬಿಡುತ್ತಿದ್ದಿತು. ಅಸ್ತ್ರವಿದ್ಯಾಸಂಪನ್ನರಾದ ಯೋಧರು–ಶರೀರವೆಲ್ಲವೂ ಗಾಯಗೊಂಡು ರಕ್ತದಿಂದ ತೋಯ್ದುಹೋಗಿರುವುದನ್ನೂ ಲೆಕ್ಕಿಸದೇ–ವೀರಾವೇಶದಿಂದ ಪರಸ್ಪರವಾಗಿ ಕಾದಾಡುತ್ತಿರುವುದನ್ನು ಕಂಡು ಹೃದಯದೌರ್ಬಲ್ಯವನ್ನು ಹೊಂದಿದ್ದ ಅನೇಕ ಹೇಡಿಗಳ ಮನಸ್ಸನ್ನು ಮೋಹವು ಆವರಿಸಿತು.

ಮತ್ತೊಂದು ವಿಭಾಗದಲ್ಲಿ ಸೈನಿಕರ ಪಾದಸಂಘಟ್ಟನೆಗಳಿಂದ ಉದ್ಭೂತವಾದ ಧೂಳಿಯು ಸರ್ವತ್ರ ಆವರಿಸಿತು. ಎಲ್ಲಿ ಏನು ನಡೆಯುತ್ತಿದೆಯೆಂಬುದು ಯಾರಿಗೂ ತಿಳಿಯುತ್ತಲೇ ಇರಲಿಲ್ಲ. ಆ ಸಮಯದಲ್ಲಿ ಯಾರೂ ಯುದ್ಧದ ಮರ್ಯಾದೆಯನ್ನು ಅನುಸರಿಸಿ ನಡೆಯುತ್ತಿರಲಿಲ್ಲ.

ಅನಂತರ ಸೇನಾಪತಿಯಾದ ಧೃಷ್ಟದ್ಯುಮ್ನನು– 'ಇದು ಶತ್ರುಗಳ ಪ್ರಹಾರಕ್ಕೆ ಸಕಾಲವಾಗಿದೆ. ಶೀಘ್ರವಾಗಿ ಹೊರಡಿರಿ'–ಎಂದು ಹೇಳುತ್ತಾ ಯಾವಾಗಲೂ ತ್ವರೆಯಿಂದಲೇ ಕಾರ್ಯಮಾಡುತ್ತಿದ್ದ ಪಾಂಡವರನ್ನು ಮತ್ತಷ್ಟು ಅವಸರಪಡಿಸಿದನು. ಲಕ್ಷಣವಾದ ಬಾಹುಗಳನ್ನು ಹೊಂದಿದ್ದ ಪಾಂಡವರು ಸೇನಾಪತಿಯ ಶಾಸನವನ್ನು ಪರಿಪಾಲಿಸುತ್ತಾ –ಹಂಸಗಳು ಸರೋವರದಲ್ಲಿ ಧುಮುಕುವಂತೆ–ತಾವಿದ್ದ ಸ್ಥಾನಗಳಿಂದ ಒಟ್ಟಾಗಿ ಹೊರಬಂದು ಬಾಣಗಳನ್ನು ಬಿಡುತ್ತಾ ದ್ರೋಣರ ರಥದ ಕಡೆಗೆ ಧಾವಿಸಿದರು. ದುರ್ಧರ್ಷರಾದ ದ್ರೋಣರ ರಥದ ಬಳಿಗೆ ಹೋಗುತ್ತಿದ್ದ ಪಾಂಡವಯೋಧರ ಮಧ್ಯದಲ್ಲಿ– 'ಹಿಡಿಯಿರಿ' 'ಓಡಬೇಡಿರಿ' 'ಹೆದರಬೇಡಿರಿ' 'ಶತ್ರುವನ್ನು ಕತ್ತರಿಸಿರಿ'–ಎಂಬ ಭಯಂಕರವಾದ ಘೋಷಣೆಗಳು ಕೇಳಿಬರುತ್ತಿದ್ದುವು. ಸಮುದ್ರದ ಅಲೆಗಳೋಪಾದಿಯಲ್ಲಿ ಮುನ್ನುಗ್ಗಿ ಬರುತ್ತಿದ್ದ ಪಾಂಡವಸೈನಿಕರನ್ನು ದ್ರೋಣರು,

ಕೃಪರು, ಅಶ್ವತ್ಥಾಮಾ, ಜಯದ್ರಥ, ಅವಂತಿಯ ರಾಜಕುಮಾರರಾದ ವಿಂದಾನುವಿಂದರು, ಶಲ್ಯ-ಇವರೆಲ್ಲರೂ ಒಟ್ಟಾಗಿ ಸೇರಿ ತಡೆದು ನಿಲ್ಲಿಸಿದರು. ಆರ್ಯಧರ್ಮಾನುಸಾರವಾಗಿ ವಿಜಯಗಳಿಸಲು ಪ್ರಯತ್ನಿಸುತ್ತಿದ್ದ, ತಡೆ ಹಿಡಿಯಲು ಮತ್ತು ಎದುರಿಸಲು ಅಸಾಧ್ಯರಾಗಿದ್ದ ಪಾಂಡವರಿಂದೊಡ ಗೂಡಿದ ಪಾಂಚಾಲರು ದ್ರೋಣಪ್ರಮುಖರಾದ ವೀರಯೋಧರು ಬಿಟ್ಟ ಬಾಣಗಳಿಂದ ಗಾಯಗೊಂಡಿದ್ದರೂ ದ್ರೋಣರನ್ನು ಬಿಟ್ಟು ಕದಲಲಿಲ್ಲ. ಅನಂತರ ಅತಿಕ್ರುದ್ಧರಾದ ದ್ರೋಣರು ನೂರಾರು ಬಾಣಗಳನ್ನು ಬಿಡುತ್ತಾ ಅನೇಕಾನೇಕ ಚೇದಿ-ಪಾಂಚಾಲ-ಪಾಂಡವಯೋಧರನ್ನು ಸಂಹಾರಮಾಡಿ ದರು. ದ್ರೋಣರ ಧನುಷ್ಟೇಂಕಾರದ ಘೋಷವು ವಜ್ರಾಯುಧದ ಧ್ವನಿಗೆ ಸಮಾನವಾಗಿದ್ದು ಬಹುಜನರನ್ನು ಭಯಗೊಳಿಸುತ್ತಾ ನಾಲ್ಕು ದಿಕ್ಕು ಗಳಲ್ಲಿಯೂ ಪ್ರತಿಧ್ವನಿಸಿತು. ಆ ಮಧ್ಯದಲ್ಲಿ ಅರ್ಜುನನು ಅನೇಕ ಸಂಶಪ್ತಕರನ್ನು ಗೆದ್ದು ದ್ರೋಣರು ಪಾಂಡವರ ಸೈನ್ಯಗಳನ್ನು ಮರ್ದನ ಮಾಡುತ್ತಿದ್ದ ಸ್ಥಳಕ್ಕೆ ಧಾವಿಸಿದನು. ಸಂಶಪ್ತಕಮಹಾಸೈನ್ಯಗಳು ಸಾಮಾನ್ಯರಿಂದ ದಾಟಲಾಗದ ಮಹಾಸರೋವರಗಳಂತಿದ್ದುವು. ಅವರ ಬಾಣಗಳ ಸಮೂಹಗಳೇ ಸರೋವರಗಳ ಸುಳಿಗಳಂತಿದ್ದುವು. ರಕ್ತವೇ ಆ ಸೈನ್ಯ ಸರೋವರಗಳ ನೀರಿನ ರೂಪದಲ್ಲಿದ್ದಿತು. ಅನೇಕಾನೇಕ ಸಂಶಪ್ತಕರನ್ನು ಸಂಹಾರಮಾಡುವುದರ ಮೂಲಕ ದಾಟಲು ದುಃಸಾಧ್ಯವಾಗಿದ್ದ ಸಂಶಪ್ತಕರ ಸೈನ್ಯರೂಪವಾದ ಮಹಾಸರೋವರಗಳನ್ನು ದಾಟಿಕೊಂಡು ಅರ್ಜುನನು ದ್ರೋಣರ ಸಮೀಪದಲ್ಲಿ ಕಾಣಿಸಿಕೊಂಡನು. ಸೂರ್ಯನ ತೇಜಸ್ಸಿಗೆ ಸಮಾನ ವಾದ ತೇಜಸ್ಸುಳ್ಳವನೂ, ಕೀರ್ತಿಮಂತನೂ ಆದ ಅರ್ಜುನನ ಗುರುತರವಾದ ತೇಜಸ್ಸಿನಿಂದ ದೇದೀಪ್ಯಮಾನವಾಗಿ ಕಾಣುತ್ತಿದ್ದ ಕಪಿಧ್ವಜವನ್ನು ನಾವು ಬಹಳ ದೂರದಿಂದಲೇ ನೋಡಿದೆವು. ಯುಗಾಂತಸೂರ್ಯರೂಪನಾದ ಪಾಂಡ ವನು ತನ್ನ ಅಸ್ತ್ರರೂಪವಾದ ಕಿರಣಗಳಿಂದ ಸಂಶಪ್ತಕಸೇನಾಸಮುದ್ರವನ್ನು ಸಂಪೂರ್ಣವಾಗಿ ಶೋಷಿಸಿ ಕೌರವರ ಸೈನ್ಯವನ್ನೂ ಪರಿತಾಪಗೊಳಿಸಲು ಉಪಕ್ರಮಿಸಿದನು.

ಯುಗಾಂತದಲ್ಲಿ ಹುಟ್ಟಿದ ಧೂಮಕೇತುವು (ಅಗ್ನಿಯು) ಎಲ್ಲ ಪ್ರಾಣಿಗಳನ್ನೂ ದಹಿಸಿ ಭಸ್ಮಮಾಡಿಬಿಡುವಂತೆ–ಅರ್ಜುನನು ತನ್ನಲ್ಲಿದ್ದ ಶಸ್ತ್ರಾಸ್ತ್ರಗಳ ತೇಜಸ್ಸಿನಿಂದ ಕುರುಗಳನ್ನು ದಹಿಸಿಬಿಟ್ಟನು. ಅರ್ಜುನನು

ಬಿಡುತ್ತಿದ್ದ ಸಾವಿರಾರು ಬಾಣಗಳ ಸಮೂಹಗಳಿಂದ ಪ್ರಹೃತರಾದ ಗಜಾಶ್ವ-ರಥಯೋಧರು ಬಾಣಗಳ ಪ್ರಹಾರದಿಂದ ಗಾಯಗೊಂಡವರಾಗಿ ತಲೆಗೆದರಿಕೊಂಡು ಭೂಮಿಯಮೇಲೆ ಬೀಳುತ್ತಿದ್ದರು. ಅರ್ಜುನನ ಬಾಣಗಳಿಂದ ಪ್ರಹೃತರಾದವರಲ್ಲಿ ಕೆಲವರು ಬಹಳವಾಗಿ ಗಾಯಗೊಂಡು ಆರ್ತಧ್ವನಿಮಾಡುತ್ತಿದ್ದರು. ಮತ್ತೆ ಕೆಲವರು ವಿಕಾರವಾಗಿ ಕೂಗಿಕೊಳ್ಳುತ್ತಿದ್ದರು. ಇನ್ನೂ ಕೆಲವರು ಪ್ರಾಣಗಳನ್ನು ತೊರೆದು ಕೆಳಗೆ ಬೀಳುತ್ತಿದ್ದರು. ರಥದಿಂದ ಕೆಳಕ್ಕೆ ಬೀಳುತ್ತಿದ್ದವರನ್ನೂ, ಬಿದ್ದು ಭೂಮಿಯಮೇಲೆ ಚಡಪಡಿಸುತ್ತಿದ್ದವರನ್ನೂ ಮತ್ತು ಯುದ್ಧದಿಂದ ವಿಮುಖರಾದವರನ್ನೂ– ಯೋಧರ ಧರ್ಮವೇನೆಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದ, ಅದನ್ನು ಯಾವಾಗಲೂ ಸ್ಮರಿಸಿಕೊಳ್ಳುತ್ತಲೇ ಇದ್ದ ಅರ್ಜುನನು ಪುನಃ ಪ್ರಹರಿಸುತ್ತಿರಲಿಲ್ಲ. ಕೌರವಸೈನ್ಯದಲ್ಲಿ ಅನೇಕ ರಥಗಳು ಅರ್ಜುನನ ಬಾಣಗಳಿಂದ ವಿಧ್ವಂಸಿತವಾಗಿದ್ದು ಅವುಗಳ ಅವಸ್ಥೆಯು ವಿಚಿತ್ರರೂಪದಲ್ಲಿದ್ದಿತು. ಪ್ರಾಯಶಃ ಅನೇಕರು ಅರ್ಜುನನ ಬಾಣಪ್ರಹಾರವನ್ನು ತಡೆದುಕೊಳ್ಳಲಾರದೇ ಚದುರಿಹೋಗಿ ಯುದ್ಧದಿಂದ ಪರಾಙ್ಮುಖರೇ ಆಗುತ್ತಿದ್ದರು. ಪಲಾಯನ ಮಾಡುತ್ತಿರುವಾಗ– "ಹಾ ಕರ್ಣ! ಹಾ ಕರ್ಣ! ಎಲ್ಲಿ ಹೋದೆ? ನಮ್ಮನ್ನು ರಕ್ಷಿಸುವವರು ನೀನಲ್ಲದೇ ಮತ್ತಾರಿದ್ದಾರೆ?"–ಎಂದು ಕಿರುಚಿಕೊಳ್ಳುತ್ತಿದ್ದರು. ಅಧಿರಥನ ಮಗನಾದ ಕರ್ಣನು ಶರಣಾರ್ಥಿಗಳಾದ ಸೈನಿಕರ ಆರ್ತನಾದವನ್ನು ಕೇಳಿ– "ಮಾ ಭೈಷ್ಟ! ಹೆದರಬೇಡಿರಿ"–ಎಂದು ಅವರಿಗೆ ಆಶ್ವಾಸನೆಯನ್ನಿತ್ತು ಅರ್ಜುನನಿಗೆ ಅಭಿಮುಖನಾಗಿ ಹೋದನು. ಭಾರತವಂಶೀಯರಲ್ಲಿ ಶ್ರೇಷ್ಠಮಹಾರಥನಾದ, ಎಲ್ಲ ಭಾರತೀಯಸೈನ್ಯಕ್ಕೂ ಹರ್ಷದಾಯಕನಾದ, ಅಸ್ತ್ರವಿದರಲ್ಲಿ ಶ್ರೇಷ್ಠನಾದ ಕರ್ಣನು ಅರ್ಜುನನನ್ನು ಎದುರಿಸಿ ಅವನ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಪ್ರದೀಪ್ತವಾದ ಧನುಸ್ಸನ್ನೂ ಪ್ರಜ್ವಲಿಸುತ್ತಿದ್ದ ಬಾಣಗಳ ಸಮೂಹವನ್ನೂ ಹೊಂದಿದ್ದ ಕರ್ಣನು ಆಗ್ನೇಯಾಸ್ತ್ರದ ಮೂಲಕವಾಗಿ ಬಿಟ್ಟ ಬಾಣಗಳ ಸಮೂಹವನ್ನು ಅರ್ಜುನನು ತನ್ನ ಬಾಣಗಳ ಸಮೂಹದಿಂದ ಛಿನ್ನ -ಭಿನ್ನ ಮಾಡಿದನು. ಅದೇ ರೀತಿಯಲ್ಲಿ ಕರ್ಣನೂ ಸಹ ದೀಪ್ತತೇಜಸ್ಕವಾದ ಬಾಣಗಳನ್ನು–ಪ್ರತಿಬಾಣಗಳಿಂದಲೂ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದಲೂ ನಿರಸನಗೊಳಿಸಿ ಅರ್ಜುನನ ಮೇಲೆ ಬಾಣಗಳ ಮಳೆಗರೆದು ಗಟ್ಟಿಯಾಗಿ ಸಿಂಹನಾದಮಾಡಿದನು. ಆ ವೇಳೆಗೆ

ಧೃಷ್ಟದ್ಯುಮ್ನ, ಭೀಮ, ಮಹಾರಥನಾದ ಸಾತ್ಯಕಿ–ಈ ಮೂವರೂ ಅರ್ಜುನನ ರಕ್ಷಣೆಗಾಗಿ ಬಂದು ನೇರವಾದ ಗತಿಯುಳ್ಳ ಮೂರು-ಮೂರು ಬಾಣಗಳಿಂದ ಕರ್ಣನನ್ನು ಗಾಯಗೊಳಿಸಿದರು. ರಾಧೇಯನು ಅರ್ಜುನನು ಬಿಟ್ಟಿದ್ದ ಅಸ್ತ್ರವನ್ನು ಬಾಣಗಳ ವೃಷ್ಟಿಯಿಂದ ನಿರಸನಗೊಳಿಸಿ, ಉಳಿದ ಮೂವರು ಯೋಧರ ಧನುಸ್ಸುಗಳನ್ನೂ ಮೂರು ಬಾಣಗಳಿಂದ ಕತ್ತರಿಸಿದನು.

ಕರ್ಣನು ಧೃಷ್ಟದ್ಯುಮ್ನ-ಭೀಮ-ಸಾತ್ಯಕಿಗಳ ಧನುಸ್ಸುಗಳನ್ನು ಕತ್ತರಿಸಿದ ನಂತರ ಆ ವೀರರು ವಿಷವಿಲ್ಲದ ಹಾವಿನಂತಾದರು. ಆದರೂ ಧೃತಿಗೆಡದೆ ತಮ್ಮ ರಥದಲ್ಲಿದ್ದ ಶಕ್ತ್ಯಾಯುಧಗಳನ್ನೇ ತೆಗೆದುಕೊಂಡು ಕರ್ಣನ ಮೇಲೆ ರಭಸದಿಂದ ಎಸೆದು ಒಡನೆಯೇ ಸಿಂಹಗಳಂತೆ ಗರ್ಜನೆಮಾಡಿದರು. ವೀರಶ್ರೇಷ್ಠರ ಭುಜಾಗ್ರಗಳಿಂದ ಹೊರಟ ಮಹಾವೇಗಯುಕ್ತವಾದ, ಸರ್ಪಗಳಂತಿದ್ದ, ದೇದೀಪ್ಯಮಾನವಾಗಿ ಕಾಣುತ್ತಿದ್ದ ಆ ಮಹಾಶಕ್ತ್ಯಾಯುಧಗಳು ಕರ್ಣನ ಬಳಿಗೆ ರಭಸದಿಂದ ಹೋದುವು. ರಭಸದಿಂದ ತನ್ನ ಕಡೆಗೆ ಬರುತ್ತಿದ್ದ ಆ ಮೂರು ಶಕ್ತ್ಯಾಯುಧಗಳನ್ನೂ ನೇರವಾಗಿ ಹೋಗುವ ಮೂರು-ಮೂರು ಬಾಣಗಳ ಸಮೂಹದಿಂದ ಕತ್ತರಿಸಿ ಕರ್ಣನು ಅರ್ಜುನನ ಮೇಲೆ ಪುನಃ ಸತತವಾಗಿ ಬಾಣಗಳನ್ನು ಬಿಡುತ್ತಾ ಸಿಂಹನಾದವನ್ನು ಮಾಡಿದನು. ಅರ್ಜುನನೂ ಸಹ ರಾಧೇಯನನ್ನು ಶೀಘ್ರಗಾಮಿಗಳಾದ ಏಳು ಬಾಣ ಗಳಿಂದ ಪ್ರಹರಿಸಿ, ಬಳಿಕ ಕರ್ಣನ ತಮ್ಮನನ್ನು ನಿಶಿತವಾದ ಬಾಣಗಳಿಂದ ಸಂಹರಿಸಿದನು. ಅನಂತರ ಅರ್ಜುನನು ಕರ್ಣನ ಮತ್ತೊಬ್ಬ ತಮ್ಮನಾದ ಶತ್ರುಂಜಯನನ್ನು ನೇರವಾಗಿ ಹೋಗುವ ಆರು ಬಾಣಗಳಿಂದ ಸಂಹರಿಸಿ ಪುನಃ ಭಲ್ಲವೆಂಬ ಬಾಣದಿಂದ ರಥಸ್ಥನಾಗಿದ್ದ ಕರ್ಣನ ಮತ್ತೊಬ್ಬ ತಮ್ಮನಾದ ವಿಪಾಟನ ತಲೆಯನ್ನೂ ಹಾರಿಸಿಬಿಟ್ಟನು.

ಮಹಾರಾಜ! ಧೃತರಾಷ್ಟ್ರನ ಮಕ್ಕಳೆಲ್ಲರೂ ನೋಡುತ್ತಿದ್ದಂತೆಯೇ ಸೂತಪುತ್ರನಾದ ಕರ್ಣನ ಕಣ್ಣೆದುರಿನಲ್ಲಿಯೇ ಅವನ ಮೂವರು ತಮ್ಮಂದಿರನ್ನೂ ಏಕಾಕಿಯಾದ ಕಿರೀಟಿಯು ಸಂಹರಿಸಿದನು.

ಅನಂತರ ಭೀಮನು ಗರುಡನಂತೆಯೇ ತನ್ನ ರಥದಿಂದ ಕೆಳಕ್ಕೆ ಹಾರಿ ಕರ್ಣಪಕ್ಷೀಯರಾದ ಹದಿನೈದು ಮಂದಿ ಯೋಧರನ್ನು ಕತ್ತಿಯಿಂದ ಸಂಹರಿಸಿದನು. ಬಳಿಕ ಭೀಮನು ಪುನಃ ತನ್ನ ರಥವನ್ನು ಹತ್ತಿ ಕುಳಿತು

ಬೇರೊಂದು ಹೊಸ ಧನುಸ್ಸನ್ನು ತೆಗೆದುಕೊಂಡು ಹೆದೆಯೇರಿಸಿ ಹತ್ತು ಬಾಣಗಳಿಂದ ಕರ್ಣನನ್ನೂ, ನಾಲ್ಕು ಬಾಣಗಳಿಂದ ಅವನ ರಥದ ನಾಲ್ಕು ಕುದುರೆಗಳನ್ನೂ, ಒಂದು ಬಾಣದಿಂದ ಅವನ ಸಾರಥಿಯನ್ನೂ ಪ್ರಹರಿಸಿದನು. ಧೃಷ್ಟದ್ಯುಮ್ನನೂ ಸಹ ಶ್ರೇಷ್ಠವಾದ ಕತ್ತಿಯನ್ನೂ, ಪ್ರಕಾಶ ಮಾನವಾದ ಗುರಾಣಿಯನ್ನೂ ಹಿಡಿದು ರಥದಿಂದಿಳಿದು ಚಂದ್ರವರ್ಮನನ್ನೂ ನಿಷಧದೇಶೀಯನಾದ ಬೃಹತ್ಕ್ಷತ್ರನನ್ನೂ ಸಂಹರಿಸಿದನು. ಅನಂತರ ಅವನೂ ಸಹ ಪುನಃ ರಥವನ್ನು ಹತ್ತಿ ಕುಳಿತು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಹೆದೆಯೇರಿಸಿ ಗರ್ಜನೆಮಾಡುತ್ತಾ ಎಪ್ಪತ್ತುಮೂರು ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು.

ಚಂದ್ರನ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ ಸಾತ್ಯಕಿಯೂ ಸಹ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಸೂತಪುತ್ರನನ್ನು ಅರುವತ್ತುನಾಲ್ಕು ಬಾಣಗಳಿಂದ ಪ್ರಹರಿಸಿ ಸಿಂಹದಂತೆಯೇ ಗರ್ಜನೆ ಮಾಡಿದನು. ಅನಂತರ ಸಾತ್ಯಕಿಯು ಎರಡು ಭಲ್ಲಗಳಿಂದ ಚೆನ್ನಾಗಿ ಗುರಿಯಿಟ್ಟು ಹೊಡೆದು ಕರ್ಣನ ಧನುಸ್ಸನ್ನು ಕತ್ತರಿಸಿ ಪುನಃ ಕರ್ಣನನ್ನು ಮೂರು ಬಾಣಗಳಿಂದ ಅವನ ತೋಳುಗಳಲ್ಲಿಯೂ ವಕ್ಷಃಸ್ಥಳದಲ್ಲಿಯೂ ಪ್ರಹರಿಸಿ ಗಾಯಗೊಳಿಸಿದನು. ಸಾತ್ಯಕಿಯೆಂಬ ಸಮುದ್ರದಲ್ಲಿ ಮುಳುಗಿ ಹೋಗುತ್ತಿದ್ದ ರಾಧೇಯನನ್ನು ದುರ್ಯೋಧನ, ದ್ರೋಣರು ಮತ್ತು ಜಯದ್ರಥರಾಜ ಈ ಮೂವರೂ ಒಟ್ಟಾಗಿ ಸೇರಿ ಉದ್ಧರಿಸಿದರು. (ಮೇಲಕ್ಕೆತ್ತಿದರು; ಪ್ರಾಣಾಪಾಯದಿಂದ ಪಾರುಮಾಡಿದರು.) ಅದೇ ಸಮಯದಲ್ಲಿ ನಿನ್ನ ಕಡೆಯ ಪ್ರಹಾರಕುಶಲರಾದ ನೂರಾರು ಮಂದಿ ಗಜಾಶ್ವ-ಪದಾತಿಸೈನಿಕರು ಸಾತ್ಯಕಿಯ ಬಾಣಗಳಿಂದ ಪೀಡಿತರಾಗಿ ಅವನ ಎದುರಿನಲ್ಲಿ ನಿಲ್ಲಲಾರದೇ ಕರ್ಣನನ್ನೇ ಅನುಸರಿಸಿ ಹೊರಟುಹೋದರು. ಧೃಷ್ಟದ್ಯುಮ್ನ, ಭೀಮ, ಸುಭದ್ರೆಯ ಮಗನಾದ ಅಭಿಮನ್ಯು, ಅರ್ಜುನ, ನಕುಲ ಮತ್ತು ಸಹದೇವ–ಇವರುಗಳು ಸಾತ್ಯಕಿಯನ್ನು ರಕ್ಷಿಸುತ್ತಿದ್ದರು. ಈ ರೀತಿಯಲ್ಲಿ ಎಲ್ಲ ಧನುಷ್ಮಂತರ ವಿನಾಶಾರ್ಥವಾಗಿ ನಿನ್ನ ಕಡೆಯವರಿಗೂ ಮತ್ತು ಶತ್ರುಗಳಾದ ಪಾಂಡವರ ಕಡೆಯವರಿಗೂ ಪ್ರಾಣಾಪಹಾರವನ್ನೇ ಲೆಕ್ಕಿಸದಂತಹ ಮಹಾಭಯಂಕರವಾದ ಯುದ್ಧವು ನಡೆಯಿತು. ಪದಾತಿ-ರಥ-ಗಜಾಶ್ವಸೈನಿಕರೊಡನೆ ಅನುಕ್ರಮವಾಗಿ ಗಜಾಶ್ವ-ರಥ-ಪದಾತಿ

ಸೈನಿಕರು ಯುದ್ಧಮಾಡತೊಡಗಿದರು. (ಪದಾತಿಗಳು ಗಜಸೈನಿಕ ರೊಡನೆಯೂ, ರಥಿಕರು ಅಶ್ವಸೈನಿಕರೊಡನೆಯೂ, ಗಜಸೈನಿಕರು ರಥಿಕ ರೊಡನೆಯೂ, ಅಶ್ವಸೈನಿಕರು ಪದಾತಿಗಳೊಡನೆಯೂ ಯುದ್ಧಮಾಡು ತ್ತಿದ್ದರು.) ರಥಿಗಳು ಗಜಾಶ್ವ-ಪದಾತಿಗಳೊಡನೆಯೂ ರಥ-ಪದಾತಿಗಳು ರಥ-ಗಜಸೈನ್ಯಗಳೊಡನೆಯೂ ಕಾದಾಡುತ್ತಿದ್ದರು. ಮತ್ತೆ ಕೆಲವು ಕಡೆಗಳಲ್ಲಿ ಅಶ್ವಸೈನಿಕರು ಅಶ್ವಸೈನಿಕರೊಡನೆಯೂ, ಗಜಸೈನಿಕರು-ಗಜಸೈನಿಕ ರೊಡನೆಯೂ, ರಥಿಗಳು ರಥಿಗಳೊಡನೆಯೂ, ಪದಾತಿಗಳು ಪದಾತಿ ಗಳೊಡನೆಯೂ ಒಟ್ಟಾಗಿಸೇರಿ ಯುದ್ಧಮಾಡುತ್ತಿದ್ದುದು ಕಂಡುಬರುತ್ತಿದ್ದಿತು. ಈ ಪ್ರಕಾರವಾಗಿ ಭಯವೆಂಬುದನ್ನೇ ಕಾಣದ ನಿನ್ನ ಕಡೆಯ ಸೈನಿಕರಿಗೂ ಮತ್ತು ಮಹಾಶಕ್ತಿಶಾಲಿಗಳಾದ ಶತ್ರುಪಕ್ಷದ ಸೈನಿಕರಿಗೂ ಮಹಾಭಯಂಕರವಾದ, ಮಾಂಸಾಶಿಗಳಾದ ಪಶು-ಪಕ್ಷಿಗಳಿಗೆ ಆನಂದದಾಯಕವಾದ ಮತ್ತು ಯಮನ ರಾಷ್ಟ್ರದ ಪ್ರಜಾಸಂಖ್ಯೆಯನ್ನು ಹೆಚ್ಚಿಸುವ ಯುದ್ಧವು ನಡೆಯುತ್ತಿದ್ದಿತು. ಆ ಸಮಯದಲ್ಲಿ ಪದಾತಿ-ರಥಾಶ್ವ-ಗಜಸೈನಿಕರು ಅನೇಕ ಗಜ-ರಥ-ಪದಾತ್ಯಶ್ವಸೈನಿಕರನ್ನು ಧ್ವಂಸಗೊಳಿಸಿದರು. ಆನೆಗಳಿಂದ ಆನೆಗಳೂ ಉದ್ಯತಾ ಯುಧರಾದ ರಥಿಕರಿಂದ ರಥಿಕರೂ ಅಶ್ವಸೈನಿಕರಿಂದ ಅಶ್ವಸೈನಿಕರೂ ಕಾಲಾಳುಗಳಿಂದ-ಕಾಲಾಳುಗಳೂ ಅಪಾರಸಂಖ್ಯೆಯಲ್ಲಿ ಹತರಾದರು. ರಥಿಕರು–ಗಜಸೈನಿಕರನ್ನೂ, ಮದಿಸಿದ ಗಜಗಳು–ಅಶ್ವಸೈನಿಕರನ್ನೂ, ಅಶ್ವಸೈನಿಕರು ಪದಾತಿಗಳನ್ನೂ, ಶ್ರೇಷ್ಠರಥಿಕರು– ಅಶ್ವಸೈನಿಕರನ್ನೂ ಅನೇಕ ಸಂಖ್ಯೆಯಲ್ಲಿ ಸಂಹಾರಮಾಡಿದರು. ಭೂಮಿಯ ಮೇಲೆ ಗತಾಸುಗಳಾಗಿ ಬಿದ್ದಿದ್ದ ಸೈನಿಕರ ನಾಲಿಗೆಗಳು, ಹಲ್ಲುಗಳು ಮತ್ತು ಕಣ್ಣುಗಳು ಹೊರಕ್ಕೆ ಚಾಚಿಕೊಂಡಿದ್ದುವು. ಅವರು ಧರಿಸಿದ್ದ ಕವಚಗಳು ಮತ್ತು ಆಭರಣಗಳು ನುಚ್ಚುನೂರಾಗಿ ಅವರ ಸುತ್ತಲೂ ಬಿದ್ದಿದ್ದುವು. ಇಂತಹ ಅವಸ್ಥೆಯಲ್ಲಿ ಕುರು-ಪಾಂಡವಯೋಧರು ವಿನಾಶಹೊಂದುತ್ತಿದ್ದರು. ನಾನಾವಿಧವಾದ ಯುದ್ಧದ ಸಾಧನ-ಸಾಮಗ್ರಿಗಳನ್ನು ಹೊಂದಿದ್ದ, ಶ್ರೇಷ್ಠವಾದ ಆಯುಧಗಳನ್ನು ಧರಿಸಿದ್ದ, ಶತ್ರುಗಳಿಂದ ಹತರಾಗಿ ನೆಲದ ಮೇಲೆ ಬಿದ್ದಿದ್ದ ಸೈನಿಕರು ಬಹಳ ಭಯಂಕರವಾಗಿ ಕಾಣುತ್ತಿದ್ದರು. ಮತ್ತೆ ಕೆಲವರು ದೊಡ್ಡ-ದೊಡ್ಡ ರಥ ಗಳ ಚಕ್ರಗಳಿಗೆ ಸಿಕ್ಕಿ ಕ್ಷತ-ವಿಕ್ಷತರಾಗಿ ಬಹಳವಾಗಿ ಸಂಕಟಪಡುತ್ತಿದ್ದರು.

ಮಹಾರಾಜ! ದಾರುಣವಾದ ಬಹುಘೋರವಾದ ಜನನಾಶವು ಮಾಂಸಾಹಾರಿಗಳಾದ ಮೃಗ-ಪಕ್ಷಿ-ರಾಕ್ಷಸರಿಗೆ ಆನಂದವನ್ನುಂಟುಮಾಡುವುದಾಗಿದ್ದಿತು. ಮಹಾಬಲರಾದ ಕುರು-ಪಾಂಡವಯೋಧರು ಕುಪಿತರಾಗಿ ಒಬ್ಬರನ್ನೊಬ್ಬರು ಸಂಹಾರಮಾಡುತ್ತಾ ತೇಜೋವಿಶಿಷ್ಟರಾಗಿ ಆ ರಣಾಂಗಣದಲ್ಲಿ ಸಂಚರಿಸುತ್ತಿದ್ದರು. ಎರಡೂ ಕಡೆಗಳ ಸೈನ್ಯಗಳೂ ಬಹಳವಾಗಿ ಗಾಯಗೊಂಡಿದ್ದುವು. ಅವರ ಶರೀರಗಳೆಲ್ಲವೂ ರಕ್ತದಿಂದ ತೋಯ್ದು ಹೋಗಿದ್ದುವು. ಒಂದು ಪಕ್ಷದ ಸೈನಿಕರು ತಮ್ಮ ಎದುರು ಪಕ್ಷದ ಸೈನಿಕರನ್ನು ದುರುಗುಟ್ಟಿನೋಡುತ್ತಿದ್ದರು. ಆ ಸಮಯದಲ್ಲಿ ಸೂರ್ಯದೇವನೂ ಅಸ್ತಂಗತನಾಗುತ್ತಿದ್ದನು. ಆಗ ಎರಡೂ ಪಕ್ಷಗಳ ಸೈನಿಕರೂ ಮೆಲ್ಲ-ಮೆಲ್ಲನೆ ತಮ್ಮ ತಮ್ಮ ಶಿಬಿರಗಳನ್ನು ಸೇರಿಕೊಂಡರು.

ೞ೨ನೆಯ ಅಧ್ಯಾಯವು ಮುಗಿಯಿತು.

## ಹನ್ನೆರಡನೆಯ ದಿವಸದ ಯುದ್ಧದ ವಿಶ್ಲೇಷಣೆ

ಹನ್ನೆರಡನೆಯ ದಿವಸದ ಯುದ್ಧವು ಸಂಶಪ್ತಕರ ಪ್ರತಿಜ್ಞೆಯಿಂದ ಪ್ರಾರಂಭವಾಗುತ್ತದೆ. ಸಂಶಪ್ತಕರೆಂಬುವರು ಅರ್ಜುನನೊಡನೆ ಯುದ್ಧ ಮಾಡುವ ಸಲುವಾಗಿಯೇ ಮನುಷ್ಯರೂಪದಲ್ಲಿ ಹುಟ್ಟಿರುವ ರಾಕ್ಷಸರು. (ವನಪರ್ವ-ಅಧ್ಯಾಯ-೨೫೨-ಶ್ಲೋಕ-೨೩) ತ್ರೈಗರ್ತರೆಂಬುವರೇ ಸಂಶಪ್ತಕರು. ತ್ರಿಗರ್ತಾಧಿಪತಿಯಾದ ಸುಶರ್ಮನೇ ಇವರ ರಾಜ. ಇವರಿಗೆ ಸಂಶಪ್ತಕರೆಂಬ ಹೆಸರು ಮೊದಲಿನಿಂದಲೂ ಇದ್ದರೂ, ಪ್ರತಿಜ್ಞೆ ಮಾಡಿದ ನಂತರ ಅನ್ವರ್ಥವಾಗಿಯೂ ಪ್ರಾಪ್ತವಾಗುವ ಸಂಶಪ್ತಕರೆಂಬ ಹೆಸರನ್ನು ಮುಂದೆ ಹೆಚ್ಚಾಗಿ ಬಳಸಲಾಗಿದೆ. ಸಂ =ಚೆನ್ನಾಗಿ (ವಿಧಿಪೂರ್ವಕವಾಗಿ) ಶಪ್ತಃ= ಪ್ರತಿಜ್ಞೆಮಾಡಿದವನು ಎಂದೇ ಈ ಪದದ ಅರ್ಥ. ತ್ರೈಗರ್ತರೆಲ್ಲರೂ ಯಜ್ಞೇಶ್ವರನನ್ನೇ ಸಾಕ್ಷಿಯನ್ನಾಗಿಟ್ಟುಕೊಂಡು ಪ್ರತಿಜ್ಞೆಯನ್ನು ಮಾಡುತ್ತಾರೆ. ಪ್ರತಿಜ್ಞೆಯ ತಿರುಳು: ಮಾಡು ಅಥವಾ ಮಡಿ; ಶತ್ರುಗಳನ್ನು ಕೊಲ್ಲು ಅಥವಾ ಅವರಿಂದ ಕೊಲ್ಲಲ್ಪಟ್ಟು ವೀರಸ್ವರ್ಗಕ್ಕೆ ಹೋಗು; ಯಾವುದೇ ಕಾರಣದಿಂದಲೂ ಯುದ್ಧದಿಂದ ಹಿಮ್ಮೆಟ್ಟುವಂತಿಲ್ಲ; ಹಿಮ್ಮೆಟ್ಟಿದರೆ ಪಂಚಮಹಾಪಾತಕಗಳೂ ಪ್ರಾಪ್ತವಾಗಲಿ–ಎಂಬುದಾಗಿದೆ.

ಇಂತಹ ಘೋರಪ್ರತಿಜ್ಞೆಯನ್ನು ಮಾಡಲು ಮುಖ್ಯಕಾರಣವೇನೆಂದರೆ:

ಧರ್ಮರಾಜನಿಗೆ ಅರ್ಜುನನ ರಕ್ಷಣೆಯನ್ನು ತಪ್ಪಿಸಿ ಅವನನ್ನು ಜೀವಸಹಿತ ವಾಗಿ ಬಂಧಿಸುವುದು. ಆದರೆ ದ್ರೋಣರ ಯೋಜನೆಯಂತೆ ಮುಂದಿನ ಎರಡು ದಿವಸಗಳಲ್ಲಿ ಧರ್ಮರಾಜನ ಬಂಧನವಂತೂ ಸಾಧ್ಯವಾಗುವುದಿಲ್ಲ. ಆದರೆ ಮಹಾವೀರನಾದ ಅಭಿಮನ್ಯುವಿನ ಸಂಹಾರವಾಗುತ್ತದೆ. ಸಂಶಪ್ತಕ ರಿಂದ ಕೌರವರ ಕಡೆಗೆ ಲಭಿಸಿದ ಲಾಭ ಪ್ರಸಕ್ತಸಂದರ್ಭದಲ್ಲಿ ಇದೊಂದೇ ಎಂದು ಹೇಳಬಹುದು.

ಸಂಶಪ್ತಕರು ಯುದ್ಧಮಾಡಲು ಬೇರೊಂದು ರಣಾಂಗಣವನ್ನೇ ಏರ್ಪಡಿಸಿಕೊಂಡಿರುತ್ತಾರೆ. ಅರ್ಜುನನೊಬ್ಬನನ್ನೇ ಯುದ್ಧಕ್ಕೆ ಕರೆಯುತ್ತಾರೆ. ಯಾವ ಸೈನ್ಯದ ಸಹಾಯವೂ ಇಲ್ಲದೇ ಶ್ರೀಕೃಷ್ಣಸಾರಥಿಯಾದ ಅರ್ಜುನ ನೊಬ್ಬನೇ ಅಸಂಖ್ಯಾತರಾದ ಸಂಶಪ್ತಕರೊಡನೆ ಯುದ್ಧಮಾಡುತ್ತಾನೆ. ೧೮ ಮತ್ತು ೧೯ನೆಯ ಅಧ್ಯಾಯಗಳಲ್ಲಿ ಸಂಪೂರ್ಣವಾಗಿ ಸಂಶಪ್ತಕರಿಗೂ ಅರ್ಜುನನಿಗೂ ನಡೆದ ಯುದ್ಧದ ವರ್ಣನೆಯಿದೆ.

ಹನ್ನೆರಡನೆಯ ದಿವಸ ದ್ರೋಣರು ಗರುಡವ್ಯೂಹವನ್ನು ರಚಿಸುತ್ತಾರೆ. ಅದಕ್ಕೆ ಪ್ರತಿಯಾಗಿ ಯುಧಿಷ್ಠಿರನು ಮಂಡಲಾರ್ಧವ್ಯೂಹವನ್ನು ರಚಿಸುತ್ತಾನೆ. ಯುಧಿಷ್ಠಿರನನ್ನು ಜೀವಸಹಿತ ಬಂಧಿಸುವುದಾಗಿ ದ್ರೋಣರು ದುರ್ಯೋಧನ ನಿಗೆ ಪ್ರತಿಜ್ಞೆಯನ್ನು ಮಾಡಿಕೊಟ್ಟಿರುತ್ತಾರೆ. ಅವರ ನಿರ್ದೇಶನದಂತೆಯೇ ದುರ್ಯೋಧನನು ಸಂಶಪ್ತಕರನ್ನು ಅರ್ಜುನನೊಡನೆ ಯುದ್ಧಮಾಡಲು ಸನ್ನಾಹ ಮಾಡಿದ್ದು. ಅದೂ ಫಲಿಸಿತು. ತತ್ಕಾಲದಲ್ಲಿ ಅರ್ಜುನನು ಯುಧಿಷ್ಠಿರನ ರಕ್ಷಣೆಗೆ ಇರಲಿಲ್ಲ. ಆದುದರಿಂದ ಯುಧಿಷ್ಠಿರನ ಬಂಧನವಾಗಿಹೋಯಿತೆಂದೇ ದುರ್ಯೋಧನನ ಭಾವನೆ. ಆ ವಿಷಯವು ಅರ್ಜುನನಿಗೂ ತಿಳಿದಿತ್ತು. ಅಣ್ಣನಿಗೆ ಯಥೋಚಿತವಾದ ಸಲಹೆಗಳನ್ನಿತ್ತು ಅವನು ಸಂಶಪ್ತಕರೊಡನೆ ಯುದ್ಧಮಾಡಲು ಹೋಗಿದ್ದನು. ಪಾಂಡವರ ಕಡೆಯ ದಂಡನಾಯಕನಾದ ಧೃಷ್ಟದ್ಯುಮ್ನನೂ ಯುಧಿಷ್ಠಿರನಿಗೆ ಧೈರ್ಯ ತುಂಬುತ್ತಾನೆ. ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ. ದ್ರೋಣರು ಧೃಷ್ಟದ್ಯುಮ್ನನೊಡನೆ ಯುದ್ಧಮಾಡಲು ಇಷ್ಟಪಡದೇ ಇದ್ದ ಕಾರಣ ದುರ್ಮುಖನು ಪಾಂಚಾಲರೊಡನೆ ಯುದ್ಧಮಾಡುತ್ತಾನೆ. ದ್ರೋಣರು ಪಾಂಡವಸೈನ್ಯವನ್ನು ಅವ್ಯಾಹತವಾಗಿ ಧ್ವಂಸಮಾಡುತ್ತಾರೆ. ಎರಡೂ ಪಕ್ಷಗಳ

ಗಜಸೈನ್ಯಗಳ ಪರಸ್ಪರಯುದ್ಧವು ನಡೆಯುತ್ತದೆ. ಈ ಅಧ್ಯಾಯದ ಕಡೆಯಲ್ಲಿ ರಣಾಂಗಣದ ಭಯಂಕರವಾದ ವರ್ಣನೆಯಿದೆ. ೨೧ನೆಯ ಅಧ್ಯಾಯ ಪೂರ್ತಿಯಾಗಿ ದ್ರೋಣರ ಪರಾಕ್ರಮವರ್ಣನೆಯಿದೆ. ಅನೇಕ ಪಾಂಡವ ಯೋಧರನ್ನು ಅವರು ಸಂಹಾರಮಾಡುತ್ತಾರೆ. ದ್ರೋಣರು ಯುಧಿಷ್ಠಿರನ ಬಳಿಗೆ ಹೋದಾಗ ಅವನು ದೂರಸರಿಯುತ್ತಾನೆ. ಪಾಂಡವರ ಸೈನ್ಯದ ಪರಾಜಯದೊಂದಿಗೆ ಅಧ್ಯಾಯವು ಮುಗಿಯುತ್ತದೆ.

ಹನ್ನೆರಡನೆಯ ದಿವಸದ ಯುದ್ಧದ ಇವಿಷ್ಟು ಪ್ರಕರಣಗಳೂ ಹದಿನೈದನೆಯ ಸಂಪುಟದಲ್ಲೇ ಬಂದಿವೆ. ಹದಿನಾರನೆಯ ಸಂಪುಟದಲ್ಲಿ ಹನ್ನೆರಡನೆಯ ದಿವಸದ ಯುದ್ಧದ ಮುಂದುವರಿದ ಕಥಾಭಾಗವಿದೆ.

೨೩ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನ ಅಪೇಕ್ಷೆಯಂತೆ ಸಂಜಯನು ಮಹಾರಥರ ರಥ, ಕುದುರೆ, ಧ್ವಜ ಮತ್ತು ಧನುಸ್ಸುಗಳ ವರ್ಣನೆಯನ್ನು ಮಾಡುತ್ತಾನೆ. ಕೆಲವು ಕುದುರೆಗಳ ಲಕ್ಷಣಗಳನ್ನು ಲಕ್ಷಣಶಾಸ್ತ್ರಕ್ಕೆ ಅನ್ವಯಿಸಿ ಟಿಪ್ಪಣಿಯಲ್ಲಿ ಕೊಡಲಾಗಿದೆ. ಇಲ್ಲಿ ಪಾಂಡ್ಯರಾಜನ ಸಂಕ್ಷಿಪ್ತವಾದ ಇತಿಹಾಸವಿದೆ. ಸಂಜಯನು ಯುಧಿಷ್ಠಿರನ ಧ್ವಜವನ್ನು ವರ್ಣಿಸುವಾಗ ಸುವರ್ಣಮಯವಾದ ಆ ಧ್ವಜದಲ್ಲಿ ನಂದ-ಉಪನಂದ ಎಂಬ ಎರಡು ಮೃದಂಗಗಳಿದ್ದುವೆಂದೂ, ಅವು ಯಂತ್ರಗಳ ಮೂಲಕವಾಗಿ ಬಾರಿಸಲ್ಪಡುತ್ತಿದ್ದುವೆಂದೂ, ಆ ಮೃದಂಗಗಳ ಧ್ವನಿಯು ಸುಖಕರವಾಗಿಯೂ ಹರ್ಷವರ್ಧಕವಾಗಿಯೂ ಇತ್ತೆಂದೂ ಹೇಳಿದ್ದಾನೆ. (ಶ್ಲೋಕ ೮೫) ಅದು ಹೇಗೆ ಸಾಧ್ಯವಾಗಿತ್ತೆಂಬುದನ್ನು ಆಧುನಿಕ ವಿಜ್ಞಾನಿಗಳು ಯೋಚಿಸಬೇಕಾಗಿದೆ. ೨೪ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು ತಾನು ಹಿಂದೆ ಎಸಗಿದ ಅಪರಾಧವನ್ನು ನೆನೆದು ಪಶ್ಚಾತ್ತಾಪಪಡುತ್ತಾನೆ. ವಿದುರನ ಮಾತನ್ನು ಕೇಳದೇ ಇದ್ದುದಕ್ಕಾಗಿ ಸಂಕಟಪಡುತ್ತಾನೆ. ದೈವೇಚ್ಛೆಗೆ ವಿರುದ್ಧವಾಗಿ ಮನುಷ್ಯನ ಪ್ರಯತ್ನವು ಫಲಿಸಲಾರದೆಂಬ ಸಿದ್ಧಾಂತಕ್ಕೆ ಬರುತ್ತಾನೆ. ಧರ್ಮದಿಂದ ಹೀನನಾದವನಿಗೆ ಇಹ-ಪರಗಳೆರಡೂ ಇಲ್ಲವೆನ್ನುತ್ತಾನೆ. ಭೀಷ್ಮ-ದ್ರೋಣರಿಬ್ಬರೂ ಹತರಾದರೆಂದು ಕೇಳಿದನಂತರ ವಿಜಯದ ಆಸೆಯೇನೂ ಅವನಿಗೆ ಉಳಿದಿರುವುದಿಲ್ಲ. ಯುದ್ಧವಿವರಣೆಯನ್ನು ಮಾತ್ರ ಕೇಳುವ ಆಸೆಯಿರುತ್ತದೆ.

೨೫ನೆಯ ಅಧ್ಯಾಯದಲ್ಲಿ ಪಾಂಡವ-ಕೌರವರ ದ್ವಂದ್ವಯುದ್ಧದ

ವರ್ಣನೆಯಿದೆ. ದ್ರೋಣರನ್ನು ಎದುರಿಸಲು ಹೋಗುತ್ತಿದ್ದ ಒಬ್ಬೊಬ್ಬ ಪಾಂಡವಯೋಧನನ್ನೂ, ಒಬ್ಬೊಬ್ಬ ಕೌರವಯೋಧನು ತಡೆದು ಅವನೊಡನೆ ಯುದ್ಧಮಾಡುತ್ತಿದ್ದುದನ್ನು ಇಲ್ಲಿ ವರ್ಣಿಸಲಾಗಿದೆ. ೨೬ನೆಯ ಅಧ್ಯಾಯದಲ್ಲಿ ಭೀಮಸೇನನಿಗೂ-ಭಗದತ್ತನ ಆನೆಗೂ ನಡೆದ ಯುದ್ಧವನ್ನು ವರ್ಣಿಸಲಾಗಿದೆ. **ಅಂಜಲಿಕಾವೇಧ**–ಎಂಬ ಆನೆಗೆ ಸಂಬಂಧಿಸಿದ ತಂತ್ರವನ್ನು ಇಲ್ಲಿ ಸೂಚಿಸಲಾಗಿದೆ. ಅಂಜಲಿಕಾವೇಧದಿಂದ ಆನೆಗೆ ಆನಂದ ವುಂಟಾಗುವುದೆಂದೂ, ಭೀಮನು ಆ ತಂತ್ರವನ್ನೇ ಅನುಸರಿಸಿ ಸುಪ್ರತೀಕದ ಹೊಟ್ಟೆಯಡಿಯಲ್ಲಿ ಸೇರಿಕೊಂಡು ಅದರ ಕೋಪವನ್ನು ತಾತ್ಕಾಲಿಕವಾಗಿ ಅಡಗಿಸಿದನೆಂದೂ ಇಲ್ಲಿ ಹೇಳಿದೆ. (ಈಗಲೂ ಆನೆಯನ್ನು ಪಳಗಿಸುವವರಿಗೆ ಈ ವಿಷಯವು ಚೆನ್ನಾಗಿ ತಿಳಿದಿರಬಹುದು. ಯಾರಾದರೂ ಈ ವಿಷಯವಾಗಿ ಅನುಭವಪೂರ್ಣವಾದ ವಿವರಣೆಯನ್ನು ಕೊಟ್ಟಲ್ಲಿ ಪ್ರಕಟಿಸಲಾಗುವುದು.) ಸುಪ್ರತೀಕವೆಂಬ ಭಗದತ್ತನ ಆನೆಯು ಮಾಡಿದ ದಾಂಧಲೆಯ ವರ್ಣನೆಯು ಪರಮಾದ್ಭುತವಾಗಿದೆ. ಈ ಅಧ್ಯಾಯದ ಪೂರ್ತಿಯಾಗಿ ಆನೆ ಮತ್ತು ಭಗದತ್ತರ ಪರಾಕ್ರಮದ ವರ್ಣನೆಯೇ ಇದೆ. ಪಾಂಡವರ ಸೈನ್ಯವು ಭಗದತ್ತನಿಂದ ಪರಾಜಿತವಾಗುತ್ತದೆ. ೨೭ನೆಯ ಅಧ್ಯಾಯದಲ್ಲಿ ಅರ್ಜುನ ಮತ್ತು ಸಂಶಪ್ತಕರ ಯುದ್ಧದ ವರ್ಣನೆಯಿದೆ. ಭಗದತ್ತನ ಆನೆಯ ಗರ್ಜನೆಯನ್ನು ಕೇಳಿ ತನ್ನ ಕಡೆಯವರಿಗೆ ಪರಾಜಯವಾಗುತ್ತಿದೆಯೆಂದು ತಿಳಿದ ಅರ್ಜುನನು ಅತ್ತ ಕಡೆಗೆ ಹೋಗಲು ಯೋಚಿಸುತ್ತಾನೆ. ಆದರೂ ಸಂಶಪ್ತಕರನ್ನು ಸಂಹಾರಮಾಡಿಯೇ ಹೋಗಬೇಕೆಂದು ನಿಶ್ಚಯಿಸಿ ಅಲ್ಲಿಯೇ ಯುದ್ಧವನ್ನು ಮುಂದುವರಿಸುತ್ತಾನೆ. ಸಂಶಪ್ತಕರಲ್ಲಿ ಬಹುಭಾಗ ಸೈನಿಕರನ್ನು ಸಂಹರಿಸಿದನಂತರ ಭಗದತ್ತನ ಬಳಿಗೆ ಹೋಗುವಂತೆ ಶ್ರೀಕೃಷ್ಣನಿಗೆ ಅರ್ಜುನನು ಹೇಳುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ಮುಂದಿನ ಅಧ್ಯಾಯದಲ್ಲಿ ಅರ್ಜುನನು ಭಗದತ್ತನಿದ್ದ ರಣರಂಗಕ್ಕೆ ಹೋಗುತ್ತಿರುತ್ತಾನೆ. ಹಿಂದಿನಿಂದ ಸುಶರ್ಮನು ಯುದ್ಧಕ್ಕೆ ಆಹ್ವಾನಿಸುತ್ತಾನೆ. ಮನಸ್ಸಿಲ್ಲದಿದ್ದರೂ ಪುನಃ ಅರ್ಜುನನು ಸಂಶಪ್ತಕರೊಡನೆ ಯುದ್ಧಮಾಡಲು ಹಿಂದಿರುಗುತ್ತಾನೆ. ಸುಶರ್ಮನನ್ನು ಮೂರ್ಛೆಗೊಳಿಸಿ ಭಗದತ್ತನಿದ್ದ ರಣರಂಗಕ್ಕೆ ಅರ್ಜುನನು ಹೊರಟುಹೋಗುತ್ತಾನೆ. ಭಗದತ್ತನಿಗೂ ಅರ್ಜುನನಿಗೂ, ಅನಂತರ ಭಗದತ್ತನ ಆನೆಗೂ ಧನಂಜಯನಿಗೂ ಘೋರಯುದ್ಧವಾಗುತ್ತದೆ. ೨೯ನೆಯ

ಅಧ್ಯಾಯದಲ್ಲಿ ಅವರಿಬ್ಬರ ಯುದ್ಧದ ವರ್ಣನೆಯೇ ಮುಂದುವರಿಯುತ್ತದೆ. ಯುದ್ಧದ ಮಧ್ಯದಲ್ಲಿ ಭಗದತ್ತನು ಅಪ್ರತಿಹತವಾದ ವೈಷ್ಣವಾಸ್ತ್ರವನ್ನು ಅರ್ಜುನನ ಮೇಲೆ ಪ್ರಯೋಗಿಸುತ್ತಾನೆ. ಒಡನೆಯೇ ಶ್ರೀಕೃಷ್ಣನು ಅರ್ಜುನನಿಗೆ ಆವರಣವಾಗಿ ನಿಂತು ವೈಷ್ಣವಾಸ್ತ್ರವನ್ನು ಧರಿಸುತ್ತಾನೆ. ಅದು ಕಮಲದ ಮಾಲೆಯಾಗಿ ಪರಿವರ್ತನೆ ಹೊಂದಿ ಅವನ ಕತ್ತನ್ನು ಅಲಂಕರಿಸುತ್ತದೆ. ಅಂತಹ ಅಘಟಿತಘಟನೆಯನ್ನು ಕಂಡರೂ ಅರ್ಜುನನು ಶ್ರೀಕೃಷ್ಣನು ಮಾಡಿದ ಕಾರ್ಯಕ್ಕಾಗಿ ತನ್ನ ಅಸಂತೋಷವನ್ನು ಸೂಚಿಸುತ್ತಾನೆ. ಆಗ ಶ್ರೀಕೃಷ್ಣನು ವೈಷ್ಣವಾಸ್ತ್ರದ ಪೂರ್ವೇತಿಹಾಸವನ್ನು ತಿಳಿಯಪಡಿಸಿ ಅರ್ಜುನನನ್ನು ಸಮಾಧಾನಪಡಿಸುತ್ತಾನೆ. ಇದೊಂದು ರಮ್ಯವಾದ ಸನ್ನಿವೇಶ. ಇಲ್ಲಿ ಭಗದತ್ತನ ವಯಸ್ಸು ಎಷ್ಟಿರಬಹುದೆಂಬುದನ್ನು ಊಹಿಸಲು ಒಂದು ಚಿತ್ರವನ್ನು ನಮ್ಮ ಮುಂದೆ ಇಟ್ಟಿರುತ್ತಾರೆ. ಅವನ ಹುಬ್ಬಿನಲ್ಲಿ ಸುಕ್ಕಿದ್ದ ಚರ್ಮವು ಜೋತುಬಿದ್ದು ಕಣ್ಣುಗಳನ್ನು ಮುಚ್ಚಿಬಿಡುತ್ತಿದ್ದುವೆಂದೂ, ಅದರಿಂದ ಅವನಿಗೆ ಕಣ್ಣುಗಳೇ ಕಾಣಿಸುತ್ತಿರಲಿಲ್ಲವೆಂದೂ, ನಿವಾರಣೆಗಾಗಿ ಆ ಜೋತುಬಿದ್ದ ಹುಬ್ಬುಗಳನ್ನು ಒಂದು ಬಟ್ಟೆಯ ಮೂಲಕವಾಗಿ ಎತ್ತಿ ಕಟ್ಟಿ ಹಣೆಯಮೇಲೆ ಪಟ್ಟಿಯನ್ನು ಕಟ್ಟಿಕೊಂಡಿದ್ದನೆಂದೂ ವರ್ಣಿತವಾಗಿದೆ. ಹುಬ್ಬುಗಳು ಜೋತುಬಿದ್ದು ಕಣ್ಣುಗಳೇ ಮುಚ್ಚಬೇಕಾದರೆ ಅವನ ವಯಸ್ಸು ಎಷ್ಟಿರಬಹುದು? ಇದು ನಮ್ಮ ಊಹೆಗೆ ಎಟುಕದ ವಿಷಯವಾಗಿದೆ.

ಜೋತುಬಿದ್ದ ಆ ಹುಬ್ಬುಗಳೇ ಭಗದತ್ತನಿಗೆ ಮೃತ್ಯುವಾಗಿ ಪರಿಣ ಮಿಸಿದುವು. ಪಟ್ಟಿಯನ್ನು ಕತ್ತರಿಸಿ ಭಗದತ್ತನನ್ನು ಕುರುಡುಮಾಡಿ ಅನಂತರ ಅರ್ಜುನನು ಅವನನ್ನು ಸಂಹರಿಸುತ್ತಾನೆ. ಭಗದತ್ತನನ್ನು ಸಂಹರಿಸುವ ಮೊದಲೇ ಭಗದತ್ತನ ಆನೆಯನ್ನು ಅರ್ಜುನನು ಸಂಹರಿಸುತ್ತಾನೆ. ಪ್ರಾಣವನ್ನು ಸರ್ವದಾ ರಕ್ಷಿಸುತ್ತಿದ್ದ ವೈಷ್ಣವಾಸ್ತ್ರವನ್ನು ಕಳೆದುಕೊಂಡೊಡನೆಯೇ ಭಗದತ್ತನ ಅವಸಾನವಾಯಿತೆಂಬ ರಹಸ್ಯವನ್ನು ನಾವು ಈ ಅಧ್ಯಾಯದ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ೩೦ನೆಯ ಅಧ್ಯಾಯದಲ್ಲಿ ಶಕುನಿಯ ಅನುಜರಾದ ವೃಷಕ ಮತ್ತು ಅಚಲರನ್ನು ಅರ್ಜುನನು ಸಂಹರಿಸುತ್ತಾನೆ. ಶಕುನಿಯು ಮಾಯಾಯುದ್ಧವನ್ನು ಪ್ರದರ್ಶಿಸುತ್ತಾನೆ. ಅರ್ಜುನನು ಶಕುನಿಯ ಮಾಯೆಗಳೆಲ್ಲವನ್ನೂ ನಿರಸನಗೊಳಿಸಿ ಕೌರವರ ಸೈನ್ಯವನ್ನು ಸದೆಬಡಿಯು ತ್ತಾನೆ. ಕೌರವರ ಪರಾಜಯದೊಂದಿಗೆ ಈ ಅಧ್ಯಾಯವು ಮುಗಿಯುತ್ತದೆ.

೩೧ನೆಯ ಅಧ್ಯಾಯದಲ್ಲಿ ಯುದ್ಧದ ಭೀಕರವರ್ಣನೆಯಿದೆ. ಸುಪ್ರಸಿದ್ಧನಾದ ನೀಲರಾಜನನ್ನು ಅಶ್ವತ್ಥಾಮನು ಸಂಹರಿಸುತ್ತಾನೆ. ಆ ಸಮಯದಲ್ಲಿ ಅರ್ಜುನನು ಪುನಃ ಸಂಶಪ್ತಕರೊಡನೆ ಯುದ್ಧಮಾಡಲು ಹೋಗುತ್ತಾನೆ. ಪಾಂಡವರ ಕೈ ಮೇಲಾಗುತ್ತಿರುತ್ತದೆ. ದುರ್ಯೋಧನನ ತಂತ್ರದಂತೆ ಸಂಶಪ್ತಕರು ಅರ್ಜುನನನ್ನು ಬೇರೆಯ ಕಡೆಗೆ ಯುದ್ಧಕ್ಕೆ ಆಹ್ವಾನಿಸುತ್ತಾರೆ. ಅರ್ಜುನನೂ ಸಹ ಸಾಧ್ಯವಾದಷ್ಟು ಮಟ್ಟಿಗೆ ಸಾಧ್ಯವಾದಷ್ಟು ಬೇಗ ಸಂಶಪ್ತಕರನ್ನು ಸಂಹರಿಸಿ ಯುಧಿಷ್ಠಿರನ ರಕ್ಷಣೆಗೆ ಹಿಂದಿರುಗುತ್ತಾನೆ. ಇದು ಹೀಗೆಯೇ ನಡೆಯುತ್ತಾ ಹೋಗುತ್ತದೆ.

೩೨ನೆಯ ಅಧ್ಯಾಯದಲ್ಲಿ ಕೌರವ-ಪಾಂಡವರ ಭಯಂಕರವಾದ ಯುದ್ಧದ ವರ್ಣನೆಯಿದೆ. ಭೀಮಸೇನನೊಬ್ಬನೇ ಕೌರವಮಹಾರಥರನ್ನು ಎದುರಿಸಿ ಯುದ್ಧಮಾಡುತ್ತಾನೆ. ಅನಂತರ ಯುಯುಧಾನನೇ ಮುಂತಾದವರು ಭೀಮನನ್ನು ಬೆಂಬಲಿಸುತ್ತಾರೆ. ಘೋರವಾದ ಯುದ್ಧವು ನಡೆಯುತ್ತದೆ. ದ್ರೋಣರು ಅವ್ಯಾಹತವಾಗಿ ಪಾಂಡವರ ಸೇನೆಯನ್ನು ಕೊಲ್ಲುತ್ತಿರುತ್ತಾರೆ. ಆ ವೇಳೆಗೆ ಅರ್ಜುನನು ಬಹುಪಾಲು ಸಂಶಪ್ತಕಯೋಧರ ಸಂಹಾರವನ್ನು ಮುಗಿಸಿ ದ್ರೋಣರ ಬಳಿಗೆ ಬರುತ್ತಾನೆ. ಅರ್ಜುನನು ಬಂದೊಡನೆಯೇ ಕೌರವರೆಲ್ಲರೂ ಕರ್ಣನ ಆಶ್ರಯವನ್ನು ಪಡೆಯುತ್ತಾರೆ. ಕರ್ಣಾರ್ಜುನರ ಯುದ್ಧವಾಗುತ್ತದೆ. ಕರ್ಣನ ಸಮಕ್ಷದಲ್ಲಿಯೇ ಅರ್ಜುನನು ಅವನ ಮೂವರು ತಮ್ಮಂದಿರನ್ನೂ ಸಂಹಾರಮಾಡುತ್ತಾನೆ. ಸಾತ್ಯಕಿಗೂ ಕರ್ಣನಿಗೂ ಭಯಂಕರವಾದ ಯುದ್ಧವಾಗುತ್ತದೆ. ಸಾತ್ಯಕಿಯು ಕರ್ಣನ ಧನುಸ್ಸನ್ನು ಕತ್ತರಿಸಿ ಅವನನ್ನು ಬಾಣಗಳಿಂದ ಪ್ರಹರಿಸುತ್ತಾನೆ. ಆ ವೇಳೆಗೆ ದುರ್ಯೋಧನಪ್ರಮುಖರು ಕರ್ಣನ ಬೆಂಬಲಿಗರಾಗಿ ಬರುತ್ತಾರೆ. ಧೃಷ್ಟದ್ಯುಮ್ನಪ್ರಮುಖರು ಸಾತ್ಯಕಿಯನ್ನು ಬೆಂಬಲಿಸುತ್ತಾರೆ. ಅನಂತರ ಅಧ್ಯಾಯದ ಕಡೆಯವರೆಗೂ ಘೋರಯುದ್ಧದ ವರ್ಣನೆಯಿದೆ. ಇಲ್ಲಿಗೆ ಹನ್ನೆರಡನೆಯ ದಿವಸದ ಯುದ್ಧವು ಮುಗಿಯುತ್ತದೆ. ಆ ದಿವಸದ ಯುದ್ಧದಲ್ಲಿ ಕೌರವರ ಕಡೆಯೇ ಹೆಚ್ಚು ನಷ್ಟವಾಯಿತೆನ್ನಬಹುದು. ಮಹಾರಥನಾದ ಅತುಲಪರಾಕ್ರಮಿಯಾದ ಭಗದತ್ತನೂ ಅವನ ಆನೆಯೂ ಸತ್ತುಹೋದುದು ಕೌರವರಿಗೆ ಆದ ಪ್ರಬಲ ನಷ್ಟವೆಂದು ಪರಿಗಣಿಸಬಹುದು. ಪಾಂಡವರ

ಕಡೆಯಲ್ಲಿ ನೀಲರಾಜನ ವಧೆಯೂ ಗಣನೀಯವಾದುದು. ದ್ರೋಣರು ತಾವು ಮಾಡಿದ್ದ ಪ್ರತಿಜ್ಞೆಯಂತೆ ಯುಧಿಷ್ಠಿರನನ್ನು ಜೀವಬಂದಿಯಾಗಿ ಹಿಡಿಯಲು ಆಗದೇ ಇದ್ದುದು ಕೌರವರ ಕಡೆಯ ಹಿನ್ನಡೆಯೇ ಸರಿ. ಸತ್ಯಪ್ರತಿಜ್ಞರಾದ ದ್ರೋಣರಿಗೂ ಇದೊಂದು ಕಳಂಕವೇ ಎನ್ನಬಹುದು.

————

೩೩ನೆಯ ಅಧ್ಯಾಯ ಅಭಿಮನ್ಯುವಧಪರ್ವ

## ದುರ್ಯೋಧನನ ಕೊಂಕುನುಡಿ: ದ್ರೋಣರ ಪ್ರತಿಜ್ಞೆ: ಅಭಿಮನ್ಯುವಧೆಯ ಸಂಕ್ಷೇಪವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮಹಾತೇಜಸ್ವಿಯಾದ ಅರ್ಜುನನು ಮೊದಲೇ ನಮ್ಮ ಸೈನ್ಯವನ್ನು ಭಗ್ನಗೊಳಿಸಿದ್ದನು. ಯುಧಿಷ್ಠಿರನನ್ನು ಸೆರೆಹಿಡಿದು ತರುವೆನೆಂದು ದ್ರೋಣರು ಮಾಡಿದ್ದ ಪ್ರತಿಜ್ಞೆಯೂ ಸಫಲವಾಗಲಿಲ್ಲ. ಅರ್ಜುನನು ರಣರಂಗದಲ್ಲಿ ಇದ್ದಾಗಲೂ, ಸಂಶಪ್ತಕರೊಡನೆ ಯುದ್ಧಕ್ಕೆ ಹೋಗಿದ್ದಾಗಲೂ ಯುಧಿಷ್ಠಿರನು ಸುರಕ್ಷಿತನಾಗಿಯೇ ಇದ್ದನು. ನಿನ್ನ ಕಡೆಯವರೆಲ್ಲರೂ ತಾವು ತೊಟ್ಟಿದ್ದ ಕವಚಗಳನ್ನು ಕಳೆದುಕೊಂಡು ಶತ್ರುಗಳಿಂದ ಪರಾಜಿತರಾಗಿ ಧೂಳಿನಿಂದಲೂ ವ್ಯಾಪ್ತರಾಗಿ ಬಹಳ ಉದ್ವೇಗಗೊಂಡಿದ್ದರು. ಮುಂದೇನು ಮಾಡಬೇಕೆಂದು ತೋರದೆ ಹತ್ತು ದಿಕ್ಕುಗಳನ್ನೂ ಶೂನ್ಯದೃಷ್ಟಿಯಿಂದ ನೋಡುತ್ತಿದ್ದರು. ಸೂರ್ಯನು ಅಸ್ತಂಗತನಾದನಂತರ ದ್ರೋಣರ ಸಮ್ಮತಿ ಯಂತೆ ಯುದ್ಧದಿಂದ ಹಿಂದಿರುಗಿದರು. ಅರ್ಜುನನ ಲಕ್ಷ್ಯಕ್ಕೆ ಗುರಿಯಾದ ಅವರೆಲ್ಲರೂ ಅವನ ಬಾಣಕ್ಕೆ ತುತ್ತಾಗಿ ಗಾಯಗೊಂಡಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಅಂದಿನ ಯುದ್ಧದಲ್ಲಿ ಅವರೆಲ್ಲರೂ ಅಪಹಾಸ್ಯಕ್ಕೆ ಗುರಿಯಾಗಿದ್ದರು.

ಎಲ್ಲ ಪ್ರಾಣಿಗಳೂ ಅರ್ಜುನನಲ್ಲಿದ್ದ ಅಸಂಖ್ಯಾತವಾದ ಸದ್ಗುಣಗಳನ್ನೂ ಮತ್ತು ಅವನ ವಿಷಯದಲ್ಲಿ ಶ್ರೀಕೇಶವನಿಗಿದ್ದ ಸೌಹಾರ್ದವನ್ನೂ ಕೀರ್ತನೆಮಾಡುತ್ತಿದ್ದುವು. ಆ ಸಮಯದಲ್ಲಿ ನಿನ್ನ ಕಡೆಯ ಮಹಾರಥರು ಕಳಂಕಿತರಾದಂತಾದರು. ಅವರು ಏನೊಂದನ್ನೂ ಮಾತನಾಡದೇ ಆಲೋ ಚನಾಪರರಾಗಿರುವಂತೆಯೂ, ಮೂಕರಂತೆಯೂ ಇದ್ದು ಆ ರಾತ್ರಿಯನ್ನು

ಕಳೆದರು. ರಾತ್ರಿಯು ಕಳೆದು ಮರುದಿನದ ಪ್ರಾತಃಕಾಲದ ಸಮಯದಲ್ಲಿ ಶತ್ರುಗಳಿಗೆ ಅನುದಿನವೂ ಪ್ರಾಪ್ತವಾಗುತ್ತಿದ್ದ ಅಭ್ಯುದಯದಿಂದ ಮನಸ್ಸನ್ನು ಕೆಡಿಸಿಕೊಂಡಿದ್ದ, ವಾಕ್ಯಕೋವಿದನಾದ ಮತ್ತು ಕ್ರುದ್ಧನಾಗಿದ್ದ ದುರ್ಯೋಧನನು, ದ್ರೋಣರಲ್ಲಿ ತನಗಿದ್ದ ಸಲಿಗೆಯಿಂದಲೂ ಮತ್ತು ತಾನೇ ಮಹಾಪರಾಕ್ರಮಿಯೆಂಬ ದುರಭಿಮಾನದಿಂದಲೂ ಯೋಧರೆಲ್ಲರೂ ಕೇಳಿಸಿಕೊಳ್ಳುವಂತೆಯೇ ದ್ರೋಣರೊಡನೆ ಈ ಮಾತುಗಳನ್ನು ಹೇಳಿದನು:



ನೂನಂ ವಯಂ ವಧ್ಯಪಕ್ಷೇ ಭವತೋ ದ್ವಿಜಸತ್ತಮ ।
ತಥಾ ಹಿ ನಾಗ್ರಹೀಃ ಪ್ರಾಪ್ತಂ ಸಮೀಪೇಽದ್ಯ ಯುಧಿಷ್ಠಿರಮ್ ॥೭॥

"ದ್ವಿಜಸತ್ತಮರೇ! ನಿಶ್ಚಯವಾಗಿಯೂ ನಾವೆಲ್ಲರೂ ನಿಮ್ಮ ಶತ್ರುಪಕ್ಷದಲ್ಲಿರುತ್ತೇವೆ. ಆದುದರಿಂದಲೇ ಸಮೀಪದಲ್ಲಿ ಸಿಕ್ಕಿದಾಗಲೂ ಯುಧಿಷ್ಠಿರನನ್ನು ನೀವು ಬಂಧಿಸಲು ಪ್ರಯತ್ನಿಸಲಿಲ್ಲ.

ಇಚ್ಛತಸ್ತೇ ನ ಮುಚ್ಯೇತ ಚಕ್ಷುಃಪ್ರಾಪ್ತೋ ರಣೇ ರಿಪುಃ ।
ಜಿಘೃಕ್ಷತೋ ರಕ್ಷ್ಯಮಾಣಃ ಸಾಮರೈರಪಿ ಪಾಣ್ಡವೈಃ ॥೮॥

ಯುದ್ಧಸಮಯದಲ್ಲಿ ಶತ್ರುಪಕ್ಷದ ಯಾವನೇ ಆದರೂ ನಿಮ್ಮ ಎದುರಾಗಿ ಬಂದು ಅವನನ್ನು ನೀವು ಬಂಧಿಸಲು ಇಚ್ಛಿಸಿದ್ದೇ ಆದರೆ ಅವನು ದೇವತೆಗಳಿಂದ ಕೂಡಿದ ಪಾಂಡವರಿಂದ ರಕ್ಷಿಸಲ್ಪಡುತ್ತಿದ್ದರೂ ಆತನಿಗೆ ನಿಮ್ಮಿಂದ ಬಿಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಹೀಗಿರುವಾಗ-

**ವರಂ ದತ್ತ್ವಾ ಮಮ ಪ್ರೀತಃ ಪಶ್ಚಾದ್ವಿಕೃತವಾನಸಿ ।**
**ಆಶಾಭಙ್ಗಂ ನ ಕುರ್ವನ್ತಿ ಭಕ್ತಸ್ಯಾರ್ಯಾಃ ಕಥಂಚನ ॥೯॥**

ನೀವು ನನ್ನ ವಿಷಯದಲ್ಲಿ ಪ್ರೀತರಾಗಿ ನನಗೆ ವರವನ್ನು ದಯಪಾಲಿಸಿ ಅನಂತರ ಅದಕ್ಕೆ ವಿರುದ್ಧವಾಗಿ ನಡೆದುಕೊಂಡಿದ್ದೀರಿ. ಭಕ್ತನಾದವನಿಗೆ ಆರ್ಯರಾದವರು ಆಶಾಭಂಗವನ್ನು ಯಾವುದೇ ಕಾರಣದಿಂದಲೂ ಮಾಡುವುದಿಲ್ಲ."

ಮಹಾರಾಜ! ದುರ್ಯೋಧನನ ಆಕ್ಷೇಪವನ್ನು ಕೇಳಿ ದ್ರೋಣರು ಬೇಸರಗೊಂಡು ಹೇಳಿದರು:

**ನಾರ್ಹಸೇ ಮಾಂ ತಥಾ ಜ್ಞಾತುಂ ಘಟಮಾನಂ ತವ ಪ್ರಿಯೇ ।**

"ಮಹಾರಾಜ! ನಾನು ನನ್ನ ಸಂಪೂರ್ಣಶಕ್ತಿಯನ್ನೂ ವಿನಿಯೋಗಿಸಿ ನಿನಗೆ ಪ್ರಿಯವಾದ ಕಾರ್ಯವನ್ನು ಮಾಡಲು ಪ್ರಯತ್ನಿಸುತ್ತಿರುವಾಗ ನನ್ನ ವಿಷಯದಲ್ಲಿ ನೀನು ಹೀಗೆ ಭಾವಿಸುವುದು ನಿನಗೆ ಯೋಗ್ಯವೆನಿಸುವುದಿಲ್ಲ. ಆದರೆ ಒಂದು ವಿಷಯವನ್ನು ಮಾತ್ರ ಸ್ಪಷ್ಟವಾಗಿ ಹೇಳುತ್ತೇನೆ; ಕೇಳು:

**ಸಸುರಾಸುರಗನ್ಧರ್ವಾಃ ಸಯಕ್ಷೋರಗರಾಕ್ಷಸಾಃ।**
**ನಾಲಂ ಲೋಕಾ ರಣೇ ಜೇತುಂ ಪಾಲ್ಯಮಾನಂ ಕಿರೀಟಿನಾ ॥೧೧॥**

ಕಿರೀಟಧರನಾದ ಅರ್ಜುನನು ರಣರಂಗದಲ್ಲಿ ಯಾರನ್ನು ರಕ್ಷಿಸುವನೋ ಅವನನ್ನು ಜಯಿಸಲು ದೇವಾಸುರ-ಗಂಧರ್ವ-ಯಕ್ಷ-ನಾಗ- ರಾಕ್ಷಸಸಹಿತ ವಾದ ಸಂಪೂರ್ಣಲೋಕಗಳೂ ಸಮರ್ಥವಾಗುವುದಿಲ್ಲ.

**ವಿಶ್ವಸೃಗ್ಯತ್ರ ಗೋವಿನ್ದಃ ಪೃತನಾನೀಸ್ತಥಾರ್ಜುನಃ ।**
**ತತ್ರ ಕಸ್ಯ ಬಲಂ ಕ್ರಾಮೇದನ್ಯತ್ರ ತ್ರ್ಯಮ್ಬಕಾತ್ಪ್ರಭೋಃ ॥೧೨॥**

ಎಲ್ಲಿ ವಿಶ್ವದ ಸೃಷ್ಟಿಕರ್ತೃವಾದ ಗೋವಿಂದನಿದ್ದಾನೆಯೋ ಮತ್ತು ಎಲ್ಲಿ

ಸೇನಾನಾಯಕನಾಗಿ ಅರ್ಜುನನೇ ಇದ್ದಾನೆಯೋ ಅಲ್ಲಿ ಪ್ರಭುವಾದ ಪರಶಿವನ ಬಲವೊಂದನ್ನು ಬಿಟ್ಟು ಬೇರೆ ಯಾವಪುರುಷನ ಬಲವು ತಾನೇ ನಾಟೀತು?

ಆದುದರಿಂದ ಅರ್ಜುನನನ್ನಾಗಲೀ ಅರ್ಜುನನಿಂದ ರಕ್ಷಿತನಾದವನನ್ನಾಗಲೀ ಜಯಿಸುವ ಸಾಧ್ಯತೆಯೇ ಇಲ್ಲ. ಆದರೂ–

**ಸತ್ಯಂ ತಾತ ಬ್ರವೀಮ್ಯದ್ಯ ನೈತಜ್ಜಾತ್ವನ್ಯಥಾ ಭವೇತ್।**
**ಅದ್ಯೈಕಂ ಪ್ರವರಂ ಕಂಚಿತ್ಪಾತಯಿಷ್ಯೇ ಮಹಾರಥಮ್ ॥೧೩॥**

ಈಗ ನಾನು ಸತ್ಯವಾಗಿ ಹೇಳುತ್ತೇನೆ. ಈಗ ಹೇಳುವ ನನ್ನ ಮಾತು ಯಾವುದೇ ಕಾರಣದಿಂದಲೂ ಅನ್ಯಥಾ ಆಗುವುದಿಲ್ಲ. (ಸುಳ್ಳಾಗುವುದಿಲ್ಲ.) ಇಂದು ನಾನು ಒಬ್ಬ ಶ್ರೇಷ್ಠಮಹಾರಥನನ್ನು ಕೆಳಕ್ಕೆ ಬೀಳಿಸುತ್ತೇನೆ. ಅದರ ಸಲುವಾಗಿಯೇ ನಾನು ದೇವತೆಗಳಿಗೂ ಅಭೇದ್ಯವಾದ ಒಂದು ಅದ್ಭುತವಾದ ವ್ಯೂಹವನ್ನು ರಚಿಸುತ್ತೇನೆ. ಆದರೆ ಯಾವುದಾದರೂ ಉಪಾಯದಿಂದ ಅರ್ಜುನನನ್ನು ನೀನು ಬೇರೆಯ ಕಡೆಗೆ ಒಯ್ಯಬೇಕು. ಏಕೆಂದರೆ:

**ನ ಹ್ಯಜ್ಞಾತಮಸಾಧ್ಯಂ ವಾ ತಸ್ಯ ಸಂಖ್ಯೇಽಸ್ತಿ ಕಿಂಚನ।**
**ತೇನ ಹ್ಯುಪಾತ್ತಂ ಸಕಲಂ ಸರ್ವಜ್ಞಾನಮಿತಸ್ತತಃ ॥೧೪॥**

ಯುದ್ಧದ ವಿಷಯದಲ್ಲಿ ಅರ್ಜುನನಿಗೆ ತಿಳಿಯದೇ ಇದ್ದುದಾಗಲೀ, ಅಸಾಧ್ಯವಾದುದಾಗಲೀ ಇರುವುದಿಲ್ಲ. ಅವನು ಇಲ್ಲಿಂದಲೂ ಮತ್ತು ಬೇರೆಯ ಕಡೆಯಿಂದಲೂ ಯುದ್ಧಕ್ಕೆ ಸಂಬಂಧಿಸಿದಂತೆ ಸಂಪೂರ್ಣಜ್ಞಾನವನ್ನು ಪಡೆದುಕೊಂಡಿರುತ್ತಾನೆ."

ಮಹಾರಾಜ! ದ್ರೋಣರು ಹೀಗೆ ಹೇಳಿದನಂತರ ಸಂಶಪ್ತಕದಳದವರು ಪುನಃ ಅರ್ಜುನನನ್ನು ರಣಾಂಗಣದ ದಕ್ಷಿಣದಿಕ್ಕಿನ ಸಮೀಪದಲ್ಲಿ ನಿಂತು ಯುದ್ಧಕ್ಕೆ ಆಹ್ವಾನಿಸಿದರು. ಬಳಿಕ ಅರ್ಜುನನಿಗೂ ಮತ್ತು ಅವರಿಗೂ ಹಿಂದೆಂದೂ ಎಲ್ಲಿಯೂ ಕಂಡು-ಕೇಳದಂತಹ ಕಾಳಗವು ನಡೆಯಿತು. ಮಧ್ಯಾಹ್ನದ ಸಮಯದಲ್ಲಿ ಸಂಚರಿಸುವ ಸೂರ್ಯನು ತಾಪವನ್ನುಂಟು ಮಾಡುವಂತೆ–ಶತ್ರುಗಳಿಗೆ ತಾಪವನ್ನುಂಟುಮಾಡುವುದಾಗಿದ್ದ, ನೋಡಲು ಕೂಡ ಸಾಧ್ಯವಾಗದಿದ್ದ, ದ್ರೋಣರಿಂದ ರಚಿತವಾದ ಮಹಾವ್ಯೂಹವು ರಣರಂಗದಲ್ಲಿ ಕಂಗೊಳಿಸಿತು. ದೊಡ್ಡಪ್ಪನಾದ ಯುಧಿಷ್ಠಿರನ ಮಾತಿನಂತೆ ದುರ್ಭೇದ್ಯವಾಗಿದ್ದ ಚಕ್ರವ್ಯೂಹವನ್ನು ಅಭಿಮನ್ಯುವು ಅನೇಕ ಪ್ರಕಾರವಾಗಿ ಭೇದಿಸಿದನು. ಅಭಿಮನ್ಯುವು ಆ ಸಮಯದಲ್ಲಿ ಅತ್ಯಂತ ದುಷ್ಕರವಾದ

ಕರ್ಮವನ್ನು ಮಾಡುತ್ತಾ ಸಾವಿರಾರು ವೀರರನ್ನು ಸಂಹರಿಸಿ, ಆರು ಮಂದಿ ಮಹಾವೀರರನ್ನೂ ಏಕಕಾಲದಲ್ಲಿ ಏಕಾಕಿಯಾಗಿಯೇ ಎದುರಿಸಿ, ಕಟ್ಟಕಡೆಗೆ ದುಃಶಾಸನನ ಮಗನಿಂದ ಹತನಾದನು.

ಮಹಾರಾಜ! ಶತ್ರುಸಂತಾಪಕನಾದ, ಸುಭದ್ರೆಯ ಮಗನಾದ ಅಭಿಮನ್ಯುವು ರಣರಂಗದಲ್ಲಿ ಅಸುನೀಗಿದನು. ಅದರಿಂದ ನಾವೆಲ್ಲರೂ ಪರಮಹೃಷ್ಟರಾದೆವು. ಪಾಂಡವರು ದುಃಖದಲ್ಲಿ ಮುಳುಗಿಹೋದರು. ಅಭಿಮನ್ಯುವಿನ ಸಂಹಾರವಾದನಂತರ ನಾವು ಆ ದಿನದ ಯುದ್ಧವನ್ನು ನಿಲ್ಲಿಸಿ ರಣರಂಗದಿಂದ ಹಿಂದಿರುಗಿದೆವು."

ಸಂಜಯನ ಮಾತನ್ನು ಕೇಳಿ ಧೃತರಾಷ್ಟ್ರನು ಹೇಳುತ್ತಾನೆ:

"ಸಂಜಯ! ಪುರುಷಶ್ರೇಷ್ಠನಾದ ಅರ್ಜುನನ ಮಗನೂ ಮತ್ತು ಎಳೆಯಪ್ರಾಯದವನೂ ಆದ ಅಭಿಮನ್ಯುವು ಯುದ್ಧದಲ್ಲಿ ಹತನಾದನೆಂದು ಕೇಳಿ ನನ್ನ ಎದೆಯು ಸೀಳಿಹೋಗುತ್ತಿದೆಯೋ ಎಂಬಂತೆ ಕಾಣುತ್ತಿದೆ. ( ನನ್ನ ಮನಸ್ಸಿನಲ್ಲಿ ಬಹಳ ಸಂಕಟವಾಗುತ್ತಿದೆ.) ಧರ್ಮಶಾಸ್ತ್ರಗಳನ್ನು ಸಿದ್ಧಪಡಿಸಿರುವವರು ಕ್ಷತ್ರಧರ್ಮವನ್ನು ಬಹಳ ದಾರುಣವನ್ನಾಗಿ ಮಾಡಿರುವರು. ಇದೇ ಕ್ಷತ್ರಧರ್ಮದಲ್ಲಿದ್ದುಕೊಂಡು ರಾಜ್ಯಾಪೇಕ್ಷಿಗಳಾದ ಶೂರರು ಕೇವಲ ಒಬ್ಬ ಎಳೆಯ ಪ್ರಾಯದ ಬಾಲಕನ ಮೇಲೆ ಶಸ್ತ್ರಪಾತಮಾಡಿದರಲ್ಲವೇ! ಇದು ಅತ್ಯಂತಕ್ರೂರವಾದ ಕರ್ಮವಲ್ಲದೇ ಮತ್ತೇನು?

ಸಂಜಯ! ಅಭಿಮನ್ಯುವಿನ್ನೂ ಬಾಲಕನಾಗಿದ್ದನು. ಅತ್ಯಂತ ಸುಖದಲ್ಲಿ ಬೆಳೆದವನು. ಸ್ವಲ್ಪವಾದರೂ ಭಯಪಡದವನಂತೆ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಅಂತಹವನನ್ನು ಅಸ್ತ್ರವಿದ್ಯಾವಿಶಾರದರಾದ ಅನೇಕರು ಸೇರಿಕೊಂಡು ಕೊಂದರು–ಎಂದು ನೀನು ಹೇಳುತ್ತಿರುವೆ. ಅದು ಹೇಗೆ? ಸುಖದಲ್ಲಿಯೇ ಬೆಳೆದ ಕಷ್ಟವೆಂಬುದನ್ನೇ ಕಾಣದ ಬಾಲಕನೊಬ್ಬನನ್ನು ಸಂಹರಿಸಲು ಆರುಮಂದಿ ಮಹಾರಥರು ಒಟ್ಟಾಗಿ ಸೇರಿ ಯುದ್ಧಮಾಡಬೇಕಾಯಿತೇ? ಇದನ್ನು ಯಥಾತಥ್ಯವಾಗಿ ನನಗೆ ಹೇಳು. ರಥಸೈನ್ಯವನ್ನು ಸಂಪೂರ್ಣವಾಗಿ ಧ್ವಂಸಮಾಡಲು ಇಚ್ಛಿಸಿದ, ಅಮಿತೌಜಸ್ಕನಾದ ಅಭಿ

ಮನ್ಯುವು ರಣಾಂಗಣದಲ್ಲಿ ಯಾವ ರೀತಿಯಲ್ಲಿ ಯುದ್ಧದ ಆಟವನ್ನು ಆಡಿದನು?–ಎಂಬುದನ್ನು ವಿವರಿಸಿ ಹೇಳು."

"ಮಹಾರಾಜ! ನೀನು ಅಭಿಮನ್ಯುವಿನ ಮರಣವೃತ್ತಾಂತವನ್ನು ಕೇಳುತ್ತಿರುವೆ. ಈ ವೃತ್ತಾಂತವನ್ನು ನಾನು ನಿನಗೆ ಸಂಪೂರ್ಣವಾಗಿ ಸವಿಸ್ತರವಾಗಿಯೇ ಹೇಳುತ್ತೇನೆ: ಏಕಾಗ್ರಚಿತ್ತನಾಗಿ ಕೇಳು. ರಥಾನೀಕವನ್ನು ಭೇದಿಸಲು ಇಚ್ಛಿಸಿದ ಅಭಿಮನ್ಯುಕುಮಾರನು ಯಾವರೀತಿಯಲ್ಲಿ ಯುದ್ಧದ ಆಟವಾಡಿದನು ಮತ್ತು ಪ್ರಳಯರೂಪವಾದ ಆ ಸಂಗ್ರಾಮದಲ್ಲಿ ದುಃಸಾಧ್ಯರೆನಿಸಿದ್ದ ಮಹಾವೀರರು ಕೂಡ ಅವನಿಂದ ಯಾವ ರೀತಿಯಲ್ಲಿ ಘಾಸಿಪಟ್ಟರು?–ಎಂಬುದೆಲ್ಲವನ್ನೂ ಹೇಳುತ್ತೇನೆ.

ಅಭಿಮನ್ಯುವು ಶಸ್ತ್ರಗಳೊಡನೆ ಆಟವಾಡುತ್ತಾ ಯುದ್ಧಮಾಡುತ್ತಿದ್ದ ಸಮಯದಲ್ಲಿ ನಿನ್ನ ಕಡೆಯವರ ಪಾಡು ಹೇಗಿತ್ತೆಂಬುದನ್ನು ಒಂದೇ ಒಂದು ಉದಾಹರಣೆಯಿಂದ ಹೇಳುತ್ತೇನೆ.

**ದಾವಾಗ್ನ್ಯಭಿಪರೀತಾನಾಂ ಭೂರಿಗುಲ್ಮತೃಣದ್ರುಮೇ ।**
**ವನೌಕಸಾಮಿವಾರಣ್ಯೇ ತ್ವದೀಯಾನಾಮಭೂದ್ಭಯಮ್ ॥೨೮॥**

ಲತಾ-ಗುಲ್ಮಗಳಿಂದಲೂ, ಹುಲ್ಲಿನಿಂದಲೂ ಮತ್ತು ವೃಕ್ಷಗಳಿಂದಲೂ ಸಮೃದ್ಧವಾಗಿರುವ ಅರಣ್ಯದಲ್ಲಿ ಕಾಡುಗಿಚ್ಚಿನಿಂದ ಸುತ್ತುವರಿದ ವನವಾಸಿಗಳ ಮನಸ್ಸಿನಲ್ಲಿ ಯಾವ ವಿಧವಾದ ಪ್ರಾಣಭಯವಿರುತ್ತದೆಯೋ- ಅಂತಹುದೇ ಭಯವು ಅಭಿಮನ್ಯುವು ಶಸ್ತ್ರಾಸ್ತ್ರಗಳಿಂದ ಕೌರವವನವನ್ನು ಸುಡುತ್ತಿದ್ದ ಕಾಲದಲ್ಲಿ ನಿನ್ನ ಕಡೆಯ ಯೋಧರಿಗೂ ಹುಟ್ಟಿಕೊಂಡಿದ್ದಿತು."

ಌಌನೆಯ ಅಧ್ಯಾಯವು ಮುಗಿಯಿತು.

ಌ೪ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಸಂಜಯನು ಅಭಿಮನ್ಯುವನ್ನು ಪ್ರಶಂಸಿಸಿದುದು: ದ್ರೋಣರಿಂದ ಚಕ್ರವ್ಯೂಹರಚನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಶ್ರೀಕೃಷ್ಣಸಹಿತರಾದ ಪಾಂಡವರು ದೇವತೆಗಳಿಂದಲೂ ಅವಧ್ಯರು. ಸಮರಾಂಗಣದಲ್ಲಿ ಅತ್ಯಂತಭಯಂಕರವಾದ

ಸಾಹಸಕರ್ಮಗಳನ್ನು ಮಾಡತಕ್ಕವರು. ಅವರು ಮಾಡುವ ಕರ್ಮಗಳಿಂದಲೇ ಅವರ ಪರಿಶ್ರಮವು ಅಭಿವ್ಯಕ್ತವಾಗುತ್ತದೆ. ಸತ್ತ್ವಗುಣ, ಸತ್ಕರ್ಮ, ವಂಶ, ಬುದ್ಧಿ, ಕೀರ್ತಿ, ಯಶಸ್ಸು ಮತ್ತು ಸಂಪತ್ತು–ಇವುಗಳಲ್ಲಿ ಯುಧಿಷ್ಠಿರನಿಗೆ ಸಮಾನ ನಾಗಿರತಕ್ಕವನು ಹಿಂದೆಯೂ ಇರಲಿಲ್ಲ; ಮುಂದೆಯೂ ಹುಟ್ಟುವುದಿಲ್ಲ. ಸತ್ಯಧರ್ಮಪರಾಯಣನಾದ ಜಿತೇಂದ್ರಿಯನಾದ ಯುಧಿಷ್ಠಿರರಾಜನು ಬ್ರಾಹ್ಮಣಸತ್ಕಾರವೇ ಮೊದಲಾದ ಸದ್ಗುಣಗಳಿಂದ ಈಗಾಗಲೇ ಸ್ವರ್ಗವನ್ನು ಪಡೆದುಕೊಂಡುಬಿಟ್ಟಿರುತ್ತಾನೆ.

**ಯುಗಾನ್ತೇ ಚಾನ್ತಕೋ ರಾಜಞ್ಜಾಮದಗ್ನ್ಯಶ್ಚ ವೀರ್ಯವಾನ್।**
**ರಥಸ್ಥೋ ಭೀಮಸೇನಶ್ಚ ಕಥ್ಯನ್ತೇ ಸದೃಶಾಸ್ತ್ರಯಃ ॥೪॥**

ಪ್ರಳಯಕಾಲದ ಯಮರಾಜ, ಜಮದಗ್ನಿಯ ಮಗನಾದ, ಪರಾಕ್ರಮಿಯಾದ ಪರಶುರಾಮ ಮತ್ತು ರಥಸ್ಥನಾದ ಭೀಮಸೇನ-ಈ ಮೂವರೂ ಒಬ್ಬರು ಮತ್ತೊಬ್ಬರಿಗೆ ಸದೃಶರೆಂದು (ಸಮಾನರೆಂದು) ತಿಳಿದವರು ಹೇಳುತ್ತಾರೆ. ಆದರೆ:

**ಪ್ರತಿಜ್ಞಾಕರ್ಮದಕ್ಷಸ್ಯ ರಣೇ ಗಾಣ್ಡೀವಧನ್ವನಃ।**
**ಉಪಮಾಂ ನಾಧಿಗಚ್ಛಾಮಿ ಪಾರ್ಥಸ್ಯ ಸದೃಶೀಂ ಕ್ಷಿತೌ ॥೫॥**

ರಣಭೂಮಿಯಲ್ಲಿ ಪ್ರತಿಜ್ಞಾಪೂರ್ವವಾದ ಕರ್ಮಮಾಡುವುದರಲ್ಲಿ ಸಮರ್ಥನಾದ, ಗಾಂಡೀವಧರನಾದ ಅರ್ಜುನನಿಗೆ ಸದೃಶವಾದ ಉಪಮೆಯು (ಅರ್ಜುನನಂತೆ ಇರತಕ್ಕವನು) ನನಗೆ ಈ ಪ್ರಪಂಚದಲ್ಲಿ ಯಾರೂ (ಬೇರೊಬ್ಬನು) ಸಿಕ್ಕಿರುವುದಿಲ್ಲ. ಅಪಾರ ಗುರುವಾತ್ಸಲ್ಯ (ಹಿರಿಯಣ್ಣನಾದ ಯುಧಿಷ್ಠಿರನಲ್ಲಿ ಅತ್ಯಂತ ಭಕ್ತಿ), ಮಂತ್ರಾಲೋಚನೆಯನ್ನು ಅತ್ಯಂತ ರಹಸ್ಯವಾಗಿಟ್ಟುಕೊಳ್ಳುವುದು, ವಿನಯಶೀಲತೆ, ಇಂದ್ರಿಯಸಂಯಮ, ಉಪಮಾನರಹಿತವಾದ ರೂಪ ಮತ್ತು ಶೌರ್ಯ-ಈ ಆರು ಗುಣಗಳು ನಕುಲನಲ್ಲಿ ನಿಯತವಾಗಿರತಕ್ಕುವುಗಳು. ವೇದಶಾಸ್ತ್ರಗಳ ಅಧ್ಯಯನ, ಗಾಂಭೀರ್ಯ, ಮಾಧುರ್ಯ, ಸತ್ಯ, ಸ್ಫುರದ್ರೂಪ ಮತ್ತು ಪರಾಕ್ರಮ-ಇವುಗಳಲ್ಲಿ ಸಹದೇವನು ಅಶ್ವಿನೀಪುತ್ರರಿಗೆ ಸಮಾನನೆಂದು ಸರ್ವತ್ರ ಪ್ರಸಿದ್ಧವಾಗಿದೆ. ಮಹಾರಾಜ! ನಾನು ಈಗ ಹೇಳಿದ ಎಲ್ಲರ ಎಲ್ಲ ಗುಣಗಳೂ ಅಭಿಮನ್ಯುವಿನಲ್ಲೊಬ್ಬನಲ್ಲಿಯೇ ಇದ್ದುವು.

**ಯೇ ಚ ಕೃಷ್ಣೇ ಗುಣಾಃ ಸ್ಫೀತಾಃ ಪಾಣ್ಡವೇಷು ಚ ಯೇ ಗುಣಾಃ।**
**ಅಭಿಮನ್ಯೌ ಕಿಲೈಕಸ್ಥಾ ದೃಶ್ಯನ್ತೇ ಗುಣಸಂಚಯಾಃ ॥೮॥**

ಶ್ರೀಕೃಷ್ಣನಲ್ಲಿ ಯಾವ ಉಜ್ಜ್ವಲವಾದ ಗುಣಗಳಿರುವುವೋ, ಪಾಂಡವರಲ್ಲಿ ಯಾವ ಗುಣಗಳಿರುವುವೋ–ಆ ಗುಣಸಮೂಹಗಳೆಲ್ಲವೂ ಅಭಿಮನ್ಯುವಿನಲ್ಲಿ ಒಟ್ಟಿಗೆ ಸೇರಿದ್ದುದು ಪ್ರತ್ಯಕ್ಷವಾಗಿ ಕಾಣುತ್ತಿದ್ದಿತು.

**ಯುಧಿಷ್ಠಿರಸ್ಯ ವೀರ್ಯೇಣ ಕೃಷ್ಣಸ್ಯ ಚರಿತೇನ ಚ ।**
**ಕರ್ಮಭಿರ್ಭೀಮಸೇನಸ್ಯ ಸದೃಶೋ ಭೀಮಕರ್ಮಣಃ ॥೯॥**

ಅಭಿಮನ್ಯುವು ಪರಾಕ್ರಮದಲ್ಲಿ ಯುಧಿಷ್ಠಿರಸದೃಶನಾಗಿಯೂ, ಚಾರಿತ್ರ್ಯದಲ್ಲಿ ಶ್ರೀಕೃಷ್ಣಸದೃಶನಾಗಿಯೂ, ಭಯಂಕರವಾದ ಕರ್ಮಗಳನ್ನು ಮಾಡುವುದರಲ್ಲಿ ಭಯಂಕರಕರ್ಮನಾದ ಭೀಮನಿಗೆ ಸದೃಶನಾಗಿಯೂ ಇದ್ದನು.

**ಧನಂಜಯಸ್ಯ ರೂಪೇಣ ವಿಕ್ರಮೇಣ ಶ್ರುತೇನ ಚ ।**
**ವಿನಯಾತ್ಸಹದೇವಸ್ಯ ಸದೃಶೋ ನಕುಲಸ್ಯ ಚ ॥೧೦॥**

ಅಭಿಮನ್ಯುವು ರೂಪ, ಪರಾಕ್ರಮ ಮತ್ತು ಶಾಸ್ತ್ರಜ್ಞಾನಗಳಲ್ಲಿ ಅರ್ಜುನಸದೃಶನಾಗಿಯೂ, ವಿನಯದಲ್ಲಿ ನಕುಲ-ಸಹದೇವರಿಗೆ ಸಮನಾಗಿಯೂ ಇದ್ದನು.”

ಸಂಜಯನು ಅಭಿಮನ್ಯುವನ್ನು ಹೀಗೆ ಪ್ರಶಂಸೆಮಾಡಿದನಂತರ ಧೃತರಾಷ್ಟ್ರನು ಹೇಳಿದನು:

“ಸೂತನೇ! ಅಪರಾಜಿತನಾದ, ಸುಭದ್ರೆಯ ಮಗನಾದ ಅಭಿಮನ್ಯುವಿನ ಸಂಪೂರ್ಣವೃತ್ತಾಂತವನ್ನು ಕೇಳಬೇಕೆಂದಿರುತ್ತೇನೆ. ಅವನ ವೃತ್ತಾಂತವನ್ನು ವಿವರವಾಗಿ ಹೇಳಿದನಂತರ ಅವನು ಯುದ್ಧದಲ್ಲಿ ಹತನಾದುದು ಹೇಗೆಂಬುದನ್ನು ಹೇಳು.”

“ಮಹಾರಾಜ! ಸ್ಥಿರನಾಗಿ ಕುಳಿತು ಕೇಳು. ಯಾವ ದುಃಖವನ್ನು ಭರಿಸಲು ದುಃಸಾಧ್ಯವೋ-ಅಂತಹ ದುಃಖವನ್ನು ಕಷ್ಟಪಟ್ಟಾದರೂ ಹೃದಯ ದಲ್ಲಿಯೇ ಅಡಗಿಸು. ನಾನು ನಿನಗೆ ಬಂಧು-ಬಾಂಧವರ ಮಹಾವಿನಾಶಕರ ವಾದ ವಾರ್ತೆಯನ್ನು ಹೇಳುತ್ತಿದ್ದೇನೆ. ಏಕಾಗ್ರತೆಯಿಂದ ಕೇಳು.

ಆಚಾರ್ಯದ್ರೋಣರು ಚಕ್ರವ್ಯೂಹವನ್ನು ರಚಿಸಿದರು. ಇಂದ್ರನ

ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ತೋರುವ ಎಲ್ಲ ರಾಜರೂ ಆ ಚಕ್ರವ್ಯೂಹದಲ್ಲಿ ಪ್ರತಿಷ್ಠಿತರಾಗಿದ್ದರು. ಚಕ್ರವ್ಯೂಹದ ಅರೆಕಾಲುಗಳ ಸ್ಥಾನದಲ್ಲಿ ಸೂರ್ಯಸಮಾನತೇಜಸ್ವಿಗಳಾದ ರಾಜಕುಮಾರರು ಉಪಸ್ಥಿತರಾಗಿದ್ದರು. ಆ ಸಮಯದಲ್ಲಿ ಸಮಸ್ತರಾಜಕುಮಾರರ ಸಮುದಾಯವೂ ಅಲ್ಲಿ ಉಪಸ್ಥಿತ ವಾಗಿದ್ದಿತು. ಅವರೆಲ್ಲರೂ ಪ್ರಾಣಾಂತದವರೆಗೂ ಯುದ್ಧಮಾಡುವು ದಾಗಿಯೂ, ಯಾವುದೇ ಕಾರಣದಿಂದಲೂ ಯುದ್ಧದಿಂದ ಹಿಮ್ಮೆಟ್ಟುವುದಿಲ್ಲ ವೆಂದೂ ಪ್ರತಿಜ್ಞೆಮಾಡಿದ್ದರು. ಅವರ ರಥಗಳ ಅಗ್ರಭಾಗಗಳಲ್ಲಿ ಸುವರ್ಣ ಮಯವಾದ ಧ್ವಜಗಳು ಹಾರಾಡುತ್ತಿದ್ದುವು. ಅವರೆಲ್ಲರೂ ಕೆಂಪಾದ



ವಸ್ತ್ರಗಳನ್ನುಟ್ಟು ಕೆಂಪಾದ ಮಾಲೆಗಳಿಂದಲೂ, ಕೆಂಪುಬಣ್ಣದ ಆಭರಣ ಗಳಿಂದಲೂ ಸಮಲಂಕೃತರಾಗಿದ್ದರು. ಎಲ್ಲರೂ ಕೆಂಪುಬಣ್ಣದ ಪತಾಕೆಗಳನ್ನು ಹೊಂದಿದ್ದರು. ಚಿನ್ನದ ಸರಗಳನ್ನು ಹಾಕಿಕೊಂಡಿದ್ದರು. ಅವರು ತಮ್ಮ ಅಂಗಾಂಗಗಳನ್ನು ಚಂದನದಿಂದಲೂ, ಅಗುರುವಿನಿಂದಲೂ ಲೇಪಿಸಿ ಕೊಂಡಿದ್ದರು. ಹೂವಿನ ಮಾಲೆಗಳನ್ನು ಹಾಕಿಕೊಂಡಿದ್ದರು. ಸೂಕ್ಷ್ಮವಾದ (ತೆಳ್ಳನೆಯ ಮತ್ತು ಮೃದುವಾದ) ವಸ್ತ್ರಗಳನ್ನು ಧರಿಸಿದ್ದರು. ದೃಢಧನ್ವಿಗಳಾದ ಇಂತಹ ರಾಜಕುಮಾರರ ಸಂಖ್ಯೆಯು ಹತ್ತುಸಾವಿರವಿದ್ದಿತು. ಅವರೆಲ್ಲರೂ

ಒಟ್ಟಾಗಿ ಯುದ್ಧಮಾಡುವ ಇಚ್ಛೆಯಿಂದ ಅರ್ಜುನನ ಮಗನಾದ ಅಭಿಮನ್ಯುವಿನ ಕಡೆಗೆ ಧಾವಿಸಿದರು. ನಿನ್ನ ಮೊಮ್ಮಗನಾದ ಲಕ್ಷ್ಮಣನನ್ನು ಮುಂದೆಮಾಡಿಕೊಂಡು ಅವರೆಲ್ಲರೂ ರಣಾಂಗಣಕ್ಕೆ ಹೋಗುತ್ತಿದ್ದರು. ಒಬ್ಬನಿಗೆ ಪ್ರಾಪ್ತವಾಗುವ ದುಃಖವು ಎಲ್ಲರಿಗೂ ಸಮಾನವೆಂದು ಅವರು ಭಾವಿಸಿದ್ದರು. (ಸುಖ ಮತ್ತು ದುಃಖಗಳೆರಡರಲ್ಲೂ ಅವರು ಸಮಭಾಗಿಗಳಾಗಿದ್ದರು.) ಸಾಹಸದಲ್ಲಿಯೂ ಒಬ್ಬರು ಮತ್ತೊಬ್ಬರಿಗೆ ಸಮನಾಗಿದ್ದರು. ಶತ್ರುಸಂಹಾರದಲ್ಲಿ ಒಬ್ಬರು ಮತ್ತೊಬ್ಬರನ್ನು ಸ್ಪರ್ಧಿಸುತ್ತಿದ್ದರು. ಅವರೆಲ್ಲರೂ ಪರಸ್ಪರ ಹಿತಾಸಕ್ತಿಯುಳ್ಳವರಾಗಿದ್ದರು. ಅಂತಹ ಪರಾಕ್ರಮಿಗಳಾದ ಸೈನಿಕರ ಮಧ್ಯದಲ್ಲಿ ದುರ್ಯೋಧನರಾಜನಿದ್ದನು. ಅವನ ತಲೆಯಮೇಲೆ ಶ್ವೇತಚ್ಛತ್ರವಿದ್ದಿತು. ಮಹಾರಥರಾದ ಕರ್ಣ-ದುಃಶಾಸನ-ಕೃಪಾದಿಗಳಿಂದ ಪರಿವೃತನಾಗಿದ್ದ ಶ್ರೀಮಂತನಾದ ದುರ್ಯೋಧನನು ಸಾಕ್ಷಾತ್ ದೇವರಾಜನಂತೆಯೇ ಕಾಣುತ್ತಿದ್ದನು. ಅವನ ಎರಡು ಕಡೆಗಳಲ್ಲಿಯೂ ಚಾಮರಗಳನ್ನೂ, ಬೀಸಣಿಗೆಗಳನ್ನೂ ಬೀಸುತ್ತಿದ್ದರು. ಆ ಸಮಯದಲ್ಲವನು ಉದಯಕಾಲದ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. ಆ ಸೈನ್ಯದ ಅಗ್ರಭಾಗದಲ್ಲಿ ಸೇನಾಪತಿಗಳಾದ ದ್ರೋಣರು ನಿಂತಿದ್ದರು. ಅಲ್ಲಿಯೇ ಶ್ರೀಮಂತನಾದ ಸಿಂಧುರಾಜನಾದ ಜಯದ್ರಥನೂ ಮೇರುಪರ್ವತದಂತೆ ನಿಂತಿದ್ದನು. ಅಶ್ವತ್ಥಾಮನೂ ಮತ್ತು ಅವನ ಅನುಯಾಯಿಗಳೂ ಸಿಂಧುರಾಜನ ಪಕ್ಕದಲ್ಲಿ ನಿಂತಿದ್ದರು. ಮಹಾರಾಜ! ದೇವತೆಗಳ ಸದೃಶರಾಗಿದ್ದ ನಿನ್ನ ಮೂವತ್ತು ಮಂದಿ ಮಕ್ಕಳೂ, ಗಾಂಧಾರರಾಜನಾದ ಜೂಜುಕೋರನಾದ ಶಕುನಿಯೂ, ಶಲ್ಯ ಮತ್ತು ಭೂರಿಶ್ರವಸರೂ ಅಲ್ಲಿ ಯುದ್ಧಸನ್ನದ್ಧರಾಗಿ ನಿಂತಿದ್ದರು. ಆ ಮಹಾರಥರೆಲ್ಲರೂ ಸಿಂಧುರಾಜನ ಮತ್ತೊಂದು ಪಾರ್ಶ್ವದಲ್ಲಿ ವಿರಾಜಮಾನರಾಗಿದ್ದರು. ಅನಂತರ 'ಮರಣಪರ್ಯಂತವಾಗಿ ಯುದ್ಧದಿಂದ ಹಿಂದಿರುಗುವುದೇ ಇಲ್ಲ'—ಎಂಬ ಪ್ರತಿಜ್ಞೆಯೊಡನೆ ನಿನ್ನ ಕಡೆಯವರಿಗೂ ಮತ್ತು ಶತ್ರುಗಳ ಕಡೆಯ ಸೈನಿಕರಿಗೂ ಭಯಂಕರವಾದ ಮತ್ತು ರೋಮಾಂಚಕಾರಕವಾದ ಯುದ್ಧವು ಪ್ರಾರಂಭವಾಯಿತು."

೩೪ನೆಯ ಅಧ್ಯಾಯವು ಮುಗಿಯಿತು.

## ಅಭಿಮನ್ಯು-ಯುಧಿಷ್ಠಿರರ ಸಂವಾದ: ವ್ಯೂಹವನ್ನು ಭೇದಿಸುವುದಾಗಿ ಅಭಿಮನ್ಯುವಿನ ಪ್ರತಿಜ್ಞೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ದ್ರೋಣರಿಂದ ರಕ್ಷಿಸಲ್ಪಡುತ್ತಿದ್ದ ಮತ್ತು ಎದುರಿಸಲು ಅಸಾಧ್ಯವಾಗಿದ್ದ ಆ ಚಕ್ರವ್ಯೂಹವನ್ನು ಭೀಮಸೇನಪುರಃಸರರಾದ ಕುಂತಿಯ ಮಕ್ಕಳು ಆಕ್ರಮಿಸಿದರು. ಸಾತ್ಯಕಿ, ಚೇಕಿತಾನ, ದ್ರುಪದನ ಮಗನಾದ ಧೃಷ್ಟದ್ಯುಮ್ನ, ಪರಾಕ್ರಮಿಯಾದ ಕುಂತಿಭೋಜ, ಮಹಾರಥಿಯಾದ ದ್ರುಪದ, ಅಭಿಮನ್ಯು, ಕ್ಷತ್ರಧರ್ಮಾ, ಶಕ್ತಿಶಾಲಿಯಾದ ಬೃಹತ್ಕ್ಷತ್ರ, ಚೇದಿರಾಜನಾದ ಧೃಷ್ಟಕೇತು, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ಘಟೋತ್ಕಚ, ಪರಾಕ್ರಮಿಯಾದ ಯುಧಾಮನ್ಯು, ಅಪರಾಜಿತನಾದ ಶಿಖಂಡೀ, ದುರ್ಧರ್ಷನಾದ ಉತ್ತಮೌಜಸ, ಮಹಾರಥಿಯಾದ ವಿರಾಟ, ಕ್ರುದ್ಧರಾಗಿದ್ದ ದ್ರೌಪದೇಯರು, ಬಲಿಷ್ಠನಾದ ಶೈಶುಪಾಲ, ಪರಾಕ್ರಮಿಗಳಾದ ಕೇಕಯರಾಜಕುಮಾರರು ಮತ್ತು ಸಾವಿರಾರು ಸೃಂಜಯಯೋಧರು–ಇವರೆಲ್ಲರೂ ಭೀಮಸೇನನನ್ನು ಮುಂದೆಮಾಡಿಕೊಂಡು ಕೌರವರೊಡನೆ ಯುದ್ಧದಲ್ಲಿ ತೊಡಗಿದರು. ಇವರೇ ಅಲ್ಲದೇ ಅಸ್ತ್ರಕುಶಲರಾದ, ಯುದ್ಧದುರ್ಮದರಾದ ಇನ್ನೂ ಅನೇಕ ಕ್ಷತ್ರಿಯರಾಜರು ತಮ್ಮ-ತಮ್ಮ ಸೈನ್ಯಗಳೊಡನೆ ಯುದ್ಧಮಾಡುವ ಅಭಿಲಾಷೆಯಿಂದ ದ್ರೋಣರನ್ನು ಆಕ್ರಮಿಸಿದರು.

ಮಹಾವೀರ್ಯವಂತರಾದ, ಭರದ್ವಾಜರ ಮಕ್ಕಳಾದ ದ್ರೋಣರು ಸ್ವಲ್ಪವಾದರೂ ಗಾಬರಿಗೊಳ್ಳದೆ ತಮ್ಮ ಸಮೀಪವರ್ತಿಗಳಾಗಿದ್ದ ಪಾಂಡವಯೋಧರನ್ನು, ದೊಡ್ಡದಾದ ಬಾಣಗಳ ಸಮೂಹವನ್ನೇ ಅವರ ಮೇಲೆ ಸುರಿಸಿ–ಎದುರಿಸಿ ಮುಂದಕ್ಕೆ ಬರದಂತೆ ಅವರನ್ನು ತಡೆದು ನಿಲ್ಲಿಸಿದರು. ದುರ್ಭೇದ್ಯವಾದ ಪರ್ವತದ ಸಮೀಪಕ್ಕೆ ಹೋದ ದೊಡ್ಡ ಜಲಪ್ರವಾಹವು ತಟಸ್ಥವಾಗಿ ನಿಲ್ಲುವಂತೆ ಮತ್ತು ಜಲಾಶಯಗಳು (ಸಮುದ್ರಗಳು) ತೀರವನ್ನು ದಾಟಿಹೋಗದಂತೆ–ಪಾಂಡವರು ದ್ರೋಣರನ್ನು

ಅತಿಕ್ರಮಿಸಿ ಮುಂದೆ ಹೋಗಲು ಸಾಧ್ಯವಾಗಲಿಲ್ಲ. ದ್ರೋಣಾಚಾರ್ಯರ ಧನುಸ್ಸಿನಿಂದ ಪುಂಖಾನುಪುಂಖವಾಗಿ ಹೊರಬರುತ್ತಿದ್ದ ಬಾಣಗಳ ಸಮೂಹದಿಂದ ಸತತವಾಗಿ ಪೀಡಿತರಾಗುತ್ತಿದ್ದ ಪಾಂಡವರು ದ್ರೋಣರ ಮುಂಭಾಗದಲ್ಲಿ ನಿಲ್ಲಲು ಕೂಡ ಸಮರ್ಥರಾಗಲಿಲ್ಲ. ಆ ಸಮಯದಲ್ಲಿ ದ್ರೋಣರ ಭುಜಬಲವು ನಮಗೆ ಪರಮಾದ್ಭುತವಾಗಿ ಕಾಣಿಸಿತು. ಸಾವಿರಾರು ಮಂದಿ ಪಾಂಚಾಲ-ಸೃಂಜಯಯೋಧರ ಸತತಪ್ರಯತ್ನದಿಂದಲೂ ದ್ರೋಣರನ್ನು ಅತಿಕ್ರಮಿಸಿ ಮುಂದೆ ಹೋಗಲು ಯಾರಿಗೂ ಸಾಧ್ಯವಾಗಲಿಲ್ಲ. ಪಾಂಡವಸೈನ್ಯವನ್ನು ಹಿಮ್ಮೆಟ್ಟಿಸುತ್ತಾ ಮುಂದೆ-ಮುಂದೆ ಬರುತ್ತಿರುವ ಪರಮಕ್ರುದ್ಧರಾಗಿದ್ದ ದ್ರೋಣರನ್ನು ನೋಡಿದ ಯುಧಿಷ್ಠಿರನು ದ್ರೋಣರನ್ನು ಎದುರಿಸುವ ವಿಧಾನವು ಹೇಗೆಂಬುದರ ಬಗೆಗೆ ಬಹಳವಾಗಿ ಚಿಂತಿಸಿದನು. ಆ ಸಮಯದಲ್ಲಿ ಬೇರೆ ಯಾರೂ ದ್ರೋಣರನ್ನು ತಡೆದು ನಿಲ್ಲಿಸಲು ಸಾಧ್ಯವಾಗುವುದಿಲ್ಲವೆಂದು ನಿಶ್ಚಯಿಸಿದ ಯುಧಿಷ್ಠಿರನು ಸಹಿಸಲಾಗದ, ಅತ್ಯಂತಗುರುತರವಾದ (ದ್ರೋಣರನ್ನು ಎದುರಿಸುವ) ಕಾರ್ಯವನ್ನು ಸುಭದ್ರೆಯ ಮಗನಾದ ಅಭಿಮನ್ಯುವಿಗೆ ಒಪ್ಪಿಸಿದನು.

ಅಮಿತತೇಜಸ್ವಿಯಾದ ಅಭಿಮನ್ಯುವು ವಸುದೇವನ ಮಗನಾದ ಶ್ರೀಕೃಷ್ಣನಿಗೆ ಮತ್ತು ಅರ್ಜುನನಿಗೆ ಯಾವುದರಲ್ಲಿಯೂ ಕಡಿಮೆಯವನಾಗಿರಲಿಲ್ಲ. ಆದುದರಿಂದಲೇ ಯುಧಿಷ್ಠಿರನು ಶತ್ರುವೀರಸಂಹಾರಕನಾದ ಅಭಿಮನ್ಯುವಿನೊಡನೆ ಈ ಮಾತನ್ನು ಹೇಳಿದನು:

"ಮಗು! ಸಂಶಪ್ತಕರೊಡನೆ ಯುದ್ಧಮಾಡಲು ಹೋಗಿರುವ ಅರ್ಜುನನು ಹಿಂದಿರುಗಿದನಂತರ ಯಾವ ಕಾರಣದಿಂದಲೂ ನಮ್ಮನ್ನು ನಿಂದಿಸಬಾರದು. (ಚಕ್ರವ್ಯೂಹವನ್ನು ಭೇದಿಸಲಾಗದ ಭೀರುಗಳೆಂದು ನಮ್ಮನ್ನು ತೆಗಳಬಾರದು.) ಆ ರೀತಿಯಲ್ಲಿ ನೀನು ಈಗ ಕಾರ್ಯಮಾಡಬೇಕಾಗಿದೆ. ನಮ್ಮ ವಿಷಯವಾಗಿ ಹೇಳುವುದಾದರೆ ಇಲ್ಲಿರುವ ನಮ್ಮಲ್ಲಿ ಯಾರೂ ಚಕ್ರವ್ಯೂಹವನ್ನು ಭೇದಿಸುವ ಪ್ರಕ್ರಿಯೆಯನ್ನು ತಿಳಿದವರಾಗಿಲ್ಲ.

**ತ್ವಂ ವಾರ್ಜುನೋ ವಾ ಕೃಷ್ಣೋ ವಾ ಭಿನ್ದ್ಯಾತ್ಪ್ರದ್ಯುಮ್ನ ಏವ ವಾ।**
**ಚಕ್ರವ್ಯೂಹಂ ಮಹಾಬಾಹೋ ಪಞ್ಚಮೋ ನೋಪಪದ್ಯತೇ ॥೧೫॥**

ಮಹಾಬಾಹುವೇ! ನೀನು, ಅರ್ಜುನ, ಶ್ರೀಕೃಷ್ಣ ಅಥವಾ ಪ್ರದ್ಯುಮ್ನ

ಈ ನಾಲ್ವರೇ ಚಕ್ರವ್ಯೂಹವನ್ನು ಭೇದಿಸಬಲ್ಲರು. ಐದನೆಯವನಂತೂ ಖಂಡಿತವಾಗಿಯೂ ಇರುವುದಿಲ್ಲ. ಈ ನಾಲ್ವರಿಗೆ ಮಾತ್ರವೇ ಚಕ್ರವ್ಯೂಹವನ್ನು ಭೇದಿಸುವ ರಹಸ್ಯವು ತಿಳಿದಿರುತ್ತದೆ.

**ಅಭಿಮನ್ಯೋ ವರಂ ತಾತ ಯಾಚತಾಂ ದಾತುಮರ್ಹಸಿ ।**
**ಪಿತೃಣಾಂ ಮಾತುಲಾನಾಂ ಚ ಸೈನ್ಯಾನಾಂ ಚೈವ ಸರ್ವಶಃ ॥೧೬॥**



ಮಗು ಅಭಿಮನ್ಯು! ಈ ಅಮೋಘವರಕ್ಕಾಗಿ ನಿನ್ನ ತಂದೆಗಳೂ, ಸೋದರಮಾವಂದಿರೂ ಮತ್ತು ಸರ್ವಸೈನಿಕರೂ ನಿನ್ನನ್ನು ಯಾಚನೆ ಮಾಡುತ್ತಿದ್ದಾರೆ. ಚಕ್ರವ್ಯೂಹವನ್ನು ಭೇದಿಸುತ್ತೇನೆಂಬ ಈ ಅಮೋಘವರವನ್ನು ಅವರಿಗೆ ನೀನು ದಯಪಾಲಿಸುವುದು ಯೋಗ್ಯವಾಗಿದೆ.

**ಧನಂಜಯೋ ಹಿ ನಸ್ತಾತ ಗರ್ಹಯೇದೇತ್ಯ ಸಂಯುಗಾತ್ ।**
**ಕ್ಷಿಪ್ರಮಸ್ತ್ರಂ ಸಮಾದಾಯ ದ್ರೋಣಾನೀಕಂ ವಿಶಾತಯ ॥೧೭॥**

ನಾವೇನಾದರೂ ಈಗ ಚಕ್ರವ್ಯೂಹವನ್ನು ಭೇದಿಸದಿದ್ದರೆ ಯುದ್ಧದಿಂದ ಹಿಂದಿರುಗಿಬಂದ ಅರ್ಜುನನು ನಮ್ಮನ್ನು ನಿಂದಿಸಿಯಾನು. ಅದಕ್ಕೆ ಅವಕಾಶವಿಲ್ಲದಂತೆ ಈ ಕೂಡಲೇ ಶಸ್ತ್ರವನ್ನು ತೆಗೆದುಕೊಂಡು ದ್ರೋಣರ ಸೈನ್ಯವನ್ನು ವಿನಾಶಗೊಳಿಸು.”

"ಮಹಾರಾಜ! ನಾನು ನನ್ನ ಪಿತೃವರ್ಯರ ವಿಜಯದ ಆಕಾಂಕ್ಷೆಯಿಂದ ಸುದೃಢವೂ, ಅತ್ಯುಗ್ರವೂ, ಶ್ರೇಷ್ಠವೂ ಆಗಿರುವ ದ್ರೋಣರ ಸೇನಾವ್ಯೂಹದೊಳಕ್ಕೆ ತಡಮಾಡದೆ ನುಗ್ಗಿಹೋಗುತ್ತೇನೆ. ನನ್ನ ತಂದೆಯು ನನಗೆ ಚಕ್ರವ್ಯೂಹದ ಭೇದನೋಪಾಯವನ್ನು ಮಾತ್ರವೇ ಹೇಳಿಕೊಟ್ಟಿರುತ್ತಾನೆ. ಆದರೆ ವ್ಯೂಹದೊಳಗೆ ನುಗ್ಗಿಹೋದನಂತರ ನಾನು ಯಾವುದಾದರೂ ಆಪತ್ತಿಗೆ ಸಿಕ್ಕಿದಲ್ಲಿ ಹೊರಕ್ಕೆ ಬರಲು ಸರ್ವಥಾ ನನಗೆ ಸಾಧ್ಯವಾಗಲಾರದು."

"ಯೋಧಶ್ರೇಷ್ಠನೇ! ಮೊದಲು ನೀನು ವ್ಯೂಹವನ್ನು ಭೇದಿಸು. ನಮ್ಮೆಲ್ಲರಿಗೂ ಒಳನುಗ್ಗಲು ಒಂದು ಅವಕಾಶವನ್ನು ಮಾಡಿಕೊಡು. ವ್ಯೂಹವನ್ನು ಭೇದಿಸಿಕೊಂಡು ನೀನು ಯಾವ ಮಾರ್ಗವಾಗಿ ಒಳನುಗ್ಗುವೆಯೋ ಅದೇ ಮಾರ್ಗದ ಮೂಲಕವಾಗಿ ನಾವೆಲ್ಲರೂ ನಿನ್ನನ್ನು ಅನುಸರಿಸಿಯೇ ಬರುತ್ತೇವೆ. ಯುದ್ಧಸ್ಥಳದಲ್ಲಿ ನಾವು ನಿನ್ನನ್ನು ಅರ್ಜುನನಿಗೆ ಸಮಾನನನ್ನಾಗಿ ಮಾನ್ಯಮಾಡುತ್ತೇವೆ. ಎಲ್ಲ ಕಡೆಗಳಲ್ಲಿಯೂ ನಾವು ನಮ್ಮ ದೃಷ್ಟಿಯನ್ನು ಹರಿಸುತ್ತಾ, ನಿನಗೆ ಸ್ವಲ್ಪವೂ ಅಪಾಯವಾಗದ ರೀತಿಯಲ್ಲಿ ನಿನ್ನನ್ನು ರಕ್ಷಿಸುತ್ತಾ ನಿನ್ನನ್ನೇ ಹಿಂಬಾಲಿಸಿಬರುತ್ತೇವೆ. (ಆದುದರಿಂದ ಅಪಾಯದ ಸಮಯದಲ್ಲಿ ವ್ಯೂಹದಿಂದ ಹೊರಬರುವ ಪ್ರಕ್ರಿಯೆಯು ತಿಳಿಯದೇ ಇರುವುದಕ್ಕಾಗಿ ನೀನು ಉತ್ಸಾಹಶೂನ್ಯನಾಗಬೇಕಾಗಿಲ್ಲ)"

ಯುಧಿಷ್ಠಿರನು ಅಭಿಮನ್ಯುವನ್ನು ಈ ರೀತಿಯಲ್ಲಿ ಪ್ರೋತ್ಸಾಹಿಸಿದನಂತರ ಭೀಮನು ಅಭಿಮನ್ಯುವಿಗೆ ಹೇಳಿದನು:

"ಕುಮಾರ! ನಾನು ನಿನ್ನನ್ನು ಹಿಂಬಾಲಿಸುತ್ತೇನೆ. ಅಂತೆಯೇ ಧೃಷ್ಟದ್ಯುಮ್ನ, ಸಾತ್ಯಕಿ, ಪಾಂಚಾಲರು, ಕೇಕಯರು, ಮತ್ಸ್ಯರು, ಪ್ರಭದ್ರಕರು– ಈ ಎಲ್ಲರೂ ನಿನ್ನನ್ನೇ ಹಿಂಬಾಲಿಸಿ ಬರುತ್ತಾರೆ. ನಿನಗೆ ಚಕ್ರವ್ಯೂಹಭೇದನ ಪ್ರಕ್ರಿಯೆಯು ತಿಳಿದಿರುವುದರಿಂದ ನೀನು ಅಲ್ಲಲ್ಲಿ ಸ್ವಲ್ಪ-ಸ್ವಲ್ಪ ವ್ಯೂಹವನ್ನು ಒಂದು ಬಾರಿ ಭೇದಿಸು. ನಮಗೆ ಸ್ವಲ್ಪವೇ ಎಡೆಸಿಕ್ಕಿದರೂ ಸಾಕು. ನಾವು ಅಲ್ಲಿರುವ ಪ್ರಮುಖರಾದ ಯೋಧರನ್ನು ಸಂಹರಿಸುತ್ತಾ ಚಕ್ರವ್ಯೂಹವನ್ನೇ ಧ್ವಂಸಮಾಡಿಬಿಡುತ್ತೇವೆ."

(ತನ್ನ ದೊಡ್ಡಪ್ಪಂದಿರಾದ ಯುಧಿಷ್ಠಿರ-ಭೀಮರು ಈ ರೀತಿಯಲ್ಲಿ ಆಶ್ವಾಸನೆಯನ್ನಿತ್ತು ಪ್ರೋತ್ಸಾಹಿಸಿದರೂ ಆಪತ್ತಿನ ಸಮಯದಲ್ಲಿ ವ್ಯೂಹದಿಂದ ಹೊರಬರಲು ಸಾಧ್ಯವಾಗದೆಂಬ ವಿಷಯವು ಅಭಿಮನ್ಯುವಿನ ಮನಸ್ಸಿನಲ್ಲಿ ದೃಢವಾಗಿದ್ದಿತು. ಇಲ್ಲಿ ಅವನು ಕೊಟ್ಟಿರುವ ಉಪಮೆಯೇ ಅದನ್ನು ಸೂಚಿಸುತ್ತದೆ.)

**ಅಹಮೇತತ್ಪ್ರವೇಕ್ಷ್ಯಾಮಿ ದ್ರೋಣಾನೀಕಂ ದುರಾಸದಮ್ ।**
**ಪತಙ್ಗ ಇವ ಸಂಕ್ರುದ್ಧೋ ಜ್ವಲಿತಂ ಜಾತವೇದಸಮ್ ॥೨೪॥**

"ಮಹಾರಾಜ! (ನಾನು ಚಕ್ರವ್ಯೂಹವನ್ನು ಪ್ರವೇಶಿಸುವ ವಿಷಯವಾಗಿ ಪುನಃ ಹೇಳುವ ಕಾರಣವಿಲ್ಲ.) ಕೋಪಗೊಂಡ ಪತಂಗದ ಹುಳುವು ಪ್ರಜ್ವಲಿಸುವ ಯಜ್ಞೇಶ್ವರನನ್ನು ಪ್ರವೇಶಿಸುವಂತೆ–ಆ ದುರಾಸದವಾದ ದ್ರೋಣರ ಸೈನ್ಯವನ್ನು ಈಗಲೇ ಪ್ರವೇಶಿಸುತ್ತೇನೆ.

ನನ್ನ ತಾಯಿಯ ವಂಶಕ್ಕೂ ಮತ್ತು ತಂದೆಯ ವಂಶಕ್ಕೂ ಹಿತಕರವಾಗುವಂತಹ ಕಾರ್ಯವನ್ನೇ ನಾನೀಗ ಮಾಡುತ್ತೇನೆ. ಇದರಿಂದ ನನ್ನ ಸೋದರಮಾವನಾದ ಶ್ರೀಕೃಷ್ಣನಿಗೂ-ತಂದೆಯಾದ ಅರ್ಜುನನಿಗೂ ಸಂತೋಷವನ್ನು ಉಂಟುಮಾಡುತ್ತೇನೆ.

ಇನ್ನೂ ಬಾಲಕನಾಗಿರುವ ನನ್ನಿಂದ ಶತ್ರುಸೈನ್ಯಗಳು ಸಾಮೂಹಿಕವಾಗಿ ಸಂಹರಿಸಲ್ಪಡುವುದನ್ನು ಇಂದು ಸರ್ವಪ್ರಾಣಿಗಳೂ ನೋಡಲಿವೆ.

**ನಾಹಂ ಪಾರ್ಥೇನ ಜಾತಃ ಸ್ಯಾಂ ನ ಚ ಜಾತಃ ಸುಭದ್ರಯಾ ।**
**ಯದಿ ಮೇ ಸಂಯುಗೇ ಕಶ್ಚಿಜ್ಜೀವಿತೋ ನಾದ್ಯ ಮುಚ್ಯತೇ ॥೨೭॥**

ಇಂದಿನ ಯುದ್ಧದಲ್ಲಿ ನನ್ನೊಡನೆ ಯುದ್ಧಮಾಡಲು ಬರುವವರಲ್ಲಿ ಒಬ್ಬನಾದರೂ ಜೀವವನ್ನು ಉಳಿಸಿಕೊಂಡು ಹೋದದ್ದೇ ಆದರೆ-ಹಾಗೆ ಹೋಗಲು ನಾನು ಅವಕಾಶವಿತ್ತುದೇ ಆದರೆ–ನಾನು ಅರ್ಜುನನಿಂದ ಹುಟ್ಟಿದವನಾಗುವುದಿಲ್ಲ. ವೀರಮಾತೆಯಾದ ಸುಭದ್ರೆಯಲ್ಲಿಯೂ ನಾನು ಜನ್ಮಪಡೆದವನೂ ಆಗುವುದಿಲ್ಲ. (ನನ್ನೆದುರಾಗಿ ಸಿಕ್ಕಿದ ಯಾವನೂ ಜೀವಸಹಿತವಾಗಿ ಹೋಗಲಾರನು.)

**ಯದಿ ಚೈಕರಥೇನಾಹಂ ಸಮಗ್ರಂ ಕ್ಷತ್ರಮಣ್ಡಲಮ್ ।**
**ನ ಕರೋಮ್ಯಷ್ಟಧಾ ಯುದ್ಧೇ ನ ಭವಾಮ್ಯರ್ಜುನಾತ್ಮಜಃ ॥೨೮॥**

ಒಂದೇ ರಥದ ಸಹಾಯದಿಂದ ನಾನೇನಾದರೂ ಸಮಗ್ರವಾದ ಕ್ಷತ್ರಿಯರ ಸಮೂಹವನ್ನು ಎಂಟು ಭಾಗಗಳನ್ನಾಗಿ ಮಾಡದೇ ಇದ್ದರೆ ನಾನು ವೀರನಾದ ಅರ್ಜುನನ ಮಗನೇ ಅಲ್ಲ.”

ಅಭಿಮನ್ಯುವಿನ ವೀರವಾಣಿಯನ್ನು ಕೇಳಿ ಸಂತುಷ್ಟನಾದ ಯುಧಿಷ್ಠಿರನು ಹೇಳಿದನು:

“ಸೌಭದ್ರ! ವೀರೋಚಿತವಾದ ಈ ಮಾತುಗಳನ್ನು ಹೇಳುತ್ತಿರುವಂತೆಯೇ ನಿನ್ನ ಬಲವೂ ವರ್ಧಿಸಲಿ. ದುರಾಸದವಾದ (ದುರ್ಭೇದ್ಯವಾದ) ದ್ರೋಣರ ವ್ಯೂಹವನ್ನು ನೀನು ಭೇದಿಸಲು ಉತ್ಸುಕನಾಗಿರುವೆಯಲ್ಲವೇ? ಆದುದರಿಂದ ನಿನ್ನ ಬಲವು ಬಹುಪಾಲು ವರ್ಧಿಸಲೇಬೇಕು. ದ್ರೋಣರ ಚಕ್ರವ್ಯೂಹವು ಪುರುಷವ್ಯಾಘ್ರರಾದ, ಮಹಾಧನುಷ್ಮಂತರಾದ, ಮಹಾಬಲರಾದ ಸಾಧ್ಯ-ರುದ್ರ-ಮರುತ್ತುಗಳಿಗೆ ಸಮಾನಬಲರಾದ ಮತ್ತು ವಸು, ಅಗ್ನಿ ಮತ್ತು ಸೂರ್ಯರಿಗೆ ಸಮಾನಪರಾಕ್ರಮಿಗಳಾದ ಕುರುಯೋಧರಿಂದ ರಕ್ಷಿಸಲ್ಪಡುತ್ತಿದೆ. ಅಂತಹ ದುರಾಸದವಾದ ದ್ರೋಣಾನೀಕವನ್ನು ಭೇದಿಸಲು ಉತ್ಸುಕನಾಗಿರುವ ನಿನ್ನ ಬಲವು ಅಧಿಕಗೊಳ್ಳಲಿ.”

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ತನ್ನ ದೊಡ್ಡಪ್ಪನಾದ ಯುಧಿಷ್ಠಿರನು ಹೇಳಿದ ಮಾತುಗಳನ್ನು ಕೇಳಿದನಂತರ ಅಭಿಮನ್ಯುವು ತನ್ನ ಸಾರಥಿಗೆ ಹೇಳಿದನು;

“ಸುಮಿತ್ರ! ನೀನು ಕುದುರೆಗಳನ್ನು ದ್ರೋಣರ ಸೈನ್ಯದ ಕಡೆಗೆ ಶೀಘ್ರವಾಗಿ ದೌಡಾಯಿಸು.”

ಇ೫ನೆಯ ಅಧ್ಯಾಯವು ಮುಗಿಯಿತು.

೩೬ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನ ಯುದ್ಧೋತ್ಸಾಹ: ಅವನಿಂದ ಕೌರವರ ಚತುರಂಗಬಲದ ಸಂಹಾರ

ಸಂಜಯನು ಮುಂದುವರಿದು ಹೇಳುತ್ತಾನೆ:

“ಮಹಾರಾಜ! ನಾನು ಹಿಂದೆ ಹೇಳಿದಂತೆ ಧೀಮಂತನಾದ ಧರ್ಮ

ರಾಜನ ಮಾತನ್ನು ಕೇಳಿ ಸುಭದ್ರೆಯ ಮಗನಾದ ಅಭಿಮನ್ಯುವು ದ್ರೋಣರ ಸೈನ್ಯದ ಬಳಿಗೆ ಹೋಗುವಂತೆ ಸಾರಥಿಯನ್ನು ಪ್ರಚೋದಿಸಿದನು. ಅಭಿಮನ್ಯುವು ಸಾರಥಿಯನ್ನು ಕುರಿತು "ಹೊರಡು-ಹೊರಡು"–ಎಂದು ಅವಸರಪಡಿಸುತ್ತಿರಲಾಗಿ ಸಾರಥಿಯು ಅಭಿಮನ್ಯುವಿಗೆ ಈ ಮಾತುಗಳನ್ನು ಹೇಳಿದನು:



"ಆಯುಷ್ಮಂತನೇ! ಪಾಂಡವರು ನಿನ್ನ ಮೇಲೆ ಬಹಳ ಭಾರವಾದ ಹೊರೆಯನ್ನು ಹೊರಿಸಿದ್ದಾರೆ. ಕ್ಷಣಕಾಲ ನೀನು ಮಾಡಬೇಕಾಗಿರುವ ಮಹಾಕಾರ್ಯದ ವಿಷಯವಾಗಿ ಕೂಲಂಕಷವಾಗಿ ಸಮಾಲೋಚಿಸಿ ಅನಂತರದಲ್ಲಿ ದ್ರೋಣರೊಡನೆ ಯುದ್ಧಮಾಡುವುದು ಯೋಗ್ಯವಾಗಿ ಕಾಣುತ್ತದೆ.

**ಆಚಾರ್ಯೋ ಹಿ ಕೃತೀ ದ್ರೋಣಃ ಪರಮಾಸ್ತ್ರೇ ಕೃತಶ್ರಮಃ ।**
**ಅತ್ಯಂತಸುಖಸಂವೃದ್ಧಸ್ತ್ವಂ ಚಾಯುದ್ಧವಿಶಾರದಃ ॥೪॥**

ರಾಜಕುಮಾರ! ದ್ರೋಣರು ಅಸ್ತ್ರವಿದ್ಯೆಯಲ್ಲಿ ಶ್ರೇಷ್ಠರಾದ ವಿದ್ವಾಂಸರಾಗಿರುತ್ತಾರೆ. ಶ್ರೇಷ್ಠವಾದ ಅಸ್ತ್ರಗಳ ಅಭ್ಯಾಸದಲ್ಲಿ ಅವರಿಗೆ ವಿಶೇಷ ವಾದ ಪರಿಶ್ರಮವಿದೆ. ನೀನಾದರೋ ಅತ್ಯಂತ ಸುಖದಲ್ಲಿ ಬೆಳೆದವನು. ಕಷ್ಟವೆಂದರೇನೆಂಬುದನ್ನೇ ತಿಳಿಯದೇ ಇರತಕ್ಕವನು. ಕೋಮಲಾಂಗನು. ಯುದ್ಧದ ಕಲೆಯಲ್ಲಿಯೂ ದ್ರೋಣರಿಗೆ ಇರುವಷ್ಟು ಪರಿಶ್ರಮವು ನಿನಗೆ

ಇನ್ನೂ ಪ್ರಾಪ್ತವಾಗಿಲ್ಲ.” ಸೂತನ ಈ ಮಾತನ್ನು ಕೇಳಿ ಗಹ-ಗಹಿಸಿ ನಗುತ್ತಾ ಅಭಿಮನ್ಯುವು ಹೇಳಿದನು:

**ಸಾರಥೇ ಕೋ ನ್ವಯಂ ದ್ರೋಣಃ ಸಮಗ್ರಂ ಕ್ಷೇತ್ರಮೇವ ವಾ ।**
**ಐರಾವತಗತಂ ಶಕ್ರಂ ಸಹಾಮರಗಣೈರಹಮ್ ॥೫॥**
**ಅಥವಾ ರುದ್ರಮೀಶಾನಂ ಸರ್ವಭೂತಗಣಾರ್ಚಿತಮ್ ।**
**ಯೋಧಯೇಯಂ ರಣಮುಖೇ ನ ಮೇ ಕ್ಷತ್ರೇಽದ್ಯವಿಸ್ಮಯಃ ॥೬॥**

“ಸೂತ! ಏನು ಮಾತನಾಡುತ್ತಿರುವೆ? ಈ ದ್ರೋಣರು ನನಗೆ ಎಷ್ಟರವರು? (ನನಗೆ ಇವರು ಯುದ್ಧದಲ್ಲಿ ಸಮಾನರೆಂದು ಇವರನ್ನು ನಾನು ಖಂಡಿತವಾಗಿಯೂ ಪರಿಗಣಿಸುವುದಿಲ್ಲ.) ನನ್ನ ಪರಾಕ್ರಮದ ಪರಿಮಿತಿಯನ್ನು ನಿನಗೆ ಸ್ವಲ್ಪಮಟ್ಟಿಗೆ ಹೇಳುತ್ತೇನೆ: ಕೇಳು. ಐರಾವತವನ್ನು ಹತ್ತಿ ದೇವತೆಗಳ ಸಹಿತನಾಗಿ ಬರುವ ಇಂದ್ರನನ್ನೂ, ಸರ್ವಭೂತಗಣಗಳಿಂದಲೂ ಅರ್ಚಿತನಾದ ರುದ್ರನಾಮಕನಾದ ಈಶಾನಮೂರ್ತಿಯನ್ನೂ ಎದುರಿಸಿ ನಾನು ಯುದ್ಧಮಾಡಬಲ್ಲೆನು. ಆದುದರಿಂದ ಈ ಸಮಯದಲ್ಲಿ ಈ ಕ್ಷತ್ರಿಯರೊಡನೆ ಏಕಾಕಿಯಾಗಿ ಯುದ್ಧಮಾಡಲು ಹೊರಟಿರುವ ನನಗೆ ಯಾವವಿಧವಾದ ಆಶ್ಚರ್ಯವೂ ಕಂಡುಬರುತ್ತಿಲ್ಲ.

**ನ ಮಮೈತದ್ದ್ವಿಷತ್ಸೈನ್ಯಂ ಕಲಾಮರ್ಹತಿ ಷೋಡಶೀಮ್ ।**
**ಅಪಿ ವಿಶ್ವಜಿತಂ ವಿಷ್ಣುಂ ಮಾತುಲಂ ಪ್ರಾಪ್ಯ ಸೂತಜ ॥೭॥**
**ಪಿತರಂ ಚಾರ್ಜುನಂ ಯುದ್ಧೇ ನ ಭೀರ್ಮಾಮುಪಯಾಸ್ಯತಿ ।**

ನಿಜವಾಗಿ ಹೇಳುವುದಾದರೆ ಶತ್ರುಗಳ ಈ ಅಪಾರಸೈನ್ಯವೂ ನನ್ನ ಹದಿನಾರನೆಯ ಒಂದು ಭಾಗದ ಅಂಶಕ್ಕೂ ಸಮನಲ್ಲ. ಹೆಚ್ಚೇನು ಹೇಳಲಿ? ಸೂತ! ವಿಶ್ವಜಿತನಾದ ನನ್ನ ಸೋದರಮಾವನಾದ ವಿಷ್ಣುರೂಪನಾದ ಶ್ರೀಕೃಷ್ಣನೇ ಪ್ರತಿಪಕ್ಷವನ್ನು ಹಿಡಿದು ನನ್ನೊಡನೆ ಯುದ್ಧಕ್ಕೆ ಬಂದರೂ ಮತ್ತು ತಂದೆಯಾದ ಅರ್ಜುನನೇ ಬಂದರೂ ಭಯವೆಂಬುದು ನನ್ನ ಹತ್ತಿರಕ್ಕೂ ಸುಳಿಯುವುದಿಲ್ಲ. (ಹೀಗಿರುವಾಗ ದ್ರೋಣರ ವಿಷಯವಾಗಿ ಅಥವಾ ಅವರ ಬಳಿಯಲ್ಲಿರುವ ಅಪಾರಸೈನ್ಯದ ವಿಷಯವಾಗಿ ಯೋಚಿಸುವುದೇನಿದೆ?)”

ಮಹಾರಾಜ! ಅಭಿಮನ್ಯುವು ಹೀಗೆಂಬುದಾಗಿ ಹೇಳಿ ಸಾರಥಿಯು

ಹೇಳಿದ ಮಾತನ್ನು ಗಣನೆಗೆ ತೆಗೆದುಕೊಳ್ಳದೆ "ಶೀಘ್ರವಾಗಿ ನೀನು ದ್ರೋಣರ ಸೈನ್ಯದ ಕಡೆಗೆ ಹೊರಡು"–ಎಂದೇ ಪುನಃ ಹೇಳಿದನು.

ಅಭಿಮನ್ಯುವಿನ ಮಾತಿನಿಂದ ಸಾರಥಿಯ ಮನಸ್ಸು ಅಷ್ಟು ಪ್ರಸನ್ನವಾಗಲಿಲ್ಲ. ಆದರೂ ಅಭಿಮನ್ಯುವಿನ ಪ್ರಚೋದನೆಯಂತೆ ಸುವರ್ಣ ಮಯವಾದ ಆಭರಣಗಳಿಂದ ಸಮಲಂಕೃತವಾಗಿದ್ದ ಮೂರು ವರ್ಷ ವಯಸ್ಸಿನ ಕುದುರೆಗಳನ್ನು ಶೀಘ್ರಗತಿಯಲ್ಲಿ ದ್ರೋಣರ ಕಡೆಗೆ ಓಡಿಸಿಕೊಂಡು ಹೋದನು. ಸುಮಿತ್ರನಿಂದ ದ್ರೋಣರ ಕಡೆಗೆ ಓಡಿಸಲ್ಪಟ್ಟ ಆ ಕುದುರೆಗಳು–ಮಹಾವೇಗಯುಕ್ತರಾಗಿಯೂ ಪರಾಕ್ರಮಿಗಳಾಗಿಯೂ ಇದ್ದ ದ್ರೋಣರ ಕಡೆಗೆ ಓಡಿದುವು. ಈ ಪ್ರಕಾರವಾಗಿ ರಭಸದಿಂದ ಬರುತ್ತಿದ್ದ ಅಭಿಮನ್ಯುವನ್ನು ಕಂಡು ದ್ರೋಣಪುರಃಸರರಾದ ಎಲ್ಲ ಕೌರವರೂ ಮುಂದೆ ಬಂದು ನಿಂತರು. ಪಾಂಡವರು ಅಭಿಮನ್ಯುವನ್ನು ಅನುಸರಿಸಿ ಅವನ ಹಿಂದೆ ಹೋದರು. ಅಭಿಮನ್ಯುವಿನ ಎತ್ತರವಾದ ಮತ್ತು ಶ್ರೇಷ್ಠವಾದ ಧ್ವಜದಲ್ಲಿ ಕಣಿಗಿಲೇ ಗಿಡದ ಚಿಹ್ನೆಯಿದ್ದಿತು. ಅರ್ಜುನನಿಗಿಂತಲೂ ಶ್ರೇಷ್ಠನೆನಿಸಿದ್ದ ಅಭಿಮನ್ಯುವು ಸುವರ್ಣಮಯವಾದ ಕವಚವನ್ನು ಧರಿಸಿದ್ದನು. ಸಿಂಹದ ಶಿಶುವು ಆನೆಯನ್ನು ಕೊಲ್ಲಲು ಹೋಗುವಂತೆ ದ್ರೋಣಪ್ರಮುಖರಾದ ಮಹಾರಥರನ್ನು ಜಯಿಸುವ ಇಚ್ಛೆಯಿಂದ ಅಭಿಮನ್ಯುವು ಅವರ ಮೇಲೆ ದಾಳಿಮಾಡಲು ಉಪಕ್ರಮಿಸಿದನು.

ದ್ರೋಣಪ್ರಮುಖರಾದ ಕುರುಯೋಧರು ಅಭಿಮನ್ಯುವು ತಮ್ಮಿಂದ ಇಪ್ಪತ್ತು ಹೆಜ್ಜೆಗಳ ದೂರದಲ್ಲಿದ್ದಾಗಲೇ ನಾನಾವಿಧವಾದ ಆಯುಧಗಳಿಂದ ಅವನನ್ನು ಪ್ರಹರಿಸಲು ತೊಡಗಿದರು. ಸಮುದ್ರದಲ್ಲಿ ಗಂಗೆಯ ಸಂಗಮಸ್ಥಾನದಲ್ಲಿ ಉದ್ಭೂತವಾಗುವ ಭಯಂಕರವಾದ ಸುಳಿಯಂತೆ– ಒಂದು ಮುಹೂರ್ತಕಾಲಪರ್ಯಂತವಾಗಿ ಕೌರವರ ಸೈನ್ಯದಲ್ಲಿ ದೊಡ್ಡದಾದ ಕೋಲಾಹಲವುಂಟಾಯಿತು. ಯುದ್ಧದಲ್ಲಿಯೇ ನಿಮಗ್ನರಾಗಿ ಅನ್ಯೋನ್ಯವಾಗಿ ಬಾಣಗಳಿಂದಲೂ, ಇತರ ಆಯುಧಗಳಿಂದಲೂ ಪ್ರಹಾರಗಳನ್ನು ಕೊಡುತ್ತಿದ್ದ ಶೂರರ ಭಯಂಕರವಾದ ಆ ಸಂಗ್ರಾಮವು ಅತ್ಯಂತ ದಾರುಣವಾಗಿ ಪರಿಣ ಮಿಸಿತು. ಅತಿಭಯಂಕರವಾದ ಆ ಮಹಾಯುದ್ಧವು ನಡೆಯುತ್ತಿರಲಾಗಿ ದ್ರೋಣರು ನೋಡುತ್ತಿದ್ದಂತೆಯೇ ಅಭಿಮನ್ಯುವು ಚಕ್ರವ್ಯೂಹವನ್ನು ಭೇದಿಸಿ

ಒಳಕ್ಕೆ ನುಗ್ಗಿದನು. ವ್ಯೂಹದೊಳಗೆ ಪ್ರವೇಶಿಸಿ ಶತ್ರುಸಮೂಹವನ್ನು ಅನವರತವಾಗಿ ಧ್ವಂಸಮಾಡುತ್ತಿದ್ದ ಮಹಾಬಲನಾದ ಅಭಿಮನ್ಯುವನ್ನು ಆಯುಧಗಳನ್ನೆತ್ತಿಕೊಂಡು ಸಜ್ಜಾಗಿದ್ದ ಗಜಾಶ್ವ-ರಥ-ಪದಾತಿಸೈನಿಕರು ಸುತ್ತುವರಿದರು. ನಾನಾವಿಧವಾದ ರಣವಾದ್ಯಗಳನ್ನು ಬಾರಿಸುತ್ತಾ, ಕೋಪ ದಿಂದ ಗುರುಗುಟ್ಟುತ್ತಾ, ಗಟ್ಟಿಯಾಗಿ ಗರ್ಜನೆಮಾಡುತ್ತಾ, ಹೂಂಕರಿಸುತ್ತಾ, ಸಿಂಹನಾದಮಾಡುತ್ತಾ, 'ನಿಲ್ಲು; ನಿಲ್ಲು'–ಎಂದು ಕೂಗಿಕೊಳ್ಳುತ್ತಾ, ಘೋರವಾದ ಹಲಹಲಾಶಬ್ದದೊಡನೆ 'ಮುಂದೆ ಬರಬೇಡ: ಅಲ್ಲಿಯೇ ನಿಲ್ಲು; ನನ್ನ ಹತ್ತಿರಕ್ಕೆ ಬಾ. ನಿನ್ನ ಶತ್ರುವಾದ ನಾನು ಇಲ್ಲಿಯೇ ಇದ್ದೇನೆ.'– ಇವೇ ಮುಂತಾಗಿ ಪದೇ-ಪದೇ ಹೇಳುತ್ತಾ ಆನೆಗಳ ಘೀಂಕಾರ ಶಬ್ದಗಳಿಂದಲೂ, ಗಂಟೆಗಳ ಶಬ್ದಗಳಿಂದಲೂ, ಗಹ-ಗಹಿಸಿ ನಗುವಿಕೆ ಯಿಂದಲೂ, ಚಪ್ಪಾಳೆತಟ್ಟುವಿಕೆಯಿಂದಲೂ, ರಥಚಕ್ರಗಳ ಗಡ-ಗಡಾಶಬ್ದ ಗಳಿಂದಲೂ ಭೂಮಿಯನ್ನೇ ಶಬ್ದಮಯವನ್ನಾಗಿ ಮಾಡುತ್ತಾ ಕುರುಯೋಧರು ಅಭಿಮನ್ಯುವನ್ನು ಆಕ್ರಮಿಸಿದರು. ವೀರನಾದ, ಶೀಘ್ರಯೋಧಿಯಾದ, ಮಹಾಬಲನಾದ, ಬಹಳ ವೇಗವಾಗಿ ಅಸ್ತ್ರಗಳನ್ನು ಬಿಡುವ ಸಾಮರ್ಥ್ಯವನ್ನು ಹೊಂದಿದ್ದ ಮರ್ಮಜ್ಞನಾದ ಅಭಿಮನ್ಯುವು ಮರ್ಮಭೇದಿಗಳಾದ ಬಾಣ ಗಳಿಂದ ಶತ-ಸಹಸ್ರಸಂಖ್ಯೆಯಲ್ಲಿ ತನ್ನ ಮೇಲೆ ಬೀಳಲು ಬರುತ್ತಿದ್ದ ಚತುರಂಗ ಬಲಯುಕ್ತವಾದ ಕುರುಸೈನ್ಯವನ್ನು ಸಂಹರಿಸಲು ಉಪಕ್ರಮಿಸಿದನು. ಅಭಿಮನ್ಯುವಿನ ನಾನಾವಿಧವಾದ ಚಿಹ್ನೆಗಳನ್ನು ಹೊಂದಿದ್ದ ಬಾಣಗಳಿಂದ ಸತತವಾಗಿ ಪ್ರಹೃತರಾಗುತ್ತಿದ್ದ ಸೈನಿಕರು–ದೀಪದ ಹುಳುಗಳು ಬೆಂಕಿಯನ್ನು ಮುತ್ತಲು ಹೋಗುವಂತೆ –ಅಭಿಮನ್ಯುವನ್ನು ಮುತ್ತಲು ಹೋಗಿ ಅವನ ಬಾಣಗಳಿಂದ ಪ್ರಹೃತರಾಗಿ ವಿವಶರಾಗಿ ಭೂಮಿಯ ಮೇಲೆ ಬಿದ್ದು ಸಾಯುತ್ತಿದ್ದರು. ಯಜ್ಞಸಮಯದಲ್ಲಿ ದರ್ಭೆಗಳಿಂದ ಯಜ್ಞವೇದಿಯನ್ನು ಆಸ್ತರಣಮಾಡುವಂತೆ–ಅಭಿಮನ್ಯುವು ಕುರುಯೋಧರ ಶರೀರಗಳಿಂದಲೂ ಶರೀರಗಳ ಅವಯವಗಳಿಂದಲೂ ಭೂಮಿಯನ್ನು ಮುಚ್ಚಿಬಿಟ್ಟನು. ಮಹಾರಾಜ! ಅರ್ಜುನನ ಮಗನಾದ ಅಭಿಮನ್ಯುವು ನಿನ್ನ ಕಡೆಯ ಸಾವಿರಾರು ಸೈನಿಕರ ಮನೋಹರವಾದ ಮತ್ತು ಸುಗಂಧಯುಕ್ತವಾದ ತೋಳುಗಳನ್ನು ಕತ್ತರಿಸಿ ಹಾಕಿದನು. ಆ ತೋಳುಗಳು ಕೇಯೂರಾಂಗದಗಳಿಂದ ಸಮಲಂಕೃತ

ವಾಗಿದ್ದುವು. ಆ ಸೈನಿಕರ ತೋಳುಗಳು ಗೋಧಾಗಳಿಂದಲೂ (ಧನುಸ್ಸಿನ ಹೆದೆಯ ಏಟು ತಗುಲದಿರಲು ತೋಳಿಗೆ ಕಟ್ಟುವ ಚರ್ಮದ ಪಟ್ಟಿ) ಅಂಗುಲಿತ್ರಾಣಗಳಿಂದಲೂ (ಬೆರಳಿಗೆ ಹಾಕಿಕೊಳ್ಳುವ ಚರ್ಮದ ಮುಚ್ಚಳ) ಕೂಡಿದ್ದುವು. ಧನುಸ್ಸುಗಳಿಂದಲೂ, ಬಾಣಗಳಿಂದಲೂ ಕೂಡಿದ್ದುವು. ಕೆಲವರ ತೋಳುಗಳು ಕತ್ತಿಗಳನ್ನೂ, ಗುರಾಣಿಗಳನ್ನೂ, ಅಂಕುಶಗಳನ್ನೂ, ಲಗಾಮುಗಳನ್ನೂ ಹಿಡಿದಿದ್ದುವು. ಕೆಲವರ ತೋಳುಗಳು ತೋಮರಗಳನ್ನೂ, ಗಂಡುಗೊಡಲಿಗಳನ್ನೂ ಧರಿಸಿದ್ದುವು. ಕೆಲವರ ತೋಳುಗಳು ಗದೆಗಳನ್ನೂ, ಲೋಹದ ಚೆಂಡುಗಳನ್ನೂ, ಪ್ರಾಸಗಳನ್ನೂ ಹಿಡಿದಿದ್ದುವು. ಕೆಲವರ ತೋಳು ಗಳು ಋಷ್ಟಿಗಳನ್ನೂ, ತೋಮರಗಳನ್ನೂ ಹೊಂದಿದ್ದುವು. ಹಲವರ ತೋಳು ಗಳು ಭಿಂದಿಪಾಲಗಳನ್ನೂ, ಪರಿಘಗಳನ್ನೂ ಹೊಂದಿದ್ದುವು. ಮತ್ತೆ ಕೆಲವರ ತೋಳುಗಳು ಶ್ರೇಷ್ಠವಾದ ಶಕ್ತ್ಯಾಯುಧಗಳನ್ನೂ, ಕಂಪನಗಳನ್ನೂ ಹೊಂದಿದ್ದುವು. ಕೆಲವರ ತೋಳುಗಳು ಚಾವಟಿಗಳನ್ನೂ, ಮಹಾಶಂಖ ಗಳನ್ನೂ ಹೊಂದಿದ್ದುವು. ಕೆಲವರ ತೋಳುಗಳು ಕುಂತವೆಂಬ ಆಯುಧಗಳನ್ನು ಹೊಂದಿದ್ದುವು. ಮತ್ತೆ ಕೆಲವರ ತೋಳುಗಳು ತಲೆಯ ಕೂದಲನ್ನು ಹಿಡಿದಿದ್ದುವು. ಮತ್ತೆ ಕೆಲವರ ತೋಳುಗಳು ಮುದ್ಗರಗಳನ್ನೂ, ಶತ್ರುವಿನ ಮೇಲೆ ಎಸೆಯಲು ಯೋಗ್ಯವಾದ ಭರ್ಜಿ-ಈಟಿ ಮುಂತಾದುವನ್ನೂ ಧರಿಸಿದ್ದುವು. ನಿನ್ನ ಕಡೆಯ ಸಾವಿರಾರು ಯೋಧರ ಇಂತಹ ತೋಳುಗಳನ್ನು ಅರ್ಜುನನ ಮಗನಾದ ಅಭಿಮನ್ಯುವು ಬಹಳ ಬೇಗ ಕತ್ತರಿಸಿಹಾಕಿದನು. ಗರುಡನಿಂದ ಛಿನ್ನ-ಭಿನ್ನವಾಗಿ ಮಾಡಲ್ಪಟ್ಟು ಕೆಳಗೆ ಬಿದ್ದಿರುವ ಐದುಹೆಡೆಗಳುಳ್ಳ ಸರ್ಪಗಳಿಂದ ಭೂಮಿಯು ಶೋಭಿಸುವಂತೆ—ರಕ್ತದಿಂದ ತೋಯ್ದು ಬಹಳ ಕೆಂಪಾಗಿದ್ದ, ನಾನಾವಿಧವಾದ ಆಯುಧಗಳಿಂದಲೂ, ಅಂಗದ-ಕೇಯೂರ ಗಳಿಂದಲೂ ಸಮಲಂಕೃತವಾಗಿದ್ದು ಪ್ರಕಾಶಮಾನವಾಗಿ ಕಾಣುತ್ತಿದ್ದ ತೋಳುಗಳಿಂದ ಆ ರಣರಂಗವು ಶೋಭಿಸಿತು.

ಅಭಿಮನ್ಯುವು ಶತ್ರುಗಳ ಶಿರಸ್ಸುಗಳಿಂದ ಭೂಮಿಯನ್ನೇ ಹೊದ್ದಿಸಿ ಬಿಟ್ಟನು. ಭೂಮಿಯಮೇಲೆ ಬಿದ್ದ ಶಿರಸ್ಸುಗಳಲ್ಲಿ ಕೆಲವು ಸುಂದರವಾದ ಮೂಗುಗಳಿಂದಲೂ, ಸುಂದರವಾದ ಮುಖಗಳಿಂದಲೂ ಮತ್ತು ಸುಂದರ ವಾದ ಕೂದಲಿನ ಅಂತ್ಯಭಾಗಗಳಿಂದಲೂ ಪರಿಶೋಭಿಸುತ್ತಿದ್ದುವು. ಕೆಲವು ಶಿರಸ್ಸುಗಳು ಶಸ್ತ್ರಾಘಾತದ ಯಾವ ಗಾಯಗಳಾಗಲೀ ಇಲ್ಲದೇ ನಿತ್ಯನೂತನವಾಗಿ ಕಾಣುತ್ತಿದ್ದುವು. ಕೆಲವು ಶಿರಸ್ಸುಗಳು ಸುಂದರವಾದ

ಕರ್ಣಕುಂಡಲಗಳಿಂದ ಪರಿಶೋಭಿಸುತ್ತಿದ್ದುವು. ಕೆಲವು ಶಿರಸ್ಸುಗಳು ಕೋಪದಿಂದ ತುಟಿಗಳನ್ನು ಕಡಿದಿದ್ದು ಬಾಯಿಗಳಿಂದ ರಕ್ತವನ್ನು ಸುರಿಸುತ್ತಿದ್ದುವು. ಕೆಲವು ಶಿರಸ್ಸುಗಳ ಮೇಲೆ ಮಣಿ-ರತ್ನವಿಭೂಷಿತವಾದ, ಮನೋಹರವಾದ ಕಿರೀಟ ಮತ್ತು ಉಷ್ಣೀಷಗಳಿದ್ದುವು. ಕೆಲವು ಶಿರಸ್ಸು ಗಳಲ್ಲಿದ್ದ ಮುಖಗಳು ಚಂದ್ರ-ಸೂರ್ಯರಂತೆ ಕಾಂತಿಯುಕ್ತವಾಗಿದ್ದುವು. ಮತ್ತೆ ಕೆಲವು ದಂಟಿನಿಂದ ಕೂಡಿದ ಕಮಲದಂತೆಯೇ ಶೋಭಾಯಮಾನವಾಗಿ ಕಾಣುತ್ತಿದ್ದುವು. ಕೆಲವು ಮುಖಗಳು ಸಮಯಗಳಲ್ಲಿ ಹಿತವಚನಗಳನ್ನೂ, ಪ್ರಿಯವಾಕ್ಯಗಳನ್ನೂ ಹೇಳುತ್ತಿದ್ದುವು. ಕೆಲವು ಪುಣ್ಯವಾದ ಸುಗಂಧದಿಂದ ಸುವಾಸಿತವಾಗಿದ್ದುವು. ಇಂತಹ ಬಗೆ-ಬಗೆಯ ತಲೆಗಳಿಂದ ಭೂಮಿಯು ವ್ಯಾಪ್ತವಾಗಿದ್ದಿತು.

ವೀರನಾದ ಅಭಿಮನ್ಯುವು ತನ್ನ ನಿಶಿತವಾದ ಬಾಣಗಳಿಂದ ಗಂಧರ್ವ ನಗರಿಗೆ ಸಮಾನವಾಗಿ ಪರಿಶೋಭಿಸುತ್ತಿದ್ದ, ವಿಶಾಲವಾಗಿದ್ದ, ಶಾಸ್ತ್ರವಿಧಿಗೆ ಅನುಸಾರವಾಗಿ ಯುದ್ಧಕ್ಕೆ ಬೇಕಾಗುವ ಸಕಲಸಂಭಾರಗಳಿಂದಲೂ ಸಜ್ಜಾಗಿದ್ದ ಶತ್ರುಗಳ ರಥಗಳನ್ನು ಅಪಾರಸಂಖ್ಯೆಯಲ್ಲಿ ಧ್ವಂಸಮಾಡುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಗೋಚರನಾಗುತ್ತಿದ್ದನು. ವಿಧ್ವಂಸಿತವಾಗಿ ಬಿದ್ದಿದ್ದ ರಥಗಳಲ್ಲಿ ಕೆಲವಕ್ಕೆ ಈಷಾದಂಡ (ಮೂಕಿಯ ಮರ) ಗಳೇ ಮುರಿದುಹೋಗಿದ್ದುವು. ತ್ರಿವೇಣುಗಳು (ರಥದ ಮುಂಭಾಗದಲ್ಲಿ ನೊಗವನ್ನು ಕಟ್ಟಲು ಚಾಚಿ ಕೊಂಡಿರುವ ಮೂರು ಬೊಂಬುಗಳು) ಇಬ್ಭಾಗವಾಗಿದ್ದುವು. ಕೆಲವು ರಥಗಳಲ್ಲಿ ಸ್ತಂಭದಂಡವು ಮುರಿದುಹೋಗಿದ್ದಿತು. ಕೆಲವು ರಥಗಳ ಮೂಕಿ ಕಂಬಗಳು ಮುರಿದುಹೋಗಿದ್ದುವು. ಅನೇಕ ರಥಗಳ ಕೆಳಭಾಗಗಳು ಮುರಿದು ಬಿದ್ದಿದ್ದುವು. ಮತ್ತೆ ಕೆಲವು ರಥಗಳ ಕೂಬರಗಳು (ನೊಗವನ್ನು ಕಟ್ಟುವ ಒಂದು ಉದ್ದವಾದ ಮರ) ಮುರಿದಿದ್ದುವು. ಕೆಲವು ರಥಗಳ ಚಕ್ರಗಳ ಅಂಚುಗಳೂ ಮತ್ತು ಅರೆಕಾಲುಗಳೂ ಮುರಿದುಬಿದ್ದಿದ್ದುವು. ಮತ್ತೆ ಕೆಲವು ರಥಗಳಿಗೆ ಚಕ್ರಗಳೇ ಇರಲಿಲ್ಲ. ರಥದಲ್ಲಿದ್ದ ಯುದ್ಧಸಾಮಗ್ರಿಗಳೆಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ರಥಿಕರು ಕುಳಿತುಕೊಳ್ಳುವ ಆಸನಗಳೂ ಕೆಲವು ರಥಗಳಲ್ಲಿ ಇರಲಿಲ್ಲ. ಉಪಕರಣಗಳೆಲ್ಲವೂ ಭಗ್ನವಾಗಿ ಹೋಗಿದ್ದುವು. ರಥದಲ್ಲಿದ್ದ ಛತ್ರ, ಆವರಣ, ಧ್ವಜದಂಡಗಳೆಲ್ಲವೂ ಭೂಮಿಯಲ್ಲಿ ಬಿದ್ದುಹೋಗಿದ್ದುವು. ರಥ

ಗಳಲ್ಲಿದ್ದ ಯೋಧರೆಲ್ಲರೂ ಅಸುನೀಗಿದ್ದರು. ಅಭಿಮನ್ಯುವಿನ ಬಾಣಗಳಿಂದ ಚೂರು-ಚೂರಾಗಿ ಮಾಡಲ್ಪಟ್ಟಿದ್ದ ಇಂತಹ ಸಾವಿರಾರು ರಥಗಳು ಎಲ್ಲ ದಿಕ್ಕುಗಳಲ್ಲಿಯೂ ಕಾಣುತ್ತಿದ್ದುವು. ಶತ್ರುಗಳ ರಥಸೈನ್ಯವನ್ನು ವಿಧ್ವಂಸನಗೊಳಿಸಿದನಂತರ ಅಭಿಮನ್ಯುವು ನಿಶಿತವಾದ ಅಲಗುಗಳಿಂದ ಕೂಡಿದ್ದ ಅಗ್ರಭಾಗಗಳಿದ್ದ ಬಾಣಗಳಿಂದ ಶತ್ರುಪಕ್ಷದ ಆನೆಗಳನ್ನೂ, ಗಜಾರೋಹಿಗಳನ್ನೂ ಸಂಹರಿಸಿದನು. ಅವುಗಳ ಮೇಲಿದ್ದ ಬಾವುಟಗಳನ್ನೂ, ಪ್ರಯೋಗಿಸಲು ಹೊರಟಿದ್ದ ಅಂಕುಶಗಳನ್ನೂ, ಧ್ವಜಗಳನ್ನೂ, ಯೋಧರ ಬತ್ತಳಿಕೆಗಳನ್ನೂ, ಅವರ ಕವಚಗಳನ್ನೂ, ಆನೆಗಳಿಗೆ ಬಿಗಿದಿದ್ದ ಹಗ್ಗಗಳನ್ನೂ, ಹಾಕಿದ್ದ ಕಂಠಾಭರಣಗಳನ್ನೂ, ಅವುಗಳ ಮೇಲೆ ಹಾಸಿದ್ದ ಕಂಬಳಿಗಳನ್ನೂ, ಅವುಗಳ ಸುತ್ತಲೂ ಕಟ್ಟಿದ್ದ ಚಿಕ್ಕ-ಚಿಕ್ಕ ಗಂಟೆಗಳ ಸರಗಳನ್ನೂ, ಆನೆಗಳ ಸೊಂಡಿಲುಗಳನ್ನೂ ಮತ್ತು ಅವುಗಳ ದಂತಗಳ ಅಗ್ರಭಾಗಗಳನ್ನೂ, ಆನೆಗಳ ಬೆನ್ನುಮೇಲಿದ್ದ ಛತ್ರಗಳನ್ನೂ–ಮಾಲೆಗಳನ್ನೂ ಕತ್ತರಿಸಿದನು. ಆನೆಗಳ ಪಾದರಕ್ಷಕರನ್ನೂ ಸಂಹರಿಸಿದನು.



ಮಹಾರಾಜ! ಅಭಿಮನ್ಯುವು ನಿನ್ನ ಕಡೆಯ ಗಜಸೈನ್ಯವನ್ನು ಧ್ವಂಸಗೊಳಿಸಿದನಂತರ ಅಶ್ವಸೈನ್ಯದ ಕಡೆಗೆ ತಿರುಗಿದನು. ನಿನ್ನ ಕಡೆಯಲ್ಲಿ ವನಾಯುಜ, ಪಾರ್ವತೀಯ, ಕಾಂಬೋಜ, ಬಾಹ್ಲಿಕದೇಶಗಳ ಶ್ರೇಷ್ಠ ವಾದ ಕುದುರೆಗಳಿದ್ದುವು. ಅವುಗಳು ತಮ್ಮ ಬಾಲಗಳನ್ನೂ, ಕಿವಿಗಳನ್ನೂ,

ಕಣ್ಣುಗಳನ್ನೂ ನಿಮಿರಿಸಿಕೊಂಡು ಓಡುವ ಸ್ವಭಾವದವುಗಳಾಗಿದ್ದುವು. ವೇಗಶಾಲಿಗಳಾಗಿದ್ದುವು. ಹೆಚ್ಚುಭಾರವನ್ನು ಹೊರುತ್ತಿದ್ದುವು. ಅವುಗಳ ಮೇಲೆ ಸುಶಿಕ್ಷಿತರಾದ ಶಕ್ತ್ಯಾಯುಧ, ಋಷ್ಟಿ ಮತ್ತು ಪ್ರಾಸಗಳ ಮೂಲಕವಾಗಿ ಯುದ್ಧಮಾಡುವ ಯೋಧರು ಕುಳಿತಿದ್ದರು. ಆ ಎಲ್ಲ ಯೋಧರನ್ನೂ ಮತ್ತು ನಿನ್ನ ಶ್ರೇಷ್ಠವಾದ ಕುದುರೆಗಳನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿ ಕೆಳಕ್ಕೆ ಬೀಳಿಸುತ್ತಾ ಅಭಿಮನ್ಯುವು ಏಕಮಾತ್ರನಾದ ಭಗವಾನ್ ವಿಷ್ಣುವಿನಂತೆ–ಸುದುಷ್ಕರವಾದ ಮತ್ತು ಯಾರಿಂದಲೂ ಯೋಚಿಸುವುದಕ್ಕೂ ಸಾಧ್ಯವಾಗದ ಕರ್ಮವನ್ನು ಮಾಡಿ ರಣಾಂಗಣದಲ್ಲಿ ಪ್ರಕಾಶಿಸಿದನು. ತಂಡ-ತಂಡವಾಗಿ ಅಭಿಮನ್ಯುವಿನ ಬಾಣಗಳಿಂದ ಹತವಾಗಿ ಬಿದ್ದಿದ್ದ ಕುದುರೆಗಳ ತಲೆಗಳಲ್ಲಿಯೂ, ಕುತ್ತಿಗೆಗಳಲ್ಲಿಯೂ ಚಾಮರರೂಪವಾದ ಕೂದಲುಗಳನ್ನು ಹೊಂದಿದ್ದ ಮುಖಗಳು ಅಭಿಮನ್ಯುವಿನ ಬಾಣಗಳ ಆಘಾತದಿಂದ ವಿಕೃತವಾಗಿದ್ದುವು. ಮತ್ತೆ ಕೆಲವು ಕುದುರೆಗಳಿಗೆ ಶರೀರಾದ್ಯಂತವಾಗಿ ಗಾಯಗಳಾಗಿದ್ದುವು. ಕೆಲವು ಕುದುರೆಗಳ ನಾಲಿಗೆಗಳೂ ಮತ್ತು ಕಣ್ಣುಗಳೂ ಹೊರಕ್ಕೆ ಚಾಚಿಕೊಂಡಿದ್ದುವು. ಕೆಲವು ಕುದುರೆಗಳ ಕರುಳುಗಳೂ ಪಿತ್ತಕೋಶಗಳೂ ಹೊರಕ್ಕೆ ಬಂದಿದ್ದುವು. ಕುದುರೆಗಳೊಡನೆ ಸವಾರರೂ ಸತ್ತುಬಿದ್ದಿದ್ದರು. ಕುದುರೆಗಳಿಗೆ ಅಲಂಕಾರಾರ್ಥವಾಗಿ ಕಟ್ಟಿದ್ದ ಚಿಕ್ಕ-ಚಿಕ್ಕ ಗಂಟೆಗಳ ಸರಗಳು ಕತ್ತರಿಸಿ ಬಿದ್ದಿದ್ದುವು. ಈ ರೀತಿಯಲ್ಲಿ ಅಭಿಮನ್ಯುವಿನ ಬಾಣಕ್ಕೆ ಲಕ್ಷ್ಯರಾಗಿ ಸತ್ತುಬಿದ್ದಿದ್ದ ಕುದುರೆಗಳು ಮತ್ತು ಕುದುರೆಸವಾರರು ಮಾಂಸಾಶಿಗಳಾದ ಪ್ರಾಣಿಗಳಿಗೆ ಆನಂದದಾಯಕರಾಗಿದ್ದರು. ಹಲವು ಕುದುರೆಗಳ ಚರ್ಮ ಮತ್ತು ಕವಚಗಳು ಕತ್ತರಿಸಿಹೋಗಿದ್ದುವು. ಆ ಕುದುರೆಗಳೆಲ್ಲವೂ ಸಾಮಾನ್ಯವಾಗಿ ಮಲದಿಂದಲೂ ಮೂತ್ರದಿಂದಲೂ ಮತ್ತು ರಕ್ತದಿಂದಲೂ ತೋಯ್ದುಹೋಗಿದ್ದುವು. ಅಂತಹ ಸ್ಥಿತಿಯಲ್ಲಿ ಸಾವಿರಾರು ಕುದುರೆಗಳು ಸವಾರರೊಡನೆ ಅಭಿಮನ್ಯುವಿನ ಬಾಣಗಳಿಂದ ಪ್ರಾಣತೊರೆದು ರಣಾಂಗಣದ ಸುತ್ತಲೂ ಬಿದ್ದಿದ್ದುವು.

ಯಾವರೀತಿಯಲ್ಲಿ ಬಹಳ ಘೋರರೂಪವಾಗಿದ್ದ ತ್ರಿಪುರಾಸುರರ ಸೈನ್ಯವನ್ನು ಮಹಾತೇಜಸ್ವಿಯಾದ ತ್ರ್ಯಂಬಕನು ಸಂಹರಿಸಿದನೋ–ಅದೇ

ರೀತಿಯಲ್ಲಿ ಮಹೌಜಸ್ಕನಾದ ಅಭಿಮನ್ಯುವು ರಥ-ಗಜಾಶ್ವಗಳೆಂಬ ಮೂರು ಅಂಗಗಳಿಂದ ಕೂಡಿದ್ದ ನಿನ್ನ ಅಪಾರವಾದ ಸೇನೆಯನ್ನು ಧ್ವಂಸಮಾಡಿಬಿಟ್ಟನು.

ಈ ರೀತಿಯಲ್ಲಿ ಅರ್ಜುನನ ಮಗನಾದ ಅಭಿಮನ್ಯುವು ಶತ್ರುಗಳಿಂದ ಸಹಿಸಲು ಅಸಾಧ್ಯವಾದ ರೀತಿಯಲ್ಲಿ ಪರಾಕ್ರಮವನ್ನು ತೋರಿಸುತ್ತಾ ನಿನ್ನ ಕಡೆಯ ಪದಾತಿಯೋಧರ ಸಮೂಹವನ್ನು ಎಲ್ಲ ಪ್ರಕಾರಗಳಿಂದಲೂ ಎಲ್ಲ ಕಡೆಗಳಿಂದಲೂ ಸಂಹರಿಸಿದನು.

ದೇವಸೇನಾಪತಿಯಾದ ಕಾರ್ತಿಕೇಯನು ಅಸುರರ ಸೈನ್ಯವನ್ನು ಧ್ವಂಸಮಾಡಿದಂತೆ-ಏಕಾಕಿಯಾದ ಸುಭದ್ರೆಯ ಮಗನಾದ ಅಭಿಮನ್ಯುವು ತನ್ನ ನಿಶಿತವಾದ ಬಾಣಗಳಿಂದ ಕೌರವರ ಚತುರಂಗೀಸೇನೆಯನ್ನು ಭಿನ್ನ-ಭಿನ್ನ ಮಾಡುತ್ತಿರುವುದನ್ನು ಕಂಡು ನಿನ್ನ ಮಕ್ಕಳೂ ಮತ್ತು ನಿನ್ನ ಕಡೆಯ ಯೋಧರೂ ಭಯಗೊಂಡು ಶೂನ್ಯದೃಷ್ಟಿಯಿಂದ ಎಲ್ಲ ಕಡೆಗಳಲ್ಲೂ ನೋಡುತ್ತಿದ್ದರು. ಅವರ ಮುಖಗಳು ಬಾಡಿಹೋಗಿದ್ದುವು. ಕಣ್ಣುಗಳು ಗರ-ಗರನೆ ಸುತ್ತುತ್ತಿದ್ದುವು. ಅವರ ಮೈ ಬೆವರಿತು. ರೋಮಗಳು ನಿಮಿರಿ ನಿಂತುವು. ಶತ್ರುವನ್ನು ಜಯಿಸುವುದರಲ್ಲಿ ನಿರುತ್ಸಾಹಿಗಳಾದರು. ಅಭಿಮನ್ಯುವಿನ ಬಾಣಗಳ ಪ್ರಹಾರವನ್ನು ತಪ್ಪಿಸಿಕೊಳ್ಳುವ ಸಲುವಾಗಿ ರಣರಂಗದಿಂದ ಪಲಾಯನಮಾಡಲು ನಿನ್ನ ಕಡೆಯವರು ಹೆಚ್ಚು ಉತ್ಸಾಹಿಗಳಾಗಿದ್ದರು. ಜೀವವನ್ನಾದರೂ ಉಳಿಸಿಕೊಳ್ಳಲು ಇಚ್ಛಿಸಿದ್ದ ಅವರು ಗೋತ್ರ ಮತ್ತು ಹೆಸರುಗಳನ್ನು ಪರಸ್ಪರವಾಗಿ ಹೇಳಿಕೊಂಡು ರೋದನಮಾಡುತ್ತಾ ರಣಾಂಗಣದಲ್ಲಿ ಸತ್ತುಬಿದ್ದಿದ್ದ ತಮ್ಮ ಪುತ್ರರನ್ನೂ, ಪಿತೃಗಳನ್ನೂ, ಸೋದರರರನ್ನೂ, ಬಂಧುಗಳನ್ನೂ, ಸಂಬಂಧಿಕರನ್ನೂ ಅಲ್ಲಿಯೇ ಬಿಟ್ಟು ತಮ್ಮ-ತಮ್ಮ ಆನೆಗಳನ್ನೂ, ಕುದುರೆಗಳನ್ನೂ ಅವಸರಪಡಿಸುತ್ತಾ (ವೇಗವಾಗಿ ಹೋಗಲು ಪ್ರಚೋದಿಸುತ್ತಾ) ರಣರಂಗದಿಂದ ಪಲಾಯನಮಾಡಿದರು.

೩೬ನೆಯ ಅಧ್ಯಾಯವು ಮುಗಿಯಿತು.

೩೭ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನ ಪರಾಕ್ರಮ: ಅವನಿಂದ ಅಶ್ಮಕಪುತ್ರನ ವಧೆ : ಶಲ್ಯನು ಮೂರ್ಛೆಹೋದುದು: ಕೌರವಸೇನೆಯ ಪಲಾಯನ

ಸಂಜಯನು ಸೌಭದ್ರನ ಪರಾಕ್ರಮದ ವರ್ಣನೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಮಹಾತೇಜಸ್ವಿಯಾದ ಸೌಭದ್ರನಿಂದ ತನ್ನ ಚತುರಂಗ ಬಲವು ವಿನಾಶಹೊಂದಿದುದನ್ನು ಕಂಡು ಕ್ರುದ್ಧನಾದ ದುರ್ಯೋಧನನು ಅವನನ್ನು ಎದುರಿಸಲು ತಾನೇ ಹೋದನು. ದುರ್ಯೋಧನರಾಜನು ಅಭಿಮನ್ಯುವನ್ನು ಎದುರಿಸುವ ಸಲುವಾಗಿ ಹೋಗುತ್ತಿರುವುದನ್ನು ಕಂಡ ದ್ರೋಣರು ದುರ್ಯೋಧನನನ್ನು ಸರ್ವಪ್ರಕಾರದಿಂದಲೂ ರಕ್ಷಿಸಬೇಕೆಂದು ಸೈನ್ಯಕ್ಕೆ ಆದೇಶವನ್ನಿತ್ತರು.

**ಪುರಾಭಿಮನ್ಯುರ್ಲಕ್ಷ್ಯಂ ನಃ ಪಶ್ಯತಾಂ ಹನ್ತಿ ವೀರ್ಯವಾನ್ ।**
**ತಮಾದ್ರವತ ಮಾ ಭೈಷ್ಟ ಕ್ಷಿಪ್ರಂ ರಕ್ಷತ ಕೌರವಮ್ ॥೩॥**

"ವೀರ್ಯವಂತನಾದ ಅಭಿಮನ್ಯುವು ನಾವು ನೋಡುತ್ತಿರುವಂತೆಯೇ ತನಗೆ ಮೊದಲು ಲಕ್ಷ್ಯಭೂತನಾಗುವ ದುರ್ಯೋಧನನನ್ನು ಸಂಹರಿಸಿ ಬಿಡುತ್ತಾನೆ. ದುರ್ಯೋಧನನು ಅವನ ಬಾಣಕ್ಕೆ ಲಕ್ಷ್ಯನಾಗಬಾರದು. ಆದುದರಿಂದ ನೀವೆಲ್ಲರೂ ಓಡಿಹೋಗಿರಿ. ಅಭಿಮನ್ಯುವನ್ನು ಎದುರಿಸಿರಿ. ಹೆದರಬೇಡಿರಿ. ಬೇಗಹೋಗಿ ಕೌರವನನ್ನು ರಕ್ಷಿಸಿರಿ."

ಮಹಾರಾಜ! ದ್ರೋಣರು ಹೀಗೆ ಆದೇಶವಿತ್ತನಂತರ, ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳುವ ಸ್ವಭಾವವುಳ್ಳ, ಬಲಿಷ್ಠರಾದ, ಸುಹೃದರಾದ, ಜಯಶೀಲರಾದ ಯೋಧರು ನಿನ್ನ ಮಗನಾದ ದುರ್ಯೋಧನನನ್ನು ರಕ್ಷಿಸುವ ಸಲುವಾಗಿ ಸುತ್ತುವರಿದು ನಿಂತರು. ದ್ರೋಣರು, ಅಶ್ವತ್ಥಾಮಾ, ಕೃಪರು, ಕರ್ಣ, ಕೃತವರ್ಮಾ, ಶಕುನಿ, ಬೃಹದ್ಬಲ, ಮದ್ರರಾಜನಾದ ಶಲ್ಯ, ಪೌರವ, ವೃಷಸೇನ ಮುಂತಾದ ಮಹಾರಥರೆಲ್ಲರೂ ನಿಶಿತವಾದ ಬಾಣಗಳನ್ನು ಬಿಡುತ್ತಾ ಅಸಂಖ್ಯಾತವಾದ ಬಾಣಗಳ ಮಳೆಗರೆಯುವಿಕೆಯಿಂದ ಅಭಿಮನ್ಯುವನ್ನು ಮುಚ್ಚಿಬಿಟ್ಟರು.

ಮಹಾರಾಜ! ಈ ರೀತಿಯಲ್ಲಿ ಕೌರವಯೋಧರು ಅಭಿಮನ್ಯುವನ್ನು ವಿಮೋಹಗೊಳಿಸಿ ದುರ್ಯೋಧನನನ್ನು ಮೃತ್ಯುದವಡೆಯಿಂದ ಪಾರು ಮಾಡಿದರು. ಬಾಯಿಗೆ ಹಾಕಿಕೊಂಡಿದ್ದ ತುತ್ತನ್ನು ಅಪಹರಿಸಿದಂತೆ ತನ್ನ ಲಕ್ಷ್ಯಕ್ಕೆ ಗುರಿಯಾಗಲಿದ್ದ ದುರ್ಯೋಧನನನ್ನು ಎಲ್ಲ ಯೋಧರೂ ಸೇರಿ ಪಾರುಮಾಡಿ ದುದನ್ನು ಅರ್ಜುನನ ಮಗನಾದ ಅಭಿಮನ್ಯುವು ಸಹಿಸಿಕೊಳ್ಳಲಿಲ್ಲ. ತನ್ನನ್ನು ಎದುರಿಸಿನಿಂತು ಯುದ್ಧಮಾಡುತ್ತಿದ್ದ ಸೂತಾಶ್ವಸಹಿತರಾದ ಎಲ್ಲ ಮಹಾರಥ ರನ್ನೂ ಅಭಿಮನ್ಯುವು ಅಗಾಧವಾದ ಬಾಣಗಳ ಸಮೂಹಗಳ ಪ್ರಯೋಗ ದಿಂದ ವಿಮುಖರನ್ನಾಗಿ ಮಾಡಿ ಗಟ್ಟಿಯಾಗಿ ಸಿಂಹನಾದಮಾಡಿದನು.

ಮಾಂಸಾಪೇಕ್ಷಿಯಾದ ಸಿಂಹವು ಗರ್ಜಿಸುವಂತೆ—ವೀರಗರ್ಜನೆ ಮಾಡಿದ ಅಭಿಮನ್ಯುವಿನ ನಿನಾದವನ್ನು ಕೇಳಿ ಕ್ರೋಧಪೂರ್ಣರಾಗಿದ್ದ ದ್ರೋಣಪ್ರಮುಖರಾದ ಮಹಾರಥರು ಪುನಃ ಅಸಹನೆಯನ್ನು ತಾಳಿದರು. ಆ ಮಹಾರಥರು ರಥಗಳ ಸಮೂಹದಿಂದ ಅಭಿಮನ್ಯುವನ್ನು ಇಕ್ಕಟ್ಟಾದ ಆವರಣದಲ್ಲಿ ಸೇರಿಸಿಕೊಳ್ಳುವಂತೆ ಮಧ್ಯದಲ್ಲಿ ಸೇರಿಸಿಕೊಂಡು ಅವನ ಮೇಲೆ ನಾನಾವಿಧವಾದ ಚಿಹ್ನೆಗಳನ್ನು ಹೊಂದಿದ್ದ ನಿಶಿತವಾದ ಬಾಣಗಳ ಸಮೂಹಗಳನ್ನು ಸಾಮೂಹಿಕವಾಗಿ ಪ್ರಯೋಗಿಸಿದರು. (ಅತಿರಥ-ಮಹಾರಥರು ಒಬ್ಬನೇ ಒಬ್ಬ ವೀರಬಾಲನ ಸುತ್ತಲೂ ರಥದಿಂದಲೇ ಕೋಟೆಯನ್ನು ಕಟ್ಟಿ ಸುತ್ತಲೂ ನಿಂತು ಒಬ್ಬನನ್ನೇ ಲಕ್ಷ್ಯಮಾಡಿ ಬಾಣಗಳನ್ನು ಬಿಡುತ್ತಿದ್ದರು. ಅದನ್ನು ಇಂದು ಊಹಿಸಿಕೊಳ್ಳುವುದಕ್ಕೂ ಸಾಧ್ಯವಾಗುವುದಿಲ್ಲ. ಒಬ್ಬೊಬ್ಬ ಮಹಾರಥರ ಒಂದೊಂದು ಬಾಣಗಳೇ ಇಂತಹ ಸಾವಿರಾರು ಬಾಲಕರನ್ನು ಆಹುತಿಯನ್ನಾಗಿ ತೆಗೆದುಕೊಳ್ಳಲು ಸಮರ್ಥವಾಗಿದ್ದುವು. ಹೀಗಿರುವಾಗ ಎಲ್ಲರೂ ಎಲ್ಲ ಕಡೆಗಳಿಂದಲೂ ಸಾವಿರಾರು ಬಾಣಗಳನ್ನು ಏಕಕಾಲದಲ್ಲಿ ಒಬ್ಬನನ್ನೇ ಲಕ್ಷಿಸಿ ಬಿಡುತ್ತಿದ್ದರೆಂದರೆ ಆಗಿನ ಸಮಯದಲ್ಲಿ ಅವರ ಸೇಡಿನ ಕಿಚ್ಚು ಎಷ್ಟಿತ್ತೆಂಬುದನ್ನು ಊಹಿಸಬಹುದಾಗಿದೆ. ಆ ಮಹಾರಥರು ಏಕಕಾಲದಲ್ಲಿ ಪುಂಖಾನುಪುಂಖವಾಗಿ ಬಿಡುತ್ತಿದ್ದ ಎಲ್ಲ ಬಾಣಗಳನ್ನೂ ಬಾಲಕನಾದ ಒಬ್ಬ ಅಭಿಮನ್ಯುವು ತಡೆಯುತ್ತಿದ್ದನೆಂದರೆ ಅವನ ಶೌರ್ಯಪರಾಕ್ರಮಗಳು ಎಷ್ಟಿತ್ತೆಂಬುದನ್ನೂ ನಾವು ಸಾಮಾನ್ಯವಾಗಿ ಯೋಚಿಸಬಹುದಾಗಿದೆ. ಇಂತಹ ಪರಾಕ್ರಮಿಗಳು ಎಷ್ಟೋಸಾವಿರ ವರ್ಷಗಳಿಗೊಮ್ಮೆ ಹುಟ್ಟಿ ಸ್ವಲ್ಪಕಾಲದಲ್ಲಿಯೇ ತಮ್ಮ ಅತುಲಪರಾಕ್ರಮ

ವನ್ನು ಪ್ರದರ್ಶಿಸಿ ಅದೃಶ್ಯರಾಗುವರು. ಇಂತಹ ಮಹಾವೀರನನ್ನು ಪಡೆದುಕೊಂಡ ಭಾರತಮಾತೆಯು ನಿಶ್ಚಯವಾಗಿಯೂ ಧನ್ಯಳೇ ಸರಿ.)

ಮಹಾರಾಜ! ಅತಿರಥ-ಮಹಾರಥರು ಸಾಮೂಹಿಕವಾಗಿ ಬಿಡುತ್ತಿದ್ದ ಬಾಣಗಳೆಲ್ಲವನ್ನೂ ನಿನ್ನ ಮೊಮ್ಮಗನಾದ ಅಭಿಮನ್ಯುವು ನಿಶಿತವಾದ ಬಾಣಗಳಿಂದ ಕತ್ತರಿಸಿ ಪುನಃ ಆ ಮಹಾರಥರನ್ನು ನಿಶಿತವಾದ ಅನೇಕ ಬಾಣಗಳಿಂದ ಪ್ರತಿಯಾಗಿ ಪ್ರಹರಿಸಿದನು. ನಿಶ್ಚಯವಾಗಿಯೂ ಅಭಿಮನ್ಯುವಿನ ಆ ಸಾಹಸಕಾರ್ಯವು ನಮಗೆ ಪರಮಾದ್ಭುತವಾಗಿ ಕಂಡಿತು. ಅಭಿಮನ್ಯುವಿನ ಬಾಣಪ್ರಹಾರಗಳಿಂದ ಕುಪಿತರಾದ ದ್ರೋಣಪ್ರಮುಖರಾದ ಮಹಾರಥರು ಸರ್ಪೋಪಮವಾದ ಬಾಣಗಳಿಂದ ಅಪರಾಜಿತನಾದ ಸೌಭದ್ರನನ್ನು ಸಂಹರಿಸುವ ಇಚ್ಛೆಯಿಂದ ಸುತ್ತುಗಟ್ಟಿದರು. ಭರತರ್ಷಭನೇ! ಎಲ್ಲ ಕಡೆಗಳಲ್ಲೂ ವ್ಯಾಪ್ತವಾಗಿರುವ ಸಮುದ್ರವನ್ನು ತೀರಪ್ರದೇಶವು ತಡೆಹಿಡಿದಿರುವಂತೆ–ಸಮುದ್ರರೂಪವಾದ ನಿನ್ನ ಸೈನ್ಯವನ್ನು ಒಬ್ಬನೇ ಒಬ್ಬ ಮಹಾವೀರನಾದ ಆರ್ಜುನಿಯು ತಡೆಹಿಡಿದಿದ್ದನು. ಆ ಸಮಯದಲ್ಲಿ ಪರಸ್ಪರವಾಗಿ ಪ್ರಹಾರಗಳನ್ನು ಕೊಡುತ್ತಾ ಯುದ್ಧಮಾಡುತ್ತಿದ್ದ ಅಭಿಮನ್ಯು ಮತ್ತು ನಿನ್ನ ಕಡೆಯ ಯೋಧರಲ್ಲಿ ಯಾರೊಬ್ಬರೂ ಪರಾಙ್ಮುಖರಾಗಲಿಲ್ಲ. ಭಯಂಕರವಾದ ಮತ್ತು ಘೋರವಾದ ಯುದ್ಧವು ನಡೆಯುತ್ತಿರಲಾಗಿ, ನಿನ್ನ ಮಗನಾದ ದುಃಸಹನು ಒಂಬತ್ತು ಬಾಣಗಳಿಂದಲೂ, ದುಃಶಾಸನನು ಹನ್ನೆರಡು ಬಾಣಗಳಿಂದಲೂ, ಶರದ್ವಂತರ ಮಕ್ಕಳಾದ ಕೃಪರು ಮೂರು ಬಾಣಗಳಿಂದಲೂ, ದ್ರೋಣರು ಸರ್ಪೋಪಮಗಳಾಗಿದ್ದ ಹದಿನೇಳು ಬಾಣಗಳಿಂದಲೂ ಅಭಿಮನ್ಯುವನ್ನು ಪ್ರಹರಿಸಿದರು.

ಅವರನ್ನೇ ಅನುಸರಿಸಿ ವಿವಿಂಶತಿಯು ಎಪ್ಪತ್ತು ಬಾಣಗಳಿಂದಲೂ, ಕೃತವರ್ಮನು ಏಳು ಬಾಣಗಳಿಂದಲೂ, ಬೃಹದ್ಬಲನು ಎಂಟು ಬಾಣಗಳಿಂದಲೂ, ಅಶ್ವತ್ಥಾಮನು ಏಳು ಬಾಣಗಳಿಂದಲೂ, ಭೂರಿಶ್ರವನು ಮೂರು ಬಾಣಗಳಿಂದಲೂ, ಮದ್ರರಾಜನಾದ ಶಲ್ಯನು ಆರುಬಾಣ ಗಳಿಂದಲೂ, ಶಕುನಿಯು ಎರಡು ಬಾಣಗಳಿಂದಲೂ, ದುರ್ಯೋಧನನು ಮೂರು ಬಾಣಗಳಿಂದಲೂ ಅಭಿಮನ್ಯುವನ್ನು ಪ್ರಹರಿಸಿದರು. ಪ್ರತಾಪ (೧೫೬)—೧೬

ಶಾಲಿಯಾದ ಅಭಿಮನ್ಯುವಾದರೋ ಧನುಸ್ಸನ್ನು ಹಿಡಿದು ನೃತ್ಯಮಾಡುತ್ತಿರುವನೋ ಎಂಬಂತೆ ಮಹಾರಥರು ಬಿಟ್ಟ ಬಾಣಗಳೆಲ್ಲವನ್ನೂ ತಡೆದು, ಅದಕ್ಕೆ ಪ್ರತಿಯಾಗಿ ನೇರವಾಗಿ ಹೋಗುವ ಮೂರು-ಮೂರು ಬಾಣಗಳಿಂದ ಆ ಎಲ್ಲ ಮಹಾರಥರನ್ನೂ ಪ್ರಹರಿಸಿದನು. ಪುನಃ ಪುನಃ ನಿನ್ನ ಮಕ್ಕಳೂ ಮತ್ತು ನಿನ್ನ ಕಡೆಯ ಮಹಾರಥರೂ ಒಟ್ಟಾಗಿಸೇರಿ ಅಭಿಮನ್ಯುವನ್ನು ಬಾಧೆಪಡಿಸುತ್ತಲೇ ಇದ್ದರು. ಅದರಿಂದ ಪರಮಕ್ರುದ್ಧನಾದ ಅಭಿಮನ್ಯುವು ತಾನು ಪಡೆದು ಕೊಂಡಿರುವ ಅಸ್ತ್ರವಿದ್ಯೆಯನ್ನೂ, ಆನುವಂಶಿಕವಾಗಿ ಬಂದ ಬಲವನ್ನೂ ಮತ್ತು ತನ್ನ ಎದೆಗಾರಿಕೆಯನ್ನೂ ಪ್ರದರ್ಶಿಸಲು ಪ್ರಾರಂಭಿಸಿದನು.

ಆ ಮಧ್ಯದಲ್ಲಿ ಅಶ್ಮಕನ ಮಗನು–ಗರುಡನ ಮತ್ತು ವಾಯುವಿನ ವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಸುಶಿಕ್ಷಿತವಾದ ಕುದುರೆಗಳಿಂದ ಎಳೆಯಲ್ಪಟ್ಟ ರಥದಲ್ಲಿ ಕುಳಿತು ಬಹಳ ಅವಸರದಿಂದ ಬಂದು ಅಭಿಮನ್ಯುವನ್ನು ಎದುರಿಸಿದನು. ಅನಂತರ ಹತ್ತು ಬಾಣಗಳಿಂದ ಅಭಿಮನ್ಯುವನ್ನು ಪ್ರಹರಿಸಿ "ತಿಷ್ಠ ತಿಷ್ಠ-ನಿಲ್ಲು ನಿಲ್ಲು"-ಎಂದು ಕೂಗಿಕೊಂಡನು.

ಹಾಗೆ ಉದ್ರಿಕ್ತನಾಗಿ ಕೂಗಿಕೊಂಡು ಬಂದ ಅಶ್ಮಕಪುತ್ರನನ್ನು ನೋಡಿ ನಸುನಗುತ್ತಾ ಅಭಿಮನ್ಯುವು ಅವನ ಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿದನು. ನಾಲ್ಕು ಬಾಣಗಳಿಂದ ನಾಲ್ಕುಕುದುರೆಗಳು ಮರಣ ಹೊಂದಿದುವು. ಒಂದು ಬಾಣವು ಸೂತನನ್ನು ಸಂಹರಿಸಿತು. ಆರನೆಯ ಬಾಣವು ಧ್ವಜವನ್ನು ಕತ್ತರಿಸಿತು. ಉಳಿದ ನಾಲ್ಕು ಬಾಣಗಳು ಅಶ್ಮಕಪುತ್ರನ ಧನುಸ್ಸನ್ನೂ, ಎರಡು ತೋಳುಗಳನ್ನೂ ಕಡೆಯದಾಗಿ ಅವನ ತಲೆಯನ್ನೂ ಕತ್ತರಿಸಿಬಿಟ್ಟುವು. ಅಭಿಮನ್ಯುವು ಅಶ್ಮಕೇಶ್ವರನನ್ನು ಸಂಹರಿಸಲಾಗಿ ಆ ಸಮಯದಲ್ಲಿ ಪಲಾಯನವೇ ಸೂಕ್ತವಾದ ಆಶ್ರಯವೆಂದು ಭಾವಿಸಿದ ಎಲ್ಲ ಕೌರವಸೈನ್ಯವೂ ಚಲಿಸತೊಡಗಿತು. ಅದನ್ನು ಕಂಡು ಸೈನಿಕರಿಗೆ ಆಶ್ವಾಸನೆ ನೀಡುತ್ತಾ ಕೌರವಮಹಾವೀರರು ಪುನಃ ಅಭಿಮನ್ಯುವನ್ನು ಸುತ್ತುವರಿದು ಬಾಣಗಳ ಮಳೆಗರೆದರು. ಕರ್ಣ, ಕೃಪರು, ದ್ರೋಣರು, ಅಶ್ವತ್ಥಾಮಾ, ಗಾಂಧಾರರಾಜನಾದ ಶಕುನಿ, ಶಲ, ಶಲ್ಯ, ಭೂರಿಶ್ರವಸ, ಕ್ರಾಥ, ಸೋಮದತ್ತ, ವಿವಿಂಶತಿ, ವೃಷಸೇನ, ಸುಷೇಣ, ಕುಂಡಭೇದಿ, ಪ್ರತರ್ದನ, ಬೃಂದಾರಕ, ಲಲಿತ್ಥ, ಪ್ರಬಾಹು, ದೀರ್ಘಲೋಚನ ಮತ್ತು ಕ್ರೋಧಪರ

ವಶನಾಗಿದ್ದ ದುರ್ಯೋಧನ ಇವರೆಲ್ಲರೂ ಒಟ್ಟಾಗಿ ಸೇರಿ ಸೌಭದ್ರನನ್ನು ಬಾಣಗಳಿಂದ ಮುಚ್ಚಿಬಿಟ್ಟರು.

ಮಹಾ ಮಹಾ ಧನುಷ್ಮಂತರೆಲ್ಲರೂ ಒಬ್ಬನೇ ಒಬ್ಬನನ್ನು ಲಕ್ಷ್ಯದಲ್ಲಿಟ್ಟುಕೊಂಡು ಪ್ರಹರಿಸಿದ ನೇರವಾಗಿ ಹೋಗುವ ಬಾಣಗಳಿಂದ ವೀರನಾದ ಅಭಿಮನ್ಯುವು ಬಹಳವಾಗಿ ಗಾಯಗೊಂಡನು. ಆದರೆ ಅದರಿಂದ ಅವನು ಸ್ವಲ್ಪವೂ ಅಧೀರನಾಗಲಿಲ್ಲ. ಕವಚ ಮತ್ತು ಶರೀರ ಎರಡನ್ನೂ ಏಕಕಾಲದಲ್ಲಿ ಭೇದಿಸುವ ಸಾಮರ್ಥ್ಯವಿದ್ದ ಬಾಣವೊಂದನ್ನು ತೆಗೆದುಕೊಂಡು ಧನುಸ್ಸಿಗೆ ಯೋಜಿಸಿ ಕಿವಿಯವರೆಗೂ ಸೆಳೆದು ಕರ್ಣನನ್ನು ಲಕ್ಷ್ಯಮಾಡಿ ಪ್ರಹರಿಸಿದನು. ಆ ಬಾಣವು ಕರ್ಣನ ಕವಚವನ್ನು ಭೇದಿಸಿ ಅನಂತರ ಅವನ ಶರೀರವನ್ನೂ ಭೇದಿಸಿಕೊಂಡು ಹೊರಬಂದು ಸರ್ಪವು ಹುತ್ತದಲ್ಲಿ ಸೇರಿ ಕೊಳ್ಳುವಂತೆ–ವೇಗವಾಗಿ ಭೂಮಿಯನ್ನು ಪ್ರವೇಶಿಸಿತು. ಭೂಕಂಪವಾದ ಸಮಯದಲ್ಲಿ ಭೂಮಿಯ ಮೇಲಿರುವ ಪರ್ವತವು ಅಲ್ಲಾಡುವಂತೆ-ಅತಿ ತೀಕ್ಷ್ಣವಾದ ಬಾಣಪ್ರಹಾರದಿಂದಾಗಿ ಕರ್ಣನು ಹೆಚ್ಚು ವ್ಯಥಿತನಾಗಿ ಭ್ರಾಂತನಾದವನಂತೆ ಹಿಂದಕ್ಕೂ-ಮುಂದಕ್ಕೂ ತೂಗಾಡಿದನು. ಕರ್ಣನನ್ನು ಪ್ರಹರಿಸಿದನಂತರ, ನಿಶಿತವಾದ ಬೇರೆಯ ಬಾಣಗಳನ್ನು ತೆಗೆದುಕೊಂಡು ಬಲಿಷ್ಠನಾದ ಅಭಿಮನ್ಯುವು ಪರಮಕ್ರುದ್ಧನಾಗಿ ಸುಷೇಣನನ್ನೂ, ದೀರ್ಘ ಲೋಚನನನ್ನೂ ಮತ್ತು ಕುಂಡಭೇದಿಯನ್ನೂ ಮೂರು-ಮೂರು ಬಾಣ ಗಳಿಂದ ಪ್ರಹರಿಸಿದನು. ಆ ವೇಳೆಗೆ ಚೇತರಿಸಿಕೊಂಡಿದ್ದ ಕರ್ಣನು ಅಭಿಮನ್ಯುವನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಅವನನ್ನು ಅನುಸರಿಸಿ ಅಶ್ವತ್ಥಾಮನು ಇಪ್ಪತ್ತು ಬಾಣಗಳಿಂದಲೂ, ಕೃತವರ್ಮನು ಏಳು ಬಾಣಗಳಿಂದಲೂ ಅಭಿಮನ್ಯುವನ್ನು ಗಾಯಗೊಳಿಸಿದರು. ಇಂದ್ರನ ಮೊಮ್ಮಗ ನಾದ ಅಭಿಮನ್ಯುವಿನ ಶರೀರಾದ್ಯಂತವಾಗಿ ಬಾಣಗಳು ಚುಚ್ಚಿಕೊಂಡುವು. ಆದರೂ ಸಹ ಮಹಾವೀರನಾದ ಅಭಿಮನ್ಯುವು ಸ್ವಲ್ಪವಾದರೂ ಧೃತಿಗೆಟ್ಟಿರ ಲಿಲ್ಲ. ಪರಮಕ್ರುದ್ಧನಾಗಿ ಕೌರವಸೈನ್ಯದ ಮಧ್ಯದಲ್ಲಿ ಸಂಚರಿಸುತ್ತಿದ್ದಾಗ ಪಾಶಹಸ್ತನಾದ ಯಮನಂತೆಯೇ ಕಾಣುತ್ತಿದ್ದನು. ಹೀಗೆ ಸಂಚರಿಸುತ್ತಿದ್ದಾಗ ಅಭಿಮನ್ಯುವು ಸಮೀಪಗತನಾದ ಶಲ್ಯನನ್ನು ಬಾಣಗಳ ವರ್ಷದಿಂದ ಮುಚ್ಚಿಬಿಟ್ಟನು. ಮಹಾಬಾಹುವಾದ ಅಭಿಮನ್ಯುವು ನಿನ್ನ ಸೈನ್ಯವನ್ನು ಬೆದರಿಸುತ್ತಾ ಗಟ್ಟಿಯಾಗಿ ಗರ್ಜನೆಮಾಡಿದನು.

ಅಸ್ತ್ರವಿದನಾದ ಸೌಭದ್ರನ ಮರ್ಮಭೇದಿಗಳಾದ ಮತ್ತು ನೇರವಾಗಿ ಹೋಗುವ ಬಾಣಗಳಿಂದ ಪ್ರಹೃತನಾದ ಶಲ್ಯನು ಬಹಳವಾಗಿ ಗಾಯಗೊಂಡು ರಥದ ಆಸನದ ಪಕ್ಕಕ್ಕೆ ಸರಿದು ಕುಳಿತನು ಮತ್ತು ಒಡನೆಯೇ ಮೂರ್ಛಿತನಾದನು. ಯಶೋವಂತನಾದ ಆರ್ಜುನಿಯು ಪ್ರಹರಿಸಿದ ಬಾಣಗಳಿಂದ ಶಲ್ಯನು ಮೂರ್ಛಿತನಾದುದನ್ನು ಕಂಡು ದ್ರೋಣರು ನೋಡುತ್ತಿದ್ದಂತೆಯೇ ಎಲ್ಲ ಕೌರವಸೈನಿಕರೂ ಯುದ್ಧಭೂಮಿಯಿಂದ ಪಲಾಯನಮಾಡತೊಡಗಿದರು. ಮಹಾಬಾಹುವಾದ ಶಲ್ಯನು ಅಭಿಮನ್ಯುವು ಬಿಟ್ಟ ಚಿನ್ನದ ರೆಕ್ಕೆಗಳುಳ್ಳ ಬಾಣಗಳಿಂದ ಸಮಾವೃತನಾಗಿದ್ದುದನ್ನು ನೋಡಿ ನಿನ್ನ ಸೈನಿಕರೆಲ್ಲರೂ–ಸಿಂಹದಿಂದ ಪೀಡಿಸಲ್ಪಟ್ಟ ಮೃಗಗಳಂತೆ–ಹಿಂದೆಯೂ ನೋಡದೆ ಪಲಾಯನಮಾಡಿದರು. ರಣಾಂಗಣದಲ್ಲಿ ಗಳಿಸಿದ ಯಶಸ್ಸಿನಿಂದ ಪಿತೃದೇವತೆಗಳಿಂದಲೂ, ದೇವತೆಗಳಿಂದಲೂ, ಚಾರಣ-ಸಿದ್ಧ-ಯಕ್ಷ ಸಮೂಹಗಳಿಂದಲೂ, ಭೂಮಿಯ ಮೇಲಿದ್ದ ಎಲ್ಲ ಪ್ರಾಣಿಗಳಿಂದಲೂ ಸಂಪೂಜಿತನಾದ ಅಭಿಮನ್ಯುವು ಆಜ್ಯಧಾರೆಗಳಿಂದ ಸಿಕ್ತನಾದ ಯಜ್ಞೇಶ್ವರನಂತೆಯೇ ಬಹಳವಾಗಿ ಪ್ರಕಾಶಿಸಿದನು."

೩೭ನೆಯ ಅಧ್ಯಾಯವು ಮುಗಿಯಿತು.

೩೮ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನಿಂದ ಶಲ್ಯಸೋದರನ ಸಂಹಾರ: ದ್ರೋಣಾಚಾರ್ಯರ ರಥಸೈನ್ಯದ ಪಲಾಯನ

ವೀರನಾದ ಅಭಿಮನ್ಯುವಿನ ಪರಾಕ್ರಮದ ವಿವರಣೆಯನ್ನು ಕೇಳಿ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಈ ರೀತಿಯಲ್ಲಿ ನೇರವಾಗಿ ಹೋಗುವ ಬಾಣಗಳಿಂದ ಶತ್ರುಸೈನ್ಯವನ್ನು ಬಾರಿ-ಬಾರಿಗೂ ಧ್ವಂಸಮಾಡುತ್ತಿದ್ದ ಮಹಾಧನುಷ್ಮಂತನಾದ ಅಭಿಮನ್ಯುವನ್ನು ನನ್ನ ಸೈನ್ಯದಲ್ಲಿ ಯಾವ-ಯಾವ ಮಹಾಯೋಧರು ಪುನಃ ಎದುರಿಸಿ ಯುದ್ಧಮಾಡಿದರು?"

"ಮಹಾರಾಜ! ಭಾರದ್ವಾಜರಿಂದ ಸಂರಕ್ಷಿತವಾಗಿದ್ದ ರಥಾನೀಕವನ್ನು

ಭೇದಿಸಲು ಇಚ್ಛಿಸಿದ್ದ ಅಭಿಮನ್ಯುಕುಮಾರನ ಮಹತ್ತರವಾದ ರಣಕ್ರೀಡೆಯನ್ನು ಸಾವಧಾನಚಿತ್ತನಾಗಿ ಕೇಳು. ಸೌಭದ್ರನು ಶೀಘ್ರಗಾಮಿಗಳಾದ ಬಾಣಗಳಿಂದ ಮದ್ರೇಶನಾದ ಶಲ್ಯನನ್ನು ಪ್ರಹರಿಸಿದುದನ್ನು ಕಂಡು ಶಲ್ಯನ ತಮ್ಮನು ಪರಮಕ್ರುದ್ಧನಾಗಿ ಬಾಣಗಳ ಮಳೆ ಗರೆಯುತ್ತಾ ಅಭಿಮನ್ಯುವನ್ನು ಆಕ್ರಮಿಸಿದನು. ಅವನು ಹತ್ತು ಬಾಣಗಳಿಂದ ಅಭಿಮನ್ಯುವಿನ ಕುದುರೆಗಳನ್ನೂ, ಸಾರಥಿಯನ್ನೂ ಮತ್ತು ಅಭಿಮನ್ಯುವನ್ನೂ ಗಾಯಗೊಳಿಸಿ ಗಟ್ಟಿಯಾಗಿ ಗರ್ಜನೆಮಾಡುತ್ತಾ ನಿಲ್ಲು-ನಿಲ್ಲೆಂದು ಕೂಗಿಕೊಂಡನು. ಅದರಿಂದ ಪರಮಕ್ರುದ್ಧನಾದ, ಲಘುಹಸ್ತನಾದ (ಅತಿಶೀಘ್ರವಾಗಿ ಬಾಣಗಳ ಆದಾನ-ಸಂಧಾನ-ಪ್ರಯೋಗಗಳಲ್ಲಿ ಕುಶಲನಾದ) ಅಭಿಮನ್ಯುವು ನಿಶಿತವಾದ ಬಾಣಗಳಿಂದ ಶಲ್ಯನ ತಮ್ಮನ ತಲೆಯನ್ನೂ, ಕುತ್ತಿಗೆಯನ್ನೂ ಕೈಕಾಲುಗಳನ್ನೂ, ಧನುಸ್ಸನ್ನೂ, ಕುದುರೆ ಗಳನ್ನೂ, ಧ್ವಜವನ್ನೂ, ಸಾರಥಿಯನ್ನೂ, ರಥದ ಮೂರು ಬೊಂಬುಗಳನ್ನೂ, ರಥದ ಮೇಲಿದ್ದ ಆಸನವನ್ನೂ, ರಥಚಕ್ರಗಳನ್ನೂ, ರಥದ ನೊಗವನ್ನೂ, ಬತ್ತಳಿಕೆಯನ್ನೂ, ರಥದ ತೋಳುಮರವನ್ನೂ, ಪತಾಕೆಯನ್ನೂ, ಇಬ್ಬರು ಚಕ್ರರಕ್ಷಕರನ್ನೂ, ರಥದಲ್ಲಿದ್ದ ಸಕಲೋಪಕರಣಗಳನ್ನೂ ಕತ್ತರಿಸಿ ಚೂರು-ಚೂರುಮಾಡಿದನು. ಆ ಸಮಯದಲ್ಲಿ ಯಾರಿಂದಲೂ ಅವನನ್ನು (ಶಲ್ಯನ ತಮ್ಮನನ್ನು) ನೋಡಲು ಸಾಧ್ಯವಾಗಲಿಲ್ಲ. ಚಂಡಮಾರುತದ ಆಘಾತದಿಂದ ಮಹಾಗಿರಿಯೂ ಭಗ್ನವಾಗಿ ಹೋಗುವಂತೆ–ಮಹಾತೇಜಸ್ವಿ ಯಾದ ಅಭಿಮನ್ಯುವಿನ ಬಾಣಗಳಿಂದ ಶಲ್ಯನ ತಮ್ಮನು ಛಿನ್ನ-ಭಿನ್ನನಾಗಿ ಭೂಮಿಯ ಮೇಲೆ ಬಿದ್ದನು. ಅವನ ವಸ್ತ್ರಾಭರಣಗಳೆಲ್ಲವೂ ಚೆಲ್ಲಾ-ಪಿಲ್ಲಿಯಾಗಿ ಬಿದ್ದಿದ್ದುವು.

ಶಲ್ಯನ ತಮ್ಮನನ್ನು ಅನುಸರಿಸಿ ಬಂದಿದ್ದ ಯೋಧರು ಭಯಗೊಂಡು ದಿಕ್ಕಾಪಾಲಾಗಿ ಓಡಿದರು. ಅಭಿಮನ್ಯುವಿನ ಆ ಅದ್ಭುತಪರಾಕ್ರಮವನ್ನು ನೋಡಿ ಎಲ್ಲ ಪ್ರಾಣಿಗಳೂ ಎಲ್ಲ ದಿಕ್ಕುಗಳಿಂದಲೂ–'**ಸಾಧು ಅಭಿಮನ್ಯೋ ಸಾಧು**'–ಎಂಬ ಜಯಕಾರಗಳಿಂದ ಹರ್ಷಧ್ವನಿಮಾಡಿದುವು.

ಶಲ್ಯನ ತಮ್ಮನು ಹತನಾದನಂತರ ಅವನ ಅನುಯಾಯಿಗಳಾದ ಅನೇಕ ಸೈನಿಕರು ಸಂಕ್ರುದ್ಧರಾಗಿ ವಿವಿಧವಾದ ಆಯುಧಗಳನ್ನು ಧರಿಸಿ ತಮ್ಮ ಕುಲ,

ನಿವಾಸಸ್ಥಾನ ಮತ್ತು ನಾಮಧೇಯಗಳನ್ನು ಎಲ್ಲರಿಗೂ ಕೇಳಿಸುವಂತೆ ಹೇಳುತ್ತಾ ಅರ್ಜುನನ ಮಗನಾದ ಅಭಿಮನ್ಯುವಿನ ಕಡೆಗೆ ಧಾವಿಸಿದರು. ಕೆಲವು ಯೋಧರು ರಥಗಳಲ್ಲಿ ಕುಳಿತುಹೋಗುತ್ತಿದ್ದರು. ಕೆಲವರು ಆನೆಗಳ ಮೇಲೂ, ಬಲೋತ್ಕಟರಾದ ಕೆಲವರು ಪದಾತಿಗಳಾಗಿಯೂ ಅಭಿಮನ್ಯುವಿನ ಬಳಿಗೆ ಹೋದರು. ಬಾಣಗಳ ಸೊಯ್–ಎಂಬ ಶಬ್ದದಿಂದಲೂ, ರಥಚಕ್ರಗಳ ಗಡ-ಗಡಾ ಶಬ್ದಗಳಿಂದಲೂ, ಹೂಂಕಾರಗಳಿಂದಲೂ, ಕೋಪದಿಂದ



ಗುರುಗುಟ್ಟುತ್ತಲೂ, ಸಿಂಹನಾದಗಳನ್ನು ಮಾಡುತ್ತಲೂ, ಮತ್ತೆ ಕೆಲವರು ಗರ್ಜನೆಮಾಡುತ್ತಲೂ, ಧನುಷ್ಟೇಂಕಾರಮಾಡುತ್ತಲೂ, ಚಪ್ಪಾಳೆತಟ್ಟುತ್ತಲೂ, ಗರ್ಜನ-ತರ್ಜನಗಳನ್ನು ಮಾಡುತ್ತಲೂ,–'ನ ನೋ ಜೀವನ್ ಮೋಕ್ಷ್ಯಸೇ ನಮ್ಮಿಂದ ನೀನು ಜೀವಸಹಿತವಾಗಿ ತಪ್ಪಿಸಿಕೊಂಡು ಹೋಗಲಾರೆ. ಜೀವಿತದಿಂದಲೇ ನೀನು ಮೋಕ್ಷವನ್ನು ಪಡೆಯ ಬೇಕಾಗುತ್ತದೆ.'–ಎಂದು ಹೇಳುತ್ತಲೂ ಅಭಿಮನ್ಯುವನ್ನು ಆಕ್ರಮಿಸಿದರು.

ಗರ್ಜನೆಮಾಡುತ್ತಾ ಗಟ್ಟಿಯಾಗಿ ಕೂಗುತ್ತಾ ತನ್ನನ್ನು ಆಕ್ರಮಿಸಲು ಬರುತ್ತಿದ್ದ ದುರ್ಯೋಧನನ ಸೈನಿಕರನ್ನು ನೋಡಿ ಅಭಿಮನ್ಯುವು ಗಹ-ಗಹಿಸಿ

ನಗುತ್ತಾ ಯಾರು-ಯಾರು ತನ್ನ ಮೇಲೆ ಮೊದಲು ಬಾಣಪ್ರಯೋಗ ಮಾಡಿದರೋ ಅವರೆಲ್ಲರನ್ನೂ ಬಾಣಗಳಿಂದ ಗಾಯಗೊಳಿಸುತ್ತಿದ್ದನು. ವಿಚಿತ್ರವಾದ ಮತ್ತು ಶೀಘ್ರಗಾಮಿಗಳಾದ ಅಸ್ತ್ರಗಳನ್ನು ಪ್ರದರ್ಶಿಸುವ ಇಚ್ಛೆಯಿಂದ ಸೌಭದ್ರನು ಮೊದಲು ಮೊದಲು ಮೃದುಪೂರ್ವಕವಾಗಿಯೇ ಯುದ್ಧಮಾಡುತ್ತಿದ್ದನು. ವಾಸುದೇವನಿಂದ ಪಡೆದುಕೊಂಡಿದ್ದ ಅಸ್ತ್ರಗಳನ್ನೂ, ಧನಂಜಯನಿಂದ ಪಡೆದುಕೊಂಡಿದ್ದ ಅಸ್ತ್ರಗಳನ್ನೂ-ಕೃಷ್ಣಾರ್ಜುನರು ಬಿಡುವುದಕ್ಕೂ ತಾನು ಬಿಡುವುದಕ್ಕೂ ಸ್ವಲ್ಪವಾದರೂ ವ್ಯತ್ಯಾಸವೇ ಕಾಣದ ರೀತಿಯಲ್ಲಿ–ಕೃಷ್ಣಾರ್ಜುನರೇ ಈ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದಾರೆಯೋ ಎಂಬಂತೆ ಪ್ರಯೋಗಿಸುತ್ತಾ ಅಭಿಮನ್ಯುವು ಅಸ್ತ್ರಗಳನ್ನು ಪ್ರದರ್ಶಿಸುತ್ತಿದ್ದನು. ಬಾಣಗಳನ್ನು ಸಂಧಾನಮಾಡುತ್ತಾ ಬಹಳ ದೂರದ ವರೆಗೂ ಬಿಡುತ್ತಾ ಗುರುತರವಾಗಿಯೂ, ಭಾರವಾಗಿಯೂ ಇದ್ದ ಶತ್ರುಸಂಹಾರಕಾರ್ಯವನ್ನು ಬಾರಿ-ಬಾರಿಗೂ ಸಾಧಿಸುತ್ತಾ ಇದ್ದ ಅಭಿಮನ್ಯುವು, ಕೃಷ್ಣಾರ್ಜುನರಿಗೂ ತನಗೂ ಯಾವ ವಿಧವಾದ ವ್ಯತ್ಯಾಸವೂ ಇಲ್ಲದವನಂತೆ ಕಾಣಿಸುತ್ತಿದ್ದನು. ಶರತ್ಕಾಲದಲ್ಲಿ ಸುದೀಪ್ತವಾಗಿ ಕಾಣುವ ಸೂರ್ಯಮಂಡಲದೋಪಾದಿಯಲ್ಲಿ–ಅಭಿಮನ್ಯುವಿನ ಧನುಸ್ಸು ಮಂಡಲಾಕಾರವಾಗಿ ಮಾತ್ರವೇ ಎಲ್ಲ ದಿಕ್ಕುಗಳಲ್ಲಿಯೂ ಪ್ರಕಾಶಿಸುತ್ತಿದ್ದುದು ಕಂಡುಬರುತ್ತಿದ್ದಿತು. ವರ್ಷಾಕಾಲದಲ್ಲಿ ಸಿಡಿಲನ್ನು ಹೊರಬಿಡುವ ಮೇಘದ ಗರ್ಜನೆಯಂತೆ–ಅಭಿಮನ್ಯುವು ಮಾಡುತ್ತಿದ್ದ ಧನುಸ್ಸಿನ ಶಿಂಜಿನಿ ಶಬ್ದವೂ, ಅಂಗೈಯಿನ ದಾರುಣವಾದ ಶಬ್ದವೂ ಕೇಳಿಬರುತ್ತಿದ್ದಿತು.

ಲಜ್ಜಾಶೀಲನಾದ, ಅಸಹಿಷ್ಣುವಾದ, ಇತರರನ್ನು ಗೌರವಿಸುವ ಸ್ವಭಾವವುಳ್ಳ, ಪ್ರಿಯದರ್ಶನನಾದ ಅಭಿಮನ್ಯುವು ಶತ್ರುಪಕ್ಷದ ವೀರರನ್ನು ಸಮ್ಮಾನಿಸಬೇಕೆಂಬ ಇಚ್ಛೆಯಿಂದಲೇ ಅವರೊಡನೆ ಬಾಣಗಳಿಂದಲೂ ಮತ್ತು ಅಸ್ತ್ರಗಳಿಂದಲೂ ಯುದ್ಧಮಾಡುತ್ತಿದ್ದನು. ಮಹಾರಾಜ ! ಯಾವರೀತಿಯಲ್ಲಿ ಸೂರ್ಯನು ವರ್ಷಾಕಾಲವು ಮುಗಿದು ಶರತ್ಕಾಲವು ಪ್ರಾಪ್ತವಾದೊಡನೆಯೇ ಪ್ರಚಂಡರಶ್ಮಿಯಾಗುತ್ತಾನೆಯೋ–ಅದೇ ರೀತಿಯಲ್ಲಿ ಅಭಿಮನ್ಯುವು ಮೊದಲು ಮೊದಲು ಮೃದುವಾಗಿದ್ದವನು ಕಡೆ-ಕಡೆಗೆ ಶತ್ರುಗಳ ವಿಷಯದಲ್ಲಿ ಉಗ್ರನಾಗಿ ಪರಿಣಮಿಸಿದನು. ಸೂರ್ಯನು ತನ್ನ ಕಿರಣಗಳನ್ನು ಪ್ರಪಂಚದ

ಮೇಲೆ ಚೆಲ್ಲುವಂತೆ–ಕ್ರುದ್ಧನಾದ ಅಭಿಮನ್ಯುವು ಚಿನ್ನದ ರೆಕ್ಕೆಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ಚಿತ್ರ-ವಿಚಿತ್ರವಾದ ಬಹುಸಂಖ್ಯಾತವಾದ ಬಾಣಗಳನ್ನು ನೂರಾರು ಬಾರಿ ಶತ್ರುಗಳ ಮೇಲೆ ಪ್ರಯೋಗಿಸಿದನು. ಮಹಾಯಶೋವಂತನಾದ ಅಭಿಮನ್ಯುವು ದ್ರೋಣರು ನೋಡುತ್ತಿದ್ದಂತೆಯೇ ಅವರ ರಥಸೈನಿಕರನ್ನು ಕ್ಷುರಪ್ರಗಳಿಂದಲೂ, ವತ್ಸದಂತ ಗಳಿಂದಲೂ, ವಿಪಾಠಗಳಿಂದಲೂ, ನಾರಾಚಗಳಿಂದಲೂ, ಅರ್ಧ ಚಂದ್ರಾಕಾರದ ಬಾಣಗಳಿಂದಲೂ, ಭಲ್ಲಗಳಿಂದಲೂ, ಅಂಜಲಿಕಗಳಿಂದಲೂ ಮುಚ್ಚಿಬಿಟ್ಟನು. ಬಹುಸಂಖ್ಯಾತವಾದ ಅಭಿಮನ್ಯುವಿನ ಬಾಣಗಳಿಂದ ಪೀಡಿತವಾದ ದ್ರೋಣರ ರಥಸೈನ್ಯವು ಯುದ್ಧದಿಂದ ಹಿಮ್ಮೆಟ್ಟಿತು.”

ಧಿ೮ನೆಯ ಅಧ್ಯಾಯವು ಮುಗಿಯಿತು.

ಧಿ೯ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ದ್ರೋಣರು ಅಭಿಮನ್ಯುವಿನ ಪರಾಕ್ರಮವನ್ನು ಪ್ರಶಂಸಿಸಿದುದು: ದುರ್ಯೋಧನನ ಆದೇಶದಂತೆ ದುಃಶಾಸನನು ಅಭಿಮನ್ಯುವಿನೊಡನೆ ಯುದ್ಧವನ್ನು ಆರಂಭಿಸಿದುದು

ಧೃತರಾಷ್ಟ್ರನು ಅಭಿಮನ್ಯುವಿನ ಯುದ್ಧವಾರ್ತೆಯನ್ನು ಕೇಳಿ ತನ್ನ ಮನಸ್ಸಿನ ಮೇಲೆ ಉಂಟಾದ ಪರಿಣಾಮವನ್ನು ಸಂಜಯನೊಡನೆ ಹೇಳುತ್ತಾನೆ:

**ದ್ವೈಧೀ ಭವತಿ ಮೇ ಚಿತ್ತಂ ಹ್ರಿಯಾ ತುಷ್ಟ್ಯಾ ಚ ಸಂಜಯ ।**
**ಮಮ ಪುತ್ರಸ್ಯ ಯತ್ಸೈನ್ಯಂ ಸೌಭದ್ರಃ ಸಮವಾರಯತ್ ॥೧॥**

“ಸಂಜಯ! ಅಭಿಮನ್ಯುವಿನ ಯುದ್ಧವಾರ್ತೆಯನ್ನು ಕೇಳಿ ನನ್ನ ಮನಸ್ಸಿನಲ್ಲಿ ಎರಡು ವಿಧವಾದ ಪರಿಣಾಮಗಳುಂಟಾಗಿವೆ. ದ್ರೋಣ ಪ್ರಮುಖರಾದ ಮಹಾರಥರು ಬಾಲಕನೊಬ್ಬನಿಂದ ಪರಾಭವಗೊಂಡರೆಂಬ ವಿಷಯವನ್ನು ಕೇಳಿ ನನ್ನ ಮನಸ್ಸು ಲಜ್ಜೆಯಿಂದ ಸಂಕುಚಿತವಾಗುತ್ತಿದೆ. ನನ್ನ ಮೊಮ್ಮಗನಾದ ಅಭಿಮನ್ಯುವು ಏಕಾಕಿಯಾಗಿ ನನ್ನ ಮಗನ ಅಪಾರ ಸೈನ್ಯಸಮೂಹವನ್ನೂ ತಡೆದುನಿಲ್ಲಿಸಿದನೆಂಬ ವಾರ್ತೆಯನ್ನು ಕೇಳಿ ಮನಸ್ಸು

ಹೃಷ್ಟವೂ ಆಗುತ್ತಿದೆ. ನನ್ನ ಕಡೆಯವರ ಅವಸ್ಥೆಯನ್ನು ಕೇಳಿ ನಾಚಿಕೆಯೂ ಅಭಿಮನ್ಯುವಿನ ಅತುಲಪರಾಕ್ರಮವನ್ನು ಕೇಳಿ ಹರ್ಷವೂ ಉಂಟಾಗುತ್ತಿದೆ. ದೇವಸೇನಾಪತಿಯಾದ ಸ್ಕಂದನು ಅಸುರರೊಡನೆ ಯುದ್ಧದ ಕ್ರೀಡೆಯನ್ನಾಡಿದಂತೆ–ಕುಮಾರನಾದ ಅಭಿಮನ್ಯುವಿನ ಯುದ್ಧಕ್ರೀಡೆಯನ್ನು ಪುನಃ ವಿಸ್ತಾರವಾಗಿಯೇ ಹೇಳು.”

“ಮಹಾರಾಜ! ಅತ್ಯಂತ ಖೇದದಿಂದ ನಿನಗೆ ಅತಿದಾರುಣವಾದ ಯುದ್ಧವಾರ್ತೆಯನ್ನು ಹೇಳುತ್ತೇನೆ. ಒಂದು ಪಕ್ಷದಲ್ಲಿ ಏಕಾಕಿಯಾದ ಅಭಿಮನ್ಯುವಿಗೂ-ಮತ್ತೊಂದು ಪಕ್ಷದಲ್ಲಿ ಬಹುಸಂಖ್ಯಾತಯೋಧರಿಗೂ ಮಹಾಭಯಂಕರವಾದ ಯುದ್ಧವು ಹೇಗೆ ನಡೆಯಿತೆಂಬುದನ್ನು ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು.

ಯುದ್ಧೋತ್ಸಾಹಿಯಾದ ಅಭಿಮನ್ಯುವು ರಥದಲ್ಲಿ ಕುಳಿತು ರಥಗಳಲ್ಲಿ ಕುಳಿತಿದ್ದ ಯುದ್ಧೋತ್ಸಾಹಿಗಳಾಗಿದ್ದ ಶತ್ರುಗಳನ್ನು ದಮನಮಾಡುವ ಸಾಮರ್ಥ್ಯವನ್ನು ಹೊಂದಿದ್ದ ನಿನ್ನ ಕಡೆಯ ಯೋಧರ ಮೇಲೆ ಬಾಣಗಳ ಮಳೆಗರೆದನು. ದ್ರೋಣರು, ಕರ್ಣ, ಕೃಪರು, ಶಲ್ಯ, ಅಶ್ವತ್ಥಾಮಾ, ಭೋಜವಂಶೀಯನಾದ ಕೃತವರ್ಮಾ, ಬೃಹದ್ಬಲ, ದುರ್ಯೋಧನ, ಭೂರಿಶ್ರವಸ, ಮಹಾಬಲಿಷ್ಠನಾದ ಶಕುನಿ-ಇವರುಗಳನ್ನೂ, ಅನೇಕ ರಾಜರನ್ನೂ, ರಾಜಕುಮಾರರನ್ನೂ, ನಾಲ್ಕು ವಿಧವಾದ ಸೈನ್ಯಗಳನ್ನೂ ಅಲಾತಚಕ್ರದೋಪಾದಿಯಲ್ಲಿ (ಕೊಳ್ಳಿಯ ಚಕ್ರ) ರಣಾಂಗಣದ ಸುತ್ತಲೂ ಸುತ್ತುತ್ತಾ ಬಾಣಗಳಿಂದ ಪ್ರಹರಿಸುತ್ತಿದ್ದನು. ಪ್ರತಾಪವಂತನಾದ, ತೇಜಸ್ವಿಯಾದ ಆರ್ಜುನಿಯು ಶ್ರೇಷ್ಠವಾದ ಅಸ್ತ್ರಗಳಿಂದ ಶತ್ರುಗಳನ್ನು ಧ್ವಂಸ ಮಾಡುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿದ್ದನು. ಮಹಾ ತೇಜಸ್ವಿಯಾದ ಸೌಭದ್ರನ ಆಚರಣೆಯನ್ನು ನೋಡಿ ನಿನ್ನ ಕಡೆಯ ಸಾವಿರಾರು ಸೈನಿಕರು ಭಯದಿಂದ ನಡುಗಿದರು. ಅನಂತರ ಮಹಾಪ್ರಾಜ್ಞರಾದ, ಪ್ರತಾಪವಂತರಾದ ದ್ರೋಣರು ವಿಕಸಿತವಾದ ಕಣ್ಣುಗಳಿಂದ ಕೂಡಿದವರಾಗಿ, ನಿನ್ನ ಮಗನ ಮರ್ಮಸ್ಥಳಗಳನ್ನು ವಾಕ್ಶಲ್ಯಗಳಿಂದ ಪ್ರಹರಿಸಲು ಇಚ್ಛಿಸಿರುವರೋ ಎಂಬಂತೆ ತ್ವರೆಯಿಂದ ಕೃಪರೊಡನೆ ಮಾತನಾಡುತ್ತಾ ಹೀಗೆಂದು ಹೇಳಿದರು:

“ಕೃಪ! ಪಾರ್ಥರಲ್ಲಿ ಸುಪ್ರಸಿದ್ಧನಾದ, ತರುಣನಾದ, ಸುಭದ್ರೆಯ ಮಗನಾದ, ವೀರನಾದ ಅಭಿಮನ್ಯುವು ತನ್ನ ಸುಹೃದರನ್ನೂ, ರಾಜನಾದ ಯುಧಿಷ್ಠಿರನನ್ನೂ ನಕುಲ-ಸಹದೇವರನ್ನೂ, ಭೀಮಸೇನನನ್ನೂ, ಬಂಧುಗಳನ್ನೂ, ಸಂಬಂಧಿಗಳನ್ನೂ, ಮಧ್ಯಸ್ಥರನ್ನೂ, ಇತರ ಸುಹೃದರನ್ನೂ ಸಂತೋಷಗೊಳಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದಾನೆ.

**ನಾಸ್ಯ ಯುದ್ಧೇ ಸಮಂ ಮನ್ಯೇ ಕಂಚಿದನ್ಯಂ ಧನುರ್ಧರಮ್ ।**
**ಇಚ್ಛನ್ಹನ್ಯಾದಿಮಾಂ ಸೇನಾಂ ಕಿಮರ್ಥಮಪಿ ನೇಚ್ಛತಿ ।।೧೩।।**

ಯುದ್ಧದಲ್ಲಿ ಅಭಿಮನ್ಯುವಿಗೆ ಸಮಾನನಾದ, ಧನುರ್ಧರನಾದ ಬೇರೊಬ್ಬ ಯೋಧನು ಇದ್ದಾನೆಂದೇ ನಾನು ಭಾವಿಸುವುದಿಲ್ಲ. ಇವನೇನಾದರೂ ಇಚ್ಛಿಸಿದ್ದೇ ಆದರೆ ಈ ನಮ್ಮ ಸಂಪೂರ್ಣಸೈನ್ಯವನ್ನೂ ವಿನಾಶಗೊಳಿಸಬಲ್ಲನು. ಆದರೆ ಯಾವ ಕಾರಣದಿಂದ ಅವನು ಹಾಗೆ ಮಾಡಲು ಇಚ್ಛಿಸುತ್ತಿಲ್ಲವೆಂಬುದು ನನಗೆ ತಿಳಿಯುತ್ತಿಲ್ಲ.”

ಮಹಾರಾಜ! ಅಭಿಮನ್ಯುವಿನ ವಿಷಯವಾಗಿ ದ್ರೋಣರು ಆಡಿದ ಪ್ರೀತಿಯುಕ್ತವಾದ ಮಾತನ್ನು ಕೇಳಿ ನಿನ್ನ ಮಗನಾದ ದುರ್ಯೋಧನನು ಅಭಿಮನ್ಯುವಿನ ವಿಷಯದಲ್ಲಿ ಪರಮಕ್ರುದ್ಧನಾಗಿ ದ್ರೋಣರನ್ನು ಒಮ್ಮೆ ನೋಡಿ, ತಿರಸ್ಕಾರದ ನಗುವನ್ನು ನಕ್ಕು ಕರ್ಣ, ಬಾಹ್ಲಿಕ, ದುಃಶಾಸನ, ಮದ್ರರಾಜನಾದ ಶಲ್ಯ ಮತ್ತು ಇತರ ಮಹಾರಥರನ್ನುದ್ದೇಶಿಸಿ ಹೇಳಿದನು:

**ಸರ್ವಮೂರ್ಧಾಭಿಷಿಕ್ತಾನಾಮಾಚಾರ್ಯೋ ಬ್ರಹ್ಮವಿತ್ತಮಃ ।**
**ಅರ್ಜುನಸ್ಯ ಸುತಂ ಮೂಢಂ ನಾಯಂ ಹನ್ತುಮಿಹೇಚ್ಛತಿ ।।೧೬।।**

“ಮೂರ್ಧಾಭಿಷಿಕ್ತರಾಗಿರುವ ಎಲ್ಲ ರಾಜರಿಗೂ ಆಚಾರ್ಯರಾದ, ಬ್ರಹ್ಮವಿದರಲ್ಲಿ ಶ್ರೇಷ್ಠರಾದ ದ್ರೋಣರು ಅರ್ಜುನನ ಈ ಮೂರ್ಖಪುತ್ರನನ್ನು ಕೊಲ್ಲಲು ಇಚ್ಛಿಸುತ್ತಿಲ್ಲ.

**ನ ಹ್ಯಸ್ಯ ಸಮರೇ ಯುಧ್ಯೇದನ್ತಕೋಽಪ್ಯಾತತಾಯಿನಃ* ।**
**ಕಿಮಙ್ಗ ಪುನರೇವಾನ್ಯೋ ಮರ್ತ್ಯಃ ಸತ್ಯಂ ಬ್ರವೀಮಿವಃ ।।೧೭।।**

---

*ಅಸ್ಯ ಆತತಾಯಿನಃ ಇಲ್ಲಿ ದ್ರೋಣರಿಗೆ ಆತತಾಯೀ ಎಂಬ ವಿಶೇಷಣವನ್ನು ದುರ್ಯೋಧನನು ಉದ್ದೇಶಪೂರ್ವಕವಾಗಿಯೇ ಹೇಳಿದ್ದಾನೆ. ಆತತಾಯೀ ಶಬ್ದಕ್ಕೆ ಶಸ್ತ್ರಪಾಣಿ ಎಂಬ ಅರ್ಥವು ಇರುವುದಾದರೂ ಈ ಪದವನ್ನು ಸಾಮಾನ್ಯವಾಗಿ ಉಪಯೋಗಿಸುವುದು ಹೀನಾರ್ಥದಲ್ಲಿ ಮಾತ್ರ. ಅಗ್ನಿದಃ (ಬೆಂಕಿ ಇಡುವವನು.) ಗರದಃ

ಪ್ರಿಯ ಸೈನಿಕರೇ! ನಾನು ನಿಮಗೆ ಸತ್ಯಸಮಾಚಾರವನ್ನೇ ಹೇಳುತ್ತೇನೆ. ಶಸ್ತ್ರಪಾಣಿಗಳಾದ ಈ ದ್ರೋಣರೊಡನೆ ರಣಾಂಗಣದಲ್ಲಿ ಯಮರಾಜನೂ ಯುದ್ಧಮಾಡಲಾರನು. ಹೀಗಿರುವಾಗ ಸಾಮಾನ್ಯ ಮನುಷ್ಯನೊಬ್ಬನು ಇವರ ಮುಂದೆನಿಲ್ಲಲು ಹೇಗೆತಾನೇ ಸಾಧ್ಯವಾಗುವುದು?

**ಅರ್ಜುನಸ್ಯ ಸುತಂ ತ್ವೇಷ ಶಿಷ್ಯತ್ವಾದಭಿರಕ್ಷತಿ ।**
**ಶಿಷ್ಯಾಃ ಪುತ್ರಾಶ್ಚ ದಯಿತಾಸ್ತದಪತ್ಯಂ ಚ ಧರ್ಮಿಣಾಮ್ ॥೧೮॥**

ಇವರು ಇಷ್ಟು ಸಮರ್ಥರಾಗಿದ್ದರೂ ಅರ್ಜುನನ ಮಗನನ್ನು ಉದ್ದೇಶಪೂರ್ವಕವಾಗಿಯೇ ರಕ್ಷಣೆಮಾಡುತ್ತಿದ್ದಾರೆ. ಏಕೆಂದರೆ ಅರ್ಜುನನು ಇವರ ಪ್ರಿಯಶಿಷ್ಯನು. ಶಿಷ್ಯರು ಮತ್ತು ಮಕ್ಕಳು ಸಾಮಾನ್ಯವಾಗಿ ಅತ್ಯಂತ ಪ್ರಿಯರೇ ಆಗಿರುತ್ತಾರೆ. ಧರ್ಮಾತ್ಮರಾದವರಿಗೆ ಶಿಷ್ಯರ ಮಕ್ಕಳೂ ಪ್ರಿಯರೇ ಆಗುತ್ತಾರೆ.

**ಸಂರಕ್ಷ್ಯಮಾಣೋ ದ್ರೋಣೇನ ಮನ್ಯತೇ ವೀರ್ಯಮಾತ್ಮನಃ ।**
**ಆತ್ಮಸಂಭಾವಿತೋ ಮೂಢಸ್ತಂ ಪ್ರಮಥ್ನೀತ ಮಾ ಚಿರಮ್ ॥**

ನಿಶ್ಚಯವಾಗಿಯೂ ಈ ಸಮಯದಲ್ಲಿ ಅಭಿಮನ್ಯುವು ದ್ರೋಣರಿಂದ ರಕ್ಷಿಸಲ್ಪಡುತ್ತಿದ್ದಾನೆ. ಆದರೆ ಅಭಿಮನ್ಯುವು ಮಾತ್ರ ಹಾಗೆಂದು ಭಾವಿಸಿರು ವುದಿಲ್ಲ. ದ್ರೋಣರೇ ಮೊದಲಾದ ಕುರುಪ್ರಮುಖರನ್ನು ತನ್ನ ಪರಾಕ್ರಮ ದಿಂದಲೇ ಎದುರಿಸುತ್ತಿರುವೆನೆಂದು ಈ ಮೂಢನು ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿದ್ದಾನೆ. ಆದುದರಿಂದ ನೀವೆಲ್ಲರೂ ಸೇರಿ ಈ ಮೂಢನನ್ನು ಶೀಘ್ರವಾಗಿ ಧ್ವಂಸಮಾಡಿರಿ."

ಆಚಾರ್ಯರನ್ನು ಪ್ರತ್ಯಕ್ಷವಾಗಿಯೇ ದುರ್ಯೋಧನನು ತೆಗಳುತ್ತಿದ್ದರೂ ಕರ್ಣಾದಿಗಳು ಯಾವುದೊಂದು ಮಾತನ್ನೂ ಆಡಲಿಲ್ಲ.

ರಾಜನು ಹೀಗೆಂದು ಹೇಳಿದೊಡನೆಯೇ ಕರ್ಣಪ್ರಮುಖರಾದ ವೀರರು ಪರಮಕ್ರುದ್ಧರಾಗಿ ದ್ರೋಣರ ಎದುರಿನಲ್ಲಿಯೇ ಅವರನ್ನೂ ಅನಾದರಿಸಿ,

---

(ವಿಷವಿಡುವವನು.) **ಧನಾಪಹಃ** (ಹಣವನ್ನು ಅಪಹರಿಸುವವನು.) **ಕ್ಷೇತ್ರದಾರಹರಃ** (ಭೂಮಿಯನ್ನೂ ಮತ್ತೊಬ್ಬರ ಪತ್ನಿಯನ್ನೂ ಅಪಹರಿಸುವವನು.) ಶಸ್ತ್ರಪಾಣಿಃ -ಎಂಬ ಆರನೆಯ ಅರ್ಥವೂ ಇದಕ್ಕಿದೆ. ರೊಚ್ಚಿಗೆದ್ದ ಮನುಷ್ಯರು ಹಿರಿಯರ ವಿಷಯದಲ್ಲಿಯೂ ಎಂತಹ ಕಟುವಾದ ಮಾತುಗಳನ್ನೂ ಆಡಲು ಹೇಸುವುದಿಲ್ಲವೆಂಬದಕ್ಕೆ ಇದೊಂದು ನಿದರ್ಶನ.

ಸಂಹಾರಮಾಡುವ ಇಚ್ಛೆಯಿಂದ ಸುಭದ್ರೆಯ ಮಗನಾದ ಅಭಿಮನ್ಯುವನ್ನು ಆಕ್ರಮಿಸಿದರು.

ಕುರುಶ್ರೇಷ್ಠನೇ! ಆ ಸಮಯದಲ್ಲಿ ದುರ್ಯೋಧನನು ಹೇಳಿದ ಮಾತನ್ನು ಕೇಳಿ ದುಃಶಾಸನನು ತನ್ನ ಅಣ್ಣನನ್ನು ಕುರಿತು ಹೇಳಿದನು:

"ಮಹಾರಾಜ ! ನಾನು ನಿನಗೆ ಈ ಮಾತನ್ನು ಪ್ರತಿಜ್ಞೆಮಾಡಿ ಹೇಳುತ್ತೇನೆ. ಪಾಂಡುಪುತ್ರರು ಮತ್ತು ಪಾಂಚಾಲಯೋಧರು ನೋಡುತ್ತಿರುವಂತೆಯೇ ನಾನು ಈ ಅಭಿಮನ್ಯುವನ್ನು ಸಂಹಾರಮಾಡುತ್ತೇನೆ. ಗ್ರಹಣ ಸಮಯದಲ್ಲಿ ರಾಹುವು ಸೂರ್ಯನನ್ನು ನುಂಗುವಂತೆ-ನಾನೀಗಲೇ ಈ ಸುಭದ್ರೆಯ ಮಗನನ್ನು ನುಂಗಿಹಾಕುತ್ತೇನೆ."

ಹೀಗೆ ಹೇಳಿ ಪುನಃ ಗರ್ಜನೆಮಾಡುತ್ತಾ ದುರ್ಯೋಧನನೊಡನೆ ಈ ಮಾತನ್ನೂ ಹೇಳಿದನು:

**ಶ್ರುತ್ವಾ ಕೃಷ್ಣೌ ಮಯಾ ಗ್ರಸ್ತಂ ಸೌಭದ್ರಮತಿಮಾನಿನೌ ।**
**ಗಮಿಷ್ಯತಃ ಪ್ರೇತಲೋಕಂ ಜೀವಲೋಕಾನ್ನ ಸಂಶಯಃ ॥೨೪॥**

"ಅಭಿಮನ್ಯುವು ನನ್ನ ಮೂಲಕ ಕಾಲಕಬಲಿತನಾದುದನ್ನು ತಿಳಿದೊಡನೆಯೇ ಅತಿಮಾನಿಷ್ಠರಾದ ಕೃಷ್ಣಾರ್ಜುನರು ಈ ಜೀವಲೋಕದಿಂದ ಪ್ರೇತಲೋಕಕ್ಕೆ ಹೊರಟುಹೋಗುತ್ತಾರೆ. (ಪ್ರಾಣತೊರೆಯುತ್ತಾರೆ.) ಈ ವಿಷಯದಲ್ಲಿ ಸಂಶಯವೇ ಇಲ್ಲ.

**ತೌ ಚ* ಶ್ರುತ್ವಾ ಮೃತೌ ವ್ಯಕ್ತಂ**
**ಪಾಣ್ಡೋಃ ಕ್ಷೇತ್ರೋದ್ಭವಾಃ ಸುತಾಃ।**
**ಏಕಾಹ್ನಾ ಸಸುಹೃದ್ವರ್ಗಾಃ**
**ಕ್ಲೈಬ್ಯಾದ್ಧಾಸ್ಯನ್ತಿ ಜೀವಿತಮ್ ॥೨೫॥**

ಕೃಷ್ಣಾರ್ಜುನರು ಮೃತರಾದರೆಂದು ಕೇಳಿದೊಡನೆಯೇ* ಪಾಂಡುವಿನ ಕ್ಷೇತ್ರದಲ್ಲಿ ಹುಟ್ಟಿರುವ ಉಳಿದ ಮಕ್ಕಳೂ ದೌರ್ಬಲ್ಯದ ಕಾರಣದಿಂದ ತಮ್ಮ ಸುಹೃದ್ವರ್ಗದಿಂದ ಕೂಡಿದವರಾಗಿ, ಒಂದೇ ಹಗಲಿನಲ್ಲಿಯೇ ತಮ್ಮ ಪ್ರಾಣಗಳನ್ನು ತೊರೆಯುತ್ತಾರೆ.

---

*ಪಾಣ್ಡೋಃ ಕ್ಷೇತ್ರೋದ್ಭವಾಃ–ಎಂಬ ಪದವನ್ನು ದುಃಶಾಸನನು ಇಲ್ಲಿ ತೆಗಳಿಕೆಗಾಗಿಯೇ ಉಪಯೋಗಿಸಿದ್ದಾನೆ. ಪಾಂಡವರು ಕುಂಡರು ಎಂಬ ಅಭಿಪ್ರಾಯದಿಂದ ಹೇಳಿರುವ ಮಾತಿದು. ಪತಿಯು ಇರುವಾಗಲೇ ಇತರರಿಂದ ಹುಟ್ಟಿದವರು ಕುಂಡರು.

**ತಸ್ಮಾದಸ್ಮಿನ್ಹತೇ ಶತ್ರೌ ಹತಾಃ ಸರ್ವೇಽಹಿತಾಸ್ತವ ।**
**ಶಿವೇನ ಮಾಂ ಧ್ಯಾಹಿ ರಾಜನ್ನೇಷ ಹನ್ಮಿ ರಿಪೂಂಸ್ತವ ॥೨೬॥**

ಮಹಾರಾಜ! ಆದುದರಿಂದ ಅಭಿಮನ್ಯುವೊಬ್ಬನು ಹತನಾದನೆಂದರೆ ನಿನಗೆ ಅಹಿತರಾದವರೆಲ್ಲರೂ ಹತರಾದಂತೆಯೇ ಸರಿ. ಅದಕ್ಕಾಗಿ ನನಗೆ ಮಂಗಳವನ್ನು ಕೋರುವವನಾಗು. ಈಗಲೇ ನಾನು ನಿನ್ನ ಶತ್ರುಗಳೆಲ್ಲರನ್ನೂ ಸಂಹರಿಸಿಬಿಡುತ್ತೇನೆ."

ಮಹಾರಾಜ! ಹೀಗೆ ದುಃಶಾಸನನು ತನ್ನ ಅಣ್ಣನೊಡನೆ ಹೇಳಿ ಗಟ್ಟಿಯಾಗಿ ಗರ್ಜನೆಮಾಡಿದನು. ಕ್ರುದ್ಧನಾಗಿದ್ದ ಅವನು ಅಭಿಮನ್ಯುವಿನ ಸಮೀಪಕ್ಕೆ ಹೋಗಿ ಅವನನ್ನು ಬಾಣಗಳಿಂದ ಮುಚ್ಚಿದನು. ಪರಮಕ್ರುದ್ಧನಾಗಿ ತನ್ನ ಎದುರಾಗಿ ನಿಂತು, ಬಾಣಗಳ ಮಳೆಗರೆಯುತ್ತಿದ್ದ ನಿನ್ನ ಮಗನಾದ ದುಃಶಾಸನನನ್ನು ನೋಡಿದಕೂಡಲೇ ಅರಿಂದಮನಾದ ಅಭಿಮನ್ಯುವು ತೀಕ್ಷ್ಣವಾದ ಇಪ್ಪತ್ತಾರು ಬಾಣಗಳಿಂದ ದುಃಶಾಸನನನ್ನು ಗಾಯಗೊಳಿಸಿದನು. ಮದೋದಕವನ್ನು ಸುರಿಸುತ್ತಿರುವ ಆನೆಯೋಪಾದಿಯಲ್ಲಿ ಪರಮಕ್ರುದ್ಧ ನಾಗಿದ್ದ ದುಃಶಾಸನನೂ ಅಭಿಮನ್ಯುವಿನ ಮೇಲೆ ಅನೇಕ ಬಾಣಗಳನ್ನು ಸುರಿಸಿದನು. ಅದಕ್ಕೆ ಪ್ರತಿಯಾಗಿ ಅಭಿಮನ್ಯುವೂ ಸಹ ಸಾವಿರಾರು ಬಾಣ ಗಳಿಂದ ದುಃಶಾಸನನನ್ನು ಮುಚ್ಚಿಬಿಟ್ಟನು. ರಥಶಿಕ್ಷಾವಿಶಾರದರಾಗಿದ್ದ ಆ ಇಬ್ಬರೂ ಎಡಕ್ಕೂ ಮತ್ತು ಬಲಕ್ಕೂ ರಥಗಳಿಂದ ವಿಚಿತ್ರವಾದ ಮಂಡಲ ಗಳನ್ನು ಮಾಡುತ್ತಾ (ಮಂಡಲಕ್ರಮವಾಗಿ ರಥವನ್ನು ನಡೆಸುತ್ತಾ) ಯುದ್ಧ ಮಾಡುತ್ತಿದ್ದರು. ಆ ಸಮಯದಲ್ಲಿ ರಣವಾದ್ಯಗಾರರು ಡೋಲುಗಳನ್ನೂ, ಮೃದಂಗಗಳನ್ನೂ, ದುಂದುಭಿ-ಕ್ರಕಚ-ನಗಾರಿಗಳನ್ನೂ, ಭೇರಿಗಳನ್ನೂ, ತಮಟೆಗಳನ್ನೂ ಬಹುಭಯಂಕರವಾದ ರೀತಿಯಲ್ಲಿ ಬಾರಿಸತೊಡಗಿದರು. ಆ ನಿನಾದವು ಶಂಖಧ್ವನಿಗಳಿಂದಲೂ ಮತ್ತು ವೀರರ ಸಿಂಹನಾದಗಳಿಂದಲೂ ಮಿಶ್ರಿತವಾಗಿ ಮತ್ತಷ್ಟು ಭಯಂಕರವಾಗಿ ಕೇಳಿಸುತ್ತಿದ್ದಿತು."

ಳ೯ನೆಯ ಅಧ್ಯಾಯವು ಮುಗಿಯಿತು.

## ಅಭಿಮನ್ಯುವಿನಿಂದ ದುಃಶಾಸನ-ಕರ್ಣರ ಪರಾಜಯ

ಸಂಜಯನು ಅಭಿಮನ್ಯು-ದುಃಶಾಸನರ ಯುದ್ಧದ ವರದಿಯನ್ನು ಮುಂದುವರಿಸುತ್ತಾನೆ:

"ಮಹಾರಾಜ! ತನ್ನ ಬಾಣಗಳಿಂದ ಕ್ಷತ-ವಿಕ್ಷತವಾದ ಶರೀರದಿಂದ ಕೂಡಿದ್ದ, ತನ್ನನ್ನು ಎದುರಿಸಿ ನಿಂತಿದ್ದ, ಶತ್ರುವಾದ ದುಃಶಾಸನನನ್ನು ಕುರಿತು ಧೀಮಂತನಾದ ಸೌಭದ್ರನು ನಸುನಗುತ್ತಾ ಹೇಳಿದನು:

"ದುಃಶಾಸನ! ಇಂದಿನ ಯುದ್ಧದಲ್ಲಿ ಮಾನಿಯಾದ, ಶೂರನಾದ, ಕ್ರೂರಿಯಾದ, ಧರ್ಮವನ್ನು ತ್ಯಜಿಸಿರುವ, ಇತರರನ್ನು ನಿಂದೆಮಾಡುವುದ ರಲ್ಲಿಯೇ ಸದಾ ನಿರತನಾಗಿರತಕ್ಕ ಶತ್ರುವನ್ನು ಅದೃಷ್ಟವಶಾತ್ ಎದುರಿಗೇ ಕಾಣುತ್ತಿದ್ದೇನೆ. ಎಲವೋ ಮೂರ್ಖ! ಕಪಟದ್ಯೂತದಲ್ಲಿ ಪಡೆದ ವಿಜಯ ದಿಂದ ಉನ್ಮತ್ತನಾದ ನೀನು–ಧೃತರಾಷ್ಟ್ರಮಹಾರಾಜನೂ ಕೇಳಿಸಿಕೊಳ್ಳು ವಂತೆಯೇ ನಿನ್ನ ನಿಷ್ಠುರವಾದ ಮಾತುಗಳಿಂದ ಧರ್ಮಮೂರ್ತಿಯಾದ ಯುಧಿಷ್ಠಿರನನ್ನು ಕೋಪಿಸಿಕೊಳ್ಳುವಂತೆ ಮಾಡಿದೆ. ಶಕುನಿಯ ಬುದ್ಧಿಯ ಬಲದಿಂದ ಮೋಸದ ಪಗಡೆಯಾಟವನ್ನು ಆಶ್ರಯಿಸಿ ವಿಜಯಗಳಿಸಿದ ನೀನು, ಉನ್ಮತ್ತನಾಗಿ ಭೀಮಸೇನನ ವಿಷಯದಲ್ಲಿಯೂ ಬಹಳ ಅಬದ್ಧವಾದ ಮಾತುಗಳನ್ನು ಆಡಿದೆ. ಅಲ್ಲವೇ? ಮಹಾತ್ಮರಾದ ಯುಧಿಷ್ಠಿರನ ಮತ್ತು ಭೀಮಸೇನನ ಕೋಪದ ಕಾರಣದಿಂದಲೇ ನಿನಗೆ ಈ ದುರ್ದಿನವು ಪ್ರಾಪ್ತವಾಗಿದೆ. (ದೊಡ್ಡವರ ಕೋಪವು ಯಾವುದೇ ಕಾರಣದಿಂದಲೂ ವ್ಯರ್ಥವಾಗಿ ಹೋಗುವುದಿಲ್ಲ. ಅವರ ಕೋಪಕ್ಕೆ ಕಾರಣನಾದವನು ಎಂದಾದರೊಂದು ದಿವಸ ಅದರ ಫಲವನ್ನು ಅನುಭವಿಸಿಯೇ ತೀರುತ್ತಾನೆ.)

ಪರವಿತ್ತಾಪಹಾರಸ್ಯ ಕ್ರೋಧಸ್ಯಾಪ್ರಶಮಸ್ಯ ಚ ।
ಲೋಭಸ್ಯ ಜ್ಞಾನನಾಶಸ್ಯ ದ್ರೋಹಸ್ಯಾತ್ಯಾಹಿತಸ್ಯ ಚ ॥೫॥
ಪಿತೄಣಾಂ ಮಮ ರಾಜ್ಯಸ್ಯ ಹರಣಸ್ಯೋಗ್ರಧನ್ವಿನಾಮ್ ।
ತತ್ತ್ವಯೇದಮನುಪ್ರಾಪ್ತಂ ಪ್ರಕೋಪಾದ್ವೈ ಮಹಾತ್ಮನಾಮ್ ॥೬॥

ಪರವಿತ್ತಾಪಹಾರ, ಕ್ರೋಧ, ಅಶಾಂತಿ, ಲೋಭ, ಜ್ಞಾನನಾಶ, ದ್ರೋಹ, ಅವಿಚಾರಿಕೃತ್ಯಗಳು, ಉಗ್ರಧನ್ವಿಗಳಾದ ನನ್ನ ಪಿತೃಗಳ ರಾಜ್ಯಾಪಹರಣ-ಈ ಎಲ್ಲ ದುಷ್ಕರ್ಮಗಳ ಫಲವಾಗಿ ಮತ್ತು ಮಹಾತ್ಮರಾದ ಪಾಂಡವರ ಕೋಪದ ಫಲವಾಗಿ ನಿನಗೆ ಈ ದುರ್ದಿನವು ಪ್ರಾಪ್ತವಾಗಿದೆ.

ಮೂರ್ಖನೇ! ನೀನು ಆ ನಿನ್ನ ಅಧರ್ಮದ ಕ್ರೂರಫಲವನ್ನು ಈಗ ಅನುಭವಿಸಲಿರುವೆ. ಎಲ್ಲ ಸೈನಿಕರೂ ನೋಡುತ್ತಿರುವಂತೆಯೇ ಬಾಣಗಳಿಂದ ನಿನ್ನ ಶಾಸನವನ್ನು ಮಾಡುತ್ತೇನೆ. (ನಿನ್ನನ್ನು ಶಿಕ್ಷಿಸುತ್ತೇನೆ.) ಈಗ ನಾನು ಯುದ್ಧದಲ್ಲಿ, ಮಹಾತ್ಮರಾದ ನನ್ನ ಪಿತೃಗಳ ಕೋಪಕ್ಕೆ–ನಿನ್ನನ್ನು ಶಿಕ್ಷಿಸುವುದರ ಮೂಲಕ ಪ್ರತಿಕ್ರಿಯೆಯನ್ನು ಮಾಡಿ ಋಣಮುಕ್ತನಾಗುತ್ತೇನೆ. ಅಂದಿನ ನಿನ್ನ ದುಶ್ಚರ್ಯೆಯಿಂದಾಗಿ ಕ್ರೋಧಾಭಿಭೂತಳಾಗಿರುವ ನನ್ನ ತಾಯಿಯಾದ ದ್ರೌಪದಿಯ ಮತ್ತು ನನ್ನ ದೊಡ್ಡಪ್ಪನಾದ ಭೀಮಸೇನನ ಮನಸ್ಸಿನ ಆಶಯ ವನ್ನು ಇಂದು ನಾನು ನಿನ್ನೊಡನೆ ಮಾಡಲಿರುವ ಯುದ್ಧದಲ್ಲಿ ಪೂರೈಸಿಕೊಟ್ಟು ಮಾತೃಋಣದಿಂದಲೂ ಪಿತೃಋಣದಿಂದಲೂ ಮುಕ್ತನಾಗುತ್ತೇನೆ. ನೀನು ಯುದ್ಧವನ್ನು ಬಿಟ್ಟು ಓಡಿಹೋಗದಿದ್ದರೆ ನನ್ನಿಂದ ಜೀವಸಹಿತವಾಗಿ ತಪ್ಪಿಸಿಕೊಂಡು ಹೋಗಲಾರೆ.'

ಹೀಗೆ ಹೇಳಿ ಶತ್ರುವೀರಹಂತಕನಾದ ಮಹಾಬಾಹುವಾದ ಅಭಿಮನ್ಯುವು ಯಮ, ಅಗ್ನಿ ಮತ್ತು ವಾಯುಗಳಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ದುಃಶಾಸನನನ್ನು ಅಂತಗೊಳಿಸಲು (ಸಂಹರಿಸಲು) ಸಮರ್ಥವಾದ ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಪ್ರಹರಿಸಿದನು. ಆರ್ಜುನಿಯು ಬಿಟ್ಟ ಬಾಣವು ಒಡನೆಯೇ ದುಃಶಾಸನನ ಬಳಿಗೆ ಹೋಗಿ ಅವನನ್ನು ಜತ್ರುಪ್ರದೇಶದಲ್ಲಿ (ಕೊರಳಿನ ಎಲುಬು ಪ್ರದೇಶ) ಭೇದಿಸಿ ಹಾವು ಹುತ್ತವನ್ನು ಸೇರಿಕೊಳ್ಳುವಂತೆ-ರೆಕ್ಕೆಯೊಡನೆಯೇ ಭೂಮಿಯೊಳಗೆ ಸೇರಿ ಕೊಂಡಿತು. ಪುನಃ ಅಭಿಮನ್ಯುವು ದುಃಶಾಸನನನ್ನು ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಶಿಂಜಿನಿಯನ್ನು ಕಿವಿಯವರೆಗೂ ಸೆಳೆದು ಪ್ರಯೋಗಿಸಿದ, ಅಗ್ನಿಸಮಸ್ಪರ್ಶವಿದ್ದ (ಕೇವಲ ಸ್ಪರ್ಶಮಾತ್ರದಿಂದಲೇ ಸುಡುವುದಾಗಿದ್ದ) ಅಭಿಮನ್ಯುವು ಬಿಟ್ಟ ಬಾಣಗಳಿಂದ ಗಾಢವಾಗಿ ಗಾಯಗೊಂಡು ದುಃಖಿತನಾದ ದುಃಶಾಸನನು ತಾನು ಕುಳಿತಿದ್ದ ಆಸನದ ಪಕ್ಕಕ್ಕೆ ಒರಗಿ

ಕುಳಿತುಕೊಂಡನು. ಸ್ವಲ್ಪಹೊತ್ತಿನಲ್ಲಿಯೇ ದುಃಶಾಸನನು ಮೂರ್ಛಿತನೂ ಆದನು. ಅಭಿಮನ್ಯುವಿನ ಬಾಣಗಳಿಂದ ಪೀಡಿತನಾಗಿದ್ದ ವಿಸಂಜ್ಞನಾಗಿದ್ದ ದುಃಶಾಸನನನ್ನು ಅವನ ಸಾರಥಿಯು ಅವಸರದಿಂದ ರಣರಂಗದ ಮಧ್ಯದಿಂದ ಹೊರಕ್ಕೆ ಒಯ್ದನು. ಪಾಂಡವರು, ದ್ರೌಪದಿಯ ಐವರು ಮಕ್ಕಳು, ವಿರಾಟ, ಪಾಂಚಾಲ-ಕೇಕಯಯೋಧರು–ಇವರೆಲ್ಲರೂ ದುಃಶಾಸನನು ಪರಾಜಿತ ನಾದುದನ್ನು ಕಂಡು ಸಿಂಹನಾದಗಳನ್ನು ಮಾಡಿದರು. ಅಲ್ಲಿದ್ದ ಪಾಂಡವ ಸೈನಿಕರು ಪರಮಹೃಷ್ಟರಾಗಿ ನಾನಾವಿಧವಾದ ಎಲ್ಲ ಬಗೆಯ ರಣವಾದ್ಯಗಳನ್ನೂ ಬಾರಿಸತೊಡಗಿದರು ಮತ್ತು ನಸುನಗುತ್ತಾ ಸೌಭದ್ರನ ರಣಕ್ರೀಡೆಯನ್ನು ನೋಡುತ್ತಿದ್ದರು. ಅತ್ಯಂತ ವೈರಿಯಾದ ತಮ್ಮ ಶತ್ರುವು ಅಭಿಮನ್ಯುವಿನಿಂದ ಪರಾಜಿತನಾದುದನ್ನು ಕಂಡು, ತಮ್ಮ ಧ್ವಜಾಗ್ರಗಳಲ್ಲಿ ಅನುಕ್ರಮವಾಗಿ ಧರ್ಮ, ವಾಯು, ಶಕ್ರ ಮತ್ತು ಅಶ್ವಿನೀದೇವತೆಗಳ ಪ್ರತಿಮೆಗಳನ್ನು ಹೊಂದಿದ್ದ ಮಹಾರಥರಾದ ದ್ರೌಪದಿಯ ಐವರು ಮಕ್ಕಳು, ಸಾತ್ಯಕಿ, ಚೇಕಿತಾನ, ಧೃಷ್ಟದ್ಯುಮ್ನ, ಶಿಖಂಡೀ, ಕೇಕಯರು, ಧೃಷ್ಟಕೇತು, ಮತ್ಸ್ಯರು, ಪಾಂಚಾಲರು, ಸೃಂಜಯರು–ಇವರೆಲ್ಲರೂ ಸಂತೋಷಭರಿತ ರಾಗಿ ದ್ರೋಣರ ವ್ಯೂಹವನ್ನು ಭೇದಿಸುವ ಇಚ್ಛೆಯಿಂದ ಯುಧಿಷ್ಠಿರನನ್ನು ಮುಂದೆಮಾಡಿಕೊಂಡು ಅವಸರದಿಂದ ಧಾವಿಸಿದರು. ಅನಂತರ ಜಯಾಕಾಂಕ್ಷಿಗಳಾದ, ಯುದ್ಧದಿಂದ ಹಿಮ್ಮೆಟ್ಟದ ನಿನ್ನ ಕಡೆಯ ಯೋಧರಿಗೂ ಪಾಂಡವರ ಕಡೆಯ ಯೋಧರಿಗೂ ಮಹಾಯುದ್ಧವು ಪ್ರಾರಂಭವಾಯಿತು. ಮಹಾರಾಜ! ಈ ರೀತಿಯಲ್ಲಿ ಅತಿಭಯಂಕರವಾದ ಯುದ್ಧವು ನಡೆಯುತ್ತಿರಲಾಗಿ ದುರ್ಯೋಧನನು ರಾಧೇಯನಿಗೆ ಹೇಳಿದನು:

"ನೋಡು ಕರ್ಣ! ಸೂರ್ಯನಂತೆ ಶತ್ರುಗಳಿಗೆ ಸಂತಾಪವನ್ನುಂಟು ಮಾಡುತ್ತಿದ್ದ, ಶತ್ರುಗಳ ಸೈನ್ಯವನ್ನು ಅವ್ಯಾಹತವಾಗಿ ಸಂಹಾರಮಾಡುತ್ತಿದ್ದ ವೀರನಾದ ದುಃಶಾಸನನು ಅಭಿಮನ್ಯುವಿಗೆ ವಶನಾಗಿ ಹೋದನು. (ಅಭಿಮನ್ಯುವಿನಿಂದ ಪರಾಜಿತನಾಗಿ ಬಿಟ್ಟನು.) ಇತ್ತಲಾಗಿ ಸಿಂಹಗಳಂತೆ ಬಲದಿಂದ ಕೊಬ್ಬಿರುವ ಈ ಪಾಂಡವರು ಪರಮಕ್ರುದ್ಧರಾಗಿ ಆಯುಧ ಗಳನ್ನೆತ್ತಿಕೊಂಡು ಸುಭದ್ರೆಯ ಮಗನಾದ ಅಭಿಮನ್ಯುವನ್ನು ರಕ್ಷಿಸುವ ಸಲುವಾಗಿ ಮುನ್ನುಗ್ಗಿ ಬರುತ್ತಿದ್ದಾರೆ."

ಮಹಾರಾಜ! ದುರ್ಯೋಧನನ ಮಾತಿನ ಇಂಗಿತವನ್ನು ತಿಳಿದ ಕರ್ಣನು ನಿನ್ನ ಮಗನಿಗೆ ಹಿತವನ್ನುಂಟುಮಾಡುವ ಸಲುವಾಗಿ ದುರಾಸದನಾದ ಅಭಿಮನ್ಯುವನ್ನು ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿದನು. ಶೂರನಾದ ಕರ್ಣನು ರಣಾಂಗಣದಲ್ಲಿ ಅಭಿಮನ್ಯುವಿನ ಅನುಯಾಯಿಗಳಾಗಿದ್ದ ಯೋಧರನ್ನೂ ತೀಕ್ಷ್ಣವಾದ ಮತ್ತು ಶ್ರೇಷ್ಠವಾದ ಬಾಣಗಳಿಂದ ತಿರಸ್ಕಾರ ಪೂರ್ವಕವಾಗಿ ಪ್ರಹರಿಸಿದನು. ಮಹಾತ್ಮನಾದ ಅಭಿಮನ್ಯುವು ದ್ರೋಣರ ಬಳಿಗೆ ಹೋಗಬೇಕೆಂಬ ಆತುರದಿಂದ ಕರ್ಣನನ್ನು ಎಪ್ಪತ್ತುಮೂರು ಬಾಣ ಗಳಿಂದ ಪ್ರಹರಿಸಿದನು. ರಥಗಳ ಸಮೂಹವನ್ನೇ ಧ್ವಂಸಮಾಡಿಕೊಂಡು ಮುನ್ನಡೆಯುತ್ತಿದ್ದ ವಜ್ರಹಸ್ತನ (ಇಂದ್ರನ) ಮಗನ (ಅರ್ಜುನನ) ಮಗನನ್ನು ದ್ರೋಣರ ಸಮೀಪಕ್ಕೆ ಹೋಗದಂತೆ ತಡೆಯಲು ದುರ್ಯೋಧನನ ಕಡೆಯಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ. ಆದರೆ ಕರ್ಣನು ಮಾತ್ರ ತನ್ನ ಪ್ರಯತ್ನವನ್ನು ನಿಲ್ಲಿಸಲಿಲ್ಲ. ವಿಜಯೇಚ್ಛುವಾದ, ಸಕಲಧನುಷ್ಮಂತರಲ್ಲಿಯೂ ಮಹಾ ಮಾನಿಷ್ಠನಾದ, ಅಸ್ತ್ರವಿದ್ಯೆಯಲ್ಲಿ ಶ್ರೇಷ್ಠನಾದ, ಪರಶುರಾಮನ ಶಿಷ್ಯನಾದ, ಪ್ರತಾಪವಂತನಾದ ಕರ್ಣನು ತನ್ನ ಶ್ರೇಷ್ಠವಾದ ಅಸ್ತ್ರವನ್ನು ಪ್ರದರ್ಶಿಸುತ್ತಾ ಶತ್ರುಗಳಿಗೆ ಎದುರಿಸಲು ಅಸಾಧ್ಯನಾದ, ಸುಭದ್ರೆಯ ಮಗನಾದ ಅಭಿಮನ್ಯುವನ್ನು ನೂರಾರು ಅಸ್ತ್ರಗಳಿಂದ ಗಾಯಗೊಳಿಸಿದನು. ರಾಧೇಯನ ಅಸ್ತ್ರವೃಷ್ಟಿಗಳಿಂದ ಪೀಡಿತನಾಗುತ್ತಿದ್ದರೂ ದೇವಸದೃಶನಾದ ಅಭಿಮನ್ಯುವು ಧೈರ್ಯಗುಂದಲಿಲ್ಲ. ಅನಂತರ ಅಭಿಮನ್ಯುವು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ, ತೀಕ್ಷ್ಣವಾಗಿದ್ದ, ಬಗ್ಗಿದ ಗಿಣ್ಣುಗಳಿದ್ದ ಭಲ್ಲಗಳಿಂದ ಅನೇಕ ಯೋಧರ ಧನುಸ್ಸುಗಳನ್ನು ಕತ್ತರಿಸಿ ಅನಂತರ ಕರ್ಣನನ್ನು ಬಾಣಗಳಿಂದ ಪೀಡಿಸತೊಡಗಿದನು. ನಸುನಗುತ್ತಿರುವನೋ ಎಂಬಂತೆ ಮುಖಭಾವವನ್ನು ಹೊಂದಿದವನಾಗಿ ಸರ್ವದಾ ಮಂಡಲೀಕೃತವಾಗಿಯೇ ಮಾಡಲ್ಪಟ್ಟಿದ್ದ ಧನುಸ್ಸಿನಿಂದ ನಿರ್ಮುಕ್ತವಾದ ಸರ್ಪೋಪಮವಾದ ಬಾಣಗಳಿಂದ ಛತ್ರ, ಧ್ವಜ, ಸಾರಥಿ ಮತ್ತು ಅಶ್ವಸಹಿತನಾದ ಕರ್ಣನನ್ನು ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಕರ್ಣನೂ ಸಹ ಬಗ್ಗಿದ ಗಿಣ್ಣುಗಳಿದ್ದ ಬಾಣ ಗಳನ್ನು ಅಭಿಮನ್ಯುವಿನ ಮೇಲೆ ಪ್ರಯೋಗಿಸಿದನು. ಆದರೆ ಫಾಲ್ಗುನಿಯು ಆ (೧೫೭–೧೬)

ಎಲ್ಲ ಬಾಣಗಳನ್ನೂ (ಬಾಣಗಳ ಪ್ರಹಾರವನ್ನೂ) ಸ್ವಲ್ಪವಾದರೂ ಗಾಬರಿಗೊಳ್ಳದೇ ಸಹಿಸಿಕೊಂಡನು. ಅನಂತರ ವೀರ್ಯವಂತನಾದ ಅಭಿಮನ್ಯುವು ಮುಹೂರ್ತಮಾತ್ರದಲ್ಲಿ ಒಂದೇ ಒಂದು ಬಾಣದಿಂದ ಕರ್ಣನ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ಅವು ಭೂಮಿಯಮೇಲೆ ಬೀಳುವಂತೆ ಮಾಡಿದನು. ಸಂಕಟದಲ್ಲಿ ಸಿಕ್ಕಿದ ಕರ್ಣನನ್ನು ನೋಡಿ ಅವನ ತಮ್ಮನು ಧನುಸ್ಸನ್ನು ದೃಢವಾಗಿ ಹಿಡಿದು ಅಭಿಮನ್ಯುವನ್ನು ಎದುರಿಸಿದನು. ಆ ಸಮಯ ದಲ್ಲಿ ಪಾಂಡವರೂ ಮತ್ತು ಅವರ ಅನುಚರರೂ ಗಟ್ಟಿಯಾಗಿ ಜಯಘೋಷ ಮಾಡಿದರು. ರಣವಾದ್ಯಗಳನ್ನು ಬಾರಿಸಿದರು. ಅಭಿಮನ್ಯುವನ್ನು ಬಹಳವಾಗಿ ಹೊಗಳಿದರು.”

ಳ೦ನೆಯ ಅಧ್ಯಾಯವು ಮುಗಿಯಿತು.

ಳ೧ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನಿಂದ ಕರ್ಣಾನುಜನ ಸಂಹಾರ: ಕೌರವಸೇನೆಯ ಸಂಹಾರ ಮತ್ತು ಪಲಾಯನ

ಸಂಜಯನು ಕರ್ಣಾನುಜ-ಅಭಿಮನ್ಯುಗಳ ಯುದ್ಧದ ವಿಷಯವನ್ನು ಮುಂದುವರಿಸಿ ಹೇಳುತ್ತಾನೆ:

“ಮಹಾರಾಜ! ಕರ್ಣನ ತಮ್ಮನು ಧನುಷ್ಪಾಣಿಯಾಗಿ ಗರ್ಜನೆಮಾಡುತ್ತಾ ಮೌರ್ವಿಯನ್ನು ಬಾರಿ-ಬಾರಿಗೂ ಸೆಳೆಯುತ್ತಾ ಆ ಇಬ್ಬರು ಮಹಾತ್ಮರ (ಅಭಿಮನ್ಯು-ಕರ್ಣರ) ರಥಗಳ ಮಧ್ಯಭಾಗಕ್ಕೆ ಶೀಘ್ರವಾಗಿ ಬಂದನು. ನಗುತ್ತಿರುವಂತೆಯೇ ಮುಖಭಾವವನ್ನು ಹೊಂದಿದ್ದ ಕರ್ಣಾನುಜನು ಛತ್ರ-ಧ್ವಜಾಶ್ವ-ಸಾರಥಿಸಹಿತನಾದ, ದುರಾಸದನಾದ ಅಭಿಮನ್ಯುವನ್ನು ಹತ್ತುಬಾಣಗಳಿಂದ ಪ್ರಹರಿಸಿದನು. ಪಿತೃ-ಪಿತಾಮಹರಿಗೆ ಅನುಸಾರವಾಗಿ ಅತಿಮಾನುಷವಾದ ಸಾಹಸಕಾರ್ಯಗಳನ್ನು ಮಾಡುತ್ತಿದ್ದ ಅಭಿಮನ್ಯುವು ಕರ್ಣನ ತಮ್ಮನು ಬಿಟ್ಟ ಬಾಣಗಳಿಂದ ಗಾಯಗೊಂಡುದನ್ನು ಕಂಡು ನಿನ್ನ ಕಡೆಯವರೆಲ್ಲರೂ ಸಂತಸಗೊಂಡರು. ಆ ಸಮಯದಲ್ಲಿ ಅಭಿಮನ್ಯುವು ನಗು-ನಗುತ್ತಲೇ ಶರಸಂಧಾನಮಾಡಿ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದು ಒಂದು ಬಾಣದಿಂದ ಕರ್ಣಾನುಜನ ಶಿರಸ್ಸನ್ನು ಕತ್ತರಿಸಿಬಿಟ್ಟನು. ಚಂಡಮಾರುತದ ವೇಗದಿಂದ ತಲೆಕೆಳಗಾಗಿ ಪರ್ವತ

ಶಿಖರದಿಂದ ಕೆಳಕ್ಕೆ ಬೀಳುವ ಬೆಟ್ಟಕಣಿಗಿಲೇಮರದಂತೆ ಕರ್ಣಾನುಜನ ಶಿರಸ್ಸು ರಥದಿಂದ ಕೆಳಕ್ಕೆ ಬಿದ್ದಿತು. ತಮ್ಮನು ಹತನಾದುದನ್ನು ಕಂಡು ಕರ್ಣನು ಬಹಳವಾಗಿ ವ್ಯಥೆಗೊಂಡನು. ಅಭಿಮನ್ಯುವು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ ಕರ್ಣನನ್ನು ಯುದ್ಧದಿಂದ ಹಿಮ್ಮೆಟ್ಟಿಸಿ ಮಹಾ ಧನುಷ್ಮಂತರಾದ ಇತರ ಯೋಧರನ್ನೂ ಶೀಘ್ರವಾಗಿ ಆಕ್ರಮಿಸಿದನು. ಆ ಸಮಯದಲ್ಲಿ ಪರಮಕ್ರುದ್ಧನಾಗಿದ್ದ, ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿದ್ದ, ಮಹಾರಥನಾದ ಅಭಿಮನ್ಯುವು ವಿಶಾಲವಾಗಿ ಹರಡಿಕೊಂಡಿದ್ದ ಗಜಾಶ್ವ-ರಥ-ಪದಾತಿಸೈನ್ಯವನ್ನು ಧ್ವಂಸಮಾಡಲು ಉಪಕ್ರಮಿಸಿದನು. ಅಭಿಮನ್ಯುವಿನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಕರ್ಣನು ರಣರಂಗದಲ್ಲಿ ಹೆಚ್ಚುಹೊತ್ತು ನಿಲ್ಲಲು ಸಾಧ್ಯವಾಗದೇ ವೇಗವಾಗಿ ಹೋಗುವ ಕುದುರೆಗಳ ಸಹಾಯದಿಂದ ರಣರಂಗವನ್ನು ಬಿಟ್ಟು ಓಡಿಹೋದನು. ಕರ್ಣನೂ ಹೊರಟುಹೋದನಂತರ ಕೌರವರ ಸೈನ್ಯವು ಭಗ್ನವಾಗಿ ಹೋಯಿತು. ಆಕಾಶವು ಮಿಡತೆಹುಳುಗಳಿಂದ ವ್ಯಾಪಿಸಿರುವಂತೆ ಅಥವಾ ಮಳೆಯ ಜಲಧಾರೆಗಳಿಂದ ತುಂಬಿರುವಂತೆ–ರಣರಂಗವೇ ಅಭಿಮನ್ಯುವಿನ ಬಾಣಗಳಿಂದ ಮುಚ್ಚಿಹೋಗಿದ್ದಿತು. ಆ ಸಮಯದಲ್ಲಿ ಯಾವುದೊಂದೂ ಕಾಣುತ್ತಿರಲಿಲ್ಲ. ನಿಶಿತವಾದ ಬಾಣಗಳಿಂದ ಸತತವಾಗಿ ಹತರಾಗುತ್ತಿದ್ದ ನಿನ್ನ ಕಡೆಯ ಯೋಧರಲ್ಲಿ ಜಯದ್ರಥನ ಹೊರತಾಗಿ ಬೇರೆ ಯಾರೂ ಧೈರ್ಯದಿಂದ ನಿಲ್ಲಲು ಸಾಧ್ಯವಾಗಲಿಲ್ಲ. ಪುರುಷರ್ಷಭನಾದ ಅಭಿಮನ್ಯುವು ಶಂಖವನ್ನೊಮ್ಮೆ ಗಟ್ಟಿಯಾಗಿ ಊದಿ ದುರ್ಯೋಧನನ ಸೈನ್ಯದಮೇಲೆ ಪುನಃ ದಾಳಿಯನ್ನು ಪ್ರಾರಂಭಿಸಿದನು.

ಹುಲ್ಲುಮೆದೆಯಮೇಲೆ ಬಿದ್ದ ಒಂದು ಬೆಂಕಿಯ ಕಣವು ಸ್ವಲ್ಪಹೊತ್ತಿನಲ್ಲಿಯೇ ಹುಲ್ಲಿನ ಮೆದೆಯನ್ನೇ ಭಸ್ಮಮಾಡಿಬಿಡುವಂತೆ–ಶತ್ರುಗಳನ್ನು ಅಪಾರ ಸಂಖ್ಯೆಯಲ್ಲಿ ಸಂಹರಿಸುತ್ತಾ ಕೌರವಸೈನ್ಯದ ಮಧ್ಯಭಾಗದಲ್ಲಿ ಅಭಿಮನ್ಯುವು ಸಂಚರಿಸುತ್ತಿದ್ದನು. ಆ ಮಹಾಸೇನೆಯೊಳಗೆ ಪ್ರವೇಶಿಸಿ ತನ್ನ ನಿಶಿತವಾದ ಬಾಣಗಳಿಂದ ರಥಿಗಳನ್ನೂ, ಗಜಸೈನಿಕರನ್ನೂ, ಅಶ್ವಸೈನಿಕರನ್ನೂ, ಪದಾತಿಗಳನ್ನೂ ಸಂಹಾರಮಾಡುತ್ತಾ ರಣಾಂಗಣವನ್ನು ಸಂಪೂರ್ಣವಾಗಿ ಕಬಂಧಗಳಿಂದ (ಮುಂಡಗಳಿಂದ) ವ್ಯಾಪ್ತವನ್ನಾಗಿ ಮಾಡಿಬಿಟ್ಟನು. ಅಭಿಮನ್ಯುವಿನ ಧನುಸ್ಸಿನಿಂದ ವಿನಿಃಸೃತವಾದ ಶ್ರೇಷ್ಠವಾದ ಬಾಣಗಳಿಂದ ಕ್ಷತ-ವಿಕ್ಷತರಾದ, ಆದರೂ ಜೀವವನ್ನು ಉಳಿಸಿಕೊಳ್ಳಬೇಕೆಂದು ಆತುರಪಡುತ್ತಿದ್ದ ನಿನ್ನ ಕಡೆಯ

ಯೋಧರು ಪಲಾಯನಮಾಡುವಾಗ ತಮ್ಮ ಎದುರಾಗಿ ಸಿಕ್ಕಿದ ತಮ್ಮ ಕಡೆಯ ಯೋಧರನ್ನೇ ತುಳಿದು ಸಂಹಾರಮಾಡುತ್ತಾ ಓಡಿಹೋಗುತ್ತಿದ್ದರು. ಮಹಾರಾಜ! ಅಭಿಮನ್ಯುವು ಬಿಡುತ್ತಿದ್ದ ಬಾಣಗಳು ಸಾಮಾನ್ಯವಾದ ಬಾಣ ಗಳಾಗಿರಲಿಲ್ಲ. ಬಹಳ ಘೋರವಾಗಿದ್ದುವು. ಭಯಂಕರವಾದ ವಿಶಸನಕ್ರಿಯೆ ಯನ್ನು ಮಾಡುತ್ತಿದ್ದುವು. ತೀಕ್ಷ್ಣವಾಗಿದ್ದುವು. ಬಹುಸಂಖ್ಯಾತವಾಗಿದ್ದುವು. ರಥ-ಗಜಾಶ್ವ-ಪದಾತಿಗಳನ್ನು ಸಂಹರಿಸಿ ಶೀಘ್ರವಾಗಿ ಭೂಮಿಯನ್ನು ನಾಟುತ್ತಿದ್ದುವು. ಆಯುಧಗಳನ್ನು ಧರಿಸಿರುವ, ಅಂಗುಲಿತ್ರಾಣಗಳನ್ನು ಹೊಂದಿ ರುವ, ಗದೆಗಳನ್ನು ಹಿಡಿದಿರುವ, ಅಂಗದಾಭರಣಗಳಿಂದಲೂ-ಸುವರ್ಣಾ ಭರಣಗಳಿಂದಲೂ ಭೂಷಿತವಾಗಿರುವ ಯೋಧರ ತೋಳುಗಳು ಅಭಿಮನ್ಯುವಿನ ಬಾಣಗಳಿಂದ ಕತ್ತರಿಸಲ್ಪಟ್ಟು ರಣಭೂಮಿಯಲ್ಲಿ ಚೆಲ್ಲಾಡಿರು ವುದು ಕಂಡುಬರುತ್ತಿದ್ದಿತು. ಧನುಸ್ಸುಗಳು, ಬಾಣಗಳು, ಕತ್ತಿಗಳು, ಮುಂಡ ಗಳು, ಹಾರ ಮತ್ತು ಕರ್ಣಕುಂಡಲಗಳಿಂದ ವಿಭೂಷಿತವಾಗಿದ್ದ ಶಿರಸ್ಸುಗಳು ಸಾವಿರಾರು ಸಂಖ್ಯೆಯಲ್ಲಿ ಛಿನ್ನ-ಭಿನ್ನವಾಗಿ ಆ ರಣಾಂಗಣದಲ್ಲಿ ಚೆಲ್ಲಾಡಿದ್ದುವು. ಯುದ್ಧಸಾಮಗ್ರಿಗಳಿಂದ ಕೂಡಿದ್ದ ರಥಗಳು, ಆಸನಗಳು, ಮನೋಹರವಾದ ಈಷಾದಂಡಗಳು, ರಥದ ಅಚ್ಚುಗಳು, ಮುರಿದು ಹೋಗಿದ್ದ ಚಕ್ರಗಳು, ಕುದುರೆಗಳನ್ನು ಕಟ್ಟುವ ನೊಗಗಳು, ಶಕ್ತ್ಯಾಯುಧಗಳು, ಧನುಸ್ಸುಗಳು, ಕತ್ತಿಗಳು, ದೊಡ್ಡ-ದೊಡ್ಡ ಧ್ವಜಗಳು, ಗುರಾಣಿಗಳು, ಧನುರ್ಬಾಣಗಳು—ಇವುಗಳೆಲ್ಲವೂ ಛಿನ್ನ-ಭಿನ್ನವಾಗಿ ರಣಾಂಗಣದ ಸುತ್ತಲೂ ರಾಶಿ-ರಾಶಿಯಾಗಿ ಬಿದ್ದಿದ್ದುವು. ಅಭಿಮನ್ಯುವಿನ ಬಾಣಕ್ಕೆ ಲಕ್ಷ್ಯರಾಗಿ ಅಸುನೀಗಿದ್ದ ಕ್ಷತ್ರಿಯಯೋಧರಿಂದಲೂ, ಗಜಾಶ್ವಯೋಧರಿಂದಲೂ ತುಂಬಿ ಹೋಗಿದ್ದ ಆ ರಣಾಂಗಣವು ಕ್ಷಣಮಾತ್ರದಲ್ಲಿ ಅಗಮ್ಯವೂ (ದಾಟಲು ಅಸಾಧ್ಯವಾದುದು) ದಾರುಣವೂ (ಭಯಂಕರವಾದುದೂ) ಆಯಿತು. ಅಭಿಮನ್ಯುವಿನ ನಿಶಿತವಾದ ಬಾಣಗಳಿಂದ ಪೆಟ್ಟುತಿಂದು ಪರಸ್ಪರವಾಗಿ ತಮ್ಮ ಸಂಕಟವನ್ನು ಹೇಳಿಕೊಂಡು ರಾಜಕುಮಾರರು ಗೋಳಾಡುತ್ತಿದ್ದರು. ಆ ಗೋಳಾಟದ ಮಹಾಶಬ್ದವು ಹೇಡಿಗಳಿಗೆ ಭಯವನ್ನುಂಟುಮಾಡುವುದಾಗಿ ದ್ದಿತು. ಮಹಾರಾಜ! ನಿಶ್ಚಯವಾಗಿಯೂ ರಾಜಕುಮಾರರ ಆರ್ತನಾದವು ನಾಲ್ಕುದಿಕ್ಕುಗಳಲ್ಲಿಯೂ ಪ್ರತಿಧ್ವನಿಸುತ್ತಿದ್ದಿತು. ಅಂತಹ ಆರ್ತನಾದದ ಮಧ್ಯದಲ್ಲಿಯೂ ಅಭಿಮನ್ಯುವು ಅಶ್ವ-ಗಜ-ಪದಾತಿಸೈನ್ಯಗಳ ಸಂಹಾರವನ್ನು ಮುಂದುವರಿಸುತ್ತಲೇ ಇದ್ದನು. ಹುಲ್ಲುಮೆದೆಯ ಮೇಲೆ ಬಿಸುಟ ಒಂದು

ಬೆಂಕಿಯ ಕಿಡಿಯು ದೊಡ್ಡದಾದ ಹುಲ್ಲುಮೆದೆಯನ್ನು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ ಭಾರತೀಯ ಸೈನಿಕರ ಮಧ್ಯದಲ್ಲಿ ಬೆಂಕಿಯ ಕಿಡಿಗೆ ಸಮಾನವಾಗಿ, ಅಭಿಮನ್ಯುವು ಶತ್ರುಗಳೆಲ್ಲರನ್ನೂ ತನ್ನ ಬಾಣಗಳಿಂದ ಅವ್ಯಾಹತವಾಗಿ ಸುಡುತ್ತಿದ್ದುದು ಕಂಡುಬಂದಿತು. ಧೂಳಿನಿಂದ ಮುಚ್ಚಿಹೋಗಿದ್ದ ಸೈನ್ಯದ ಮಧ್ಯದಲ್ಲಿ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಿದ್ದ ಅಭಿಮನ್ಯುವನ್ನು ನಾವು ಸ್ವಲ್ಪಹೊತ್ತಿನವರೆಗೆ ಕಾಣಲೇ ಇಲ್ಲ. ಗಜಾಶ್ವ-ಪದಾತಿಗಳ ಆಯುಸ್ಸನ್ನು ಕ್ಷಣ-ಕ್ಷಣಕ್ಕೂ ಕಬಳಿಸುತ್ತಿದ್ದ, ಶತ್ರುಗಳ ಸಮೂಹವನ್ನು ಬಾಣಾಗ್ನಿಯಿಂದ ಸುಟ್ಟುಹಾಕುತ್ತಿದ್ದ, ಮಧ್ಯಾಹ್ನದ ಸಮಯದ ಸೂರ್ಯನಂತೆ ತೀಕ್ಷ್ಣನಾಗಿದ್ದ ಅಭಿಮನ್ಯುವನ್ನು ಸ್ವಲ್ಪಹೊತ್ತು ಕಳೆದನಂತರ ಪುನಃ ನಾವು ನೋಡಿದೆವು. ಇಂದ್ರನ ಮಗನಾದ ಅಭಿಮನ್ಯುವು ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದನು. ಯಾವರೀತಿಯಲ್ಲಿ ಹಿಂದೆ ಅಗ್ನಿಯ ಮಗನಾದ ವೀರ್ಯವಂತನಾದ ಸ್ಕಂದನು ಅಸುರಸೈನ್ಯದ ಮಧ್ಯದಲ್ಲಿ ವಿರಾಜಿಸಿದನೋ–ಅದೇರೀತಿಯಲ್ಲಿ ಅಭಿಮನ್ಯುವು ನಿನ್ನ ಸೈನ್ಯದ ಮಧ್ಯದಲ್ಲಿ ವಿರಾಜಿಸಿದನು.”

ನಲವತ್ತೊಂದನೆಯ ಅಧ್ಯಾಯವು ಮುಗಿಯಿತು.

೪೨ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವನ್ನು ಅನುಸರಿಸಿ ಹೋಗುತ್ತಿದ್ದ ಪಾಂಡವರನ್ನು ವರದ ಪ್ರಭಾವದಿಂದ ಜಯದ್ರಥನು ತಡೆದುದು

ಸಂಜಯನು ಅಭಿಮನ್ಯುವಿನ ಪರಾಕ್ರಮವನ್ನು ಮಾತ್ರವೇ ವರ್ಣಿಸುತ್ತಿದ್ದನೇ ಹೊರತು ಭೀಮಾದಿಗಳು ಯುದ್ಧಮಾಡಿದ ಪ್ರಸಂಗವನ್ನೇ ಹೇಳಲಿಲ್ಲ. ಅಭಿಮನ್ಯುವಿಗೆ ಅಭಿವಚನವನ್ನಿತ್ತಿದ್ದಂತೆ ಅವನು ಚಕ್ರವ್ಯೂಹವನ್ನು ಭೇದಿಸಿ ಒಳಕ್ಕೆ ನುಗ್ಗಿದೊಡನೆಯೇ ಭೀಮಾದಿಗಳೂ ಅವನ ಜೊತೆಯಲ್ಲಿಯೇ ನುಗ್ಗಬೇಕಾಗಿದ್ದಿತು. ಸಂಜಯನು, ಭೀಮಾದಿಗಳು ಅಭಿಮನ್ಯುವಿನ ಜೊತೆಯಲ್ಲಿ ಬಂದ ಅಥವಾ ಬಾರದಿದ್ದ ವಿಷಯವನ್ನು ಪ್ರಸ್ತಾಪಿಸದೇ ಅಭಿಮನ್ಯುವಿನ ಪರಾಕ್ರಮವನ್ನೇ ವರ್ಣಿಸುತ್ತಿದ್ದನು. ಸಂಶಯನಿವಾರಣೆಗಾಗಿ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಬಾಲನಾಗಿದ್ದ, ಅತ್ಯಂತಸುಖದಲ್ಲಿ ಬೆಳೆದಿದ್ದ, ಕಷ್ಟವೆಂಬುದನ್ನೇ ಕಾಣದಿದ್ದ, ಸ್ವಬಾಹುಬಲದಿಂದ ದರ್ಪಿತನಾಗಿದ್ದ, ಯುದ್ಧದಲ್ಲಿ ಕುಶಲನಾಗಿದ್ದ, ಮಹಾವೀರನಾಗಿದ್ದ, ಸತ್ಕುಲಪ್ರಸೂತನಾಗಿದ್ದ, ಪ್ರಾಣವನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಿದ್ದ, ಕೇವಲ ಮೂರುವರ್ಷಗಳ ವಯಸ್ಸಿನ ಕುದುರೆಗಳ ಸಹಾಯದಿಂದ ಶತ್ರುಸೈನ್ಯದೊಳಕ್ಕೆ ನಿರ್ಭಯವಾಗಿ ನುಗ್ಗಿಹೋಗುತ್ತಿದ್ದ ಅಭಿಮನ್ಯುವನ್ನು ಯುಧಿಷ್ಠಿರನ ಕಡೆಯಲ್ಲಿದ್ದ ಯೋಧರಲ್ಲಿ ಬೇರೆ ಯಾರೂ ಅನುಸರಿಸಿ ಹೋಗಲೇ ಇಲ್ಲವೇ?"

"ಮಹಾರಾಜ! ತಮ್ಮ ಸೈನ್ಯವನ್ನೂ ವ್ಯೂಹಕ್ರಮದಲ್ಲಿ ಸಿದ್ಧಪಡಿಸಿಕೊಂಡು ಪ್ರಹಾರಕುಶಲರಾದ ಯುಧಿಷ್ಠಿರ, ಭೀಮಸೇನ, ಶಿಖಂಡೀ, ಸಾತ್ಯಕಿ, ನಕುಲ-ಸಹದೇವರು, ಧೃಷ್ಟದ್ಯುಮ್ನ, ವಿರಾಟ, ದ್ರುಪದ, ಕೇಕಯರು, ಕ್ರುದ್ಧನಾದ ಧೃಷ್ಟಕೇತು, ಮತ್ಸ್ಯಯೋಧರು–ಇವರೆಲ್ಲರೂ ಅಭಿಮನ್ಯುವನ್ನು ಅನುಸರಿಸಿಯೇ ಹೋದರು. ಯುಧಿಷ್ಠಿರನೇ ಮೊದಲಾದ ಸೌಭದ್ರನ ಪಿತೃಗಳೂ, ಸಾತ್ಯಕಿಯೇ ಮೊದಲಾದ ಅವನ ಸೋದರಮಾವಂದಿರೂ ಅಭಿಮನ್ಯುವನ್ನು ರಕ್ಷಿಸುವ ಸಲುವಾಗಿ ಅವನ ಹಿಂದೆಯೇ ಧಾವಿಸಿದರು. ಆ ಮಹಾಶೂರರೆಲ್ಲರೂ ಆಕ್ರಮಣಮಾಡುವ ಸಲುವಾಗಿ ತಮ್ಮ ಕಡೆಗೆ ವೇಗದಿಂದ ಬರುತ್ತಿರುವುದನ್ನು ಕಂಡು ನಿನ್ನ ಕಡೆಯವರು ಬೆದರಿ ಪಲಾಯನ ಮಾಡಿದರು. ನಿನ್ನ ಮಗನ ಮಹಾಸೈನ್ಯವು ಪರಾಙ್ಮುಖವಾಗುತ್ತಿರುವುದನ್ನು ಕಂಡು ಮಹಾಪರಾಕ್ರಮಿಯಾದ ನಿನ್ನ ಅಳಿಯನಾದ ಜಯದ್ರಥನು ಎದುರು ಪಕ್ಷದ ಯೋಧರೆಲ್ಲರನ್ನೂ ತಡೆದು ನಿಲ್ಲಿಸಲು ಇಚ್ಛೆಸಿದವನಾಗಿ ಶತ್ರುಸೈನ್ಯಕ್ಕೆ ಎದುರಾಗಿ ಹೋದನು. ತಮ್ಮ ಪುತ್ರನಾದ ಅಭಿಮನ್ಯುವಿನ ಮೇಲಿನ ಪ್ರೀತಿ ಯಿಂದ ಅವನಿಗೆ ರಕ್ಷಣೆಕೊಡಲು ಹಿಂಬಾಲಿಸಿಹೋಗುತ್ತಿದ್ದ ಸೈನ್ಯಸಮೇತ ನಾದ ಯುಧಿಷ್ಠಿರನೇ ಮೊದಲಾದ ಪಾರ್ಥರನ್ನು ಸಿಂಧುರಾಜನ ಮಗನಾದ ಜಯದ್ರಥನು ತಡೆದು ನಿಲ್ಲಿಸಿದನು. ಇಳಿಜಾರು ಪ್ರದೇಶದಿಂದ ದಡ-ದಡನೆ ಇಳಿದುಬರುವ ಆನೆಯು ತನ್ನ ಎದುರಾಳಿಯನ್ನು ಪ್ರಹರಿಸುವಂತೆ–ಭಯಂಕರವಾಗಿದ್ದ ಮತ್ತು ದೊಡ್ಡದಾಗಿದ್ದ ಧನುಸ್ಸನ್ನು ಧರಿಸಿದ್ದ, ವೃದ್ಧಕ್ಷತ್ರನ

ಮಗನಾದ ಜಯದ್ರಥನು ವೇಗವಾಗಿ ಬಂದು ಮಹಾಸ್ತ್ರವನ್ನು ಪ್ರಯೋಗಿಸುತ್ತಾ ಪಾಂಡವರ ವೇಗವನ್ನು ತಡೆದನು."

ತನ್ನ ಅಳಿಯನ ಮೇಲೆ ದೊಡ್ಡ ಹೊರೆಯು ಬಿದ್ದಿತೆಂದು ಭಾವಿಸಿದ ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ:

"ಸಂಜಯ! ನನ್ನ ಅಳಿಯನಾದ ಜಯದ್ರಥನ ಮೇಲೆ ಗುರುತರವಾದ ಭಾರವು ಹೊರಿಸಲ್ಪಟ್ಟಿತೆಂದು ನಾನು ಭಾವಿಸುತ್ತೇನೆ. ಮಗನನ್ನು ರಕ್ಷಿಸಲು ಹೋಗುತ್ತಿದ್ದ ಪರಮಕ್ರುದ್ಧರಾದ ಪಾಂಡವರನ್ನು ಒಬ್ಬನೇ ಒಬ್ಬನು ತಡೆದು ನಿಲ್ಲಿಸಿದನಲ್ಲವೇ! ಸೈಂಧವನಲ್ಲಿದ್ದ ಬಲ ಮತ್ತು ಶೌರ್ಯಗಳು ಅತ್ಯದ್ಭುತವಾದುವೆಂದು ನಾನು ಭಾವಿಸುತ್ತೇನೆ. ಮಹಾತ್ಮನಾದ ಜಯದ್ರಥನ ಬಲ ಮತ್ತು ಶ್ರೇಷ್ಠಪರಾಕ್ರಮಗಳನ್ನು (ಅವನು ಮಾಡಿದ ಸಾಹಸಕಾರ್ಯಗಳನ್ನು) ಸವಿಸ್ತರವಾಗಿ ನನಗೆ ತಿಳಿಸು. ವೀರಾಧಿವೀರರಾದ ಧರ್ಮಾತ್ಮರಾದ ಪಾಂಡವರನ್ನು ಏಕಾಕಿಯಾಗಿ ಎದುರಿಸಲು ಅವನಲ್ಲಿ ದೈವದತ್ತವಾದ ಪರಾಕ್ರಮವೇ ಇದ್ದಿರಬೇಕು. ಈ ರೀತಿಯಲ್ಲಿ ಏಕಾಕಿಯಾಗಿ ಪಾಂಡವರನ್ನು ತಡೆದು ನಿಲ್ಲಿಸುವ ಸಾಮರ್ಥ್ಯವನ್ನು ಅವನು ಪಡೆದುಕೊಳ್ಳಬೇಕಾದರೆ ಅವನು ಮಾಡಿದ ದಾನವು ಯಾವುದು? ಯಾವ ಹೋಮವನ್ನು ಮಾಡಿದ್ದನು? ಯಾವ ಯಜ್ಞವನ್ನು ಮಾಡಿದ್ದನು? ಅಥವಾ ಯಾರನ್ನು ಕುರಿತು ಸುಘೋರವಾದ ತಪಸ್ಸನ್ನು ಮಾಡಿದ್ದನು?"

"ನಿಜ, ಮಹಾರಾಜ! ಅವನು ತಪಸ್ಸಿನಿಂದಲೇ ಪಾಂಡವಮಹಾ ವೀರರನ್ನೂ ತಡೆದು ನಿಲ್ಲಿಸುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದನು. ಪಾಂಡವರು ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ಒಮ್ಮೆ ಸೈಂಧವನು ಪಾಂಡವರು ಆಶ್ರಮದಲ್ಲಿ ಇಲ್ಲದ ಸಮಯದಲ್ಲಿ ಪರಿವಾರಸಹಿತನಾಗಿ ಅವರ ಆಶ್ರಮಕ್ಕೆ ಹೋಗಿ ದ್ರೌಪದಿಯನ್ನು ಸೆಳೆದುಕೊಂಡು ಹೋಗಿದ್ದನು. ಆ ಸಮಯದಲ್ಲಿ ಪಾಂಡವರು ಆಶ್ರಮಕ್ಕೆ ಬಂದನಂತರ ದ್ರೌಪದಿಯ ಹರಣವೃತ್ತಾಂತವನ್ನು ತಿಳಿದು ಭೀಮಾರ್ಜುನರು ಸೈಂಧವನನ್ನು ಬೆನ್ನಟ್ಟಿ ಹೋದರು. ಯುದ್ಧದಲ್ಲಿ ಭೀಮಸೇನನು ಸೈಂಧವನನ್ನು ಪರಾಜಯಗೊಳಿಸಿ ಅವನಿಗೆ ಸಾಕಷ್ಟು ಅವಮಾನಮಾಡಿ ಕಳುಹಿಸಿಕೊಟ್ಟಿದ್ದನು. ಆ ಸಮಯದಲ್ಲಿ ಬಹಳ ಲಜ್ಜಿತನಾದ ಸೈಂಧವನು ಪಾಂಡವರನ್ನು ಪರಾಜಯಗೊಳಿಸಿ ಕಳೆದುಹೋದ ಮಾನವನ್ನು ಪುನಃ ಗಳಿಸಿಕೊಳ್ಳಬೇಕೆಂಬ ಆಶಯದಿಂದಲೇ

ಅಂತಹ ವರವನ್ನು ಪಡೆಯುವ ಸಲುವಾಗಿ ಮಹಾಘೋರವಾದ ತಪಸ್ಸನ್ನು ಮಾಡಿದನು.

**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಃ ಪ್ರಿಯೇಭ್ಯಃ ಸಂನಿವರ್ತ್ಯ ಸಃ ।**
**ಕ್ಷುತ್ಪಿಪಾಸಾತಪಸಹಃ ಕೃಶೋ ಧಮನಿಸಂತತಃ ॥೧೩॥**

ಇಂದ್ರಿಯಗಳನ್ನು ಅವುಗಳಿಗೆ ಪ್ರಿಯವಾದ ಇಂದ್ರಿಯಾರ್ಥಗಳಿಂದ ಹಿಂದಿರುಗಿಸಿದನು. (ಕಣ್ಣಿಗೆ ಬೇಕಾದ ನೋಟವನ್ನು ನೋಡದೇ ಇರುವುದು; ಕಿವಿಯು ಅಪೇಕ್ಷಿಸಿದ ಮಧುರಗೀತವನ್ನು ಕೇಳದೇ ಇರುವುದು; ಘ್ರಾಣೇಂದ್ರಿಯವು ಅಪೇಕ್ಷಿಸುವ ಸುಗಂಧವನ್ನು ಆಘ್ರಾಣಿಸದಿರುವುದು; ನಾಲಿಗೆಗೆ ಬೇಕಾಗುವ ರುಚಿಕರಪದಾರ್ಥಗಳನ್ನು ತಿನ್ನದೇ ಇರುವುದು; ಸ್ಪರ್ಶಸುಖವನ್ನು ಕೊಡುವ ಯಾವುದೊಂದನ್ನೂ (ಸ್ತ್ರೀ ಮುಂತಾದವರು) ಹತ್ತಿರಕ್ಕೂ ಸೇರಿಸದೇ ಇರುವುದು; ಒಟ್ಟಿನಲ್ಲಿ ಯಾವ ಇಂದ್ರಿಯವೇ ಆಗಲೀ ಏನನ್ನಾದರೂ ಅಪೇಕ್ಷಿಸಿದರೆ ಅದಕ್ಕೆ ಪ್ರಿಯವಾದ ವಸ್ತುವನ್ನು ಕೊಡದೇ ಇರುವುದು–ಇದು ಇಂದ್ರಿಯಗಳನ್ನು ಪ್ರಿಯವಾದ ಇಂದ್ರಿಯಾರ್ಥಗಳಿಂದ ನಿವರ್ತಿಸುವಿಕೆ.) ಘೋರವಾದ ತಪಸ್ಸನ್ನು ಮಾಡುತ್ತಿದ್ದ ಜಯದ್ರಥನು ಆಹಾರವನ್ನೇ ವರ್ಜಿಸಿಬಿಟ್ಟನು. ಹಸಿವನ್ನೂ ಬಾಯಾರಿಕೆಯನ್ನೂ ಮತ್ತು ಸೂರ್ಯನ ತಾಪವನ್ನೂ ಸಹಿಸಿಕೊಂಡು ತಪಸ್ಸನ್ನು ಮಾಡುತ್ತಿದ್ದನು. ಅದರಿಂದಾಗಿ ಅವನು ಬಹಳ ಕೃಶನಾಗಿ ಅವನ ಶರೀರದಲ್ಲಿ ಕೇವಲ ನರಗಳು, ಮೂಳೆಗಳು ಮತ್ತು ಮೇಲುಹೊದ್ದಿಕೆಯಾಗಿ ಚರ್ಮ–ಇಷ್ಟು ಮಾತ್ರವೇ ಉಳಿದಿದ್ದುವು. ಬ್ರಹ್ಮಸ್ವರೂಪನಾದ, ಸನಾತನನಾದ ಶರ್ವನನ್ನು (ಶಂಕರನನ್ನು) ಸ್ತುತಿಮಾಡುತ್ತಾ ಅವನನ್ನು ಆರಾಧಿಸುತ್ತಿದ್ದನು. ಭಕ್ತಾನುಕಂಪಿಯಾದ ಭಗವಂತನು ಕೆಲವು ಕಾಲದನಂತರ ಅವನ ಮೇಲೆ ದಯೆತೋರಿದನು. ಒಂದು ದಿವಸ ಸ್ವಪ್ನದ ಅಂತ್ಯದಲ್ಲಿ ಶ್ರೀಶಂಕರನು ಸಿಂಧುಪತಿಯ ಮಗನಾದ ಜಯದ್ರಥನಿಗೆ ದರ್ಶನವನ್ನಿತ್ತು ಹೇಳಿದನು:

**ವರಂ ವೃಣೀಷ್ವ ಪ್ರೀತೋಽಸ್ಮಿ ಜಯದ್ರಥ ಕಿಮಿಚ್ಛಸಿ ॥೧೫॥**

"ಜಯದ್ರಥ! ನೀನು ಮಾಡಿದ ತಪಸ್ಸಿನಿಂದ ನಾನು ಸುಪ್ರೀತನಾಗಿದ್ದೇನೆ. ನೀನು ಏನನ್ನು ಅಪೇಕ್ಷಿಸಿರುವೆ? ಬೇಕಾದ ವರವನ್ನು ಕೇಳು."

ಶರ್ವನು ಹೀಗೆಂದು ಹೇಳಲಾಗಿ ಜಿತೇಂದ್ರಿಯನಾದ ಜಯದ್ರಥನು

ರುದ್ರನನ್ನು ಪುನಃ ಪುನಃ ನಮಸ್ಕರಿಸುತ್ತಾ ಬದ್ಧಾಂಜಲಿಯಾಗಿ ಪ್ರಾರ್ಥಿಸಿದನು:

**ಪಾಂಡವೇಯಾನಹಂ ಸಂಖ್ಯೇ ಭೀಮವೀರ್ಯಪರಾಕ್ರಮಾನ್ ।**
**ವಾರಯೇಯಂ ರಥೇನೈಕಃ ಸಮಸ್ತಾನಿತಿ ಭಾರತ ॥೧೭॥**

"ಭಗವನ್! ಭಯಂಕರವಾದ ವೀರ್ಯಪರಾಕ್ರಮಗಳಿಂದ ಕೂಡಿರುವ ಪಾಂಡುವಿನ ಎಲ್ಲ ಮಕ್ಕಳನ್ನೂ ನಾನು ಯುದ್ಧದಲ್ಲಿ ರಥೈಕಸಹಾಯನಾಗಿ ತಡೆದು ನಿಲ್ಲಿಸಬೇಕು. ಈ ವರವನ್ನು ಅನುಗ್ರಹಿಸು." –ಎಂದು ಜಯದ್ರಥನು ತಾನು ಅಪೇಕ್ಷಿಸಿದ್ದ ವರದ ಸ್ವರೂಪವನ್ನು ತಿಳಿಸಿದನಂತರ ದಯಾಮಯನಾದ ಶಂಕರನು ಅನುಗ್ರಹಪೂರ್ವಕವಾಗಿ ಹೇಳಿದನು:



**ದದಾಮಿ ತೇ ವರಂ ಸೌಮ್ಯ ವಿನಾ ಪಾರ್ಥಂ ಧನಂಜಯಮ್।**
**ವಾರಯಿಷ್ಯಸಿ ಸಂಗ್ರಾಮೇ ಚತುರಃ ಪಾಣ್ಡುನನ್ದನಾನ್ ॥೧೮॥**

"ಸೌಮ್ಯನೇ! ನೀನಪೇಕ್ಷಿಸಿರುವ ವರವನ್ನು ನಿನಗೆ ಕೊಡುತ್ತೇನೆ. ಆದರೆ ಧನಂಜಯನೊಬ್ಬನನ್ನು ಬಿಟ್ಟು ಉಳಿದ ಪಾಂಡವರನ್ನು ತಡೆಯುವ ಸಾಮರ್ಥ್ಯವನ್ನು ದಯಪಾಲಿಸುತ್ತೇನೆ. ಯುದ್ಧದಲ್ಲಿ ನೀನು ಪಾಂಡುವಿನ ನಾಲ್ಕು ಮಕ್ಕಳನ್ನೂ (ಒಂದು ದಿನ) ತಡೆಯುವೆ.

'ಏವಮಸ್ತು -'ಹಾಗೆಯೇ ಆಗಲಿ'-ಎಂದು ಶಿವನ ಮಾತಿಗೆ ಒಪ್ಪಿಗೆಯನ್ನಿತ್ತೊಡನೆಯೇ ಜಯದ್ರಥನು ನಿದ್ರೆಯಿಂದ ಎಚ್ಚರಗೊಂಡನು. ಮಹಾರಾಜ! ಶಂಕರನ ಆ ವರಪ್ರಸಾದದಿಂದಲೂ, ದಿವ್ಯಾಸ್ತ್ರಗಳ ಬಲದಿಂದಲೂ ಪಾಂಡವಪುರಃಸರವಾದ ಸಮಸ್ತಸೈನ್ಯವನ್ನೂ ಜಯದ್ರಥನೊಬ್ಬನೇ ಅಭಿಮನ್ಯುವಿನ ಸಹಾಯಕ್ಕೆ ಹೋಗದಂತೆ ತಡೆದು ನಿಲ್ಲಿಸಿದನು. ಆಗಿನ ಸಂದರ್ಭದಲ್ಲಿ ಜಯದ್ರಥನ ಮಹಾಧನುಸ್ಸಿನ ಜ್ಯಾಘೋಷವನ್ನು ಕೇಳಿದ ಪಾಂಡವರ ಕಡೆಯ ಕ್ಷತ್ರಿಯರಾಜರನ್ನು ಭಯವು ಆವರಿಸಿತು. (ಯುಧಿಷ್ಠಿರಾದಿಗಳು ಭೀತರಾದರು.) ಅದಕ್ಕೆ ಪ್ರತಿಯಾಗಿ ಅದೇ ಜ್ಯಾಘೋಷವನ್ನೇ ಕೇಳಿ ನಿನ್ನ ಕಡೆಯ ಸೈನಿಕರಿಗೆ ಅಮಿತವಾದ ಆನಂದವುಂಟಾಯಿತು. ಸೈಂಧವನ ಮೇಲೆ ಗುರುತರವಾದ ಹೊಣೆಯು ಬಿದ್ದಿರುವುದನ್ನು ಕಂಡು ನಿನ್ನ ಕಡೆಯ ಕ್ಷತ್ರಿಯಯೋಧರು ಗಟ್ಟಿಯಾಗಿ ಗರ್ಜನೆ ಮಾಡುತ್ತಾ ಯುಧಿಷ್ಠಿರನ ಸೈನ್ಯದ ಕಡೆಗೆ ಧಾವಿಸಿದರು."

ಳ೨ನೆಯ ಅಧ್ಯಾಯವು ಮುಗಿಯಿತು.

ಳ೩ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಪಾಂಡವರೊಡನೆ ಜಯದ್ರಥನ ಯುದ್ಧ: ಸೈಂಧವನು ಚಕ್ರವ್ಯೂಹದ ದ್ವಾರದಲ್ಲಿ ಪಾಂಡವರನ್ನು ತಡೆದುದು

ಮಹಾರಾಜ! ಸಿಂಧುರಾಜನ ಪರಾಕ್ರಮವನ್ನು ಕೇಳಿದೆಯಲ್ಲವೇ? ಅವನು ಪಾಂಡವರೊಡನೆ ಯಾವರೀತಿ ಯುದ್ಧಮಾಡಿದನು?–ಎಂಬುದೆಲ್ಲವನ್ನೂ ವಿಸ್ತಾರವಾಗಿ ಹೇಳುವೆನು; ಕೇಳು:

ಸಾರಥಿಯ ವಶವರ್ತಿಗಳಾದ, ಹೆಚ್ಚುಭಾರವನ್ನು ಹೊರುವ ಸಾಮರ್ಥ್ಯವಿದ್ದ ನಾನಾಪ್ರಕಾರವಾದ ನಡಿಗೆಗಳನ್ನಿಡುತ್ತಿದ್ದ, ದೊಡ್ಡವುಗಳಾಗಿದ್ದ, ವಾಯುವಿನೋಪಾದಿಯಲ್ಲಿ ವೇಗವಾದ ಗತಿಯಿದ್ದ ಕುದುರೆಗಳು

ಜಯದ್ರಥನ ರಥವನ್ನು ಹೊತ್ತಿದ್ದುವು. ಗಂಧರ್ವನಗರದಂತೆ ಸುಂದರವಾದ ಆಕಾರವನ್ನು ಹೊಂದಿದ್ದ, ಶಾಸ್ತ್ರವಿಧಿಗೆ ಅನುಸಾರವಾಗಿ ರಚಿಸಲ್ಪಟ್ಟಿದ್ದ ರಥದಲ್ಲಿ ಜಯದ್ರಥನು ಕುಳಿತಿದ್ದನು. ಬೆಳ್ಳಿಯಿಂದ ಮಾಡಲ್ಪಟ್ಟ ವರಾಹಕೇತುವು ಆ ರಥದ ಶೋಭೆಯನ್ನು ಮತ್ತಷ್ಟು ಹೆಚ್ಚಿಸುತ್ತಿದ್ದಿತು. ಶ್ವೇತಛತ್ರದಿಂದಲೂ, ಪತಾಕೆಗಳಿಂದಲೂ, ಚಾಮರ-ವ್ಯಜನಗಳಿಂದಲೂ, ಅನೇಕ ರಾಜಚಿಹ್ನೆಗಳಿಂದಲೂ ಪರಿಶೋಭಿಸುತ್ತಿದ್ದ ಸೈಂಧವನು ಆಕಾಶದಲ್ಲಿರುವ ತಾರಾಪತಿಯಾದ ಚಂದ್ರನಂತೆಯೇ ಕಂಗೊಳಿಸುತ್ತಿದ್ದನು. ಮುತ್ತು, ವಜ್ರ, ಮಣಿ ಮತ್ತು ಸುವರ್ಣಗಳಿಂದ ಸಮಲಂಕೃತವಾಗಿದ್ದ, ಲೋಹಮಯವಾಗಿದ್ದ ಆ ರಥದ ಕಟಾಂಜನವು (ರಥದಲ್ಲಿ ಕುಳಿತವರಿಗೆ ಪೆಟ್ಟಾಗದಂತೆ ರಥದ ಸುತ್ತಲೂ ಹಾಕಿರುವ ಆವರಣವು) ನಕ್ಷತ್ರಗಳಿಂದ ಪರಿವೃತವಾದ ಆಕಾಶದಂತೆಯೇ ಪ್ರಕಾಶಿಸುತ್ತಿದ್ದಿತು.

ಜಯದ್ರಥನು ತನ್ನ ಮಹಾಧನುಸ್ಸನ್ನು ಸುದೀರ್ಘವಾಗಿ ಸೆಳೆದು, ಅನೇಕವಾದ ಬಾಣಗಳ ಸಮೂಹವನ್ನೇ ಮಳೆಯ ರೂಪದಲ್ಲಿ ಸುರಿಸುತ್ತಾ, ಅಭಿಮನ್ಯುವು ಭಗ್ನಗೊಳಿಸಿ ಒಳನುಗ್ಗಿದ್ದ ಚಕ್ರವ್ಯೂಹದ ಆ ಭಾಗವನ್ನು ಸಂಪೂರ್ಣವಾಗಿ ಬಾಣಗಳಿಂದಲೇ ತುಂಬಿಬಿಟ್ಟನು. (ಭಗ್ನಗೊಳಿಸಿದ್ದ ಸ್ಥಳಗಳಿಂದ ಅಭಿಮನ್ಯುವನ್ನು ಅನುಸರಿಸಿ ಒಳನುಗ್ಗಲು ಪ್ರಯತ್ನಿಸುತ್ತಿದ್ದ ಪಾಂಡವರ ಸೈನ್ಯದಮೇಲೆ ಬಾಣಗಳ ಮಳೆಗರೆದನು.) ಸಾತ್ಯಕಿಯನ್ನು ಮೂರುಬಾಣಗಳಿಂದಲೂ, ವೃಕೋದರನನ್ನು ಎಂಟು ಬಾಣಗಳಿಂದಲೂ, ಧೃಷ್ಟದ್ಯುಮ್ನನನ್ನು ಅರುವತ್ತು ಬಾಣಗಳಿಂದಲೂ, ವಿರಾಟನನ್ನು ಹತ್ತು ಬಾಣಗಳಿಂದಲೂ, ದ್ರುಪದನನ್ನು ತೀಕ್ಷ್ಣವಾದ ಐದು ಬಾಣಗಳಿಂದಲೂ, ಶಿಖಂಡಿಯನ್ನು ಏಳು ಬಾಣಗಳಿಂದಲೂ, ಐವರು ಕೇಕಯ ರಾಜಕುಮಾರರನ್ನು ಇಪ್ಪತ್ತೈದು ಬಾಣಗಳಿಂದಲೂ, ದ್ರೌಪದಿಯ ಮಕ್ಕಳನ್ನು ಮೂರು-ಮೂರು ಬಾಣಗಳಿಂದಲೂ, ಯುಧಿಷ್ಠಿರನನ್ನು ಇಪ್ಪತ್ತು ಬಾಣಗಳಿಂದಲೂ ಸೈಂಧವನು ಪ್ರಹರಿಸಿದನು. ಉಳಿದ ಸೈನಿಕರನ್ನೂ ಕೂಡ ದೊಡ್ಡದಾದ ಬಾಣಗಳ ಸಮೂಹದಿಂದ ಗಾಯಗೊಳಿಸಿ ಓಡಿಸಿಬಿಟ್ಟನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು.

ಅನಂತರ ಪ್ರತಾಪವಂತನಾದ ಧರ್ಮಪುತ್ರನು ನಗು-ನಗುತ್ತಲೇ

ನಿಶಿತವಾಗಿಯೂ ಹೊಂಬಣ್ಣವಾಗಿಯೂ ಇದ್ದ ಭಲ್ಲದಿಂದ–‘ನಿನ್ನ ಬಿಲ್ಲನ್ನು ಕತ್ತರಿಸುತ್ತೇನೆ’-ಎಂದು ಘೋಷಿಸಿ ಜಯದ್ರಥನ ಬಿಲ್ಲನ್ನು ಕತ್ತರಿಸಿದನು. ಕಣ್ಣುಮುಚ್ಚಿತೆಗೆಯುವುದರೊಳಗಾಗಿ ಸೈಂಧವನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಯುಧಿಷ್ಠಿರನನ್ನು ಹತ್ತು ಬಾಣಗಳಿಂದ ಪ್ರಹರಿಸಿ ಅನಂತರ



ಇತರ ಯೋಧರನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಜಯದ್ರಥನ ಆ ಹಸ್ತಲಾಘವವನ್ನು (ಕೈಚಳಕವನ್ನು) ಗಮನಿಸಿದ ಭೀಮಸೇನನು ಮೂರು-ಮೂರು ಭಲ್ಲಗಳಿಂದ ಜಯದ್ರಥನ ಧನುಸ್ಸನ್ನೂ, ಧ್ವಜವನ್ನೂ ಮತ್ತು ಛತ್ರವನ್ನೂ ಅತಿಶೀಘ್ರವಾಗಿ ಕತ್ತರಿಸಿ ಭೂಮಿಯ ಮೇಲೆ ಕೆಡವಿದನು. ಬಲಿಷ್ಠನಾದ ಸೈಂಧವನು ಹಿಂದಿನಂತೆಯೇ ನಿಮೇಷಮಾತ್ರ

ದಲ್ಲಿ ಮತ್ತೊಂದು ಧನುಸ್ಸನ್ನೆತ್ತಿಕೊಂಡು ಹೆದೆಯೇರಿಸಿ ಭೀಮಸೇನನ ಧನುಸ್ಸನ್ನೂ ಮತ್ತು ಕೇತುವನ್ನೂ ಕತ್ತರಿಸಿದನಲ್ಲದೇ ಅವನ ರಥದ ಕುದುರೆಗಳನ್ನೂ ಸಂಹರಿಸಿದನು. ಧನುಸ್ಸನ್ನೂ ಕಳೆದುಕೊಂಡಿದ್ದ ಭೀಮಸೇನನು ಕುದುರೆಗಳಿಂದ ವಿಹೀನವಾಗಿದ್ದ ಆ ಶ್ರೇಷ್ಠವಾದ ರಥದಿಂದ ಕೆಳಕ್ಕೆ ಧುಮುಕಿ ಸಿಂಹವು ಪರ್ವತದ ಶಿಖರವನ್ನು ಹತ್ತುವಂತೆ ಸಾತ್ಯಕಿಯ



ರಥವನ್ನು ಹತ್ತಿಕುಳಿತನು. ಶ್ರವಣಮಾತ್ರದಿಂದ ನಂಬಲಾಗದ, ಪರಮಾದ್ಭುತವಾದ ಸಿಂಧುರಾಜನ ಆ ಸಾಹಸಕರ್ಮವನ್ನು ಪ್ರತ್ಯಕ್ಷವಾಗಿಯೇ ನೋಡಿದ ನಿನ್ನ ಕಡೆಯ ಯೋಧರು ಪರಮಹೃಷ್ಟರಾಗಿ **"ಸಾಧು ಸೈಂಧವ ಸಾಧು। ಜಯತು ಜಯತು ಜಯದ್ರಥ!"** ಎಂಬುದಾಗಿ ಜಯಕಾರಗಳನ್ನು ಮಾಡಿದರು. ಜಯದ್ರಥನೊಬ್ಬನೇ ತನ್ನ ಅದ್ಭುತವಾದ ಅಸ್ತ್ರಗಳ ತೇಜಸ್ಸಿನಿಂದ ಸಂಕ್ರುದ್ಧರಾದ ಪಾಂಡವರೆಲ್ಲರನ್ನೂ ತಡೆಹಿಡಿದು ಬಿಟ್ಟನು. ಅವನ ಆ ಅದ್ಭುತವಾದ ಸಾಹಸವನ್ನು ಕಂಡು ಸಕಲ ಪ್ರಾಣಿಗಳೂ ಪ್ರಶಂಸಿಸಿದುವು. ಅಭಿಮನ್ಯುವು ಆ ಮೊದಲು ಅನೇಕ

ಗಜಯೋಧರನ್ನೂ, ಯೋಧರನ್ನೂ ಸಂಹರಿಸಿ ಪಾಂಡವರು ಚಕ್ರವ್ಯೂಹದ ಒಳನುಗ್ಗಲು ಮಾರ್ಗವನ್ನು ಮಾಡಿಕೊಟ್ಟಿದ್ದನು. ಅದೇ ಮಾರ್ಗವನ್ನೇ ಜಯದ್ರಥನು ಮುಚ್ಚಿಬಿಟ್ಟನು. ವೀರರಾದ ಮತ್ಸ್ಯ-ಪಾಂಚಾಲ-ಕೇಕಯಯೋಧರೂ ಮತ್ತು ಪಾಂಡವರೂ ಸೈಂಧವನನ್ನು ಆಕ್ರಮಿಸಿ ಚಕ್ರವ್ಯೂಹದೊಳಕ್ಕೆ ನುಗ್ಗಲು ಎಷ್ಟೇ ಪ್ರಯತ್ನಿಸಿದರೂ ಸೈಂಧವನನ್ನು ಅಲ್ಲಿಂದ ಕದಲಿಸಲು ಅವರಿಗೆ ಸಾಧ್ಯವಾಗಲೇ ಇಲ್ಲ. ನಿನ್ನ ಶತ್ರುಗಳಲ್ಲಿ ಯಾವ-ಯಾವನು ದ್ರೋಣರ ಆ ಚಕ್ರವ್ಯೂಹವನ್ನು ಭೇದಿಸಲು ಪ್ರಯತ್ನಿಸುತ್ತಿದ್ದನೋ ಶ್ರೇಷ್ಠನಾದ ಆ ಯೋಧನನ್ನೇ ವರಬಲ ದಿಂದ ಜಯದ್ರಥನು ಆಕ್ರಮಿಸಿ ಅವನನ್ನು ಪರಾಙ್ಮುಖನಾಗುವಂತೆ ಮಾಡುತ್ತಿದ್ದನು.

೪೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನ ಪರಾಕ್ರಮ: ವಸಾತೀಯನೇ ಮೊದಲಾದ ಯೋಧರ ಸಂಹಾರ

ಸಂಜಯನು ಪುನಃ ಅಭಿಮನ್ಯುವಿನ ಪರಾಕ್ರಮವನ್ನು ವರ್ಣಿಸಲು ಉಪಕ್ರಮಿಸುತ್ತಾನೆ:

“ಮಹಾರಾಜ! ವಿಜಯೇಚ್ಛುಗಳಾದ ಪಾಂಡವರು ಸೈಂಧವನಿಂದ ತಡೆಯಲ್ಪಡಲಾಗಿ ನಿಮ್ಮ ಕಡೆಯವರ ಮತ್ತು ನಿನ್ನ ಶತ್ರುಗಳ ನಡುವೆ ಘೋರವಾದ ಯುದ್ಧವು ಪ್ರಾರಂಭವಾಯಿತು. ಇತ್ತಲಾಗಿ ಸತ್ಯಸಂಧನಾದ, ದುರಾಸದನಾದ, ತೇಜಸ್ವಿಯಾದ ಅಭಿಮನ್ಯುವು-ನಿನ್ನ ಸೈನ್ಯದ ಮಧ್ಯಭಾಗ ವನ್ನು ಪ್ರವೇಶಿಸಿ–ಮೊಸಳೆಯು ಸಮುದ್ರವನ್ನು ಅಲ್ಲೋಲ-ಕಲ್ಲೋಲ ಗೊಳಿಸುವಂತೆ–ನಿನ್ನ ಸೈನ್ಯವನ್ನು ಅಲ್ಲೋಲ-ಕಲ್ಲೋಲಗೊಳಿಸಿಬಿಟ್ಟನು. ಬಾಣಗಳ ಸುರಿಯುವಿಕೆಯಿಂದ ನಿನ್ನ ಸೈನ್ಯದಲ್ಲಿ ಕ್ಷೋಭೆಯನ್ನುಂಟುಮಾಡು ತ್ತಿದ್ದ ಅರಿಂದಮನಾದ ಅಭಿಮನ್ಯುವನ್ನು ನಿನ್ನ ಕಡೆಯ ಪ್ರಧಾನಭೂತರಾದ ರಥಶ್ರೇಷ್ಠರು ಒಟ್ಟಾಗಿಸೇರಿ ಆಕ್ರಮಿಸಿದರು. ಒಟ್ಟಾಗಿಸೇರಿ ಬಾಣಗಳ ಮಳೆಯನ್ನೇ ಅದ್ಭುತರೀತಿಯಲ್ಲಿ ಸೃಷ್ಟಿಸುತ್ತಿದ್ದ ಅಮಿತಪರಾಕ್ರಮಿಗಳಾದ ನಿನ್ನ ಕಡೆಯ ಯೋಧರಿಗೂ ಮತ್ತು ಅಭಿಮನ್ಯುವಿಗೂ ನಡೆಯುತ್ತಿದ್ದ ಸಂಘರ್ಷಣೆಯು ದಾರುಣವಾಗಿ ಪರಿಣಮಿಸಿತು. ಶತ್ರುಪಕ್ಷದ ರಥಗಳ

ಸಮೂಹದಿಂದ ಸುತ್ತುವರಿಯಲ್ಪಟ್ಟಿದ್ದ ಅಭಿಮನ್ಯುವು ಮಹಾರಥಿಗಳ ಲ್ಲೊಬ್ಬನಾದ, ಕರ್ಣನ ಮಗನಾದ ವೃಷಸೇನನ ಸಾರಥಿಯನ್ನು ಕೊಂದು ಅವನ ಧನುಸ್ಸನ್ನೂ ಕತ್ತರಿಸಿದನು. ಅನಂತರ ಬಲಿಷ್ಠನಾದ ಅಭಿಮನ್ಯುವು ನೇರವಾಗಿ ಹೋಗುವ ಬಾಣಗಳಿಂದ ವೃಷಸೇನನ ಕುದುರೆಗಳನ್ನೂ ಪ್ರಹರಿಸಿದನು. ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ವೃಷಸೇನನ ಕುದುರೆಗಳು ಅವನನ್ನು ರಣಾಂಗಣದಿಂದ ಬಹಳ ದೂರಕ್ಕೆ ಒಯ್ದುಬಿಟ್ಟುವು. ಆ ಮಧ್ಯದಲ್ಲಿ (ಆ ಗೊಂದಲದ ಮಧ್ಯದಲ್ಲಿ) ಅಭಿಮನ್ಯುವಿನ ಸಾರಥಿಯು ತನ್ನ ರಥವನ್ನು ಮಹಾರಥರ ಮಧ್ಯದಿಂದ ಬೇರೊಂದು ವಿಭಾಗಕ್ಕೆ ಕೊಂಡೊಯ್ದನು. ಅಭಿಮನ್ಯುವಿನ ಸಾರಥಿಯ ಸಮಯ ಕೌಶಲವನ್ನು ಕಂಡು ಸುತ್ತಲೂ ರಥಸಮೂಹಗಳಲ್ಲಿದ್ದ ಪಾಂಡವರಥಿಕರು ಪರಮಹೃಷ್ಟರಾಗಿ–"**ಸಾಧು ಸಾಧು**"-ಎಂದು ಕೂಗಿಕೊಂಡರು. ಕೋಪ ಗೊಂಡ ಸಿಂಹದಂತಿದ್ದ, ಬಾಣಗಳಿಂದ ಶತ್ರುಗಳನ್ನು ಧ್ವಂಸಮಾಡುತ್ತಿದ್ದ ಅಭಿಮನ್ಯುವು ಬರುತ್ತಿರುವುದನ್ನು ದೂರದಿಂದಲೇ ನೋಡಿದ ವಸಾತೀಯ ರಾಜನು ಬೇಗನೆ ಮುಂದೆ ಬಂದು ಅಭಿಮನ್ಯುವನ್ನು ಎದುರಿಸಿದನು. ವಸಾತೀಯನು ಅಭಿಮನ್ಯುವನ್ನು ಸುವರ್ಣಮಯವಾದ ರೆಕ್ಕೆಗಳಿದ್ದ ಅರುವತ್ತು ಬಾಣಗಳಿಂದ ಪ್ರಹರಿಸಿ 'ನಾನು ಜೀವಿಸಿರುವಾಗ ನೀನು ಜೀವಸಹಿತವಾಗಿ ನನ್ನಿಂದ ಬಿಡಿಸಿಕೊಂಡು ಹೋಗಲಾರೆ' '**ನ ಮೇ ಜೀವನ್ ಜೀವತೋ ಯುಧಿ ಮೋಕ್ಷ್ಯಸೇ**'–ಎಂದು ಗಟ್ಟಿಯಾಗಿ ಹೇಳಿದನು. ವಸಾತೀಯನ ಆ ಮಾತನ್ನು ಕೇಳಿ ಸೌಭದ್ರನು ನಸು-ನಗುತ್ತಾ ಲೋಹಮಯ ವಾದ ಕವಚವನ್ನು ಧರಿಸಿದ್ದ ವಸಾತೀಯನನ್ನು ದೂರಲಕ್ಷ್ಯವಿರುವ ಬಾಣ ದಿಂದ ಅವನ ಎದೆಗೆ ಸರಿಯಾಗಿ ಗುರಿಯಿಟ್ಟು ಪ್ರಹರಿಸಿದನು. ಮರುಕ್ಷಣ ದಲ್ಲಿಯೇ ಬಾಣಪ್ರಹತನಾದ ವಸಾತೀಯನು ಅಸುನೀಗಿ ಭೂಮಿಯಲ್ಲಿ ಬಿದ್ದನು.

ವಸಾತೀಯನು ಹತನಾದುದನ್ನು ನೋಡಿ ಕ್ರುದ್ಧರಾದ ಕ್ಷತ್ರಿಯಪುಂಗ ವರು ನಿನ್ನ ಪೌತ್ರನಾದ ಅಭಿಮನ್ಯುವನ್ನು ಸಂಹರಿಸುವ ಇಚ್ಛೆಯಿಂದ ಸುತ್ತುಗಟ್ಟಿದರು. ಅವರು ತಮ್ಮ ನಾನಾರೂಪವಾದ ಧನುಸ್ಸುಗಳನ್ನು ಹಲ ವಾರು ಬಾರಿ ಟೇಂಕಾರಮಾಡುತ್ತಾ ಯುದ್ಧಕ್ಕೆ ಸಜ್ಜಾದರು. ಆ ಸಮಯದಲ್ಲಿ ಅಭಿಮನ್ಯುವಿನ ಮತ್ತು ಅವನ ಶತ್ರುಗಳ ನಡುವೆ ನಡೆದ ಯುದ್ಧವು ಬಹಳ

ಭಯಂಕರವಾಗಿದ್ದಿತು. ಕ್ರುದ್ಧನಾಗಿದ್ದ ಅಭಿಮನ್ಯುವು ಆ ಎಲ್ಲ ಕ್ಷತ್ರಿಯ ಯೋಧರ ಧನುಸ್ಸುಗಳನ್ನೂ, ಬಾಣಗಳನ್ನೂ, ಶರೀರಗಳನ್ನೂ ಮತ್ತು ಕರ್ಣಕುಂಡಲಗಳಿಂದಲೂ ಹಾರಗಳಿಂದಲೂ ಯುಕ್ತವಾಗಿದ್ದ ಶಿರಸ್ಸುಗಳನ್ನೂ ಖಂಡ-ಖಂಡಗಳಾಗಿ ಕತ್ತರಿಸಿದನು. ಅಭಿಮನ್ಯುವಿನ ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದಿದ್ದ ಕೆಲವು ತೋಳುಗಳು ಖಡ್ಗಗಳನ್ನು ಹಿಡಿದಿದ್ದುವು. ಮತ್ತೆ ಕೆಲವು ತೋಳುಗಳು ಬೆರಳುಗಳಿಗೆ ಕವಚಗಳನ್ನು ಧರಿಸಿದ್ದುವು. ಮತ್ತೆ ಕೆಲವು ಪಟ್ಟಿಶಗಳನ್ನೂ, ಗಂಡುಗೊಡಲಿಗಳನ್ನೂ ಹಿಡಿದಿದ್ದುವು. ಮತ್ತೆ ಕೆಲವು ತೋಳುಗಳು ಸುವರ್ಣಾಭರಣಗಳಿಂದ ಭೂಷಿತವಾಗಿದ್ದುವು. ಇಂತಹ ಅನೇಕ ಭುಜಗಳು ರಣಾಂಗಣದಲ್ಲಿ ಕಂಡುಬಂದುವು. ಅಭಿಮನ್ಯುವಿನ ಬಾಣ ಗಳಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದಿದ್ದ ಹಾರಗಳಿಂದಲೂ, ಆಭರಣ ಗಳಿಂದಲೂ, ವಸ್ತ್ರಗಳಿಂದಲೂ, ವಿಶಾಲವಾದ ಭುಜಗಳಿಂದಲೂ, ಕವಚ ಗಳಿಂದಲೂ, ಗುರಾಣಿಗಳಿಂದಲೂ, ಮನೋಹರವಾದ ಕಿರೀಟಗಳಿಂದಲೂ, ಛತ್ರಗಳಿಂದಲೂ, ಚಾಮರಗಳಿಂದಲೂ, ಯುದ್ಧೋಪಯೋಗಿ ಸಾಮಗ್ರಿ ಗಳಿಂದಲೂ, ರಥಗಳಲ್ಲಿನ ಆಸನಗಳಿಂದಲೂ, ಈಷಾದಂಡಗಳಿಂದಲೂ, ಮೂಕಿಕಂಬಗಳಿಂದಲೂ, ಅಚ್ಚುಮರಗಳಿಂದಲೂ, ಮುರಿದುಹೋಗಿದ್ದ ಚಕ್ರಗಳಿಂದಲೂ, ನೊಗಗಳಿಂದಲೂ, ತೋಳುಮರಗಳಿಂದಲೂ, ಪತಾಕೆ ಗಳಿಂದಲೂ, ಅಸುನೀಗಿ ಕೆಳಗೆ ಬಿದ್ದಿದ್ದ ಸಾರಥಿಗಳಿಂದಲೂ, ಕುದುರೆಗ ಳಿಂದಲೂ, ಆನೆಗಳಿಂದಲೂ, ಭಗ್ನವಾಗಿಹೋಗಿದ್ದ ರಥಗಳಿಂದಲೂ ಭೂಮಿ ಯೆಲ್ಲವೂ ವ್ಯಾಪ್ತವಾಗಿದ್ದಿತು. ಜಯಗಳಿಸುವ ಆಶೆಯಿಂದ ಬಂದಿದ್ದ ಅಭಿ ಮನ್ಯುವಿನ ಬಾಣಗಳಿಂದ ಹತರಾಗಿದ್ದ ನಾನಾದೇಶಗಳ ರಾಜರಿಂದಲೂ, ಶೂರರಾದ ಕ್ಷತ್ರಿಯರಿಂದಲೂ ಸಮಾಕುಲವಾಗಿದ್ದ ರಣಭೂಮಿಯು ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಆ ರಣಕ್ಷೇತ್ರದಲ್ಲಿ ಕ್ರುದ್ಧನಾಗಿ ದಿಕ್ಕುಗಳಲ್ಲೂ ಉಪದಿಕ್ಕುಗಳಲ್ಲೂ ಸಂಚರಿಸುತ್ತಿದ್ದ ಅಭಿಮನ್ಯುವಿನ ರೂಪವು ಕಾಣಿಸುತ್ತಲೇ ಇರಲಿಲ್ಲ. ಅವನ ಕವಚ, ಆಭರಣ, ಧನುಸ್ಸು ಮತ್ತು ಬಾಣಗಳಲ್ಲಿ ಇರುತ್ತಿದ್ದ ಚಿನ್ನದ ಭಾಗವು ಮಾತ್ರವೇ–ಅದು ಥಳ-ಥಳಿಸುತ್ತಿದ್ದ ಕಾರಣದಿಂದ ನಮಗೆ ಕಾಣಿಸುತ್ತಿದ್ದಿತು. ಬೇರೆ ಯಾವುದನ್ನೂ ನಾವು ಕಾಣುತ್ತಿರಲಿಲ್ಲ. ಸೂರ್ಯನೋಪಾದಿಯಲ್ಲಿ ವ್ಯೂಹದ ಮಧ್ಯಭಾಗದಲ್ಲಿ ನಿಂತು ಬಾಣಗಳಿಂದ ಯೋಧರ ಪ್ರಾಣಗಳನ್ನು ಹೀರುತ್ತಿದ್ದ ಅಭಿಮನ್ಯುವನ್ನು ಆ ಸಮಯದಲ್ಲಿ ಕಣ್ಣುಗಳನ್ನು ತೆರೆದುಕೊಂಡು ನೋಡಲು ಯಾರಿಗೂ ಸಾಧ್ಯವಾಗಲಿಲ್ಲ."

ಳಳನೆಯ ಅಧ್ಯಾಯವು ಮುಗಿಯಿತು.

೪೫ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವು ಸತ್ಯಶ್ರವಸನನ್ನೂ, ರುಕ್ಮರಥನನ್ನೂ, ಅವನ ಮಿತ್ರಗಣವನ್ನೂ ಮತ್ತು ಇತರ ಕ್ಷತ್ರಿಯರನ್ನೂ ಸಂಹರಿಸಿದುದು: ದುರ್ಯೋಧನನ ಪರಾಜಯ

ಸಂಜಯನು ಅಭಿಮನ್ಯುವಿನ ಪರಾಕ್ರಮದ ವರ್ಣನೆಯನ್ನು ಮುಂದುವರಿಸುತ್ತಾ ಹೇಳುತ್ತಾನೆ:

"ಮಹಾರಾಜ! ಅವಸಾನಕಾಲವು ಸಮೀಪಿಸಿದಾಗ ಯಮನು ಎಲ್ಲ ಪ್ರಾಣಿಗಳ ಪ್ರಾಣಗಳನ್ನೂ ಅಪಹರಿಸುವಂತೆ–ಅಭಿಮನ್ಯುವು ಶೂರರ ಆಯುಸ್ಸುಗಳನ್ನು ಅಪಹರಿಸುತ್ತಾ ಶತ್ರುಗಳಿಗೆ ಯಮಪ್ರಾಯನೇ ಆದನು. ಇಂದ್ರನಂತೆಯೇ ಮಹಾಪರಾಕ್ರಮಿಯಾದ, ಇಂದ್ರನ ಮಗನ ಮಗನಾದ, ಬಲಿಷ್ಠನಾದ ಅಭಿಮನ್ಯುವು ಕೌರವರ ಸಂಪೂರ್ಣಸೈನ್ಯವನ್ನೂ ಮಥನ ಮಾಡುತ್ತಾ ಕಾಣಿಸಿಕೊಂಡನು. ರಾಜೇಂದ್ರ! ಕ್ಷತ್ರಿಯೇಂದ್ರರಿಗೆ ಯಮರೂಪ ನಾಗಿದ್ದ ಅಭಿಮನ್ಯುವು ಸೈನ್ಯಸಮೂಹವನ್ನು ಪ್ರವೇಶಿಸಿ– ಉಗ್ರವಾದ ವ್ಯಾಘ್ರವು ಮೃಗವನ್ನು ಕ್ಷಣಮಾತ್ರದಲ್ಲಿ ಸಂಹರಿಸುವಂತೆ– ಸತ್ಯಶ್ರವಸನ ಪ್ರಾಣಗಳನ್ನು ಅಪಹರಿಸಿದನು. ಸತ್ಯಶ್ರವಸನು ಕೆಳಗೆ ಬೀಳಲಾಗಿ ನಿನ್ನ ಕಡೆಯ ಮಹಾರಥರೆಲ್ಲರೂ ವಿಪುಲವಾದ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಅಭಿಮನ್ಯುವನ್ನು ತ್ವರೆಯಿಂದ ಆಕ್ರಮಿಸಿದರು. ಆ ಕ್ಷತ್ರಿಯಪುಂಗವರು–'ನಾನು ಮೊದಲು ಅಭಿಮನ್ಯುವನ್ನು ಪ್ರಹರಿಸುತ್ತೇನೆ.' 'ನಾನು ಮೊದಲು ಅವನ ರಥವನ್ನು ಧ್ವಂಸಮಾಡುತ್ತೇನೆ'–ಎಂದು ಗರ್ಜನೆಮಾಡುತ್ತಾ ಅವನನ್ನು ವಿನಾಶಮಾಡುವುದರಲ್ಲಿ ನಾ ಮುಂದು-ತಾ ಮುಂದು ಎಂದು ಸ್ಪರ್ಧಿಸುತ್ತಾ, ಅಭಿಮನ್ಯುವನ್ನು ಸಂಹರಿಸುವ ಇಚ್ಛೆಯಿಂದ ಅವನನ್ನು ಸುತ್ತುವರಿದರು. ತನ್ನ ಮೇಲೆ ಬೀಳಲು ಆತುರದಿಂದ ಮುಂದೆ ಮುಂದೆ ಬರುತ್ತಿದ್ದ ಕ್ಷತ್ರಿಯ ಸೈನಿಕರನ್ನು–ಸಮುದ್ರದಲ್ಲಿರುವ ತಿಮಿಂಗಿಲವು ಕ್ಷುದ್ರವಾದ ಮೀನುಗಳನ್ನು ಸಾವಿರಾರು ಸಂಖ್ಯೆಯಲ್ಲಿ ಕಬಳಿಸುವಂತೆ–ಕಾಲರೂಪಿಯಾದ ಅಭಿಮನ್ಯುವು ನುಂಗಿಬಿಟ್ಟನು. ಯುದ್ಧದಿಂದ ಪಲಾಯನಮಾಡುವ ಇಚ್ಛೆಯಿಲ್ಲದೆ ಯಾವ

ಕೆಲವು ಮಂದಿ ಯೋಧರು ಅಭಿಮನ್ಯುವಿನೊಡನೆ ಯುದ್ಧಮಾಡಲು ಅವನ ಸಮೀಪಕ್ಕೆ ಹೋಗುತ್ತಿದ್ದರೋ, ಅವರಲ್ಲಿ ಒಬ್ಬರಾದರೂ–ಸಮುದ್ರಕ್ಕೆ ಸೇರುವ ನದಿಗಳು ಪುನಃ ಹಿಂದಕ್ಕೆ ಬರದ ರೀತಿಯಲ್ಲಿ–ಜೀವವುಳಿಸಿಕೊಂಡು ಹಿಂದಿರುಗುತ್ತಿರಲಿಲ್ಲ. ದೊಡ್ಡದಾದೊಂದು ಮೊಸಳೆಯಿಂದ ಹಿಡಿಯಲ್ಪಟ್ಟ, ಚಂಡಮಾರುತದ ಭಯದಿಂದಲೂ ಪೀಡಿತವಾಗಿರುವ ಮತ್ತು ಸಮುದ್ರದಲ್ಲಿ ಮಾರ್ಗವನ್ನು ತಪ್ಪಿದ ನೌಕೆಯೊಂದರಂತೆ–ನಿನ್ನ ಮಹಾಸೈನ್ಯವು ಅಭಿಮನ್ಯುವಿನ ಭಯದಿಂದ ನಡುಗುತ್ತಿದ್ದಿತು. ಆ ಸಮಯಕ್ಕೆ ಸರಿಯಾಗಿ ಮದ್ರೇಶ್ವರನ ಮಗನಾದ ರುಕ್ಮರಥನು ಭಯಗೊಂಡಿದ್ದ ನಿನ್ನ ಸೈನ್ಯವನ್ನು ಆಶ್ವಾಸಿಸುತ್ತಾ ನಿರ್ಭಯವಾಗಿ ಈ ಮಾತನ್ನು ಹೇಳಿದನು:

**ಅಲಂ ತ್ರಾಸೇನ ವಃ ಶೂರಾ ನೈಷ ಕಶ್ಚಿನ್ಮಯಿ ಸ್ಥಿತೇ ।**
**ಅಹಮೇನಂ ಗ್ರಹೀಷ್ಯಾಮಿ ಜೀವಗ್ರಾಹಂ ನ ಸಂಶಯಃ ॥೧೦॥**

"ಶೂರಯೋಧರೇ! ನಿಮ್ಮ ಈ ಭಯವನ್ನು ಸಾಕುಮಾಡಿರಿ. ನಾನಿರುವಾಗ ನಿಮಗೆ ಯಾವವಿಧವಾದ ಭಯಕ್ಕೂ ಕಾರಣವಿಲ್ಲ. ನಾನೇ ಇವನನ್ನು ಜೀವಸಹಿತವಾಗಿಯೇ ಬಂದಿಯನ್ನಾಗಿ ಮಾಡಿ ಸೆಳೆದು ತರುತ್ತೇನೆ. ಈ ವಿಷಯದಲ್ಲಿ ಸಂಶಯಪಡಬೇಕಾದ ಕಾರಣವಿಲ್ಲ."

ವೀರ್ಯವಂತನಾದ ರುಕ್ಮರಥನು ಹೀಗೆ ಹೇಳಿ ಸಕಲ ಯುದ್ಧಸಾಮಗ್ರಿಗಳಿಂದಲೂ ಸಜ್ಜಾಗಿದ್ದ, ಪ್ರಕಾಶಮಾನವಾಗಿದ್ದ ರಥದಲ್ಲಿ ಕುಳಿತು ಸುಭದ್ರೆಯ ಮಗನಾದ ಅಭಿಮನ್ಯುವಿದ್ದ ಕಡೆಗೆ ಧಾವಿಸಿದನು. ಅಭಿಮನ್ಯುವನ್ನು ಸಮೀಪಿಸಿದ ರುಕ್ಮರಥನು ಮೂರು ಬಾಣಗಳನ್ನು ಅಭಿಮನ್ಯುವಿನ ವಕ್ಷಃಸ್ಥಳದಲ್ಲಿ ಪ್ರಯೋಗಿಸಿ ಸಿಂಹನಾದಮಾಡಿದನು. ಅಷ್ಟರಿಂದಲೇ ತೃಪ್ತನಾಗದ ರುಕ್ಮರಥನು ಮತ್ತೆ ಮೂರು ಬಾಣಗಳಿಂದ ಅಭಿಮನ್ಯುವಿನ ಬಲತೋಳನ್ನೂ, ಪುನಃ ನಿಶಿತವಾದ ಮೂರು ಬಾಣಗಳಿಂದ ಅವನ ಎಡತೋಳನ್ನೂ ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಅಭಿಮನ್ಯುವು ಮೊದಲು ರುಕ್ಮರಥನ ಧನುಸ್ಸನ್ನು ಕತ್ತರಿಸಿ, ಅನಂತರ ಅವನ ಎರಡು ತೋಳುಗಳನ್ನೂ–ಒಳ್ಳೆಯ ಕಣ್ಣುಗಳಿಂದಲೂ, ಹುಬ್ಬುಗಳಿಂದಲೂ ಕೂಡಿರುವ ಶಿರಸ್ಸನ್ನೂ ಕತ್ತರಿಸಿ ಭೂಮಿಯಲ್ಲಿ ಕೆಡವಿದನು. ಅಭಿಮನ್ಯುವನ್ನು ಜೀವ ಸಹಿತವಾಗಿ ಬಂಧಿಸಲು ಇಚ್ಛಿಸಿದ, ಅಭಿಮಾನಿಯಾದ, ಶಲ್ಯನ

ಮಗನಾದ ರುಕ್ಮರಥನು ಅಭಿಮನ್ಯುವಿನಿಂದಲೇ ಹತನಾದುದನ್ನು ಕಂಡು ಸಂಗ್ರಾಮ ದುರ್ಮದರಾದ, ಪ್ರಹಾರಕುಶಲರಾದ, ಸುವರ್ಣಮಯವಾದ ಧ್ವಜಗಳನ್ನು ಹೊಂದಿದ್ದ, ಮಹಾಬಲಿಷ್ಠರಾಗಿದ್ದ, ರುಕ್ಮರಥನ ಮಿತ್ರರಾದ ರಾಜ ಕುಮಾರರು, ನಾಲ್ಕು ಮೊಳಗಳಷ್ಟು ಉದ್ದವಾಗಿದ್ದ ಧನುಸ್ಸುಗಳನ್ನು ಸಜ್ಜುಗೊಳಿಸಿ ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆಯುತ್ತಾ, ಅಭಿಮನ್ಯುವಿನ ಮೇಲೆ ಬಾಣಗಳ ಮಳೆಯನ್ನೇ ಸುರಿಸುತ್ತಾ, ನಾಲ್ಕು ದಿಕ್ಕುಗಳಿಂದಲೂ ಅವನನ್ನು ಮುತ್ತಿದರು. ಧನುರ್ವಿದ್ಯೆಯಲ್ಲಿ ಸುಶಿಕ್ಷಿತರಾಗಿದ್ದ, ಮಹಾಬಲಿಷ್ಠ ರಾಗಿದ್ದ, ಇನ್ನೂ ತರುಣರಾಗಿದ್ದ, ಅಸಹನಶೀಲರಾಗಿದ್ದ, ಶೂರರಾದ ರಾಜಕುಮಾರರು–ಶೂರನಾದ, ಅಪರಾಜಿತನಾದ ಅಭಿಮನ್ಯುವನ್ನು ಬಾಣಗಳ ಸಮೂಹದಿಂದ ಮುಚ್ಚಿದುದನ್ನು ನೋಡಿ ಸಂತಸಗೊಂಡ ದುರ್ಯೋಧನನು ಅಭಿಮನ್ಯುವು ಆ ಬಾಣಗಳ ಪ್ರಹಾರದಿಂದ ಯಮನ ಮನೆಗೆ ಹೋದನೆಂದೇ (ಸತ್ತುಹೋದನೆಂದೇ) ಭಾವಿಸಿದನು. ಸುವರ್ಣ ಮಯವಾದ ರೆಕ್ಕೆಗಳನ್ನು ಹೊಂದಿದ್ದ, ನಾನಾವಿಧವಾದ ಚಿಹ್ನೆಗಳನ್ನು ಹೊಂದಿದ್ದ, ಚೂಪಾಗಿ ಮಾಡಲ್ಪಟ್ಟಿದ್ದ ಬಾಣಗಳಿಂದ ಆ ರಾಜಕುಮಾರರು ಅಭಿಮನ್ಯುವನ್ನು ಮುಚ್ಚಿ ನಿಮೇಷಕಾಲಪರ್ಯಂತವಾಗಿ ಅವನು ಕಾಣದಂತೆಯೇ ಮಾಡಿಬಿಟ್ಟರು. ಮುಳ್ಳುಹಂದಿಯ ಶರೀರವು ಮುಳ್ಳುಗಳಿಂದ ವ್ಯಾಪ್ತವಾಗಿರುವಂತೆ–ಅಭಿಮನ್ಯುವಿನ ರಥ, ಕುದುರೆ ಮತ್ತು ಸಾರಥಿ ಈ ಎಲ್ಲರೂ ರಾಜಕುಮಾರರು ಬಿಟ್ಟ ಬಾಣಗಳಿಂದ ವ್ಯಾಪ್ತರಾಗಿದ್ದುದನ್ನು ನಾವು ಕಂಡೆವು. ಬಹು ಆಳದವರೆಗೂ ಗಾಯಗೊಂಡ ಅಭಿಮನ್ಯುವು –ಶೂಲದಿಂದ ಇರಿಯಲ್ಪಟ್ಟ ಆನೆಯಂತೆ–ಬಹಳ ಕ್ರುದ್ಧನಾಗಿ ಗಾಂಧರ್ವಾಸ್ತ್ರವನ್ನು ಪ್ರಯೋಗಿಸಿ ರಥಮಾಯೆಯನ್ನು (ರಥಯುದ್ಧದಲ್ಲಿ ಅವನಿಗಿದ್ದ ನೈಪುಣ್ಯವನ್ನು) ಪ್ರದರ್ಶಿಸಿದನು. ಅರ್ಜುನನು ತಪಸ್ಸುಮಾಡಿ ತುಂಬುರುಪ್ರಮುಖರಾದ ಗಂಧರ್ವರಿಂದ ಯಾವ ಅಸ್ತ್ರವನ್ನು ಪಡೆದುಕೊಂಡಿದ್ದನೋ ಅದೇ ಅಸ್ತ್ರವನ್ನೇ ಅವನು ತನ್ನ ಮಗನಿಗೂ ಉಪದೇಶಿಸಿದ್ದನು. ಅಭಿಮನ್ಯುವು ಈ ಸಮಯದಲ್ಲಿ ಅದೇ ಗಾಂಧರ್ವಾಸ್ತ್ರವನ್ನು ಪ್ರಯೋಗಿಸಿ ಶತ್ರುಸೈನ್ಯವನ್ನು ವಿಮೋಹ ಗೊಳಿಸಿದನು. ಅಭಿಮನ್ಯುವು ಬಹಳ ಶೀಘ್ರವಾಗಿ ಅಸ್ತ್ರಪ್ರಯೋಗ- ರಥ ಸಂಚಾಲನ ಕೌಶಲವನ್ನು ಪ್ರದರ್ಶಿಸುತ್ತಾ, ಕೊಳ್ಳಿಯ ಚಕ್ರದೋಪಾದಿಯಲ್ಲಿ

ಒಮ್ಮೆ ಏಕಾಕಿಯಾಗಿಯೂ ಮತ್ತೊಮ್ಮೆ ನೂರು ಮಂದಿ ಅಭಿಮನ್ಯು ಗಳಿರುವಂತೆಯೂ, ಮರುಕ್ಷಣದಲ್ಲಿಯೇ ಸಾವಿರಮಂದಿ ಅಭಿಮನ್ಯು ಗಳಿರುವಂತೆಯೂ ತೋರ್ಪಡಿಸುತ್ತಾ ಯುದ್ಧಮಾಡುತ್ತಿದ್ದನು. ಕೌಶಲದಿಂದ ಕೂಡಿದ ರಥಸಂಚಲನದಿಂದಲೂ, ಅಸ್ತ್ರಮಾಯೆಯಿಂದಲೂ ಶತ್ರುತಾಪಕ ನಾದ ಅಭಿಮನ್ಯುವು ಶತ್ರುಗಳನ್ನು ವಿಮೋಹಗೊಳಿಸುತ್ತಾ ರಾಜರ ಮತ್ತು ರಾಜಕುಮಾರರ ಶರೀರಗಳನ್ನು ನೂರಾರು ಪ್ರಕಾರವಾಗಿ ಭೇದಿಸಿದನು.

**ಪ್ರಾಣಾಃ ಪ್ರಾಣಭೃತಾಂ ಸಂಖ್ಯೇ ಪ್ರೇಷಿತಾನಿ ಶಿತೈಃ ಶರೈಃ ।**
**ರಾಜನ್ನಾಪುರಮುಂ ಲೋಕಂ ಶರೀರಾಣ್ಯವನಿಂ ಯಯುಃ ॥೨೫॥**

ಆ ಯುದ್ಧದಲ್ಲಿ ಅಭಿಮನ್ಯುವಿನ ನಿಶಿತವಾದ ಬಾಣಗಳು ಪ್ರಾಣಧಾರಿಗಳ (ಕ್ಷತ್ರಿಯಯೋಧರ) ಪ್ರಾಣಗಳನ್ನು ಪರಲೋಕಕ್ಕೆ ಒಯ್ದುವು. ಆದರೆ ಅವರ ಶರೀರಗಳು ಮಾತ್ರ ಭೂಮಿಯನ್ನು ಸೇರಿದುವು.

ಅರ್ಜುನನ ಮಗನಾದ ಅಭಿಮನ್ಯುವು ತನ್ನ ನಿಶಿತವಾದ ಬಾಣಗಳಿಂದ ಶತ್ರುಪಕ್ಷದ ರಾಜರ ಧನುಸ್ಸುಗಳನ್ನೂ, ಕುದುರೆಗಳನ್ನೂ, ಸಾರಥಿಗಳನ್ನೂ, ಧ್ವಜಗಳನ್ನೂ, ಅಂಗದಯುಕ್ತವಾದ ತೋಳುಗಳನ್ನೂ ಮತ್ತು ಶಿರಸ್ಸುಗಳನ್ನೂ ಅಪಾರಸಂಖ್ಯೆಯಲ್ಲಿ ಕತ್ತರಿಸಿದನು. ಫಲವನ್ನು ಕೊಡಲಿರುವ ಐದು ವರ್ಷ ವಯಸ್ಸಿನ ಬಹಳ ಸುಂದರವಾದ ಮಾವಿನಮರಗಳ ತೋಪು ಸಿಡಿಲಿನಿಂದ ಭಗ್ನವಾಗುವ ರೀತಿಯಲ್ಲಿ–ನೂರಾರು ರಾಜಪುತ್ರರು ಅಭಿಮನ್ಯುವಿನಿಂದ ಭಗ್ನರಾಗಿ ಹೋದರು. ಆ ರಾಜಕುಮಾರರೆಲ್ಲರೂ ಕೋಪಗೊಂಡ ಸರ್ಪ ಗಳಂತೆಯೇ ಇದ್ದರು. ಸುಕುಮಾರರಾಗಿಯೂ, ಸುಖೋಚಿತರಾಗಿಯೂ ಇದ್ದರು. ಅಂತಹ ವೀರಾಧಿವೀರರಾದ ರಾಜಕುಮಾರರು ಒಬ್ಬನೇ ಒಬ್ಬ ಅಭಿಮನ್ಯುವಿನಿಂದ ಹತರಾದುದನ್ನು ಕಂಡು ದುರ್ಯೋಧನನು ಭಯ ಗೊಂಡನು. ರಥಸೈನಿಕರು, ಗಜಸೈನಿಕರು, ಅಶ್ವಸೈನಿಕರು ಮತ್ತು ಪದಾತಿಗಳು– ಈ ಎಲ್ಲ ಚತುರಂಗಬಲವೂ ಅಭಿಮನ್ಯುವೆಂಬ ಸಮುದ್ರದಲ್ಲಿ ಮುಳುಗಿ ಹೋಗುತ್ತಿರುವುದನ್ನು ಕಂಡು ಅಸಹನಶೀಲನಾದ ದುರ್ಯೋಧನನು ಅಭಿಮನ್ಯುವನ್ನು ತಾನೇ ಎದುರಿಸಿ ನಿಂತನು. ಅಭಿಮನ್ಯು-ದುರ್ಯೋಧನರಿಗೆ ಕ್ಷಣಕಾಲ ಸಾಮಾನ್ಯವಾದ ಯುದ್ಧವೇ ನಡೆಯಿತು. ಯುದ್ಧವು ಪ್ರಾರಂಭವಾದ

ಸ್ವಲ್ಪಹೊತ್ತಿನಲ್ಲಿಯೇ ಅಭಿಮನ್ಯುವು ಬಿಟ್ಟ ನೂರಾರು ಬಾಣಗಳಿಂದ ಗಾಯಗೊಂಡ ನಿನ್ನ ಮಗನು ಯುದ್ಧದಿಂದ ವಿಮುಖನಾದನು."

ಳ೫ನೆಯ ಅಧ್ಯಾಯವು ಮುಗಿಯಿತು.

೪೬ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವು ಲಕ್ಷ್ಮಣನನ್ನೂ–ಕ್ರಾಥನ ಮಗನನ್ನೂ ಸಂಹರಿಸಿದುದು: ಸೇನಾಸಹಿತವಾಗಿ ಆರು ಮಂದಿ ಮಹಾರಥರ ಪಲಾಯನ

ಅಭಿಮನ್ಯುವಿನ ಪರಾಕ್ರಮದ ವರ್ಣನೆಯನ್ನು ಕೇಳುತ್ತಿದ್ದ ಧೃತರಾಷ್ಟ್ರನು ಭಾರವಾದ ಹೃದಯದಿಂದ ಸಂಜಯನೊಡನೆ ಹೇಳುತ್ತಾನೆ:

"ಸಂಜಯ! ಒಂದು ಕಡೆ ಒಬ್ಬನೇ ಒಬ್ಬ ಅಭಿಮನ್ಯು. ಮತ್ತೊಂದು ಕಡೆ ಬಹುಸಂಖ್ಯಾತರಾದ ಮಹಾವೀರರು. ಈ ರೀತಿಯಲ್ಲಿದ್ದ ಎರಡು ಪಕ್ಷಗಳಿಗೂ ಘೋರವಾದ ಮತ್ತು ಭಯಂಕರವಾದ ಯುದ್ಧವು ನಡೆಯಿತೆಂದು ನೀನು ಹೇಳುತ್ತಿರುವೆ. ಆದರೆ ಪ್ರತಿಯೊಂದು ಸಂದರ್ಭದಲ್ಲಿಯೂ ವಿಜಯವು ಮಹಾತ್ಮನಾದ ಅಭಿಮನ್ಯುವಿಗೇ ಲಭಿಸುತ್ತಿತ್ತೆಂದೂ ಹೇಳುತ್ತಿರುವೆ. ಅಭಿಮನ್ಯುವಿನ ಈ ರೀತಿಯ ಪರಾಕ್ರಮವು ನಂಬುವುದಕ್ಕೇ ಅಸಾಧ್ಯವಾಗಿದೆ ಮತ್ತು ಬಹಳ ಆಶ್ಚರ್ಯಕರವೂ ಆಗಿದೆ. ಆದರೆ ಈ ಒಂದು ಮಾತ್ರ ನಿಜ, ಸಂಜಯ!

**ಕಿಂ ತು ನಾತ್ಯದ್ಭುತಂ ತೇಷಾಂ ಯೇಷಾಂ ಧರ್ಮೋ ವ್ಯಪಾಶ್ರಯಃ॥**

ಧರ್ಮವು ಯಾರಿಗೆ ನಿರಂತರವಾಗಿ ಆಶ್ರಯಸ್ಥಾನವಾಗಿರುವುದೋ ಅವರಿಗೆ ಇಂತಹ ವಿಷಯಗಳು ಅದ್ಭುತವೇನಲ್ಲ. (ಮೊದಲಸಲ ಕೇಳುವಾಗ ಇಂತಹ ಪರಮಾದ್ಭುತವಾದ ವಿಷಯಗಳು ನಂಬಿಕೆಗೆ ಅನರ್ಹಗಳೆಂದು ಅನಿಸಿದರೂ ಪರಮಾದ್ಭುತವಾದ ಸಾಹಸಕಾರ್ಯಗಳನ್ನು ಮಾಡುತ್ತಿರುವವರು ಯಾರು?–ಎಂದು ವಿವೇಚಿಸಿದಾಗ ಧರ್ಮಾತ್ಮರಾದವರು-ಧರ್ಮನಿಷ್ಠರು ಇಂತಹ ಸಾಹಸಕಾರ್ಯಗಳನ್ನು ಮಾಡುತ್ತಿದ್ದಾರೆಂಬುದನ್ನು ಗಮನಿಸಿದಾಗ ಇಂತಹ ಸಾಹಸಪೂರ್ಣಕ್ರಿಯೆಗಳು ಅಶ್ರದ್ಧೇಯವೂ ಅಲ್ಲ; ಅದ್ಭುತವೂ ಅಲ್ಲ–ಎಂಬುದು ದೃಢವಾಗುತ್ತದೆ.)

ಸಂಜಯ! ದುರ್ಯೋಧನನೂ ವಿಮುಖನಾದನಂತರ ನೂರಾರು ರಾಜಪುತ್ರರೂ ಹತರಾದನಂತರ ನನ್ನ ಮಕ್ಕಳು ಸುಭದ್ರಾತನಯನನ್ನು ಎದುರಿಸಲು ಬೇರೆ ಯಾವ ಉಪಾಯವನ್ನು ಕೈಗೊಂಡರು?”

“ಮಹಾರಾಜ! ಆ ಸಮಯದಲ್ಲಿ ನಿನ್ನ ಕಡೆಯ ಯೋಧರ ಮುಖಗಳು ಒಣಗಿ ಹೋಗಿದ್ದುವು. ಕಣ್ಣುಗಳು ತಿರುಗುತ್ತಿದ್ದುವು. ಅವರ ಶರೀರಗಳೆಲ್ಲವೂ ಬೆವತುಹೋಗಿದ್ದುವು. ರೋಮಕೋಟಿಗಳು ಭಯದಿಂದ ನಿಮಿರಿ ನಿಂತಿದ್ದುವು. ಪಲಾಯನಮಾಡುವುದರಲ್ಲಿಯೇ ಅವರಿಗೆ ಹೆಚ್ಚಿನ ಉತ್ಸಾಹ ವಿದ್ದಿತು. ಶತ್ರುಗಳನ್ನು ಜಯಿಸುವುದರಲ್ಲಿ ಅವರಿಗೆ ಯಾವ ವಿಧವಾದ ಉತ್ಸಾಹವೂ ಇರಲಿಲ್ಲ. ಸತ್ತುಹೋಗಿದ್ದ ಅಣ್ಣ-ತಮ್ಮಂದಿರನ್ನೂ, ಪಿತೃ



ಗಳನ್ನೂ, ಪುತ್ರರನ್ನೂ, ಸ್ನೇಹಿತರನ್ನೂ, ಸಂಬಂಧಿಗಳನ್ನೂ, ಬಂಧುಗಳನ್ನೂ ಅಲ್ಲಲ್ಲಿಯೇ ಬಿಟ್ಟು ತಾವು ಕುಳಿತಿದ್ದ ಕುದುರೆಗಳನ್ನೂ, ಆನೆಗಳನ್ನೂ ಅವಸರಪಡಿಸುತ್ತಾ ರಣರಂಗವನ್ನು ಬಿಟ್ಟು ಓಡಿಹೋಗುತ್ತಿದ್ದರು. ಈ ರೀತಿಯಲ್ಲಿ ತಮ್ಮ ಸೈನಿಕರು ಓಡುತ್ತಿರುವುದನ್ನು ಕಂಡು ದ್ರೋಣರು, ಅಶ್ವತ್ಥಾಮಾ, ಬೃಹದ್ಬಲ, ಕೃಪರು, ದುರ್ಯೋಧನ, ಕರ್ಣ, ಕೃತವರ್ಮಾ,

ಶಕುನಿ ಇವರೆಲ್ಲರೂ ಸಂಕ್ರುದ್ಧರಾಗಿ ಅಪರಾಜಿತನಾದ ಅಭಿಮನ್ಯುವಿನ ಮೇಲೆ ಸಾಮೂಹಿಕವಾಗಿ ದಾಳಿ ನಡೆಸಿದರು. ಆದರೆ ಪ್ರಾಯಶಃ ಅವರೆಲ್ಲರೂ ನಿನ್ನ ಮೊಮ್ಮಗನಿಂದ ಪರಾಙ್ಮುಖರೇ ಆದರು. ಆದರೆ ಅವರಲ್ಲಿ ಒಬ್ಬನು ಮಾತ್ರ ಅಭಿಮನ್ಯುವನ್ನು ಎದುರಿಸಿ ಯುದ್ಧವನ್ನು ಮುಂದುವರಿಸುವ ಧೈರ್ಯ ಮಾಡಿದನು. ಅವನೇ ಮಹಾವೀರನಾದ ಲಕ್ಷ್ಮಣ. ಸುಖದಲ್ಲಿಯೇ ಬೆಳೆದಿದ್ದ, ಇಷ್ವಸ್ತ್ರಗಳನ್ನು ಚೆನ್ನಾಗಿ ತಿಳಿದಿದ್ದ, ಮಹಾತೇಜಸ್ವಿಯಾಗಿದ್ದ ಲಕ್ಷ್ಮಣನು ಬಾಲಸ್ವಭಾವದಿಂದಲೂ, ಅಭಿಮಾನದಿಂದಲೂ ಭಯವನ್ನು ಸಂಪೂರ್ಣ ವಾಗಿ ದೂರೀಕರಿಸಿ ಅಭಿಮನ್ಯುವನ್ನು ಎದುರಿಸಿದನು. ಮಗನನ್ನು ರಕ್ಷಿಸುವ ಇಚ್ಛೆಯಿಂದ ಅವನ ತಂದೆಯಾದ ದುರ್ಯೋಧನನೂ ಲಕ್ಷ್ಮಣನನ್ನು ಅನುಸರಿಸಿಯೇ ಹೋದನು. ಉಳಿದ ಮಹಾರಥರೂ ದುರ್ಯೋಧನನನ್ನು ಹಿಂಬಾಲಿಸಿ ಅಭಿಮನ್ಯುವಿನೊಡನೆ ಯುದ್ಧಕ್ಕೆ ಹೋದರು. ಮಳೆಗರೆಯುವಿಕೆ ಯಿಂದ ಮೇಘಗಳು ಪರ್ವತವನ್ನು ತೋಯಿಸುವಂತೆ–ಲಕ್ಷ್ಮಣಪುರಃಸರ ರಾದ ಯೋಧರು ಅಭಿಮನ್ಯುವನ್ನು ಬಾಣಗಳಿಂದ ಮುಚ್ಚಿಬಿಟ್ಟರು. ಚಂಡ ಮಾರುತವು ಮಹಾಮೇಘವನ್ನು ಚದುರಿಸಿಬಿಡುವಂತೆ–ಏಕಾಕಿಯಾದ ಅಭಿಮನ್ಯುವೊಬ್ಬನೇ ಆ ಎಲ್ಲ ಮಹಾರಥರನ್ನೂ ಚದುರಿಸಿಬಿಟ್ಟನು. ದುರ್ಧರ್ಷನಾದ, ನೋಡಲು ಬಹಳ ಚೆಲುವನಾಗಿದ್ದ, ತಂದೆಯ ಸಮೀಪದಲ್ಲಿಯೇ ಇದ್ದ, ಶೂರನಾದ, ಧನುಸ್ಸನ್ನು ಹಿಡಿದಿದ್ದ, ಅತ್ಯಂತ ಸುಖದಿಂದ ಬೆಳೆದಿದ್ದ, ಕುಬೇರನ ಮಗನೋಪಾದಿಯಲ್ಲಿದ್ದ, ನಿನ್ನ ಮೊಮ್ಮಗನಾದ ಲಕ್ಷ್ಮಣನ ಸಮೀಪಕ್ಕೆ–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯ ಬಳಿಗೆ ಹೋಗುವಂತೆ–ಅಭಿಮನ್ಯುವು ಹೋದನು. ಶತ್ರುವೀರಹಂತಕನಾದ ಅಭಿಮನ್ಯುವು ಲಕ್ಷ್ಮಣನೊಡನೆ ಯುದ್ಧಮಾಡಲು ಪ್ರಾರಂಭಿಸಿ ಲಕ್ಷ್ಮಣನ ಸುತೀಕ್ಷ್ಣವಾಗಿದ್ದ ಬಾಣಗಳಿಂದ ವಕ್ಷಃಸ್ಥಳದಲ್ಲಿಯೂ ಮತ್ತು ತೋಳುಗಳಲ್ಲಿಯೂ ಪ್ರಹತನಾದನು. ಕೋಲಿನಿಂದ ಪೆಟ್ಟುತಿಂದ ಸರ್ಪದೋಪಾದಿಯಲ್ಲಿ–ಪರಮಕ್ರುದ್ಧನಾದ ನಿನ್ನ ಪೌತ್ರನಾದ ಅಭಿಮನ್ಯುವು ಮತ್ತೊಬ್ಬ ಪೌತ್ರನಾದ ಲಕ್ಷ್ಮಣನನ್ನು ಕುರಿತು ಹೇಳಿದನು:

**ಸುದೃಷ್ಟಃ ಕ್ರಿಯತಾಂ ಲೋಕೋ ಹ್ಯಮುಂ ಲೋಕಂ ಗಮಿಷ್ಯಸಿ ।**
**ಪಶ್ಯತಾಂ ಬಾನ್ಧವಾನಾಂ ತ್ವಾಂ ನಯಾಮಿ ಯಮಸಾದನಮ್॥**

"ಲಕ್ಷ್ಮಣ! ಈ ಲೋಕವನ್ನೆಲ್ಲಾ ಒಮ್ಮೆ ಚೆನ್ನಾಗಿ ನೋಡಿಬಿಡು. ಇದೇ ನಿನ್ನ ಕಡೆಯ ನೋಟ. ಈ ಪ್ರಪಂಚವನ್ನು ಮುಂದಿನ ಕ್ಷಣದಲ್ಲಿ ನೀನು ನೋಡಲಾರೆ. ಈಗಲೇ ನೀನು ಪರಲೋಕಯಾತ್ರೆಯನ್ನು ಮಾಡಲಿರುವೆ. ನಿನ್ನ ಬಂಧುಜನರು ನೋಡುತ್ತಿರುವಂತೆಯೇ ನಿನ್ನನ್ನು ಯಮಪುರಿಗೆ ಕಳುಹಿಸಿಕೊಡುತ್ತೇನೆ."

ಹೀಗೆಂದು ಹೇಳುತ್ತಾ ಶತ್ರುವೀರಸಂಹಾರಕನಾದ, ಮಹಾಬಾಹುವಾದ ಅಭಿಮನ್ಯುವು ಪೊರೆಯನ್ನು ಕಳಚಿದ ಸರ್ಪದಂತಿದ್ದ ಭಲ್ಲವನ್ನು ಬತ್ತಳಿಕೆ ಯಿಂದ ತೆಗೆದು, ಧನುಸ್ಸಿನಲ್ಲಿ ಯೋಜಿಸಿ, ಶಿಂಜಿನಿಯನ್ನು ಸುದೀರ್ಘವಾಗಿ ಸೆಳೆದು ಲಕ್ಷ್ಮಣನ ಮೇಲೆ ಬಿಟ್ಟನು. ಅಭಿಮನ್ಯುವಿನ ಭುಜದಿಂದ ವಿನಿರ್ಮುಕ್ತವಾದ (ಬಿಡಲ್ಪಟ್ಟ) ಆ ಭಲ್ಲವು ದರ್ಶನೀಯವಾಗಿಯೂ, ಸುಂದರವಾದ ಮೂಗಿನಿಂದಲೂ ಮತ್ತು ಹುಬ್ಬುಗಳಿಂದಲೂ ಕೂಡಿ ದ್ದಾಗಿಯೂ, ಸುಂದರವಾದ ಕೂದಲಿನ ಅಗ್ರಭಾಗವನ್ನು ಹೊಂದಿದ್ದಾಗಿಯೂ ಮತ್ತು ಸುಂದರವಾದ ಕರ್ಣಕುಂಡಲಗಳಿಂದ ಕೂಡಿದುದಾಗಿಯೂ ಇದ್ದ ಲಕ್ಷ್ಮಣನ ತಲೆಯನ್ನು ಹಾರಿಸಿಬಿಟ್ಟಿತು.

ಲಕ್ಷ್ಮಣನು ಹತನಾದುದನ್ನು ಕಂಡು ಸುತ್ತಲೂ ಇದ್ದ ಜನರೆಲ್ಲರೂ "ಹಾ ಲಕ್ಷ್ಮಣ! ಹಾ ಲಕ್ಷ್ಮಣ!"–ಎಂದು ಕೂಗಿಕೊಂಡರು. ಪ್ರಿಯಪುತ್ರನಾದ ಲಕ್ಷ್ಮಣನು ಹತನಾಗಲಾಗಿ, ಪರಮಕ್ರುದ್ಧನಾದ, ಕ್ಷತ್ರಿಯರ್ಷಭನಾದ ದುರ್ಯೋಧನನು–'ಇವನನ್ನು ಈಗಲೇ ಸಂಹರಿಸಿರಿ'–ಎಂದು ತನ್ನ ಸುತ್ತಲೂ ಇದ್ದ ಕ್ಷತ್ರಿಯರಿಗೆ ಕೂಗಿಹೇಳಿದನು. ಒಡನೆಯೇ ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮಾ, ಬೃಹದ್ಬಲ, ಕೃತವರ್ಮಾ–ಈ ಆರುಮಂದಿ ಮಹಾರಥರು ಅಭಿಮನ್ಯುವನ್ನು ಸುತ್ತುವರಿದರು. ಅಭಿಮನ್ಯುವು ಅವ ರೆಲ್ಲರನ್ನೂ ನಿಶಿತವಾದ ಬಾಣಗಳಿಂದ ಗಾಯಗೊಳಿಸಿ, ಪರಾಙ್ಮುಖರನ್ನಾಗಿ ಮಾಡಿ ಪರಮಕ್ರುದ್ಧನಾಗಿ ಜಯದ್ರಥನ ವಿಶಾಲವಾಗಿದ್ದ ಸೇನೆಯ ಮೇಲೆ ದಾಳಿಯನ್ನು ಪ್ರಾರಂಭಿಸಿದನು. ಕಳಿಂಗರು, ನಿಷಾದರು, ವೀರ್ಯವಂತನಾದ ಕ್ರಾಥಪುತ್ರ-ಇವರೆಲ್ಲರೂ ಕವಚಗಳನ್ನು ಧರಿಸಿ ಗಜಸೈನ್ಯದ ಮೂಲಕ ವಾಗಿ ಅಭಿಮನ್ಯುವಿನ ಹಾದಿಗೆ ಅಡ್ಡಲಾಗಿ ಬಂದರು. ಮಹಾರಾಜ! ಆ

ಸಮಯದಲ್ಲಿ ಅಭಿಮನ್ಯುವಿಗೂ ಮತ್ತು ಅವನ ಶತ್ರುಸೈನ್ಯಕ್ಕೂ ಬಹಳ ಹತ್ತಿರದಲ್ಲಿಯೇ ಘೋರವಾದ ಯುದ್ಧವು ಪ್ರಾರಂಭವಾಯಿತು. ಯಾವ



ರೀತಿಯಲ್ಲಿ ನಿತ್ಯಗತಿಯಾದ ವಾಯುವು ಆಕಾಶದಲ್ಲಿರುವ ನೂರಾರು ಮೋಡಗಳನ್ನೂ ಚದುರಿಸುತ್ತಲೇ ಇರುವುದೋ–ಅದೇ ರೀತಿಯಲ್ಲಿ ಬಲಿಷ್ಠವಾಗಿದ್ದ ಮತ್ತು ದೊಡ್ಡದಾಗಿದ್ದ ಗಜಸೈನ್ಯವನ್ನು ಅಭಿಮನ್ಯುವು ಧ್ವಂಸ ಮಾಡಿಬಿಟ್ಟನು. ಅನಂತರ ಕ್ರಾಥನು ಬಾಣಗಳ ಸಮೂಹದಿಂದ ಅಭಿಮನ್ಯುವನ್ನು ಮುಚ್ಚಿದನು. ಕ್ರಾಥನು ಅಭಿಮನ್ಯುವಿನೊಡನೆ ಯುದ್ಧ ಮಾಡುತ್ತಿದ್ದುದನ್ನು ನೋಡಿ ಯುದ್ಧದಿಂದ ಹಿಮ್ಮೆಟ್ಟಿದ್ದ ದ್ರೋಣಪ್ರಮುಖರಾದ ಮಹಾರಥರೂ ಕ್ರಾಥನನ್ನು ಬೆಂಬಲಿಸುವ ಸಲುವಾಗಿ ಪುನಃ ಯುದ್ಧಕ್ಕೆ ಹಿಂದಿರುಗಿದರು. ಅವರೆಲ್ಲರೂ ಶ್ರೇಷ್ಠವಾದ ಅಸ್ತ್ರವನ್ನು ಪ್ರಯೋಗಿಸುತ್ತಾ ಸೌಭದ್ರನನ್ನು ಮುತ್ತಿದರು. ಅವರೆಲ್ಲರನ್ನೂ ಆರ್ಜುನಿಯು ಬಾಣಗಳಿಂದ ಹಿಮ್ಮೆಟ್ಟಿಸಿ ಕ್ರಾಥಪುತ್ರನನ್ನು ಬಹಳವಾಗಿ ಪೀಡಿಸಿದನು. ಪುನಃ ಕ್ರಾಥಪುತ್ರನನ್ನು ಸಂಹಾರಮಾಡಬೇಕೆಂದು ಇಚ್ಛಿಸಿದ ಅಭಿಮನ್ಯುವು ಶೀಘ್ರವಾಗಿ ಅಸಂಖ್ಯಾತ ವಾದ ಬಾಣಗಳನ್ನು ಪ್ರಯೋಗಿಸಿ ಧನುಸ್ಸಿನಿಂದಲೂ, ಬಾಣಗಳಿಂದಲೂ, ಕೇಯೂರಗಳಿಂದಲೂ ಕೂಡಿದ್ದ ಕ್ರಾಥಪುತ್ರನ ತೋಳುಗಳನ್ನೂ, ಕಿರೀಟ

ಯುಕ್ತವಾದ ಶಿರಸ್ಸನ್ನೂ, ಛತ್ರ-ಧ್ವಜಯುಕ್ತವಾದ ರಥವನ್ನೂ, ಸಾರಥಿಯನ್ನೂ ಮತ್ತು ಕುದುರೆಗಳನ್ನೂ ಕತ್ತರಿಸಿ ಕೆಳಕ್ಕೆ ಬೀಳಿಸಿದನು.

ಕುಲ, ಶೀಲ, ವಿದ್ಯೆ ಮತ್ತು ಬಲಗಳಿಂದಲೂ, ಕೀರ್ತಿಯಿಂದಲೂ, ಅಸ್ತ್ರಬಲದಿಂದಲೂ ಸಂಪನ್ನನಾಗಿದ್ದ ಕ್ರಾಥಪುತ್ರನು ಅಭಿಮನ್ಯುವಿನ ಬಾಣಗಳ ಸಮೂಹಗಳಿಂದ ಹತನಾಗಲಾಗಿ ಪ್ರಾಯಶಃ ಎಲ್ಲ ಕೌರವಯೋಧರೂ ಯುದ್ಧದಿಂದ ಹಿಮ್ಮೆಟ್ಟಿದರು."

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವಿನ ಪರಾಕ್ರಮ : ಆರು ಮಂದಿ ಮಹಾರಥರೊಡನೆ ಘೋರಯುದ್ಧ : ಹತ್ತುಸಾವಿರ ರಾಜರ ಮತ್ತು ಬೃಹದ್ಬಲನ ಸಂಹಾರ

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ:

"ಸಂಜಯ! ನೀನು ಹೇಳಿದ ರೀತಿಯಲ್ಲಿ ಬಹಳ ರಭಸದಿಂದ ಜಯದ್ರಥನ ಸೇನೆಯೊಳಕ್ಕೆ ಪ್ರವೇಶಿಸಿದ, ತರುಣನಾಗಿದ್ದ, ಅಪರಾಜಿತನಾದ, ತಾನು ಹುಟ್ಟಿದ ಕುಲಕ್ಕೆ ಅನುರೂಪವಾದ ಸಾಹಸಕಾರ್ಯವನ್ನು ಮಾಡುತ್ತಿದ್ದ, ಯುದ್ಧಗಳಲ್ಲಿ ಪಲಾಯನವೆಂಬುದನ್ನೇ ತಿಳಿಯದವನಾಗಿದ್ದ, ಕೇವಲ ಮೂರು ವರ್ಷ ವಯಸ್ಸಿನ, ಬಲಿಷ್ಠವಾದ ಜಾತ್ಯಶ್ವಗಳಿಂದ ಒಯ್ಯಲ್ಪಡುತ್ತಿದ್ದ, ಆಕಾಶದಲ್ಲಿಯೇ ಸತತವಾಗಿ ಹಾರಿಕೊಂಡೇ ಯುದ್ಧಮಾಡುತ್ತಿರುವನೋ ಎಂಬಂತೆ ಕಾಣುತ್ತಿದ್ದ ಅಭಿಮನ್ಯುವನ್ನು ನನ್ನ ಸೈನ್ಯದಲ್ಲಿ ಯಾವ ಶೂರರು ತಡೆದು ನಿಲ್ಲಿಸಿದರು?"

"ಮಹಾರಾಜ! ಪಾಂಡುನಂದನನ ನಂದನನಾದ ಅಭಿಮನ್ಯುವು ನಿನ್ನ ಅಗಾಧವಾಗಿದ್ದ ವಿಶಾಲಸೈನ್ಯವನ್ನು ಪ್ರವೇಶಿಸಿ ಅಲ್ಲಿದ್ದ ಎಲ್ಲ ರಾಜರನ್ನೂ ಯುದ್ಧದಿಂದ ವಿಮುಖರನ್ನಾಗಿ ಮಾಡಿದನು. ಅಭಿಮನ್ಯುವು ನಿನ್ನ ಸೈನ್ಯವನ್ನು ಅಡೆ-ತಡೆಗಳೇ ಇಲ್ಲದೇ ವಿಧ್ವಂಸನಗೊಳಿಸುತ್ತಿದ್ದುದನ್ನು ಕಂಡು ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮಾ, ಬೃಹದ್ಬಲ, ಕೃತವರ್ಮಾ–ಈ ಆರು ಮಂದಿ ಮಹಾರಥರು ಪುನಃ ಸೌಭದ್ರನನ್ನು

ಸುತ್ತುವರಿದರು. ಸಿಂಧುರಾಜನಾದ ಜಯದ್ರಥನ ಮೇಲೆ ಗುರುತರವಾದ ಭಾರವು ಬಿದ್ದಿರುವುದನ್ನು ಕಂಡು ನಿನ್ನ ಸೈನ್ಯದಲ್ಲಿ ಒಂದು ಭಾಗವು



ಯುಧಿಷ್ಠಿರನಿದ್ದೆಡೆಗೆ ಧಾವಿಸಿತು. ಮಹಾಬಲಿಷ್ಠರಾದ ಇತರ ಕೆಲವು ಯೋಧರು ತಮ್ಮ ನಾಲ್ಕು ಮೊಳಗಳ ಧನುಸ್ಸನ್ನು (ಧನುಸ್ಸಿನ ಶಿಂಜಿನಿಯನ್ನು) ಸುದೀರ್ಘವಾಗಿ ಸೆಳೆಯುತ್ತಾ ವೀರನಾದ ಅಭಿಮನ್ಯುವನ್ನು ಬಾಣಗಳೆಂಬ ಮಳೆಯಿಂದ ಅಭಿಷೇಚಿಸಿದರು. ಮಹಾಧನುಷ್ಮಂತರಾದ ಸರ್ವವಿದ್ಯೆ ಗಳಲ್ಲಿಯೂ ಪ್ರವೀಣರಾದ ಆ ಎಲ್ಲ ಯೋಧರನ್ನೂ ಪರವೀರಹಂತಕನಾದ ಸೌಭದ್ರನು ಬಾಣಗಳಿಂದ ಸ್ತಂಭೀಭೂತರನ್ನಾಗಿ ಮಾಡಿದನು. ಅರ್ಜುನನ ಮಗನಾದ ಅಭಿಮನ್ಯುವು ದ್ರೋಣರನ್ನು–ಐವತ್ತು ಬಾಣಗಳಿಂದಲೂ, ಬೃಹದ್ಬಲನನ್ನು–ಇಪ್ಪತ್ತು ಬಾಣಗಳಿಂದಲೂ, ಕೃತವರ್ಮನನ್ನು–ಎಂಬತ್ತು ಬಾಣಗಳಿಂದಲೂ, ಕೃಪರನ್ನು–ಅರುವತ್ತು ಬಾಣಗಳಿಂದಲೂ, ಅಶ್ವತ್ಥಾಮ ನನ್ನು–ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ, ಮಹಾವೇಗಯುಕ್ತ ವಾಗಿದ್ದ, ಕಿವಿಯ ತುದಿಯವರೆಗೂ ಸೆಳೆದು ಪ್ರಯೋಗಿಸಿದ ಹತ್ತು ಬಾಣಗಳಿಂದಲೂ ಪ್ರಹರಿಸಿದನು. ಶತ್ರುಗಳ ಮಧ್ಯದಲ್ಲಿದ್ದ ಕರ್ಣನನ್ನು ಡೊಂಕಾಗಿಯೂ, ಹೊಂಬಣ್ಣವಾಗಿಯೂ ಮತ್ತು ನಿಶಿತವಾಗಿಯೂ ಇದ್ದ ಶ್ರೇಷ್ಠವಾದ ಬಾಣದಿಂದ ಕಿವಿಯ ಭಾಗದಲ್ಲಿ ಪ್ರಹರಿಸಿದನು. ಕೃಪಾಚಾರ್ಯರ ರಥದ ಕುದುರೆಗಳನ್ನೂ ಮತ್ತು ಪಾರ್ಶ್ವರಕ್ಷಕರನ್ನೂ ಸಂಹರಿಸಿ ಅನಂತರ

ಕೃಪರನ್ನು ಹತ್ತು ಬಾಣಗಳಿಂದ ಅವರ ಸ್ತನಾಂತರದಲ್ಲಿ (ವಕ್ಷಃಸ್ಥಳದಲ್ಲಿ) ಆರ್ಜುನಿಯು ಪ್ರಹರಿಸಿದನು. ಅನಂತರ ಬಲಿಷ್ಠನಾದ ಅಭಿಮನ್ಯುವು–ನಿನ್ನ ವೀರರಾದ ಮಕ್ಕಳು ನೋಡುತ್ತಿರುವಂತೆಯೇ ಕುರುಗಳ ಕೀರ್ತಿವರ್ಧನನಾದ *ವೃಂದಾರಕನನ್ನು ಸಂಹರಿಸಿದನು. ಶತ್ರುಗಳ ಸೈನ್ಯದಲ್ಲಿ ಪ್ರಧಾನರಾದವರನ್ನು ಆಯ್ದಾಯ್ದು ಸಂಹಾರಮಾಡುತ್ತಿದ್ದ, ಏಕಾಕಿಯಾಗಿದ್ದರೂ ಭಯಗೊಳ್ಳದವ ನಂತೆ ವೀರಾವೇಶದಿಂದ ಯುದ್ಧಮಾಡುತ್ತಿದ್ದ ಅಭಿಮನ್ಯುವನ್ನು ಅಶ್ವತ್ಥಾಮನು ಇಪ್ಪತ್ತೈದು ಕ್ಷುದ್ರಕಗಳೆಂಬ ಬಾಣಗಳಿಂದ ಪ್ರಹರಿಸಿದನು. ಅಭಿಮನ್ಯುವೂ ಸಹ ಅಶ್ವತ್ಥಾಮನನ್ನು ನಿಶಿತವಾದ ಬಾಣಗಳಿಂದ ಶೀಘ್ರಾತಿಶೀಘ್ರವಾಗಿ ನಿನ್ನ ಮಕ್ಕಳೆಲ್ಲರೂ ನೋಡುತ್ತಿದ್ದಂತೆಯೇ ಪ್ರಹರಿಸಿದನು. ಪುನಃ ದ್ರೋಣಪುತ್ರನು ತೀಕ್ಷ್ಣವಾದ ಅಲುಗಿನಿಂದ ಕೂಡಿದ್ದ, ಚೂಪಾಗಿ ಮಾಡಲ್ಪಟ್ಟಿದ್ದ, ಉಗ್ರ ವಾಗಿದ್ದ ಅರುವತ್ತು ಬಾಣಗಳಿಂದ ಸೌಭದ್ರನನ್ನು ಪ್ರಹರಿಸಿದನು. ಆದರೆ ಅಂತಹ ಕ್ರೂರವಾದ ಬಾಣಗಳಿಂದ ಪ್ರಹತನಾದರೂ ಅಭಿಮನ್ಯುವು ಮೈನಾಕ ಪರ್ವತದೋಪಾದಿಯಲ್ಲಿ ಸ್ವಲ್ಪವಾದರೂ ವಿಚಲಿತನಾಗದೇ ನಿಂತಿದ್ದನು.

ಬಲಿಷ್ಠನಾದ, ಮಹಾತೇಜಸ್ವಿಯಾದ ಅಭಿಮನ್ಯುವು ಸುವರ್ಣಮಯ ವಾದ ರೆಕ್ಕೆಗಳಿದ್ದ, ನೇರವಾಗಿ ಹೋಗುವ ಎಪ್ಪತ್ತುಮೂರು ಬಾಣಗಳಿಂದ ಅಪಕಾರಿಯಾದ, ವೈರಿಯಾದ ಅಶ್ವತ್ಥಾಮನನ್ನು ಪ್ರಹರಿಸಿದನು. ಪುತ್ರಪ್ರೇಮಿಗಳಾದ ದ್ರೋಣರು ತಮ್ಮ ಮಗನನ್ನು ಅಭಿಮನ್ಯುವಿನಿಂದ ರಕ್ಷಿಸುವ ಸಲುವಾಗಿ ನೂರು ಬಾಣಗಳನ್ನು ಅಭಿಮನ್ಯುವಿನ ಮೇಲೆ ಪ್ರಯೋಗಿಸಿದರು. ಅಶ್ವತ್ಥಾಮನೂ ಸಹ ತನ್ನ ತಂದೆಯನ್ನು ರಕ್ಷಿಸುವ ಸಲುವಾಗಿ ಎಂಟು ಬಾಣಗಳಿಂದ ಸೌಭದ್ರನನ್ನು ಪ್ರಹರಿಸಿದನು. ಅದೇ ಸಮಯದಲ್ಲಿ ಕರ್ಣನು-ಇಪ್ಪತ್ತೆರಡು ಭಲ್ಲಗಳನ್ನೂ, ಕೃತವರ್ಮನು-ಇಪ್ಪತ್ತು ಬಾಣಗಳನ್ನೂ, ಬೃಹದ್ಬಲನು-ಐವತ್ತು ಬಾಣಗಳನ್ನೂ, ಶರದ್ವಂತನ ಮಕ್ಕಳಾದ ಕೃಪರು-ಹತ್ತು ಬಾಣಗಳನ್ನೂ ಅಭಿಮನ್ಯುವಿನ ಮೇಲೆ ಪ್ರಯೋಗಿಸಿದರು. ಮಹಾರಥರು ಎಲ್ಲ ಕಡೆಗಳಿಂದಲೂ ಬಿಡುತ್ತಿದ್ದ ನಿಶಿತವಾದ ಬಾಣಗಳಿಂದ ಪೀಡಿತನಾದ ಅಭಿಮನ್ಯುವು ಅವರೆಲ್ಲರನ್ನೂ

* ಇಲ್ಲಿ ಹೇಳಿರುವ ವೃಂದಾರಕನು ಧೃತರಾಷ್ಟ್ರನ ನೂರು ಮಕ್ಕಳಲ್ಲಿ ಒಬ್ಬನಾದ ವೃಂದಾರಕನಲ್ಲ. ಅದೇ ಹೆಸರಿನ ಇವನೊಬ್ಬ ಯೋಧ.

ಹತ್ತು-ಹತ್ತು ಬಾಣಗಳಿಂದ ಗಾಯಗೊಳಿಸಿದನು. ಅನಂತರ ಕೋಸಲಾಧಿಪತಿ ಯಾದ ಬೃಹದ್ಬಲನು ಒಂದು ಬಾಣದಿಂದ ಅಭಿಮನ್ಯುವಿನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅದರಿಂದ ಕುಪಿತನಾದ ಅಭಿಮನ್ಯುವು ಬೃಹದ್ಬಲನ ಕುದುರೆಗಳನ್ನೂ, ಸೂತನನ್ನೂ ಸಂಹರಿಸಿ, ಧ್ವಜವನ್ನೂ ಮತ್ತು ಧನುಸ್ಸನ್ನೂ ಕತ್ತರಿಸಿ ಭೂಮಿಗೆ ಬೀಳಿಸಿದನು. ರಥಹೀನನಾದ ಕೋಸಲರಾಜನು ಖಡ್ಗವನ್ನೂ ಗುರಾಣಿಯನ್ನೂ ಹಿಡಿದು ರಥದಿಂದ ಧುಮುಕಿ, ಕುಂಡಲಗಳಿಂದ ಸಹಿತವಾದ ಅಭಿಮನ್ಯುವಿನ ಶಿರಸ್ಸನ್ನು ಶರೀರದಿಂದ ಪ್ರತ್ಯೇಕಿಸಿಬಿಡಲು ಇಚ್ಛಿಸಿ ಹೊರಟನು. ಕತ್ತಿಯನ್ನು ಹಿಡಿದು ತನ್ನ ಕಡೆಗೆ ವೇಗವಾಗಿ ಬರುತ್ತಿದ್ದ ಕೋಸಲೇಶ್ವರನಾದ, ರಾಜಪುತ್ರನಾದ ಬೃಹದ್ಬಲನನ್ನು ಅಭಿಮನ್ಯುವು ಒಂದು ಬಾಣದಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅದರಿಂದ ಬೃಹದ್ಬಲನು ಭಿನ್ನಹೃದಯನಾಗಿ ನೆಲಕ್ಕುರುಳಿದನು. ಅನಂತರ ಅಭಿಮನ್ಯುವು ತನ್ನ ವಿಷಯದಲ್ಲಿ ಅಶುಭವಾದ ಮಾತುಗಳನ್ನಾಡುತ್ತಿದ್ದ, ಕತ್ತಿಯನ್ನೂ ಧನುಸ್ಸನ್ನೂ ಹಿಡಿದು ಯುದ್ಧಕ್ಕೆ ಬಂದ, ಮಹಾತ್ಮರಾದ ಹತ್ತು ಸಾವಿರ ರಾಜರನ್ನು ಸಂಹರಿಸಿದನು. ಹೀಗೆ ಮಹಾಧನುಷ್ಮಂತನಾದ ಸೌಭದ್ರನು ಮಹಾರಥನಾದ ಬೃಹದ್ಬಲನನ್ನು ಸಂಹಾರಮಾಡಿ ನಿನ್ನ ಕಡೆಯ ಯೋಧರನ್ನು ಬಾಣರೂಪ ವಾದ ಜಲವರ್ಷದಿಂದ ಸ್ತಂಭನಗೊಳಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದನು."

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ — ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವು ಅಶ್ವಕೇತು, ಭೋಜ–ಮೊದಲಾದವರನ್ನು ಸಂಹರಿಸಿದುದು : ಆರು ಮಂದಿ ಮಹಾರಥರೊಡನೆ ಅಭಿಮನ್ಯುವಿನ ಘೋರಯುದ್ಧ : ಆ ಮಹಾರಥರೆಲ್ಲರೂ ಸೇರಿ ಅಭಿಮನ್ಯುವಿನ ಧನುಸ್ಸನ್ನೂ, ರಥವನ್ನೂ, ಕತ್ತಿಯನ್ನೂ ಮತ್ತು ಗುರಾಣಿಯನ್ನೂ ನಾಶಪಡಿಸಿದುದು

ಸಂಜಯನು ಅಭಿಮನ್ಯುವಿನ ಪರಾಕ್ರಮವನ್ನು ಮುಂದುವರಿಸಿ ಹೇಳುತ್ತಾನೆ:

“ಮಹಾರಾಜ! ಅಭಿಮನ್ಯುವು ಒಂದು ಬಾಣದಿಂದ ಕರ್ಣನ ಕಿವಿಯ ಪ್ರದೇಶದಲ್ಲಿ ಪ್ರಹರಿಸಿದನು. ಕರ್ಣನನ್ನು ಕೋಪಗೊಳಿಸುತ್ತಾ ಐವತ್ತು ಬಾಣಗಳಿಂದ ಪುನಃ ಗಾಯಗೊಳಿಸಿದನು. ರಾಧೇಯನೂ ಅಷ್ಟೇ ಬಾಣಗಳಿಂದಲೇ ಅಭಿಮನ್ಯುವನ್ನು ಪ್ರತಿಯಾಗಿ ಪ್ರಹರಿಸಿದನು. ಶರೀರಾದ್ಯಂತವಾಗಿ ಬಾಣಗಳಿಂದ ವ್ಯಾಪ್ತನಾಗಿದ್ದ ಸೌಭದ್ರನು ಆ ಸಮಯದಲ್ಲಿ ಬಹಳವಾಗಿ ಶೋಭಿಸಿದನು. ಬಳಿಕ ಕ್ರುದ್ಧನಾದ ಅಭಿಮನ್ಯುವು ಕರ್ಣನನ್ನು ನೂರಾರು ಬಾಣಗಳಿಂದ ಪ್ರಹರಿಸಿ ಅವನ ಶರೀರವನ್ನು ಬಾಣಗಳ ಪ್ರಹಾರದಿಂದ ಕ್ಷತ-ವಿಕ್ಷತವನ್ನಾಗಿ ಮಾಡಿ ಆ ಗಾಯಗಳಿಂದ ರಕ್ತವು ಧಾರಾಕಾರವಾಗಿ ಸುರಿಯುವಂತೆ ಮಾಡಿದನು. ಶೂರನಾದ ಕರ್ಣನು ಬಾಣಗಳಿಂದ ಕ್ಷತ-ವಿಕ್ಷತನಾಗಿ ರಕ್ತದಿಂದ ತೋಯಿಸಲ್ಪಟ್ಟು ಬಹಳವಾಗಿ ಶೋಭಿಸಿದನು.

ಮಹಾರಾಜ! ಮಹಾತ್ಮರಾದ ಕರ್ಣ-ಸೌಭದ್ರರಿಬ್ಬರೂ ಶರೀರಾದ್ಯಂತವಾಗಿ ಬಾಣಗಳಿಂದ ಚುಚ್ಚಲ್ಪಟ್ಟಿದ್ದು ವಿಚಿತ್ರವಾದ ಅಂಗವುಳ್ಳವರಾಗಿದ್ದರು ಮತ್ತು ರಕ್ತದಿಂದ ಇಬ್ಬರೂ ತೋಯ್ದುಹೋಗಿದ್ದರು. ಆ ಸಮಯದಲ್ಲಿ ಅವರು ಸುಪುಷ್ಪಿತವಾದ ಮುತ್ತುಗದ ಮರಗಳಂತೆಯೇ ಕಾಣುತ್ತಿದ್ದರು. ಅನಂತರ ಸೌಭದ್ರನು ಶೂರರಾದ, ಚಿತ್ರಯೋಧಿಗಳಾದ ಕರ್ಣನ ಆರು ಮಂದಿ ಸಚಿವರನ್ನು ಅಶ್ವ-ಸೂತ-ಧ್ವಜ-ರಥಸಹಿತವಾಗಿ ಸಂಹಾರಮಾಡಿದನು. ಅದೇ ರೀತಿಯಲ್ಲಿ ಇತರ ಮಹಾಧನುಷ್ಮಂತರಾದ ವೀರರನ್ನೂ ಅಭಿಮನ್ಯುವು ಸ್ವಲ್ಪವಾದರೂ ಭ್ರಾಂತಿಯೆಂಬುದೇ ಇಲ್ಲದೇ ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿದನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಅನಂತರ ಅಭಿಮನ್ಯುವು ನೇರವಾಗಿ ಹೋಗುವ ಆರು ಬಾಣಗಳಿಂದ ಮಾಗಧನ ಮಗನನ್ನು ಸಂಹರಿಸಿ, ಅನಂತರ ಅಶ್ವ-ಸೂತಸಹಿತನಾದ ತರುಣನಾದ ಅಶ್ವಕೇತುವನ್ನು ಸಂಹರಿಸಿದನು. ಬಳಿಕ ಅಭಿಮನ್ಯುವು ಆನೆಯ ಚಿಹ್ನೆಯಿರುವ ಧ್ವಜವನ್ನು ಹೊಂದಿದ್ದ, ಮಾರ್ತಿಕಾವತಕದ ರಾಜನಾದ ಭೋಜನನ್ನು ಒಂದೇ ಒಂದು ಕ್ಷುರಪ್ರದಿಂದ ಸಂಹರಿಸಿ, ಕೌರವಸೇನೆಯ ಮೇಲೆ ಬಾಣಗಳ ಮಳೆ ಗರೆಯುತ್ತಾ ಸಿಂಹನಾದಮಾಡಿದನು. ಆ ಸಮಯದಲ್ಲಿ ದುಃಶಾಸನನ ಮಗನು ಅಭಿಮನ್ಯುವನ್ನು ಎದುರಿಸಿ ನಾಲ್ಕು ಬಾಣಗಳಿಂದ ಅಭಿಮನ್ಯುವಿನ ನಾಲ್ಕು

ಕುದುರೆಗಳನ್ನೂ, ಒಂದು ಬಾಣದಿಂದ ಸೂತನನ್ನೂ ಪ್ರಹರಿಸಿ ಅನಂತರ ಹತ್ತು ಬಾಣಗಳಿಂದ ಆರ್ಜುನಿಯನ್ನೂ ಪ್ರಹರಿಸಿದನು. ಕೃಷ್ಣನ (ಅರ್ಜುನನ) ಮಗನಾದ ಕಾರ್ಷ್ಣಿಯು ದೌಃಶಾಸನಿಯನ್ನು ಶೀಘ್ರಗಾಮಿಗಳಾದ ಏಳು ಬಾಣಗಳಿಂದ ಪ್ರಹರಿಸಿ ಕೋಪದಿಂದ ರಕ್ತಲೋಚನನಾಗಿ ಉಚ್ಚಸ್ವರದಿಂದ ಈ ಮಾತುಗಳನ್ನು ಹೇಳಿದನು :

**ಪಿತಾ ತವಾಹವಂ ತ್ಯಕ್ತ್ವಾ ಗತಃ ಕಾಪುರುಷೋ ಯಥಾ ।**
**ದಿಷ್ಟ್ಯಾ ತ್ವಮಪಿ ಜಾನೀಷೇ ಯೋದ್ಧುಂ ನ ತ್ವದ್ಯ ಮೋಕ್ಷ್ಯಸೇ॥**

"ಎಲವೋ! ನಿನ್ನ ತಂದೆಯು ಹೇಡಿಯಂತೆ ಯುದ್ಧವನ್ನು ಬಿಟ್ಟು ಓಡಿ ಹೋದನು. ಸೌಭಾಗ್ಯವಶಾತ್ ನೀನೂ ಸಹ ಯುದ್ಧಮಾಡಲು ಕಲಿತಿರುವೆಯಲ್ಲವೇ? ಆದರೆ ಇಂದು ಮಾತ್ರ ನಾನು ನಿನ್ನನ್ನು ಜೀವಸಹಿತವಾಗಿ ಬಿಡುವುದಿಲ್ಲ."

ಮಹಾರಾಜ! ಹೀಗೆಂದು ಹೇಳಿ ಅಭಿಮನ್ಯುವು ಕರ್ಮಾರನಿಂದ ಶುದ್ಧವಾಗಿ ಮಾಡಲ್ಪಟ್ಟಿದ್ದ ಒಂದು ಬಾಣವನ್ನು ದುಃಶಾಸನನ ಮಗನ ಮೇಲೆ ಪ್ರಯೋಗಿಸಿದನು. ಆ ಸಮಯದಲ್ಲಿ ಅಶ್ವತ್ಥಾಮನು ಮೂರು ಬಾಣಗಳನ್ನು ಬಿಟ್ಟು ಅಭಿಮನ್ಯುವು ಬಿಟ್ಟಿದ್ದ ಬಾಣವನ್ನು ಕತ್ತರಿಸಿದನು. ಅದನ್ನು ನೋಡಿದ ಆರ್ಜುನಿಯು ಕ್ರುದ್ಧನಾಗಿ ಅಶ್ವತ್ಥಾಮನ ಧ್ವಜವನ್ನು ಕತ್ತರಿಸಿ, ಶಲ್ಯನನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಶಲ್ಯನು ಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಒಂಬತ್ತು ಬಾಣಗಳಿಂದ ಅಭಿಮನ್ಯುವನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಆ ಸಮಯದಲ್ಲಿಯೂ ಆರ್ಜುನಿಯು ಸಂಭ್ರಾಂತನಾಗದವನಂತೆಯೇ ಇದ್ದುದನ್ನು ಕಂಡು ನಮಗೆ ಅದು ಪರಮಾದ್ಭುತವೆನಿಸಿತು.

ಕ್ರುದ್ಧನಾಗಿದ್ದ ವೀರನಾದ ಅಭಿಮನ್ಯುವು ಶಲ್ಯನ ಧ್ವಜವನ್ನು ಕತ್ತರಿಸಿ, ಪಾರ್ಶ್ವರಕ್ಷಕರನ್ನೂ ಸಂಹರಿಸಿ, ಲೋಹಮಯವಾದ ಆರು ಬಾಣಗಳಿಂದ ಶಲ್ಯನನ್ನೂ ಪ್ರಹರಿಸಿದನು. ರಥಹೀನನಾದ ಶಲ್ಯನು ಬೇರೆಯ ರಥವನ್ನು ಹತ್ತಿದನು. ಬಳಿಕ ಅಭಿಮನ್ಯುವು ಶತ್ರುಂಜಯ, ಚಂದ್ರಕೇತು, ಮೇಘವೇಗ, ಸುವರ್ಚಸ ಮತ್ತು ಸೂರ್ಯಭಾಸ-ಈ ಐವರು ರಾಜಕುಮಾರರನ್ನೂ ಸಂಹರಿಸಿ ವೀರನಾದ ಶಕುನಿಯನ್ನು ಮೂರು ಬಾಣಗಳಿಂದ ಪ್ರಹರಿಸಿದನು.

ಅದಕ್ಕೆ ಪ್ರತಿಯಾಗಿ ಶಕುನಿಯೂ ಮೂರು ಬಾಣಗಳಿಂದ ಅಭಿಮನ್ಯುವನ್ನು ಪ್ರಹರಿಸಿ ದುರ್ಯೋಧನನೊಡನೆ ಹೇಳಿದನು:

**ಸರ್ವ ಏನಂ ವಿಮಥ್ನೀಮಃ ಪುರೈಕೈಕಂ ಹಿನಸ್ತಿ ನಃ ।**

"ಇವನು ನಮ್ಮಲ್ಲಿ ಒಬ್ಬೊಬ್ಬರನ್ನೇ ಆರಿಸಿಕೊಂಡು ಸಂಹಾರಮಾಡುವುದಕ್ಕೆ ಮೊದಲೇ ನಾವೆಲ್ಲರೂ ಒಟ್ಟಾಗಿ ಸೇರಿ ಇವನನ್ನು ಉಪಾಯಾಂತರದಿಂದ ಸಂಹರಿಸೋಣ."

ಅನಂತರ ವಿಕರ್ತನನ ಮಗನಾದ ಕರ್ಣನು ಇದೇ ವಿಷಯವಾಗಿ ದ್ರೋಣರೊಡನೆ ಹೇಳಿದನು:

**ಪುರಾ ಸರ್ವಾನ್ಪ್ರಮಥ್ನಾತಿ ಬ್ರೂಹ್ಯಸ್ಯ ವಧಮಾಶು ನಃ ।**

"ಅಭಿಮನ್ಯುವು ನಮ್ಮೆಲ್ಲರನ್ನೂ ವಧಿಸುವ ಮೊದಲೇ ಇವನನ್ನು ಸಂಹಾರಮಾಡುವ ಉಪಾಯವನ್ನು ಬೇಗ ಹೇಳಿರಿ."

ಕರ್ಣನ ಮಾತನ್ನು ಕೇಳಿ ಮಹಾಧನುಷ್ಮಂತರಾದ ದ್ರೋಣರು ಅವರೆಲ್ಲರನ್ನೂ ಉದ್ದೇಶಿಸಿ ಹೇಳಿದರು:

"ಪಾರ್ಥಿವರೇ! ಅಭಿಮನ್ಯುಕುಮಾರನ ಯುದ್ಧಕ್ರಮದಲ್ಲಿ ಸ್ವಲ್ಪ ವಾದರೂ ನ್ಯೂನತೆಯಾಗಲೀ ಅಥವಾ ಛಿದ್ರವಾಗಲೀ ಇರುವುದೇ ಎಂಬು ದನ್ನು ನೀವೇ ನೋಡಿರಿ. ಎಲ್ಲ ದಿಕ್ಕುಗಳಲ್ಲಿಯೂ ಸುತ್ತುತ್ತಿರುವ ಈ ಅಭಿಮನ್ಯುವಿನ ಯುದ್ಧಕ್ರಮದಲ್ಲಿ ಲೇಶಮಾತ್ರವೂ ನ್ಯೂನತೆಯನ್ನು (ಛಿದ್ರವನ್ನು) ನಾನು ಕಾಣುತ್ತಿಲ್ಲ.

ಪಾಂಡವೇಯನಾದ, ನರಶ್ರೇಷ್ಠನಾದ ಅಭಿಮನ್ಯುವಿನ ಹಸ್ತಲಾಘವ ವನ್ನಾದರೂ ನೋಡಿರಿ. ರಥಮಾರ್ಗದಲ್ಲಿ ಇವನು ಸಂಚರಿಸುವಾಗ ಬಾಣಗಳನ್ನು ಧನುಸ್ಸಿನಲ್ಲಿ ಸಂಧಾನಮಾಡಿ ಶೀಘ್ರಾತಿಶೀಘ್ರವಾಗಿ ಬಿಡುವ ಅಭಿಮನ್ಯುವಿನ ಧನುರ್ಮಂಡಲವು ಮಾತ್ರವೇ ಕಾಣಿಸುತ್ತದೆ. ಶತ್ರುವೀರ ಸಂಹಾರಕನಾದ ಅಭಿಮನ್ಯುವು ಯದ್ಯಪಿ ತನ್ನ ಬಾಣಗಳಿಂದ ನನ್ನ ಪ್ರಾಣವನ್ನು (ನನ್ನನ್ನು) ಸಂಕಟಗೊಳಿಸುತ್ತಿದ್ದರೂ, ಬಾಣಗಳಿಂದ ನನ್ನನ್ನು ವಿಮೋಹ ಗೊಳಿಸುತ್ತಿದ್ದರೂ ಬಾರಿಬಾರಿಗೂ ಇವನು ನನಗೆ ಹರ್ಷವನ್ನೇ ಉಂಟುಮಾಡುತ್ತಿದ್ದಾನೆ. ಸುಭದ್ರೆಯ ಮಗನಾದ ಅಭಿಮನ್ಯುವು ರಣಾಂಗಣ

ದಲ್ಲಿ ಸಂಚರಿಸುತ್ತಾ ನಿಶ್ಚಯವಾಗಿಯೂ ನನಗೆ ಬಹಳವಾಗಿ ಆನಂದ ದಾಯಕನಾಗಿದ್ದಾನೆ. ಇವನ ಬಾಣಗಳ ಪ್ರಹಾರದಿಂದ ಖತಿಗೊಂಡ ಮಹಾರಥರೂ ಸಹ ಇವನ ಯುದ್ಧಕ್ರಮದಲ್ಲಿ ಒಂದು ನ್ಯೂನತೆಯನ್ನೂ (ಛಿದ್ರವನ್ನೂ) ಕಾಣದವರಾಗಿದ್ದಾರೆ. ಹಸ್ತಲಾಘವದಿಂದ ಎಲ್ಲ ದಿಕ್ಕುಗಳನ್ನೂ ಬಾಣಗಳಿಂದ ಮುಚ್ಚುತ್ತಿರುವ ಈ ಅಭಿಮನ್ಯುವಿಗೂ-ಗಾಂಡೀವಧನ್ವನಾದ ಅರ್ಜುನನಿಗೂ ನಾನು ಯಾವ ವ್ಯತ್ಯಾಸವನ್ನೂ ಕಾಣುತ್ತಿಲ್ಲ."

ಆದರೆ ಕರ್ಣನಿಗೆ ಅಭಿಮನ್ಯುವಿನ ಹೊಗಳಿಕೆಯು ಬೇಕಾಗಿರಲಿಲ್ಲ. ಅವನ ಸಂಹಾರೋಪಾಯವನ್ನು ದ್ರೋಣರು ಸೂಚಿಸಬೇಕೆಂದು ಕರ್ಣನು ದ್ರೋಣರನ್ನು ಪ್ರಾರ್ಥಿಸಿದ್ದನು. ದ್ರೋಣರು ಆ ವಿಷಯವನ್ನೇ ಪ್ರಸ್ತಾಪಿಸದೇ ಅಭಿಮನ್ಯುವನ್ನೇ ಹೊಗಳುತ್ತಿರುವುದನ್ನು ಕಂಡು ಅಭಿಮನ್ಯುವಿನ ಬಾಣಗಳಿಂದ ಸತತವಾಗಿ ಪ್ರಹೃತನಾಗುತ್ತಿದ್ದ ಕರ್ಣನು ಪುನಃ ದ್ರೋಣರಿಗೆ ಹೇಳಿದನು:

**ಸ್ಥಾತವ್ಯಮಿತಿ ತಿಷ್ಠಾಮಿ ಪೀಡ್ಯಮಾನೋಽಭಿಮನ್ಯುನಾ ।**
**ತೇಜಸ್ವಿನಃ ಕುಮಾರಸ್ಯ ಶರಾಃ ಪರಮದಾರುಣಾಃ ।**
**ಕ್ಷಿಣ್ವನ್ತಿ ಹೃದಯಂ ಮೇಽದ್ಯ ಘೋರಾಃ ಪಾವಕತೇಜಸಃ ॥೨೬॥**

"ಆಚಾರ್ಯರೇ! ಅಭಿಮನ್ಯುವಿನಿಂದ ಪೀಡಿತನಾಗುತ್ತಿದ್ದರೂ ನಾನು ಯುದ್ಧದಿಂದ ಹಿಮ್ಮೆಟ್ಟಬಾರದೆಂದು ನಿಂತಿದ್ದೇನೆ. (ಅಷ್ಟು ಹೊರತಾಗಿ ನನಗೆ ಈಗ ರಣರಂಗದಲ್ಲಿ ನಿಂತು ಯುದ್ಧಮಾಡುವ ಚೈತನ್ಯವೇ ಇಲ್ಲವಾಗಿದೆ.) ತೇಜಸ್ವಿಯಾದ ಅಭಿಮನ್ಯುಕುಮಾರನ ಬಾಣಗಳು ಪರಮದಾರುಣವಾಗಿವೆ. ಯಜ್ಞೇಶ್ವರನ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ಘೋರವಾದ ಅವನ ಬಾಣಗಳು ನನ್ನ ಹೃದಯವನ್ನು ಸೀಳುತ್ತಲಿವೆ."

ಮಹಾರಾಜ! ಕರ್ಣನ ಮಾತುಗಳನ್ನು ಕೇಳಿ ದ್ರೋಣರು ಗಹ-ಗಹಿಸಿ ನಗುತ್ತಿರುವವರಂತೆ ಮೆಲ್ಲಗೆ ಹೇಳಿದರು:

"ಕರ್ಣ! ಅಭಿಮನ್ಯುವಿನ ಕವಚವು ಅಭೇದ್ಯವಾಗಿದೆ. ಇವನು ಇನ್ನೂ ಯುವಕನು; ತನ್ನ ಪರಾಕ್ರಮವನ್ನು ಬಹಳ ಬೇಗ ಪ್ರಕಟಿಸುವ ಸಾಮರ್ಥ್ಯವಿರುವವನು. ನಾನು ಇವನ ತಂದೆಗೆ ಕವಚಧಾರಣವಿಧಿಯನ್ನು

ಹೇಳಿಕೊಟ್ಟಿದ್ದೆನು. ನಾನು ಅರ್ಜುನನಿಗೆ ಹೇಳಿಕೊಟ್ಟುದೆಲ್ಲವನ್ನೂ ಶತ್ರುಗಳ ನಗರಗಳನ್ನು ಜಯಿಸುವ ಸಾಮರ್ಥ್ಯವುಳ್ಳ ಈ ಅಭಿಮನ್ಯುವು ತಿಳಿದು ಕೊಂಡಿರುತ್ತಾನೆಂಬುದು ನಿಜ. ಆದರೆ ಏಕಾಗ್ರವಾದ ಬುದ್ಧಿಯುಳ್ಳವರು ಇವನ ಧನುಸ್ಸನ್ನೂ, ಶಿಂಜಿನಿಯನ್ನೂ ಬಾಣಗಳಿಂದ ಕತ್ತರಿಸಲು ಶಕ್ಯವಿದೆ. ಅನಂತರ ಅಭಿಮನ್ಯುವಿನ ಕುದುರೆಗಳ ಕಡಿವಾಣಗಳನ್ನು ಕತ್ತರಿಸಿ, ಕುದುರೆಗಳನ್ನೂ-ಪಾರ್ಶ್ವರಕ್ಷಕರನ್ನೂ ಸಂಹರಿಸಬಹುದು. ಮಹಾಧನುಷ್ಮಂತನೇ! ರಾಧೇಯ! ನಿನಗೇನಾದರೂ ಸಾಧ್ಯವಿರುವುದಾರೆ ಹೀಗೆ ಇವನ ಧನುಸ್ಸನ್ನು ಕತ್ತರಿಸಿ ಇವನನ್ನು ಯುದ್ಧದಿಂದ ಪರಾಙ್ಮುಖನಾಗುವಂತೆ ಮಾಡಿ, ಹಿಂದಿನಿಂದ ಇವನನ್ನು ಪ್ರಹರಿಸು. ಅಭಿಮನ್ಯುವನ್ನು ಸಂಹರಿಸಲು ಇರುವುದು ಇದೊಂದೇ ಉಪಾಯ.

**ಸಧನುಷ್ಕೋ ನ ಶಕ್ಯೋಯಮಪಿ ಜೇತುಂ ಸುರಾಸುರೈಃ ।**
**ವಿರಥಂ ವಿಧನುಷ್ಕಂ ಚ ಕುರುಷ್ವೈನಂ ಯದೀಚ್ಛಸಿ ॥೩೦॥**

ಧನುಸ್ಸನ್ನು ಹಿಡಿದಿರುವಾಗ ಇವನನ್ನು ಜಯಿಸಲು ದೇವತೆಗಳಿಂದಾಗಲೀ ಅಸುರರಿಂದಾಗಲೀ ಸಾಧ್ಯವಾಗುವುದಿಲ್ಲ. (ಇನ್ನು ಮಾನವರ ವಿಷಯವಾಗಿ ಹೇಳತಕ್ಕದ್ದೇನಿದೆ?) ನೀನು ಇವನ ಪರಾಜಯವನ್ನು ಇಚ್ಛಿಸುವೆಯಾದರೆ ಅಭಿಮನ್ಯುವನ್ನು ರಥದಿಂದ ಹೀನನನ್ನಾಗಿಯೂ, ಧನುಸ್ಸಿನಿಂದಲೂ ಹೀನನನ್ನಾಗಿಯೂ ಮಾಡು."

ಮಹಾರಾಜ! ಆಚಾರ್ಯರು ಹೇಳಿದ ಮಾತುಗಳನ್ನು ಕೇಳಿ ವಿಕರ್ತನನ ಮಗನಾದ ಕರ್ಣನು-ಕೈಚಳಕದಿಂದ ಪುಂಖಾನುಪುಂಖವಾಗಿ ಬಾಣಗಳನ್ನು ಬಿಡುತ್ತಿದ್ದ ಅಭಿಮನ್ಯುವಿನ ಧನುಸ್ಸನ್ನು ಶೀಘ್ರವಾಗಿ ಬಾಣಗಳಿಂದ ಕತ್ತರಿಸಿ ಬಿಟ್ಟನು. ಅದೇ ಸಮಯದಲ್ಲಿ ಭೋಜವಂಶೀಯನಾದ ಕೃತವರ್ಮನು ಅಭಿಮನ್ಯುವಿನ ರಥದ ಕುದುರೆಗಳನ್ನು ಸಂಹರಿಸಿದನು. ಗೌತಮರು ಪಾರ್ಶ್ವರಕ್ಷಕರನ್ನು ಸಂಹರಿಸಿದರು. ಉಳಿದ ಮಹಾರಥರು ಧನುಸ್ಸಿನಿಂದಲೂ, ರಥದಿಂದಲೂ ವಿಹೀನನಾಗಿದ್ದ ಅಭಿಮನ್ಯುವನ್ನು ಬಾಣಗಳ ಮಳೆಯಿಂದ ಮುಚ್ಚಿಬಿಟ್ಟರು.

**ತ್ವರಮಾಣಾಸ್ತ್ವರಾಕಾಲೇ ವಿರಥಂ ಷಣ್ಮಹಾರಥಾಃ।**
**ಶರವರ್ಷೈರಕರುಣಾ ಬಾಲಮೇಕಮವಾಕಿರನ್ ॥೩೩॥**

ತ್ವರೆಯಿಂದ ಕಾರ್ಯಮಾಡಬೇಕಾಗಿರುವ ಆ ಸಮಯದಲ್ಲಿ, ಬಹಳವಾಗಿ ಅವಸರಪಡುತ್ತಿದ್ದ ಆರು ಮಂದಿ ಮಹಾರಥರೂ ರಥದಿಂದ ವಿಹೀನನಾಗಿದ್ದ ಏಕಾಕಿಯಾಗಿದ್ದ ಬಾಲಕನನ್ನು ನಿಷ್ಕರುಣೆಯಿಂದ ಕೂಡಿದವರಾಗಿ ಬಾಣಗಳ ಸುರಿಸುವಿಕೆಯಿಂದ ಮುಚ್ಚಿಬಿಟ್ಟರು.

ರಥದಿಂದಲೂ, ಧನುಸ್ಸಿನಿಂದಲೂ ವಿಹೀನನಾಗಿದ್ದ ಶ್ರೀಮಂತನಾದ ಅಭಿಮನ್ಯುವು, ಕ್ಷತ್ರಿಯಧರ್ಮವನ್ನು ಪರಿಪಾಲನೆಮಾಡುತ್ತಾ ಕತ್ತಿಯನ್ನೂ ಮತ್ತು ಗುರಾಣಿಯನ್ನೂ ಹಿಡಿದು ಆಕಾಶದ ಮೂಲಕವಾಗಿ ಹಾರಿದನು. *ಕೌಶಿಕಾದಿ ಮಾರ್ಗಗಳಿಂದಲೂ, ಹಸ್ತಲಾಘವದಿಂದಲೂ ಮತ್ತು ಬಲದಿಂದಲೂ ಅಭಿಮನ್ಯುವು ಪಕ್ಷಿರಾಜನಾದ ಗರುಡನಂತೆಯೇ ಆಕಾಶದಲ್ಲಿ ಸ್ವಲ್ಪಕಾಲ ಸಂಚರಿಸುತ್ತಿದ್ದನು. ಛಿದ್ರವನ್ನೇ (ದೋಷವನ್ನೇ) ಎಣಿಸುತ್ತಿದ್ದ ಆ ಆರು ಮಹಾರಥರು 'ಮಯ್ಯೇವ ನಿಪತತ್ಯೇಷ ಸಾಸಿಃ''ಕತ್ತಿಯನ್ನು ಹಿಡಿ



ದಿರುವ ಅಭಿಮನ್ಯುವು ನನ್ನ ಮೇಲೆಯೇ ಬಿದ್ದು ಬಿಡುತ್ತಾನೆ' ಎಂಬುದಾಗಿ ಎಲ್ಲರೂ ಭಾವಿಸಿಕೊಂಡು ಆಕಾಶದಲ್ಲಿಯೇ ನೆಟ್ಟದೃಷ್ಟಿಯುಳ್ಳವರಾಗಿ ಅವನು

---

*'ಮಾರ್ಗೈಃ ಸಕೌಶಿಕ್ಯಾದ್ಯೈಶ್ಚ' ಎಂಬ ಪಾಠವು ಕೆಲವು ಪುಸ್ತಕಗಳಲ್ಲಿಯೂ 'ಮಾರ್ಗೈಃ ಸಕೈಶಿಕಾದ್ಯೈಃ ಎಂಬ ಪಾಠವು ಭಂ.ರಿ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿಯೂ ಇದೆ. ಆದರೆ ಕೌಶಿಕಾದಿ ಮಾರ್ಗಗಳು ಅಥವಾ ಕೈಶಿಕಾದಿ ಮಾರ್ಗಗಳು ಯಾವುವೆಂಬುದರ ಬಗೆಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ

ಭೂಮಿಗೆ ಬರುವ ಮೊದಲೇ ಮಹಾಧನುಷ್ಮಂತನಾದ ಅಭಿಮನ್ಯುವನ್ನು ಆ ಆರು ಮಹಾರಥರೂ ಒಟ್ಟಾಗಿ ಸೇರಿ ಪ್ರಹರಿಸಿದರು. ಶತ್ರುಜಿತರಾದ ಮಹಾತೇಜಸ್ವಿಗಳಾದ ದ್ರೋಣರು ಅತಿತ್ವರೆಯಿಂದ ಅಭಿಮನ್ಯುವಿನ ಮುಷ್ಟಿಯಲ್ಲಿದ್ದ, ಮಣಿಮಯವಾದ ಹಿಡಿಯಿಂದ ಕೂಡಿದ್ದ ಖಡ್ಗವನ್ನು ಕ್ಷುರ ಪ್ರವೆಂಬ ಬಾಣದಿಂದ ಕತ್ತರಿಸಿಬಿಟ್ಟರು. ಮರುಕ್ಷಣದಲ್ಲಿಯೇ ರಾಧೇಯನು ನಿಶಿತವಾದ ಬಾಣಗಳಿಂದ ಅಭಿಮನ್ಯುವಿನ ಕೈಯಲ್ಲಿದ್ದ ಉತ್ತಮೋತ್ತಮವಾದ ಗುರಾಣಿಯನ್ನೂ ಕತ್ತರಿಸಿಬಿಟ್ಟನು. ಕತ್ತಿ ಯಿಂದಲೂ, ಗುರಾಣಿಯಿಂದಲೂ ವಂಚಿತನಾಗಿ ಶತ್ರುಗಳು ಬಿಟ್ಟ ಬಾಣ ಗಳನ್ನೇ ಶರೀರಾದ್ಯಂತವಾಗಿ ತುಂಬಿಕೊಂಡಿದ್ದ ಅಭಿಮನ್ಯುವು ಅಂತರಿಕ್ಷದಿಂದ ಭೂಮಿಗಿಳಿದನು. ಚಕ್ರವನ್ನೇ ಕೈಗೆತ್ತಿಕೊಂಡು ಪರಮಕ್ರುದ್ಧನಾಗಿ ದ್ರೋಣರ ಕಡೆಗೆ ಧಾವಿಸಿದನು.

> ಸ ಚಕ್ರರೇಣೂಜ್ಜ್ವಲಶೋಭಿತಾಙ್ಗೋ
> ಬಭಾವತೀವೋಜ್ಜ್ವಲ ಚಕ್ರಪಾಣಿಃ।
> ರಣೇಽಭಿಮನ್ಯುಃ ಕ್ಷಣಮಾಸ ರೌದ್ರಃ
> ಸ ವಾಸುದೇವಾನುಕೃತಿಂ ಪ್ರಕುರ್ವನ್ ॥೪೦॥

ಆ ಸಮಯದಲ್ಲಿ ಅಭಿಮನ್ಯುವಿನ ಶರೀರವು ಚಕ್ರದ ಪ್ರಭೆಯಿಂದಲೂ, ಧೂಳಿನಿಂದಲೂ ಆವೃತವಾಗಿ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಚಕ್ರಪಾಣಿಯಾಗಿದ್ದ ಅಭಿಮನ್ಯುವು ಅತ್ಯಂತೋಜ್ಜ್ವಲನಾಗಿ ಪ್ರಕಾಶಿಸು

---

ಅರ್ಥಮಾಡಿರುತ್ತಾರೆ. ನೀಲಕಂಠರು **ಕೌಶಿಕಂ=ಸರ್ವತೋಭದ್ರಂ** ಎಂದು ವ್ಯಾಖ್ಯಾನಿಸಿದ್ದಾರೆ. ಸರ್ವತೋಭದ್ರ ಎಂದರೆ ಚೌಕಾಕಾರದ ಅರಮನೆ ಅಥವಾ ದೇವಾಲಯ; ಒಂದು ಬಗೆಯ ಪೂಜೆ; ಒಂದು ಬಗೆಯ ಚಿತ್ರಕಾವ್ಯ; ಎಲ್ಲೆಡೆಯಲ್ಲಿಯೂ ಇರುವ; ಮಂಗಳಕರವಾದ; ಮುಂತಾದ ಅರ್ಥಗಳಿವೆ. ಆದರೆ ಮಾರ್ಗಗಳಿಗೆ ಅನ್ವಯಿಸಬಹುದಾದಂತಹ ಯಾವ ಅರ್ಥವೂ ಇರುವುದಿಲ್ಲ. **ಕೌಶಿಕಾದ್ಯಾಃ** ಎಂದರೆ 'ಕೌಶಿಕ' ಎಂಬ ಮಾರ್ಗದ ಅಥವಾ ಒಂದು ಕ್ರಮದ ಹೆಸರಾಗಿರಬೇಕು. ಗೋರಖಪುರದ ಗೀತಾಪ್ರೆಸ್ಸಿನವರು **ಕೌಶಿಕ ಆದಿ ಮಾರ್ಗೋಂ (ಪೈತರೋಂ) ದ್ವಾರಾ-ಕೌಶಿಕಾದಿ ಪಿತೃಮಾರ್ಗದ್ವಾರ**-ಎಂದು ಅರ್ಥ ಮಾಡಿರುತ್ತಾರೆ. ಕೌಶಿಕ ಎಂಬ ಪಿತೃಮಾರ್ಗವೂ ಒಂದಿರುವುದೇ ಎಂಬುದು ಸಂದೇಹಾಸ್ಪದ. ಒಂದು ವೇಳೆ ಇದ್ದರೂ ಅಭಿಮನ್ಯುವು ಹಾರಿರುವ ಆಕಾಶಮಾರ್ಗದಲ್ಲಿ ಅದು ಇದ್ದಿತೇ? ಆಂಗ್ಲಭಾಷಾಂತರಕಾರರು : 'describing the tracks called kowsika and others' ಎಂದು ಅರ್ಥಮಾಡಿದ್ದಾರೆ. ಕೌಶಿಕ ಎಂಬಿವೇ ಮುಂತಾದ ಮಾರ್ಗಗಳನ್ನು ವಿವರಿಸುತ್ತಾ'-ಎಂದು ಅರ್ಥಮಾಡಿರುತ್ತಾರೆ.

ತ್ತಿದ್ದನು. ಆ ರಣಾಂಗಣದಲ್ಲಿ ಅಭಿಮನ್ಯುವು ಚಕ್ರವನ್ನು ಧರಿಸುವ ಮೂಲಕ



ಭಗವಂತನಾದ ಶ್ರೀಕೃಷ್ಣನನ್ನು ಅನುಕರಣೆಮಾಡುತ್ತಾ ಕ್ಷಣಕಾಲ ಬಹಳ ಭಯಂಕರನಾಗಿ ಕಾಣುತ್ತಿದ್ದನು.

---

ಹಿಂದೆಯೇ ಹೇಳಿದಂತೆ ಕೌಶಿಕ ಅಥವಾ ಕೈಶಿಕಶಬ್ದಕ್ಕೆ-ಮಾರ್ಗಕ್ಕೆ ಅಥವಾ ಕ್ರಮಕ್ಕೆ ಅನ್ವಯವಾಗುವಂತೆ ಯಾವ ಅರ್ಥವೂ ಇರುವುದಿಲ್ಲ. ಕೌಶಿಕಾದಿ ಮಾರ್ಗಗಳಿಂದ ಎಂದರೆ ಸಂದರ್ಭಾನುಸಾರವಾಗಿ ಹೀಗೆ ಅರ್ಥಮಾಡಬಹುದಾಗಿದೆ : ಅಭಿಮನ್ಯುವು ಆಕಾಶಕ್ಕೆ ಹಾರಿದ್ದಾನೆ. ಒಡನೆಯೇ ಕೆಳಕ್ಕೆ ಬರಲಿಲ್ಲ. ಯಾವುದೋ ಒಂದು ಕ್ರಮವನ್ನು ಅನುಸರಿಸಿ ಅವನು ಆಕಾಶದಲ್ಲಿಯೇ ಸ್ವಲ್ಪಕಾಲ ಇರುತ್ತಾನೆ. ನೆಗೆದ ಆ ಕ್ರಮಗಳೇ ಕೌಶಿಕಾದಿ ಅಥವಾ ಕೈಶಿಕಾದಿ ಕ್ರಮಗಳು. ಈಗಲೂ ಸಹ ಎಷ್ಟೇ ಎತ್ತರದಿಂದ ಹಾರಿದರೂ ಒಂದು ವಿಧವಾದ ಲಾಗಹೊಡೆಯುವ ಕ್ರಮದಿಂದ ಸ್ವಲ್ಪವೂ ಗಾಯವಾಗದ ರೀತಿಯಲ್ಲಿ ಭೂಮಿಯ ಮೇಲೆ ನಿಂತುಕೊಳ್ಳುವವರಿದ್ದಾರೆ. ಅಂತಹ ಒಂದು ಹಾರುವಿಕೆಯ ಕ್ರಮವೇ ಕೌಶಿಕ ಎಂದು ಇರಬಹುದು. ಇಂತಹ ಕೌಶಿಕವೇ ಮೊದಲಾದ ಲಾಗದ ಮಾರ್ಗಗಳಿಂದಲೂ, ಲಘುತ್ವದಿಂದಲೂ ಮತ್ತು ಬಲದಿಂದಲೂ ಗರುಡನಂತೆ ಅಭಿಮನ್ಯುವು ಅಂತರಿಕ್ಷದಲ್ಲಿ ಸ್ವಲ್ಪ ಹೊತ್ತು ಸಂಚರಿಸುತ್ತಿದ್ದನು ಎಂಬ ಅರ್ಥವು ಸಮಂಜಸವಾಗಿ ಕಾಣುತ್ತದೆ.

ಸ್ರುತರುಧಿರಕೃತೈಕರಾಗವಸ್ತ್ರೋ
ಭ್ರುಕುಟಿಪುಟಾಕುಟಿಲೋಽತಿಸಿಂಹನಾದಃ।
ಪ್ರಭುರಮಿತಬಲೋ ರಣೇಽಭಿಮನ್ಯು-
ರ್ನೃಪವರಮಧ್ಯಗತೋ ಭೃಶಂ ವ್ಯರಾಜತ್ ॥೪೧॥

ಅಭಿಮನ್ಯುವಿನ ವಸ್ತ್ರಗಳು ಅವನ ಶರೀರದಿಂದ ಸತತವಾಗಿ ಹೊರಬರುತ್ತಿದ್ದ ರಕ್ತದಿಂದ ತೋಯ್ದು ಕೆಂಪುಬಣ್ಣದಿಂದ ಕೂಡಿದ್ದಿತು. ಬೇರಾವ ಬಣ್ಣಗಳೂ ಆ ವಸ್ತ್ರಗಳಲ್ಲಿ ಕಾಣುತ್ತಿರಲಿಲ್ಲ. ಗಂಟಿಕ್ಕಿಕೊಂಡಿದ್ದ ಅವನ ಹುಬ್ಬುಗಳ ಮಧ್ಯಭಾಗವು ಸ್ಪಷ್ಟವಾಗಿ ಕಾಣುತ್ತಿದ್ದಿತು. (ಹುಬ್ಬುಗಳನ್ನು ಗಂಟಿಕ್ಕಿ ಕೋಪವನ್ನು ಸ್ಪಷ್ಟವಾಗಿ ತೋರಿಸುತ್ತಿದ್ದನು) ಅತಿಯಾದ ಸಿಂಹನಾದವುಳ್ಳವ ನಾಗಿದ್ದನು. (ಗಟ್ಟಿಯಾಗಿ ಸಿಂಹನಾದಮಾಡುತ್ತಿದ್ದನು.) ಇಂತಹ ಸನ್ನಿವೇಶ ದಲ್ಲಿದ್ದ ಅತ್ಯಂತಪ್ರಭಾವಶಾಲಿಯಾದ, ಅತಿಬಲಿಷ್ಠನಾದ ಅಭಿಮನ್ಯುವು ನೃಪಶ್ರೇಷ್ಠರ ಮಧ್ಯದಲ್ಲಿ ವಿಶೇಷವಾಗಿ ವಿರಾಜಿಸಿದನು."

೪೮ನೆಯ ಅಧ್ಯಾಯವು ಮುಗಿಯಿತು.

೪೯ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಭಿಮನ್ಯುವು ಕಾಲಿಕೇಯ, ವಸಾತಿ ಮತ್ತು ಕೈಕಯರಥಿಗಳನ್ನು ಸಂಹರಿಸಿದುದು: ಆರು ಮಂದಿ ಮಹಾರಥರೂ ಒಟ್ಟಾಗಿ ಸೇರಿ ಅಭಿಮನ್ಯುವನ್ನು ಸಂಹರಿಸಿದುದು : ಪಲಾಯನಮಾಡುತ್ತಿದ್ದ ಸೈನ್ಯಕ್ಕೆ ಯುಧಿಷ್ಠಿರನ ಆಶ್ವಾಸನೆ

ಸಂಜಯನು ಅಭಿಮನ್ಯುವಿನ ಪರಾಕ್ರಮವನ್ನು ವರ್ಣಿಸುತ್ತಾ ಧೃತರಾಷ್ಟ್ರನಿಗೆ ಹೇಳುತ್ತಾನೆ:

ವಿಷ್ಣೋಃ ಸ್ವಸುರ್ನನ್ದಕರಃ ಸ ವಿಷ್ಣ್ವಾಯುಧಭೂಷಣಃ ।
ರರಾಜಾತಿರಥಃ ಸಂಖ್ಯೇ ಜನಾರ್ದನ ಇವಾಪರಃ ॥೧॥

"ಮಹಾರಾಜ! ಭಗವಂತನಾದ ವಿಷ್ಣುವಿನ (ಶ್ರೀಕೃಷ್ಣನ) ತಂಗಿಯಾದ ಸುಭದ್ರೆಗೆ ಆನಂದದಾಯಕನಾದ, ವಿಷ್ಣುವಿನ ಆಯುಧವಾದ ಚಕ್ರವನ್ನೇ

ಆಯುಧವನ್ನಾಗಿ ಹೊಂದಿದ್ದ, ಅತಿರಥನಾದ ಅಭಿಮನ್ಯುವು ರಣಾಂಗಣದಲ್ಲಿ ಸಾಕ್ಷಾತ್ ಶ್ರೀಕೃಷ್ಣನಂತೆಯೇ ಪ್ರಕಾಶಿಸಿದನು. ಅಭಿಮನ್ಯುವಿನ ತಲೆಗೂದಲಿನ ತುದಿಗಳು ಗಾಳಿಯಿಂದ ಹಾರಾಡುತ್ತಿದ್ದುವು. ಆಯುಧ ಗಳಲ್ಲಿಯೇ ಶ್ರೇಷ್ಠವಾದ ಚಕ್ರಾಯುಧವನ್ನು ಮೇಲೆತ್ತಿ ಹಿಡಿದಿದ್ದನು. ದೇವತೆ ಗಳಿಂದಲೂ ನೋಡಲು ಅಸಾಧ್ಯವಾದ ಅಭಿಮನ್ಯುವಿನ ಆ ರೌದ್ರಶರೀರವನ್ನು ನೋಡಿ ಉದ್ವಿಗ್ನರಾದ ರಾಜರು ಅವನ ಕೈಯಲ್ಲಿದ್ದ ಚಕ್ರವನ್ನು ಅನೇಕ ವಿಭಾಗಗಳಾಗಿ ಕತ್ತರಿಸಿಬಿಟ್ಟರು. ಅನಂತರ ಮಹಾರಥನಾದ ಅಭಿಮನ್ಯುವು ಗದೆಯನ್ನು ಕೈಗೆ ತೆಗೆದುಕೊಂಡನು. ಶತ್ರುಗಳು ಅಭಿಮನ್ಯುವನ್ನು ಧನುಸ್ಸು, ರಥ, ಕತ್ತಿ, ಗುರಾಣಿ, ಚಕ್ರ–ಇವುಗಳೆಲ್ಲದರಿಂದಲೂ ವಿಹೀನನನ್ನಾಗಿ ಮಾಡಿಬಿಟ್ಟಿದ್ದರು. ಅಂತಹ ಸಮಯದಲ್ಲಿ ಗದಾಪಾಣಿಯಾಗಿಯೇ ಅಶ್ವತ್ಥಾಮನ ಮೇಲೆ ಎರಗಿಬಿದ್ದನು. ಪ್ರಜ್ವಲಿಸುತ್ತಿರುವ ವಜ್ರಾಯುಧ ದೋಪಾದಿಯಲ್ಲಿದ್ದ ಗದೆಯನ್ನು ಪ್ರಹರಿಸುವ ಸಲುವಾಗಿ ಮೇಲೆತ್ತಿದುದನ್ನು ಕಂಡ ನರಶ್ರೇಷ್ಠನಾದ ಅಶ್ವತ್ಥಾಮನು ತಾನು ಕುಳಿತಿದ್ದ ರಥದ ಸ್ಥಳದಿಂದ ಮೂರು ಹೆಜ್ಜೆಗಳಷ್ಟು ಹಿಂದಕ್ಕೆ ಸರಿದನು. ಅಭಿಮನ್ಯುವು ಅಶ್ವತ್ಥಾಮನ ಕುದುರೆಗಳನ್ನೂ, ಇಬ್ಬರು ಪಾರ್ಶ್ವರಕ್ಷಕರನ್ನೂ ಗದೆಯಿಂದ ಸಂಹರಿಸಿದನು. ಶತ್ರುಗಳು ಬಿಟ್ಟ ಬಾಣಗಳು ಅವನ ಶರೀರಾದ್ಯಂತವಾಗಿ ನಾಟಿಕೊಂಡಿದ್ದುವು. ಆ ಸಮಯದಲ್ಲವನು ಮುಳ್ಳುಗಳಿಂದ ಕೂಡಿದ ಮುಳ್ಳುಹಂದಿಯಂತೆಯೇ ಕಾಣುತ್ತಿದ್ದನು. ಅನಂತರ ಸೌಭದ್ರನು ಸುಬಲನ ಮಗನಾದ ಕಾಲಿಕೇಯನನ್ನು ಗದೆಯಿಂದಲೇ ಸಂಹರಿಸಿ, ಅವನ ಅನುಚರರಾದ ಎಪ್ಪತ್ತೇಳು ಮಂದಿ ಗಾಂಧಾರಯೋಧರನ್ನೂ ಸಂಹರಿಸಿದನು. ಪುನಃ ಸೌಭದ್ರನು ಹತ್ತು ಮಂದಿ ವಸಾತೀಯರಥಸೈನಿಕರನ್ನೂ ಸಂಹರಿಸಿದನು. ಕೇಕಯರ ಏಳು ರಥಗಳನ್ನು ಧ್ವಂಸಮಾಡಿದನು. ಹತ್ತು ಆನೆಗಳನ್ನು ಮರ್ದನಮಾಡಿದನು. ದುಃಶಾಸನನ ಮಗನು ಕುಳಿತಿದ್ದ ಮತ್ತು ಕುದುರೆಗಳಿಂದ ಯುಕ್ತವಾಗಿದ್ದ ರಥವನ್ನು ಗದೆಯಿಂದ ನೆಲಸಮಗೊಳಿಸಿದನು. ಅದರಿಂದ ಕ್ರುದ್ಧನಾದ ದೌಃಶಾಸನಿಯು ಗದೆಯನ್ನೆತ್ತಿಕೊಂಡು 'ತಿಷ್ಠ ತಿಷ್ಠ' 'ನಿಲ್ಲು; ನಿಲ್ಲು'–ಎಂದು ಹೇಳುತ್ತಾ ಅಭಿಮನ್ಯುವಿನ ಕಡೆಗೆ ಧಾವಿಸಿದನು. ಒಬ್ಬರು ಮತ್ತೊಬ್ಬರನ್ನು ವಧೆಮಾಡಲು ಇಚ್ಛಿಸಿ ಆ ವೀರರಿಬ್ಬರೂ ಗದೆಗಳನ್ನೆತ್ತಿ ನಿಂತಿದ್ದರು. ಹಿಂದೆ ತ್ರ್ಯಂಬಕ ಮತ್ತು

ಅಂಧಕರು ಪರಸ್ಪರವಾಗಿ ಗದೆಗಳಿಂದ ಕಾಳಗವಾಡಿದಂತೆ ದೌಃಶಾಸನಿ-ಸೌಭದ್ರರು ಗದಾಯುದ್ಧವನ್ನು ಮಾಡತೊಡಗಿದರು. ಗದೆಗಳ ಅಗ್ರಭಾಗ ಗಳಿಂದ ಪರಸ್ಪರವಾಗಿ ಪೆಟ್ಟುತಿಂದು–ಮೇಲಿನಿಂದ ಬಿದ್ದ ಇಂದ್ರಧ್ವಜಗಳಂತೆ–ಇಬ್ಬರೂ ಭೂಮಿಯ ಮೇಲೆ ಬಿದ್ದರು. ಕುರುಗಳ ಕೀರ್ತಿವರ್ಧಕನಾದ ದೌಃಶಾಸನಿಯು ಒಡನೆಯೇ ಮೇಲೆದ್ದು ಮೇಲೇಳುತ್ತಿದ್ದ ಅಭಿಮನ್ಯುವಿನ ತಲೆಗೆ ಗದೆಯಿಂದ ಪ್ರಹರಿಸಿದನು. ಮಹಾವೇಗಯುಕ್ತವಾದ ಗದೆಯ ಪ್ರಹಾರ ದಿಂದಲೂ, ಹೆಚ್ಚಿನ ಶ್ರಮದಿಂದಲೂ ವಿಮೋಹಿತನಾದ, ಶತ್ರುವೀರ ಹಂತಕನಾದ, ಸುಭದ್ರೆಯ ಮಗನಾದ ಅಭಿಮನ್ಯುವು ಅಸುವನ್ನು ತೊರೆದು ಕೆಳಗುರುಳಿದನು.



ಮಹಾರಾಜ! ಈ ರೀತಿಯಲ್ಲಿ ಅನೇಕಮಹಾರಥರು ಒಟ್ಟಾಗಿ ಸೇರಿ ಒಬ್ಬನೇ ಒಬ್ಬ ಮಹಾಯೋಧನನ್ನು ಕೊಂದರು.

ಮದಿಸಿದ ಆನೆಯು ತಾವರೆಯ ಕೊಳವನ್ನು ಧ್ವಂಸಮಾಡುವಂತೆ-ಎಲ್ಲ ಕೌರವಸೈನಿಕರನ್ನೂ ಅಲ್ಲೋಲ-ಕಲ್ಲೋಲಗೊಳಿಸಿದ ಅಭಿಮನ್ಯುವು–ಅನೇಕ ವ್ಯಾಧರು ಸೇರಿ ಕಾಡಾನೆಯೊಂದನ್ನು ಕೊಲ್ಲುವ ರೀತಿಯಲ್ಲಿ-ಕೌರವರಿಂದ ಕೊಲ್ಲಲ್ಪಟ್ಟು ಆ ರಣಾಂಗಣದಲ್ಲಿ ಬಹುವಾಗಿ ಶೋಭಿಸಿದನು.

ಈ ರೀತಿಯಲ್ಲಿ ದೌಃಶಾಸನಿಯ ಗದಾಪ್ರಹಾರದಿಂದ ಅಸುನೀಗಿ ಕೆಳಕ್ಕೆ

ಬಿದ್ದ ಅಭಿಮನ್ಯುವನ್ನು ನಿನ್ನ ಕಡೆಯ ಯೋಧರು ಸುತ್ತುವರಿದು ನಿಂತರು. ಶಿಶಿರರ್ತುವಿನನಂತರ ಬರುವ ವಸಂತ-ಗ್ರೀಷ್ಮಗಳಲ್ಲಿ ದಾವಾಗ್ನಿಯು ಅರಣ್ಯವೆಲ್ಲವನ್ನೂ ಭಸ್ಮಮಾಡಿ ಶಾಂತವಾಗುವಂತೆಯೂ-ಚಂಡಮಾರುತವು ತನ್ನ ಮಾರ್ಗದಲ್ಲಿ ಸಿಕ್ಕುವ ವೃಕ್ಷಗಳನ್ನು ಬುಡಮೇಲುಮಾಡಿ, ಪರ್ವತದ ಶಿಖರಗಳನ್ನೇ ಕೆಳಗುರುಳಿಸಿ ಶಾಂತವಾಗುವಂತೆಯೂ-ಸೂರ್ಯನು ತನ್ನ ತೀಕ್ಷ್ಣವಾದ ಕಿರಣಗಳಿಂದ ಮಧ್ಯಾಹ್ನದ ವೇಳೆಯಲ್ಲಿ ಪ್ರಪಂಚವನ್ನು ಪರಿತಾಪಗೊಳಿಸಿ ಸಾಯಂಕಾಲವಾಗುತ್ತಲೇ ಶಾಂತನಾಗಿ ಅಸ್ತನಾಗು ವಂತೆಯೂ–ರಾಹುಗ್ರಸ್ತನಾದ ಚಂದ್ರನಂತೆಯೂ–ಶುಷ್ಕವಾಗಿಹೋದ ಸಮುದ್ರದಂತೆಯೂ ಇದ್ದ, ಪೂರ್ಣಚಂದ್ರನಿಗೆ ಸಮಾನವಾದ ಮುಖಕಾಂತಿಯಿಂದ ಬೆಳಗುತ್ತಿದ್ದ, ತಲೆಯ ಪಕ್ಕದ ಕೂದಲುಗಳಿಂದ ಮುಚ್ಚಿದ ಕಣ್ಣುಗಳುಳ್ಳವನಾಗಿದ್ದ ಅಭಿಮನ್ಯುವು ಭೂಮಿಯ ಮೇಲೆ ಬಿದ್ದಿರುವುದನ್ನು ಕಂಡು ನಿನ್ನ ಕಡೆಯ ಮಹಾರಥರೆಲ್ಲರೂ ಸಂತೋಷ ಭರಿತರಾಗಿ ಬಾರಿ-ಬಾರಿಗೂ ಸಿಂಹಗಳಂತೆಯೇ ಗರ್ಜನೆಮಾಡುತ್ತಿದ್ದರು.

ಮಹಾರಾಜ! ನಿನ್ನ ಮಕ್ಕಳಿಗೆ ಅಭಿಮನ್ಯುವಿನ ವಧೆಯಿಂದ ಅಮಿತವಾದ ಆನಂದವುಂಟಾಯಿತು. ಆದರೆ ಇತರ ವೀರಯೋಧರ ಕಣ್ಣುಗಳಿಂದ ಧಾರಾಕಾರವಾಗಿ ಕಂಬನಿಯು ಹರಿಯತೊಡಗಿತು. ಆಕಾಶದಿಂದ ಚಂದ್ರನು ಕಳಚಿ ಕೆಳಕ್ಕೆ ಬಿದ್ದಂತೆಯೇ–ಭೂಮಿಯ ಮೇಲೆ ಬಿದ್ದಿದ್ದ ವೀರನಾದ ಅಭಿಮನ್ಯುವನ್ನು ನೋಡಿ ಅಂತರಿಕ್ಷದಲ್ಲಿದ್ದ ಸಮಸ್ತ ಪ್ರಾಣಿಗಳೂ ಸಂಕಟದಿಂದ ಕಿರುಚಿಕೊಂಡುವು.

**ದ್ರೋಣಕರ್ಣಮುಖೈಃ ಷಡ್ಭಿರ್ಧಾರ್ತರಾಷ್ಟ್ರೈರ್ಮಹಾರಥೈಃ।**
**ಏಕೋಽಯಂ ನಿಹತಃ ಶೇತೇ ನೈಷ ಧರ್ಮೋ ಮತೋ ಹಿ ನಃ॥**

"ದ್ರೋಣ-ಕರ್ಣರೇ ಮೊದಲಾದ ಕೌರವರ ಕಡೆಯ ಆರು ಮಹಾರಥರಿಂದ ಈ ಒಬ್ಬ ವೀರನು ಕೊಲ್ಲಲ್ಪಟ್ಟು ಭೂಮಿಯ ಮೇಲೆ ಮಲಗಿದ್ದಾನೆ. ಆರು ಮಂದಿ ಮಹಾರಥರು ಸೇರಿ ಒಬ್ಬನನ್ನು ಕೊಂದುದು ಧರ್ಮವಲ್ಲವೆಂಬುದು ನಮ್ಮ ಅಭಿಮತವಾಗಿದೆ"–ಎಂದೂ ಆಕಾಶ ದಲ್ಲಿದ್ದವರು ಹೇಳುತ್ತಿದ್ದರು.

ವೀರನಾದ ಅಭಿಮನ್ಯುವು ಹತನಾಗಲಾಗಿ ಆ ರಣಾಂಗಣವು ಪೂರ್ಣ ಚಂದ್ರನಿಂದ ಕೂಡಿದ ನಕ್ಷತ್ರಮಾಲಿನಿಯಾದ ಆಕಾಶದಂತೆಯೇ ಬಹಳವಾಗಿ ಶೋಭಿಸಿತು. ರಣಾಂಗಣವು ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ ತುಂಬಿಹೋಗಿದ್ದಿತು. ರಕ್ತದ ಕೋಡಿಯೇ ಹರಿದು ರಣಾಂಗಣವು ರಕ್ತ ದಲ್ಲಿಯೇ ಮುಳುಗಿಹೋಗಿದ್ದಿತು. ಶೂರರ ದೇದೀಪ್ಯಮಾನವಾದ ಕುಂಡಲ ಗಳಿಂದ ಕೂಡಿದ ಶಿರಸ್ಸುಗಳಿಂದ ರಣಾಂಗಣವು ವ್ಯಾಪ್ತವಾಗಿದ್ದಿತು. ಆನೆಗಳ ಮೇಲೆ ಹೊದ್ದಿಸುವ ಚಿತ್ರ-ವಿಚಿತ್ರವಾದ ರತ್ನಗಂಬಳಿಗಳಿಂದಲೂ, ಪತಾಕೆ ಗಳಿಂದಲೂ ರಣಾಂಗಣವು ತುಂಬಿಹೋಗಿದ್ದಿತು. ಚಾಮರಗಳಿಂದಲೂ, ಬಣ್ಣದ ಕಂಬಳಿಗಳಿಂದಲೂ, ಅಸ್ತವ್ಯಸ್ತವಾಗಿ ಹರಡಿದ್ದ ಶ್ರೇಷ್ಠವಾದ ವಸ್ತ್ರ ಗಳಿಂದಲೂ ರಣಾಂಗಣವು ಸಮಲಂಕೃತವಾಗಿದ್ದಿತು. ಒಳ್ಳೆಯ ಪ್ರಭೆಯಿಂದ ಕೂಡಿದ್ದ ಗಜಾಶ್ವ-ಪದಾತಿಗಳ ಥಳ-ಥಳಿಸುವ ಅಲಂಕಾರವಸ್ತುಗಳು ರಣಾಂಗಣದ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಪೊರೆಬಿಟ್ಟ ಹಾವುಗಳಂತೆ ಹೊಂಬಣ್ಣದ್ದಾಗಿಯೂ ಮತ್ತು ಹರಿತವಾಗಿಯೂ ಇದ್ದ ಕತ್ತಿಗಳು ರಣರಂಗದ ಸುತ್ತಲೂ ಬಿದ್ದಿದ್ದುವು. ವಿಧ-ವಿಧವಾದ ಧನುಸ್ಸುಗಳು ತುಂಡು-ತುಂಡುಗಳಾಗಿ ಬಿದ್ದಿದ್ದುವು. ಶಕ್ತ್ಯಾಯುಧ, ಋಷ್ಟಿ, ಪ್ರಾಸ, ಕಂಪನ-ಇವೇ ಮುಂತಾದ ಆಯುಧಗಳು ಛಿನ್ನ-ಭಿನ್ನವಾಗಿ ರಣರಂಗದ ಸುತ್ತಲೂ ಬಿದ್ದಿದ್ದುವು. ಅವುಗಳ ಮಧ್ಯದಲ್ಲಿ ಬಿದ್ದಿದ್ದ ಅಭಿಮನ್ಯುವು–ನಕ್ಷತ್ರಮಾಲೆ ಯಿಂದ ಸಮಲಂಕೃತನಾದ ಚಂದ್ರನಂತೆಯೇ–ಕಂಗೊಳಿಸುತ್ತಿದ್ದನು. ಸುಭದ್ರೆಯ ಮಗನಾದ ಅಭಿಮನ್ಯುವು ಅಸಂಖ್ಯಾತವಾದ ಅಶ್ವಸೈನ್ಯವನ್ನು ಸಂಹರಿಸಿದನು. ಆ ಕುದುರೆಗಳಲ್ಲಿ ಕೆಲವು ನಿರ್ಜೀವವಾಗಿದ್ದುವು. ಮತ್ತೆ ಕೆಲವು ರಕ್ತದಿಂದ ತೋಯ್ದುಹೋಗಿ ಸ್ವಲ್ಪ-ಸ್ವಲ್ಪ ಉಸಿರಾಡುತ್ತಿದ್ದುವು. ಕುದುರೆಸವಾರರೂ ಸಹ ಕುದುರೆಗಳ ಜೊತೆಯಲ್ಲಿಯೇ ತಂಡ-ತಂಡವಾಗಿ ಬಿದ್ದಿದ್ದರು. ಅದರಿಂದ ರಣಾಂಗಣವು ಹಳ್ಳ-ತಿಟ್ಟುಗಳಿಂದ ಕೂಡಿದುದಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವುದೇ ದುಃಸಾಧ್ಯವಾಗಿದ್ದಿತು. ಅಂಕುಶ ಗಳಿಂದಲೂ, ಮಾವುತರಿಂದಲೂ, ಕವಚಗಳಿಂದಲೂ, ಆಯುಧಗಳಿಂದಲೂ, ಧ್ವಜಗಳಿಂದಲೂ ಕೂಡಿದ್ದ ಆನೆಗಳು ಅಭಿಮನ್ಯುವಿನ ಬಾಣಗಳಿಂದ ಹತವಾಗಿ ಇಂದ್ರನ ವಜ್ರಾಯುಧದಿಂದ ವಿಧ್ವಸ್ತವಾದ ಪರ್ವತಗಳಂತೆಯೇ–ರಣ

ರಂಗದ ಸುತ್ತಲೂ ಬಿದ್ದಿದ್ದುವು. ಅಶ್ವ-ಸಾರಥಿ- ಯೋಧರಿಂದ ವಿಹೀನವಾದ ರಥಗಳು ನುಚ್ಚುನೂರಾಗಿ ಅಲ್ಲೋಲ-ಕಲ್ಲೋಲವಾದ, ಸತ್ತುಬಿದ್ದಿರುವ ಸರ್ಪಗಳಿಂದ ಕೂಡಿದ ಮಡುವುಗಳಂತೆ–ಶೋಭಿಸುತ್ತಾ ರಣಾಂಗಣದ ಸುತ್ತಲೂ ಬಿದ್ದಿದ್ದುವು. ಅಭಿಮನ್ಯುವಿನಿಂದ ಹತವಾದ ಹಲವು ಆನೆಗಳು ಪರ್ವತೋಪಮವಾಗಿ ಬಿದ್ದಿದ್ದುವು. ನಾನಾವಿಧವಾದ ಆಯುಧಗಳನ್ನೂ ಮತ್ತು ಆಭರಣಗಳನ್ನೂ ಧರಿಸಿದ್ದ ಪದಾತಿಸಮೂಹಗಳು ಅಭಿಮನ್ಯುವಿನಿಂದ ಹತವಾಗಿ ಆ ರಣಾಂಗಣದಲ್ಲಿ ಗುಂಪು-ಗುಂಪಾಗಿ ಬಿದ್ದಿದ್ದುವು. ರಾಶಿ-ರಾಶಿಯಾಗಿ ಸತ್ತುಬಿದ್ದಿದ್ದ ಗಜಾಶ್ವ-ಪದಾತಿಗಳಿಂದಲೂ ಮತ್ತು ಛಿನ್ನ-ಭಿನ್ನ ವಾಗಿ ಸರ್ವತ್ರವ್ಯಾಪ್ತವಾಗಿದ್ದ ರಥಗಳಿಂದಲೂ ಕೂಡಿದ್ದ ಆ ರಣಭೂಮಿಯು ಬಹುಘೋರವೂ, ಭೀರುಗಳಾದವರಿಗೆ ಭಯವನ್ನುಂಟುಮಾಡತಕ್ಕುದೂ ಆಗಿದ್ದಿತು.

ಮಹಾರಾಜ! ನಾನು ಹಿಂದೆಯೇ ಹೇಳಿದಂತೆ ಸೂರ್ಯ-ಚಂದ್ರರ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ ಆರ್ಜುನಿಯು ರಣಾಂಗಣದಲ್ಲಿ ಪ್ರಾಣತೊರೆದು ಬಿದ್ದಿರುವುದನ್ನು ಕಂಡು ನಿನ್ನ ಕಡೆಯವರಿಗೆ ಅತಿಸಂತೋಷವೂ, ಪಾಂಡವರಿಗೆ ಅತಿದುಃಖವೂ ಆಯಿತು.

ಅಪ್ರಾಪ್ತಯೌವನನಾದ, ಬಾಲಕನಾದ ಅಭಿಮನ್ಯುವು ಹತನಾಗಲಾಗಿ ಪಾಂಡವರ ಸೈನ್ಯವು ಯುಧಿಷ್ಠಿರನು ನೋಡುತ್ತಿದ್ದಂತೆಯೇ ಪಲಾಯನ ಮಾಡತೊಡಗಿತು. ಮಹಾವೀರನಾದ ಅಭಿಮನ್ಯುವು ಕೆಳಕ್ಕೆ ಬೀಳಲಾಗಿ ಭಗ್ನವಾಗಿ ಹೋಗುತ್ತಿದ್ದ ತನ್ನ ಸೈನ್ಯವನ್ನು ನೋಡಿ ಯುಧಿಷ್ಠಿರನು ಪಲಾಯನಪರಾಯಣರಾಗಿದ್ದ ವೀರರನ್ನು ಉದ್ದೇಶಿಸಿ ಹೇಳಿದನು:

**ಸ್ವರ್ಗಮೇಷ ಗತಃ ಶೂರೋ ಯೋ ಹತೋ ನ ಪರಾಙ್ಮುಖಃ ।**
**ಸಂಸ್ತಮ್ಭಯತ ಮಾ ಭೈಷ್ಟ ವಿಜೇಷ್ಯಾಮೋ ರಣೇ ರಿಪೂನ್॥**

"ಯಾವನು ಯುದ್ಧದಲ್ಲಿ ಹತನಾದನೋ, ಯುದ್ಧದಿಂದ ಪರಾಙ್ಮುಖನಾಗಲಿಲ್ಲವೋ-ಅಂತಹ ಶೂರನಾದ ಅಭಿಮನ್ಯುವು ಸ್ವರ್ಗಕ್ಕೆ ಹೋಗಿದ್ದಾನೆ. ನೀವೆಲ್ಲರೂ ಧೈರ್ಯತಾಳಿ ನಿಲ್ಲಿರಿ; ಹೆದರಿ ಓಡಿಹೋಗ ಬೇಡಿರಿ. ಯುದ್ಧದಲ್ಲಿ ಶತ್ರುಗಳನ್ನು ಜಯಿಸೋಣ."

ಮಹಾರಾಜ! ಈ ರೀತಿಯಲ್ಲಿ ಮಹಾತೇಜಸ್ವಿಯಾದ, ಮಹಾದ್ಯುತಿ ಯಾದ, ಯೋಧಶ್ರೇಷ್ಠನಾದ ಧರ್ಮರಾಜನು ದುಃಖಿತರಾಗಿದ್ದ, ಸೈನಿಕರನ್ನು ಸಂತೈಸುತ್ತಾ ಅವರ ದುಃಖವನ್ನು ಹೋಗಲಾಡಿಸಿದನು.

ಮಹಾರಾಜ! ವಿಷವನ್ನು ಧರಿಸಿರುವ ಸರ್ಪಗಳಿಗೆ ಸಮಾನರಾಗಿದ್ದ ಶತ್ರುಪಕ್ಷದ ರಾಜಪುತ್ರರನ್ನು ಯುದ್ಧದಲ್ಲಿ ಸಂಹರಿಸಿದ ಅನಂತರವೇ ಆರ್ಜುನಿಯು ಸ್ವರ್ಗಕ್ಕೆ ತೆರಳಿದನು. ಕೃಷ್ಣಾರ್ಜುನರಿಗೆ ಸಮಾನಬಲನಾದ ಕಾರ್ಷ್ಣಿಯು ಹತ್ತುಸಾವಿರ ರಥಿಕರನ್ನೂ, ಮಹಾರಥನಾದ ಕೋಸಲ ನರೇಶನಾದ ಬೃಹದ್ಬಲನನ್ನೂ ಸಂಹರಿಸಿ ನಿಶ್ಚಯವಾಗಿಯೂ ಇಂದ್ರಲೋಕಕ್ಕೇ ಹೋಗಿದ್ದಾನೆ.

ಸಾವಿರಾರು ಸಂಖ್ಯೆಯಲ್ಲಿ ಗಜಾಶ್ವ-ಪದಾತಿ-ರಥಿಕರನ್ನು ಸಂಹಾರ ಮಾಡಿದ್ದರೂ ಆ ವೀರನು ಯುದ್ಧದಿಂದ ತೃಪ್ತಿಯನ್ನು ಹೊಂದಿರಲಿಲ್ಲ. ಪುಣ್ಯಕರ್ಮಮಾಡಿದ ಅವನು ನಿಶ್ಚಯವಾಗಿಯೂ ಅಶೋಚ್ಯನೇ ಸರಿ. ಅವನ ವಿಷಯವಾಗಿ ಶೋಕಿಸುವುದು ಯುಕ್ತವಲ್ಲ. ಏಕೆಂದರೆ, ಅವನು ಪುಣ್ಯಕರ್ಮ ಗಳಿಂದಲೇ ಜಯಿಸಲ್ಪಟ್ಟ, ಶಾಶ್ವತವಾದ, ಪುಣ್ಯಕರ್ಮಮಾಡಿದವರಿಗೆ ಮಾತ್ರವೇ ಲಭಿಸುವ ಲೋಕಗಳಿಗೆ ಹೋಗಿದ್ದಾನೆ."

೪೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಹದಿಮೂರನೆಯ ದಿವಸದ ಯುದ್ಧದ ಪರಿಸಮಾಪ್ತಿ: ಸೈನಿಕರು ತಮ್ಮ-ತಮ್ಮ ಶಿಬಿರಗಳಿಗೆ ಹೋದುದು: ರಣಭೂಮಿಯ ವರ್ಣನೆ

ಅಭಿಮನ್ಯುವಿನ ವಧೆಯಾದನಂತರ ಮುಂದೇನಾಯಿತೆಂಬುದನ್ನು ಸಂಜಯನು ಹೇಳುತ್ತಾನೆ:

"ಮಹಾರಾಜ! ನಾವಾದರೋ ಶತ್ರುಪಕ್ಷದಲ್ಲಿ ಪ್ರಮುಖಯೋಧ ನಾಗಿದ್ದ ಅಭಿಮನ್ಯುವನ್ನು ಸಂಹರಿಸಿ, ಶತ್ರುಪಕ್ಷದ ಯೋಧರ ಮತ್ತು ಅಭಿಮನ್ಯುವಿನ ಬಾಣಗಳಿಂದ ಪೀಡಿತರಾಗಿ, ರಕ್ತದಲ್ಲಿ ತೋಯ್ದು, ಸಾಯಂಕಾಲವಾಗುತ್ತಲೇ ನಮ್ಮ-ನಮ್ಮ ಬಿಡಾರಗಳಿಗೆ ಬಂದುಬಿಟ್ಟೆವು.

ನಾವೂ ಮತ್ತು ಶತ್ರುಪಕ್ಷದವರೂ ರಣರಂಗವನ್ನು ಹಿಂದಿರುಗಿನೋಡುತ್ತಾ ಮೆಲ್ಲ-ಮೆಲ್ಲಗೆ ಶಿಬಿರಗಳಿಗೆ ಪ್ರಯಾಣಮಾಡಿದೆವು. ಪಾಂಡವರಾದರೋ ಶೋಕಗ್ರಸ್ತರಾಗಿ ಬುದ್ಧಿಗೆಟ್ಟವರಾಗಿ ತಮ್ಮ ಶಿಬಿರಗಳಿಗೆ ಹೋದರು.

ರಾತ್ರಿಯ ಮತ್ತು ಹಗಲಿನ ಅಂದಿನ ಅದ್ಭುತವಾದ ಸಂಧಿಕಾಲವು ಗುಳ್ಳೇನರಿಗಳು ಮಾಡುತ್ತಿದ್ದ ಭಯಂಕರಧ್ವನಿಯಿಂದ ಕೂಡಿದ್ದು ಅಮಂಗಳಸೂಚಕವಾಗಿದ್ದಿತು. ಕಮಲದ ಮಾಲೆಯ ಕಾಂತಿಯನ್ನು ಹೊಂದಿದ್ದ ಸೂರ್ಯನು ಅಸ್ತಾಚಲವನ್ನು ಸೇರಿ ಮುಳುಗುತ್ತಿರಲಾಗಿ, ಶ್ರೇಷ್ಠವಾದ ಕತ್ತಿಗಳು, ಶಕ್ತ್ಯಾಯುಧ, ಋಷ್ಟಿ, ರಥ, ಗುರಾಣಿ ಮತ್ತು ಅನೇಕ ದಿವ್ಯಾಭರಣಗಳು-ಇವೇ ಮುಂತಾದ ಪ್ರಭಾಯುಕ್ತವಾದ ವಸ್ತುಗಳ ಪ್ರಭೆಗಳನ್ನು ಸೆಳೆದುಕೊಳ್ಳುತ್ತಾ, * ಅಂತರಿಕ್ಷವನ್ನೂ ಮತ್ತು ಭೂಮಿಯನ್ನೂ ಸಮಾನವಾಗಿ ಮಾಡುತ್ತಿರುವನೋ-ಎಂಬಂತೆ ಸೂರ್ಯನು ತನಗೆ ಅತ್ಯಂತ ಪ್ರಿಯನಾದ ಅಗ್ನಿಯಲ್ಲಿ ಸೇರಿಕೊಂಡನು.

ಮಹಾಮೇಘಸಮೂಹಸದೃಶವಾದ ಮತ್ತು ಪರ್ವತದ ಶಿಖರಸದೃಶ ವಾದ ದೊಡ್ಡ-ದೊಡ್ಡ ಆನೆಗಳು ವಜ್ರಾಯುಧದಿಂದ ಹತವಾದುವುಗಳೋ ಎಂಬಂತೆ–ಆ ರಣಾಂಗಣದ ಸುತ್ತಲೂ ಬಿದ್ದಿದ್ದುವು. ಆನೆಗಳು ಧ್ವಜಾಂಕುಶ, ಕವಚ, ಮಾವುತರ ಸಹಿತವಾಗಿ ಸತ್ತುಬಿದ್ದಿದ್ದು ರಣಾಂಗಣದ ಹಾದಿಗಳೇ ಮುಚ್ಚಿಹೋಗಿದ್ದುವು. ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಾಡಲು ಸಾಧ್ಯವೇ ಇರಲಿಲ್ಲ. ಮಹಾರಥಗಳಲ್ಲಿದ್ದ ರಥಿಕರು ಹತರಾಗಿದ್ದರು. ಪಾರ್ಶ್ವರಕ್ಷಕರು ಹತರಾಗಿದ್ದರು. ಯುದ್ಧಸಾಮಗ್ರಿಗಳು ಚೆಲ್ಲಾಪಿಲ್ಲಿಯಾಗಿ ರಥಗಳ ಸುತ್ತಲೂ ಬಿದ್ದಿದ್ದುವು. ಕುದುರೆಗಳೂ ಮತ್ತು ಸೂತರೂ ಸತ್ತು ಬಿದ್ದಿದ್ದರು. ಪತಾಕೆಗಳೂ ಮತ್ತು ಧ್ವಜಗಳೂ ಆ ರಥಗಳ ಸಮೀಪದಲ್ಲಿ

*ಪ್ರಭಾಯುಕ್ತವಾದ ವಸ್ತುಗಳೆಲ್ಲವೂ ಸೂರ್ಯನಿದ್ದಾಗ ಪ್ರಕಾಶಿಸುತ್ತವೆ. ಸೂರ್ಯನಿಲ್ಲದಾಗ ಪ್ರಕಾಶಿಸುವುದಿಲ್ಲ. ಆದುದರಿಂದ ಸೂರ್ಯನೇ ಅವುಗಳ ಪ್ರಭೆಯನ್ನು ಹೀರಿಕೊಂಡನೆಂದು ಹೇಳಿದ್ದಾರೆ. ಅಂತರಿಕ್ಷವನ್ನೂ, ಭೂಮಿಯನ್ನೂ ಒಂದೇ ಮಾಡಿಬಿಟ್ಟನೆಂದರೆ ಕತ್ತಲಿನಲ್ಲಿ ಆಕಾಶವು ಯಾವುದು? ಭೂಮಿಯು ಯಾವುದು? ಯಾವ ವಸ್ತುವು ಎಲ್ಲಿದೆ?–ಎಂಬುದೊಂದೂ ಕಾಣುವುದಿಲ್ಲ. ಸೂರ್ಯನಿದ್ದಾಗ ಮಾತ್ರ ನಮಗೆ ಪದಾರ್ಥಗಳ ಸ್ವರೂಪವು ತಿಳಿಯುತ್ತದೆ. ಸೂರ್ಯನಿಲ್ಲದಾಗ ಎಲ್ಲವೂ ಅಂಧಕಾರಮಯವಾಗಿರುತ್ತದೆ. ಸೂರ್ಯನು ರಾತ್ರಿಯ ವೇಳೆಯಲ್ಲಿ ವಿಶ್ವಕ್ಕೆ ಪ್ರಕಾಶವನ್ನು ಕೊಡುವ ಅಗ್ನಿಯಲ್ಲಿ ಸೇರಿಕೊಳ್ಳುತ್ತಾನೆಂಬುದು ಶ್ರುತಿಪ್ರಸಿದ್ಧವಾಗಿದೆ.

ಅಸ್ತವ್ಯಸ್ತವಾಗಿ ಬಿದ್ದಿದ್ದುವು. ಈ ರೀತಿಯಲ್ಲಿ ಛಿನ್ನ-ಭಿನ್ನವಾದ ಮಹಾರಥಗಳಿಂದ ಆ ಯುದ್ಧಭೂಮಿಯು ಶತ್ರುಗಳ ದಾಳಿಗೊಳಗಾದ ಪಟ್ಟಣಗಳಿಂದ ಕೂಡಿರುವಂತೆಯೇ ಶೋಭಿಸುತ್ತಿದ್ದಿತು. ಮುರಿದ ರಥಗಳೂ ಮತ್ತು ಸತ್ತುಹೋದ ಕುದುರೆಗಳೂ ಆ ರಣಭೂಮಿಯಲ್ಲಿ ಗುಂಪು-ಗುಂಪಾಗಿ ಬಿದ್ದಿದ್ದುವು. ಅವುಗಳ ಜೊತೆಯಲ್ಲಿಯೇ ಶತ್ರುಗಳ ಬಾಣಗಳಿಂದ ಹತರಾದ ಸವಾರರೂ ಬಿದ್ದಿದ್ದರು. ನಾನಾವಿಧವಾದ ಕುದುರೆಗಳ ಸಜ್ಜುಗಳೂ (ಜೀನು ಮುಂತಾದುವು) ಮತ್ತು ಆಭರಣಗಳೂ ಛಿನ್ನ-ಭಿನ್ನವಾಗಿ ರಥಾಶ್ವಗಳ ಸುತ್ತಲೂ ಬಿದ್ದಿದ್ದುವು. ಸತ್ತುಬಿದ್ದಿದ್ದ ಮನುಷ್ಯರ ಮತ್ತು ಪ್ರಾಣಿಗಳ ನಾಲಿಗೆಗಳು, ಹಲ್ಲುಗಳು, ನರಗಳು, ಕರುಳುಗಳು ಮತ್ತು ಕಣ್ಣುಗಳು ಹೊರಚಾಚಿಕೊಂಡಿದ್ದುವು. ಇಂತಹ ದೃಶ್ಯಗಳಿಂದಾಗಿ ಭೂಮಿಯು ಘೋರವೂ ಕರಾಳವೂ ಆಗಿ ಪರಿಣಮಿಸಿತು. ಗಜಾಶ್ವ-ರಥಸೈನ್ಯಗಳನ್ನು ಅನುಸರಿಸಿ ಹೋಗುತ್ತಿದ್ದ ಪದಾತಿಸೈನಿಕರ ಕವಚ, ಆಭರಣ, ವಸ್ತ್ರ ಮತ್ತು ಆಯುಧಗಳು ರಣಾಂಗಣದ ಸುತ್ತಲೂ ಎಸೆಯಲ್ಪಟ್ಟು ಅವರೂ ಸಹ ರಣಾಂಗಣದಲ್ಲಿ ರಾಶಿ-ರಾಶಿಯಾಗಿ ಸತ್ತುಬಿದ್ದಿದ್ದರು. ಬಹುಮೂಲ್ಯವಾದ ರತ್ನಗಂಬಳಿಗಳಿಂದ ಹೊದ್ದಿಸಲ್ಪಟ್ಟ ಹಾಸಿಗೆಗಳಲ್ಲಿ ಮಲಗಲು ಯೋಗ್ಯರಾಗಿದ್ದ ರಾಜರೂ ಮತ್ತು ರಾಜಪುತ್ರರೂ ಯುದ್ಧದಲ್ಲಿ ಪ್ರಾಣಗಳನ್ನು ತೊರೆದು ಅನಾಥರಂತೆ (ಭಿಕಾರಿಗಳಂತೆ) ಯಾವ ವಿಧವಾದ ಆಸ್ತರಣವೂ ಇಲ್ಲದ ಭೂಮಿಯ ಮೇಲೆ ಬಿದ್ದಿದ್ದರು. ನಾಯಿಗಳು, ನರಿಗಳು, ಕಾಗೆಗಳು, ಬಕಪಕ್ಷಿಗಳು, ಗರುಡಪಕ್ಷಿಗಳು, ತೋಳಗಳು, ಕಿರುಬಗಳು, ರಕ್ತವನ್ನೇ ಹೀರುವ ಪಕ್ಷಿಗಳು, ರಾಕ್ಷಸರ ಸಮೂಹಗಳು, ಪಿಶಾಚಿಗಳ ಗುಂಪುಗಳು-ಬಹುಭಯಂಕರವಾಗಿದ್ದ ಆ ರಣಾಂಗಣದಲ್ಲಿ ಅತ್ಯಾನಂದದಿಂದ ತಮಗೆ ಬೇಕಾದುದನ್ನು ಭಕ್ಷಿಸುತ್ತಿದ್ದುವು. ಆ ಮೃಗ-ಪಕ್ಷಿಗಳು ಹೆಣಗಳ ಚರ್ಮವನ್ನು ಕಿತ್ತುಹಾಕಿ ರಕ್ತವನ್ನು ಹೀರುತ್ತಿದ್ದುವು. ಮಜ್ಜೆಯನ್ನೂ, ಮಾಂಸವನ್ನೂ ತಿನ್ನುತ್ತಿದ್ದುವು. ಪ್ರಾಣಿಗಳ ವಸೆಯನ್ನೂ ಹೊರತೆಗೆದು ತಿನ್ನುತ್ತಿದ್ದುವು. ಹೆಣಗಳನ್ನು ಅನೇಕ ಬಾರಿ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಕಚ್ಚಿಕೊಂಡು ಎಳೆದಾಡುತ್ತಿದ್ದ ಮೃಗ-ಪಕ್ಷಿಗಳು ನಗುತ್ತಲೂ ಗಾಯನಮಾಡುತ್ತಲೂ ಇದ್ದುವು. ವೈತರಣೀನದಿಯಂತೆ ಭಯವನ್ನುಂಟುಮಾಡುವುದಾಗಿದ್ದ, ದಾಟಲು

ಅಸಾಧ್ಯವಾಗಿದ್ದ, ರಕ್ತನದಿಯೊಂದನ್ನು ಎರಡು ಪಕ್ಷಗಳ ಯೋಧರೂ ಸೇರಿ ಆ ರಣಭೂಮಿಯಲ್ಲಿ ಪ್ರವಹಿಸುವಂತೆ ಮಾಡಿದರು. ರಕ್ತವೇ ನೀರಾಗಿ ಉಳ್ಳ ಆ ಮಹಾನದಿಯು ಪ್ರಾಣಿಗಳ ಶರೀರಸಮೂಹವನ್ನೇ ಕೊಚ್ಚಿಕೊಂಡು ಹೋಗುತ್ತಿದ್ದಿತು. ಅಲ್ಲಲ್ಲಿ ರಾಶಿಯಾಗಿ ಬಿದ್ದಿದ್ದ ರಥಗಳೇ ಆ ರಕ್ತನದಿಯ ನಾವೆಗಳಂತಿದ್ದುವು. ಪರ್ವತೋಪಮವಾಗಿ ಬಿದ್ದಿದ್ದ ಆನೆಗಳೇ ರಕ್ತನದಿಯ ಪರಿಸರದಲ್ಲಿರುವ ಪರ್ವತದ ಬಂಡೆಗಳಂತಿದ್ದುವು. ಮನುಷ್ಯರ ತಲೆಗಳು ನದಿಯ ಸಣ್ಣ-ಸಣ್ಣ ಬಂಡೆಗಳಾಗಿದ್ದುವು. ಸತ್ತಪ್ರಾಣಿಗಳ ಮತ್ತು ಮನುಷ್ಯರ ಮಾಂಸವೇ ಆ ರಕ್ತನದಿಯ ಕೆಸರಾಗಿದ್ದಿತು. ಸುತ್ತಲೂ ಎಸೆಯಲ್ಪಟ್ಟಿದ್ದ ನಾನಾವಿಧವಾದ ಶಸ್ತ್ರಗಳೇ ಆ ನದಿಯ ತೆರೆಗಳಂತಿದ್ದುವು. ಜೀವಿಸಿರು ವವರನ್ನೂ ಮತ್ತು ಸತ್ತವರನ್ನೂ ಒಯ್ಯುತ್ತಿದ್ದ ಬಹಳವಾಗಿ ಭಯವನ್ನುಂಟು ಮಾಡುತ್ತಿದ್ದ ಆ ನದಿಯು ರಣರಂಗದ ಮಧ್ಯಭಾಗದಲ್ಲಿ ಹರಿಯುತ್ತಿದ್ದಿತು.

ಯಾವುದನ್ನು ನೋಡಲು ಕೂಡ ಕಷ್ಟಸಾಧ್ಯವೆಂದು ಭಾವಿಸಲಾಗಿ ದ್ದಿತೋ ಅಂತಹ ಭಯಂಕರವಾದ ಪಿಶಾಚಗಣಗಳೇ ಆ ರಣಾಂಗಣದಲ್ಲಿ ಗುಂಪುಗುಂಪಾಗಿ ಸೇರಿ ಪ್ರಾಣಿಗಳ ರಕ್ತವನ್ನು ಹೀರುತ್ತಿದ್ದುವು ಮತ್ತು ಮಾಂಸವನ್ನೂ, ಕೊಬ್ಬನ್ನೂ ಕಿತ್ತುತಿನ್ನುತ್ತಿದ್ದುವು; ಘೋರವಾಗಿ ಗರ್ಜನೆ ಮಾಡುತ್ತಿದ್ದುವು. ಪ್ರಾಣಿಮಾತ್ರದವರಿಗೆ ಭಯವನ್ನುಂಟುಮಾಡುತ್ತಿದ್ದ ನಾಯಿ, ನರಿ ಮತ್ತು ಪಕ್ಷಿಗಳು ಸರ್ವಸಮಾನವಾದ ಆಹಾರವನ್ನು ಯಥೇಷ್ಟ ವಾಗಿ ಭಕ್ಷಿಸಿ ಅತ್ಯಂತ ಸಂತೋಷಪಟ್ಟುವು. ಪಿತೃಪತಿಯಾದ ಯಮರಾಜನ ರಾಜ್ಯದ ಜನಸಂಖ್ಯೆಯನ್ನು ವರ್ಧಿಸುವುದಾಗಿದ್ದ ಆ ರಣಭೂಮಿಯು ಪ್ರದೋಷಕಾಲದಲ್ಲಿ (ಸಂಧ್ಯಾಕಾಲದಲ್ಲಿ) ಬಹಳ ಭಯಂಕರವಾಗಿ ಕಾಣುತ್ತಿದ್ದಿತು. ಮೇಲಕ್ಕೆದ್ದು ಕುಣಿಯುತ್ತಿದ್ದ ಮುಂಡಗಳಿಂದ ಆ ರಣಾಂಗಣವು ವ್ಯಾಪ್ತವಾಗಿದ್ದಿತು. ಇಂತಹ ಘೋರರೂಪವಾದ ರಣರಂಗವನ್ನು ದುರುಗುಟ್ಟಿಕೊಂಡು ನೋಡುತ್ತಾ ಎರಡೂ ಪಕ್ಷಗಳ ಯೋಧರು ತಮ್ಮ ತಮ್ಮ ಶಿಬಿರಗಳಿಗೆ ಮೆಲ್ಲ-ಮೆಲ್ಲನೆ ಪ್ರಯಾಣಮಾಡಿದರು.

ಶತ್ರುಗಳಿಂದ ಹತನಾಗಿ ಕೆಳಗೆ ಬಿದ್ದಿದ್ದ ಅಭಿಮನ್ಯುವಿನ ಬಹುಮೂಲ್ಯವಾದ ಆಭರಣಗಳೆಲ್ಲವೂ ಛಿನ್ನ-ಭಿನ್ನವಾಗಿ ಅವನ ಸುತ್ತಲೂ ಚೆಲ್ಲಾಡಿದ್ದುವು. ಹವಿಸ್ಸಿನಿಂದ ರಹಿತನಾದ ಯಜ್ಞವೇದಿಯಲ್ಲಿನ ಯಜ್ಞೇಶ್ವರ

ನಂತೆ ನಿಸ್ತೇಜನಾಗಿ ರಣಾಂಗಣದಲ್ಲಿ ಬಿದ್ದಿದ್ದ ಅಭಿಮನ್ಯುವನ್ನು ಎಲ್ಲರೂ ನೋಡುತ್ತಾ ತಮ್ಮ-ತಮ್ಮ ಶಿಬಿರಗಳಿಗೆ ತೆರಳಿದರು."

೫೦ನೆಯ ಅಧ್ಯಾಯವು ಮುಗಿಯಿತು.

## ಹದಿಮೂರನೆಯ ದಿವಸದ ಯುದ್ಧದ ವಿಶ್ಲೇಷಣೆ

ಹದಿಮೂರನೆಯ ದಿವಸದ ಯುದ್ಧವು ನಿಜವಾಗಿಯೂ ರೋಮಾಂಚಕಾರಿಯಾದುದು. ಆ ದಿವಸ ಪ್ರಾತಃಕಾಲ ದುರ್ಯೋಧನನು ದ್ರೋಣರನ್ನು ಬಹಳವಾಗಿ ಆಕ್ಷೇಪಿಸುತ್ತಾ–'ನಾವು ನಿಮ್ಮ ವಧ್ಯಪಕ್ಷದಲ್ಲಿ (ಶತ್ರುಪಕ್ಷದಲ್ಲಿ) ಇದ್ದೇವೆ. ಹಾಗೆಯೇ ನೀವೂ ನಡೆದುಕೊಳ್ಳುತ್ತಿದ್ದೀರಿ. ವರವನ್ನು ಕೊಟ್ಟು ಅದರಂತೆ ನಡೆಸಿಕೊಡಲಿಲ್ಲ. ಆರ್ಯರಾದವರು ಆಶಾಭಂಗಮಾಡುವುದಿಲ್ಲ'–ಮುಂತಾಗಿ ಹೇಳಿಕೊಂಡು ಸಂಕಟಪಡುತ್ತಾನೆ. ದ್ರೋಣರು ತಮ್ಮ ದೌರ್ಬಲ್ಯವನ್ನು ಹೇಳಿಕೊಳ್ಳುತ್ತಾರೆ. ಕೃಷ್ಣಾರ್ಜುನರು ಅವರ ಕಡೆಯಲ್ಲಿ ಇರುವಾಗ ಏನೂ ಮಾಡಲೂ ಸಾಧ್ಯವಿಲ್ಲವೆನ್ನುತ್ತಾರೆ. ಆದರೂ ದುರ್ಯೋಧನನನ್ನು ತೃಪ್ತಿಗೊಳಿಸಲು ಪಾಂಡವರ ಕಡೆಯ ಮಹಾಶೂರ ನೊಬ್ಬನನ್ನು ಅಂದು ಸಂಹರಿಸುವುದಾಗಿ ಪುನಃ ಪ್ರತಿಜ್ಞೆಮಾಡುತ್ತಾರೆ. ಆದರೆ ಅರ್ಜುನನು ಮಾತ್ರ ರಣರಂಗದಲ್ಲಿ ಇರಕೂಡದೆಂಬ ನಿಬಂಧನೆಯನ್ನು ಪುನಃ ಒಡ್ಡುತ್ತಾರೆ. ಅರ್ಜುನನಿಗೆ ಯುದ್ಧದ ಆಹ್ವಾನಕೊಡಲು ಸಂಶಪ್ತಕರು ಸಿದ್ಧರಾಗಿಯೇ ಇರುತ್ತಾರೆ. ಸಂಶಪ್ತಕರೆಂಬುವವರು 'death squad' ಇದ್ದ ಹಾಗೆ. ಅವರೊಡನೆ ಯುದ್ಧಮಾಡಲು ಅರ್ಜುನನು ಹೊರಟುಹೋಗುತ್ತಾನೆ. ಅನಂತರ ಇದೇ ೩೦ನೆಯ ಅಧ್ಯಾಯದಲ್ಲಿಯೇ ಸಂಜಯನು ಅಭಿಮನ್ಯುವಿನ ವಧೆಯ ಇತಿಹಾಸವನ್ನು ಸಂಕ್ಷೇಪವಾಗಿ ಹೇಳುತ್ತಾನೆ. ಧೃತರಾಷ್ಟ್ರನಿಗೂ ಸಂಕಟವಾಗುತ್ತದೆ. ದಿವಸವಿಡೀ ಏಕಾಕಿಯಾಗಿ ಶತ್ರುಗಳನ್ನೆದುರಿಸಿ ಧೈರ್ಯದಿಂದ ಕಾದಾಡಿದ ಮಹಾವೀರನ ಇತಿಹಾಸವಿದು. ಧೃತರಾಷ್ಟ್ರನು ಕಥೆಯನ್ನು ವಿವರಿಸಿ ಹೇಳುವಂತೆ ಸಂಜಯನಿಗೆ ಹೇಳುತ್ತಾನೆ.

೩೪ನೆಯ ಅಧ್ಯಾಯದಿಂದ ೧೩ನೆಯ ದಿವಸದ ಯುದ್ಧವು ಪ್ರಾರಂಭವಾಗುತ್ತದೆ. ಸಂಜಯನು ಪೀಠಿಕಾರೂಪವಾಗಿ ಅಭಿಮನ್ಯುವಿನ

ಗುಣಗಾನಮಾಡುತ್ತಾ ಶ್ರೀಕೃಷ್ಣ ಮತ್ತು ಐವರು ಪಾಂಡವರಲ್ಲಿ ಯಾವ-ಯಾವ ಉಜ್ಜ್ವಲಗುಣಗಳಿದ್ದುವೋ ಅವುಗಳೆಲ್ಲವೂ ಮೂರ್ತಿಮತ್ತಾಗಿ ಅಭಿಮನ್ಯುವಿನಲ್ಲೊಬ್ಬನಲ್ಲಿಯೇ ಇದ್ದಿತೆಂದು ಹೇಳುತ್ತಾನೆ. ಅವನ ಸುಚರಿತೆಯನ್ನು ಓದಿದನಂತರ ಸಂಜಯನು ಹೇಳಿದುದು ನಿಜವೆಂದೇ ಎನಿಸುತ್ತದೆ. ಅಂದು ದ್ರೋಣರು ಚಕ್ರವ್ಯೂಹವನ್ನು ರಚಿಸುತ್ತಾರೆ. ಚಕ್ರವ್ಯೂಹದಲ್ಲಿ ಯಾರು ಯಾರು ಯಾವ ಯಾವ ಸ್ಥಳದಲ್ಲಿ ಇದ್ದರೆಂಬುದನ್ನು ಸಂಜಯನು ವಿವರಿಸಿ ಹೇಳುತ್ತಾನೆ. ೩೫ನೆಯ ಅಧ್ಯಾಯದಲ್ಲಿ ಪಾಂಡವಯೋಧರೆಲ್ಲರೂ ಚಕ್ರವ್ಯೂಹಭೇದನಕ್ಕೆ ಪ್ರಯತ್ನಿಸುತ್ತಾರೆ. ಪಾಂಡವರು ಯಾವ ಪ್ರತಿವ್ಯೂಹವನ್ನು ರಚಿಸಿದ್ದರೆಂಬ ಬಗೆಗೆ ಇಲ್ಲಿ ಉಲ್ಲೇಖವಿಲ್ಲ. ಪಾಂಡವರ ಕಡೆಯ ಮಹಾವೀರರಿಗೆ ವ್ಯೂಹದ ಸಮೀಪಕ್ಕೇ ಹೋಗಲು ಸಾಧ್ಯವಾಗುವುದಿಲ್ಲ. ಚಕ್ರವ್ಯೂಹದ ಭೇದನರಹಸ್ಯವನ್ನು ತಿಳಿದಿರತಕ್ಕವರು ಕೃಷ್ಣಾರ್ಜುನರು, ಪ್ರದ್ಯುಮ್ನ ಮತ್ತು ಅಭಿಮನ್ಯು–ಈ ನಾಲ್ಕು ಮಂದಿ ಮಾತ್ರ. ಕೃಷ್ಣಾರ್ಜುನರಿಬ್ಬರೂ ಸಂಶಪ್ತಕರೊಡನೆ ಯುದ್ಧಕ್ಕೆ ಹೊರಟುಹೋಗಿರುತ್ತಾರೆ. ಪ್ರದ್ಯುಮ್ನನು ಯುದ್ಧದಲ್ಲಿ ಭಾಗವಹಿಸಿರುವುದಿಲ್ಲ. ಉಳಿದೊಬ್ಬ ಅಭಿಮನ್ಯುವೇ ಚಕ್ರವ್ಯೂಹವನ್ನು ಭೇದಿಸಬೇಕಾಗಿದೆ. ಇದನ್ನೇ ಉಲ್ಲೇಖಿಸಿ ಯುಧಿಷ್ಠಿರನು ಅಭಿಮನ್ಯುವಿಗೆ ವ್ಯೂಹವನ್ನು ಭೇದಿಸುವಂತೆ ಹೇಳುತ್ತಾನೆ. ಅಭಿಮನ್ಯುವೂ ಶೀಘ್ರವಾಗಿ ಭೇದಿಸುವೆನೆಂದು ದೊಡ್ಡಪ್ಪನಿಗೆ ಆಶ್ವಾಸನೆಯನ್ನು ಕೊಟ್ಟು ತನಗಿರುವ ಒಂದು ನ್ಯೂನತೆಯನ್ನೂ ಬಹಿರಂಗಪಡಿಸುತ್ತಾನೆ. 'ನಾನು ಒಳಕ್ಕೆ ನುಗ್ಗಬಲ್ಲೆನು. ಇಷ್ಟು ಮಾತ್ರ ಅರ್ಜುನನು ನನಗೆ ಹೇಳಿಕೊಟ್ಟಿದ್ದಾನೆ. ಪ್ರಾಣಾಪಾಯಸಮಯದಲ್ಲಿ ಹೊರಕ್ಕೆ ಹೇಗೆ ಬರಬೇಕೆಂಬುದು ನನಗೆ ತಿಳಿಯದು'-ಎನ್ನುತ್ತಾನೆ. ಆದರೆ ಯುಧಿಷ್ಠಿರನಿಗೆ ಇದು ಮಹತ್ತ್ವದ ವಿಷಯವೆನ್ನಿಸುವುದಿಲ್ಲ. 'ನೀನು ಚಕ್ರವ್ಯೂಹವನ್ನು ಭೇದಿಸಿ ದಾರಿಮಾಡಿಕೊಟ್ಟೊಡನೆಯೇ ನಾವೆಲ್ಲರೂ ನಿನ್ನ ರಕ್ಷಣೆಗಾಗಿ ನಿನ್ನ ಜೊತೆಯಲ್ಲಿಯೇ ಬರುತ್ತೇವೆ'–ಎನ್ನುತ್ತಾನೆ. ಭೀಮಸೇನನೂ ಹಾಗೆಯೇ ಆಶ್ವಾಸನೆ ನೀಡುತ್ತಾನೆ. ಯುಧಿಷ್ಠಿರನು ಅಭಿಮನ್ಯುವನ್ನು ಹರಸಿ ಚಕ್ರವ್ಯೂಹವನ್ನು ಭೇದಿಸಲು ಕಳುಹಿಸಿಕೊಡುತ್ತಾನೆ. ಅಭಿಮನ್ಯುವಿಗೆ ಚಕ್ರವ್ಯೂಹವನ್ನು ಭೇದಿಸಲು ಮಾತ್ರವೇ ಗೊತ್ತಾದುದು ಹೇಗೆ?–ಎಂಬ ವಿಷಯದಲ್ಲಿ ಅನೇಕಾನೇಕ

ಕಥೆಗಳಿವೆ. ಅರ್ಜುನನಾದರೋ ಅಭಿಮನ್ಯುವಿಗೆ ವ್ಯೂಹವನ್ನು ಭೇದಿಸಲು ಮಾತ್ರವೇ ಹೇಳಿಕೊಟ್ಟನೇಕೆ? ಎಂಬುದು ಇಲ್ಲಿಯ ಸಮಸ್ಯೆಯೂ ಆಗಿದೆ. ಸುಭದ್ರೆಯು ಗರ್ಭಿಣಿಯಾಗಿದ್ದಾಗ ಶ್ರೀಕೃಷ್ಣನು ಅವಳ ಜೊತೆಯಲ್ಲಿ ರಥದಲ್ಲಿ ಕುಳಿತು ಹೋಗುತ್ತಿದ್ದಾಗ ಕಥೆಯನ್ನು ಹೇಳುತ್ತಿದ್ದನೆಂದೂ ಚಕ್ರವ್ಯೂಹವನ್ನು ಭೇದಿಸುವ ವಿಷಯವನ್ನು ಹೇಳುವ ಸಮಯದಲ್ಲಿ ಸುಭದ್ರೆಗೆ ನಿದ್ರೆಬಂದು ಹೊಟ್ಟೆಯಲ್ಲಿದ್ದ ಮಗುವೇ ಹೂಗುಟ್ಟುತ್ತಿತ್ತೆಂದೂ, ಅದನ್ನು ತಿಳಿದ ಶ್ರೀಕೃಷ್ಣನು ಕಥೆಯನ್ನು ಅಲ್ಲಿಗೇ ನಿಲ್ಲಿಸಿದನೆಂದೂ, ಆ ಕಾರಣದಿಂದ ಅಭಿಮನ್ಯುವಿಗೆ ಚಕ್ರವ್ಯೂಹದೊಳಗೆ ಪ್ರವೇಶಿಸುವ ರಹಸ್ಯವು ಮಾತ್ರವೇ ತಿಳಿಯುವಂತಾಯಿ ತೆಂದೂ ಒಂದು ಕಥೆಯಿದೆ. ಈ ಕಥೆಗೆ ಆಧಾರವು ಯಾವುದು–ಎಂಬ ಬಗೆಗೆ ಇನ್ನೂ ತಿಳಿದುಬಂದಿಲ್ಲ. ವ್ಯೂಹವನ್ನು ಭೇದಿಸಲು ಮಾತ್ರವೇ ತಿಳಿದಿದ್ದ ಬಗೆಗೆ ಯಾವುದೋ ಒಂದು ಮುಖ್ಯಕಾರಣವಂತೂ ಇರಲೇಬೇಕು. ಚಕ್ರವ್ಯೂಹ ವನ್ನು ಭೇದಿಸಲು ಹೋಗುವ ಮೊದಲು ಸಾರಥಿಯಾದ ಸುಮಿತ್ರನು ಅಭಿಮನ್ಯುವಿಗೆ ಎಚ್ಚರಿಕೆ ನೀಡುತ್ತಾನೆ. ಕೆಚ್ಚೆದೆಯ ವೀರನು ಅವನ ಮಾತನ್ನು ಅಲಕ್ಷಿಸುತ್ತಾನೆ. ಮುಂದೆ ಅಭಿಮನ್ಯುವು ಚಕ್ರವ್ಯೂಹದ ಒಳನುಗ್ಗಿ ದುರ್ಯೋ ಧನನ ಚತುರಂಗಬಲವನ್ನೂ ಹೇಗೆ ವಿಧ್ವಂಸಮಾಡಿದನೆಂಬುದು ಕಣ್ಣಿಗೆ ಕಟ್ಟುವಂತೆ ವರ್ಣಿತವಾಗಿದೆ. ಅವನ ಎದುರಾಗಿ ನಿಲ್ಲಲು ಸಾಧ್ಯವಾಗದೇ ಕೌರವಸೈನಿಕರು ಪಲಾಯನಮಾಡಿದರು–ಎಂಬಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ. ೩೬-೩೭ನೆಯ ಅಧ್ಯಾಯಗಳೂ ಅಭಿಮನ್ಯುವಿನ ಪರಾಕ್ರಮವರ್ಣನೆಯಿಂದಲೇ ತುಂಬಿಹೋಗಿವೆ. ಅಶ್ಮಕನ ಮಗನನ್ನು ಸಂಹರಿಸುತ್ತಾನೆ. ಶಲ್ಯನನ್ನು ಮೂರ್ಛೆಗೊಳಿಸುತ್ತಾನೆ. ಒಂದು ಸಮಯದಲ್ಲಿ ಕರ್ಣಪ್ರಮುಖರಾದ ಇಪ್ಪತ್ತು ಮಂದಿ ರಥಿಕರು ಒಟ್ಟಾಗಿ ಸೇರಿ ಅಭಿಮನ್ಯುವೊಬ್ಬನ ಮೇಲೆ ದಾಳಿನಡೆಸುತ್ತಾರೆ. ಅಭಿಮನ್ಯುವು ಅವರೆಲ್ಲರನ್ನೂ ಎದುರಿಸುತ್ತಾ ಕರ್ಣನನ್ನು ಬಾಣಪ್ರಹಾರದಿಂದ ತತ್ತರಿಸುವಂತೆ ಮಾಡುತ್ತಾನೆ. ಶಲ್ಯನೂ ಮೂರ್ಛಿತನಾದ ಮೇಲೆ ಕೌರವರು ಪಲಾಯನಮಾಡುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೩೮ನೆಯ ಅಧ್ಯಾಯವೂ ಅಭಿಮನ್ಯುವಿನ ಪರಾಕ್ರಮವರ್ಣನೆಗೇ

ಮೀಸಲಾಗಿದೆ. ಅಭಿಮನ್ಯುವು ಶಲ್ಯನ ತಮ್ಮನನ್ನು ಸಂಹರಿಸುತ್ತಾನೆ. ಅನಂತರ ದ್ರೋಣರಿಂದಲೇ ಸಂರಕ್ಷಿತವಾಗಿದ್ದ ರಥಸೇನೆಯನ್ನೂ ಧೂಳೀಪಟಲಮಾಡಿ ಓಡಿಸಿಬಿಡುತ್ತಾನೆ. **ಅವಾಕಿರದ್ರಥಾನೀಕಂ ಭಾರದ್ವಾಜಸ್ಯ ಪಶ್ಯತಃ। ತತಸ್ತತ್ಸೈನ್ಯಮಭವದ್ವಿಮುಖಂ ಶರಪೀಡಿತಮ್॥** ರಥಸೈನಿಕರು ಪಲಾಯನಮಾಡಿದರು–ಎಂಬ ಶ್ಲೋಕದೊಡನೆ ಈ ಅಧ್ಯಾಯವು ಮುಗಿಯುತ್ತದೆ.

೪೯ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು ಅಭಿಮನ್ಯುವಿನ ಪರಾಕ್ರಮ ವನ್ನು ಕೇಳಿ ಹೆಮ್ಮೆಪಡುತ್ತಾನೆ. ಅಂತೆಯೇ ತನ್ನ ಕಡೆಯ ಎಲ್ಲ ಯೋಧರೂ ಅವನೊಬ್ಬನಿಗೇ ಸಮರಲ್ಲವೆಂಬುದನ್ನು ಚಿಂತಿಸಿ ನಾಚಿಕೆಪಟ್ಟುಕೊಳ್ಳುತ್ತಾನೆ. ಈ ಅಧ್ಯಾಯದಲ್ಲಿಯೂ ಅಭಿಮನ್ಯುವಿನ ಪರಾಕ್ರಮದ ವರ್ಣನೆಯು ಮುಂದುವರಿಯುತ್ತದೆ. ದ್ರೋಣರೇ ಅವನ ಪರಾಕ್ರಮವನ್ನು ಮನಸಾರೆ ಹೊಗಳುತ್ತಾರೆ. "ಇವನು ಈ ವೇಳೆಗಾಗಲೇ ನಮ್ಮೆಲ್ಲರನ್ನೂ ಧ್ವಂಸಮಾಡ ಬಹುದಾಗಿದ್ದಿತು. ಏಕೆ ತಡಮಾಡುತ್ತಿದ್ದಾನೆಂಬುದು ನನಗೆ ತಿಳಿಯದಾಗಿದೆ"– ಎಂಬ ಅವರ ಮಾತು ಅವನ ಪರಾಕ್ರಮದ ಪರಿಮಿತಿಯನ್ನು ಅಳೆಯುವುದಾಗಿದೆ. ಆಚಾರ್ಯರ ಈ ಮಾತನ್ನು ಕೇಳಿ ದುರ್ಯೋಧನನು ಸೈರಿಸುವುದಿಲ್ಲ. ದ್ರೋಣರು ಶಿಷ್ಯಪಕ್ಷಪಾತಿಗಳೆಂದು ಪುನಃ ಅವರನ್ನು ಸರ್ವರ ಸಮ್ಮುಖದಲ್ಲಿಯೇ ತೆಗಳುತ್ತಾನೆ. ದ್ರೋಣರೇ ಅಭಿಮನ್ಯುವಿಗೆ ರಕ್ಷಕ ರಾಗಿದ್ದಾರೆಂದೂ ಆಪಾದಿಸುತ್ತಾನೆ. ಕರ್ಣ-ದುಃಶಾಸನರಿಗೆ ಅಭಿಮನ್ಯುವಿ ನೊಡನೆ ಯುದ್ಧಮಾಡಲು ಹೇಳುತ್ತಾನೆ. ಆ ಸಮಯದಲ್ಲಿ ದುಃಶಾಸನನು ಅಭಿಮನ್ಯುವನ್ನು ಕೊಲ್ಲುವುದರ ಮೂಲಕ ಶತ್ರುಗಳ ಮೂಲೋತ್ಪಾಟನೆ ಮಾಡುವುದಾಗಿ ಅಣ್ಣನಿಗೆ ಆಶ್ವಾಸನೆ ಕೊಡುತ್ತಾನೆ. ದುಃಶಾಸನನಿಗೂ– ಅಭಿಮನ್ಯುವಿಗೂ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ. ಇಲ್ಲಿಗೆ ಅಧ್ಯಾಯವು ಮುಗಿದು ಮುಂದಿನ ೫೦ನೆಯ ಅಧ್ಯಾಯದಲ್ಲಿ ಅಭಿಮನ್ಯುವು ದುಃಶಾಸನ-ಕರ್ಣರನ್ನು ಪರಾಜಯಗೊಳಿಸುವ ಕಥಾಭಾಗವಿದೆ. ಅಭಿಮನ್ಯುವು ದುಃಶಾಸನನನ್ನು ಪರಾಜಯಗೊಳಿಸಿದುದನ್ನು ಪಾಂಡವ ಯೋಧರು ನೋಡುತ್ತಾರೆ. ಆದರೆ ಅವನ ಸಮೀಪಕ್ಕೆ ಹೋಗಲು ಅವರಿಗೆ ಸಾಧ್ಯವಾಗುವುದಿಲ್ಲ. ವ್ಯೂಹದೊಳಗೆ ನುಗ್ಗಲು ಪ್ರಯತ್ನಿಸುತ್ತಲೇ ಇರುತ್ತಾರೆ.

ದುಃಶಾಸನನು ಪರಾಜಿತನಾದನಂತರ, ದುರ್ಯೋಧನನು ಅಭಿಮನ್ಯುವಿನೊಡನೆ ಯುದ್ಧಮಾಡಲು ಕರ್ಣನನ್ನು ಪ್ರೇರಿಸುತ್ತಾನೆ. ದುಃಶಾಸನನಿಗಾದ ಅವಸ್ಥೆಯೇ ಕರ್ಣನಿಗೂ ಆಗುತ್ತದೆ. ಅಭಿಮನ್ಯುವನ್ನು ಎಲ್ಲರೂ ಪ್ರಶಂಸೆಮಾಡುತ್ತಾರೆ. ಮುಂದಿನ ಅಧ್ಯಾಯದಲ್ಲಿಯೂ ಅಭಿಮನ್ಯುವಿನ ಪರಾಕ್ರಮ, ಕೌರವರ ಪಲಾಯನ-ಇವೇ ಮುಖ್ಯವಿವರಣೆಗಳಾಗಿವೆ. ೪೧ನೆಯ ಅಧ್ಯಾಯದಲ್ಲಿ ಕರ್ಣನ ಎದುರಿನಲ್ಲಿಯೇ ಅಭಿಮನ್ಯುವು ಕರ್ಣನ ತಮ್ಮನನ್ನು ಸಂಹಾರಮಾಡುತ್ತಾನೆ. ಕರ್ಣನೂ ಸಹ ಸೌಭದ್ರನ ಬಾಣಗಳಿಂದ ಬಹಳವಾಗಿ ಗಾಯಗೊಂಡು ರಣಭೂಮಿಯಿಂದಲೇ ಪಲಾಯನ ಮಾಡುತ್ತಾನೆ. 'ಅಪಾಯಾಜ್ಜವನೈರಶ್ವೈಃ'

೪೨ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು– 'ಯುಧಿಷ್ಠಿರನ ಯೋಧರಲ್ಲಿ ಅಭಿಮನ್ಯುವಿನ ಹಿಂದೆ ಯಾರೊಬ್ಬರಾದರೂ ಏಕೆ ಹೋಗಲಿಲ್ಲ'?–ಎಂದು ಪ್ರಶ್ನಿಸುತ್ತಾನೆ. ಆ ಪ್ರಶ್ನೆಗೆ ಉತ್ತರವಾಗಿ ಸಂಜಯನು ಜಯದ್ರಥನ ಸಂಕ್ಷಿಪ್ತವಾದ ಚರಿತ್ರೆಯನ್ನೂ, ರುದ್ರನ ಅನುಗ್ರಹದಿಂದಾಗಿ ಜಯದ್ರಥನು ಚಕ್ರವ್ಯೂಹದ ಒಳಗೆ ಯಾರೊಬ್ಬರೂ ಪ್ರವೇಶಿಸದಂತೆ ತಡೆದುಬಿಟ್ಟುದನ್ನೂ ಹೇಳುತ್ತಾನೆ. ಜಯದ್ರಥನು ಪಾಂಡವರನ್ನು ಹೇಗೆ ತಡೆದನೆಂಬ ವರ್ಣನೆಯು ೪೩ನೆಯ ಅಧ್ಯಾಯದಲ್ಲಿ ಬರುತ್ತದೆ. ೪೪ ಮತ್ತು ೪೫ನೆಯ ಅಧ್ಯಾಯಗಳಲ್ಲಿಯೂ ಪುನಃ ಅಭಿಮನ್ಯುವಿನ ಪರಾಕ್ರಮದ ವರ್ಣನೆಯೇ ಇದ್ದು ಅವನಿಂದ ಹತರಾದ ಅನೇಕ ವೀರರ ಉಲ್ಲೇಖವಿದೆ. ಕಟ್ಟಕಡೆಗೆ ದುರ್ಯೋಧನನೂ ಸಹ ಅಭಿಮನ್ಯುವಿನ ಬಾಣಗಳಿಂದ ಗಾಯಗೊಂಡು ಭಯದಿಂದ ಪಲಾಯನಮಾಡುತ್ತಾನೆ. 'ವಿಮುಖಃ ಪುತ್ರಃ ಶರಶತಾಹತಃ' 'ನೂರಾರು ಬಾಣಗಳಿಂದ ಪ್ರಹೃತನಾದ ನಿನ್ನ ಮಗನು ಯುದ್ಧದಿಂದ ವಿಮುಖನಾದನು'-ಎಂದು ಹೇಳಿ ಸಂಜಯನು ೪೫ನೆಯ ಅಧ್ಯಾಯವನ್ನು ಮುಗಿಸುತ್ತಾನೆ.

ಒಬ್ಬನೇ ಒಬ್ಬ ಅಭಿಮನ್ಯುವು ಏಕಾಕಿಯಾಗಿ ಅಷ್ಟು ಮಂದಿ ಯೋಧರನ್ನೂ ಎದುರಿಸುತ್ತಿದ್ದುದು ಮಾತ್ರವಲ್ಲದೇ, ಸಾವಿರಾರು ಮಂದಿ ಯೋಧರನ್ನೂ ಸಂಹರಿಸಿ ಅತಿರಥ-ಮಹಾರಥರನ್ನೂ ಮಣ್ಣುಮುಕ್ಕಿಸಿದನು. ಇದನ್ನು ನಂಬುವುದು ಹೇಗೆ? ಈ ಪ್ರಶ್ನೆಯು ಧೃತರಾಷ್ಟ್ರನ ಮನಸ್ಸಿನಲ್ಲಿಯೂ

ಉದ್ಭವಿಸದೇ ಇರಲಿಲ್ಲ. 'ಅಶ್ರದ್ಧೇಯಮಿವ' 'ನಂಬುವುದಕ್ಕೆ ಸಾಧ್ಯವೇ ಇಲ್ಲವೋ ಎಂಬಂತಿದೆ'-ಎನ್ನುತ್ತಾನೆ ಧೃತರಾಷ್ಟ್ರ. ಆದರೆ ಸಂಜಯನ ಮಾತಿನಲ್ಲಿ ಸಂಶಯಪಡುವಂತೆಯೇ ಇಲ್ಲ. ಆದುದರಿಂದ **'ನಾತ್ಯದ್ಭುತಂ ತೇಷಾಂ ಯೇಷಾಂ ಧರ್ಮೋ ವ್ಯಪಾಶ್ರಯಃ।** ಯಾರಿಗೆ ಧರ್ಮವೇ ಆಶ್ರಯವಾಗಿರುವುದೋ ಅಂತಹವರಿಗೆ ಇದು ಯಾವುದೂ ಅದ್ಭುತವಲ್ಲ. ಇದಕ್ಕಿಂತಲೂ ಹೆಚ್ಚಿನದನ್ನೂ ಅವರು ಸಾಧಿಸಬಲ್ಲರು' ಎಂದು ಹೇಳಿ ಕಡೆಗೆ ತಾನೇ ಸಮಾಧಾನಪಟ್ಟುಕೊಳ್ಳುತ್ತಾನೆ.

ಕೌರವಯೋಧರಿಗೆ ಯುದ್ಧಮಾಡುವುದರಲ್ಲಿ ಮನಸ್ಸೇ ಇರಲಿಲ್ಲವೆಂದು ಸಂಜಯನು ತಿಳಿಸುತ್ತಾನೆ. ದ್ರೋಣರೇ ಆದಿಯಾಗಿ ಯಾವ ಕೌರವಯೋಧನೂ ಅಭಿಮನ್ಯುವಿನಿಂದ ಪರಾಜಿತನಾಗದೇ ಇರಲಿಲ್ಲ. ಎಲ್ಲರೂ ವಿಮುಖರಾದನಂತರ ದುರ್ಯೋಧನನ ಮಗನಾದ ಲಕ್ಷ್ಮಣನು ಅಭಿಮನ್ಯುವಿನೊಡನೆ ಯುದ್ಧಕ್ಕೆ ಹೋಗುತ್ತಾನೆ. ದುರ್ಯೋಧನನು ನೋಡುತ್ತಿದ್ದಂತೆಯೇ ಲಕ್ಷ್ಮಣನ ಸಂಹಾರವಾಗುತ್ತದೆ. 'ಅಭಿಮನ್ಯುವನ್ನು ಈಗಲೇ ಸಾಯಿಸಿರಿ' ಎಂದು ದುರ್ಯೋಧನನು ಕೂಗಿಕೊಳ್ಳುತ್ತಾನೆ. ಆದರೆ ಅದರಿಂದ ಪ್ರಯೋಜನವೇನೂ ಆಗುವುದಿಲ್ಲ. ಆರು ಮಂದಿ ಮಹಾರಥರೂ ಒಟ್ಟಾಗಿ ಅಭಿಮನ್ಯುವಿನ ಮೇಲೆ ಬೀಳುತ್ತಾರೆ. ಎಲ್ಲರೂ ಅಭಿಮನ್ಯುವಿನ ಬಾಣದ ಪೆಟ್ಟನ್ನು ತಡೆಯಲಾರದೇ ಹಿಮ್ಮೆಟ್ಟುತ್ತಾರೆ. ಸೈಂಧವನ ಸೈನ್ಯದ ಮೇಲೆ ಧಾಳಿಮಾಡಿ ಸಾವಿರಾರು ಸೈನಿಕರನ್ನು ಸಂಹರಿಸುತ್ತಾನೆ. ಗಜಸೈನ್ಯವನ್ನು ಧ್ವಂಸಮಾಡುತ್ತಾನೆ. ಕ್ರಾಥನ ಮಗನನ್ನು ಸಂಹರಿಸುತ್ತಾನೆ. ಅನಂತರ ಎಲ್ಲರೂ ಪರಾಙ್ಮುಖರಾಗುತ್ತಾರೆ. ಇಲ್ಲಿಗೆ ೪೬ನೆಯ ಅಧ್ಯಾಯವು ಮುಗಿಯುತ್ತದೆ. ೪೭ನೆಯ ಅಧ್ಯಾಯವೂ ಅಭಿಮನ್ಯುವಿನ ಪರಾಕ್ರಮವರ್ಣನೆಯಿಂದಲೇ ತುಂಬಿಹೋಗಿದೆ. ದ್ರೋಣರೇ ಮೊದಲಾದ ಆರು ಮಂದಿ ಮಹಾರಥರೊಡನೆ ಘೋರಯುದ್ಧವಾಗುತ್ತದೆ. ಆ ಮಧ್ಯದಲ್ಲಿ ಅಭಿಮನ್ಯುವು ಬೃಂದಾರಕನನ್ನು ಸಂಹರಿಸುತ್ತಾನೆ. ಆರು ಮಂದಿ ಮಹಾರಥರಲ್ಲೊಬ್ಬನಾದ ಬೃಹದ್ರಥನನ್ನೂ ಸಂಹರಿಸುತ್ತಾನೆ. ಹತ್ತು ಸಾವಿರ ರಾಜರನ್ನೂ ಸಂಹರಿಸುತ್ತಾನೆ. ಶತ್ರುಗಳನ್ನು ಸಂಹರಿಸುತ್ತಾ ಸ್ವೇಚ್ಛೆಯಿಂದ ರಣಾಂಗಣದ ಸುತ್ತಲೂ ತಿರುಗುತ್ತಿರುತ್ತಾನೆ. ಇಲ್ಲಿಗೆ ಈ ಅಧ್ಯಾಯವು ಮುಗಿಯುತ್ತದೆ. ಅಭಿಮನ್ಯು-ಕರ್ಣರ ಯುದ್ಧದಿಂದ ೪೮ನೆಯ ಅಧ್ಯಾಯವು ಪ್ರಾರಂಭವಾಗುತ್ತದೆ. ಕರ್ಣನ ಆರು

ಮಂದಿ ಮಂತ್ರಿಗಳನ್ನು ಅಭಿಮನ್ಯುವು ಸಂಹರಿಸುತ್ತಾನೆ. ಮಾಗಧನ ಮಗನನ್ನೂ, ಭೋಜನನ್ನೂ, ಅಶ್ವಕೇತುವನ್ನೂ ಸಂಹರಿಸುತ್ತಾನೆ. ಅನಂತರ ದುಃಶಾಸನನ ಮಗನು ಅಭಿಮನ್ಯುವಿನೊಡನೆ ಯುದ್ಧಕ್ಕೆ ಬರುತ್ತಾನೆ. ಅಭಿಮನ್ಯುವು ಅವನ ಮೇಲೆ ಬಿಟ್ಟ ಬಾಣವನ್ನು ಅಶ್ವತ್ಥಾಮನು ಕತ್ತರಿಸುತ್ತಾನೆ. ಅಶ್ವತ್ಥಾಮನಿಗೂ-ಅಭಿಮನ್ಯುವಿಗೂ ಯುದ್ಧವು ಪ್ರಾರಂಭವಾಗುತ್ತದೆ. ಅನಂತರ ಶಲ್ಯನಿಗೂ-ಅಭಿಮನ್ಯುವಿಗೂ ಯುದ್ಧವಾಗುತ್ತದೆ. ಅಭಿಮನ್ಯುವು ಶಲ್ಯನ ರಥವನ್ನು ಧ್ವಂಸಮಾಡಲಾಗಿ ಅವನು ಬೇರೊಂದು ರಥಕ್ಕೆ ಓಡುತ್ತಾನೆ. ಅನಂತರ ಅಭಿಮನ್ಯುವು ಶತ್ರುಂಜಯ, ಚಂದ್ರಕೇತು, ಮೇಘವೇಗ, ಸುವರ್ಚಸ, ಸೂರ್ಯಭಾಸ–ಈ ಐವರನ್ನೂ ಸಂಹರಿಸಿ, ಶಕುನಿಯನ್ನು ಬಾಣಗಳಿಂದ ಪೀಡಿಸುತ್ತಾನೆ. ಹೀಗೆಯೇ ಮುಂದುವರಿದರೆ ಕೌರವರಲ್ಲಿ ಯಾರೊಬ್ಬರೂ ಉಳಿಯುವುದಿಲ್ಲವೆಂದೂ ನಮ್ಮನ್ನು ಒಬ್ಬೊಬ್ಬರನ್ನಾಗಿ ಕೊಲ್ಲುವ ಮೊದಲೇ ನಾವೆಲ್ಲರೂ ಒಟ್ಟಾಗಿ ಅಭಿಮನ್ಯುವನ್ನು ಕೊಲ್ಲೋಣವೆಂದೂ ಶಕುನಿಯು ಹೇಳುತ್ತಾನೆ. ಕರ್ಣನೇ ಯಾವುದಾದರೂ ಉಪಾಯವನ್ನು ಸೂಚಿಸುವಂತೆ ದ್ರೋಣರನ್ನು ಕೇಳಿಕೊಳ್ಳುತ್ತಾನೆ. ಅದರಂತೆ ದ್ರೋಣರು ಉಪಾಯವನ್ನು ಸೂಚಿಸುತ್ತಾರೆ. ಅವರ ಉಪಾಯದ ಸಾರಾಂಶವು ಈ ರೀತಿಯಾಗಿದೆ. 'ಎಲ್ಲ ಮಹಾರಥರೂ ಒಬ್ಬನಲ್ಲಿಯೇ ಲಕ್ಷ್ಯವಿಡಬಾರದು. ಒಬ್ಬೊಬ್ಬರು ಅವನಲ್ಲಿರುವ ಒಂದೊಂದು ವಸ್ತುವಿನ ಮೇಲೆ ಲಕ್ಷ್ಯವಿಟ್ಟು ಏಕಕಾಲದಲ್ಲಿ ಎಲ್ಲರೂ ಪ್ರಹರಿಸಬೇಕು. ಧನುಸ್ಸಿನ ಮೇಲೆ ಒಬ್ಬರ ಗುರಿಯಿರಬೇಕು; ಶಿಂಜಿನಿಯ ಮೇಲೆ ಮತ್ತೊಬ್ಬರ ಗುರಿಯಿರಬೇಕು; ಮತ್ತೊಬ್ಬರು ಕುದುರೆಯ ಕಡಿವಾಣಗಳನ್ನು ಕತ್ತರಿಸಬೇಕು; ಅನಂತರ ಅವನನ್ನು ಯುದ್ಧದಿಂದ ವಿಮುಖನನ್ನಾಗಿ ಮಾಡಿ ಹಿಂದಿನಿಂದ ಪ್ರಹರಿಸ ಬೇಕು. ಇವನು ಧನುಷ್ಪಾಣಿಯಾಗಿಯೇ ಇದ್ದರೆ ಸುರಾಸುರರಿಂದಲೂ ಇವನನ್ನು ಜಯಿಸಲು ಸಾಧ್ಯವಾಗುವುದಿಲ್ಲ.' ದ್ರೋಣರು ಹೇಳಿದಂತೆಯೇ ಎಲ್ಲವೂ ನಡೆದುಹೋಯಿತು. ಅಭಿಮನ್ಯುವು ಕತ್ತಿ-ಗುರಾಣಿಗಳನ್ನು ಹಿಡಿದು ಆಕಾಶಕ್ಕೆ ಹಾರುತ್ತಾನೆ. ಅವನು ಕೆಳಕ್ಕೆ ಹಾರುವ ವೇಳೆಗೆ ಅವನ ಕೈಲಿದ್ದ ಕತ್ತಿ ಗುರಾಣಿಗಳನ್ನೂ ಕತ್ತರಿಸಿಬಿಡುತ್ತಾರೆ. ಅನಂತರ ಚಕ್ರವನ್ನು ಹಿಡಿದು ಅಭಿಮನ್ಯುವು ದ್ರೋಣರ ಮೇಲೆ ಬೀಳಲು ಹೋಗುತ್ತಾನೆ.

ಚಕ್ರವು ಚಕ್ರಾಯುಧವೇ ಅಥವಾ ರಥಚಕ್ರವೇ? ಎಂಬ ಬಗೆಗೆ ಜಿಜ್ಞಾಸೆಯಿದೆ. ಮಹಾಭಾರತದಲ್ಲಿ ಈ ಪ್ರಕರಣವನ್ನು ನೋಡಿದರೆ ಅಭಿ

ಮನ್ಯುವು ಹಿಡಿದುದು ಚಕ್ರಾಯುಧವೇ ಹೊರತು ರಥಚಕ್ರವಲ್ಲವೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಆಯುಧಗಳೆಲ್ಲವೂ ಮುಗಿದುಹೋಗಿದ್ದರೆ ರಥಚಕ್ರ ವನ್ನೋ ಅಥವಾ ರಥದ ಧುರಿಯನ್ನೋ ತೆಗೆದುಕೊಳ್ಳಬಹುದಾಗಿದ್ದಿತು. ಆಯುಧಗಳು ಮುಗಿದಿರಲಿಲ್ಲ. ಚಕ್ರವು ಹೋದ ಮೇಲೆ ಅಭಿಮನ್ಯುವು ಗದೆಯನ್ನು ಎತ್ತಿಕೊಳ್ಳುತ್ತಾನೆ. ರಥದಿಂದ ಚಕ್ರವನ್ನು ತೆಗೆದುಕೊಂಡ ನೆಂಬುದನ್ನು ಯಾವ ವಾಕ್ಯವೂ ಬೆಂಬಲಿಸುವುದಿಲ್ಲ. ಆದುದರಿಂದ ಅವನು ಹಿಡಿದಿದ್ದು ಚಕ್ರಾಯುಧವೇ ಹೊರತು ರಥಚಕ್ರವಲ್ಲವೆಂದು ನಿಃಸಂಶಯವಾಗಿ ಹೇಳಬಹುದಾಗಿದೆ. ಆದರೆ-ಆಂಗ್ಲ ಭಾಷಾಂತರಕಾರರು ರಥಚಕ್ರವೇ ಎಂದು ಅರ್ಥಮಾಡಿದ್ದಾರೆ. **ಚಕ್ರರೇಣೂಜ್ವಲಶೋಭಿತಾಙ್ಗಃ** (೪೦-೪೮) ಚಕ್ರಾ ಯುಧದಲ್ಲಿ ಧೂಳಿರುವುದಿಲ್ಲ. ರಥಚಕ್ರವಾಗಿದ್ದುದರಿಂದ ಅದರಲ್ಲಿ ಧೂಳಿದ್ದಿತು ಎಂದು ಇವರ ಅಭಿಪ್ರಾಯವಾಗಿರಬಹುದು. 'His body bright with the dust of car wheels'ಎಂದೇ ಅವರು ಅರ್ಥಮಾಡಿದ್ದಾರೆ. ಮುಂದಿನ ಪ್ರಕರಣವನ್ನು ನೋಡಿದರೆ ಇಲ್ಲಿ ಹೇಳಿರುವ ಧೂಳಿಯು ಚಕ್ರಾಯುಧಕ್ಕೆ ಸಂಬಂಧಿಸಿದುದಲ್ಲ. ಅವನ ಶರೀರವು ಚಕ್ರ ದಿಂದಲೂ ಮತ್ತು ಧೂಳಿನಿಂದಲೂ ಶೋಭಿಸುತ್ತಿದ್ದಿತು ಎಂದು ಅರ್ಥ ಮಾಡುವುದು ಸಾಧುವಾಗಿ ಕಾಣುತ್ತದೆ. ಚಕ್ರಪಾಣಿಯಾದ ಅಭಿಮನ್ಯುವಿನ ವರ್ಣನೆಯೊಡನೆ ಈ ಅಧ್ಯಾಯವು ಮುಗಿಯುತ್ತದೆ. ೪೯ನೆಯ ಅಧ್ಯಾಯವು ಎಂತಹವರ ಮನಸ್ಸಿಗಾದರೂ ಕ್ಲೇಶವನ್ನುಂಟುಮಾಡುವ ಅಧ್ಯಾಯ. ಮಹಾರಥರೆಲ್ಲರೂ ಒಟ್ಟಾಗಿ ಸೇರಿ ಅಭಿಮನ್ಯುವು ಹಿಡಿದಿದ್ದ ಚಕ್ರವನ್ನೂ ಕತ್ತರಿಸಿಬಿಡುತ್ತಾರೆ. ಅನಂತರ ಅಭಿಮನ್ಯುವು ಗದೆಯನ್ನೆತ್ತಿಕೊಳ್ಳುತ್ತಾನೆ. ಕಾಲಿಕೇಯನನ್ನೂ, ವಸಾತಿಯರನ್ನೂ, ಕೇಕಯರನ್ನೂ, ಹತ್ತು ಆನೆಗಳನ್ನೂ ಗದೆಯಿಂದಲೇ ಸಂಹರಿಸುತ್ತಾನೆ. ದುಃಶಾಸನನ ಮಗನ ರಥವನ್ನು ಕುದುರೆಗಳ ಸಹಿತವಾಗಿ ಧ್ವಂಸಮಾಡುತ್ತಾನೆ. ಅನಂತರ ಕುಪಿತನಾದ ದೌಃಶಾಸನಿಯೂ ಗದೆಯನ್ನೆತ್ತಿಕೊಂಡು ಅಭಿಮನ್ಯುವಿನೊಡನೆ ಯುದ್ಧಮಾಡುತ್ತಾನೆ. ಇಬ್ಬರೂ ಕಾದಾಡಿ ನೆಲಕ್ಕೆ ಬೀಳುತ್ತಾರೆ. ಆದರೆ ದೌಃಶಾಸನಿಯು ಒಡನೆಯೇ ಮೇಲೆದ್ದು ಗದೆಯಿಂದ ಅಭಿಮನ್ಯುವಿನ ತಲೆಗೆ ಅಪ್ಪಳಿಸಿಬಿಡುತ್ತಾನೆ. ಇಲ್ಲಿಗೆ ಅಭಿಮನ್ಯುವಿನ ಅವತಾರವು ಮುಗಿಯುತ್ತದೆ. ಅದನ್ನು ಕಂಡು ಜೀವ ಕೋಟಿಯೇ ದುಃಖಿಸುತ್ತದೆ. ಹೀಗೆ ಕೊಂದುದು ಅಧರ್ಮವೆಂದು ಸಾರು

ತ್ತದೆ. ಕೌರವರು ಮಾತ್ರ ಆನಂದತುಂದಿಲರಾಗಿ ತಮ್ಮ-ತಮ್ಮ ಶಿಬಿರಗಳಿಗೆ ಹೋಗುತ್ತಾರೆ. ಅರ್ಜುನನಿಗಿಂತಲೂ ಮಿಗಿಲಾಗಿಯೇ ಅಭಿಮನ್ಯುವು ಯುದ್ಧ ಮಾಡಿದನೆಂದು ಹೇಳಬಹುದಾಗಿದೆ. ಏಕೆಂದರೆ: ಅರ್ಜುನನು ಎಂದೂ ಏಕಾಕಿಯಲ್ಲ. ಶ್ರೀಕೃಷ್ಣನು ಸದಾ ಅವನ ರಕ್ಷಣೆಯಲ್ಲಿಯೇ ಇರುತ್ತಾನೆ. ಆದರೆ ಅಭಿಮನ್ಯುವು ಏಕಾಕೀ. ನಿಷ್ಠನಾದ ಸಾರಥಿಯೇ ಅಭಿಮನ್ಯುವಿಗಿದ್ದರೂ ಶ್ರೀಕೃಷ್ಣನಿಗೂ-ಸುಮಿತ್ರನಿಗೂ ಹೋಲಿಸುವ ಸಾಧ್ಯತೆಯೇ ಇಲ್ಲ. ಆದುದರಿಂದ ಅರ್ಜುನನ ಪರಾಕ್ರಮಕ್ಕಿಂತಲೂ ಅಭಿಮನ್ಯುವಿನ ಪರಾಕ್ರಮವೇ ಹೆಚ್ಚಿನದೆಂದು ಹೇಳಬಹುದು. ಸಮಾನವೆಂಬುದನ್ನಾದರೂ ಯಾರೂ ಇಲ್ಲವೆನ್ನಲಾರರು. ೫೦ನೆಯ ಅಧ್ಯಾಯದಲ್ಲಿ ರಣರಂಗದ ಭೀಕರವರ್ಣನೆಯಿದೆ. ಇಲ್ಲಿಗೆ ಹದಿಮೂರನೆಯ ದಿವಸದ ಯುದ್ಧವು ಮುಗಿಯುತ್ತದೆ.

೫೧ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ವಿಲಾಪ

ಸಂಜಯನು ಅಭಿಮನ್ಯುವಿನ ಮರಣಾನಂತರದ ವಿಷಯವನ್ನು ಹೇಳುತ್ತಾನೆ:

"ಮಹಾರಾಜ! ರಥಯೂಥಪತಿಯಾದ, ಮಹಾವೀರ್ಯನಾದ, ಸುಭದ್ರಾನಂದನನಾದ ಅಭಿಮನ್ಯುವು ಹತನಾಗಲಾಗಿ, ಪಾಂಡವರ ಕಡೆಯ ಸೈನಿಕರೆಲ್ಲರೂ ರಥಗಳಿಂದ ಕುದುರೆಗಳನ್ನು ಬಿಚ್ಚಿದರು. ಧನುಸ್ಸುಗಳನ್ನು ಕೆಳಗಿಟ್ಟರು. ಅವರ ಮನಸ್ಸೆಲ್ಲವೂ ಅಭಿಮನ್ಯುವಿನಲ್ಲಿಯೇ ಲೀನವಾಗಿದ್ದಿತು. ಅಂದಿನ ಯುದ್ಧವನ್ನೇ ನೆನೆಯುತ್ತಾ ಯುಧಿಷ್ಠಿರರಾಜನನ್ನು ಸುತ್ತುವರಿದು ಕುಳಿತುಕೊಂಡರು. ಮಹಾರಥನಾದ, ತಮ್ಮನ ಮಗನಾದ, ವೀರನಾದ ಅಭಿಮನ್ಯುವು ಮರಣಹೊಂದಿದುದಕ್ಕಾಗಿ ಯುಧಿಷ್ಠಿರನು ಬಹಳವಾಗಿ ದುಃಖಿಸಿದನು.

"ನಿಶ್ಚಯವಾಗಿಯೂ ನಮ್ಮ ಕುಮಾರನು ನನಗೆ ಪ್ರಿಯವನ್ನುಂಟು ಮಾಡುವ ಅಪೇಕ್ಷೆಯಿಂದ ಯಾವ ವಿಧವಾದ ಅಪಾಯವೂ ಇರದೆಂದು ಭಾವಿಸಲಾಗಿದ್ದ, ಅಭೇದ್ಯವಾಗಿದ್ದ, ದ್ರೋಣರ ಚಕ್ರವ್ಯೂಹವನ್ನು ಭೇದಿಸಿ-ಸಿಂಹವು ಗೋವುಗಳ ಮಧ್ಯಭಾಗವನ್ನು ಪ್ರವೇಶಿಸುವಂತೆ—ವ್ಯೂಹ

ದೊಳಗೆ ನುಗ್ಗಿಹೋದನು. ಶೂರರೂ, ಮಹಾಧನುಷ್ಮಂತರೂ, ಅಸ್ತ್ರವಿದ್ಯಾನಿಪುಣರೂ, ಯುದ್ಧದುರ್ಮದರೂ ಆಗಿದ್ದ ಶತ್ರುಪಕ್ಷದ ಯೋಧರು ಇವನನ್ನು ಎದುರಿಸಿ ಭಗ್ನರಾಗಿ (ಬಾಣಗಳಿಂದ ಬಹಳವಾಗಿ ಪೆಟ್ಟುತಿಂದು) ಯುದ್ಧದಿಂದ ಹಿಮ್ಮೆಟ್ಟುತ್ತಿದ್ದರು. ಅಭಿಮನ್ಯುವು ನಮಗೆ ಅತ್ಯಂತಶತ್ರುವಾದ ದುಃಶಾಸನನನ್ನು ಕ್ಷಿಪ್ರವಾಗಿ ಎದುರಿಸಿ ತೀಕ್ಷ್ಣವಾದ ಬಾಣಗಳಿಂದ ಅವನನ್ನು ಮೂರ್ಛೆಗೊಳಿಸಿ ಯುದ್ಧದಿಂದ ವಿಮುಖ ನಾಗುವಂತೆ ಮಾಡಿದನು. ದಾಟಲು ಅಸಾಧ್ಯವಾದ, ಸಮುದ್ರರೂಪವಾದ ದ್ರೋಣರ ಸೈನ್ಯವನ್ನು ಸಂಪೂರ್ಣವಾಗಿ ದಾಟಿ, ತೀರಕ್ಕೆ ಕಾಲಿಡು ವಷ್ಟರಲ್ಲಿಯೇ ಪರಾಜಿತನಾಗಿಹೋಗಿದ್ದ ದುಃಶಾಸನನ ಮಗನನ್ನು ಎದುರಿಸಿ ಅವನಿಂದ ಹತನಾಗಿ ಯಮಲೋಕವನ್ನೈದಿದನು. ಇದಕ್ಕಿಂತಲೂ ದುಃಖಕರ ವಾದುದು ಮತ್ತೇನಿದೆ? ಅಭಿಮನ್ಯುವು ಸತ್ತುಹೋಗಿರುವ ಈ ಸಮಯದಲ್ಲಿ ನಾನು ಅರ್ಜುನನನ್ನು ಹೇಗೆ ನೋಡಲಿ? ತನ್ನ ಪ್ರಿಯಪುತ್ರನನ್ನು ಕಾಣದಿರುವ ಮಹಾಭಾಗೆಯಾದ ಸುಭದ್ರೆಯನ್ನಾದರೂ ಹೇಗೆ ಕಾಣಲಿ? ಯಾವ ರೀತಿಯಲ್ಲಿ ಈ ಅನರ್ಥಪೂರ್ಣವಾದ, ಅಸಂಗತವಾದ ಮತ್ತು ಅನುಚಿತವಾದ ವಾರ್ತೆಯನ್ನು ಶ್ರೀಕೃಷ್ಣನ ಮತ್ತು ಅರ್ಜುನನ ಮುಂದೆ ಹೇಳಲು ಸಾಧ್ಯವಾಗುತ್ತದೆ? ಆದರೆ ಈ ಅಪ್ರಿಯವಾದ ಘಟನೆಯು ನಡೆಯಲು ಮೂಲಕಾರಣನು ನಾನೇ ಆಗಿದ್ದೇನೆ. ಪ್ರಿಯವಾಗಬೇಕೆಂದು ಬಯಸಿದ, ಜಯಾಕಾಂಕ್ಷಿಯಾದ ನಾನೇ ಸುಭದ್ರಾರ್ಜುನ-ಕೇಶವರಿಗೆ ಬಹಳ ಅಪ್ರಿಯವಾದ ಈ ಕಾರ್ಯವನ್ನು ಮಾಡಿರುತ್ತೇನೆ.

**ನ ಲುಬ್ಧೋ ಬುಧ್ಯತೇ ದೋಷಾಂಲ್ಲೋಭಾನ್ಮೋಹಾತ್ಪ್ರವರ್ತತೇ ।**
**ಮಧುಲಿಪ್ಸುರ್ಹಿ ನಾಪಶ್ಯಂ ಪ್ರಪಾತಮಹಮೀದೃಶಮ್ ॥೧೧॥**

ಲೋಭಿಯಾದ ಮನುಷ್ಯನು ಕಾರ್ಯಗಳಲ್ಲಿನ ದೋಷಗಳನ್ನು ತಿಳಿದು ಕೊಂಡಿರುವುದಿಲ್ಲ. ಆದುದರಿಂದಲೇ ಅವನು ಲೋಭ-ಮೋಹಗಳಿಗೆ ವಶೀಭೂತನಾಗಿ ಕಾರ್ಯಪ್ರವೃತ್ತನಾಗುತ್ತಾನೆ. ಜೇನುತುಪ್ಪವನ್ನು ಬಯಸು ವವನು ಜೇನನ್ನು ಬಿಡಿಸಲು ಹೋಗುವಾಗ ಕೆಳಗಿರುವ ಪ್ರಪಾತವನ್ನು ಪರಿಗಣಿಸುವುದಿಲ್ಲ. ನನ್ನ ಸ್ವರೂಪವೂ ಇದೇ ರೀತಿ ಆಗಿದೆ. (ಪರಿಣಾಮವನ್ನು

ಯೋಚಿಸದೇ ವಿಜಯದ ಆಸೆಯಿಂದ ಎಳೆಯ ಪ್ರಾಯದ ಅಭಿಮನ್ಯುವನ್ನು ಯುದ್ಧಕ್ಕೆ ಕಳುಹಿಸಿದೆನು. ನನಗೂ, ಮಧುಲಿಪ್ಸುವಿಗೂ, ಲೋಭಿಗೂ ಯಾವ ವ್ಯತ್ಯಾಸವೂ ಇಲ್ಲ.) ಯಾವ ಬಾಲಕನನ್ನು ನಾವು ಊಟ-ತಿಂಡಿಗಳಿಂದ, ವಿಹಾರ-ಶಯ್ಯಾಸನಗಳಿಂದ, ಆಭರಣಗಳಿಂದ ಪುರಸ್ಕರಿಸಬೇಕಾಗಿದ್ದಿತೋ ಅಂತಹ ಬಾಲಕನನ್ನು ನಾವು ಯುದ್ಧಕ್ಕೆ ಕಳುಹಿಸುವುದರ ಮೂಲಕ ಪುರಸ್ಕರಿಸಿದೆವು. ಬಾಲ್ಯಾವಸ್ಥೆಯನ್ನು ದಾಟಿ ಈಗ ತಾನೇ ತಾರುಣ್ಯದಲ್ಲಿ ಕಾಲಿಡುತ್ತಿದ್ದ, ಯುದ್ಧದಲ್ಲಿ ಸಾಕಷ್ಟು ನಿಪುಣನಲ್ಲದ ಅಭಿಮನ್ಯುವು– ಗಹನವಾದ ಅರಣ್ಯದ ಮಧ್ಯದಲ್ಲಿ ದಿಕ್ಕುಗೆಟ್ಟ ಸುಂದರವಾದ ಕುದುರೆಯೋಪಾದಿಯಲ್ಲಿ–ವಿಷಮವಾದ ಸಂಗ್ರಾಮದಲ್ಲಿ ಕುಶಲಿಯಾಗಿರಲು ಹೇಗೆ ತಾನೇ ಸಾಧ್ಯವಾದೀತು?

ಒಂದು ವೇಳೆ ನಾನೇನಾದರೂ ಅಭಿಮನ್ಯುವಿನೊಡನೆಯೇ ಈ ರಣಕ್ಷೇತ್ರದಲ್ಲಿಯೇ ಮಲಗಿರದಿದ್ದರೆ (ಮೃತನಾಗದಿದ್ದರೆ) ಕ್ರೋಧದಿಂದ ಉದ್ದೀಪಿತನಾದ ಅರ್ಜುನನ ಶೋಕಾಕುಲವಾದ ಕಣ್ಣುಗಳಿಂದ ನಾವು ದಹಿಸಹೋಗಬೇಕಾದೀತು. ಮಹಾಮಹಿಮನಾದ ಅರ್ಜುನನು ಲೋಭಿ ಯಲ್ಲ. ಬುದ್ಧಿವಂತನು; ಲಜ್ಜಾಶೀಲನು; ಕ್ಷಮಾವಂತನು; ರೂಪವಂತನು; ಬಲಿಷ್ಠನು; ಒಳ್ಳೆಯ ಶರೀರಸೌಷ್ಠವವಿರತಕ್ಕವನು; ಇತರರನ್ನು ಮರ್ಯಾದೆ ಯಿಂದ ಕಾಣತಕ್ಕವನು; ಸರ್ವರಿಗೂ ಪ್ರಿಯನಾದವನು; ಸತ್ಯಪರಾಕ್ರಮನು. ಸಾರವತ್ತಾದ ಕಾರ್ಯಗಳನ್ನೇ ಮಾಡುವ ಅರ್ಜುನನ ಕಾರ್ಯಗಳನ್ನು ದೇವತೆಗಳೂ ಹೊಗಳುತ್ತಾರೆ. ವೀರ್ಯವಂತನಾದ ನಮ್ಮ ಅರ್ಜುನನು ನಿವಾತಕವಚರನ್ನೂ ಕಾಲಕೇಯರೆಂಬ ರಾಕ್ಷಸರನ್ನೂ ಸಂಹರಿಸಿದನು. ಮಹೇಂದ್ರನ ಶತ್ರುಗಳಾದ, ಹಿರಣ್ಯಪುರವಾಸಿಗಳಾದ ಪೌಲೋಮರು ಪರಿವಾರಸಮೇತರಾಗಿ ಕಣ್ಣುಮುಚ್ಚಿ ತೆಗೆಯುವುದರೊಳಗಾಗಿಯೇ ಅರ್ಜುನ ನಿಂದ ಹತರಾದರು. ಶತ್ರುಗಳೇ ಆಗಿದ್ದರೂ ಅವರೇನಾದರೂ ಇವನಿಂದ ಅಭಯವನ್ನು ಯಾಚಿಸಿದ್ದೇ ಆದರೆ ವಿಭುವಾದ ಅರ್ಜುನನು ಅವರಿಗೂ ಅಭಯಪ್ರದಾಯಕನಾಗತಕ್ಕವನು. ಇಂತಹ ಮಹಾಮಹಿಮನಾದ ಅರ್ಜುನನ ಬಲಿಷ್ಠನಾದ ಮಗನನ್ನು ರಕ್ಷಣೆ ಮಾಡಲು ನಮಗೆ ಸಾಧ್ಯವಾಗಲಿಲ್ಲ.

ಮಹಾಬಲಿಷ್ಠರಾದ ಧೃತರಾಷ್ಟ್ರನ ಮಕ್ಕಳಿಗೆ ಅಭಿಮನ್ಯುವಿನ ವಧೆ

ಯಿಂದಾಗಿ ಭಯಂಕರವಾದ ವಿಪತ್ತೇ ಪ್ರಾಪ್ತವಾಗಲಿದೆ. ಏಕೆಂದರೆ: ಪುತ್ರನ ವಧೆಯಿಂದ ಕ್ರುದ್ಧನಾದ ಅರ್ಜುನನು ಕೌರವರೆಲ್ಲರನ್ನೂ ಸಂಪೂರ್ಣವಾಗಿ ಶೋಷಿಸಿಬಿಡುತ್ತಾನೆ. (ಅವರನ್ನು ಮೂಲೋತ್ಪಾಟನಮಾಡುತ್ತಾನೆ.) ನಿಶ್ಚಯವಾಗಿಯೂ ದುರ್ಯೋಧನನು ಪರಮನೀಚನು. ಮೇಲಾಗಿ ಅವನಿಗೆ ಸಹಾಯಮಾಡುತ್ತಿರುವವರೂ ನೀಚರೇ ಆಗಿರುತ್ತಾರೆ. ಅರ್ಜುನನಿಂದ ಆಗಲಿರುವ ತನ್ನ ಪಕ್ಷದ ವಿನಾಶವನ್ನು ನೋಡಿದ ದುರ್ಯೋಧನನು ವ್ಯಾಕುಲಿತನಾಗಿ ದುಃಖಿಸುತ್ತಾ ಪ್ರಾಣಗಳನ್ನೇ ಬಿಡುತ್ತಾನೆ. ಅಭಿಮನ್ಯುವಿನ ವಧೆಯಿಂದಲೇ ಇದು ವ್ಯಕ್ತವಾಗಿದೆ.

**ನ ಮೇ ಜಯಃ ಪ್ರೀತಿಕರೋ ನ ರಾಜ್ಯಂ**
**ನ ಚಾಮರತ್ವಂ ನ ಸುರೈಃ ಸಲೋಕತಾ ।**
**ಇಮಂ ಸಮೀಕ್ಷ್ಯಾಪ್ರತಿವೀರ್ಯಪೌರುಷಂ**
**ನಿಪಾತಿತಂ ದೇವವರಾತ್ಮಜಾತ್ಮಜಮ್ ॥೨೧॥**

ಅಪ್ರತಿಮವಾದ ವೀರ್ಯದಿಂದಲೂ ಮತ್ತು ಪೌರುಷದಿಂದಲೂ ಯುಕ್ತನಾಗಿದ್ದ, ದೇವಶ್ರೇಷ್ಠನಾದ ಇಂದ್ರನ ಮಗನಾದ ಅರ್ಜುನನ ಆತ್ಮಜನಾದ ಅಭಿಮನ್ಯುವು ಶತ್ರುಗಳಿಂದ ಹತನಾಗಿ ಕೆಳಕ್ಕೆ ಬಿದ್ದುದನ್ನು ನೋಡಿದನಂತರ ನನಗೆ ವಿಜಯವೂ ಸಂತೋಷವನ್ನುಂಟುಮಾಡುವುದಿಲ್ಲ. ರಾಜ್ಯದ ಲಾಭವೂ ಸಂತೋಷವನ್ನುಂಟುಮಾಡುವುದಿಲ್ಲ. ನನಗೆ ಅಮರತ್ವವೂ ಪ್ರೀತಿಕರವಲ್ಲ. ದೇವತೆಗಳೊಡನೆ ದೇವಲೋಕದಲ್ಲಿರುವುದೂ ನನಗೆ ಯಾವ ವಿಧವಾದ ಸಂತೋಷವನ್ನೂ ಉಂಟುಮಾಡುವುದಿಲ್ಲ.”

ಐ೧ನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ವಿಲಪಿಸುತ್ತಿದ್ದ ಯುಧಿಷ್ಠಿರನ ಬಳಿಗೆ ವ್ಯಾಸರು ಬಂದುದು: ಅಕಂಪನನಿಗೂ ನಾರದರಿಗೂ ಆದ ಸಂಭಾಷಣೆಯನ್ನು ವ್ಯಾಸರು ಪ್ರಸ್ತಾಪಿಸಿದುದು: ಮೃತ್ಯುವಿನ ಉತ್ಪತ್ತಿಯ ಪ್ರಸಂಗಕಥನ

ಸಂಜಯನು ಯುಧಿಷ್ಠಿರನ ಬಿಡಾರದಲ್ಲಿ ನಡೆದ ವಿಷಯವನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ವಿಲಪಿಸುತ್ತಿದ್ದ ಕುಂತಿಯ ಮಗನಾದ ಯುಧಿಷ್ಠಿರನ ಸಮೀಪಕ್ಕೆ ಮಹರ್ಷಿಗಳಾದ ಕೃಷ್ಣದ್ವೈಪಾಯನರು ಆಗಮಿಸಿದರು. ತಮ್ಮನ ಮಗನ ಮರಣದಿಂದ ಶೋಕತಪ್ತನಾಗಿದ್ದ ಯುಧಿಷ್ಠಿರನು ಆಸನಾರೂಢರಾದ ಮಹರ್ಷಿಗಳನ್ನು ಯಥಾಯೋಗ್ಯವಾಗಿ ಸತ್ಕರಿಸಿ ಅವರನ್ನು ಕುರಿತು ಹೇಳಿದನು:

"ಮಹಾಮುನಿಗಳೇ! ಅಧರ್ಮಯುಕ್ತರಾಗಿದ್ದ, ಮಹಾಧನುಷ್ಮಂತರಾದ ಅನೇಕ ಮಹಾರಥರಿಂದ ಆಕ್ರಮಿಸಲ್ಪಟ್ಟು ಅವರೊಡನೆ ಏಕಾಕಿಯಾಗಿ ಯುದ್ಧಮಾಡುತ್ತಿದ್ದ ಅಭಿಮನ್ಯುವು ಹತನಾದನು. ಶತ್ರುವೀರನಾಶಕನಾದ ಅಭಿಮನ್ಯುವು ಇನ್ನೂ ಬಾಲಕನಾಗಿದ್ದನು. ಹುಡುಗತನದ ಬುದ್ಧಿಯಿಂದ ಕೂಡಿದ್ದನು. ಮೇಲಾಗಿ ಅವನೊಡನೆ ಯುದ್ಧೋಪಯೋಗಿಗಳಾದ ಸಾಧನಗಳೊಂದೂ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವನು ಯುದ್ಧಮಾಡುತ್ತಿದ್ದನು. ನಾನೇ ಅವನಿಗೆ ಚಕ್ರವ್ಯೂಹದಲ್ಲಿ ಒಳಗೆ ಪ್ರವೇಶಿಸಲು ದ್ವಾರವೊಂದನ್ನು ಮಾಡಿಕೊಡುವಂತೆ ಹೇಳಿದ್ದೆನು. ನಾನು ಹೇಳಿದಂತೆಯೇ ಅಭಿಮನ್ಯುವು ಚಕ್ರವ್ಯೂಹವನ್ನು ಭೇದಿಸಿ ಬಾಗಿಲನ್ನು ಮಾಡಿಕೊಂಡು ಒಳಕ್ಕೆ ಹೊರಟುಹೋದನು. ನಾವೂ ಸಹ ಅವನನ್ನು ಹಿಂಬಾಲಿಸುತ್ತಿದ್ದಾಗ ಸೈಂಧವನು ನಮ್ಮೆಲ್ಲರನ್ನೂ ತಡೆದುಬಿಟ್ಟನು. ಯುದ್ಧಜೀವಿಗಳಾದ ಕ್ಷತ್ರಿಯರು ತಮಗೆ ಸಮಾನರಾದವರೊಡನೆ–ತಮ್ಮಲ್ಲಿರುವಂತೆಯೇ ಸಾಧನ ಸಂಪತ್ತಿಯಿರುವವರೊಡನೆ ಯುದ್ಧಮಾಡಲು ಇಚ್ಛಿಸುತ್ತಾರಲ್ಲವೇ? ಈಗ ನಮ್ಮ ಶತ್ರುಗಳು ಅಭಿಮನ್ಯುವಿನೊಡನೆ ಮಾಡಿದ ಈ ಯುದ್ಧವು ನಿಶ್ಚಯವಾಗಿಯೂ ಅಸಮಯುದ್ಧ. ಮಹಾ-ಮಹಾಯೋಧರು ಸೇರಿಕೊಂಡು ಏಕಾಕಿಯಾದ ಒಬ್ಬ ಬಾಲಕನನ್ನು ಸಂಹರಿಸಿಬಿಟ್ಟರು. ಇದರಿಂದ ನಾನು ಬಹಳ ಸಂತಾಪಗೊಂಡಿದ್ದೇನೆ. ಪುತ್ರಶೋಕದಿಂದ ಹುಟ್ಟಿದ ಕಣ್ಣೀರಿನಿಂದ ನನ್ನ ಕಣ್ಣುಗಳು ತುಂಬಿಕೊಂಡಿವೆ. ಪುನಃ-ಪುನಃ ಇದೇ ವಿಷಯವಾಗಿ ಚಿಂತಿಸುತ್ತಿರುವ ನನಗೆ ಶಾಂತಿಯೆಂಬುದೇ ಇಲ್ಲವಾಗಿದೆ."

ಮಹಾರಾಜ! ಈ ರೀತಿಯಾಗಿ ಹೇಳಿಕೊಂಡು ವಿಲಪಿಸುತ್ತಿದ್ದ, ಶೋಕದಿಂದ ವ್ಯಾಕುಲಗೊಂಡ ಮನಸ್ಸುಳ್ಳವನಾಗಿದ್ದ ಯುಧಿಷ್ಠಿರನನ್ನು ಕುರಿತು ಭಗವಾನ್ ವ್ಯಾಸರು ಹೇಳಿದರು:

"ಮಹಾಪ್ರಾಜ್ಞನೇ! ಸರ್ವಶಾಸ್ತ್ರವಿಶಾರದನೇ! ಯುಧಿಷ್ಠಿರ! ನಿನ್ನಂತಹವರು ವ್ಯಸನವುಂಟಾದ ಸಮಯಗಳಲ್ಲಿ ಮೋಹಗೊಳ್ಳುವುದಿಲ್ಲ.

ಪುರುಷೋತ್ತಮನಾದ, ಶೂರನಾದ ಅಭಿಮನ್ಯುವು ನೋಡಲು ಯದ್ಯಪಿ ಬಾಲಕನೇ ಆಗಿದ್ದರೂ, ಬಾಲಕರಿಂದ ಮಾಡಲು ಸಾಧ್ಯವಾಗದೇ ಇರುವ ಅಮಿತವಾದ ಸಾಹಸವನ್ನು ಪ್ರದರ್ಶಿಸುತ್ತಾ ಬಹುಸಂಖ್ಯಾತರಾದ ಶತ್ರುಗಳನ್ನು ಕೊಂದು ಕಡೆಗೆ ಸ್ವರ್ಗಕ್ಕೇ ಹೋಗಿರುತ್ತಾನೆ.

**ಅನತಿಕ್ರಮಣೀಯೋ ವೈ ವಿಧಿರೇಷ ಯುಧಿಷ್ಠಿರ ।**
**ದೇವದಾನವಗನ್ಧರ್ವಾನ್ಮೃತ್ಯುರ್ಹರತಿ ಭಾರತ ॥೧೧॥**

ಯುಧಿಷ್ಠಿರ! ಈ ವಿಧಿಯೆಂಬುದು ಅನತಿಕ್ರಮಣೀಯವಾದುದು. ವಿಧಿಯನ್ನು ಅತಿಕ್ರಮಿಸಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ದೇವ-ದಾನವ-ಗಂಧರ್ವರನ್ನೂ ಸಹ ಮೃತ್ಯುವು ಅಪಹರಿಸುತ್ತದೆ. (ಅವರ ಪ್ರಾಣಗಳನ್ನೂ ಮೃತ್ಯುವು ಅಪಹರಿಸುತ್ತದೆ.)"

"ಮಹರ್ಷಿಗಳೇ! ಮಹಾಬಲರಾದ ಈ ಪೃಥಿವೀಪಾಲರು ಸೇನೆಯ ಮಧ್ಯದಲ್ಲಿ ಹತರಾಗಿ 'ಮೃತರಾದರು' ಎಂಬ ಸಂಜ್ಞೆಯನ್ನು ಹೊಂದಿ ಭೂಮಿಯ ಮೇಲೆ ಮಲಗಿದ್ದಾರೆ. ಇವರಲ್ಲಿ ಹತ್ತುಸಾವಿರ ಆನೆಗಳ ಬಲವಿರುವ ಪೃಥಿವೀಪಾಲರೂ ಇದ್ದರು. ಮತ್ತೆ ಕೆಲವರು ವಾಯುವಿನಂತೆ ವೇಗವುಳ್ಳವರೂ ಇದ್ದರು. ಈ ಮನುಷ್ಯರೆಲ್ಲರೂ ಬೇರೆ ಮನುಷ್ಯರಿಂದ ಕೊಲ್ಲಲ್ಪಟ್ಟವರಾಗಿ ಸಮಾನರೂಪರಾಗಿ ಇಲ್ಲಿ ಮಲಗಿದ್ದಾರೆ. ಇವರೆಲ್ಲರೂ ಪರಾಕ್ರಮದಿಂದ ಸಂಪನ್ನರಾಗಿದ್ದರು. ತಪೋಬಲದಿಂದ ಕೂಡಿದ್ದವರು. ಇಂತಹವರನ್ನು- ಪ್ರಾಣಶಕ್ತಿಸಂಪನ್ನರಾದ ವೀರರ ಯುದ್ಧದಲ್ಲಿ–ಯಾವನೋ ಬೇರೆಯವನು ಬಂದು ಕೊಂದುದನ್ನು ನಾನು ನೋಡಲಿಲ್ಲ. 'ನಾವು ಜಯಿಸಬೇಕು' 'ನಾವು ಜಯಿಸಬೇಕು' ಎಂಬ ಇಚ್ಛೆಯು ಪರಸ್ಪರವಾಗಿ ಎರಡೂ ಪಕ್ಷಗಳ ಯೋಧರ ಹೃದಯಗಳಲ್ಲಿಯೂ ಇದ್ದಿತು. ಬುದ್ಧಿವಂತರಾದ ನರೇಶರು ತಮ್ಮ ಆಯುಷ್ಯಗಳು ಕಳೆದುಹೋಗಲಾಗಿ ಯುದ್ಧದಲ್ಲಿ ಹತರಾಗಿ ಇಲ್ಲಿ ಮಲಗಿದ್ದಾರೆ.

'ಮೃತಾಃ' 'ಮೃತರಾದರು' ಎಂಬ ಈ ಶಬ್ದವು ಕೇವಲ ಸಂಜ್ಞೆಗೆ ಬದಲಾಗಿ ಒಂದು ಅರ್ಥವನ್ನು ಹೊಂದಿರುವುದಾದರೆ ಆಗ ಪ್ರಾಯಶಃ ಭೀಮವಿಕ್ರಮರಾದ ಮಹೀಪಾಲರು 'ಮೃತರಾದರು; ಮೃತ್ಯುವಶರಾದರು' ಎಂದಾಗುತ್ತದೆ. ಅಸ್ವತಂತ್ರತೆಗೆ, ಮತ್ತೊಬ್ಬರ ಪರವಶವಾಗುವುದಕ್ಕೆಲ್ಲಾ ಮೃತರಾದರು ಎಂಬುದು ಅನ್ವಯಿಸುತ್ತದೆಯೇ? ಕೆಲವು ಶೂರರಾದ ರಾಜಕುಮಾರರು ಯುದ್ಧವನ್ನೇ ಮಾಡದೇ ಅಭಿಮಾನಶೂನ್ಯರಾಗಿ ಶತ್ರುಗಳ

ವಶರಾಗಿಹೋದರು. ಮತ್ತೆ ಕೆಲವರು ಕುಪಿತರಾಗಿ ಯುದ್ಧಮಾಡುತ್ತಾ ವೈಶ್ವಾನರನೆಂಬ ಬಾಣಾಗ್ನಿಯ ಮುಖಕ್ಕೆ ತುತ್ತಾದರು. ಒಬ್ಬರು ಶತ್ರುವಿಗೆ ವಶರಾದರೆ, ಮತ್ತೊಬ್ಬರು ವೈಶ್ವಾನರಾಗ್ನಿಗೆ ವಶರಾದರು. ಇವರೂ ಸಹ ಅಸ್ವತಂತ್ರರಾಗುವುದರಿಂದ 'ಮೃತಾಃ' ಎಂಬ ಸಂಜ್ಞೆ ಇವರಿಗೂ ಬರುವುದೇ? ಮಹರ್ಷಿಗಳೇ! ಇಲ್ಲಿ ನನಗೊಂದು ಸಂಶಯವುಂಟಾಗಿದೆ. 'ಮೃತಾಃ' 'ಮೃತರಾದರು' ಎಂಬ ಸಂಜ್ಞೆಯು ಎಲ್ಲಿಂದ ಬಂದಿತು? ಮೃತ್ಯು ಎಂಬುವನು ಯಾರು? ಎಲ್ಲಿಂದ ಬಂದನು? ಯಾವ ಕಾರಣದಿಂದ ಮೃತ್ಯುವು ಈ ಪ್ರಾಣಿಗಳ ಪ್ರಾಣಗಳನ್ನು ಅಪಹರಿಸುತ್ತಾನೆ? ದೇವಸದೃಶರೇ! ಪಿತಾಮಹರೇ! ಈ ವಿಷಯವನ್ನು ನನಗೆ ಹೇಳಿರಿ."

ಮಹಾರಾಜ! ಈ ರೀತಿಯಾಗಿ ಪ್ರಶ್ನಿಸಿದ ಕುಂತೀಪುತ್ರನಾದ ಯುಧಿಷ್ಠಿರನಿಗೆ ವ್ಯಾಸಮಹರ್ಷಿಗಳು ಆಶ್ವಾಸಜನಕವಾದ ಈ ಮಾತುಗಳನ್ನು ಹೇಳಿದರು:



"ಯುಧಿಷ್ಠಿರ! ನೀನು ಕೇಳಿದ ಈ ವಿಷಯದಲ್ಲಿ ನಾರದರು ಅಕಂಪನನಿಗೆ ಹೇಳಿದ ಪುರಾತನವಾದ ಒಂದು ಇತಿಹಾಸವನ್ನು ದೃಷ್ಟಾಂತ ವಾಗಿ ಹೇಳುತ್ತಾರೆ. ಅಕಂಪನರಾಜನೂ ಸಹ ಸಹಿಸಿಕೊಳ್ಳಲು ಅಸಾಧ್ಯ ವಾದ ಮತ್ತು ಎಲ್ಲಕ್ಕಿಂತಲೂ ಹೆಚ್ಚಿನದಾದ ಪುತ್ರಮರಣದ ವ್ಯಸನವನ್ನು

ಹೊಂದಿದ್ದನೆಂದು ನಾನು ಕೇಳಿದ್ದೇನೆ. ಈಗ ನಾನು ನಿನಗೆ ಮೃತ್ಯುವಿನ ಉತ್ಪತ್ತಿಯ ಉತ್ತಮವೃತ್ತಾಂತವನ್ನು ಹೇಳುತ್ತೇನೆ. ಈ ವೃತ್ತಾಂತವನ್ನು ಕೇಳಿದನಂತರ ಸ್ನೇಹಬಂಧನದಿಂದಲೂ ಮತ್ತು ದುಃಖದಿಂದಲೂ ಪಾರಾಗುವೆ. ನಾನು ಹೇಳಲಿರುವ ಈ ಉಪಾಖ್ಯಾನವನ್ನು ಕೇಳು. ಇದು ಸಮಸ್ತ ಪಾಪರಾಶಿಯನ್ನೂ ಧ್ವಂಸಮಾಡತಕ್ಕುದು; ಧನವರ್ಧಕವಾದುದು; ಆಯುಷ್ಯವರ್ಧಕವಾದುದು; ಶೋಕಹರವಾದುದು; ಪುಷ್ಟಿಯನ್ನು ವರ್ಧಿಸತಕ್ಕುದು. ಪರಮಪವಿತ್ರವಾದುದು; ಶತ್ರುಗಳ ಸಮೂಹವನ್ನು ಧ್ವಂಸಮಾಡತಕ್ಕುದು; ಮಂಗಳಕರವಾದ ಕಾರ್ಯಗಳಲ್ಲಿ ಎಲ್ಲದಕ್ಕಿಂತಲೂ ಮಂಗಳಕರವಾದುದು. ವೇದಗಳ ಅಧ್ಯಯನವು ಯಾವ ರೀತಿಯಲ್ಲಿ ಪುಣ್ಯದಾಯಕವೋ- ಅದೇ ರೀತಿಯಲ್ಲಿ ಈ ಉಪಾಖ್ಯಾನದ ಅಧ್ಯಯನವೂ ಪುಣ್ಯಪ್ರಾಪಕವಾದುದು. ಆಯುಷ್ಮಂತರಾದ ಪುತ್ರರನ್ನು ಪಡೆದುಕೊಳ್ಳಲು ಇಚ್ಛಿಸುವವರು, ರಾಜ್ಯವನ್ನು ಇಚ್ಛಿಸುವವರು ಮತ್ತು ಸಂಪತ್ತನ್ನು ಇಚ್ಛಿಸುವ ನೃಪೋತ್ತಮರು ಈ ಉಪಾಖ್ಯಾನವನ್ನು ನಿತ್ಯವೂ ಪ್ರಾತಃಕಾಲದಲ್ಲಿ ಕೇಳಬೇಕು.

ಹಿಂದೆ ಕೃತಯುಗದಲ್ಲಿ ಅಕಂಪನನೆಂಬ ರಾಜನಿದ್ದನು. ಅವನು ಶತ್ರುಗಳೊಡನೆ ಯುದ್ಧಮಾಡುತ್ತಿದ್ದಾಗ ರಣರಂಗದ ಮಧ್ಯದಲ್ಲಿ ಶತ್ರುಗಳಿಗೆ ಬಂದಿಯಾಗಿಬಿಟ್ಟನು.

ಅಕಂಪನನಿಗೆ 'ಹರಿ' ಎಂಬ ಮಗನಿದ್ದನು. ಅವನು ಬಲದಲ್ಲಿ ನಾರಾಯಣನಿಗೆ ಸದೃಶನಾಗಿಯೂ, ಶ್ರೀಮಂತನಾಗಿಯೂ, ಅಸ್ತ್ರವಿದ್ಯಾಕುಶಲನಾಗಿಯೂ, ಮೇಧಾವಿಯಾಗಿಯೂ, ಯುದ್ಧದಲ್ಲಿ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನಾಗಿಯೂ ಇದ್ದನು. ಅವನೂ ತನ್ನ ತಂದೆಯೊಡನೆ ಯುದ್ಧಮಾಡುತ್ತಿದ್ದನು. ಅನೇಕ ಶತ್ರುಗಳಿಂದ ಪರಿವೃತನಾಗಿದ್ದರೂ, ಸಾವಿರಾರು ಬಾಣಗಳನ್ನು ಯೋಧರ ಮೇಲೂ, ಗಜಯೋಧರ ಮೇಲೂ ಅವ್ಯಾಹತವಾಗಿ ಬಿಡುತ್ತಿದ್ದನು. ಶತ್ರುತಾಪನನಾದ ಅವನು ಯುದ್ಧದಲ್ಲಿ ದುಷ್ಕರವಾದ ಕರ್ಮಮಾಡಿ, ಕಟ್ಟಕಡೆಗೆ ಶತ್ರುಗಳಿಂದ ಹತನಾಗಿ ಸೇನೆಯ ಮಧ್ಯದಲ್ಲಿ ಬಿದ್ದುಬಿಟ್ಟನು. ಅಕಂಪನರಾಜನು ಪುತ್ರನ ಮರಣದಿಂದ ಬಹಳ ದುಃಖಿತನಾದನು. ಅವನ ಪ್ರೇತಕಾರ್ಯಗಳನ್ನು ಮುಗಿಸಿ (ಅಂತ್ಯೇಷ್ಟಿಯನ್ನು ಮುಗಿಸಿ)

ಹಗಲು-ರಾತ್ರಿಗಳೆನ್ನದೇ ಮಗನನ್ನು ನೆನೆ-ನೆನೆದು ದುಃಖಿಸುತ್ತಲೇ ಇದ್ದನು. ಅವನ ಆತ್ಮಕ್ಕೆ ಸುಖವೆಂಬುದೇ ಇಲ್ಲವಾಯಿತು. ಪುತ್ರವ್ಯಸನದಿಂದ ರಾಜನಿಗೆ ಉಂಟಾದ ಶೋಕವನ್ನು ತಿಳಿದು ದೇವರ್ಷಿಗಳಾದ ನಾರದರು ಅಕಂಪನ ರಾಜನ ಬಳಿಗೆ ಬಂದರು. ಮಹಾಭಾಗನಾದ ಅಕಂಪನನು ದೇವರ್ಷಿಗಳಾದ ನಾರದರು ಬಂದೊಡನೆಯೇ ಅವರನ್ನು ಸ್ವಾಗತಿಸಿ ಯಥೋಚಿತವಾಗಿ ಸತ್ಕರಿಸಿ ತನ್ನ ದುಃಖಕ್ಕೆ ಕಾರಣವಾದ ಪುತ್ರಶೋಕದ ವೃತ್ತಾಂತವನ್ನು ಅವರಲ್ಲಿ ಹೇಳಿಕೊಂಡನು. ಶತ್ರುಗಳಿಗೆ ವಿಜಯವು ಲಭಿಸಿದುದು; ಯುದ್ಧದಲ್ಲಿ ತನ್ನ ಮಗನ ವಧೆಯಾದುದು–ಈ ಎಲ್ಲ ವಿಷಯಗಳನ್ನೂ ಸವಿಸ್ತರವಾಗಿ ಹೇಳಿದನು.

"ಮಹರ್ಷಿಗಳೇ! ನನ್ನ ಮಗನು ಮಹಾವೀರ್ಯವಂತನಾಗಿದ್ದನು. ಇಂದ್ರನ ಮತ್ತು ವಿಷ್ಣುವಿನ ಕಾಂತಿಗೆ ಸಮಾನವಾದ ಕಾಂತಿಯುಳ್ಳವನಾಗಿದ್ದನು. ಬಹುಸಂಖ್ಯಾತರಾದ ಶತ್ರುಗಳೊಡನೆ ಹೋರಾಡಿ ಕಟ್ಟಕಡೆಗೆ ಅವರಿಂದ ಹತನಾದನು. ಮಹಾಮುನಿಗಳೇ! ಎಲ್ಲರಿಗೂ ಮರಣ ಧರ್ಮವನ್ನು ಉಂಟುಮಾಡುವ ಮೃತ್ಯು ಎಂಬುವನು ಯಾರು? ಅವನ ವೀರ್ಯ-ಬಲ-ಪೌರುಷಗಳ ಪರಿಮಿತಿಯೇನು? ಬುದ್ಧಿವಂತರಲ್ಲಿ ಶ್ರೇಷ್ಠರಾದವರೇ! ನಾನು ಈ ವಿಷಯವನ್ನು ಯಥಾರ್ಥವಾಗಿ ತಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ."

ಯುಧಿಷ್ಠಿರ! ರಾಜನ ಮಾತನ್ನು ಕೇಳಿ ಪ್ರಭುಗಳಾದ, ವರದರಾದ ನಾರದರು ಪುತ್ರಶೋಕವನ್ನು ಹೋಗಲಾಡಿಸುವ ಮಹತ್ತ್ವಪೂರ್ಣವಾದ ಈ ಆಖ್ಯಾನವನ್ನು ಹೇಳಿದರು:

"ಪೃಥಿವೀಪತಿಯೇ! ಮಹಾಬಾಹುವೇ! ಬಹಳ ವಿಸ್ತರವಾಗಿರುವ ಈ ಆಖ್ಯಾನವನ್ನು ನನ್ನಿಂದ ಕೇಳು. ಅದು ಹೇಗೆ ನಡೆಯಿತೋ ಮತ್ತು ನಾನು ಅದನ್ನು ಹೇಗೆ ಕೇಳಿದೆನೋ ಹಾಗೆಯೇ ಹೇಳುತ್ತೇನೆ.

ಆದಿಸೃಷ್ಟಿಯ ಸಮಯದಲ್ಲಿ ಶಕ್ತಿಶಾಲಿಯಾದ, ಪಿತಾಮಹನಾದ ಬ್ರಹ್ಮನು ಪ್ರಾಣಿಗಳನ್ನು ಸೃಷ್ಟಿಸಿದನು. ಆ ಸಮಯದಲ್ಲಿ ಅವನು ಸೃಷ್ಟಿಸಿದ ಪ್ರಾಣಿಗಳ ಸಂಹಾರಕ್ಕೆ ವ್ಯವಸ್ಥೆಯಿರಲಿಲ್ಲ. ಆದುದರಿಂದ ಈ ಸಂಪೂರ್ಣ ಜಗತ್ತೂ ಪ್ರಾಣಿಗಳಿಂದ ತುಂಬಿಹೋಗಿಬಿಟ್ಟಿತು. ಮೃತ್ಯುರಹಿತವಾಗಿದ್ದ ಆ ಪ್ರಾಣಿಗಳು ವೃದ್ಧಿಗೊಳ್ಳುತ್ತಲೇ ಇದ್ದುದನ್ನು ಕಂಡು ಬ್ರಹ್ಮನು ಅವುಗಳ ಸಂಹಾರದ ಬಗೆಗೆ ಯೋಚಿಸತೊಡಗಿದನು. ಅನೇಕವಿಧವಾಗಿ ಯೋಚಿಸಿ

ದರೂ ಅವನಿಗೆ ಪ್ರಾಣಿಗಳ ಸಂಹಾರದ ಬಗೆಗೆ ಯಾವುದೊಂದು ಉಪಾಯವೂ ಹೊಳೆಯಲಿಲ್ಲ. ಆ ಸಮಯದಲ್ಲಿ ಕ್ರೋಧಪರವಶನಾಗಿದ್ದ ಬ್ರಹ್ಮನ ಶ್ರವಣ-ನೇತ್ರಗಳೇ ಮೊದಲಾದ ಇಂದ್ರಿಯಗಳಿಂದ ಅಗ್ನಿಯು ಹುಟ್ಟಿಕೊಂಡಿತು. ಆ ಅಗ್ನಿಯು ಈ ಜಗತ್ತನ್ನೇ ದಹಿಸುವ ಅಪೇಕ್ಷೆಯಿಂದ ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ ವ್ಯಾಪಿಸಿತು. ವೀರ್ಯವಂತನಾದ ಅಗ್ನಿದೇವನು ಅತಿಯಾದ ಕೋಪದ ವೇಗದಿಂದ ವಿಶ್ವವನ್ನೇ ಭಯಗೊಳಿಸುತ್ತಿರುವನೋ-ಎಂಬಂತೆ ಕಾಣುತ್ತಿದ್ದನು. ಅನಂತರ ಸ್ವರ್ಗವೂ, ಭೂಲೋಕವೂ ಯಜ್ಞೇಶ್ವರನ ಜ್ವಾಲೆಯ ಪಂಕ್ತಿಗಳಿಂದ ಸಂವೃತವಾಯಿತು. ಚರಾಚರಸಹಿತವಾದ ಸಕಲಜಗತ್ತನ್ನೂ ಅಗ್ನಿಯು ಸುಟ್ಟುಬಿಟ್ಟನು. ಸ್ಥಾವರ-ಜಂಗಮಾತ್ಮಕವಾದ ಪ್ರಾಣಿಗಳೆಲ್ಲವೂ ಸತ್ತುಹೋದುವು.

ಅನಂತರ ಜಟಾಧರನಾದ, ಸ್ಥಾಣುನಾಮಕನಾದ ನಿಶಾಚರಪತಿಯಾದ, ದುಃಖಹರನಾದ ರುದ್ರದೇವನು ಪರಮೇಷ್ಠಿಬ್ರಹ್ಮನನ್ನು ಮೊರೆಹೊಕ್ಕನು. ಪ್ರಜೆಗಳಿಗೆ ಹಿತವನ್ನುಂಟುಮಾಡುವ ಕಾರಣದಿಂದ ರುದ್ರನು ತನ್ನನ್ನು ಆಶ್ರಯಿಸಿ ಬಂದಿರುವುದನ್ನು ಕಂಡು ಮಹಾಮುನಿಯಾದ ದೇವಶ್ರೇಷ್ಠನಾದ ಬ್ರಹ್ಮನು ಪ್ರಜ್ವಲಿಸುತ್ತಿರುವನೋ ಎಂಬಂತೆ ತನ್ನ ಪ್ರಭೆಯಿಂದ ಸಕಲ ಜಗತ್ತನ್ನೂ ಬೆಳಗುತ್ತಾ ರುದ್ರನೊಡನೆ ಹೇಳಿದನು:

"ಮಗು! ನೀನು ನನ್ನ ಮನಃಸಂಕಲ್ಪದಿಂದಲೇ ಹುಟ್ಟಿರುವೆ. ಆದುದರಿಂದ ಬೇಕಾದುದನ್ನು ಪಡೆದುಕೊಳ್ಳಲು ಅರ್ಹನೂ ಆಗಿರುವೆ. ನಾನು ನಿನಗಾಗಿ ಯಾವ ಕಾರ್ಯವನ್ನು ಮಾಡಿಕೊಡಲಿ? ನಿನಗೆ ಪ್ರಿಯವಾಗುವುದೆಲ್ಲವನ್ನೂ ಮಾಡಿಕೊಡುತ್ತೇನೆ. ನಿನಗೆ ಏನು ಬೇಕಾಗಿದೆಯೆಂಬುದನ್ನು ಹೇಳು."

೫೨ನೆಯ ಅಧ್ಯಾಯವು ಮುಗಿಯಿತು.

೫೩ನೆಯ ಅಧ್ಯಾಯ

ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಶಂಕರ-ಬ್ರಹ್ಮರ ಸಂವಾದ: ಮೃತ್ಯುವಿನ ಉತ್ಪತ್ತಿ : ಅವಳಿಗೆ ಸಮಸ್ತಪ್ರಜೆಗಳ ಸಂಹಾರವನ್ನು ಮಾಡುವ ಕಾರ್ಯವನ್ನು ವಹಿಸಿಕೊಟ್ಟುದು

ರುದ್ರನು ಬ್ರಹ್ಮನೊಡನೆ ಹೇಳುತ್ತಾನೆ :

“ಪ್ರಭುವೇ! ಮಹಾಮುನಿಯೇ! ಆದಿಯಲ್ಲಿ ಪ್ರಜೆಗಳನ್ನು ಸೃಷ್ಟಿ ಮಾಡಲು ನೀನೇ ಪ್ರಯತ್ನಿಸಿದೆ. ನಾನಾವಿಧವಾದ ಪ್ರಾಣಿಗಳನ್ನು ನೀನು ಸೃಷ್ಟಿಸಿದೆ ಮತ್ತು ಅವುಗಳ ಅಭಿವೃದ್ಧಿಗೂ ಕಾರಣನಾದೆ. ನೀನು ಸೃಷ್ಟಿಸಿ ವೃದ್ಧಿಗೊಳಿಸಿದ ಪ್ರಜಾಸಮುದಾಯವನ್ನೇ ಕ್ರೋಧಪರವಶನಾಗಿ ಪುನಃ ದಹಿಸುತ್ತಿರುವೆ. ದಹಿಸಿಹೋಗುತ್ತಿರುವ ಪ್ರಾಣಿಗಳನ್ನು ನೋಡಿ ನನಗೆ ಅನುಕಂಪವುಂಟಾಯಿತು. ಭಗವನ್! ವಿಭೋ! ಪ್ರಸನ್ನನಾಗು. ಪ್ರಜೆಗಳ ವಿನಾಶಕಾರ್ಯವನ್ನು ನಿಲ್ಲಿಸು.”



“ರುದ್ರ! ಮಹಾದೇವ! ಇದು ಹೀಗಾಗಬೇಕೆಂದು ನಾನು ಇಚ್ಛಿಸಿರಲಿಲ್ಲ. ನಾನು ಸೃಷ್ಟಿಸಿರುವುದನ್ನೇ ಸಂಹಾರಮಾಡಲು ನನಗೆ ಆಸಕ್ತಿಯೂ ಇರಲಿಲ್ಲ.

ಪೃಥಿವಿಯ ಹಿತಕ್ಕಾಗಿಯೇ ಕೋಪವು ನನ್ನನ್ನು ಆವರಿಸಿತು. ಪ್ರಜೆಗಳ ಭಾರದಿಂದ ಪೀಡಿತಳಾದ ಈ ಪೃಥ್ವೀದೇವಿಯೇ ಜೀವಿಗಳನ್ನು ಸಂಹರಿಸುವಂತೆ ನನ್ನನ್ನು ಪ್ರೇರಿಸುತ್ತಲೇ ಇದ್ದಳು. ನಿಶ್ಚಯವಾಗಿಯೂ ಸತಿಯಾದ, ಸಾಧ್ವಿಯಾದ ಭೂದೇವಿಯು ಭಾರದಿಂದ ಬಹಳವಾಗಿ ಕುಸಿದುಹೋಗಿದ್ದಳು. ನಾನು ಅನೇಕಪ್ರಕಾರವಾಗಿ ಯೋಚಿಸಿದರೂ ಅಪ್ರಮೇಯವಾದ ಈ ಜಗತ್ತಿನ ಸಂಹಾರಕ್ಕೆ ಉಪಾಯವು ಹೊಳೆಯಲೇ ಇಲ್ಲ. ಅನಂತರ ನನ್ನನ್ನು ಕೋಪವು ಆವರಿಸಿತು.”

“ವಸುಧಾಧಿಪನೇ! ನೀನು ಕುಪಿತನಾಗಬೇಡ. ಈಗ ನಡೆಯುತ್ತಿರುವ ಸಂಹಾರಕ್ರಿಯೆಯನ್ನು ಕಡೆಗಾಣಿಸಲು ಪ್ರಸನ್ನನಾಗು. ಸೃಷ್ಟಿಸಿ ವೃದ್ಧಿಗೊಳಿಸಿರುವ ಸ್ಥಾವರ-ಜಂಗಮಪ್ರಾಣಿಗಳನ್ನು ವಿನಾಶಗೊಳಿಸಬೇಡ. ನಿನ್ನ ಪ್ರಸಾದದಿಂದಲೇ ಈ ಜಗತ್ತು ಭೂತ, ಭವಿಷ್ಯ ಮತ್ತು ವರ್ತಮಾನಗಳೆಂದು ಮೂರು ವಿಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಪ್ರಭುವೇ! ನಿನ್ನ ಕೋಪವು ಉದ್ದೀಪನಗೊಳ್ಳಲಾಗಿ ಆ ಕೋಪದಿಂದ ಅಗ್ನಿಯು ಹುಟ್ಟಿಕೊಂಡಿತು. ನಿನ್ನ ಕೋಪದಿಂದ ಸಮುದ್ಭೂತವಾದ ಅಗ್ನಿಯು ಪ್ರಪಂಚದಲ್ಲಿರುವ ಕಲ್ಲಿನ ರಾಶಿಗಳನ್ನೂ, ಮರ-ಗಿಡ-ಬಳ್ಳಿಗಳನ್ನೂ ದಹಿಸಿ ನದ-ನದಿಗಳನ್ನೂ ಶೋಷಿಸುತ್ತಲಿದೆ. ಸಣ್ಣ-ಸಣ್ಣ ಜಲಾಶಯಗಳನ್ನೂ ಶೋಷಿಸುತ್ತಿದೆ. ಹುಲ್ಲನ್ನೂ, ಲತೆಗಳನ್ನೂ ಸಹ ಬಿಡದೇ ದಹಿಸುತ್ತಿದೆ. ಹೆಚ್ಚೇನು ಹೇಳಲಿ : ಸ್ಥಾವರ-ಜಂಗಮಗಳೆಲ್ಲವನ್ನೂ ಅರ್ಥಾತ್ ಜಗತ್ತನ್ನೇ ದಹಿಸಿ ನಿಃಶೇಷಗೊಳಿಸುತ್ತಿದೆ.

ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತು ನಿನ್ನ ಕೋಪದಿಂದ ಸಮುದ್ಭೂತವಾದ ಅಗ್ನಿಯಿಂದ ಭಸ್ಮೀಭೂತವಾಗಿ ಹೋಯಿತು. ಭಗವಂತನೇ! ಪ್ರಸನ್ನನಾಗು. ನಿನ್ನ ಮನಸ್ಸಿನಲ್ಲಿ ರೋಷವಿರಬಾರದೆಂಬ ವರವನ್ನು ನಾನು ಕೇಳಲು ಬಂದಿರುತ್ತೇನೆ. ನೀನು ಸೃಷ್ಟಿಸಿರುವ ಸ್ಥಾವರ-ಜಂಗಮಪ್ರಾಣಿಗಳು ಯಾವುದಾದರೂ ರೀತಿಯಲ್ಲಿ ನಶಿಸಿಯೇ ಹೋಗುತ್ತವೆ. ಆದುದರಿಂದ ಅಗ್ನಿರೂಪವಾದ ನಿನ್ನ ತೇಜಸ್ಸನ್ನು ಹಿಂತೆಗೆದುಕೋ. ಈ ತೇಜಸ್ಸು, ನಿನ್ನಲ್ಲಿಯೇ ಲೀನವಾಗಿಹೋಗಲಿ. ನೀನೇ ಸೃಷ್ಟಿಸಿರುವ ಪ್ರಜಾಕೋಟಿಗೆ ಹಿತವನ್ನುಂಟು ಮಾಡುವ ಇಚ್ಛೆಯಿಂದ ಅವರನ್ನು ಕೃಪಾದೃಷ್ಟಿಯಿಂದ ನೋಡು ದೇವ! ಈ

ಎಲ್ಲ ಪ್ರಾಣಿಗಳೂ ತಮ್ಮ ಪೂರ್ವರೂಪವನ್ನು ಪಡೆಯುವಂತೆ ಮಾಡು. ಸಂತಾನಗಳೆಲ್ಲವೂ ನಾಶವಾಗಿ ಎಲ್ಲ ಪ್ರಜೆಗಳೂ ನಾಶವಾಗಿ ಹೋಗದಂತಾಗಲಿ. ಲೋಕಗಳಲ್ಲಿ ಲೋಕಕೃತನಾಗಿರುವಂತೆ (ಲೋಕಗಳ ಕರ್ತೃವಾಗಿರುವಂತೆ) ನಿನ್ನಿಂದ ನಾನು ನಿಯಮಿಸಲ್ಪಟ್ಟಿದ್ದೇನೆ. ಜಗನ್ನಾಥನೇ! ಸ್ಥಾವರ-ಜಂಗಮಾತ್ಮಕವಾದ ಈ ಜಗತ್ತು ವಿನಾಶಹೊಂದದಿರಲಿ. ಈ ಕಾರಣದಿಂದ ಪ್ರಸನ್ನಮುಖಭಾವದಿಂದಿರುವ ದೇವದೇವನಾದ ನಿನ್ನನ್ನು ಈ ರೀತಿಯಾಗಿ ಪ್ರಾರ್ಥಿಸಿಕೊಳ್ಳುತ್ತಿದ್ದೇನೆ.”

ನಾರದರು ಅಕಂಪನನಿಗೆ ಹೇಳುತ್ತಾರೆ:

“ಮಹಾರಾಜ! ಪ್ರಜೆಗಳ ಹಿತದ ಕಾರಣದಿಂದ ಮಹಾದೇವನು ಹೇಳಿದ ಮಾತುಗಳನ್ನು ಕೇಳಿ ಬ್ರಹ್ಮನು ಅಗ್ನಿಯ ರೂಪವಾಗಿ ಪ್ರಪಂಚವನ್ನು ದಹಿಸುತ್ತಿದ್ದ ತೇಜಸ್ಸನ್ನು ಅಂತರಾತ್ಮನಲ್ಲಿ ಧಾರಣೆಮಾಡಿಕೊಂಡನು. ವಿಶ್ವವಂದಿತನಾದ ಭಗವಾನ್ ಬ್ರಹ್ಮನು ಅಗ್ನಿಯನ್ನು ಉಪಸಂಹರಿಸಿಕೊಂಡು ಲೋಕದ ಪ್ರಜೆಗಳ ಸಲುವಾಗಿ ಪ್ರವೃತ್ತಿ (ಕರ್ಮ) ಮಾರ್ಗವನ್ನೂ, ನಿವೃತ್ತಿ (ಜ್ಞಾನ) ಮಾರ್ಗವನ್ನೂ ಉಪದೇಶಿಸಿದನು. ಬ್ರಹ್ಮನು ಕ್ರೋಧಾಗ್ನಿಯನ್ನು ಉಪಸಂಹಾರಮಾಡಿಕೊಂಡ ಸಮಯದಲ್ಲಿ ಮಹಾತ್ಮನಾದ ಬ್ರಹ್ಮನ ಇಂದ್ರಿಯಸಮೂಹದಿಂದ ಸ್ತ್ರೀಯೊಬ್ಬಳು ಪ್ರಾದುರ್ಭೂತಳಾದಳು. ಅವಳು ಕಪ್ಪು ಮತ್ತು ಕೆಂಪುಬಣ್ಣಗಳಿಂದ ಕೂಡಿದವಳಾಗಿದ್ದಳು. ಅವಳ ನಾಲಿಗೆ, ಮುಖ ಮತ್ತು ಕಣ್ಣುಗಳು ಹಳದಿ ಮತ್ತು ಕೆಂಪು ಬಣ್ಣಗಳಿಂದ ಕೂಡಿದ್ದುವು. ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಿದ್ದ ಕರ್ಣಕುಂಡಲಗಳನ್ನೂ ಮತ್ತು ಸುವರ್ಣಾಭರಣಗಳನ್ನೂ ಧರಿಸಿಕೊಂಡಿದ್ದಳು. ಅವಳು ಬ್ರಹ್ಮನ ಇಂದ್ರಿಯ ಗಳಿಂದ ಹೊರಬಂದು ದಕ್ಷಿಣದಿಕ್ಕಿನಲ್ಲಿ ನಿಂತು ಆ ಇಬ್ಬರು ವಿಶ್ವೇಶ್ವರರನ್ನೂ ನೋಡುತ್ತಾ ನಸುನಕ್ಕಳು. ಆ ಸಮಯದಲ್ಲಿ ಸಂಪೂರ್ಣಜಗತ್ತಿನ ಆದಿ ಮತ್ತು ಅಂತ್ಯಗಳಿಗೆ ಕಾರಣಭೂತನಾಗಿದ್ದ ಬ್ರಹ್ಮದೇವನು ಆ ಸ್ತ್ರೀಯನ್ನು ತನ್ನ ಹತ್ತಿರಕ್ಕೆ ಕರೆದು ‘ಮೃತ್ಯೋ!’- ಎಂದು ಸಂಬೋಧಿಸಿ ಹೇಳಿದನು: “ನೀನು ಈ ಸಮಸ್ತಪ್ರಜೆಗಳನ್ನೂ ಸಂಹರಿಸು. ನನ್ನಲ್ಲಿ ಅಡಗಿಸಿಕೊಂಡ ರೋಷದ ಮೂಲಕವಾಗಿ ಸಂಹಾರಬುದ್ಧಿಯಿಂದಲೇ ನೀನು ಹೊರಬಂದಿರುವೆ. ಆದುದರಿಂದ ನೀನು ಪಂಡಿತ- ಪಾಮರರೆಂಬ ಭೇದವೇ ಇಲ್ಲದೇ ಎಲ್ಲರನ್ನೂ

ನನ್ನ ಆಜ್ಞಾನುಸಾರವಾಗಿ ಸಂಹರಿಸು. ಇದರಿಂದ ನೀನು ಶ್ರೇಯಸ್ಸನ್ನು ಹೊಂದುವೆ."

ಬ್ರಹ್ಮದೇವನು ಹೀಗೆಂದು ಹೇಳಿದನಂತರ ಕಮಲಲೋಚನೆಯಾದ, ಅಬಲೆಯಾದ ಮೃತ್ಯುದೇವತೆಯು ಅತ್ಯಂತಚಿಂತಾಮಗ್ನಳಾಗಿ ಏನೂ ತೋಚದೇ ಬಿಕ್ಕಿ-ಬಿಕ್ಕಿ ಅಳಲು ಪ್ರಾರಂಭಿಸಿದಳು. ಪಿತಾಮಹನು ಅವಳ



ಕಣ್ಣೀರನ್ನು ಕೆಳಕ್ಕೆ ಬೀಳಲು ಬಿಡದೇ ಸರ್ವಪ್ರಾಣಿಗಳ ಹಿತಾರ್ಥವಾಗಿ ಎರಡು ಕೈಗಳಿಂದಲೂ ಆಂತುಕೊಂಡು ಅಳದಿರುವಂತೆ ಅವಳನ್ನು ಸಂತೈಸಿದನು."

ಐ೩ನೆಯ ಅಧ್ಯಾಯವು ಮುಗಿಯಿತು.

## ಮೃತ್ಯುವಿನ ಘೋರತಪಸ್ಸು: ಬ್ರಹ್ಮನು ಅವಳಿಗೆ ವರವನ್ನು ದಯಪಾಲಿಸಿದುದು: ನಾರದ-ಅಕಂಪನರ ಸಂವಾದದ ಉಪಸಂಹಾರ

ನಾರದರು ಅಕಂಪನರಾಜನಿಗೆ ಹೇಳುತ್ತಾರೆ:

"ಮಹಾರಾಜ! ಅನಂತರ ಮೃತ್ಯುವು ತನ್ನ ದುಃಖವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಬಗ್ಗಿರುವ ಲತೆಯೋಪಾದಿಯಲ್ಲಿ ವಿನಮ್ರಳಾಗಿ ಬ್ರಹ್ಮನಿಗೆ ಕೈಮುಗಿದು ಹೇಳಿದಳು:

"ವಾಗ್ಮಿಗಳಲ್ಲಿ ಶ್ರೇಷ್ಠನಾದ ಪ್ರಜಾಪತಿಯೇ! ನೀನು ನನ್ನನ್ನು ಇಂತಹ ಸ್ತ್ರೀಯನ್ನಾಗಿ ಏಕೆ ಸೃಷ್ಟಿಸಿದೆ? ನಾನೂ ತಿಳಿದೂ-ತಿಳಿದೂ ಕ್ರೂರವೂ, ಪ್ರಾಣಿಗಳಿಗೆ ಅಹಿತವೂ ಆದ ಇಂತಹ ಕರ್ಮವನ್ನು ಹೇಗೆ ಮಾಡಲಿ? ಭಗವನ್! ಇದನ್ನು ನಾನು ಪಾಪಕಾರ್ಯವೆಂದೂ, ಅಧರ್ಮಕಾರ್ಯ ವೆಂದೂ ಭಾವಿಸಿ ಭಯಪಡುತ್ತಿದ್ದೇನೆ. ಪ್ರಸನ್ನನಾಗು, ವಿಶ್ವೇಶ್ವರ! ನಾನು ಯಾವಾಗ ಲೋಕದಲ್ಲಿರುವ ಪ್ರಿಯರಾದ ಮಕ್ಕಳನ್ನೂ, ಸ್ನೇಹಿತರನ್ನೂ, ಸೋದರರರನ್ನೂ, ತಾಯಂದಿರನ್ನೂ, ತಂದೆಗಳನ್ನೂ, ಗಂಡಂದಿರನ್ನೂ ನಿನ್ನ ಆಜ್ಞೆಯಂತೆ ಸಂಹರಿಸುತ್ತೇನೆಯೋ ಆಗ ಅವರೆಲ್ಲರೂ ( ಬಂಧುಗಳೆಲ್ಲರೂ ) ನನ್ನ ವಿಷಯದಲ್ಲಿ ಕೇಡನ್ನೇ ಬಯಸುತ್ತಾರೆ. ಆದುದರಿಂದ ಬಂಧುಗಳು ಮೃತರಾಗಲು ಮೃತರ ಸಂಬಂಧಿಗಳಿಂದ ನಾನು ಭಯಪಡುತ್ತೇನೆ. ತಮಗೆ ಪ್ರಿಯರಾದವರನ್ನು ಕಳೆದುಕೊಂಡು ದೀನರಾಗಿ ಅಳುತ್ತಿರುವವರ ಕಣ್ಣುಗಳಿಂದ ಹರಿಯುವ ಕಂಬನಿಗಳಿಗೆ ನಾನು ಭಯಪಡುತ್ತೇನೆ. ಆದುದರಿಂದಲೇ ನಿನ್ನನ್ನು ಶರಣುಹೋಗಲು ಬಂದಿದ್ದೇನೆ. ದೇವದೇವ! ಸುರಶ್ರೇಷ್ಠನೇ! ಲೋಕ ಪಿತಾಮಹನೇ! ನಾನು ನನ್ನ ಶರೀರವನ್ನೂ ಮತ್ತು ತಲೆಯನ್ನೂ ಬಾಗಿಸಿ ಕೈಜೋಡಿಸಿ ವಿನಯಭಾವದಿಂದ ನಿನಗೆ ಶರಣಾಗತಳಾಗಿ ಇದೊಂದು ಕೋರಿಕೆಯನ್ನು ನಿನ್ನಿಂದ ಪೂರ್ತಿಮಾಡಿಕೊಳ್ಳಬೇಕೆಂದಿರುತ್ತೇನೆ. ಅದೇ ನೆಂದರೆ : ನಾನು ಯಾವುದೇ ಕಾರಣದಿಂದಲೂ ಯಮನ ಅರಮನೆಗೆ ಹೋಗಲಾರೆನು. ಈ ನನ್ನ ಪ್ರಾರ್ಥನೆಯನ್ನು ದಯಮಾಡಿ ನಡೆಸಿಕೊಡು. ಜನೇಶ್ವರನೇ! ನಿನ್ನ ಅನುಗ್ರಹವನ್ನು ಪಡೆದುಕೊಂಡು ತಪಸ್ಸನ್ನು ಮಾಡಲು ನಿಶ್ಚಯಿಸಿದ್ದೇನೆ. ಪ್ರಭುವೇ! ಈ ವರವನ್ನು ನನಗೆ ನೀನು ದಯಪಾಲಿಸು. ನಿನ್ನ

ಅನುಜ್ಞೆಯನ್ನು ಪಡೆದು ತಪಸ್ಸುಮಾಡಲು ಉತ್ತಮೋತ್ತಮವಾದ ಧೇನುಕಾಶ್ರಮಕ್ಕೆ ಹೋಗುತ್ತೇನೆ. ಅಲ್ಲಿ ನಿನ್ನ ಆರಾಧನೆಯನ್ನೇ ಮಾಡಿಕೊಂಡಿದ್ದು ತೀವ್ರವಾದ ತಪಸ್ಸನ್ನು ಮಾಡುತ್ತೇನೆ. ಆದರೆ ದೇವೇಶ! ಗಟ್ಟಿಯಾಗಿ ರೋದನಮಾಡುತ್ತಿರುವ ಪ್ರಾಣಿಗಳ ಪ್ರಿಯವಾದ ಪ್ರಾಣಗಳನ್ನು ಅಪಹರಿಸಲು ಮಾತ್ರ ನನಗೆ ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ. ನೀನು ದಯಮಾಡಿ ನನ್ನನ್ನು ಈ ಅಧರ್ಮದ ಕಾರ್ಯದಿಂದ ವಿಮುಕ್ತಳನ್ನಾಗಿ ಮಾಡು."

"ಮೃತ್ಯೋ! ಪ್ರಜೆಗಳ ಸಂಹಾರಕ್ಕೆಂದೇ ಸಂಕಲ್ಪಿಸಿ ನಿನ್ನನ್ನು ನಾನು ಸೃಷ್ಟಿಸಿದ್ದೇನೆ. ಆದುದರಿಂದ ಈಗಲೇ ಹೊರಡು. ಎಲ್ಲ ಪ್ರಜೆಗಳನ್ನೂ ಸಂಹರಿಸು. ನೀನು ಹುಟ್ಟಿರುವ ಕಾರಣವೇ ಅದಾಗಿರುವಾಗ ಧರ್ಮಾಧರ್ಮ ಗಳ ಬಗೆಗೆ ವಿಚಾರಮಾಡುವ ಕಾರಣವಿಲ್ಲ. ಇದು ಹೀಗೆಯೇ ನಡೆಯಬೇಕು. ಇದರಲ್ಲಿ ಯಾವ ವಿಧವಾದ ಪರಿವರ್ತನೆಯನ್ನು ಮಾಡಲೂ ಸಾಧ್ಯವಾಗುವುದಿಲ್ಲ. ನಿನ್ನ ಕರ್ತವ್ಯವೇ ಇದಾಗಿರುವಾಗ ಲೋಕದಲ್ಲಿ ನೀನು ಯಾರ ನಿಂದೆಗೂ ಪಾತ್ರಳಾಗುವುದಿಲ್ಲ. ನನ್ನ ಮಾತಿನಂತೆ ನಡೆದುಕೊ."

ನಾರದರು ರಾಜನಿಗೆ ಹೇಳುತ್ತಾರೆ:

"ಬ್ರಹ್ಮನು ಹೀಗೆ ಹೇಳಿದನಂತರ ಮೃತ್ಯುವು ಪರಮಪ್ರೀತಳಾಗಿ, ಬ್ರಹ್ಮನಿಗೆ ಅಭಿಮುಖಳಾಗಿ ಬದ್ಧಾಂಜಲಿಯಾಗಿ ನಿಂತುಕೊಂಡಳು. ಆದರೆ ಪ್ರಜೆಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಅವಳು ಪ್ರಜೆಗಳನ್ನು ಸಂಹರಿಸುವ ಮನಸ್ಸನ್ನು ಮಾಡಲಿಲ್ಲ.

ಪ್ರಜೆಗಳ ಈಶ್ವರರಿಗೂ ಈಶ್ವರನಾದ, ದೇವದೇವನಾದ ಬ್ರಹ್ಮನು ಆ ಸಮಯದಲ್ಲಿ ಸುಮ್ಮನಿದ್ದುಬಿಟ್ಟನು. ಸ್ವಲ್ಪಹೊತ್ತಿನಲ್ಲಿಯೇ ಪ್ರಜಾಪತಿಗೆ ಮನಃಪ್ರಸನ್ನತೆಯೂ ಉಂಟಾಯಿತು. ದೇವೇಶ್ವರನಾದ ಬ್ರಹ್ಮನು ಒಮ್ಮೆ ಲೋಕಗಳ ಕಡೆಗೆ ತಿರುಗಿ ನಸುನಕ್ಕನು. ಕ್ರೋಧಶೂನ್ಯನಾಗಿದ್ದ ಬ್ರಹ್ಮನು ಒಮ್ಮೆ ಲೋಕಗಳನ್ನು ನೋಡಿದೊಡನೆಯೇ ಅವುಗಳೆಲ್ಲವೂ ಯಥಾಪೂರ್ವಸ್ಥಿತಿಗೆ ಬಂದುವು. ಅಪರಾಜಿತನಾದ ಬ್ರಹ್ಮನಲ್ಲಿದ್ದ ರೋಷವು ಹೊರಟು ಹೋಗಲಾಗಿ, ಧೀಮಂತನಾದ ಬ್ರಹ್ಮನ ಸಮೀಪದಲ್ಲಿಯೇ ನಿಂತಿದ್ದ ಆ

ಕನ್ಯೆಯೂ ಹೊರಟುಹೋದಳು. ಆ ಸಮಯದಲ್ಲಿ ಪ್ರಜೆಗಳನ್ನು ಸಂಹಾರಮಾಡುವ ವಿಷಯದಲ್ಲಿ ಬ್ರಹ್ಮನಿಗೆ ಯಾವ ವಿಧವಾದ ಮಾತನ್ನೂ ಕೊಡದೇ ಬಹಳ ಅವಸರದಿಂದಲೇ ಮೃತ್ಯುವು ಧೇನುಕಾಶ್ರಮಕ್ಕೆ ಹೊರಟು ಹೋದಳು. ಅಲ್ಲಿ ಅವಳು ಶ್ರೇಷ್ಠವಾದ ಮತ್ತು ತೀವ್ರತರವಾದ ವ್ರತವನ್ನು ಪ್ರಾರಂಭಿಸಿದಳು. ಪ್ರಜೆಗಳ ಹಿತೈಷಿಣಿಯಾದ ಮೃತ್ಯುವು ಇಂದ್ರಿಯಗಳನ್ನು ಅವುಗಳಿಗೆ ಪ್ರಿಯವಾದ ವಸ್ತುಗಳಿಂದ ಹಿಂದಿರುಗಿಸಿ, ಒಂದೇ ಕಾಲಿನಲ್ಲಿ ನಿಂತು ಇಪ್ಪತ್ತೊಂದು ಪದ್ಮವರ್ಷಗಳವರೆಗೆ ತಪಸ್ಸುಮಾಡುತ್ತಿದ್ದಳು. ಪುನಃ ಒಂದೇ ಕಾಲಿನಲ್ಲಿಯೇ ನಿಂತು ಇಪ್ಪತ್ತೊಂದು ಪದ್ಮವರ್ಷಗಳವರೆಗೆ ತಪಸ್ಸುಮಾಡಿದಳು. ಅನಂತರ ಮೃತ್ಯುವು ಹತ್ತು ಸಾವಿರ ಪದ್ಮವರ್ಷಗಳವರೆಗೆ ಮೃಗಗಳೊಡನೆಯೇ ಸಂಚರಿಸುತ್ತಾ ಇದ್ದುಬಿಟ್ಟಳು. ಪುಣ್ಯವತಿಯಾದ, ಶೀತಲವೂ, ಶುದ್ಧವೂ ಆದ ನೀರಿನಿಂದ ಕೂಡಿದ್ದ ನಂದಾನದಿಯ ಸಮೀಪಕ್ಕೆ ಹೋಗಿ ಪುನಃ ಎಂಟು ಸಾವಿರ ವರ್ಷಗಳನ್ನು ನೀರಿನಲ್ಲಿಯೇ ಕಳೆದುಬಿಟ್ಟಳು. ಈ ರೀತಿಯಾಗಿ ನಂದಾನದಿಯಲ್ಲಿ ನಿಯಮಪೂರ್ವಕವಾಗಿ ತಪಸ್ಸುಮಾಡು ತ್ತಿದ್ದು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ಅನಂತರ ಅಲ್ಲಿಂದ ಪುಣ್ಯದಾಯಿನಿಯಾದ ಕೌಶಿಕೀನದಿಯ ತೀರಕ್ಕೆ ಹೋದಳು. ಅಲ್ಲಿಯೂ ಸಹ ಅನೇಕ ಬಗೆಯ ನಿಯಮಗಳನ್ನು ಕೈಗೊಂಡು ವಾಯು-ಜಲಾಹಾರಳಾಗಿ ಕಠೋರವಾದ ತಪಶ್ಚರಣೆಮಾಡುತ್ತಿದ್ದಳು. ಪುಣ್ಯವತಿಯಾದ ಆ ಕನ್ಯೆಯು ಅನಂತರ ಪಂಚಗಂಗೆಗಳಲ್ಲಿ ಮತ್ತು ವೇತಸವನಗಳಲ್ಲಿ ವಿಶೇಷನಿಯಮ ಗಳುಳ್ಳ ತಪಸ್ಸನ್ನು ಮಾಡುತ್ತಾ ತನ್ನ ದೇಹವನ್ನು ಬಹಳವಾಗಿ ಕೃಶಗೊಳಿಸಿದಳು. ಅನಂತರ ಮೃತ್ಯುವು ಗಂಗಾನದಿಯ ಬಳಿಗೆ ಹೋಗಿ ಅಲ್ಲಿಯೂ ಸ್ವಲ್ಪಕಾಲವಿದ್ದು, ಅಲ್ಲಿಂದ ಮುಂದೆ ವಿಖ್ಯಾತವಾದ ಮಹಾಮೇರುಶಿಖರಕ್ಕೆ ಹೋಗಿ ಅಲ್ಲಿ ಪ್ರಾಣಾಯಾಮಪರಾಯಣಳಾಗಿ ಕಲ್ಲಿನಂತೆಯೇ ನಿಶ್ಚೇಷ್ಟಳಾಗಿ ಬಹಳ ಕಾಲ ಕುಳಿತಿದ್ದಳು. ಅಲ್ಲಿಂದ ಮುಂದೆ, ಹಿಂದೆ ದೇವತೆಗಳು ಯಾಗಮಾಡಿದ್ದ ಹಿಮವತ್ಪರ್ವತದ ಮೇಲ್ಭಾಗದಲ್ಲಿ ನಿಖರ್ವವರ್ಷಗಳ ಪರ್ಯಂತವಾಗಿ ಕೇವಲ ಅಂಗುಷ್ಠವನ್ನೇ ಊರೆಯನ್ನಾಗಿ ಕೊಟ್ಟುಕೊಂಡು ತಪಸ್ಸುಮಾಡುತ್ತಿದ್ದಳು. ಅಲ್ಲಿಂದ ಮುಂದೆ ಪುಷ್ಕರಗಳಲ್ಲಿ, ಗೋಕರ್ಣದಲ್ಲಿ, ನೈಮಿಷಾರಣ್ಯದಲ್ಲಿ, ಮಲಯಪರ್ವತದಲ್ಲಿ, ಮನಸ್ಸಿಗೆ ಪ್ರಿಯವಾದ

ನಿಯಮಗಳಿಂದ ಇರುತ್ತಿದ್ದು ತನ್ನ ದೇಹವನ್ನು ಮತ್ತೂ ಕ್ಷೀಣಿಸಿದಳು. ಅವಳು ಪಿತಾಮಹನನ್ನು ಬಿಟ್ಟು ಬೇರೆ ಯಾವ ದೇವತೆಯನ್ನೂ ನೆನೆಯುತ್ತಲೂ ಇರಲಿಲ್ಲ. ಬ್ರಹ್ಮನಲ್ಲಿಯೇ ಅನನ್ಯಭಕ್ತಿಯಿಂದಿದ್ದಳು. ಸತತವಾದ ಧರ್ಮಾಚರಣೆಗಳಿಂದ ಬ್ರಹ್ಮನನ್ನೂ ಸಂತೋಷಗೊಳಿಸಿದಳು. ಲೋಕಪ್ರಭುವಾದ, ಅವ್ಯಯನಾದ ಬ್ರಹ್ಮನು ಅವಳು ಮಾಡಿದ ತಪಸ್ಸಿನಿಂದ ಪ್ರೀತನಾಗಿ ಪ್ರಸನ್ನವಾಗಿಯೂ, ಸೌಮ್ಯವಾಗಿಯೂ ಇದ್ದ ಮನಸ್ಸಿನಿಂದ ಕೂಡಿದವನಾಗಿ ಮೃತ್ಯುವಿನ ಬಳಿಗೆ ಬಂದು ಹೇಳಿದನು: "ಮೃತ್ಯುವೇ! ಯಾವ ಕಾರಣದಿಂದ ನೀನು ಅತ್ಯಂತಕಠೋರವಾದ ತಪಸ್ಸುಗಳನ್ನು ಆಚರಿಸುತ್ತಿರುವೆ?"

ಅದಕ್ಕೆ ಉತ್ತರವಾಗಿ ಮೃತ್ಯುದೇವತೆಯು ಬ್ರಹ್ಮನಿಗೆ ಹೇಳಿದಳು :

**ನಾಹಂ ಹನ್ಯಾಂ ಪ್ರಜಾ ದೇವ ಸ್ವಸ್ಥಾಶ್ಚಾಕ್ರೋಶತೀಸ್ತಥಾ ।**
**ಏತದಿಚ್ಛಾಮಿ ಸರ್ವೇಶ ತ್ವತ್ತೋ ವರಮಹಂ ಪ್ರಭೋ ॥೩೦॥**

"ಪ್ರಭುವೇ! ಅಳುತ್ತಿರುವ ಮತ್ತು ಚೀರುತ್ತಿರುವ ಸ್ವಸ್ಥರಾದ ಪ್ರಜೆಗಳನ್ನು ನಾನು ಸಂಹರಿಸುವುದಿಲ್ಲ. ಸರ್ವೇಶನೇ! ಈ ವರವನ್ನು ನಾನು ನಿನ್ನಿಂದ ಪಡೆದುಕೊಳ್ಳಲು ಇಚ್ಛಿಸಿದ್ದೇನೆ. ನನ್ನಿಂದ ಧರ್ಮವಿರುದ್ಧವಾದ ಕಾರ್ಯವು ನಡೆಯಬಹುದೆಂದು ಬಹಳವಾಗಿ ನಾನು ಭಯಪಟ್ಟಿದ್ದೇನೆ. ಆದುದರಿಂದಲೇ ನಾನು ಇಷ್ಟು ವರ್ಷಗಳ ಕಾಲ ತಪಸ್ಸಿನಲ್ಲಿಯೇ ನಿರತಳಾಗಿದ್ದೆನು. ಅವ್ಯಯನೇ! ಮಹಾಭಾಗನೇ! ಭೀತಳಾಗಿರುವ ನನಗೆ ಅಭಯಪ್ರದಾನ ಮಾಡು. ನಾನು ಆರ್ತಳಾಗಿದ್ದೇನೆ. ಯಾವ ವಿಧವಾದ ಪಾಪಗಳನ್ನೂ ಮಾಡಿರುವುದಿಲ್ಲ. ಅಬಲೆಯಾಗಿದ್ದೇನೆ. ನಾನು ನಿನ್ನನ್ನು ಕೈಜೋಡಿಸಿ ಯಾಚಿಸುತ್ತಿದ್ದೇನೆ. ನೀನೇ ನನಗೆ ಶರಣ್ಯನಾಗು."

ಆರ್ತಳ ಪ್ರಾರ್ಥನೆಯನ್ನು ಕೇಳಿ ಭೂತ-ಭವಿಷ್ಯದ್ವರ್ತಮಾನಗಳನ್ನು ಬಲ್ಲವನಾಗಿದ್ದ ಬ್ರಹ್ಮನು ಹೇಳಿದನು:

**ಅಧರ್ಮೋ ನಾಸ್ತಿ ತೇ ಮೃತ್ಯೋ ಸಂಹರನ್ತ್ಯಾ ಇಮಾಃ ಪ್ರಜಾಃ ।**
**ಮಯಾ ಚೋಕ್ತಂ ಮೃಷಾ ಭದ್ರೇ ಭವಿತಾ ನ ಕಥಂಚನ ॥೩೧॥**

"ಭದ್ರೇ! ಪ್ರಜೆಗಳನ್ನು ಸಂಹರಿಸುವುದು ನಿನಗೆ ಅಧರ್ಮವೆಂದಿಗೂ

ಆಗುವುದಿಲ್ಲ. ನಾನು ಹೇಳಿದುದು ಯಾವುದೇ ಕಾರಣದಿಂದಲೂ ಸುಳ್ಳಾಗಲು ಸಾಧ್ಯವಿಲ್ಲ.

ಆದುದರಿಂದ ಕಲ್ಯಾಣಿ! ಉದ್ಭಿಜ್ಜ, ಸ್ವೇದಜ, ಅಂಡಜ, ಜರಾಯುಜಗಳೆಂಬ ನಾಲ್ಕು ವಿಧವಾದ ಪ್ರಾಣಿಗಳನ್ನೂ ನೀನು ಸಂಹರಿಸು. ಸನಾತನ ಧರ್ಮವು ನಿನ್ನನ್ನು ಸರ್ವಪ್ರಕಾರದಿಂದಲೂ ಪಾವನಗೊಳಿಸುತ್ತದೆ. ಲೋಕಪಾಲಕನಾದ ಯಮನೂ, ಅನೇಕವಿಧವಾದ ವ್ಯಾಧಿಗಳೂ, ನಾನೂ ಮತ್ತು ದೇವತೆಗಳೂ ನಿನಗೆ ಸಹಾಯಕರಾಗಿ ಬರುತ್ತೇವೆ. ಪಾಪದಿಂದ ವಿಮುಕ್ತಳಾಗಿ, ನಿರ್ಮಲವಾದ ಸ್ವರೂಪದಿಂದ ಖ್ಯಾತಿಯನ್ನು ಪಡೆಯುವಂತೆ ನಾನು ನಿನಗೆ ಪುನಃ ವರದಾನಮಾಡುತ್ತೇನೆ."

ಬ್ರಹ್ಮನು ಹೀಗೆಂದು ಹೇಳಿದನಂತರ ಮೃತ್ಯುವು ಕೈಜೋಡಿಸಿ ತಲೆಯನ್ನು ಬಗ್ಗಿಸಿ ಬ್ರಹ್ಮನನ್ನು ಪ್ರಸನ್ನಗೊಳಿಸಿ, ಬದ್ಧಾಂಜಲಿಯಾಗಿ ಪುನಃ ಈ ಮಾತುಗಳನ್ನು ಹೇಳಿದಳು: "ಪ್ರಭುವೇ! ನಾನು ಮಾಡಬೇಕಾದ ಕರ್ತವ್ಯವು ಇದೇ ಆಗಿದ್ದರೆ–ಈ ಕಾರ್ಯವನ್ನು ಮಾಡದಿರಲು ಸಾಧ್ಯವೇ ಆಗದಿದ್ದರೆ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತೇನೆ. ಆದರೆ ಈ ವಿಷಯದಲ್ಲಿ ಇನ್ನೂ ಕೆಲವು ಮಾತುಗಳನ್ನು ಆಡುವುದಿದೆ. ದಯಮಾಡಿ ಕೇಳು. ಲೋಭ, ಕ್ರೋಧ, ಅಸೂಯೆ, ಈರ್ಷ್ಯೆ, ದ್ರೋಹ, ಮೋಹ, ನಿರ್ಲಜ್ಜೆ ಮತ್ತು ಒಬ್ಬನು ಮತ್ತೊಬ್ಬನ ವಿಷಯದಲ್ಲಾಡುವ ಕಠಿನೋಕ್ತಿ–ಈ ವಿಭಿನ್ನ ದೋಷಗಳೂ ದೇಹಿಗಳ ದೇಹಗಳನ್ನು ನಾನಾರೂಪಗಳಲ್ಲಿ ಭೇದಿಸಲಿ."

"ಮೃತ್ಯೋ! ಅದು ಹಾಗೆಯೇ ಆಗುತ್ತದೆ. ನೀನು ಉತ್ತಮರೀತಿಯಲ್ಲಿ ಪ್ರಾಣಿಗಳ ಸಂಹಾರವನ್ನು ಮಾಡು. ಅದರಿಂದ ನೀನು ಅಧರ್ಮಕಾರ್ಯವನ್ನು ಮಾಡಿದಂತಾಗುವುದಿಲ್ಲ. ಶುಭಸ್ವರೂಪಳೇ! ನಾನೂ ಸಹ ನಿನ್ನ ವಿಷಯದಲ್ಲಿ ಯಾವ ವಿಧವಾದ ಅನಿಷ್ಟವನ್ನೂ ಚಿಂತಿಸುವುದಿಲ್ಲ.

ನನ್ನ ಅಂಜಲಿಯಲ್ಲಿ ಯಾವ ನಿನ್ನ ಅಶ್ರುಬಿಂದುಗಳು ಬಿದ್ದುವೋ ಅವುಗಳೇ ಪ್ರಾಣಿಗಳ ಶರೀರದಲ್ಲಿಯೇ ಹುಟ್ಟಿಕೊಳ್ಳುವ ವ್ಯಾಧಿಗಳು. ಆಯುಷ್ಯವು ಕಳೆದನಂತರ ಮನುಷ್ಯರನ್ನು ಆ ವ್ಯಾಧಿಗಳೇ ಸಂಹಾರ ಮಾಡುತ್ತವೆ. ಆದುದರಿಂದ ನಿನಗೆ ಯಾವ ವಿಧವಾದ ಅಧರ್ಮದ ಫಲವೂ

ಅಂಟಿಕೊಳ್ಳುವುದಿಲ್ಲ. ಭಯಪಡಬೇಡ. ನಿಶ್ಚಯವಾಗಿ ಹೇಳುತ್ತೇನೆ. ನಿನ್ನನ್ನು ಯಾವ ಪಾಪವೂ ಅಂಟುವುದಿಲ್ಲ. ನೀನು ಧರ್ಮಸ್ವರೂಪಳೇ ಆಗಿರುವೆ. ಧರ್ಮಕ್ಕೆ ಸ್ವಾಮಿನಿಯೂ ಆಗಿರುವೆ. ಆದುದರಿಂದ ನೀನು ಯಾವಾಗಲೂ ಧರ್ಮದಲ್ಲಿಯೇ ಇರು. ಧರ್ಮೋಪೇತವಾದ ಜೀವನವನ್ನೇ ನಡೆಸುವ ಧರಿತ್ರಿ (ಭೂಮಿ)ಯಾಗಿದ್ದುಕೊಂಡು ಈ ಎಲ್ಲ ಪ್ರಾಣಿಗಳನ್ನೂ ಸರ್ವಪ್ರಕಾರ ಗಳಿಂದಲೂ ನಿಯಂತ್ರಿಸು.

ಕಾಮ-ಕ್ರೋಧಗಳನ್ನು ಪರಿತ್ಯಜಿಸಿ ನೀನು ಇಲ್ಲಿರುವ ಸರ್ವಪ್ರಾಣಿಗಳ ಜೀವಗಳನ್ನೂ ಸಂಹರಿಸು. ಹೀಗೆ ಮಾಡುವುದರಿಂದ ನಿನಗೆ ಅಕ್ಷಯವಾದ ಧರ್ಮವೇ ಲಭಿಸುತ್ತದೆ. ಮಿಥ್ಯಾಚಾರಿಗಳಾದವರನ್ನು ಅವರಲ್ಲಿರುವ ಅಧರ್ಮವೇ ಸಂಹರಿಸುತ್ತದೆ. ಧರ್ಮಾಚರಣೆಯ ಮೂಲಕವಾಗಿ ನಿನ್ನ ಆತ್ಮವನ್ನು ನೀನೇ ಶುದ್ಧಗೊಳಿಸು. ಅಸತ್ಯಕ್ಕೆ ಅಥವಾ ಅಧರ್ಮಕ್ಕೆ ಆಶ್ರಯನೀಡುವವನು ತನ್ನನ್ನು ತಾನೇ ಪಾಪದ ಕೆಸರಿನಲ್ಲಿ ಅದ್ದಿಕೊಳ್ಳುತ್ತಾನೆ. ಆದುದರಿಂದ ನೀನು ನಿನ್ನ ಮನಸ್ಸಿನಲ್ಲಿ ಹುಟ್ಟುವ ಕಾಮ-ಕ್ರೋಧಗಳನ್ನು ಪರಿತ್ಯಜಿಸಿ ಸಮಸ್ತಜೀವರನ್ನೂ ಸಂಹರಿಸು."

ನಾರದರು ಅಕಂಪನರಾಜನಿಗೆ ಹೇಳುತ್ತಾರೆ:

"ಮಹಾರಾಜ! ಮೃತ್ಯುನಾಮಕಳಾದ ಆ ನಾರಿಯು ಬ್ರಹ್ಮನ ಉಪದೇಶವನ್ನು ಪಡೆದು ಮತ್ತು ತಾನು ಆ ಕಾರ್ಯವನ್ನು ಮಾಡಲು ಒಲ್ಲೆನೆಂದರೆ ಬ್ರಹ್ಮನು ಶಾಪವನ್ನು ಕೊಟ್ಟಾನೆಂದೂ ಹೆದರಿದಳು. ಕಟ್ಟಕಡೆಗೆ ಅನ್ಯಥಾ ವಿಧಿಯಿಲ್ಲದೇ–'ಬಾಢಂ' 'ಆಗಲಿ'–ಎಂದೇ ಹೇಳಿದಳು. ಅವಳೇ ಈಗ ಈ ಸಂಹಾರಕಾರ್ಯವನ್ನು ನಿರ್ವಹಿಸುತ್ತಿದ್ದಾಳೆ. ಪ್ರಾಣಿಗಳ ಅಂತ್ಯಕಾಲದಲ್ಲಿ ಈ ಮೃತ್ಯುವು ಕಾಮ-ಕ್ರೋಧಗಳನ್ನು ಪರಿತ್ಯಜಿಸಿ ಯಾವ ವಿಧವಾದ ಆಸಕ್ತಿಯೂ ಇಲ್ಲದೇ ಅವುಗಳ ಪ್ರಾಣವನ್ನು ಅಪಹರಿಸುತ್ತಾಳೆ. ಅದೇ ಪ್ರಾಣಿಗಳ ಮೃತ್ಯುವಾಗಿದೆ. ಆ ಮೃತ್ಯುವಿನಿಂದ (ಅವಳ ಕಣ್ಣೀರಿನಿಂದ) ಹುಟ್ಟಿದುವುಗಳೇ ಈ ವ್ಯಾಧಿಗಳು. ವ್ಯಾಧಿ ಎಂಬುದೇ ರೋಗ. ಪ್ರಾಣಿಗಳನ್ನು ರುಗ್ಣಗೊಳಿಸುವುದೇ (ಅವನ ಸ್ವಾಸ್ಥ್ಯಕ್ಕೆ ಭಂಗತರುವುದೇ) ರೋಗ. ಆಯುಷ್ಯವು ಕಳೆದುಹೋದನಂತರ ಎಲ್ಲರಿಗೂ ಮೃತ್ಯುವು ಇದೇ ರೀತಿಯಲ್ಲಿ ಪ್ರಾಪ್ತವಾಗುತ್ತದೆ. ಆದುದರಿಂದ ನೀನು ವ್ಯರ್ಥವಾಗಿ ದುಃಖಿಸಬೇಡ. ನೀನು

ದುಃಖಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಆಯುಷ್ಯವು ಮುಗಿದ ನಂತರ ಎಲ್ಲ ಇಂದ್ರಿಯಗಳೂ ಪ್ರಾಣಿಗಳೊಡನೆಯೇ ಪರಲೋಕಗಳಿಗೆ ಹೋಗಿ ಅಲ್ಲಿ ಸ್ವಲ್ಪಕಾಲವಿರುತ್ತವೆ. ಪುನಃ ಆ ಇಂದ್ರಿಯಗಳೊಡನೆಯೇ ಈ ಲೋಕಕ್ಕೆ ಬಂದುಬಿಡುತ್ತವೆ. ಇದೇ ರೀತಿಯಲ್ಲಿ ಎಲ್ಲ ಪ್ರಾಣಿಗಳೂ ಅಲ್ಲಿಗೆ ಹೋಗಿ ಅಲ್ಲಿ ದೇವತಾಸ್ವರೂಪದಲ್ಲಿ ಸ್ವಲ್ಪಕಾಲವಿದ್ದು ಪುನಃ ಈ ಲೋಕಕ್ಕೆ ಬರುತ್ತವೆ. ದೇವತೆಗಳೂ ಸಹ ಮನುಷ್ಯರಂತೆಯೇ ತಮ್ಮ ಪುಣ್ಯದ ಫಲವು ಮುಗಿದನಂತರ ಪುನಃ ಇಲ್ಲಿಗೆ ಬರುತ್ತಾರೆ. ಭಯಂಕರವಾಗಿ ಶಬ್ದಮಾಡುವ, ಮಹಾಬಲಿಷ್ಠನಾದ, ಭಯಂಕರನಾದ, ಮಹಾತೇಜಸ್ವಿಯಾದ ಪ್ರಾಣ ವಾಯುವು ಪ್ರಾಣಿಗಳ ಶರೀರವನ್ನು ಭೇದಿಸಿಕೊಂಡು ಹೊರಬರುತ್ತಾನೆ. ಆದರೆ ಅವನು ಆತ್ಮನನ್ನು ಏನೂ ಮಾಡುವುದಿಲ್ಲ. ಏಕೆಂದರೆ: ಆತ್ಮನು ಅಥವಾ ಚೇತನನು ಸರ್ವವ್ಯಾಪಿಯಾದವನು. ಉಗ್ರಪ್ರಭಾವವಿರುವವನು. ಅನಂತ ವಾದ ತೇಜಸ್ಸಿನಿಂದ ಕೂಡಿರತಕ್ಕವನು. ಅವನಿಗೆ ಇರುವಿಕೆಯಾಗಲೀ, ಹೋಗಿ ಬರುವಿಕೆಯಾಗಲೀ ಯಾವುದೂ ಯಾವಾಗಲೂ ಇರುವುದಿಲ್ಲ. ಮಹಾರಾಜ! ಎಲ್ಲ ದೇವತೆಗಳೂ 'ಮರ್ತ್ಯರು' ಎಂಬ ಸಂಜ್ಞೆಯನ್ನು ಹೊಂದಿಯೇ ಇದ್ದಾರೆ. (ಮರಣಧರ್ಮದವರೇ ಆಗಿದ್ದಾರೆ.) ಆದುದರಿಂದ ನಿನ್ನ ಪುತ್ರನು ಮರಣಹೊಂದಿದುದಕ್ಕಾಗಿ ಶೋಕಿಸಬೇಡ. ನಿನ್ನ ಮಗನು ಸ್ವರ್ಗಕ್ಕೆ ಹೋಗಿರುತ್ತಾನೆ. ಅಲ್ಲಿ ನಿತ್ಯವೂ ರಮ್ಯವಾದ ವೀರರ ಪುಣ್ಯಲೋಕ ಗಳಲ್ಲಿ ಇರುತ್ತಾ ಆನಂದಿಸುತ್ತಿದ್ದಾನೆ.

ನಿನ್ನ ಮಗನು ಇಲ್ಲಿಯ ದುಃಖದಿಂದ ಪಾರಾಗಿ ಪುಣ್ಯಕರ್ಮಮಾಡಿದ ಪುಣ್ಯಾತ್ಮರೊಡನೆ ಸೇರಿಕೊಂಡಿರುತ್ತಾನೆ. ಈ ಮೃತ್ಯುವು ಪ್ರಜೆಗಳಿಗೆ ಭಗವಂತನಿಂದಲೇ ದತ್ತವಾಗಿದೆ. ಕಾಲವು ಪ್ರಾಪ್ತವಾದೊಡನೆಯೇ ಮೃತ್ಯುವು ಯಥೋಚಿತವಾದ ರೀತಿಯಲ್ಲಿ ಪ್ರಜೆಗಳನ್ನು ಸಂಹಾರಮಾಡುತ್ತದೆ. ಪ್ರಜೆಗಳ ಪ್ರಾಣಹರಳಾದ ಈ ಮೃತ್ಯುವನ್ನು ಹಿಂದೆ ನಾನು ಹೇಳಿದಂತೆ ಬ್ರಹ್ಮನೇ ಸ್ವಯಂ ನಿರ್ಮಿಸಿದ್ದಾನೆ. ಎಲ್ಲ ಪ್ರಾಣಿಗಳೂ ತಮ್ಮನ್ನು ತಾವೇ ಕೊಂದುಕೊಳ್ಳುತ್ತವೆ. ಮೃತ್ಯುವು ದಂಡವನ್ನು ತೆಗೆದುಕೊಂಡು ಯಾವ ಪ್ರಾಣಿಯನ್ನೂ ಸಂಹರಿಸಲು ಹೋಗುವುದಿಲ್ಲ. ಮೃತ್ಯುವು ಬ್ರಹ್ಮನಿಂದಲೇ ಸೃಷ್ಟವಾಯಿತೆಂಬುದನ್ನು ತಿಳಿದು ಧೀರರಾದವರು ಮೃತರಾದವರ ವಿಷಯದಲ್ಲಿ ಶೋಕಪಡುವುದಿಲ್ಲ.

ಈ ರೀತಿಯಾಗಿ ಬ್ರಹ್ಮನು ಸೃಷ್ಟಿಸಿರುವ ಸಕಲವೂ ಮೃತ್ಯುವಿಗೆ ವಶೀಭೂತವಾಗಿರುವುದೆಂಬುದನ್ನು ತಿಳಿದು, ನಷ್ಟವಾಗಿ ಹೋಗಿರುವ ಪುತ್ರನಿಂದ ಉಂಟಾಗಿರುವ ಶೋಕವನ್ನು ಶೀಘ್ರವಾಗಿ ತ್ಯಜಿಸು."

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ:

"ಮಹಾರಾಜ! ನಾರದರಿಂದ ಹೇಳಲ್ಪಟ್ಟ ಅರ್ಥವತ್ತಾದ ಮಾತನ್ನು ಕೇಳಿ ಅಕಂಪನನು ತನ್ನ ಮಿತ್ರರಾದ ನಾರದರಿಗೆ ಹೇಳಿದನು:

"ಋಷಿಸತ್ತಮರೇ! ಮೃತ್ಯುವಿನ ಇತಿಹಾಸವನ್ನು ನಿಮ್ಮಿಂದ ಕೇಳಿ ನಾನು ಪ್ರೀತನಾಗಿದ್ದೇನೆ; ಕೃತಾರ್ಥನಾಗಿದ್ದೇನೆ. ಪುತ್ರಶೋಕವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದೇನೆ. ಈ ಪರಮಾದ್ಭುತವಾದ ಇತಿಹಾಸವನ್ನು ಹೇಳಿದ ನಿಮಗೆ ಅಭಿವಾದನಮಾಡುತ್ತೇನೆ."

ವ್ಯಾಸರು ಧರ್ಮರಾಜನಿಗೆ ಹೇಳುತ್ತಾರೆ:

"ಯುಧಿಷ್ಠಿರ! ಅಕಂಪನರಾಜನು ನಾರದರಿಗೆ ಹೀಗೆ ಹೇಳಿದ ನಂತರ, ದೇವರ್ಷಿಗಳಾದ, ಮಹಾತ್ಮರಾದ, ಋಷಿಗಳಲ್ಲಿ ಶ್ರೇಷ್ಠರಾದ ನಾರದರು ನಂದನವನಕ್ಕೆ ಹೊರಟುಹೋದರು. ಈ ಇತಿಹಾಸದ ಹೇಳುವಿಕೆ ಮತ್ತು ಕೇಳುವಿಕೆ–ಎರಡೂ ಪುಣ್ಯಕರವಾದುದು. ಯಶಸ್ಕರವಾದುದು. ಸ್ವರ್ಗ ಪ್ರಾಪಕವಾದುದು. ಧನವನ್ನೂ, ಆಯಷ್ಯವನ್ನೂ ವರ್ಧಿಸತಕ್ಕುದು. ಧರ್ಮಜ! ಮಹಾವೀರ್ಯನಾದ, ಮಹಾರಥನಾದ ಅಕಂಪನರಾಜನು ಈ ಉಪಾಖ್ಯಾನವನ್ನು ಕೇಳಿ ಕ್ಷತ್ರಧರ್ಮವನ್ನೂ ಸಂಪೂರ್ಣವಾಗಿ ತಿಳಿದುಕೊಂಡು ಶೂರರಾದವರಿಗೆ ಸಿಕ್ಕುವ ಶ್ರೇಷ್ಠಗತಿಯನ್ನೂ ಮನಗೊಂಡು, ಕಾಲವು ಪ್ರಾಪ್ತವಾದನಂತರ ತಾನೂ ಸಹ ಮೃತ್ಯುವಶನಾಗಿ ಸ್ವರ್ಗಕ್ಕೆ ಹೋದನು. ಮಹಾಧನುಷ್ಮಂತನಾದ ಮಹಾರಥಿಯಾದ ಅಭಿಮನ್ಯುವೂ ಸಹ ಸಮಸ್ತ ಧನುರ್ಧಾರಿಗಳ ಎದುರಿನಲ್ಲಿಯೇ ಬಹುಸಂಖ್ಯಾತರಾದ ಶತ್ರುಗಳನ್ನು ಸಂಹರಿಸಿ ಕತ್ತಿಯಿಂದಲೂ, ಗದೆಯಿಂದಲೂ, ಶಕ್ತ್ಯಾಯುಧದಿಂದಲೂ, ಧನುಸ್ಸಿನಿಂದಲೂ ಯುದ್ಧಮಾಡುತ್ತಾ;, ಯುದ್ಧದಲ್ಲವನು ಪರಾಙ್ಮುಖ ನಾಗದೇ ಮೃತನಾದನು. ಹಿಂದೆ ಚಂದ್ರನ ಮಗನಾಗಿದ್ದ ಪಾಪರಹಿತನಾದ

ಅಭಿಮನ್ಯುವು ಪುನಃ ಚಂದ್ರಲೋಕಕ್ಕೇ ಹೊರಟುಹೋಗಿದ್ದಾನೆ. ಆದುದರಿಂದ ಯುಧಿಷ್ಠಿರ! ಧೈರ್ಯವನ್ನು ತಂದುಕೊಂಡು ಅಪ್ರಮತ್ತನಾಗಿ, ನಿನ್ನ ಅನುಜರೊಡನೆ ಯುದ್ಧಕ್ಕೆ ಸಜ್ಜುಮಾಡಿಕೊಂಡು ಶೀಘ್ರವಾಗಿ ಪುನಃ ಯುದ್ಧವನ್ನಾರಂಭಿಸು."

ಐ೪ನೆಯ ಅಧ್ಯಾಯವು ಮುಗಿಯಿತು.

ಐ೫ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಹದಿನಾರು ಮಂದಿ ರಾಜರ ಉಪಾಖ್ಯಾನದ ಪ್ರಾರಂಭ: ನಾರದರ ಕೃಪೆಯಿಂದ ಸೃಂಜಯನಿಗೆ ಪುತ್ರಪ್ರಾಪ್ತಿ : ದಸ್ಯುಗಳಿಂದ ಅವನ ವಧೆ : ಪುತ್ರಶೋಕದಿಂದ ಸಂತಪ್ತನಾದ ಸೃಂಜಯನಿಗೆ ನಾರದರು ಮರುತ್ತನ ಚರಿತ್ರೆಯನ್ನು ಹೇಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮೃತ್ಯುವಿನ ಉತ್ಪತ್ತಿಯನ್ನೂ ಮತ್ತು ಅದರ ಅನುಪಮವಾದ ಕರ್ಮಗಳನ್ನೂ ಕೇಳಿದನಂತರ ಯುಧಿಷ್ಠಿರನು ವ್ಯಾಸರನ್ನು ಪ್ರಸನ್ನರನ್ನಾಗಿಸಿ ಪುನಃ ಈ ಮಾತುಗಳನ್ನು ಹೇಳಿದನು:

"ಬ್ರಾಹ್ಮಣೋತ್ತಮರೇ! ಇಂದ್ರನಿಗೆ ಸಮಾನವಾದ ಪರಾಕ್ರಮವಿದ್ದ, ಶ್ರೇಷ್ಠರಾದ, ಪುಣ್ಯಕರ್ಮಿಗಳಾದ, ಪಾಪರಹಿತರಾದ, ಸತ್ಯವಾದಿಗಳಾದ ರಾಜರ್ಷಿಗಳು ತಮಗೆ ಯೋಗ್ಯವಾದ ಉತ್ತಮಸ್ಥಾನಗಳಲ್ಲಿ (ಉತ್ತಮ ಲೋಕಗಳಲ್ಲಿ) ಇದ್ದಾರೆ. ನೀವು ಪುನಃ ನನ್ನನ್ನು ಸತ್ಯವಚನಗಳಿಂದ ಸಮಾಧಾನಗೊಳಿಸಿರಿ. ಪ್ರಾಚೀನರಾದ ರಾಜರ್ಷಿಗಳ ಪುಣ್ಯಕರ್ಮಗಳ ಕಥನದಿಂದ ನನ್ನನ್ನು ಸಮಾಧಾನಪಡಿಸಿರಿ. ಪೂರ್ವಕಾಲದಲ್ಲಿ ಮಹಾತ್ಮರಾದ ಮತ್ತು ಪುಣ್ಯಾತ್ಮರಾದ ಯಾವ ರಾಜರ್ಷಿಗಳು ಯಜ್ಞಗಳಲ್ಲಿ ಎಷ್ಟೆಷ್ಟು ದಕ್ಷಿಣೆಗಳನ್ನು ಕೊಟ್ಟರು? ಆ ಎಲ್ಲವನ್ನೂ ನನಗೆ ವಿವರವಾಗಿ ಹೇಳಿರಿ."

"ಮಹಾರಾಜ! ಶೈಬ್ಯನಿಗೆ ಸೃಂಜಯನೆಂಬ ಹೆಸರಿನ ಮಗನೊಬ್ಬ ನಿದ್ದನು. ಸೃಂಜಯನಿಗೆ ಪರ್ವತ ಮತ್ತು ನಾರದ ಎಂಬ ಇಬ್ಬರು ಋಷಿಗಳು

ಮಿತ್ರರಾಗಿದ್ದರು. ಆ ಇಬ್ಬರೂ ಒಂದು ದಿನ ಸೃಂಜಯನನ್ನು ನೋಡುವ ಸಲುವಾಗಿ ಅವನ ಮನೆಯನ್ನು ಪ್ರವೇಶಿಸಿದರು. ಮನೆಗೆ ಬಂದ ಇಬ್ಬರು ಮಿತ್ರರನ್ನೂ ಸೃಂಜಯನು ಯಥೋಚಿತವಾಗಿ ಸತ್ಕರಿಸಿದನು. ಸತ್ಕಾರದಿಂದ ಸುಪ್ರೀತರಾದ ಪರ್ವತ-ನಾರದರು ಅಲ್ಲಿಯೇ ಕೆಲವು ಕಾಲ ಸುಖವಾಗಿ ವಾಸಮಾಡಿಕೊಂಡಿದ್ದರು. ಒಮ್ಮೆ ಸೃಂಜಯನು ತನ್ನ ಇಬ್ಬರು ಮಿತ್ರರೊಡನೆ ಸುಖಾಸನದಲ್ಲಿ ಕುಳಿತಿದ್ದಾಗ ಶುಚಿಸ್ಮಿತೆಯಾದ, ವರವರ್ಣಿನಿಯಾದ ಇನ್ನೂ ಕನ್ಯಾವಸ್ಥೆಯಲ್ಲಿಯೇ ಇದ್ದ ಸೃಂಜಯನ ಮಗಳು ಅವನ ಹತ್ತಿರಕ್ಕೆ ಬಂದಳು. ಬಂದೊಡನೆಯೇ ತಂದೆಗೆ ಅಭಿವಾದನಮಾಡಿದಳು. ರಾಜನೂ ಸಹ ತನ್ನ ಪಾರ್ಶ್ವದಲ್ಲಿ ನಿಂತಿದ್ದ ಮಗಳನ್ನು ಅನುರೂಪವಾದ ಮತ್ತು ಇಷ್ಟವಾದ ಆಶೀರ್ವಾದಗಳಿಂದ ಯಥಾವಿಧಿಯಾಗಿ ಅಭಿನಂದಿಸಿದನು. ರಾಜನ ಸಮೀಪದಲ್ಲಿಯೇ ಕುಳಿತಿದ್ದ ಮಿತ್ರನಾದ ಪರ್ವತನು ಅವಳನ್ನು ನೋಡಿ ನಸುನಗುತ್ತಾ ಹೇಳಿದನು:

"ವಯಸ್ಯ! ಚಂಚಲವಾದ ಕಟಾಕ್ಷವುಳ್ಳ, ಸರ್ವಲಕ್ಷಣಸಂಪನ್ನೆಯಾದ ಈ ಕನ್ಯೆಯು ಯಾರು? ಇವಳೇನಾದರೂ ಸೂರ್ಯನ ಪ್ರಭೆಯೇ? ಅಗ್ನಿಯ ಜ್ವಾಲೆಯೇ? ಶ್ರೀ, ಹ್ರೀ, ಕೀರ್ತಿ, ಧೃತಿ, ಪುಷ್ಟಿ, ಸಿದ್ಧಿ, ಚಂದ್ರನ ಪ್ರಭೆ ಇವರಲ್ಲಿ ಇವಳು ಒಬ್ಬಳಾಗಿರುವಳೇ?"

ಹೀಗೆಂದು ಆಶ್ಚರ್ಯಚಕಿತನಾಗಿ ಪ್ರಶ್ನಿಸಿದ ಮಹರ್ಷಿಯನ್ನು ಕುರಿತು ಸೃಂಜಯನು ಹೇಳಿದನು:

**ಮಮೇಯಂ ಭಗವನ್ ಕನ್ಯಾ ಮತ್ತೋ ವರಮಭೀಪ್ಸತಿ।**

"ಭಗವನ್! ಇವಳು ನನ್ನ ಮಗಳೇ ಆಗಿದ್ದಾಳೆ; ನನ್ನಿಂದ ವರವನ್ನು ಪಡೆಯಲು ಅಪೇಕ್ಷಿಸಿ ಬಂದಿದ್ದಾಳೆ."

ಸೃಂಜಯನು ಹೀಗೆಂದು ಹೇಳಿದೊಡನೆಯೇ ಪರ್ವತರಿಗೆ ಮಾತನಾಡಲು ಅವಕಾಶವನ್ನೇ ಕೊಡದೆ ನಾರದರು ಹೇಳಿದರು.: "ವಯಸ್ಯ! ನೀನು ಅತ್ಯಂತ ಮಹತ್ತ್ವದ ಶ್ರೇಯಸ್ಸನ್ನು ಪಡೆದುಕೊಳ್ಳಲು ಇಚ್ಛೆಯುಳ್ಳವನಾಗಿದ್ದರೆ ನನಗೆ ಈ ಕನ್ಯೆಯನ್ನು ನನ್ನ ಧರ್ಮಪತ್ನಿಯನ್ನಾಗಿ ಮಾಡಿಕೊಳ್ಳಲು ಕೊಟ್ಟುಬಿಡು." ನಾರದರ ಮಾತಿನಿಂದ ಪ್ರಹೃಷ್ಟನಾದ

ಸೃಂಜಯನು ಮರುಮಾತನಾಡದೇ 'ದದಾನಿ' 'ಕೊಡುವೆನು' ಎಂದೇ ನಾರದರಿಗೆ ಉತ್ತರಿಸಿದನು. ಅದರಿಂದ ಪರ್ವತರಿಗೆ ಬಹಳವಾಗಿ ಕೋಪ ಬಂದಿತು. ನಾರದರಿಗೆ ಹೇಳಿದರು:

**ಹೃದಯೇನ ಮಯಾ ಪೂರ್ವಂ ವೃತಾಂ ವೈ ವೃತವಾನಸಿ ।**
**ಯಸ್ಮಾದ್ವೃತಾ ತ್ವಯಾ ವಿಪ್ರ ಮಾ ಗಾಃ ಸ್ವರ್ಗಂ ಯಥೇಪ್ಸಯಾ ॥**

"ನಾನು ಮೊದಲೇ ಇವಳನ್ನು ನನ್ನ ಹೃದಯದಲ್ಲಿ ವರಿಸಿಬಿಟ್ಟಿದ್ದೇನೆ. ನನ್ನಿಂದ ವರಿಸಲ್ಪಟ್ಟಿದ್ದ ಇವಳನ್ನು ನೀನು ವರಿಸಿರುವೆ. ಈ ರೀತಿಯಲ್ಲಿ ಹಿಂದು-ಮುಂದು ನೋಡದೇ ನೀನು ಇವಳನ್ನು ವರಿಸಿದ್ದರಿಂದ ಇನ್ನು ಮುಂದೆ ಇಚ್ಛಾನುಸಾರವಾಗಿ ಸ್ವರ್ಗಕ್ಕೆ ಹೋಗಲಾರೆ."

ಒಡನೆಯೇ ನಾರದರು ಪರ್ವತರಿಗೆ ಉತ್ತರವಿತ್ತರು:

**ಮನೋವಾಗ್ಬುದ್ಧಿಸಮ್ಭಾಷಾ ದತ್ತಾ ಚೋದಕಪೂರ್ವಕಮ್।**
**ಪಾಣಿಗ್ರಹಣಮನ್ತ್ರಾಶ್ಚ ಪ್ರಥಿತಂ ವರಲಕ್ಷಣಮ್ ।**
**ನ ತ್ವೇಷಾ ನಿಶ್ಚಿತಾ ನಿಷ್ಠಾ ನಿಷ್ಠಾ ಸಪ್ತಪದೀ ಸ್ಮೃತಾ ॥೧೬॥**

"ಮನಃಸಂಕಲ್ಪ, ವಾಗ್ದಾನ, ಬುದ್ಧಿಪೂರ್ವಕವಾದ ನಿಶ್ಚಯ, ಪರಸ್ಪರ ಸಂಭಾಷಣೆ, ಅನಂತರ ಉದಕಪೂರ್ವಕವಾಗಿ ಕನ್ಯಾದಾನಮಾಡುವುದು, ವರನು ಪಾಣಿಗ್ರಹಣಮಾಡುವುದು, ವೈದಿಕಮಂತ್ರಗಳ ಪಠನ ಇವೇ ಮುಂತಾದ ವಿಧಿ-ವಿಧಾನಗಳು ಕನ್ಯಾಪರಿಗ್ರಹಕ್ಕೆ ಸಾಧನರೂಪವಾಗಿ ಹೇಳಲ್ಪಟ್ಟಿವೆ. ಆದರೆ ಇವಿಷ್ಟರಿಂದಲೇ ವಿವಾಹವು ಪೂರ್ಣವಾಗಿ ಬಿಡುವುದಿಲ್ಲ. ವಿವಾಹದ ಪ್ರಕ್ರಿಯೆಗಳೆಲ್ಲವೂ ಪೂರ್ಣವಾಗಬೇಕಾದರೆ ಸಪ್ತಪದಿಯೂ ಆಗಬೇಕು. ಸಪ್ತಪದಿಯಿಂದಲೇ ವಿವಾಹವು ಪೂರ್ಣವಾಗುವುದೆಂದು ಹೇಳುತ್ತಾರೆ.

ನಿನ್ನ ವಿಷಯದಲ್ಲಿ ಹೇಳುವುದಾದರೆ ವಿವಾಹಕಾರ್ಯಾರ್ಥದ ಯಾವ ಪ್ರಕ್ರಿಯೆಯೂ ಪ್ರಾರಂಭವಾಗಿಯೇ ಇಲ್ಲ. ಹೆಣ್ಣಿನ ಮನಸ್ಸನ್ನಾಗಲೀ, ಹೆಣ್ಣಿನ ತಂದೆ-ತಾಯಿಗಳ ಮನಸ್ಸನ್ನಾಗಲೀ ಅರಿಯದೇ ತನ್ನಷ್ಟಕ್ಕೇ ತಾನೇ ಮನಸ್ಸಿನಿಂದ ವರಿಸಿದ ಮಾತ್ರದಿಂದ ಒಂದು ಹೆಣ್ಣು ಒಬ್ಬನಿಗೆ ಪತ್ನಿಯಾಗಿ ಬಿಡುವುದಿಲ್ಲ.

ವಿಷಯವು ಹೀಗಿರುವಾಗ ನೀನು ನನಗೆ ವೃಥಾ ಶಾಪಕೊಟ್ಟಿರುವೆ. ಆದುದರಿಂದ ನಾನೂ ನಿನಗೆ ಶಾಪಕೊಡುತ್ತೇನೆ. ನನ್ನನ್ನು ಬಿಟ್ಟು ನೀನೂ ಸ್ವರ್ಗಕ್ಕೆ ಹೋಗಲಾರೆ."

ಯುಧಿಷ್ಠಿರ! ಪರಸ್ಪರವಾಗಿ ಈ ರೀತಿಯಲ್ಲಿ ಶಾಪವನ್ನು ಕೊಟ್ಟು ಕೊಂಡು ಅಲ್ಲೇ ಇಬ್ಬರೂ ಉಳಿದುಕೊಂಡರು. ಅನಂತರ ಪುತ್ರಕಾಮನಾದ, ಪವಿತ್ರಾತ್ಮನಾದ ಸೃಂಜಯನು ಬ್ರಾಹ್ಮಣರನ್ನು ಸಮಾಧಾನಗೊಳಿಸಿ ಪಾನಾಚ್ಛಾದನ-ಭೋಜನಾದಿಗಳಿಂದ ಶಕ್ತಿಮೀರಿ ಉಪಚರಿಸಿದನು.

ಒಮ್ಮೆ ರಾಜನ ವಿಷಯದಲ್ಲಿ ಪ್ರಸನ್ನರಾಗಿ ಅವನಿಗೆ ಪುತ್ರನಾಗ ಬೇಕೆಂದು ಇಚ್ಛಿಸಿದ ತಪಃಸ್ವಾಧ್ಯಾಯನಿರತರಾದ, ವೇದ-ವೇದಾಂಗ ಪಾರಂಗತರಾದ ಬ್ರಾಹ್ಮಣಶ್ರೇಷ್ಠರು ಒಟ್ಟಾಗಿ ನಾರದರ ಬಳಿಗೆ ಬಂದು ಅವರೊಡನೆ ಹೇಳಿದರು: 'ದೇಹ್ಯಸ್ಮೈ ಪುತ್ರಮೀಪ್ಸಿತಮ್' 'ದೇವರ್ಷಿಗಳೇ! ಈ ಸೃಂಜಯರಾಜನ ಅಪೇಕ್ಷೆಯಂತೆ ಇವನಿಗೆ ಒಬ್ಬ ಪುತ್ರನನ್ನು ದಯಪಾಲಿಸಿರಿ.'

ಬ್ರಾಹ್ಮಣರು ಹೇಳಿದ ಮಾತನ್ನು ಕೇಳಿ ನಾರದರು 'ತಥಾಸ್ತು' 'ಹಾಗೆಯೇ ಆಗಲೀ' ಎಂದು ಪ್ರತ್ಯುತ್ತರಿಸಿ ಸೃಂಜಯನೊಡನೆ ಹೇಳಿದರು: "ರಾಜರ್ಷಿಯೇ ! ನಿನ್ನ ವಿಷಯದಲ್ಲಿ ಪ್ರಸನ್ನರಾಗಿರುವ ಈ ಬ್ರಾಹ್ಮಣರು ನಿನಗೊಬ್ಬ ಪುತ್ರನಾಗಬೇಕೆಂದು ಆಶಿಸಿದ್ದಾರೆ. ನಾನೂ ಅವರಿಗೆ 'ಆಗಲಿ' ಎಂದು ಅಭಿವಚನವನ್ನಿತ್ತಿದ್ದೇನೆ. ಈಗ ನಿನಗೆ ಎಂತಹ ಪುತ್ರನು ಬೇಕೆಂಬುದರ ಬಗೆಗೆ ವರವನ್ನು ಕೇಳು."

ಹೀಗೆಂದು ನಾರದರು ಹೇಳುತ್ತಲೇ ರಾಜನು ಬದ್ಧಾಂಜಲಿಯಾಗಿ, ಸಕಲಸದ್ಗುಣಸಂಪನ್ನನಾದ, ಯಶೋವಂತನಾದ, ಕೀರ್ತಿಮಂತನಾದ, ತೇಜಸ್ವಿಯಾದ, ಶತ್ರುಗಳನ್ನು ದಮನಮಾಡುವ ಸಾಮರ್ಥ್ಯವಿರುವ ಮಗನನ್ನು ಕೇಳಿಕೊಂಡನು. ಇಷ್ಟರ ಜೊತೆಗೆ ತನ್ನ ಮಗನಲ್ಲಿ ವಿಶ್ವಕ್ಕೇ ವಿಚಿತ್ರವೆನಿಸುವ ವಿಶೇಷಗುಣಗಳಿರಬೇಕೆಂದು ಇಚ್ಛಿಸಿದವನಾಗಿ ಸೃಂಜಯನು ತನ್ನ ಮಗನ ಮೂತ್ರ, ಪುರೀಷ, ಕಫ ಮತ್ತು ಬೆವರು–ಇವುಗಳೂ ಸುವರ್ಣಮಯವಾಗಿರಬೇಕೆಂದು ಪ್ರಾರ್ಥಿಸಿದನು.

ನಾರದರ ವರಪ್ರಸಾದದಿಂದಾಗಿ ಅಂತಹ ಪುತ್ರನೇ ಸೃಂಜಯನಿಗೆ ಹುಟ್ಟಿದನು. 'ಸುವರ್ಣಷ್ಠೀವೀ' ಎಂದೇ ಆ ರಾಜಪುತ್ರನಿಗೆ ನಾಮಕರಣ

(೧೬೨)—೧೬

ಮಾಡಿದರು. ನಾರದರ ವರಪ್ರದಾನದಿಂದಾಗಿ ಸೃಂಜಯನು ಮಗನ ಮೂಲಕವಾಗಿ ತನ್ನ ಧನವನ್ನು ಅಪಾರವಾಗಿ ವೃದ್ಧಿಪಡಿಸಿಕೊಂಡನು. ಕಾಲಾನುಗುಣವಾಗಿ ಸುವರ್ಣವು ಹೆಚ್ಚುತ್ತಲೇ ಇದ್ದಿತು. ಸೃಂಜಯರಾಜನು ತನಗೆ ಬೇಕು-ಬೇಕಾದುದನ್ನೆಲ್ಲಾ ಚಿನ್ನಕ್ಕೆ ಪರಿವರ್ತಿಸಿದನು. ಮನೆ, ಕೋಟೆ, ದುರ್ಗ, ಬ್ರಾಹ್ಮಣರ ಮನೆಗಳು, ಹಾಸಿಗೆ, ಆಸನ, ಯಾನ (ರಥ-ಪಲ್ಲಕ್ಕಿ ಮುಂತಾದುವು) ಬಿಂದಿಗೆ-ಚೊಂಬುಗಳು, ಅಡಿಗೆ ಮಾಡುವ ಪಾತ್ರೆಗಳು ಮುಂತಾದುವು, ರಾಜನ ಅರಮನೆ, ಅರಮನೆಯ ಹೊರಗೆ ಅಲಂಕಾರಾರ್ಥ ವಾಗಿ ಇಡುವ ಉಪಕರಣಗಳು ಈ ಎಲ್ಲವೂ ಚಿನ್ನವಾಗಿ ಪರಿವರ್ತನೆ ಹೊಂದಿದುವು. ಸೃಂಜಯರಾಜನಿಗೆ ಸೇರಿದ ಸರ್ವವಸ್ತುಗಳೂ ಸುವರ್ಣ ಮಯವೆಂಬ ವಿಷಯವು ಸರ್ವವಿದಿತವಾಯಿತು. ದರೋಡೆಕಾರರು ಆ ವಾರ್ತೆಯನ್ನು ಕೇಳಿದರು ಹಾಗೂ ಪ್ರತ್ಯಕ್ಷವಾಗಿಯೂ ನೋಡಿದರು. ಅವರೆಲ್ಲರೂ ಒಟ್ಟಾಗಿ ಸೇರಿ ರಾಜನ ಅರಮನೆಯನ್ನು ಲೂಟಿಮಾಡಲು ಉಪಕ್ರಮಿಸಿದರು. ದರೋಡೆಕಾರರಲ್ಲಿ ಕೆಲವರು ಹೀಗೆ ಯೋಚಿಸಿದರು: 'ಇಲ್ಲಿರುವ ಚಿನ್ನವನ್ನು ಕದಿಯುವ ಬದಲು ಚಿನ್ನದ ಉತ್ಪಾದಕನನ್ನೇ ಅಪಹರಿಸಿಬಿಟ್ಟರೆ!'–ಈ ವಿಷಯವನ್ನೇ ತಮ್ಮ ಒಡನಾಡಿಗಳಲ್ಲಿಯೂ ಹೇಳಿದರು. 'ಇಲ್ಲಿರುವ ಅಪಾರಸುವರ್ಣರಾಶಿಗೂ ಆಕರನಾದ ರಾಜನ ಮಗನನ್ನೇ ನಾವು ಹಿಡಿದುಬಿಡೋಣ. ಅವನನ್ನು ಹಿಡಿಯುವ ಪ್ರಯತ್ನವನ್ನು ಈಗಲೇ ಮಾಡೋಣ.'

ಆ ಉಪಾಯವು ಎಲ್ಲರಿಗೂ ಸಮ್ಮತವಾಯಿತು. ಲುಬ್ಧರಾದ ಆ ದರೋಡೆಕಾರರು ರಾಜನ ಅರಮನೆಯನ್ನು ಪ್ರವೇಶಿಸಿ ಸುವರ್ಣಷ್ಠೀವಿಯನ್ನು ಬಲಾತ್ಕಾರದಿಂದ ಹಿಡಿದರು. ಆದರೆ ಆ ಮೂಢರಿಗೆ ಅವನಲ್ಲಿ ಚಿನ್ನವು ಹೇಗೆ ಸಿಕ್ಕುತ್ತದೆ? ಅದನ್ನು ತಾವು ಹೇಗೆ ಪಡೆದುಕೊಳ್ಳಬೇಕು? ಎಂಬ ಯಾವ ವಿಷಯವೂ ತಿಳಿದಿರಲಿಲ್ಲ. ಬುದ್ಧಿಗೆಟ್ಟ ದರೋಡೆಕಾರರು ರಾಜಪುತ್ರನನ್ನು ಅರಣ್ಯಕ್ಕೆ ಸೆಳೆದೊಯ್ದರು. ಅವನನ್ನು ಅಲ್ಲಿ ಸಂಹರಿಸಿ ಸಣ್ಣ-ಸಣ್ಣ ತುಂಡುಗಳಾಗಿ ಕತ್ತರಿಸಿದರು. ಆದರೆ ಲುಬ್ಧರಾದ ಅವರು ಸ್ವಲ್ಪವಾದರೂ ಸುವರ್ಣವನ್ನು ಕಾಣಲಿಲ್ಲ. ರಾಜಕುಮಾರನು ಪ್ರಾಣಶೂನ್ಯನಾದೊಡನೆಯೇ ವರದಾನದಿಂದ ಲಭ್ಯವಾಗುತ್ತಿದ್ದ ಚಿನ್ನವೂ ಇಲ್ಲವಾಯಿತು. ಮೂರ್ಖರಾದ ಮತ್ತು ಬುದ್ಧಿಗೆಟ್ಟ ಆ ದರೋಡೆಕಾರರು ಭೂಮಂಡಲದಲ್ಲಿಯೇ ಅದ್ಭುತ

ನಾಗಿದ್ದ ರಾಜಕುಮಾರನನ್ನು ವಧೆಮಾಡಿ ಯಾವ ಫಲವೂ ಲಭಿಸದೇ ಇದ್ದುದಕ್ಕಾಗಿ ತಮ್ಮ-ತಮ್ಮಲ್ಲಿಯೇ ಹೊಡೆದಾಡಿಕೊಂಡು ಎಲ್ಲರೂ ಸತ್ತರು. ಬಹಳ ದುಷ್ಟವಾದ ಕಾರ್ಯವನ್ನು ಮಾಡಿದ ಅವರು ಊಹಿಸಲೂ ಅಸಾಧ್ಯವಾದ, ಭಯಂಕರವಾದ ನರಕಕ್ಕೂ ಹೋದರು.

ಮಹಾತಪಸ್ವಿಯಾದ ಸೃಂಜಯನು ವರದಿಂದ ಪ್ರಾಪ್ತನಾದ ಮಗನು ಹತನಾದುದಕ್ಕಾಗಿ ದುಃಖಾರ್ತನಾಗಿ, ದೀನನಾಗಿ ಬಹುಪ್ರಕಾರವಾಗಿ ಗೋಳಾಡಿದನು. ರಾಜನು ಪುತ್ರಶೋಕದಿಂದ ಪೀಡಿತನಾಗಿ ಗೋಳಿಡು



ತ್ತಿದ್ದುದನ್ನು ಕೇಳಿ ದೇವರ್ಷಿಗಳಾದ ನಾರದರು ರಾಜನ ಸಮೀಪದಲ್ಲಿ ಕಾಣಿಸಿಕೊಂಡರು. ದುಃಖಾರ್ತನಾಗಿದ್ದ, ಬುದ್ಧಿಗೆಟ್ಟಿದ್ದ, ಗಟ್ಟಿಯಾಗಿ ರೋದನ ಮಾಡುತ್ತಿದ್ದ ಸೃಂಜಯನ ಸಮೀಪಕ್ಕೆ ಬಂದು ಅವನೊಡನೆ ಏನು ಹೇಳಿದರೆಂಬುದನ್ನು ಕೇಳು, ಯುಧಿಷ್ಠಿರ!

“ಸೃಂಜಯ! ಬ್ರಹ್ಮವಾದಿಗಳಾದ ನಾವೆಲ್ಲರೂ ನಿನ್ನ ಮನೆಯಲ್ಲಿಯೇ ವಾಸಮಾಡುತ್ತಿದ್ದೇವೆ. (ಆದರೂ ನಮ್ಮ ಸಹವಾಸವು ನಿನ್ನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಿಲ್ಲ.) ಆದುದರಿಂದ ಕಾಮೋಪಭೋಗ ಗಳಿಂದ ತೃಪ್ತನಾಗದೆಯೇ ನೀನು ಮರಣಹೊಂದುವೆ. ಮಹಾಮಹಿಮನಾದ ಅವಿಕ್ಷಿತನ ಮಗನಾದ ಮರುತ್ತನೂ ಮೃತನಾದನೆಂದು ನಾವು ಕೇಳಿದ್ದೇವೆ. ಬೃಹಸ್ಪತಿಯ ಮೇಲಿನ ಸ್ಪರ್ಧೆಯಿಂದ ಸಂವರ್ತನು ಮರುತ್ತನಿಗೆ ಯಾಗವನ್ನು ಮಾಡಿಸಿದನು. ನಾನಾವಿಧವಾದ ರೀತಿಗಳಲ್ಲಿ ಯಜ್ಞಗಳನ್ನು ಮಾಡಲು ಇಚ್ಛಿಸಿದ ರಾಜರ್ಷಿಯಾದ ಮರುತ್ತನಿಗೆ ಶ್ರೀಶಂಕರನು ಹಿಮಾಲಯದ ಸುವರ್ಣಮಯವಾದ ಒಂದು ಭಾಗವನ್ನೇ ಧನರೂಪವಾಗಿ ಕೊಟ್ಟನು. ಯಜ್ಞಕಾರ್ಯವು ಮುಗಿದನಂತರ ಮರುತ್ತನ ಸಭೆಯಲ್ಲಿ ಇಂದ್ರನೇ ಮೊದಲಾದ ದೇವತೆಗಳೂ, ಬೃಹಸ್ಪತಿಯೇ ಮೊದಲಾದ ಪ್ರಜಾಪತಿ ಗಣಗಳೂ ಸಭಾಸದರಂತೆ ಉಪಸ್ಥಿತರಾಗಿರುತ್ತಿದ್ದರು. ಮರುತ್ತನ ಯಜ್ಞಮಂಟಪದಲ್ಲಿದ್ದ ಸಕಲಸಾಮಗ್ರಿಗಳೂ ಸುವರ್ಣಮಯವಾಗಿಯೇ ಇದ್ದುವು.

ಅವನ ಪಾಕಶಾಲೆಯಲ್ಲಿ ಬಗೆ-ಬಗೆಯ ಅನ್ನ-ಪಾನೀಯ-ಭಕ್ಷ್ಯ-ಭೋಜ್ಯಗಳು ಸಿದ್ಧವಾಗಿರುತ್ತಿದ್ದುವು. ಯಾರಿಗೆ ಯಾವ ಖಾದ್ಯವು ಬೇಕೆನ್ನಿಸುವುದೋ ಅವರಿಗೆ ಅದು ಅಲ್ಲಿ ಸಿಕ್ಕುತ್ತಿದ್ದಿತು. ಮೇಲಾಗಿ ಊಟದ ಪದಾರ್ಥಗಳು ಶುಚಿರುಚಿಯುತವಾಗಿಯೂ ಇರುತ್ತಿದ್ದುವು. ಅನ್ನಾರ್ಥಿಗಳಾಗಿ ಬಂದ ಬ್ರಾಹ್ಮಣರು ತಮಗೆ ಬೇಕುಬೇಕಾದುದನ್ನು ಭುಂಜಿಸುತ್ತಿದ್ದರು. ಹಾಲು, ಮೊಸರು, ತುಪ್ಪ, ಜೇನುತುಪ್ಪ, ರುಚಿ-ರುಚಿಯಾದ ಭಕ್ಷ್ಯ-ಭೋಜ್ಯಗಳು ಇವುಗಳೆಲ್ಲವನ್ನೂ ಅಪೇಕ್ಷಿಸಿದಷ್ಟು ತಿನ್ನಬಹುದಾಗಿದ್ದಿತು. ಮರುತ್ತನು ಮಾಡಿದ ಎಲ್ಲ ಯಜ್ಞಗಳಲ್ಲಿಯೂ ಭಾಗವಹಿಸಿ ಪ್ರಹೃಷ್ಟರಾದ, ವೇದ-ವೇದಾಂಗಪಾರಂಗತರಾದ ಋತ್ವಿಜರನ್ನು ಮರುತ್ತನು ಅವರು ಇಚ್ಛಿಸಿದ ವಸ್ತ್ರಗಳಿಂದಲೂ, ಆಭರಣಗಳಿಂದಲೂ ಅಲಂಕರಿಸಿ ಸತ್ಕರಿಸುತ್ತಿದ್ದನು. ಮರುತ್ತನ ಮನೆಯಲ್ಲಿ ಮರುದ್ಗಣಗಳೇ ಪರಿಕರಗಳನ್ನು ಬಡಿಸುತ್ತಿದ್ದರು. ವಿಶ್ವೇದೇವತೆಗಳು ಸಭಾಸದರಾಗಿದ್ದರು. ಪರಾಕ್ರಮಿಯಾದ ಮರುತ್ತನ ರಾಜ್ಯದಲ್ಲಿ ಸುವೃಷ್ಟಿಯಾಗುತ್ತಿದ್ದುದರಿಂದ ಸಸ್ಯಸಂಪತ್ತು ಹೇರಳವಾಗಿದ್ದಿತು.

ಮರುತ್ತನು ಕಾಲ-ಕಾಲಗಳಲ್ಲಿ ಉತ್ತಮವಿಧಿಗಳಿಂದ ಅರ್ಚಿಸುತ್ತಿದ್ದ ಹವಿಸ್ಸು ಗಳಿಂದ ದೇವತೆಗಳು ತೃಪ್ತರಾಗುತ್ತಿದ್ದರು. ಮರುತ್ತನು ಬ್ರಹ್ಮಚರ್ಯಪಾಲನೆ, ವೇದಾಧ್ಯಯನ-ಇವೇ ಮುಂತಾದ ಸತ್ಕರ್ಮಗಳಿಂದಲೂ, ಸಕಲವಿಧವಾದ ದಾನಗಳಿಂದಲೂ ಋಷಿಗಳನ್ನೂ, ಪಿತೃಗಳನ್ನೂ, ಸುಖಜೀವಿಗಳಾದ ದೇವತೆ ಗಳನ್ನೂ ತೃಪ್ತಿಪಡಿಸುತ್ತಿದ್ದನು. ಮರುತ್ತರಾಜನು ಸ್ವೇಚ್ಛೆಯಿಂದ ಬ್ರಾಹ್ಮಣರಿಗೆ ಶಯನಾಸನಗಳನ್ನೂ, ಹೊರಲು ಅಸಾಧ್ಯವಾಗಿ ಬಿಟ್ಟುಹೋಗುವಷ್ಟು ಚಿನ್ನದ ರಾಶಿಯನ್ನೂ, ಅಪಾರವಾದ ವಿತ್ತವನ್ನೂ ಕೊಡುತ್ತಿದ್ದನು. ಇಂದ್ರನೂ ಮರುತ್ತನ ವಿಷಯದಲ್ಲಿ ಶುಭಚಿಂತನೆಯನ್ನೇ ಮಾಡುತ್ತಿದ್ದನು. ಮರುತ್ತನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ರೋಗರಹಿತರಾಗಿದ್ದರು. ಈ ರೀತಿಯಲ್ಲಿ ಶ್ರದ್ಧೆಯಿಂದ ಸತ್ಕರ್ಮಗಳನ್ನು ಮಾಡುತ್ತಾ ಮರುತ್ತನು ಅನೇಕಪುಣ್ಯಲೋಕ ಗಳನ್ನು ಜಯಿಸಿ ಮರಣಾನಂತರದಲ್ಲಿ ಪುಣ್ಯಫಲವಾದ ಅಕ್ಷಯಶುಭಲೋಕ ಗಳಿಗೆ ಹೊರಟುಹೋದನು.

ಮಹಾನುಭಾವನಾದ ಮರುತ್ತನು ಯುವಕನಾಗಿಯೇ ಇದ್ದುಕೊಂಡು ಪ್ರಜೆಗಳು, ಮಂತ್ರಿಗಳು, ಧರ್ಮಪತ್ನೀ, ಪುತ್ರರು ಮತ್ತು ಸೋದರರು– ಇವರುಗಳೊಡನೆ ಒಂದು ಸಾವಿರ ವರ್ಷಗಳ ಪರ್ಯಂತವಾಗಿ ರಾಜ್ಯಭಾರಮಾಡುತ್ತಿದ್ದನು.

ಶ್ವೈತ್ಯಸೃಂಜಯ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ–ಈ ನಾಲ್ಕರಲ್ಲಿಯೂ ಮರುತ್ತರಾಜನು ನಿನಗಿಂತಲೂ ಅಧಿಕನಾದವನು. ನಿನ್ನ ಪುತ್ರನಿಗಿಂತಲೂ ಪುಣ್ಯತಮನಾದವನು. ನಿನ್ನ ಮಗನು ಯಾವ ಯಜ್ಞ ವನ್ನಾಗಲೀ ಮಾಡಿದವನಲ್ಲ. ಅವನಿಗೆ ಯಾವ ವಿಧವಾದ ಉದಾರತೆಯೂ ಇರಲಿಲ್ಲ. ಆದುದರಿಂದ ಮಗನನ್ನು ನೆನೆದು ನೀನು ಚಿಂತಿಸಬೇಡ." ಎಂಬುದಾಗಿ ನಾರದರು ಸೃಂಜಯನಿಗೆ ಸಮಾಧಾನಹೇಳಿದರು."

ಐಐನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಸುಹೋತ್ರರಾಜನ ದಾನಶೀಲತೆ

ಸೃಂಜಯನಿಗೆ ಸಮಾಧಾನವಾಗದುದನ್ನು ಗಮನಿಸಿದ ನಾರದರು ಸುಹೋತ್ರನ ಕಥೆಯನ್ನು ಹೇಳಲು ಉಪಕ್ರಮಿಸಿದರು:

"ಮಹಾರಾಜ! ಸುಹೋತ್ರನೆಂಬುವನು ಆಗಿನ ಕಾಲಕ್ಕೆ ಅದ್ವಿತೀಯ ವೀರನಾಗಿದ್ದನು. ದೇವತೆಗಳಿಗೂ ಕೂಡ ಅವನ ಕಡೆಗೆ ಕಣ್ಣುಹಾಯಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಅತುಲಪರಾಕ್ರಮಿಯೂ ಸಹ ಕಾಲವು ಪ್ರಾಪ್ತವಾದಾಗ ಮೃತ್ಯುವಶನಾದನೆಂದು ನಾವು ಕೇಳಿದ್ದೇವೆ.

ಸುಹೋತ್ರನು ಧರ್ಮಾನುಸಾರವಾಗಿ ರಾಜ್ಯವನ್ನು ಪಡೆದುಕೊಂಡು ಋತ್ವಿಜರನ್ನೂ, ಬ್ರಾಹ್ಮಣರನ್ನೂ, ಪುರೋಹಿತರನ್ನೂ ತನ್ನ ಶ್ರೇಯಸ್ಸಿನ ವಿಷಯವಾಗಿ ಕೇಳುತ್ತಾ, ಅವರ ಅಭಿಪ್ರಾಯದಂತೆ ರಾಜ್ಯಭಾರವನ್ನು ಮಾಡುತ್ತಿದ್ದನು. ಪ್ರಜಾಪಾಲನೆ, ಧರ್ಮಸಮ್ಮತವಾದ ರೀತಿಯಲ್ಲಿ



ನಡೆಯುವುದು, ದಾನಮಾಡುವುದು, ಯಜ್ಞಗಳನ್ನು ಮಾಡುವುದು, ಶತ್ರುಗಳನ್ನು ಜಯಿಸುವುದು–ಇವುಗಳು ತನ್ನ ಶ್ರೇಯಸ್ಸಿಗೆ ಸಾಧನಗಳೆಂದು ತಿಳಿದು ಧನದ ಆರ್ಜನೆಯನ್ನು ಧರ್ಮದಿಂದಲೇ ಮಾಡಬೇಕೆಂದು ಅವನು ಇಚ್ಛಿಸಿದನು. ಸುಹೋತ್ರನು ತನ್ನ ರಾಜ್ಯವನ್ನು ಮ್ಲೇಚ್ಛರಿಂದಲೂ, ಕಳ್ಳ-ಕಾಕರಿಂದಲೂ ರಹಿತವನ್ನಾಗಿ ಮಾಡಿ, ನಿಷ್ಕಂಟಕವಾಗಿದ್ದ ದೇಶವನ್ನು ಶಾಸನಮಾಡುತ್ತಾ, ಧರ್ಮಾಚರಣೆಯ ಮೂಲಕವಾಗಿ ದೇವತೆಗಳನ್ನು ಆರಾಧಿಸುತ್ತಾ, ಬಾಣಗಳಿಂದ ಶತ್ರುಗಳನ್ನು ಜಯಿಸುತ್ತಾ, ಎಲ್ಲ ಪ್ರಾಣಿಗಳನ್ನೂ ತನ್ನ ಗುಣಾತಿಶಯದಿಂದ ಸಂತೋಷಪಡಿಸುತ್ತಾ ಇದ್ದನು. ಆ

ರಾಜನ ಪರಮಧಾರ್ಮಿಕತೆಯನ್ನು ಕಂಡು ಸುಪ್ರೀತನಾದ ಪರ್ಜನ್ಯನು ಅನೇಕವರ್ಷಗಳ ಕಾಲ ಸುವರ್ಣದ ಮಳೆಯನ್ನೇ ಸುರಿಸಿದನು. ಸುಹೋತ್ರನ ರಾಜ್ಯದಲ್ಲಿ ಅದಕ್ಕೆ ಮೊದಲು ಸುವರ್ಣವರ್ಣದ ನೀರಿನಿಂದ ತುಂಬಿ ಸ್ವಚ್ಛಂದವಾಗಿ ಹರಿಯುತ್ತಿದ್ದ ನದಿಗಳು ಸುವರ್ಣದ ನೀರನ್ನೇ ತುಂಬಿಕೊಂಡು ಹರಿಯತೊಡಗಿದುವು. ಬಳಿಕ ಸುವರ್ಣಮಯವಾದ ಆ ನದಿಗಳಲ್ಲಿ ಸುವರ್ಣಮಯವಾದ ಮೊಸಳೆ, ಏಡಿ, ನಾನಾವಿಧವಾದ ಮೀನುಗಳು ಇರತೊಡಗಿದುವು. ಇಷ್ಟು ಮಾತ್ರವಲ್ಲದೇ ಪರ್ಜನ್ಯನು ಇಷ್ಟವಾದ ಎಲ್ಲ ವಸ್ತುಗಳನ್ನೂ ಸುರಿಸುತ್ತಿದ್ದನು. ವಿಧ-ವಿಧವಾದ ಬೆಳ್ಳಿಯ ಪದಾರ್ಥಗಳು, ಅಪರಿಮಿತವಾದ ಚಿನ್ನದ ಪದಾರ್ಥಗಳು ಈ ಎಲ್ಲವನ್ನೂ ಮಳೆಯ ರೂಪದಲ್ಲಿ ಸುರಿಸುತ್ತಿದ್ದನು. ಅವನ ರಾಜ್ಯದಲ್ಲಿ ಒಂದು ಕ್ರೋಶದಷ್ಟು (ಎರಡು ಮೈಲಿಗಳಷ್ಟು) ಉದ್ದ ಮತ್ತು ಒಂದು ಕ್ರೋಶದಷ್ಟು ಅಗಲವಿರುವ ಬಾವಿಗಳಿದ್ದುವು. ಆ ಬಾವಿಗಳಲ್ಲಿ ವಾಮನಾಕಾರದ (ಕುಳ್ಳಾದ) ಗೂನುಬೆನ್ನಿನ ಸಾವಿರಾರು ಮೊಸಳೆಗಳೂ, ಮೀನುಗಳೂ, ಆಮೆಗಳೂ ಸುವರ್ಣಮಯ ವಾಗಿರುವುದನ್ನು ನೋಡಿ ಸುಹೋತ್ರರಾಜನು ವಿಸ್ಮಯಗೊಂಡನು. ಅನಂತರ ರಾಜರ್ಷಿಯಾದ ಸುಹೋತ್ರನು ಕುರುಜಾಂಗಲದಲ್ಲಿ ಬಹುದಿನಗಳಲ್ಲಿ ಮಾಡುವ ವಿಸ್ತಾರವಾದ ಯಜ್ಞವೊಂದನ್ನು ಮಾಡಿ ತನ್ನಲ್ಲಿದ್ದ ಅಪಾರವಾದ ಸುವರ್ಣರಾಶಿಯನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಅದಲ್ಲದೇ ಅವನು ಒಂದು ಸಾವಿರ ಅಶ್ವಮೇಧಗಳನ್ನೂ, ಒಂದು ನೂರು ರಾಜಸೂಯಯಾಗಗಳನ್ನೂ, ಬಹುದಕ್ಷಿಣಾಕವಾದ ಪುಣ್ಯತಮವಾದ ಅನೇಕ ಕ್ಷತ್ರಿಯಯಜ್ಞಗಳನ್ನೂ ಮಾಡಿದನು. ಈ ರೀತಿಯಲ್ಲಿ ರಾಜನು ನಿತ್ಯ, ನೈಮಿತ್ತಿಕ ಮತ್ತು ಕಾಮ್ಯಯಜ್ಞಗಳ ಅನುಷ್ಠಾನದಿಂದ ಮನೋವಾಂಛಿತವಾದ ಗತಿಯನ್ನು ಹೊಂದಿದನು. ಶ್ವೈತ್ಯಸೃಂಜಯ! ಆ ಸುಹೋತ್ರರಾಜನೂ ಸಹ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ–ಇವುಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೇ ಮೃತ್ಯುವಶನಾದನೆಂದಮೇಲೆ ನಿನ್ನ ಮಗನ ವಿಷಯವಾಗಿ ನೀನು ಅನುತಾಪಪಡಬೇಕಾಗಿಲ್ಲ. ಏಕೆಂದರೆ : ನಿನ್ನ ಮಗನು ಸುಹೋತ್ರನಂತೆ

ಯಾವ ಯಜ್ಞವನ್ನೂ ಮಾಡಿದವನಲ್ಲ. ಯಜ್ಞ-ಯಾಗಾದಿಗಳ ಮೂಲಕವಾಗಿ ಯಥೇಚ್ಛವಾಗಿ ದಾನಕೊಡುವ ಉದಾರಗುಣವೂ ಅವನಲ್ಲಿರಲಿಲ್ಲ."

ಯುಧಿಷ್ಠಿರ! ನಾರದರು ಈ ರೀತಿಯಲ್ಲಿ ಸೃಂಜಯನಿಗೆ ಸುಹೋತ್ರನ ಕಥೆಯನ್ನು ಉದಾಹರಿಸಿ ಸಮಾಧಾನಹೇಳಿದರು."

೫೬ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಪೌರವರಾಜನ ಅದ್ಭುತವಾದ ದಾನದ ವೃತ್ತಾಂತ

ನಾರದರು ಮತ್ತೊಂದು ಆಖ್ಯಾನವನ್ನು ಹೇಳುತ್ತಾ ಸೃಂಜಯನಿಗೆ ಸಮಾಧಾನಮಾಡಲು ಯತ್ನಿಸುತ್ತಾರೆ:

"ಮಹಾರಾಜ! ಪೌರವನು ಹತ್ತು ಲಕ್ಷ ಬಿಳಿಯಕುದುರೆಗಳನ್ನು ದಾನವಾಗಿ ಕೊಟ್ಟನು. ಅವನೂ ಸಹ ಕಾಲವು ಪ್ರಾಪ್ತವಾಗಲಾಗಿ ಮೃತ್ಯುವಶನಾದನೆಂಬುದನ್ನು ನಾವು ಕೇಳಿರುವೆವು.

ಪೌರವರಾಜನು ಮಾಡಿದ ಅಶ್ವಮೇಧಯಾಗಕ್ಕೆ ದೇಶ-ವಿದೇಶಗಳಿಂದ ಆಗಮಿಸಿದ್ದ ಶಿಕ್ಷಾಶಾಸ್ತ್ರ, ಅಕ್ಷರಶಾಸ್ತ್ರ (ಲಿಪಿಶಾಸ್ತ್ರ) ಮತ್ತು ಯಜ್ಞದ ವಿಧಿಗಳನ್ನು ತಿಳಿದಿದ್ದ ವಿದ್ವಾಂಸರ ಸಂಖ್ಯೆಯನ್ನು ಎಣಿಸಿ ಹೇಳಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಅಗಣಿತ ಸಂಖ್ಯೆಯಲ್ಲಿ ಬಂದಿದ್ದರು. ಪ್ರಿಯದರ್ಶನ ರಾದ, ಉದಾರಿಗಳಾದ, ವೇದಾಧ್ಯಯನಗಳನ್ನೂ ಮಾಡಿ ಸ್ನಾತಕರಾದ ಬ್ರಾಹ್ಮಣರು ಅನ್ನ, ವಸ್ತ್ರ, ಗೃಹ, ಸುಂದರವಾದ ಹಾಸಿಗೆ, ಆಸನ, ಭೋಜನಾದಿಗಳನ್ನು ಪಡೆದುಕೊಳ್ಳುತ್ತಿದ್ದರು. ಉದ್ಯೋಗಶೀಲರಿಂದಲೂ (ಸೇವಕರಿಂದಲೂ), ಆಟಗಾರರಿಂದಲೂ, ನಟ-ನರ್ತಕ-ಗಾಯಕರಿಂದಲೂ, ಸ್ವರ್ಣಚೂಡರಿಂದಲೂ, ಆರತಿಮಾಡುವವರಿಂದಲೂ (ಪಾಚಕ-ಕ್ಷೌರಿಕ ರಿಂದಲೂ) ಯಜ್ಞಕ್ಕೆ ಆಗಮಿಸಿದ್ದ ವಿದ್ವಾಂಸರು ಹರ್ಷಿತರಾಗುತ್ತಿದ್ದರು. ಪೌರವ ರಾಜನು ಪ್ರತಿಯೊಂದು ಯಜ್ಞದಲ್ಲಿಯೂ ಆಯಾ ಸಮಯಗಳಲ್ಲಿ ಯಥೇಚ್ಛವಾದ ದಕ್ಷಿಣೆಗಳನ್ನು ಕೊಡುತ್ತಿದ್ದನು. ಮದೋದಕವನ್ನು ಸುರಿಸು ತ್ತಿದ್ದ ಹತ್ತು ಸಾವಿರ ಆನೆಗಳನ್ನೂ, ಧ್ವಜಪತಾಕೆಗಳಿಂದ ಕೂಡಿದ ಸುವರ್ಣ

ಮಯವಾದ ರಥಗಳನ್ನೂ, ಸುವರ್ಣಾಭರಣಗಳಿಂದ ಭೂಷಿತರಾಗಿ ಕುದುರೆಗಳ ಮೇಲೂ, ಆನೆಗಳ ಮೇಲೂ ಮತ್ತು ರಥಗಳ ಮೇಲೂ ಕುಳಿತಿರುತ್ತಿದ್ದ, ಸುವರ್ಣದ ಕಾಂತಿಯನ್ನು ಹೊಂದಿದ್ದ ಹತ್ತು ಲಕ್ಷ ಕನ್ಯೆಯರನ್ನೂ ದಾನವಾಗಿ ಕೊಡುತ್ತಿದ್ದನು. ಗೃಹ, ಕ್ಷೇತ್ರ (ಗದ್ದೆ-ಹೊಲ ಮೊದಲಾದುವು), ನೂರು ಹಸುಗಳು–ಇವುಗಳನ್ನೂ ಸಹ ರಾಜನು ಯಾನಾರೂಢರಾದ ಕನ್ಯೆಯರೊಡನೆ ಸತ್ಪಾತ್ರರಿಗೆ ದಾನಮಾಡುತ್ತಿದ್ದನು. ಸುವರ್ಣಮಾಲೆಗಳಿಂದ ಸಮಲಂಕೃತವಾದ, ದೊಡ್ಡದಾದ ಶರೀರವುಳ್ಳ, ಸಾವಿರಾರು ಅನುಚರರಿಂದ ಯುಕ್ತವಾದ ಒಂದು ಕೋಟಿ ಗೋವುಗಳನ್ನು ದಾನವಾಗಿ ಕೊಡುತ್ತಿದ್ದನು. ಆ ಹಸುಗಳ ಜೊತೆಯಲ್ಲಿ ಕರುಗಳೂ ಇರುತ್ತಿದ್ದುವು. ಹಾಲುಕರೆಯಲು ಕಂಚಿನ ಪಾತ್ರೆಗಳನ್ನೂ ಹಸುಗಳ ಜೊತೆಯಲ್ಲಿ ಕೊಡುತ್ತಿದ್ದನು. ದಾಸ-ದಾಸಿಯರು, ಹೇಸರಗತ್ತೆಗಳು, ಒಂಟೆಗಳು, ಆಡು-ಕುರಿಗಳು–ಈ ಎಲ್ಲವನ್ನೂ ರಾಜನು ಅಪಾರಸಂಖ್ಯೆಯಲ್ಲಿ ದಾನವಾಗಿ ಕೊಡುತ್ತಿದ್ದನು. ಬಹುದಿನಗಳ ಪರ್ಯಂತ ವಾಗಿ ನಡೆಯುತ್ತಿದ್ದ ಆ ಯಜ್ಞ ಸಮಯದಲ್ಲಿ ರಾಜನು ಅನೇಕವಿಧವಾದ ರತ್ನಗಳನ್ನೂ, ಪರ್ವತೋಪಮವಾದ ಬಗೆ-ಬಗೆಯ ಅನ್ನದ ರಾಶಿಗಳನ್ನೂ ದಕ್ಷಿಣಾರೂಪದಲ್ಲಿ ಕೊಡುತ್ತಿದ್ದನು. ಅವನು ಮಾಡುತ್ತಿದ್ದ ಯಜ್ಞದ ವಿಷಯವಾಗಿ ಮತ್ತು ಕೊಡುತ್ತಿದ್ದ ದಕ್ಷಿಣೆಯ ವಿಷಯವಾಗಿ ಪ್ರಾಚೀನವಾದ ಇತಿಹಾಸಗಳನ್ನು ತಿಳಿದಿದ್ದ ಜನರು ಈ ಪದ್ಯವನ್ನು ಹಾಡುತ್ತಿದ್ದರು:

**ಅಙ್ಗಸ್ಯ ಯಜಮಾನಸ್ಯ ಸ್ವಧರ್ಮಾಧಿಗತಾಃ ಶುಭಾಃ।**
**ಗುಣೋತ್ತರಾಸ್ತು ಕ್ರತವಸ್ತಸ್ಯಾಸನ್ಸಾರ್ವಕಾಮಿಕಾಃ ॥೧೧॥**

'ಯಜಮಾನನಾದ ಅಂಗರಾಜನ (ಪೌರವನ) ಎಲ್ಲ ಯಜ್ಞಗಳೂ ಸ್ವಧರ್ಮೋಕ್ತವಾದ ರೀತಿಯಲ್ಲಿ ಆಚರಿಸಲ್ಪಡುತ್ತಿದ್ದು ಶುಭಾವಹಗಳಾಗಿದ್ದುವು. ಅವನು ಮಾಡುತ್ತಿದ್ದ ಕ್ರತುಗಳೆಲ್ಲವೂ ಉತ್ತರೋತ್ತರ ಗುಣವುಳ್ಳವುಗಳೂ, ಸರ್ವಕಾಮನೆಗಳನ್ನೂ ಪೂರೈಸಿಕೊಡತಕ್ಕುವುಗಳೂ ಆಗಿದ್ದುವು.'

ಶ್ವೈತ್ಯಸೃಂಜಯ! ಪೌರವರಾಜನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು ಮತ್ತು ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೇ ಮೃತ್ಯುವಶ

ನಾದನೆಂದಮೇಲೆ ನೀನು ನಿನ್ನ ಮಗನ ವಿಷಯವಾಗಿ ಪರಿತಾಪ ಪಡಬೇಕಾಗಿಲ್ಲ. ಏಕೆಂದರೆ: ನಿನ್ನ ಮಗನು ಪೌರವನಂತೆ ಯಾವ ಯಜ್ಞವನ್ನೂ ಮಾಡಿರಲಿಲ್ಲ. ಯಜ್ಞ-ಯಾಗಾದಿಗಳ ಮೂಲಕ ಯಥೇಚ್ಛವಾಗಿ ದಾನಕೊಡುವ ಉದಾರಗುಣವೂ ಅವನಲ್ಲಿರಲಿಲ್ಲ."

ಯುಧಿಷ್ಠಿರ! ನಾರದರು ಈ ರೀತಿಯಲ್ಲಿ ಸೃಂಜಯನಿಗೆ ಪೌರವನ ಕಥೆಯನ್ನು ಉದಾಹರಿಸಿ ಸಮಾಧಾನಹೇಳಿದರು.

ಽ೭ನೆಯ ಅಧ್ಯಾಯವು ಮುಗಿಯಿತು.

ಽ೮ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಶಿಬಿರಾಜನ ಯಜ್ಞ ಮತ್ತು ದಾನದ ಮಹತ್ತ್ವ

ನಾರದರು ಸೃಂಜಯನನ್ನು ಸಮಾಧಾನಗೊಳಿಸಲು ಶಿಬಿರಾಜನ ಕಥೆಯನ್ನು ಹೇಳುತ್ತಾರೆ:

"ಮಹಾರಾಜ! ಶರೀರವು ಸಂಪೂರ್ಣವಾಗಿ ಚರ್ಮದಿಂದ ಹೊದ್ದಿಸಲ್ಪಟ್ಟಿರುವಂತೆ–ಈ ಪೃಥ್ವಿಯನ್ನೇ ಯಾರು ತನ್ನ ಸುತ್ತಲೂ ಸುತ್ತಿಕೊಂಡಿದ್ದನೋ (ಸಂಪೂರ್ಣವಾಗಿ ತನ್ನ ಸ್ವಾಧೀನಪಡಿಸಿಕೊಂಡಿದ್ದನೋ) ಅಂತಹ ಮಹಾನುಭಾವನಾದ ಉಶೀನರನ ಮಗನಾದ ಶಿಬಿಯೂ ಸಹ ಮೃತ್ಯುವಿಗೆ ವಶನಾದನೆಂದು ನಾವು ಕೇಳಿದ್ದೇವೆ. ಶತ್ರುಜಿತನಾದ ಶಿಬಿರಾಜನು ಪರ್ವತ, ದ್ವೀಪ, ಸಮುದ್ರ ಮತ್ತು ವನಗಳಿಂದ ವ್ಯಾಪ್ತವಾಗಿರುವ ಈ ಪೃಥ್ವಿಯನ್ನು ತನ್ನ ರಥದ ಗಡ-ಗಡಾಶಬ್ದದಿಂದ ನಿನಾದಿಸುತ್ತಾ, ಪ್ರಧಾನಭೂತ ರಾದ ಶತ್ರುಗಳನ್ನು ಸಂಹರಿಸುತ್ತಾ ಈ ಅಖಂಡಭೂಮಂಡಲವನ್ನೂ ತನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದನು. ಅವನು ಬಹುದಕ್ಷಿಣಾಕವಾದ ಅನೇಕ ವಿಧವಾದ ಯಜ್ಞಗಳನ್ನೂ ಮಾಡಿದ್ದನು. ವೀರ್ಯವಂತನೂ, ಧೀಮಂತನೂ ಆಗಿದ್ದ ಆ ರಾಜನು ಅಪಾರವಾದ ಐಶ್ವರ್ಯವನ್ನು ಗಳಿಸಿ ಮೂರ್ಧಾಭಿ ಷಿಕ್ತರಾಗಿದ್ದ ಎಲ್ಲ ರಾಜರಿಗೂ ಸಮ್ಮಾನ್ಯನಾಗಿದ್ದನು. ಈ ಪೃಥ್ವಿಯನ್ನು (ಪೃಥಿವಿ ಯಲ್ಲಿದ್ದ ರಾಜರನ್ನು) ಯುದ್ಧದಲ್ಲಿ ಜಯಿಸಿ ಹಲವು ಅಶ್ವಮೇಧಯಾಗಗಳನ್ನು ಮಾಡಿದನು. ಅವನು ಮಾಡುತ್ತಿದ್ದ ಯಜ್ಞಗಳು ಬಹುವಿಧವಾದ ಫಲವನ್ನು

ಕೊಡುತ್ತಿದ್ದುವು. ಯಾವ ವಿಧವಾದ ವಿಘ್ನವೂ ಇಲ್ಲದೇ ನಡೆಯುತ್ತಿದ್ದುವು. ಆ ಯಜ್ಞಗಳಲ್ಲಿ ಶಿಬಿಯು ಸಾವಿರ ಕೋಟಿ ಸುವರ್ಣನಾಣ್ಯಗಳನ್ನು ದಾನವಾಗಿ ಕೊಟ್ಟನು. ಆನೆ, ಕುದುರೆ, ಪಶುಗಳು, ಮೃಗಗಳು, ಗೋವುಗಳು, ಆಡುಗಳು, ಕುರಿಗಳು ಮುಂತಾದ ಪಶುಗಳಿಂದ ಸಮೃದ್ಧವಾಗಿದ್ದ, ಧಾನ್ಯಸಮೃದ್ಧವಾಗಿದ್ದ, ಶುಭದಾಯಕವಾದ ವಿವಿಧಭೂಭಾಗಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಮೇಘಗಳು ಮಳೆಗರೆಯುವಾಗ ಎಷ್ಟು ಜಲಧಾರೆಗಳಿರುತ್ತ ವೆಯೋ, ಆಕಾಶದಲ್ಲಿ ಎಷ್ಟು ನಕ್ಷತ್ರಗಳಿವೆಯೋ, ಗಂಗಾನದಿಯಲ್ಲಿ ಎಷ್ಟು ಮರಳಿನ ಕಣಗಳಿವೆಯೋ, ಮೇರುಪರ್ವತದಲ್ಲಿ ಎಷ್ಟು ದೊಡ್ಡ



ಬಂಡೆಗಳಿವೆಯೋ, ಸಮುದ್ರದಲ್ಲಿ ಎಷ್ಟು ರತ್ನಗಳೂ ಮತ್ತು ಪ್ರಾಣಿಗಳೂ ಇವೆಯೋ ಅಷ್ಟೇ ಸಂಖ್ಯೆಯ ಗೋವುಗಳನ್ನು ಉಶೀನರನ ಮಗನಾದ ಶಿಬಿಯು ತಾನು ಮಾಡಿದ ಯಜ್ಞದಲ್ಲಿ ದಾನಮಾಡಿದನು. ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಮಾಡುವಾಗ, ಭೂತ-ಭವಿಷ್ಯದ್ವರ್ತಮಾನಕಾಲಗಳಲ್ಲಿ ಶಿಬಿಯಂತೆ ಭಾರವನ್ನು (ಹೊಣೆಗಾರಿಕೆಯನ್ನು) ವಹಿಸತಕ್ಕ ಒಬ್ಬನೇ ಒಬ್ಬ ಪುರುಷಶ್ರೇಷ್ಠನನ್ನೂ ತಾನು ಕಾಣಲಿಲ್ಲ. ಸರ್ವಕಾಮನೆಗಳನ್ನೂ ಕೊಡತಕ್ಕ

(ಯಜ್ಞಕಾಲದಲ್ಲಿ ಬಂದವರ ಸಕಲಕಾಮನೆಗಳನ್ನೂ ಪೂರ್ಣಗೊಳಿಸುವ) ನಾನಾವಿಧವಾದ ಯಜ್ಞಗಳನ್ನು ಶಿಬಿಯು ಮಾಡಿದ್ದನು. ಯಜ್ಞಕ್ಕೆ ಸಂಬಂಧಿಸಿದಂತೆ ಯಜ್ಞಸ್ತಂಭಗಳು, ಆಸನಗಳು, ಅಗ್ನಿಗೃಹಗಳು, ಪ್ರಾಕಾರಗಳು, ಬಹಿರ್ದ್ವಾರಗಳು ಈ ಎಲ್ಲವೂ ಸುವರ್ಣಮಯವಾಗಿದ್ದುವು. ಅವನ ಯಜ್ಞಗಳಲ್ಲಿ ಶುಚಿ-ರುಚಿಯಾದ ಅನ್ನ-ಪಾನಗಳಿರುತ್ತಿದ್ದುವು. ಹಾಲಿನ ಮತ್ತು ಮೊಸರಿನ ಸರೋವರಗಳೇ ಇದ್ದುವು. ಅವನ ಯಜ್ಞವಾಟದಲ್ಲಿ ಶುಭ್ರವಾದ ನೀರಿನ ನದಿಗಳಿದ್ದುವು. ಪರ್ವತೋಪಮವಾದ ಅನ್ನದ ರಾಶಿಗಳಿದ್ದುವು. ನಾನಾವಿಧವಾದ ಭಕ್ಷ್ಯಗಳಿಂದ ಸಂತುಷ್ಟರಾದ ಲಕ್ಷೋಪಲಕ್ಷ ಬ್ರಾಹ್ಮಣರು ಪ್ರಿಯವಾದ ಕಥೆಗಳನ್ನೂ ಮಾತುಗಳನ್ನೂ ಹೇಳುತ್ತಿದ್ದರು.

ಯಜ್ಞವಾಟದಲ್ಲಿ ಸರ್ವಕಾಲದಲ್ಲಿಯೂ–"ಪ್ರಜೆಗಳೇ! ಸ್ನಾನಮಾಡಿರಿ. ನಿಮಗೆ ಯಾವುದು ರುಚಿಕರವಾಗಿರುವುದೋ ಅದನ್ನೇ ಪಡೆದುಕೊಂಡು ಯಥೇಚ್ಛವಾಗಿ ಕುಡಿಯಿರಿ. ಯಥೇಚ್ಛವಾಗಿ ಭಕ್ಷಿಸಿರಿ"– ಎಂಬ ಘೋಷಣೆಗಳೇ ಕೇಳಿಬರುತ್ತಿದ್ದುವು. ಲಕ್ಷೋಪಲಕ್ಷ ಜನರು ಅನುದಿನವೂ ಭೋಜನಮಾಡಿ ತೃಪ್ತರಾಗುತ್ತಿದ್ದರು. ಭಗವಾನ್ ಪರಶಿವನು ಶಿಬಿಯ ಅಂತಹ ಪುಣ್ಯಕರ್ಮಾಚರಣೆಯಿಂದ ಪ್ರಸನ್ನನಾಗಿ ಅವನಿಗೆ ಈ ವರವನ್ನಿತ್ತನು:

**ಅಕ್ಷಯಂ ದದತೋ ವಿತ್ತಂ ಶ್ರದ್ಧಾ ಕೀರ್ತಿಸ್ತಥಾ ಕ್ರಿಯಾಃ ।**
**ಯಥೋಕ್ತಮೇವ ಭೂತಾನಾಂ ಪ್ರಿಯತ್ವಂ ಸ್ವರ್ಗಮುತ್ತಮಮ್ ॥**

"ಮಹಾರಾಜ! ನೀನು ದಾನಮಾಡುತ್ತಿದ್ದಂತೆಲ್ಲಾ ನಿನ್ನ ಐಶ್ವರ್ಯವು ವೃದ್ಧಿಸುತ್ತಿರಲಿ. (ಅಕ್ಷಯವಾಗಲಿ.) ನಿನ್ನ ಶ್ರದ್ಧೆ, ಕೀರ್ತಿ ಮತ್ತು ಪುಣ್ಯ ಕರ್ಮಗಳೂ ವೃದ್ಧಿಹೊಂದಲಿ. ಎಲ್ಲ ಪ್ರಾಣಿಗಳ ಪ್ರೀತಿಗೂ ನೀನು ಪಾತ್ರನಾಗುವೆ. ಅನಂತರ ಉತ್ತಮೋತ್ತಮವಾದ ಸ್ವರ್ಗವನ್ನೂ ಪಡೆಯುವೆ. ನಾನು ಯಾವರೀತಿಯಲ್ಲಿ ಹೇಳಿರುವೆನೋ ಅದು ಹಾಗೆಯೇ ನಡೆಯುತ್ತದೆ."

ಸೃಂಜಯ! ಶಿಬಿಯು ಆ ವರಗಳೆಲ್ಲವನ್ನೂ ಪಡೆದುಕೊಂಡು ಬಹಳ ಕಾಲದವರೆಗೆ ಧರ್ಮದಿಂದ ರಾಜ್ಯವನ್ನು ಪರಿಪಾಲನೆಮಾಡುತ್ತಿದ್ದು ಪ್ರಾಪ್ತ ಕಾಲದಲ್ಲಿ ಸ್ವರ್ಗಕ್ಕೆ ಹೋದನು. ಶಿಬಿಯೂ ಸಹ ಧರ್ಮ, ಜ್ಞಾನ, ವೈರಾಗ್ಯ

ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಅಧಿಕಪುಣ್ಯಶಾಲಿಯಾಗಿದ್ದನು. ಅಂತಹವನೇ ಮೃತ್ಯುವಶನಾಗಿರುವಾಗ ನೀನು ನಿನ್ನ ಮಗನ ವಿಷಯವಾಗಿ ಪರಿತಪಿಸಬೇಕಾಗಿಲ್ಲ. ಏಕೆಂದರೆ ನಿನ್ನ ಮಗನು ಶಿಬಿಯಂತೆ ಯಜ್ಞವನ್ನೂ ಮಾಡಲಿಲ್ಲ. ಅವನಂತೆ ಉದಾರಿಯೂ ಆಗಿರಲಿಲ್ಲ."

ಯುಧಿಷ್ಠಿರ ! ನಾರದರು ಹೀಗೆ ಶಿಬಿಯ ಕಥೆಯನ್ನು ಉದಾಹರಿಸಿ ಸೃಂಜಯನನ್ನು ಸಮಾಧಾನಪಡಿಸಿದರು.

೫೮ನೆಯ ಅಧ್ಯಾಯವು ಮುಗಿಯಿತು.

೫೯ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಭಗವಂತನಾದ ಶ್ರೀರಾಮನ ಚರಿತ್ರೆ

ನಾರದರು ಸೃಂಜಯನನ್ನು ಪುತ್ರಶೋಕದಿಂದ ಮುಕ್ತಿಗೊಳಿಸಲು ಶ್ರೀರಾಮನ ಕಥೆಯನ್ನು ಹೇಳುತ್ತಾರೆ:

"ಮಹಾರಾಜ! ಶ್ರೀರಾಮನ ರಾಜ್ಯದಲ್ಲಿ ಪ್ರಜೆಗಳು ಆನಂದ ತುಂದಿಲರಾಗಿದ್ದರು. ತಂದೆಯಾದವನು ಔರಸಪುತ್ರರನ್ನು ಅತ್ಯಂತ ಪ್ರೀತಿಯಿಂದ ಸಂರಕ್ಷಿಸುವಂತೆ ರಾಮನು ತನ್ನ ಪ್ರಜೆಗಳನ್ನು ಪರಿಪಾಲಿಸುತ್ತಿದ್ದನು. ಅಂತಹ ಧರ್ಮಾತ್ಮನಾದ ದಶರಥನ ಮಗನಾದ ಶ್ರೀರಾಮನೂ ಸಹ ಮೃತ್ಯುವಶನಾದನೆಂದು ನಾವು ಕೇಳಿರುವೆವು. ಅಮಿತತೇಜಸ್ವಿಯಾದ ರಾಮನಲ್ಲಿ ಅಗಣಿತವಾದ ಗುಣಗಳಿದ್ದುವು. ಲಕ್ಷ್ಮಣಾಗ್ರಜನಾದ, ಅಚ್ಯುತನಾದ ಶ್ರೀರಾಮನು ತಂದೆಯ ನಿರ್ದೇಶಾನುಸಾರವಾಗಿ ಹದಿನಾಲ್ಕು ವರ್ಷಗಳ ಕಾಲ ತನ್ನ ಪತ್ನಿಯಾದ ಸೀತಾದೇವಿಯೊಡನೆ ಅರಣ್ಯದಲ್ಲಿ ವಾಸಮಾಡಿದನು. ಅರಣ್ಯದಲ್ಲಿದ್ದಾಗಲೇ ಮನುಜಶ್ರೇಷ್ಠನಾದ ಶ್ರೀರಾಮನು ತಪಸ್ವಿಗಳ ರಕ್ಷಣಾರ್ಥವಾಗಿ ಜನಸ್ಥಾನದಲ್ಲಿದ್ದ ಹದಿನಾಲ್ಕು ಸಾವಿರ ರಾಕ್ಷಸರನ್ನು ಸಂಹರಿಸಿದನು. ಅಲ್ಲಿಯೇ ವಾಸಮಾಡುತ್ತಿದ್ದಾಗ ರಾವಣನೆಂಬ ರಾಕ್ಷಸನು ಲಕ್ಷ್ಮಣಸಹಿತನಾದ ಶ್ರೀರಾಮನನ್ನು ವಿಮೋಹಗೊಳಿಸಿ ಶ್ರೀರಾಮನ ಭಾರ್ಯೆಯಾದ ವೈದೇಹಿಯನ್ನು ಅಪಹರಿಸಿಕೊಂಡು ಹೋದನು.

ಕ್ರುದ್ಧನಾದ ಶ್ರೀರಾಮನು ಅಪರಾಧಿಯಾದ, ಪುಲಸ್ತ್ಯನ ಮಗನಾದ,

ಶತ್ರುಗಳಿಂದ ಅಪರಾಜಿತನಾಗಿದ್ದ ರಾವಣನನ್ನು ಪೂರ್ವಕಾಲದಲ್ಲಿ ಭಗವಾನ್ ಶಂಕರನು ಅಂಧಕಾಸುರನನ್ನು ಸಂಹರಿಸಿದಂತೆ ಸಂಹರಿಸಿದನು. ಮಹಾಬಾಹುವಾದ ಶ್ರೀರಾಮನು ಸುರಾಸುರರಿಂದಲೂ ಅವಧ್ಯನಾಗಿದ್ದ, ದೇವ-ಬ್ರಾಹ್ಮಣರಿಗೆ ಕಂಟಕಪ್ರಾಯನಾಗಿದ್ದ, ಪರಿವಾರಸಮೇತನಾದ ರಾವಣನನ್ನು ಸಂಹರಿಸಿದನು. ಈ ರೀತಿಯಾಗಿ ಅವನು ಪ್ರಜೆಗಳಿಗೆ ಅನುಗ್ರಹಮಾಡಿ ದೇವತೆಗಳಿಂದಲೂ ಸಮ್ಮಾನಿತನಾದನು. ದೇವರ್ಷಿಗಣಗಳಿಂದ ಪೂಜಿತನಾದ ಶ್ರೀರಾಮನು ವಿಧಿಪೂರ್ವಕವಾಗಿ ರಾಜ್ಯವನ್ನು ಪಡೆದು, ತನ್ನ ಕೀರ್ತಿಯನ್ನು ಜಗತ್ತಿಗೆಲ್ಲಾ ಹರಡಿ, ಸರ್ವಪ್ರಾಣಿಗಳ ವಿಷಯದಲ್ಲಿಯೂ ಅನುಕಂಪವನ್ನು ತೋರಿಸುತ್ತಾ, ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಭಗವಾನ್ ಶ್ರೀರಾಮನು ರಾಜಸೂಯ ಮತ್ತು ಅಶ್ವಮೇಧಗಳನ್ನು ನಿರ್ವಿಘ್ನವಾಗಿ ಮಾಡಿ, ಹವಿಸ್ಸಿನಿಂದ ಸುರೇಶನಾದ ಇಂದ್ರನನ್ನು ತೃಪ್ತಿಪಡಿಸಿ ಅಮಿತವಾದ ಆನಂದವನ್ನು ಉಂಟುಮಾಡಿದನು. ರಾಜಸೂಯಾಶ್ವಮೇಧಗಳೇ ಅಲ್ಲದೇ ಶ್ರೀರಾಮನು ಬಹುಗುಣಯುಕ್ತವಾದ ಬೇರೆ-ಬೇರೆಯ ಅನೇಕ ಯಜ್ಞಗಳನ್ನೂ ಮಾಡಿದನು. ಶ್ರೀರಾಮಚಂದ್ರನ ರಾಜ್ಯದಲ್ಲಿ ಎಲ್ಲ ಪ್ರಜೆಗಳು ಹಸಿವು-ಬಾಯಾರಿಕೆಗಳನ್ನೂ ರೋಗಗಳನ್ನೂ ಜಯಿಸಿದ್ದರು. ಅವನ ಪ್ರಜೆಗಳಿಗೆ ಹಸಿವು - ಬಾಯಾರಿಕೆಗಳೇ ಆಗುತ್ತಿರಲಿಲ್ಲ. ನೀರೋಗದೃಢಕಾಯರಾಗಿದ್ದರು. ಶ್ರೀರಾಮನು ಉತ್ತಮಗುಣಸಂಪನ್ನನಾಗಿದ್ದನು ಮತ್ತು ಅಮಿತವಾದ ತನ್ನ ತೇಜಸ್ಸಿನಿಂದ ದೇದೀಪ್ಯಮಾನನಾಗಿ ಪ್ರಕಾಶಿಸುತ್ತಿದ್ದನು. ದಶರಥನ ಮಗನಾದ ಶ್ರೀರಾಮನು ತನ್ನಲ್ಲಿದ್ದ ಅಮಿತವಾದ ತೇಜಸ್ಸಿನಿಂದ ಎಲ್ಲ ಪ್ರಾಣಿಗಳನ್ನೂ ಮೀರಿ ಪ್ರಕಾಶಿಸುತ್ತಿದ್ದನು. ರಾಮನು ರಾಜ್ಯಭಾರ ಮಾಡುತ್ತಿರಲಾಗಿ ಋಷಿಗಳೂ, ದೇವತೆಗಳೂ, ಮನುಷ್ಯರೂ ಒಟ್ಟಾಗಿಯೇ ಭೂಲೋಕದಲ್ಲಿ ವಾಸಮಾಡುತ್ತಿದ್ದರು. ರಾಮನು ರಾಜ್ಯಭಾರಮಾಡುತ್ತಿದ್ದಾಗ ಪ್ರಾಣಿಗಳ ಪ್ರಾಣಾಪಾನಸಮಾನಾದಿ ಪ್ರಾಣವಾಯುಗಳು ಕ್ಷಯಿಸುತ್ತಿರಲಿಲ್ಲ. ವ್ಯತಿರಿಕ್ತವಾಗಿ ವರ್ತಿಸಿ ವಾತಾದಿ ರೋಗಗಳಿಗೆ ಕಾರಣವಾಗುತ್ತಿರಲಿಲ್ಲ. ಯಜ್ಞವೇದಿಕೆಯಲ್ಲಾಗಲೀ, ಅಗ್ನ್ಯಾಗಾರದಲ್ಲಾಗಲೀ ಯಜ್ಞೇಶ್ವರನ ತೇಜಸ್ಸು (ಜ್ವಾಲೆಗಳು) ಜಾಜ್ವಲ್ಯಮಾನವಾಗಿ ಉರಿಯುತ್ತಿದ್ದುವು. ಅವನು ರಾಜ್ಯವಾಳುತ್ತಿದ್ದಾಗ ಯಾವ ವಿಧವಾದ ಅನರ್ಥಗಳೂ ಸಂಭವಿಸುತ್ತಿರಲಿಲ್ಲ. ಎಲ್ಲ ಪ್ರಜೆಗಳೂ ದೀರ್ಘಾಯುಗಳಾಗಿದ್ದರು. ಶ್ರೀರಾಮನ ರಾಜ್ಯದಲ್ಲಿ ಯುವಕರು ಮರಣಹೊಂದುತ್ತಿರಲಿಲ್ಲ. ನಾಲ್ಕು ವೇದಗಳಿಂದ (ವೇದಮಂತ್ರ

ಪೂರ್ವಕವಾಗಿ) ಸಮರ್ಪಿಸುತ್ತಿದ್ದ ವಿವಿಧವಾದ ಹವ್ಯ-ಕವ್ಯಗಳನ್ನು ಸುಪ್ರೀತರಾದ ದೇವತೆಗಳೂ ಮತ್ತು ಪಿತೃಗಳೂ ಸ್ವೀಕರಿಸುತ್ತಿದ್ದರು. ಎಲ್ಲ ಕಡೆಗಳಲ್ಲಿಯೂ ಯಜ್ಞ-ಯಾಗಾದಿಗಳು ನಡೆಯುತ್ತಿದ್ದುವು. ವಾಪೀ-ಕೂಪ-ತಟಾಕಾದಿಗಳು ನಿರ್ಮಿತವಾಗುತ್ತಿದ್ದುವು. ಮಾರ್ಗಗಳಲ್ಲಿ ವೃಕ್ಷಗಳನ್ನು ನೆಡುತ್ತಿದ್ದರು. ಶ್ರೀರಾಮನು ರಾಜ್ಯವಾಳುತ್ತಿದ್ದಾಗ ಯಾವ ದೇಶದಲ್ಲಿಯೂ ಕ್ರಿಮಿ-ಕೀಟಗಳ ಕಾಟವಿರಲಿಲ್ಲ. ಹಾವುಗಳಾಗಲೀ, ಚೇಳುಗಳಾಗಲೀ ಇರಲಿಲ್ಲ. ಪ್ರಾಣಿಗಳು ನೀರಿನಲ್ಲಿ ಮುಳುಗಿ ಸಾಯುತ್ತಿರಲಿಲ್ಲ. ಅಕಾಲದಲ್ಲಿ ಬೆಂಕಿಯು ಯಾರನ್ನೂ ಸುಡುತ್ತಿರಲಿಲ್ಲ. (ಯಾರೂ ಅಕಾಲಮೃತ್ಯುವಿಗೆ ತುತ್ತಾಗುತ್ತಿರಲಿಲ್ಲ.) ಅಧರ್ಮವಾದ ಕಾರ್ಯಗಳಲ್ಲಿಯೇ ಅಭಿಲಾಷೆಯಿರುವ ಲುಬ್ಧರಾಗಲೀ, ಮೂರ್ಖರಾಗಲೀ ರಾಮನ ರಾಜ್ಯದಲ್ಲಿರಲಿಲ್ಲ. ಎಲ್ಲ ವರ್ಣದವರೂ ಶಿಷ್ಟರಾಗಿಯೂ, ತಮಗೆ ಇಷ್ಟವಾದ ಯಜ್ಞ-ಯಾಗಾದಿ ಗಳನ್ನು ಮಾಡುವವರಾಗಿಯೂ ಇದ್ದರು. ದಂಡಕಾರಣ್ಯದಲ್ಲಿದ್ದ ಋಷಿಗಳು ಪಿತೃಗಳಿಗೂ, ದೇವತೆಗಳಿಗೂ ಯಥೋಚಿತಕಾಲಗಳಲ್ಲಿ ಅರ್ಪಿಸುತ್ತಿದ್ದ ಸ್ವಧೆಯನ್ನೂ (ಶ್ರಾದ್ಧಾದಿಗಳನ್ನೂ) ಪೂಜೆಯನ್ನೂ ಜನಸ್ಥಾನದಲ್ಲಿದ್ದ ರಾಕ್ಷಸರು ನಾಶಗೊಳಿಸಿಬಿಡುತ್ತಿದ್ದರು. ಶ್ರೀರಾಮನು ಆ ರಾಕ್ಷಸರೆಲ್ಲರನ್ನೂ ಕೊಂದು ಪಿತೃಗಳಿಗೂ ಮತ್ತು ದೇವತೆಗಳಿಗೂ ಯಥಾಪೂರ್ವಕವಾಗಿ ಸ್ವಧಾರ್ಚನೆಗಳು ನಡೆಯುವಂತೆ ಮಾಡಿದನು. ರಾಮನು ರಾಜ್ಯವಾಳುತ್ತಿದ್ದಾಗ ಪ್ರಜೆಗಳಿಗೆ ಸಾವಿರ ಮಕ್ಕಳಿರುತ್ತಿದ್ದರು. ಅವರೆಲ್ಲರೂ ದೀರ್ಘಾಯುಷ್ಮಂತರಾಗಿ ಸಾವಿರ ವರ್ಷಗಳು ಬದುಕಿಬಾಳುತ್ತಿದ್ದರು. ಜ್ಯೇಷ್ಠರಾದವರು ಕನಿಷ್ಠರಿಗೆ ಶ್ರಾದ್ಧಾದಿ ಗಳನ್ನು ಮಾಡುವ ಪ್ರಸಂಗವೇ ಇರುತ್ತಿರಲಿಲ್ಲ. (ಹಿರಿಯರ ಕಣ್ಣೆದುರಿನಲ್ಲಿ ಕಿರಿಯರು ಸಾಯುತ್ತಿರಲಿಲ್ಲ.)

ಶ್ರೀರಾಮನು ಶ್ಯಾಮಲವರ್ಣದವನಾಗಿದ್ದನು. ಯುವಕನಾಗಿದ್ದನು. ಅವನ ಕಣ್ಣುಗಳು ಎಣ್ಣೆಗೆಂಪಾಗಿದ್ದುವು. ಮದಿಸಿದ ಆನೆಯಂತೆ ನಡಿಗೆಯುಳ್ಳವನೂ ಪರಾಕ್ರಮವುಳ್ಳವನೂ ಆಗಿದ್ದನು. ಅವನಿಗೆ ನೀಳವಾದ ತೋಳುಗಳಿದ್ದುವು. ಸುಂದರವಾದ ಭುಜಗಳಿದ್ದುವು. ಸಿಂಹದ ಹೆಗಲಿನಂತೆ ಹೆಗಲುಗಳಿದ್ದುವು. ಮಹಾಬಲಿಷ್ಠನಾಗಿದ್ದನು. ಎಲ್ಲ ಪ್ರಾಣಿಗಳ ಮನಸ್ಸಿಗೂ ವ್ಯಾಮೋಹವನ್ನುಂಟುಮಾಡುತ್ತಿದ್ದ ಶ್ರೀರಾಮನು ಹನ್ನೊಂದುಸಾವಿರ ವರ್ಷಗಳ ಪರ್ಯಂತವಾಗಿ ರಾಜ್ಯವಾಳಿದನು.

**ರಾಮೋ ರಾಮೋ ರಾಮ ಇತಿ ಪ್ರಜಾನಾಮಭವತ್ಕಥಾ ।**
**ರಾಮಾದ್ರಾಮಂ ಜಗದಭೂದ್ರಾಮೇ ರಾಜ್ಯಂ ಪ್ರಶಾಸತಿ ॥೨೨॥**

ರಾಮನು ರಾಜ್ಯಭಾರಮಾಡುತ್ತಿದ್ದಾಗ 'ರಾಮ ರಾಮ ರಾಮ' ಎಂಬುದೇ ಸದಾಕಾಲದಲ್ಲಿಯೂ ಪ್ರಜೆಗಳ ಕಥನದ ವಿಷಯವಾಗಿತ್ತು. ಶ್ರೀರಾಮನ ಕಾರಣದಿಂದಾಗಿ ಸಕಲಜಗತ್ತೂ ರಾಮಮಯವೇ ಆಗಿದ್ದಿತು.

ರಾಮ-ಲಕ್ಷ್ಮಣ-ಭರತ-ಶತ್ರುಘ್ನರಲ್ಲಿ ಒಬ್ಬೊಬ್ಬರಿಗೂ ಇಬ್ಬಿಬ್ಬರು ಮಕ್ಕಳಂತೆ ಎಂಟು ಜನ ಮಕ್ಕಳಿದ್ದರು. ಶ್ರೀರಾಮನು ಎಂಟು ಪ್ರಕಾರವಾದ ರಾಜವಂಶಗಳನ್ನು ಸ್ಥಾಪಿಸಿ ಎಂಟು ಮಂದಿ ಮಕ್ಕಳಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ರಾಜ್ಯಗಳನ್ನು ವಹಿಸಿಕೊಟ್ಟನು. ಅನಂತರ ನಾಲ್ಕು ವರ್ಣಗಳ ಪ್ರಜೆಗಳನ್ನೂ ಅವರ ಆಶಯದಂತೆ ಸ್ವರ್ಗಕ್ಕೆ ಕಳುಹಿಸಿ ತಾನೂ ಸಹ ನಿಜಧಾಮಕ್ಕೆ ತೆರಳಿದನು.

ಸೃಂಜಯ! ಶ್ರೀ ರಾಮಚಂದ್ರನೂ ಸಹ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾದವನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಾತ್ಮನಾಗಿದ್ದನು. ಕಾಲಾನುಗುಣವಾಗಿ ಅಂತಹವನೂ ಸ್ವರ್ಗಕ್ಕೆ ಹೊರಟುಹೋದನು. ಆದುದರಿಂದ ನಿನ್ನ ಮಗನಿಗಾಗಿ ನೀನು ಪರಿತಪಿಸಬೇಡ. ಏಕೆಂದರೆ ನಿನ್ನ ಮಗನು ಯಾಗಮಾಡಿದವನೂ ಅಲ್ಲ. ಉದಾರನೂ ಆಗಿರಲಿಲ್ಲ."

ಯುಧಿಷ್ಠಿರ! ನಾರದರು ಹೀಗೆ ಶ್ರೀರಾಮನ ಕಥೆಯನ್ನು ಉದಾಹರಿಸಿ ಸೃಂಜಯನಿಗೆ ಸಮಾಧಾನ ಹೇಳಿದರು.

ಽ೯ನೆಯ ಅಧ್ಯಾಯವು ಮುಗಿಯಿತು.

ಽ೦ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಭಗೀರಥರಾಜನ ಚರಿತ್ರೆ

ನಾರದರು ಸೃಂಜಯನನ್ನು ಸಮಾಧಾನಪಡಿಸುವ ಸಲುವಾಗಿ ಭಗೀರಥನ ಕಥೆಯನ್ನು ಹೇಳುತ್ತಾರೆ:

"ಮಹಾರಾಜ! ಯಾವನು ಯಜ್ಞಮಾಡುವಾಗ ಗಂಗಾನದಿಯ ತೀರದಲ್ಲಿ ಚಿನ್ನದ ಇಟ್ಟಿಗೆಗಳಿಂದಲೇ ಚಯನಗಳನ್ನು ನಿರ್ಮಿಸಿ ಯಾಗಗಳನ್ನು

ಮಾಡಿದನೋ–ಅಂತಹ ಭಗೀರಥನೂ ಸಹ ಮೃತ್ಯುದೇವತೆಯ ವಶನಾದನೆಂದು ನಾವು ಕೇಳಿದ್ದೇವೆ. ಭಗೀರಥಮಹಾರಾಜನು ಅನೇಕಾನೇಕ ರಾಜರನ್ನೂ-ರಾಜಪುತ್ರರನ್ನೂ ಜಯಿಸಿ, ಅವರ ಬಳಿ ಇದ್ದ ಸುವರ್ಣಾಭರಣಗಳಿಂದ ಅಲಂಕೃತರಾದ ಹತ್ತು ಲಕ್ಷ ಕನ್ಯೆಯರನ್ನು ಬ್ರಾಹ್ಮಣರಿಗೆ ದಾನಮಾಡಿದನು. ಆ ಕನ್ಯೆಯರೆಲ್ಲರೂ ರಥಗಳಲ್ಲಿ ಕುಳಿತಿದ್ದರು. ಪ್ರತಿಯೊಂದು ರಥವನ್ನೂ ನಾಲ್ಕು-ನಾಲ್ಕು ಕುದುರೆಗಳು ಎಳೆಯುತ್ತಿದ್ದುವು. ಪ್ರತಿ ರಥದ ಹಿಂದೆಯೂ ಸುವರ್ಣಮಾಲೆಗಳನ್ನು ಧರಿಸಿದ್ದ ನೂರು ಆನೆಗಳಿದ್ದುವು. ಒಂದೊಂದು ಆನೆಯ ಹಿಂದೆಯೂ ಸಾವಿರ ಕುದುರೆಗಳಿದ್ದುವು. ಒಂದೊಂದು ಕುದುರೆಯನ್ನೂ ಅನುಸರಿಸಿ ನೂರು- ನೂರು ಹಸುಗಳು ಹೋಗುತ್ತಿದ್ದುವು. ಹಸುಗಳ ಹಿಂದೆ ಆಡು-ಕುರಿಗಳ ಮಂದೆಯು ಹೋಗುತ್ತಿದ್ದಿತು.



ಭಗೀರಥನು ಅಗಣಿತವಾದ ದಕ್ಷಿಣೆಗಳನ್ನು ಕೊಡುತ್ತಿದ್ದನು. ಒಬ್ಬೊಬ್ಬ

ರಿಗೆ ದಕ್ಷಿಣೆಯನ್ನು ಕೊಡುವಾಗಲೂ ಒಂದು ಉದ್ಧರಣೆ ನೀರುಬಿಟ್ಟು ಕೊಡಬೇಕು. ಇದು ಶಾಸ್ತ್ರನಿಯಮ. ಹೀಗೆ ಬಿಡುತ್ತಿದ್ದ ನೀರು ಪ್ರವಾಹ ರೂಪವಾಗಿ ಹರಿದು ಗಂಗಾನದಿಯನ್ನೇ ಅತಿಕ್ರಮಿಸಿಬಿಟ್ಟಿತು. (ಗಂಗಾನದಿಯ ಪ್ರವಾಹಕ್ಕಿಂತಲೂ ದಾನೋದಕದ ಪ್ರವಾಹವೇ ಹೆಚ್ಚಾಯಿತು.) ಆದರಿಂದ ಬಹಳ ವ್ಯಥೆಗೊಂಡ ಗಂಗಾನದಿಯ ಅಧಿದೇವತೆಯು ರಾಜನ ತೊಡೆಯ ಮೇಲೆ ಬಂದು ಕುಳಿತಳು. ಈ ರೀತಿಯಲ್ಲಿ ಗಂಗೆಯು ಭಗೀರಥನ ಮಗಳಾದಳು ಮತ್ತು ಭಾಗೀರಥೀ ಎಂಬ ಹೆಸರನ್ನೂ ಪಡೆದಳು. ಭಗೀರಥನ ಊರುವಿನ ಮೇಲೆ (ತೊಡೆಯ ಮೇಲೆ) ಕುಳಿತುದರಿಂದ ಉರ್ವಶೀ ಎಂಬ ಹೆಸರನ್ನೂ ಪಡೆದಳು. ಪುತ್ರೀತ್ವವನ್ನು ಪಡೆದಿದ್ದ ಗಂಗೆಯು ಭಗೀರಥನನ್ನು 'ಪುತ್' ಎಂಬ ನರಕದಿಂದ ಪಾರುಮಾಡಿದುದರಿಂದ ಪುತ್ರತ್ವವನ್ನೂ ಪಡೆದಳು. ಸೂರ್ಯನ ವರ್ಚಸ್ಸಿಗೆ ಸಮಾನವಾದ ವರ್ಚಸ್ಸನ್ನು ಹೊಂದಿರುವ, ಮಧುರಭಾಷಿಗಳಾದ ಗಂಧರ್ವರು ಪ್ರಸನ್ನಮನಸ್ಕರಾಗಿ ಪಿತೃ-ದೇವ-ಮನುಷ್ಯರಿಗೆ ಕೇಳಿಸುವಂತೆ ಇದನ್ನೇ ಗಾಯನಮಾಡುತ್ತಾರೆ.

**ಭಗೀರಥಂ ಯಜಮಾನಮೈಕ್ಷ್ವಾಕುಂ ಭೂರಿದಕ್ಷಿಣಮ್ ।**
**ಗಙ್ಗಾ ಸಮುದ್ರಗಾ ದೇವೀ ವವ್ರೇ ಪಿತರಮೀಶ್ವರಮ್ ॥೮॥**

'ಯಜ್ಞಮಾಡುವ ಸಮಯದಲ್ಲಿ ಬಹಳವಾಗಿ ದಕ್ಷಿಣೆಯನ್ನು ಕೊಡುವ, ಯಜಮಾನನಾದ, ಇಕ್ಷ್ವಾಕುವಂಶೋದ್ಭವನಾದ, ಐಶ್ವರ್ಯವಂತನಾದ ಭಗೀರಥನನ್ನು ಸಮುದ್ರಗಾಮಿನಿಯಾದ ಗಂಗಾದೇವಿಯು ತಂದೆಯನ್ನಾಗಿ ಪರಿಗ್ರಹಿಸಿದಳು.'

ಭಗೀರಥನ ಯಜ್ಞವು ಇಂದ್ರಪ್ರಮುಖರಾದ ದೇವತೆಗಳಿಂದ ಸಮಲಂಕೃತವಾಗುತ್ತಿದ್ದಿತು. (ಇಂದ್ರಪ್ರಮುಖರಾದ ದೇವತೆಗಳು ಭಗೀರಥನ ಯಜ್ಞದಲ್ಲಿ ಭಾಗವಹಿಸುತ್ತಿದ್ದರು.) ಯಜ್ಞದಲ್ಲಿ ಭಗೀರಥನು ಕೊಟ್ಟ ಹವಿಸ್ಸುಗಳನ್ನು ದೇವತೆಗಳು ಆದರದಿಂದ ಸ್ವೀಕರಿಸುತ್ತಿದ್ದರು. ಯಜ್ಞವು ಯಾವ ವಿಧವಾದ ವಿಘ್ನಗಳಾಗಲೀ-ಬಾಧೆಗಳಾಗಲೀ ಇಲ್ಲದೇ ಪೂರ್ಣ ಗೊಳ್ಳುತ್ತಿದ್ದಿತು.

ಯಾವ ಯಾವ ಬ್ರಾಹ್ಮಣನು ತನಗೆ ಬೇಕಾದ ಅಥವಾ ಇಷ್ಟವಾದ ಯಾವ ಪದಾರ್ಥವನ್ನೇ ಯಾವುದೇ ಸ್ಥಳದಲ್ಲಿ ಕೇಳಿದರೂ-ಜಿತೇಂದ್ರಿಯ

ನಾದ, ಯೋಗಪ್ರಭಾವದಿಂದ ಕೂಡಿದ್ದ ಭಗೀರಥನು ಪ್ರಸನ್ನನಾಗಿ ಆ ಪದಾರ್ಥವನ್ನು ಅವನಿಗೆ ಅಲ್ಲಲ್ಲಿಯೇ ದಾನಮಾಡುತ್ತಿದ್ದನು.

ಬ್ರಾಹ್ಮಣರಿಗೆ ಕೊಡಬಾರದೆನ್ನುವ ಪ್ರಿಯವಾದ ಧನವು ಅವನಲ್ಲಿ ಯಾವುದೂ ಇರಲೇ ಇಲ್ಲ. ಯಾವುದೇ ಪ್ರಿಯವಸ್ತುವಾಗಿದ್ದರೂ ಬ್ರಾಹ್ಮಣರು ಅದನ್ನು ಯಾಚಿಸಿದರೆ ಅವರಿಗೆ ದಾನವಾಗಿ ಕೊಟ್ಟುಬಿಡುತ್ತಿದ್ದನು. ಅಂತಹವನೂ ಕಾಲವು ಪ್ರಾಪ್ತವಾದಾಗ ಬ್ರಾಹ್ಮಣರ ಅನುಗ್ರಹದಿಂದ ಬ್ರಹ್ಮಲೋಕಕ್ಕೆ ಹೋದನು.

**ಯೇನ ಯಾತೌ ಮಖಮುಖೌ ದಿಶಾಶಾವಿಹ ಪಾದಪಾಃ ।**
**ತೇನಾವಸ್ಥಾತುಮಿಚ್ಛನ್ತಿ ತಂ ಗತ್ವಾ ರಾಜಮೀಶ್ವರಮ್ ॥೧೨॥**

(ಈ ಶ್ಲೋಕದಲ್ಲಿ ಪೂರ್ವಾರ್ಧಕ್ಕೆ ಅದರಲ್ಲಿಯೂ ದಿಶಾಶಾವಿಹ ಅಥವಾ ದಿಶಾಶಾಂವಿಹ (ಪಾಠಾಂತರದ ಪ್ರಕಾರ) ಪದಕ್ಕೆ ಅರ್ಥ ಮಾಡುವುದು ಕಷ್ಟ ಸಾಧ್ಯವೇ ಆಗಿದೆ. ವ್ಯಾಖ್ಯಾನಕಾರರೂ ಈ ಪದವನ್ನು ಬಿಟ್ಟೇ ವ್ಯಾಖ್ಯಾನ ಮಾಡಿದ್ದಾರೆ. ಹಿಂದಿಯ ಅರ್ಥಕಾರರು "ಶತ್ರುಓಂಕೀ ದಶಾ (ಇಲ್ಲಿರುವುದು ದಿಶಾ) ಔರ್ ಆಶಾಕಾ ಹನನ್ ಕರನೇವಾಲೇ ಸೃಂಜಯ್!- ಶತ್ರುಗಳ ಒಳ್ಳೆಯ ಸ್ಥಿತಿಯನ್ನೂ ಮತ್ತು ಆಶೆಯನ್ನೂ ನಾಶಮಾಡತಕ್ಕ ಸೃಂಜಯನೇ!" ಅರ್ಥಾತ್ ಇವರ ಅಭಿಪ್ರಾಯದಲ್ಲಿ ದಿಶಾಶಾವಿಹ ಎಂಬುದು ಸಂಬೋಧನೆಯಾಗುತ್ತದೆ. ಶಬ್ದ ನಿರೂಪಣೆ ಹೇಗೆಂಬುದು ತಿಳಿಯದಾಗಿದೆ. **ಮಖಮುಖೌ** ಎಂಬುದಕ್ಕೆ ಸರಳವಾದ ಅರ್ಥ: ಇಬ್ಬರು ದೇವತೆಗಳು. ಮಖ ಎಂದರೆ ಯಜ್ಞ. ದೇವತೆಗಳಿಗೆ ಯಜ್ಞಮುಖರೆಂದೂ ಹೆಸರು. ಆದರೆ ವ್ಯಾಖ್ಯಾನಕಾರರು ಈ ಪದಕ್ಕೆ ಈ ಅರ್ಥವನ್ನು ಹೇಳಿಲ್ಲ. **ಮಖೌ=ಕರ್ಮಯಜ್ಞ-ಯೋಗಯಜ್ಞೌ**= ಕರ್ಮ ಯಜ್ಞ-ಯೋಗಯಜ್ಞಗಳು. **ಮುಖೇ=ಪ್ರಾಪ್ತಿದ್ವಾರಭೂತೌ ಯಯೋಸ್ತೌ ಮಖಮುಖೌ** ಪ್ರಾಪ್ತಿದ್ವಾರ ಭೂತಗಳಾಗಿವೆಯೋ ಅವುಗಳು. ಅರ್ಥಾತ್ ಕರ್ಮಯಜ್ಞ-ಯೋಗಯಜ್ಞಗಳು ಪ್ರಾಪ್ತಿದ್ವಾರಗಳಾಗಿವೆ. ಯಾವುದರ ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. **ಯಾತೌ** ಎನ್ನುವುದಕ್ಕೆ **ಉದಿತೌ**= ಉದಯಿಸಿದ ಎಂಬ ಅರ್ಥ ಮಾಡಿ ಸೂರ್ಯತದನ್ತರ್ಯಾಮಿಣೌ - ಸೂರ್ಯ ಮತ್ತು ಅವನ ಅಂತರ್ಯಾಮೀ–ಇವರನ್ನು ಹೊಂದಲು ಕರ್ಮಯಜ್ಞ-ಜ್ಞಾನ ಯಜ್ಞಗಳು ದ್ವಾರಭೂತಗಳಾಗಿವೆ.

**ಅವಸ್ಥಾತುಂ** **ಇಚ್ಛನ್ತಿ**ಸೂರ್ಯನೊಡನೆ ಮತ್ತು ಅವನ ಅಂತರ್ಯಾಮಿಯೊಡನೆ ಇರಲು ಇಚ್ಛಿಸುತ್ತಾರೆ. ಯಾರು? **ಪಾದಪಾಃ** ಎಂಬ ಪದವಿದೆ. **ಪಾದಪಾಃ** ಎಂದರೆ ವೃಕ್ಷಗಳು, ಪರ್ವತಗಳು, ಬೆಟ್ಟಗಳು ಎಂಬುದು ರೂಢಿಯಾದ ಅರ್ಥ. ಆದರೆ **ಪಾದ** ಎಂಬುದಕ್ಕೆ ಕಿರಣ ಎಂಬ ಅರ್ಥವೂ ಇರುವುದರಿಂದ ಪಾದಪರು ಎಂಬುದಕ್ಕೆ ಮರೀಚಿಪರು, ಮರೀಚಿಪ ಮಹರ್ಷಿಗಳು ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. ಕರ್ಮಯಜ್ಞ-ಯೋಗಯಜ್ಞಗಳ ಮೂಲಕವಾಗಿ ಸೂರ್ಯನನ್ನೂ, ಸೂರ್ಯನ ಅಂತರ್ಯಾಮಿಯನ್ನೂ ಅನುಸರಿಸಿ ಇರಲು ಇಚ್ಛಿಸಿದ ಮರೀಚಿಪರು ಬ್ರಹ್ಮಲೋಕಕ್ಕೆ ಹೋದ ಭಗೀರಥನ ಬಳಿಗೆ ಹೋಗಿ ಅವನನ್ನು ಅನುಸರಿಸಿಕೊಂಡು ಇರಲು ಇಚ್ಛಿಸಿದರು. ಯಾವ ಕಾರಣದಿಂದ ಇಚ್ಛಿಸಿದರು? 'ಇವನಲ್ಲಿಯೂ ಸೂರ್ಯತ್ವ ಮತ್ತು ಸೂರ್ಯಾಂತರ್ಯಾಮಿತ್ವ ಎರಡೂ ಇವೆ-ಎಂಬುದನ್ನು ಪ್ರತಿಪಾದಿಸುತ್ತಾ '–ಎಂದು ವ್ಯಾಖ್ಯಾನಕಾರರು ಉತ್ತರಾರ್ಧಕ್ಕೆ ಅರ್ಥಮಾಡಿರುತ್ತಾರೆ. **ಗತ್ವಾರಾಜಂ** ಎಂಬುದು ಒಂದೇ ಪದ, ಹಾಗಿಲ್ಲದಿದ್ದರೆ 'ರಾಜಾನಂ' ಎಂದು ಆಗಬೇಕಾಗಿದ್ದಿತು. **ಗತ್ವಾರಾಜಂ** ಎಂದರೇನು? **ಗಚ್ಛತೀತಿ ಗತ್ವಾ-ತ್ರಿಜಗತೀ, ತಸ್ಯಾಂ ರಾಜತ ಇತಿ ಗತ್ವಾರಾಜಃ** = ಯಾವನು ಮೂರು ಜಗತ್ತುಗಳಲ್ಲಿಯೂ ರಾರಾಜಿಸುತ್ತಾನೆಯೋ ಅವನು ಗತ್ವಾರಾಜ ಅರ್ಥಾತ್ ಸೂರ್ಯ ಅಥವಾ ರಾಜ. **ಸೂರ್ಯೋನೃಪಶ್ಚ । ಈಶ್ವರಃ ಈಶನಶೀಲಃ ತದನ್ತರ್ಯಾಮೀ ನೃಪತಿ** ಸೂರ್ಯನ ಅಂತರ್ಯಾಮಿಯಾದ ರಾಜ. ರಾಜನು ಸೂರ್ಯನ ಅಂತರ್ಯಾಮಿಯು ಹೇಗೆಂದರೆ : ಸೂರ್ಯಮಂಡಲವನ್ನು ಭೇದಿಸಿಕೊಂಡು ಬ್ರಹ್ಮಲೋಕಕ್ಕೆ ಹೋಗಬೇಕು. ಭಗೀರಥನೂ ಬ್ರಹ್ಮಲೋಕಕ್ಕೆ ಹೋದುದರಿಂದ ಸೂರ್ಯಮಂಡಲದ ಮೂಲಕವಾಗಿಯೇ ಹೋಗಿದ್ದಾನೆ. ಆದುದರಿಂದ ಭಗೀರಥನಿಗೆ ಸೂರ್ಯನ **ಅಂತರ್ಯಾಮಿತ್ವ**. ವ್ಯಾಖ್ಯಾನಕಾರರ ಪ್ರಕಾರ ಒಟ್ಟು ತಾತ್ಪರ್ಯವನ್ನು ಹೀಗೆ ಹೇಳಬಹುದಾಗಿದೆ:

ಮರೀಚಿಪರು ಕರ್ಮಯಜ್ಞದಿಂದಲೂ-ಯೋಗಯಜ್ಞದಿಂದಲೂ ಲಭ್ಯವಾಗುವ, ಉದಯಿಸಿದ ಸೂರ್ಯನ ಮತ್ತು ಅವನ ಅಂತರ್ಯಾಮಿಯ ಸಮೀಪದಲ್ಲಿ ಇರಲು ಇಚ್ಛಿಸಿದಂತೆಯೇ ಬ್ರಹ್ಮಲೋಕಕ್ಕೆ ಹೋದ ಭಗೀರಥರಾಜನ ಸಮೀಪದಲ್ಲಿಯೂ ಇರಲು ಇಚ್ಛಿಸಿದರು. **ದಿಶಾಶಾವಿಹ**

ಎಂಬುದಕ್ಕೆ ವ್ಯಾಖ್ಯಾನಕಾರರು ಅರ್ಥಮಾಡಿಲ್ಲ. ಹಿಂದೀವ್ಯಾಖ್ಯಾನವು ಸಮಂಜಸವಾಗಿ ಕಾಣುವುದಿಲ್ಲ. ಕುಶಲಮತಿಗಳು ರಹಸ್ಯಾರ್ಥವನ್ನು ತಿಳಿಸಿದರೆ ಪ್ರಕಟಿಸಲು ಅಡ್ಡಿಯಿಲ್ಲ.)

ಸೃಂಜಯ! ಭಗೀರಥನು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ-ಈ ನಾಲ್ಕರಲ್ಲಿಯೂ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಅಧಿಕಪುಣ್ಯವಂತನಾಗಿದ್ದನು. ಮಹಾದಾನಿಯಾದ ಭಗೀರಥನೇ ಮರಣವನ್ನು ಅಪ್ಪಿದನಾದುದರಿಂದ ನಿನ್ನ ಮಗನ ವಿಷಯವಾಗಿ ನೀನು ಪರಿತಪಿಸಬೇಕಾಗಿಲ್ಲ. ಇಷ್ಟರ ಮೇಲೆ ನಿನ್ನ ಮಗನು ಯಜಮಾನನೂ ಆಗಿರಲಿಲ್ಲ; ದಕ್ಷಿಣೆಯನ್ನು ಯಥೇಚ್ಛವಾಗಿ ಕೊಡುವ ಉದಾರಿಯೂ ಆಗಿರಲಿಲ್ಲ."

ಯುಧಿಷ್ಠಿರ! ಹೀಗೆ ಭಗೀರಥನನ್ನು ಉದಾಹರಿಸಿ ನಾರದರು ಸೃಂಜಯನನ್ನು ಸಮಾಧಾನಗೊಳಿಸಿದರು."

೬೦ನೆಯ ಅಧ್ಯಾಯವು ಮುಗಿಯಿತು.

೬೧ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ದಿಲೀಪರಾಜನ ಉತ್ಕರ್ಷ

ಧರ್ಮಜ! ಇಷ್ಟು ಹೇಳಿದರೂ ಸೃಂಜಯನು ಪುತ್ರಶೋಕದಿಂದ ಸಮಾಧಾನಹೊಂದದಿರಲು ನಾರದರು ದಿಲೀಪನ ಕಥೆಯನ್ನು ಹೇಳುತ್ತಾರೆ:

"ಮಹಾರಾಜ! ಯಾವನು ಮಾಡಿದ ನೂರುಯಜ್ಞಗಳಲ್ಲಿ ಕರ್ಮ ಕಾಂಡ-ಜ್ಞಾನಕಾಂಡಗಳೆರಡರ ತತ್ತ್ವಾರ್ಥಗಳನ್ನೂ ತಿಳಿದಿದ್ದ, ಮಂತ್ರಜ್ಞ ರಾಗಿದ್ದ, ಯಜ್ಞಕರ್ತೃಗಳಾದ, ಪುತ್ರ-ಪೌತ್ರವಂತರಾದ ಒಂದು ಲಕ್ಷ ಬ್ರಾಹ್ಮಣರು ಭಾಗವಹಿಸಿದ್ದರೋ-ಅಂತಹ ಇಲವಿಲನ ಮಗನಾದ ದಿಲೀಪನೂ ದೇಹತ್ಯಾಗಮಾಡಿದನೆಂದು ಕೇಳಿದ್ದೇವೆ.

ವಸುಧಾಧಿಪನಾದ ದಿಲೀಪನು ಬಹುದಿನಗಳ ಪರ್ಯಂತವಾದ ಯಜ್ಞವನ್ನು ಮಾಡುತ್ತಿದ್ದ ಸಮಯದಲ್ಲಿ ಐಶ್ವರ್ಯದಿಂದ ಸಮೃದ್ಧವಾಗಿದ್ದ ಈ ಭೂಮಿಯನ್ನೇ ಬ್ರಾಹ್ಮಣರಿಗೆ ದಾನಮಾಡಿದನು. ದಿಲೀಪನು ಯಜ್ಞಮಾಡುತ್ತಿದ್ದ ಸಮಯದಲ್ಲಿ ಯಜ್ಞಶಾಲೆಗೆ ಹೋಗುತ್ತಿದ್ದ ಹಾದಿಗಳು

ಸುವರ್ಣದ ತಗಡುಗಳಿಂದ ಆಚ್ಛಾದಿತವಾಗಿದ್ದುವು. ದಿಲೀಪನನ್ನು 'ಧರ್ಮ ದೇವತೆ' ಎಂದೇ ಪುರಸ್ಕರಿಸುತ್ತಾ ಇಂದ್ರನೇ ಮೊದಲಾದ ದೇವತೆಗಳೂ ಯಜ್ಞಶಾಲೆಗೆ ಆಗಮಿಸಿದ್ದರು. ಪರ್ವತಕ್ಕೆ ಸಮಾನವಾಗಿ ಬೃಹತ್ತಾದ ಶರೀರಗಳನ್ನು ಹೊಂದಿದ್ದ ಸಾವಿರ ಆನೆಗಳು ಯಜ್ಞಶಾಲೆಗೆ ಹೋಗುತ್ತಿದ್ದುವು. ದಿಲೀಪನ ಯಾಗಮಂಟಪವು ಸ್ವರ್ಣಮಯವಾಗಿದ್ದು, ಅತ್ಯಂತದೇದೀಪ್ಯ ಮಾನವಾಗಿ ಕಾಣುತ್ತಿದ್ದಿತು. ದಿಲೀಪರಾಜನ ಪಾಕಶಾಲೆಯಲ್ಲಿ ಸಾರು-ಹುಳಿ ಮೊದಲಾದುವುಗಳ ಬಾವಿಗಳೇ ಇದ್ದುವು. ಭಕ್ಷ್ಯ-ಭೋಜ್ಯಾದಿಗಳ ಪರ್ವತಗಳೇ ಇದ್ದುವು. ಸಾವಿರ ಮಾರು ಸುತ್ತಳತೆಯ ಚಿನ್ನದ ಯೂಪಸ್ತಂಭ ಗಳಿದ್ದುವು. ಹಿರಣ್ಮಯವಾದ ಆ ಯೂಪಸ್ತಂಭಗಳ ಮೇಲುಭಾಗದಲ್ಲಿ ಚಿಕ್ಕದಾಗಿಯೂ ಮತ್ತು ದೊಡ್ಡದಾಗಿಯೂ ಇದ್ದ ಬಳೆಗಳಿದ್ದುವು. ಅವನ ಅರಮನೆಯಲ್ಲಿ ಹದಿಮೂರು ಸಾವಿರ ಅಪ್ಸರೆಯರು ನೃತ್ಯಮಾಡುತ್ತಿದ್ದರು. ರಾಜನ ಮೇಲಿನ ಪ್ರೀತಿಯಿಂದಾಗಿ ವಿಶ್ವಾವಸುವೇ ವೀಣಾವಾದನವನ್ನು ಮಾಡುತ್ತಿದ್ದನು. ಎಲ್ಲ ಪ್ರಾಣಿಗಳೂ ರಾಜನನ್ನು ಸತ್ಯಶೀಲನೆಂದು ಭಾವಿಸಿದ್ದುವು. ಅವನ ಮನೆಗೆ ಬರುತ್ತಿದ್ದ ಅತಿಥಿಗಳು 'ರಾಗಖಾಂಡವ' ಎಂಬ ಹೆಸರಿನ ಮೋದಕಗಳನ್ನೂ, ನಾನಾವಿಧವಾದ ಭೋಜ್ಯಪದಾರ್ಥಗಳನ್ನೂ ತಿಂದು ಮತ್ತುಬಂದವರಾಗಿ ದಾರಿಯಲ್ಲಿಯೇ ಮಲಗಿಬಿಡುತ್ತಿದ್ದರು. ಇತರ ರಾಜರಿಗಿಂತಲೂ ದಿಲೀಪನಲ್ಲಿ ಇನ್ನೂ ಒಂದು ಪರಮಾದ್ಭುತವಾದ ಶಕ್ತಿಯಿದ್ದಿತು. ಅಂತಹ ಪರಮಾದ್ಭುತವಾದ ಶಕ್ತಿಯು ಬೇರೆ ಯಾವ ರಾಜರಲ್ಲಿಯೂ ಇರಲಿಲ್ಲವೆಂದು ನಾನು ಭಾವಿಸುತ್ತೇನೆ. ಅವನು ಯುದ್ಧಕ್ಕೆ ಹೋಗುವಾಗ ನದಿಯನ್ನು ದಾಟಬೇಕಾಗಿ ಬಂದರೆ ನೀರಿನ ಮೇಲೆಯೇ ಅವನ ರಥವು ಹೋಗುತ್ತಿದ್ದಿತು. ಚಕ್ರಗಳು ನೀರಿನೊಳಗೆ ಮುಳುಗುತ್ತಿರಲಿಲ್ಲ. ದೃಢಧನ್ವನಾದ, ಸತ್ಯವಾದಿಯಾದ, ಅಮಿತವಾಗಿ ದಕ್ಷಿಣೆಗಳನ್ನು ಕೊಡುತ್ತಿದ್ದ ದಿಲೀಪರಾಜನನ್ನು ಯಾರು ಸಂದರ್ಶಿಸಿದರೋ ಅವರೂ ಸಹ ಸ್ವರ್ಗವನ್ನು ಜಯಿಸಿದವರೇ ಆದರು. (ಅವರಿಗೂ ಕಾಲಾಂತರದಲ್ಲಿ ಸ್ವರ್ಗವೇ ಲಭಿಸಿತು.) ಖಟ್ವಾಂಗನ (ದಿಲೀಪನ) ಅರಮನೆಯಲ್ಲಿ ವೇದಾಧ್ಯಯನದ ಘೋಷ, ಧನುಸ್ಸಿನ ಟಂಕಾರಘೋಷ-'ಪಿಬತ' 'ಕುಡಿಯಿರಿ' 'ಅಶ್ನೀತ' 'ತಿನ್ನಿರಿ' 'ಖಾದತ' 'ಜಗಿಯಿರಿ'–ಈ ಐದು ಘೋಷಣೆಗಳು ಯಾವಾಗಲೂ

ನಶಿಸಿಹೋಗುತ್ತಲೇ ಇರಲಿಲ್ಲ. (ಸರ್ವಕಾಲಗಳಲ್ಲಿಯೂ ಈ ಐದು ಘೋಷಣೆಗಳು ಕೇಳಿಬರುತ್ತಿದ್ದುವು.)

ಶ್ವೈತ್ಯಸೃಂಜಯ! ದಿಲೀಪನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾದವನು. ನಿನ್ನ ಮಗನಿಗಿಂತಲೂ ಅಧಿಕಪುಣ್ಯಶಾಲಿಯಾಗಿದ್ದವನು. ಅಂತಹವನೇ ಮರಣಧರ್ಮವನ್ನು ಹೊಂದಿದನು. ಆದುದರಿಂದ ನಿನ್ನ ಮಗನ ನಿಧನಕ್ಕಾಗಿ ನೀನು ಪರಿತಾಪ ಪಡಬೇಡ. ಏಕೆಂದರೆ: ನಿನ್ನ ಮಗನು ಯಜ್ಞಮಾಡಿದವನಲ್ಲ; ದಾನ-ದಕ್ಷಿಣೆಗಳನ್ನು ಕೊಟ್ಟವನೂ ಅಲ್ಲ."

ಯುಧಿಷ್ಠಿರ ! ಹೀಗೆ ನಾರದರು ದಿಲೀಪನ ಕಥೆಯನ್ನು ಉದಾಹರಿಸಿ ಸೃಂಜಯನಿಗೆ ಸಮಾಧಾನ ಹೇಳಿದರು.

೬೧ನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಮಾಂಧಾತರಾಜನ ಚರಿತ್ರೆ

ಪುತ್ರಶೋಕಪರಿತಪ್ತನಾಗಿದ್ದ ಸೃಂಜಯನನ್ನು ಸಮಾಧಾನಪಡಿಸಲು ನಾರದರು ಮಾಂಧಾತನ ಚರಿತ್ರೆಯನ್ನು ಹೇಳುತ್ತಾರೆ:

"ಮಹಾರಾಜ! ದೇವಲೋಕ-ಅಸುರಲೋಕ ಮತ್ತು ಮನುಷ್ಯಲೋಕ ಎಂಬ ಮೂರು ಲೋಕಗಳನ್ನೂ ಜಯಿಸಿದ ಯುವನಾಶ್ವನ ಮಗನಾದ ಮಾಂಧಾತೃಚಕ್ರವರ್ತಿಯೂ ಮೃತನಾದನೆಂದು ನಾವು ಕೇಳಿರುವೆವು.

ಹಿಂದೆ ಅಶ್ವಿನೀದೇವತೆಗಳು ಮಾಂಧಾತನ ತಂದೆಯಾದ ಯುವನಾಶ್ವನ ಗರ್ಭದಿಂದ (ಹೊಟ್ಟೆಯಿಂದ) ಶಸ್ತ್ರಚಿಕಿತ್ಸೆಯ ಮೂಲಕವಾಗಿ ಮಗುವನ್ನು ಹೊರತಂದರು. ಯುವನಾಶ್ವನೊಮ್ಮೆ ಬೇಟೆಗೆ ಹೋಗಿದ್ದಾಗ ಅವನ ಕುದುರೆಗಳು ಆಯಾಸಗೊಂಡುವು. ಯುವನಾಶ್ವನೂ ಬಾಯಾರಿಕೆಯಿಂದ ಬಳಲಿದ್ದನು. ತಾನು ಕುಳಿತಿದ್ದ ಜಾಗಕ್ಕೆ ಸ್ವಲ್ಪದೂರದಲ್ಲಿ ಹೊಗೆಯಾಡುತ್ತಿದ್ದುದನ್ನು ರಾಜನು ನೋಡಿದನು. ಅಲ್ಲಿ ಯಜ್ಞವು ನಡೆಯುತ್ತಿರಬಹುದೆಂದು ಊಹಿಸಿ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಅಲ್ಲಿಗೆ ಹೋದನು. ಅವನು ಹೋದ ಸಮಯದಲ್ಲಿ ಯಜ್ಞಮಂಟಪದಲ್ಲಿ ಯಾರೂ ಇರಲಿಲ್ಲ.

ಅಭಿಮಂತ್ರಿಸಿದ ಘೃತಮಿಶ್ರವಾದ ದಧಿಯನ್ನು (ಪೃಷದಾಜ್ಯವನ್ನು) ಕುಂಭದಲ್ಲಿ ಇಟ್ಟಿದ್ದರು. ಬಾಯಾರಿಕೆಯಿಂದ ಬಳಲಿದ್ದ ಯುವನಾಶ್ವನು ಕುಂಭವನ್ನೇ ಎತ್ತಿ ಗಟ-ಗಟನೆ ಕುಡಿದುಬಿಟ್ಟನು. ಆದರೆ ಅವನು ಕುಡಿದ ಮಂತ್ರಾಭಿಪೂತವಾದ ಆ ಜಲವು ಅವನ ಹೊಟ್ಟೆಯಲ್ಲಿ ಶಿಶುವಾಗಿ ಪರಿವರ್ತನೆ ಹೊಂದಿತು. ವೈದ್ಯರಲ್ಲಿ ಶ್ರೇಷ್ಠರಾದ ಅಶ್ವಿನೀದೇವತೆಗಳು ಶಸ್ತ್ರಚಿಕಿತ್ಸೆಯ ಮೂಲಕವಾಗಿ ಯುವನಾಶ್ವನ ಗರ್ಭದಿಂದ ಮಗುವನ್ನು ಹೊರಕ್ಕೆ ತೆಗೆದರು. ದೇವತೆಗಳಂತೆ ವರ್ಚಸ್ವಿಯಾಗಿದ್ದ ಮಗುವು ಯುವನಾಶ್ವನ ತೊಡೆಯ ಮೇಲೆ ಮಲಗಿರುವುದನ್ನು ಕಂಡು "ಇವನು ಯಾರ ಹಾಲನ್ನು ಕುಡಿಯುತ್ತಾನೆ?"–ಎಂದು ದೇವತೆಗಳು ತಮ್ಮ- ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. "ಇವನು ಮೊದಲು ನನ್ನನ್ನೇ ಪಾನಮಾಡಲಿ" **'ಮಾಮೇವಾಯಂ ಧಯತ್ವಗ್ರೇ'** ಎಂಬುದಾಗಿ ಇಂದ್ರನು ಹೇಳಿದನು. ಅನಂತರ ಇಂದ್ರನ ಬೆರಳುಗಳಿಂದ ಅಮೃತಮಯವಾದ ಹಾಲು ಬಂದು ಅದನ್ನೇ ಆ ಶಿಶುವು ಕುಡಿಯಿತು.

**ಮಾಂ ಧಾಸ್ಯತೀತಿ ಕಾರುಣ್ಯಾದ್ಯದಿನ್ದ್ರೋ ಹ್ಯನ್ವಕಮ್ಪಯತ್ ।**
**ತಸ್ಮಾತ್ತು ಮಾನ್ಧಾತೇತ್ಯೇವಂ ನಾಮ ತಸ್ಯಾದ್ಭುತಂ ಕೃತಮ್ ॥೬॥**

ಇಂದ್ರನು ಕಾರುಣ್ಯದಿಂದ **'ಮಾಂ ಧಾಸ್ಯತಿ** '"ನನ್ನನ್ನೇ ಕುಡಿಯುತ್ತಾನೆ" ಎಂದು ಹೇಳಿ ಆ ಮಗುವಿನ ವಿಷಯದಲ್ಲಿ ಕೃಪೆತೋರಿದುದರಿಂದ **'ಮಾಂಧಾತಾ'** ಎಂಬ ಅದ್ಭುತವಾದ ಹೆಸರೇ ಅವನಿಗೆ ಇಡಲ್ಪಟ್ಟಿತು. ಇಂದ್ರನ ಕೈಬೆರಳುಗಳು ಮಹಾತ್ಮನಾದ ಯೌವನಾಶ್ವನ (ಮಾಂಧಾತನ) ಬಾಯಿಗೆ ತುಪ್ಪದ ಧಾರೆಯನ್ನೂ, ಹಾಲಿನ ಧಾರೆಯನ್ನೂ ಸುರಿಸಿದುವು. ಆ ಮಗುವು ಇಂದ್ರನ ಕೈಯಿನ ಮೂಲಕವಾಗಿ ಹಾಲುಕುಡಿದು ಒಂದೇ ದಿವಸದಲ್ಲಿ ವೃದ್ಧಿಹೊಂದಿತು. ಮಾಂಧಾತನು ಹನ್ನೆರಡುದಿವಸಗಳಲ್ಲಿ ಹನ್ನೆರಡುವರ್ಷದ ಪ್ರಾಯದವನಾದನು. ವೀರ್ಯವಂತನಾದ ಅವನು ರಾಜನಾದನಂತರ ಈ ಅಖಂಡಭೂಮಂಡಲವನ್ನೂ ಒಂದೇ ದಿವಸದಲ್ಲಿ ಜಯಿಸಿದನು. ಧರ್ಮಾತ್ಮನೂ, ಧೈರ್ಯವಂತನೂ, ವೀರನೂ, ಸತ್ಯಸಂಧನೂ, ಜಿತೇಂದ್ರಿಯನೂ ಆದ ಮಾಂಧಾತನು–ಜನಮೇಜಯ, ಸುಧನ್ವಾನ, ಗಯ, ಪೂರು, ಬೃಹದ್ರಥ, ಅಸಿತ, ನೃಗ–ಇವರೆಲ್ಲರನ್ನೂ ಜಯಿಸಿದನು. ಸೂರ್ಯನು ಎಲ್ಲಿಂದ ಉದಯಿಸುತ್ತಾನೆಯೋ ಅಲ್ಲಿಂದ ಮೊದಲ್ಗೊಂಡು ಸೂರ್ಯನು

ಅಸ್ತಮಿಸುವವರೆಗೆ ಎಷ್ಟು ಭೂಭಾಗವಿರುವುದೋ ಅಷ್ಟು ಕ್ಷೇತ್ರವನ್ನೂ ಯುವನಾಶ್ವನ ಮಗನಾದ ಮಾಂಧಾತಚಕ್ರವರ್ತಿಯದೆಂದು ಹೇಳುತ್ತಾರೆ.

**ಸೋಽಶ್ವಮೇಧಶತೈರಿಷ್ಟ್ವಾ ರಾಜಸೂಯಶತೇನ ಚ ।**
**ಅದದದ್ರೋಹಿತಾನ್ಮತ್ಸ್ಯಾನ್ಬ್ರಾಹ್ಮಣೇಭ್ಯೋ ವಿಶಾಮ್ಪತೇ ।**
**ಹೈರಣ್ಯಾನ್ಯೋಜನೋತ್ಸೇಧಾನಾಯತಾಞ್ಶತಯೋಜನಮ್ ॥**

ಮಾಂಧಾತನು ನೂರು ಅಶ್ವಮೇಧಗಳನ್ನೂ-ನೂರು ರಾಜಸೂಯ ಗಳನ್ನೂ ಮಾಡಿ, ಬ್ರಾಹ್ಮಣರಿಗೆ ಒಂದು ಯೋಜನದಷ್ಟು ಎತ್ತರವಾಗಿಯೂ ನೂರು ಯೋಜನಗಳಷ್ಟು ಉದ್ದವಾಗಿಯೂ ಇದ್ದ ಸುವರ್ಣಮಯವಾದ ಕೆಂಪು ಮೀನುಗಳನ್ನು ದಾನವಾಗಿ ಕೊಟ್ಟನು. (ವ್ಯಾಖ್ಯಾನಕಾರರ ಪ್ರಕಾರ **ರೋಹಿತಾನ್-ಲೋಹಿತಭೂಮಿಪ್ರದೇಶಾನ್ ಪದ್ಮರಾಗಖನಿಮತೋ ವಾ**-ಕೆಂಪುಭೂಮಿಯ ಪ್ರದೇಶಗಳನ್ನು ಅಥವಾ ಪದ್ಮರಾಗದ ಖನಿಜವಿರುವ ಪ್ರದೇಶಗಳನ್ನು, **ಮತ್ಸ್ಯಾನ್=ದೇಶವಿಶೇಷಾನ್**- ಮತ್ಸ್ಯದೇಶಗಳನ್ನೂ, **ಹೈರಣ್ಯಾನ್=ಸ್ವರ್ಣಾಕರಯುಕ್ತಾನ್** =ಚಿನ್ನದ ಖನಿಜವಿರುವ ಪ್ರದೇಶ ಗಳನ್ನೂ, ದಾನವಾಗಿ ಕೊಟ್ಟನು. (ಹೈರಣ್ಯಾನ್ ಯೋಜನೋತ್ಸೇಧಾನ್ ಎಂಬ ಪಾಠಾಂತರದಂತೆ **ಜನೋತ್ಸೇಧಾನ್=ಜನೇಷು ಉತ್ಸೇಧಃ ಉಚ್ಛ್ರಾಯಃ ಯೇಷಾಂ ತೇ ತಾನ್** -ಜನರಲ್ಲಿ ಉಚ್ಚ್ರಾಯಸ್ಥಿತಿಯು ಯಾರಿಗೆ ಇರುವುದೋ ಅವರು.) ಮತ್ಸ್ಯದೇಶದ ನದಿಗಳು ಈಗಲೂ ಪೂರ್ವ-ಪಶ್ಚಿಮಸಮುದ್ರಗಳೆರಡನ್ನೂ ಸೇರುವುದರಿಂದ ಆ ದೇಶದ ಜನರಿಗೆ ಶ್ರೇಷ್ಠತೆಯಿದೆ-ಎಂದು ವ್ಯಾಖ್ಯಾನಕಾರರು ಅಭಿಪ್ರಾಯಪಡುತ್ತಾರೆ. ತಾತ್ಪರ್ಯತಃ ಕೆಂಪುಭೂಮಿಯ ಪ್ರದೇಶಗಳಿರುವ ಅಥವಾ ಪದ್ಮರಾಗದ ಖನಿಜಗಳಿರುವ ಚಿನ್ನದ ಖನಿಜಗಳಿರುವ ಶ್ರೇಷ್ಠವಾದ ಜನಪದವೆನಿಸಿರುವ ಮತ್ಸ್ಯದೇಶಗಳನ್ನು ಮಾಂಧಾತನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.)

ಬಹುಪ್ರಕಾರವಾದ ರುಚಿಕರವಾದ ಭಕ್ಷ್ಯ-ಭೋಜ್ಯಗಳನ್ನೂ, ಅನ್ನದ ಪರ್ವತಗಳನ್ನೂ ಬ್ರಾಹ್ಮಣರಿಗೆ ಬಡಿಸುತ್ತಿದ್ದರು. ಅನಂತರ ಉಳಿದ ಅನ್ನವನ್ನು ಉಳಿದವರಿಗೆಲ್ಲರಿಗೂ ಬಡಿಸುತ್ತಿದ್ದರು. ಸಾವಿರಾರು ಜನರು ಬಂದು ಊಟ

ಮಾಡಿ ಹೋಗುತ್ತಿದ್ದರು. ಕಟ್ಟಕಡೆಗೆ ಎಲ್ಲರೂ ಊಟಮಾಡಿದನಂತರ ಜನರು ಬರುವುದು ನಿಲ್ಲುತ್ತಿದ್ದಿತೇ ಹೊರತು, ಅನ್ನದ ರಾಶಿಯು ಕರಗುತ್ತಿರಲಿಲ್ಲ.

ಮಾಂಧಾತನ ಮಹಾನಸದಲ್ಲಿ (ಪಾಕಶಾಲೆಯಲ್ಲಿ) ಭಕ್ಷ್ಯ, ಭೋಜ್ಯ, ಅನ್ನ ಮತ್ತು ಪಾನೀಯಗಳ ರಾಶಿಗಳೇ ಇದ್ದುವು. ಅನ್ನದ ಪರ್ವತಗಳು ಶೋಭಾಯಮಾನವಾಗಿ ಕಾಣುತ್ತಿದ್ದುವು. ಆ ಅನ್ನದ ಪರ್ವತಗಳನ್ನು ಜೇನುತುಪ್ಪ ಮತ್ತು ಹಾಲಿನ ನದಿಗಳು ಸುತ್ತುಗಟ್ಟಿದ್ದುವು. ಅಲ್ಲಿ ತುಪ್ಪದ



ಸರೋವರಗಳಿದ್ದುವು. ತೊವ್ವೆಯ ಬಾವಿಗಳಿದ್ದುವು. ಮೊಸರೇ ನೊರೆಯಾಗಿರುವ ನದಿಗಳೂ, ಪಾನಕವೇ ನೀರಾಗಿ ಉಳ್ಳ ನದಿಗಳೂ ಹರಿಯುತ್ತಿದ್ದುವು. ದೇವತೆಗಳು, ಅಸುರರು, ಯಕ್ಷರು, ಗಂಧರ್ವರು, ನಾಗರು, ಪಕ್ಷಿಗಳು, ವೇದ-ವೇದಾಂಗಪಾರಂಗತರಾದ ಬ್ರಾಹ್ಮಣರು, ಋಷಿಗಳು ಇವರೆಲ್ಲರೂ ಮಾಂಧಾತನು ಮಾಡಿದ ಯಜ್ಞಕ್ಕೆ ಬಂದಿದ್ದರು. ಆದರೆ ಅವರಲ್ಲಿ ಅವಿದ್ವಾಂಸನಾದವನೊಬ್ಬನೂ ಇರಲಿಲ್ಲ. ಮಾಂಧಾತನು ಸಮುದ್ರಪರ್ಯಂತವಾದ ಐಶ್ವರ್ಯಭರಿತವಾಗಿದ್ದ ಭೂಮಿಯನ್ನು ಬ್ರಾಹ್ಮಣರಿಗೆ ದಾನವಾಗಿಕೊಟ್ಟು, ಸೂರ್ಯನು ಅಸ್ತನಾಗುವಂತೆಯೇ ಅಸ್ತನಾದನು. ಮಾಂಧಾತನು ತನ್ನ ಯಶಸ್ಸನ್ನು ದಿಗಂತಗಳವರೆಗೂ

ಹರಡುವಂತೆ ಮಾಡಿ ಅನಂತರ ಪುಣ್ಯಮಾಡಿದವರಿಗೆ ಪ್ರಾಪ್ತವಾಗುವ ಪುಣ್ಯಲೋಕಗಳಿಗೆ ಹೋದನು.

ಸೃಂಜಯ! ಮಾಂಧಾತನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಾತ್ಮನಾಗಿದ್ದನು. ಅಂತಹವನೇ ಮೃತ್ಯುವಶನಾಗಿ ಹೋದನು. ಆದುದರಿಂದ ನಿನ್ನ ಮಗನ ವಿಷಯವಾಗಿ ನೀನು ಪರಿತಪಿಸಬೇಡ.

ನಿನ್ನ ಮಗನು ಮಾಂಧಾತನಂತೆ ಯಜ್ಞವನ್ನೂ ಮಾಡಲಿಲ್ಲ; ಅವನಂತೆ ದಕ್ಷಿಣೆಯನ್ನೂ ಕೊಡಲಿಲ್ಲ."

ಯುಧಿಷ್ಠಿರ! ನಾರದರು ಹೀಗೆ ಮಾಂಧಾತನ ಚರಿತ್ರೆಯನ್ನು ಹೇಳಿ ಸೃಂಜಯನಿಗೆ ಸಮಾಧಾನಹೇಳಿದರು.

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಯಯಾತಿಯ ಉಪಾಖ್ಯಾನ

ಸೃಂಜಯನನ್ನು ಪುತ್ರಶೋಕವು ಬಿಟ್ಟುಹೋಗಲಿಲ್ಲ. ಆದುದರಿಂದ ನಾರದರು ಯಯಾತಿಯ ಉಪಾಖ್ಯಾನವನ್ನು ಪ್ರಾರಂಭಿಸುತ್ತಾರೆ:

"ಮಹಾರಾಜ! ನಹುಷನ ಮಗನಾದ ಯಯಾತಿಯು ನೂರು ರಾಜಸೂಯಗಳನ್ನೂ, ನೂರು ಅಶ್ವಮೇಧಗಳನ್ನೂ, ಸಾವಿರ ಪುಂಡರೀಕ ಯಾಗಗಳನ್ನೂ, ನೂರು ವಾಜಪೇಯಗಳನ್ನೂ, ಒಂದು ಸಾವಿರ ಅತಿರಾತ್ರ ಯಾಗಗಳನ್ನೂ ಮತ್ತು ತನ್ನ ಅಪೇಕ್ಷಾನುಸಾರವಾಗಿ ಚಾತುರ್ಮಾಸ್ಯ-ಅಗ್ನಿಷ್ಟೋಮಾದಿ ಯಾಗಗಳನ್ನೂ, ಬಹುದಕ್ಷಿಣಾಕವಾದ, ನಾನಾವಿಧವಾದ ಸತ್ರಗಳನ್ನೂ ಮಾಡಿದನು. ಅವನೂ ಸಹ ಮೃತನಾದನೆಂದು ನಾವು ಕೇಳಿರುವೆವು.

ಈ ಪ್ರಪಂಚದಲ್ಲಿ ಬ್ರಾಹ್ಮಣದ್ರೋಹಿಗಳ ಹತ್ತಿರ ಎಷ್ಟು ಐಶ್ವರ್ಯ ವಿದ್ದಿತೋ ಅವುಗಳೆಲ್ಲವನ್ನೂ ಅವರಿಂದ ತೆಗೆದುಕೊಂಡು ಎಣಿಸಿ ಬ್ರಾಹ್ಮಣ ರಿಗೆ ಕೊಟ್ಟನು. ನದಿಗಳಲ್ಲಿ ಪುಣ್ಯತಮವಾದ ಸರಸ್ವತೀ, ಸಮುದ್ರಗಳು,

ಪರ್ವತಗಳು ಮತ್ತು ನದಿಗಳು–ಇವುಗಳೆಲ್ಲವೂ ಯಜ್ಞಮಾಡುತ್ತಿದ್ದ ಪುಣ್ಯ ತಮನಾದ ಯಯಾತಿರಾಜನಿಗೆ ತುಪ್ಪ ಮತ್ತು ಹಾಲನ್ನು ತಂದು ಕೊಡುತ್ತಿದ್ದುವು. ದೇವತೆಗಳಿಗೂ, ಅಸುರರಿಗೂ ಯುದ್ಧವು ಪ್ರಾರಂಭ ವಾಗಲಾಗಿ, ಯಯಾತಿಯು ದೇವತೆಗಳಿಗೆ ಸಹಾಯಮಾಡಿದನು. ನಾನಾ ವಿಧವಾದ ಯಜ್ಞಗಳಿಂದ ದೇವತೆಗಳನ್ನು ತೃಪ್ತಿಪಡಿಸಿ ಅಖಂಡಭೂಮಂಡಲ ವನ್ನೂ ನಾಲ್ಕು ಭಾಗಗಳನ್ನಾಗಿ ವಿಭಾಗಿಸಿ ಆ ನಾಲ್ಕು ಭಾಗಗಳನ್ನೂ ಬ್ರಹ್ಮ, ಅಧ್ವರ್ಯು, ಹೋತಾ ಮತ್ತು ಉದ್ಗಾತೃ–ಇವರಿಗೆ ಒಬ್ಬೊಬ್ಬರಿಗೂ ಒಂದೊಂದು ಭಾಗದಂತೆ ದಾನಮಾಡಿದನು. ಶುಕ್ರರ ಮಗಳಾದ ದೇವ ಯಾನಿಯಲ್ಲಿಯೂ, ಅಸುರಕನ್ಯೆಯಾದ ಶರ್ಮಿಷ್ಠೆಯಲ್ಲಿಯೂ ಉತ್ತಮವಾದ ಸಂತಾನಗಳನ್ನು ಪಡೆದು ದೇವೋಪಮನಾದ ರಾಜನು ಎರಡನೆಯ ಇಂದ್ರನೋಪಾದಿಯಲ್ಲಿ ಸಮಸ್ತದೇವಾರಣ್ಯಗಳಲ್ಲಿಯೂ ತನ್ನ ಇಚ್ಛಾನು ಸಾರವಾಗಿ ವಿಹರಿಸುತ್ತಿದ್ದನು. ಸುಖಲೋಲುಪತೆಯಿಂದ, ಕಾಮಗಳ ಉಪಭೋಗದಿಂದ ಎಷ್ಟು ವರ್ಷಗಳನ್ನು ಕಳೆದರೂ ಅವನ ಮನಸ್ಸಿಗೆ ಯಾವಾಗ ಶಾಂತಿಯು ಸಿಕ್ಕಲಿಲ್ಲವೋ ಆಗ ಸರ್ವವೇದವಿದನಾದ ಯಯಾತಿಯು ಈ ಗೀತವನ್ನು ಗಾನಮಾಡಿ ಪತ್ನೀಸಹಿತನಾಗಿ ಅರಣ್ಯಕ್ಕೆ ಹೊರಟುಹೋದನು.

**ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ।**
**ನಾಲಮೇಕಸ್ಯ ತತ್ಸರ್ವಮಿತಿ ಮತ್ವಾ ಶಮಂ ವ್ರಜೇತ್ ॥೯॥**

'ಮನುಷ್ಯನ 'ಆಸೆ' ಎಂಬುದನ್ನು ತಣಿಸುವ ಸಾಧ್ಯತೆಯಿಲ್ಲ. ಈ ಭೂಮಿಯಲ್ಲಿ ಎಷ್ಟು ಬತ್ತ-ಗೋಧಿಗಳಿವೆಯೋ, ಚಿನ್ನವಿದೆಯೋ, ಪಶು ಗಳಿವೆಯೋ, ಸ್ತ್ರೀಯರಿದ್ದಾರೆಯೋ-ಇವುಗಳೆಲ್ಲವೂ ಒಬ್ಬನಿಗೇ ಸಾಕಾಗುವು ದಿಲ್ಲ. ಇದನ್ನು ಮನಗಂಡು ಶಾಂತಿಯನ್ನು ಪಡೆಯಬೇಕು.' ಹೀಗೆಂದು ಹೇಳಿ ಆಶೆಯ ಪರಾಕಾಷ್ಠೆಯು ಎಷ್ಟೆಂಬುದನ್ನೂ ಮನಗಂಡವನಾಗಿ, ಸರ್ವ ಕಾಮನೆಗಳನ್ನೂ ಪರಿತ್ಯಜಿಸಿ, ಧೈರ್ಯವನ್ನು ಆಶ್ರಯಿಸಿ, ಪೂರುವಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ರಾಜನಾದ ಯಯಾತಿಯು ಅರಣ್ಯಕ್ಕೆ ಹೋದನು. ಸೃಂಜಯ! ಯಯಾತಿಯು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ

ಹೆಚ್ಚು ಪುಣ್ಯವಂತನಾಗಿದ್ದನು. ಅಂತಹವನೇ ಮೃತ್ಯುವಶನಾದನು. ಹೀಗಿರುವಾಗ ನಿನ್ನ ಮಗನಿಗಾಗಿ ನೀನು ಪರಿತಪಿಸಬೇಡ. ಮೇಲಾಗಿ ನಿನ್ನ ಮಗನು ಯಯಾತಿಯಂತೆ ಯಜ್ಞಮಾಡಿದವನೂ ಅಲ್ಲ; ದಾನ-ದಕ್ಷಿಣೆಗಳನ್ನು ಕೊಟ್ಟವನೂ ಅಲ್ಲ."

ಯುಧಿಷ್ಠಿರ! ಹೀಗೆಂಬುದಾಗಿ ನಾರದರು ಯಯಾತಿಯನ್ನು ಉದಾಹರಿಸಿ ಪುತ್ರಶೋಕಾಭಿಹತನಾಗಿದ್ದ ಸೃಂಜಯನಿಗೆ ಸಮಾಧಾನಹೇಳಿದರು.

೬೩ನೆಯ ಅಧ್ಯಾಯವು ಮುಗಿಯಿತು.

೬೪ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಅಂಬರೀಷೋಪಾಖ್ಯಾನ

ಖಿನ್ನಮನಸ್ಕನಾಗಿಯೇ ಇದ್ದ ಸೃಂಜಯನಿಗೆ ಪುನಃ ನಾರದರು ಹೇಳುತ್ತಾರೆ:

"ಮಹಾರಾಜ! ಅಂಬರೀಷನು ಏಕಾಕಿಯಾಗಿ ಹತ್ತು ಲಕ್ಷ ರಾಜರೊಡನೆ ಯುದ್ಧಮಾಡಿದನು. ಅವನೂ ಸಹ ಮೃತ್ಯುವಿಗೆ ಅಧೀನನಾದನೆಂದು ನಾವು ಕೇಳಿರುವೆವು. ರಾಜನ ಶತ್ರುಗಳೆಲ್ಲರೂ ಒಟ್ಟಾಗಿ ಅಂಬರೀಷನನ್ನು ಸೋಲಿಸಬೇಕೆನ್ನುವ ಇಚ್ಛೆಯಿಂದ ನಾಲ್ಕೂ ಕಡೆಗಳಿಂದಲೂ ಮುತ್ತಿಗೆ ಹಾಕಿದರು. ಅಸ್ತ್ರಯುದ್ಧದಲ್ಲಿ ಪರಿಣತರಾಗಿದ್ದ, ಭಯಂಕರರಾಗಿದ್ದ ಅವರು ರಾಜನಿಗೆ ಅಮಂಗಳಕರವಾದ ಮಾತುಗಳನ್ನಾಡುತ್ತಿದ್ದರು. ಬಲ, ಹಸ್ತಲಾಘವ, ಧನುರ್ವಿದ್ಯಾಪರಿಣತಿ ಮತ್ತು ಅಸ್ತ್ರಬಲ-ಇವುಗಳಿಂದ ಅಂಬರೀಷನು ಶತ್ರುಗಳ ಛತ್ರ, ಆಯುಧ, ಧ್ವಜ, ರಥಗಳನ್ನೂ, ಪ್ರಾಸಗಳನ್ನೂ ಕತ್ತರಿಸಿ, ಅವರನ್ನು ಸೋಲಿಸಿ, ಶತ್ರುಗಳ ವಿಷಯದಲ್ಲಿ ತನಗಿದ್ದ ವ್ಯಥೆಯನ್ನು ಹೋಗಲಾಡಿಸಿಕೊಂಡನು. ಅನಂತರ ಶತ್ರುಪಕ್ಷದವರೆಲ್ಲರೂ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಬಿಚ್ಚಿ-ಜೀವಂತರಾಗಿರಬೇಕೆಂಬ ಆಶಯದಿಂದ– 'ನಾವೂ ನಿನ್ನವರಾಗಿದ್ದೇವೆ' ಎಂದು ಹೇಳುತ್ತಾ ಶರಣ್ಯನಾದ ರಾಜನ ಆಶ್ರಯವನ್ನು ಪ್ರಾರ್ಥಿಸಿದರು. ಅಂಬರೀಷನು ಶರಣಾಗತರಾಗಿ ಬಂದ ರಾಜರೆಲ್ಲರನ್ನೂ ಸಾಮಂತರನ್ನಾಗಿ ಮಾಡಿಕೊಂಡು ಭೂಮಂಡಲವನ್ನು ಗೆದ್ದು ಯಥಾಶಾಸ್ತ್ರವಾಗಿ ತನಗೆ ಇಷ್ಟವಾದ ನೂರಾರು ಯಾಗಗಳನ್ನು

ಮಾಡಿದನು. ಅವನು ಮಾಡಿದ ಯಜ್ಞಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರೂ ಮತ್ತು ಇತರ ಪ್ರಜೆಗಳೂ ಸರ್ವಗುಣಸಂಪನ್ನವಾದ ರುಚಿ-ಶುಚಿಗಳಿಂದ ಕೂಡಿದ್ದ ಅನ್ನವನ್ನು ಭೋಜನಮಾಡಿ ತೃಪ್ತರಾದರು ಮತ್ತು ರಾಜನಿಂದ ಆದರ-ಸತ್ಕಾರಗಳನ್ನೂ ಪಡೆದರು. ಕಡುಬು, ಪೂರಿ, ಹೋಳಿಗೆ, ರುಚಿ-ರುಚಿಯಾದ ಚಕ್ಕುಲಿ, ಮೊಸರಿನಲ್ಲಿ ಕಲಿಸಿದ ಹುರಿಹಿಟ್ಟು, ದೊಡ್ಡಗಾತ್ರದ ದ್ವೀಪದ್ರಾಕ್ಷಿ, ಚೆನ್ನಾಗಿಮಾಡಿದ ಅನ್ನ, ಸಾರು-ತೊವ್ವೆ, ಮೈರೇಯ, ಅಪೂಪ (ವಡೆ), ರಾಗಖಾಂಡವ, ಪಾನಕ, ಮೃಷ್ಟಾನ್ನಗಳು, ತುಪ್ಪ, ಜೇನುತುಪ್ಪ, ಹಾಲು, ಶುದ್ಧೋದಕ, ಮೊಸರು, ರಸವತ್ತಾದ ಫಲಗಳು, ರುಚಿಯಾದ ಗೆಡ್ಡೆ-ಗೆಣಸುಗಳು ಇವುಗಳೆಲ್ಲವನ್ನೂ ಬ್ರಾಹ್ಮಣರು ಅಲ್ಲಿ ಭುಂಜಿಸುತ್ತಿದ್ದರು.

ಮಾದಕಪಾನೀಯಗಳು ಪಾಪಜನಕವೆಂಬುದು ತಿಳಿದಿದ್ದರೂ ಪಾನಾಸಕ್ತರು ತಮ್ಮ ಸುಖಕ್ಕಾಗಿ ಗೀತ-ಗಾಯನಗಳೊಡನೆ ಯಥೇಚ್ಛವಾಗಿ ಕುಡಿಯುತ್ತಿದ್ದರು. ಮದ್ಯಪಾನದಿಂದ ಉನ್ಮತ್ತರಾದ ಸಾವಿರಾರು ಜನರು ಮನ ಬಂದಂತೆ ಹಾಡುಗಳನ್ನು ಹಾಡುತ್ತಿದ್ದರು. ಅಂಬರೀಷನ ಸ್ತುತಿಯುಕ್ತವಾದ ಕವನಗಳನ್ನು ಓದುತ್ತಿದ್ದರು. ಕುಣಿಯುತ್ತಿದ್ದರು. ಅಂಬರೀಷರಾಜನು ಆ ಯಜ್ಞದಲ್ಲಿ ಭಾಗವಹಿಸಿದ್ದ ಹತ್ತು ಲಕ್ಷ ಬ್ರಾಹ್ಮಣರಿಗೆ ಹತ್ತು ಲಕ್ಷ ರಾಜರನ್ನೇ ದಕ್ಷಿಣೆಯ ರೂಪವಾಗಿ ಕೊಟ್ಟನು. ಆ ರಾಜರೆಲ್ಲರೂ ಸುವರ್ಣಮಯವಾದ ಕವಚಗಳನ್ನು ಧರಿಸಿದ್ದರು. ಶ್ವೇತಚ್ಛತ್ರಗಳನ್ನು ಹೊಂದಿದ್ದರು. ಸುವರ್ಣ ಮಯವಾದ ರಥಗಳಲ್ಲಿ ಕುಳಿತಿದ್ದರು. ಆವಶ್ಯಕಸಾಮಗ್ರಿಗಳಿಂದ ಸಂಪನ್ನರಾಗಿ ತಮ್ಮ-ತಮ್ಮ ಅನುಯಾಯಿಗಳೊಡನೆ ಇದ್ದರು. ಇಂತಹ ರಾಜಕುಮಾರರನ್ನು ಅಂಬರೀಷನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಟ್ಟನು.

ಬಹುದಿನಗಳವರೆಗೂ ನಡೆಯುತ್ತಿದ್ದ ಆ ಯಜ್ಞದಲ್ಲಿ ಯಜಮಾನನಾದ ಅಂಬರೀಷನು ಮೂರ್ಧಾಭಿಷಿಕ್ತರಾದ ರಾಜರನ್ನೂ ಮತ್ತು ನೂರಾರು ರಾಜಕುಮಾರರನ್ನೂ ಕೋಶ-ದಂಡಗಳ ಸಮೇತವಾಗಿ ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಒಪ್ಪಿಸಿದನು. "ಅಪಾರವಾದ ದಕ್ಷಿಣೆಯನ್ನು ಕೊಡುವ ಅಂಬರೀಷನು ಯಜ್ಞಮಾಡಿದಂತೆ ಹಿಂದಿನವರು ಯಾರೂ ಮಾಡಲಿಲ್ಲ; ಮುಂದಿನವರು ಯಾರೂ ಮಾಡಲಾರರು"– ಎಂಬುದಾಗಿ ಹೇಳುತ್ತಾ

ಸುಪ್ರೀತರಾದ ಮಹರ್ಷಿಗಳು ಅಂಬರೀಷನ ಕಾರ್ಯವನ್ನು ಅನುಮೋದಿಸುತ್ತಿದ್ದರು.

ಶ್ವೈತ್ಯಸೃಂಜಯ! ಅಂಬರೀಷನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೂ ಮರಣವನ್ನಪ್ಪಿದನು. ಇದನ್ನು ಯೋಚಿಸಿ ನೀನು ನಿನ್ನ ಮಗನಿಗಾಗಿ ಪರಿತಾಪಪಡಬೇಡ. ಮೇಲಾಗಿ ನಿನ್ನ ಮಗನು ಅಂಬರೀಷನಂತೆ ಯಜ್ಞಮಾಡಿದವನೂ ಅಲ್ಲ; ದಕ್ಷಿಣೆಯನ್ನು ಕೊಟ್ಟವನೂ ಅಲ್ಲ."

ಯುಧಿಷ್ಠಿರ! ಹೀಗೆ ನಾರದರು ಸೃಂಜಯನನ್ನು ಸಮಾಧಾನಗೊಳಿಸಲು ಅಂಬರೀಷನ ಕಥೆಯನ್ನು ಹೇಳಿದರು.

ಒಳನೆಯ ಅಧ್ಯಾಯವು ಮುಗಿಯಿತು.

ಒ೫ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಶಶಬಿಂದುರಾಜನ ಚರಿತ್ರೆ

ನಾರದರು ಸೃಂಜಯನ ಮುಖಭಾವವನ್ನು ನೋಡಿ ಪುನಃ ಮತ್ತೊಂದು ಕಥೆಯನ್ನು ಆರಂಭಿಸಿದರು:

"ಮಹಾರಾಜ! ಸತ್ಯಪರಾಕ್ರಮನಾದ ಶ್ರೀಮಂತನಾದ ಶಶಬಿಂದುವು ನಾನಾವಿಧವಾದ ಯಜ್ಞಗಳನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಿದನು. ಅವನೂ ಸಹ ಸತ್ತುಹೋದನೆಂದು ನಾವು ಕೇಳಿದೆವು.

ಮಹಾತ್ಮನಾದ ಶಶಬಿಂದುವಿಗೆ ಒಂದು ಲಕ್ಷ ಪತ್ನಿಯರಿದ್ದರು. ಒಬ್ಬೊಬ್ಬ ಪತ್ನಿಯ ಗರ್ಭದಲ್ಲಿಯೂ ಒಂದೊಂದೂ ಸಾವಿರ ಮಕ್ಕಳು ಶಶಬಿಂದುವಿನಿಂದ ಹುಟ್ಟಿದರು. ರಾಜಕುಮಾರರೆಲ್ಲರೂ ಅತ್ಯಂತಪರಾಕ್ರಮಿಗಳಾಗಿಯೂ, ವೇದಪಾರಂಗತರಾಗಿಯೂ ಇದ್ದರು. ಅವರು ರಾಜರಾದ ನಂತರ ಹತ್ತುಲಕ್ಷಯಜ್ಞಗಳನ್ನು ಮಾಡಲು ಸಂಕಲ್ಪಿಸಿ ಮುಖ್ಯ-ಮುಖ್ಯವಾದ ಯಜ್ಞಗಳನ್ನು ಮಾಡಲು ಉಪಕ್ರಮಿಸಿದರು. ಶಶಬಿಂದುವಿನ ಆ ಎಲ್ಲ ಮಕ್ಕಳೂ ಚಿನ್ನದ ಕವಚಗಳನ್ನು ಧರಿಸಿದ್ದರು. ಉತ್ತಮಧನುರ್ಧಾರಿಗಳಾದ ಅವರು ಅಶ್ವಮೇಧಯಜ್ಞಗಳನ್ನೂ ಮಾಡುತ್ತಿದ್ದರು. ರಾಜಕುಮಾರರ

ತಂದೆಯಾದ ಶಶಬಿಂದುವು ತಾನು ಮಾಡಿದ ಅಶ್ವಮೇಧಯಾಗದಲ್ಲಿ ತನ್ನ ಎಲ್ಲ ಮಕ್ಕಳನ್ನೂ ಬ್ರಾಹ್ಮಣರಿಗೆ ದಕ್ಷಿಣಾರೂಪದಲ್ಲಿ ಕೊಟ್ಟುಬಿಟ್ಟನು. ಪ್ರತಿಯೊಬ್ಬ ರಾಜಕುಮಾರನ ಹಿಂದೆಯೂ ನೂರು ರಥಗಳೂ ನೂರು ಆನೆಗಳೂ ಹೊರಟುವು. ಪ್ರತಿಯೊಬ್ಬ ರಾಜಕುಮಾರನನ್ನೂ ಸುವರ್ಣಾಭರಣಭೂಷಿತೆಯರಾದ ನೂರು ಕನ್ಯೆಯರು ಹಿಂಬಾಲಿಸಿದರು. ಪ್ರತಿಕನ್ಯೆಯ



ಹಿಂದೆಯೂ ನೂರು ಆನೆಗಳೂ, ಪ್ರತಿಯೊಂದು ಆನೆಯ ಹಿಂದೆಯೂ ನೂರು ರಥಗಳೂ ಹೋಗುತ್ತಿದ್ದುವು. ಪ್ರತಿಯೊಂದು ರಥದ ಹಿಂದೆಯೂ ಸುವರ್ಣಮಾಲೆಗಳನ್ನು ಧರಿಸಿದ್ದ ಬಲಿಷ್ಠವಾದ ನೂರು ಕುದುರೆಗಳು ಹೋಗುತ್ತಿದ್ದುವು. ಪ್ರತಿಯೊಂದು ಕುದುರೆಯ ಹಿಂದೆಯೂ ಒಂದು ಸಾವಿರ ಗೋವುಗಳೂ, ಪ್ರತಿಯೊಂದು ಗೋವಿನ ಹಿಂದೆಯೂ ಐವತ್ತು ಕುರಿಗಳೂ ಹೋಗುತ್ತಿದ್ದುವು.

ಅಶ್ವಮೇಧಮಹಾಯಜ್ಞದಲ್ಲಿ ಇಷ್ಟು ಅಪಾರವಾದ ಧನವನ್ನು ಮಹಾಭಾಗನಾದ ಶಶಬಿಂದುವು ಬ್ರಾಹ್ಮಣರಿಗೆ ದಕ್ಷಿಣಾರೂಪದಲ್ಲಿ ಕೊಡುತ್ತಿದ್ದನು. ಆ ಮಹಾಯಜ್ಞದಲ್ಲಿ ಎಷ್ಟು ಮರದ ಯೂಪಸ್ತಂಭಗಳಿದ್ದುವೋ

ಅಷ್ಟೇ ಸಂಖ್ಯೆಯ ಯೂಪಸ್ತಂಭಗಳನ್ನು ಶಶಬಿಂದುವು ಚಿನ್ನದಿಂದಲೇ ಮಾಡಿಸಿದನು. ಅವನ ಯಜ್ಞಸಮಯದಲ್ಲಿ ಭಕ್ಷ್ಯಾನ್ನ-ಪಾನಾದಿಗಳು ಪರ್ವತೋಪಮವಾಗಿದ್ದು ಮೂರು ಮೈಲಿಗಳಷ್ಟು ಎತ್ತರವಾಗಿದ್ದುವು. ಶಶಬಿಂದುವಿನ ಅಶ್ವಮೇಧಯಾಗವು ಮುಗಿದನಂತರವೂ ಅಂತಹ ಹದಿಮೂರು ರಾಶಿಗಳು ಹಾಗೆಯೇ ಉಳಿದಿದ್ದುವು. ಶಶಬಿಂದುವಿನ ರಾಜ್ಯವು ತುಷ್ಟರಾದ ಮತ್ತು ಪುಷ್ಟರಾದ ಪ್ರಜೆಗಳಿಂದ ಪರಿಪೂರ್ಣವಾಗಿದ್ದಿತು. ಯಾವುದೇ ಸತ್ಕಾರ್ಯಕ್ಕೂ ಯಾವ ವಿಧವಾದ ವಿಘ್ನವೂ ಉಂಟಾಗುತ್ತಿರ ಲಿಲ್ಲ. ದೇಶದಲ್ಲಿ ಆಧಿ-ವ್ಯಾಧಿಗಳೊಂದೂ ಇರಲಿಲ್ಲ. ಇಂತಹ ಸಂಪದ್ಭರಿತವಾದ ಭೂಮಿಯನ್ನು ಶಶಬಿಂದುವು ಬಹಳ ಕಾಲದವರೆಗೆ ಉಪಭೋಗಿಸಿ ಅನಂತರ ಸ್ವರ್ಗಕ್ಕೆ ಹೋದನು.

ಶ್ವೈತ್ಯಸೃಂಜಯ! ಶಶಬಿಂದುವು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೇ ಮೃತ್ಯುವಶನಾದನು. ಆದುದರಿಂದ ನೀನು ನಿನ್ನ ಮಗನ ಮರಣಕ್ಕಾಗಿ ಪರಿತಾಪಪಡಬೇಡ. ಮೇಲಾಗಿ ನಿನ್ನ ಮಗನು ಯಾವ ಯಜ್ಞವನ್ನೂ ಮಾಡಲಿಲ್ಲ; ತದಂಗವಾಗಿ ದಕ್ಷಿಣೆಗಳನ್ನೂ ಕೊಡಲಿಲ್ಲ."

ಯುಧಿಷ್ಠಿರ! ಹೀಗೆ ನಾರದರು ಪುತ್ರಶೋಕಪರಿತಪ್ತನಾಗಿದ್ದ ಸೃಂಜಯನನ್ನು ಸಮಾಧಾನಪಡಿಸುವ ಸಲುವಾಗಿ ಶಶಬಿಂದುವಿನ ಕಥೆಯನ್ನು ಹೇಳಿದರು.

ಅರವತ್ತೈದನೆಯ ಅಧ್ಯಾಯವು ಮುಗಿಯಿತು.

೬೬ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಗಯಚರಿತ್ರೆ

ನಾರದರು ಪುತ್ರಶೋಕದಿಂದ ಪರಿತಪ್ತನಾಗಿದ್ದ ಸೃಂಜಯನನ್ನು ಸಮಾಧಾನಪಡಿಸಲು ಗಯನ ಕಥೆಯನ್ನು ಹೇಳುತ್ತಾರೆ:

"ಮಹಾರಾಜ! ರಾಜಾ ಗಯನು ನೂರು ವರ್ಷಗಳ ಪರ್ಯಂತ

(೧೬೪)-೧೬

ವಾಗಿ ವಿಧಿವತ್ತಾಗಿ ಯಾಗಗಳನ್ನು ಮಾಡುತ್ತಲಿದ್ದು ಹೋಮಶೇಷದ ಅನ್ನವನ್ನೇ ಭುಂಜಿಸುತ್ತಿದ್ದನು. ಅಮೂರ್ತರಯಸನ ಮಗನಾದ ಗಯನೂ ಸಹ ಕಾಲವು ಪ್ರಾಪ್ತವಾಗಲಾಗಿ ಮರಣಹೊಂದಿದನೆಂದು ನಾವು ಕೇಳಿದೆವು. ಅವಿಚ್ಛಿನ್ನವಾಗಿ ನೂರು ವರ್ಷಗಳ ಕಾಲ ಅಗ್ನಿಹೋತ್ರದ ಮೂಲಕವಾಗಿ ಅಗ್ನಿದೇವನನ್ನು ಅರ್ಚಿಸಿದ ಕಾರಣದಿಂದ ಅಗ್ನಿದೇವನು ಪ್ರೀತನಾಗಿ ಗಯನಿಗೆ ವರವನ್ನು ಕೊಡಲು ಅಪೇಕ್ಷಿಸಿದನು. ಅಗ್ನಿದೇವನ ಆಜ್ಞೆಯಂತೆ ಗಯನು ಈ ವರಗಳನ್ನು ಕೇಳಿದನು:

**ತಪಸಾ ಬ್ರಹ್ಮಚರ್ಯೇಣ ವ್ರತೇನ ನಿಯಮೇನ ಚ ।**
**ಗುರೂಣಾಂ ಚ ಪ್ರಸಾದೇನ ವೇದಾನಿಚ್ಛಾಮಿ ವೇದಿತುಮ್।**
**ಸ್ವಧರ್ಮೇಣಾವಿಹಿಂಸ್ಯಾವ್ಯಾನ್ಧನಮಿಚ್ಛಾಮಿ ಚಾಕ್ಷಯಮ್ ॥೩॥**
**ವಿಪ್ರೇಷು ದದತಶ್ಚೈವ ಶ್ರದ್ಧಾ ಭವತು ನಿತ್ಯಶಃ ।**
**ಅನನ್ಯಾಸು ಸವರ್ಣಾಸು ಪುತ್ರಜನ್ಮ ಚ ಮೇ ಭವೇತ್ ॥೪॥**
**ಅನ್ನಂ ಮೇ ದದತಃ ಶ್ರದ್ಧಾ ಧರ್ಮೇ ಮೇ ರಮತಾಂ ಮನಃ.**
**ಅವಿಘ್ನಂ ಚಾಸ್ತು ಮೇ ನಿತ್ಯಂ ಧರ್ಮಕಾರ್ಯೇಷು ಪಾವಕ ॥೫॥**

"ಅಗ್ನಿದೇವ! ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ನಿಯಮಗಳಿಂದಲೂ, ವ್ರತಾನುಷ್ಠಾನಗಳಿಂದಲೂ, ಗುರುಗಳ ಪ್ರಸಾದದಿಂದಲೂ- ವೇದಗಳನ್ನು ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಇತರರಿಗೆ ಯಾವ ವಿಧವಾದ ಹಿಂಸೆಯನ್ನೂ ಕೊಡದೇ ಧರ್ಮಕ್ಕೆ ಅನುಸಾರವಾಗಿ ನಡೆದುಕೊಳ್ಳುತ್ತಾ ಇರುವ ನನ್ನ ಧನವು ಅಕ್ಷಯವಾಗಲಿ. ಬ್ರಾಹ್ಮಣರಿಗೆ ದಾನಕೊಡುವುದರಲ್ಲಿ ನನ್ನ ಶ್ರದ್ಧೆಯು ದಿನ-ದಿನಕ್ಕೂ ಹೆಚ್ಚಲಿ. ನನ್ನ ವರ್ಣದ ಕನ್ಯೆಯರೊಡನೆಯೇ ನನ್ನ ವಿವಾಹವಾಗಲಿ ಮತ್ತು ಪತಿವ್ರತೆಯರಾದ ಆ ಧರ್ಮಪತ್ನಿಯರಲ್ಲಿ ನನಗೆ ಪುತ್ರಪ್ರಾಪ್ತಿಯಾಗಲಿ. ಅನ್ನದಾನಮಾಡುವುದರಲ್ಲಿ ನನಗೆ ಹೆಚ್ಚು ಶ್ರದ್ಧೆಯುಂಟಾಗಲಿ. ಧರ್ಮದಲ್ಲಿಯೇ ನನ್ನ ಮನಸ್ಸು ಯಾವಾಗಲೂ ನೆಲೆಗೊಳ್ಳಲಿ. ನಾನು ಅನುದಿನವೂ ಮಾಡುವ ಧರ್ಮಕಾರ್ಯಗಳಲ್ಲಿ ವಿಘ್ನವುಂಟಾಗದಿರಲಿ. ನೀನು ನನ್ನ ಅರ್ಚನೆಯಿಂದ ಸುಪ್ರೀತನಾಗಿದ್ದರೆ ಈ ವರಗಳನ್ನು ದಯಪಾಲಿಸು."

**‘ತಥಾ ಭವತು’** ‘ಹಾಗೆಯೇ ಆಗಲಿ’ ಎಂದು ಹೇಳಿ ಅಗ್ನಿದೇವನು ಅಂತರ್ಹಿತನಾದನು. ಗಯನು ತಾನು ಪ್ರಾರ್ಥಿಸಿದ ಎಲ್ಲ ವರಗಳನ್ನೂ ಅಗ್ನಿದೇವನಿಂದ ಪಡೆದುಕೊಂಡು ಧರ್ಮಮಾರ್ಗದಿಂದಲೇ ಶತ್ರುಗಳೆಲ್ಲರನ್ನೂ ಜಯಿಸಿದನು. ಗಯನು ಶ್ರದ್ಧಾಯುಕ್ತನಾಗಿ ಆಯಾಕಾಲಗಳಲ್ಲಿ ದರ್ಶ-ಪೌರ್ಣಮಾಸಗಳು, ಆಗ್ರಯಣ, ಚಾತುರ್ಮಾಸ್ಯ-ಇವೇ ಮೊದಲಾದ ನಾನಾಪ್ರಕಾರವಾದ ಯಜ್ಞಗಳನ್ನು ನೂರು ವರ್ಷಪರ್ಯಂತವಾಗಿ ಮಾಡಿದನು. ಯಜ್ಞಗಳಲ್ಲಿ ಗಯನು ನೂರು ವರ್ಷಗಳವರೆಗೆ ಪ್ರತಿನಿತ್ಯವೂ ಮುಂಜಾನೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಒಂದು ಲಕ್ಷದ ಅರುವತ್ತು ಸಾವಿರ ಗೋವುಗಳನ್ನೂ, ಹತ್ತು ಸಾವಿರ ಕುದುರೆಗಳನ್ನೂ, ಒಂದು ಲಕ್ಷ ಸುವರ್ಣನಾಣ್ಯಗಳನ್ನೂ ದಾನವಾಗಿ ಕೊಡುತ್ತಿದ್ದನು. ಗಯನು ಸೋಮ ಮತ್ತು ಅಂಗಿರಸರಂತೆ ಎಲ್ಲ ನಕ್ಷತ್ರಗಳಲ್ಲಿಯೂ ಆಯಾ ನಕ್ಷತ್ರಕ್ಕೆ ವಿಹಿತವಾದ ದಕ್ಷಿಣೆಗಳನ್ನು ಕೊಡುತ್ತಾ ವಿಧ-ವಿಧವಾದ ಯಜ್ಞಗಳಿಂದ (ನಕ್ಷತ್ರೇಷ್ಟಿಗಳಿಂದ) ದೇವತೆಗಳನ್ನು ತೃಪ್ತಿಪಡಿಸುತ್ತಿದ್ದನು. ಗಯನು ಅಶ್ವಮೇಧಮಹಾಯಜ್ಞದಲ್ಲಿ ಚಿನ್ನದಿಂದಲೂ ಮತ್ತು ಮಣಿಮಯವಾದ ಮಳಲಿನಿಂದಲೂ ಪೃಥ್ವಿಯ ಪ್ರತಿಮೆಯನ್ನು ಮಾಡಿ ಬ್ರಾಹ್ಮಣರಿಗೆ ದಾನಕೊಟ್ಟನು. ಗಯನ ಅಶ್ವಮೇಧ ಯಾಗದಲ್ಲಿ ಸ್ಥಾಪಿತವಾಗಿದ್ದ ಯೂಪಸ್ತಂಭಗಳೆಲ್ಲವೂ ಚಿನ್ನದಿಂದಲೇ ಮಾಡಲ್ಪಟ್ಟಿದ್ದುವು. ಆ ಯೂಪಸ್ತಂಭಗಳನ್ನು ನಾನಾವಿಧವಾದ ರತ್ನಗಳಿಂದ ಅಲಂಕರಿಸಿದ್ದರು. ಸರ್ವಸಮೃದ್ಧವಾಗಿದ್ದ ಆ ಯೂಪಸ್ಥಂಭಗಳು ಸರ್ವಪ್ರಾಣಿಗಳಿಗೂ ಮನೋಹರವಾಗಿ ಕಾಣುತ್ತಿದ್ದುವು. ಗಯನು ಯಜ್ಞಮಾಡುತ್ತಿದ್ದ ಸಮಯದಲ್ಲಿ ಹರ್ಷದಿಂದ ಉಲ್ಲಸಿತರಾಗಿದ್ದ ಬ್ರಾಹ್ಮಣರಿಗೂ ಮತ್ತು ಇತರ ಸಮಸ್ತಪ್ರಾಣಿಗಳಿಗೂ ಸರ್ವವಿಧವಾದ ಕಾಮನೆಗಳಿಂದ ಸಮೃದ್ಧವಾಗಿದ್ದ (ಬೇಕುಬೇಕಾದ ಭಕ್ಷ್ಯ-ಭೋಜ್ಯಾದಿಗಳಿಂದ ಸಮೃದ್ಧವಾದ) ಭೋಜನವನ್ನು ಮಾಡಿಸಿದನು. ಸಮುದ್ರ, ವನ, ದ್ವೀಪ, ನದೀ, ನದ, ಕಾನನ, ನಗರ, ರಾಷ್ಟ್ರ, ಆಕಾಶ ಮತ್ತು ಸ್ವರ್ಗಗಳಲ್ಲಿ ಯಾವ-ಯಾವ ಪ್ರಾಣಿಸಮುದಾಯಗಳಿರುತ್ತವೆಯೋ ಅವುಗಳೆಲ್ಲವೂ ಗಯನ ಯಜ್ಞದ ಸಮೃದ್ಧಿಯಿಂದ ಸಂತೃಪ್ತಿಗೊಂಡುವು. “ಗಯನ ಯಜ್ಞಕ್ಕೆ ಸಮಾನವಾದ ಯಜ್ಞವು ಬೇರೆ ಯಾವುದೂ ನಡೆಯಲಿಲ್ಲ.” ಎಂದೇ ಎಲ್ಲರೂ ಉದ್ಘೋಷಿಸುತ್ತಿದ್ದರು.

ಗಯನ ಸುವರ್ಣಮಯವಾದ ಯಜ್ಞವೇದಿಯು ಮೂವತ್ತಾರು ಯೋಜನಗಳಷ್ಟು ಉದ್ದವಾಗಿಯೂ ಮೂವತ್ತು *ಯೋಜನಗಳಷ್ಟು ಅಗಲವಾಗಿಯೂ ಇದ್ದಿತು. ಕೆಳಭಾಗದಿಂದ ಮೇಲಕ್ಕೆ ಅದರ ಎತ್ತರ ಇಪ್ಪತ್ತುನಾಲ್ಕು ಯೋಜನಗಳಷ್ಟಿದ್ದಿತು. ಆ ವೇದಿಯ ಮೇಲೆ ಮುತ್ತು, ವಜ್ರ ಮತ್ತು ಮಣಿಗಳನ್ನು ಮೆಟ್ಟಿ ಅದನ್ನು ಅಲಂಕರಿಸಿದ್ದರು. ಅಪಾರವಾದ ದಕ್ಷಿಣೆಗಳನ್ನು ಬ್ರಾಹ್ಮಣರಿಗೆ ಕೊಡುತ್ತಿದ್ದ ಗಯನು ಯಜ್ಞಸಮಯದಲ್ಲಿ ಅವರಿಗೆ ವಸ್ತ್ರಗಳನ್ನೂ, ಆಭರಣಗಳನ್ನೂ ಮತ್ತು ಇನ್ನೂ ಅನೇಕ ಭೂರಿದಕ್ಷಿಣೆಗಳನ್ನೂ ಕೊಡುತ್ತಿದ್ದನು. ಯಜ್ಞಸಮಯದಲ್ಲಿ ಎಲ್ಲರಿಗೂ ಭೋಜನವಾದ ನಂತರ ಇಪ್ಪತ್ತೈದು ಭಕ್ಷ್ಯ-ಭೋಜ್ಯಾದಿಗಳ ಮತ್ತು ಅನ್ನಗಳ ಪರ್ವತಗಳು ಉಳಿದಿದ್ದುವು. ರಸ, ತೊವ್ವೆ ಮುಂತಾದುವುಗಳ ಸಣ್ಣ-ಸಣ್ಣ ನದಿಗಳು ಎಲ್ಲೆಲ್ಲಿಗೆ ಹೋಗಬೇಕೋ ಅಲ್ಲಲ್ಲಿಗೆ ಹರಿದುಹೋಗುವ ಹಾಗೆ ಕುಶಲತೆಯಿಂದ ವ್ಯವಸ್ಥೆಮಾಡಿದ್ದರು. ಅಂತಹ ನದಿಗಳಲ್ಲಿಯೂ ರಸಾದಿಗಳು ಹಾಗೆಯೇ ಉಳಿದಿದ್ದುವು. ನಾನಾವಿಧವಾದ ವಸ್ತ್ರ, ಆಭರಣ ಮತ್ತು ಸುಗಂಧಾದಿಗಳ ರಾಶಿಗಳೂ ಹಾಗೆಯೇ ಉಳಿದಿದ್ದುವು. ಆ ಯಜ್ಞದ ಪ್ರಭಾವದಿಂದ ಗಯನು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದನು. ಪಿತೃಗಳಿಗೆ ಅಕ್ಷಯತೃಪ್ತಿಯನ್ನುಂಟುಮಾಡುವ ವಟವೃಕ್ಷವೂ, ಬ್ರಹ್ಮಸರವೆಂಬ ಪುಣ್ಯತೀರ್ಥವೂ ಗಯನು ಮಾಡಿದ ಮಹಾಯಜ್ಞದಿಂದಲೇ ಪ್ರಸಿದ್ಧಿಹೊಂದಿದುವು. ಸೃಂಜಯ! ಗಯನು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯೂ ಆಗಿದ್ದನು. ಅಂತಹವನೇ ಪರಲೋಕವನ್ನೈದಿದ ಮೇಲೆ ನಿನ್ನ ಮಗನು ಪರಲೋಕಕ್ಕೆ ಹೋದುದಕ್ಕಾಗಿ ಪರಿತಪಿಸುವೆಯೇಕೆ? ನಿನ್ನ ಪರಿತಾಪವನ್ನು ಸಾಕುಮಾಡು. ಮೇಲಾಗಿ ನಿನ್ನ ಮಗನು ಯಜಮಾನನೂ ಆಗಿರಲಿಲ್ಲ; ದಾನ-ದಕ್ಷಿಣೆಗಳನ್ನು ಕೊಟ್ಟವನೂ ಅಲ್ಲ."

---

*ಇಲ್ಲಿ ಯೋಜನ ಎಂದರೆ ಹನ್ನೆರಡು ಮೈಲಿಗಳಲ್ಲ. ಒಬ್ಬ ವ್ಯಾಖ್ಯಾನಕಾರರು ಯೋಜನಶಬ್ದಕ್ಕೆ 'ಬಿತ್ತಾ' ಎಂದು ಅರ್ಥಮಾಡಿದ್ದಾರೆ. ಇದರ ಪ್ರಕಾರ ಯಜ್ಞವೇದಿಯು ಹದಿನೆಂಟು ಮಾರು ಉದ್ದವಾಗಿಯೂ, ಹದಿನೈದು ಮಾರು ಅಗಲವಾಗಿಯೂ, ಹನ್ನೆರಡು ಮಾರು ಎತ್ತರವಾಗಿಯೂ ಇದ್ದಿತು.

ಯುಧಿಷ್ಠಿರ! ಹೀಗೆ ನಾರದರು ಸೃಂಜಯನನ್ನು ಸಮಾಧಾನಪಡಿಸುವುದಕ್ಕಾಗಿ ಗಯನ ಕಥೆಯನ್ನು ಹೇಳಿ ಮುಗಿಸಿದರು.

ಅ೬ನೆಯ ಅಧ್ಯಾಯವು ಮುಗಿಯಿತು.

೬೭ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ರಂತಿದೇವನ ಮಹತ್ತ್ವ

ನಾರದರು ಸೃಂಜಯನನ್ನು ಸಮಾಧಾನಗೊಳಿಸಲು ರಂತಿದೇವನ ಕಥೆಯನ್ನು ಹೇಳುತ್ತಾರೆ:

“ಸೃಂಜಯ! ರಂತಿದೇವನ ಪಾಕಶಾಲೆಯಲ್ಲಿ ಎರಡು ಲಕ್ಷ ಮಂದಿ ಅಡಿಗೆಯವರಿದ್ದರು. ರಾಜನ ಅರಮನೆಗೆ ಅತಿಥಿಗಳಾಗಿ ಬಂದ ಬ್ರಾಹ್ಮಣರಿಗೆ ಅಮೃತಕ್ಕೆ ಸಮಾನವಾದ, ಪಕ್ವಮಾಡಿದ್ದ ಮತ್ತು ಪಕ್ವಮಾಡದೇ ಇದ್ದ ಶ್ರೇಷ್ಠವಾದ ಭೋಜನವನ್ನು ಹಗಲೂ-ರಾತ್ರಿಗಳೆಂಬ ವಿವೇಚನೆಯೇ ಇಲ್ಲದೇ ಪರಿಚಾರಕರು ಬಡಿಸುತ್ತಿದ್ದರು. ಅಂತಹ ರಂತಿದೇವನೂ ಕಾಲವಶನಾದ ನೆಂದು ನಾವು ಕೇಳಿದ್ದೇವೆ. ರಂತಿದೇವನು ನ್ಯಾಯರೀತಿಯಲ್ಲಿ ಅರ್ಜಿಸಿದ ಧನವನ್ನು ಬ್ರಾಹ್ಮಣರಿಗೆ ದಾನಮಾಡುತ್ತಿದ್ದನು. ವೇದಗಳನ್ನು ಅಧ್ಯಯನ ಮಾಡಿದ ರಂತಿದೇವನು ಧರ್ಮಮಾರ್ಗದ ಮೂಲಕವಾಗಿಯೇ ಶತ್ರು ಗಳೆಲ್ಲರನ್ನೂ ಜಯಿಸಿದ್ದನು. ಸುವರ್ಣಮಯವಾದ ಮತ್ತು ಥಳ-ಥಳಿಸುತ್ತಿದ್ದ ಚಿನ್ನದ ನಾಣ್ಯಗಳನ್ನು ಬ್ರಾಹ್ಮಣರಿಗೆ ದಾನಮಾಡುತ್ತಿದ್ದಾಗ, ಪ್ರತಿಯೊಬ್ಬ ಬ್ರಾಹ್ಮಣರ ಸಮೀಪಕ್ಕೂ ಹೋಗಿ -“ಇದು ತಮಗೆ ಸೇರತಕ್ಕ ಸುವರ್ಣ ನಾಣ್ಯ; ಇದನ್ನು ದಯಮಾಡಿ ಸ್ವೀಕರಿಸಿರಿ”–ಎಂದು ವಿನಯಪೂರ್ವಕವಾಗಿ ಹೇಳುತ್ತಿದ್ದನು. “ಈ ನಿಷ್ಕವನ್ನು ತಮಗೆ ಕೊಡುತ್ತೇನೆ; ಸ್ವೀಕರಿಸಿರಿ”–ಎಂದು ಹೇಳುತ್ತಲೇ ರಾಜನು ಸಾವಿರಾರು ನಿಷ್ಕಗಳನ್ನು ದಾನಮಾಡುತ್ತಿದ್ದನು. ಪುನಃ-ಪುನಃ ಬ್ರಾಹ್ಮಣರನ್ನು ಸಮಾಶ್ವಾಸಿಸಿ ನಿಷ್ಕಗಳನ್ನು ತೆಗೆದುಕೊಳ್ಳಲು ಅವರನ್ನು ಒಪ್ಪಿಸಿ ಸಾವಿರಾರು ಸಂಖ್ಯೆಯಲ್ಲಿ ನಿಷ್ಕಗಳನ್ನೇ ದಾನಮಾಡುತ್ತಿ ದ್ದನು. ರಾಜನಾದ ರಂತಿದೇವನು ದಿನಕ್ಕೆ ಸಾವಿರ ಕೋಟಿ ನಿಷ್ಕಗಳನ್ನು ದಾನಮಾಡುತ್ತಿದ್ದರೂ–“ಇಂದು ನಾನು ಬಹಳ ಕಡಿಮೆಯಾಗಿ ದಾನ

ಮಾಡಿದೆನು"–ಎಂಬ ಖೇದದಿಂದ ಪುನಃ-ಪುನಃ ದಾನಮಾಡುತ್ತಿದ್ದನು. ಸೃಂಜಯ! ಹೀಗೆ ದಾನವನ್ನು ಯಾರು ತಾನೇ ಕೊಡುತ್ತಾರೆ? "ದಾನವನ್ನು ಸ್ವೀಕರಿಸುವ ಬ್ರಾಹ್ಮಣರ ಕೈಗಳಿಂದ ನಾನು ವಿಯುಕ್ತನಾದರೆ (ದಾನವನ್ನು ಸ್ವೀಕರಿಸುವ ಬ್ರಾಹ್ಮಣರಿಲ್ಲದಿದ್ದರೆ) ನನಗೆ ಶಾಶ್ವತವಾದ ದುಃಖವುಂಟಾಗುತ್ತದೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ." ಎಂದೆನ್ನುತ್ತಾ ರಾಜನು ದಾನವನ್ನು ಕೊಡುತ್ತಲೇ ಇರುತ್ತಿದ್ದನು. (ಒಂದು ಸಾವಿರ ಚಿನ್ನದ ಹೋರಿಗಳು, ಅವುಗಳ ಜೊತೆಗೆ ನೂರು ಹಸುಗಳು ಮತ್ತು ಒಂದು ನೂರ ಎಂಟು ಸುವರ್ಣಮುದ್ರೆಗಳು ಇವಿಷ್ಟಕ್ಕೆ ನಿಷ್ಕ ಅಥವಾ ಧನ ಎಂದು



ಹೇಳುತ್ತಿದ್ದರು). ನೂರು ವರ್ಷಗಳ ಪರ್ಯಂತವಾಗಿ ಪ್ರತಿಯೊಂದು ಪಕ್ಷದಲ್ಲಿಯೂ ರಂತಿದೇವನು ಬ್ರಾಹ್ಮಣರಿಗೆ ಅಗ್ನಿಹೋತ್ರೋಪಕರಣಗಳನ್ನೂ, ಯಜ್ಞಕ್ಕೆ ಬೇಕಾದ ಸಾಧನಸಾಮಗ್ರಿಗಳನ್ನೂ ದಾನಮಾಡುತ್ತಿದ್ದನು. ಋಷಿಗಳಿಗೆ ಕಮಂಡಲುಗಳನ್ನೂ, ಕುಂಭಗಳನ್ನೂ, ಸ್ಥಾಲಿಗಳನ್ನೂ, ಮಣ್ಣಿನ ಪಾತ್ರೆಗಳನ್ನೂ ಶಯನಾಸನ-ಯಾನಗಳನ್ನೂ, ಪ್ರಾಸಾದಗಳನ್ನೂ, ಮನೆಗಳನ್ನೂ, ವಿಧ-ವಿಧವಾದ ವೃಕ್ಷಗಳನ್ನೂ, ಅನ್ನವನ್ನೂ ಮತ್ತು ಧನವನ್ನೂ ದಾನವಾಗಿ ಕೊಡುತ್ತಿದ್ದನು.

ರಂತಿದೇವನ ಆ ಎಲ್ಲ ಕೊಡುಗೆಗಳೂ ಸುವರ್ಣಮಯವಾಗಿಯೇ ಇರುತ್ತಿದ್ದುವು. ರಂತಿದೇವನ ಅತಿಮಾನುಷವಾದ ಸಮೃದ್ಧಿಯನ್ನು ನೋಡಿ ಪುರಾಣಗಳನ್ನು ತಿಳಿದ ಜನರು ಅವನ ಪರವಾಗಿ ಒಂದು ಶ್ಲೋಕವನ್ನು ಹಾಡುತ್ತಾರೆ:

**ನೈತಾದೃಶಂ ದೃಷ್ಟಪೂರ್ವಂ ಕುಬೇರಸದನೇಷ್ವಪಿ ।**
**ಧನಂ ಚ ಪೂರ್ಯಮಾಣಂ ನಃ ಕಿಂ ಪುನರ್ಮನುಜೇಷ್ವಿತಿ ॥೧೩॥**

"ರಂತಿದೇವನಲ್ಲಿರುವಂತಹ ಧನದ ರಾಶಿಯನ್ನು ನಾವು ಕುಬೇರನ ಮನೆಯಲ್ಲಿಯೂ ಕಾಣಲಿಲ್ಲ. ಹೀಗಿರುವಾಗ ಮಾನವರ ಮನೆಗಳಲ್ಲಿ ಇಂತಹ ಧನರಾಶಿಯನ್ನು ನೋಡಲು ಹೇಗೆ ತಾನೇ ಸಾಧ್ಯವಾದೀತು? ವಾಸ್ತವವಾಗಿ ರಂತಿದೇವನ ಸಮೃದ್ಧಿಯ ಸಾರವು ಅವನ ಸುವರ್ಣಮಯವಾದ ರಾಜಭವನ ಮತ್ತು ಸುವರ್ಣಮುದ್ರೆಗಳ ರಾಶಿಯೇ ಆಗಿದೆ"- ಎಂಬುದಾಗಿ ಹೇಳಿಕೊಂಡು ಆಶ್ಚರ್ಯಪಡುತ್ತಿದ್ದರು.

**ವ್ಯಕ್ತಂ ವಸ್ವೋಕಸಾರೇಯಮಿತ್ಯೂಚುಸ್ತತ್ರ ವಿಸ್ಮಿತಾಃ ।**
**ಸಾಂಕೃತೇ ರನ್ತಿದೇವಸ್ಯ ಯಾಂ ರಾತ್ರಿಮತಿಥಿರ್ವಸೇತ್ ॥೧೪॥**

ರಂತಿದೇವನ ಮನೆಯಲ್ಲಿ ಅತಿಥಿಯು ಯಾವ ರಾತ್ರಿಯಲ್ಲಿ ತಂಗುತ್ತಿದ್ದನೋ ಅವನು ಅಲ್ಲಿಯ ವೈಭವವನ್ನು ನೋಡಿ ಅಚ್ಚರಿಗೊಂಡು– 'ಇದು ಇಂದ್ರನ ಅಮರಾವತಿಯೇ ಎಂಬುದು ಸ್ಪಷ್ಟವಾಯಿತು'–ಎಂದು ಹೇಳುತ್ತಿದ್ದನು.

**ತತ್ರ ಸ್ಮ ಸೂದಾಃ ಕ್ರೋಶನ್ತಿ ಸುಮೃಷ್ಟಮಣಿಕುಣ್ಡಲಾಃ।**
**ಸೂಪಂ ಭೂಯಿಷ್ಠಮಶ್ನೀಧ್ವಂ ನಾದ್ಯ ಮಾಸಂ ಯಥಾ ಪುರಾ॥೧೫॥**

ವಿಶುದ್ಧವಾದ ಮಣಿಮಯಕುಂಡಲಗಳನ್ನು ಧರಿಸಿರುವ ಅಡಿಗೆಯವರು ಹೀಗೆ ಕೂಗಿಕೊಳ್ಳುತ್ತಿದ್ದರು-

'ತೊವ್ವೆಯ ಅನ್ನವನ್ನು ಚೆನ್ನಾಗಿ ತಿನ್ನಿರಿ! ಈಗ ಹಿಂದಿನ ತಿಂಗಳಿನಂತಲ್ಲ. ಅತ್ಯುತ್ಕೃಷ್ಟವಾದ ರೀತಿಯಲ್ಲಿರುವ ತೊವ್ವೆಯನ್ನು ತಿನ್ನಿರಿ.'

ರಂತಿದೇವನು ತನ್ನ ಬಳಿಯಲ್ಲಿ ಉಳಿದಿದ್ದ ಯತ್ಕಿಂಚಿತ್ ಸುವರ್ಣದ ಸಾಮಗ್ರಿಗಳನ್ನೂ ಸಹ ವಿಸ್ತೃತವಾದ ಯಜ್ಞಸಮಯದಲ್ಲಿ ಬ್ರಾಹ್ಮಣರಿಗೆ

ದಾನವಾಗಿ ಕೊಟ್ಟನು. ರಂತಿದೇವನು ಅರ್ಪಿಸುತ್ತಿದ್ದ ಹವ್ಯಗಳನ್ನು-ದೇವತೆಗಳೂ, ಕವ್ಯಗಳನ್ನು–ಪಿತೃಗಳೂ ಪ್ರತ್ಯಕ್ಷವಾಗಿಯೇ ಬಂದು ಸ್ವೀಕರಿಸುತ್ತಿದ್ದರು. ಬ್ರಾಹ್ಮಣಶ್ರೇಷ್ಠರು ತಮ್ಮ ಮನೋವಾಂಛಿತಗಳೆಲ್ಲವನ್ನೂ ಅವನಿಂದ ಪಡೆದುಕೊಳ್ಳುತ್ತಿದ್ದರು.

ಸೃಂಜಯ! ರಂತಿದೇವನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯಶಾಲಿಯಾಗಿದ್ದನು. ಅಂತಹವನೇ ಕಾಲಧರ್ಮಾನುಸಾರವಾಗಿ ಮೃತ್ಯುವಶನಾಗಬೇಕಾಯಿತು. ಆದುದರಿಂದ ನಿನ್ನ ಮಗನು ಮರಣಹೊಂದಿದುದಕ್ಕಾಗಿ ನೀನು ಪರಿತಾಪಪಡಬೇಡ. ಮೇಲಾಗಿ ಅವನು ಯಾಗಮಾಡಿದವನಲ್ಲ; ದಕ್ಷಿಣೆಗಳನ್ನೂ ಕೊಟ್ಟವನಲ್ಲ."

ಯುಧಿಷ್ಠಿರ! ಹೀಗೆ ನಾರದರು ಸೃಂಜಯನನ್ನು ಸಮಾಧಾನಗೊಳಿಸಲು ರಂತಿದೇವನ ಕಥೆಯನ್ನು ಹೇಳಿದರು.

೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಭರತರಾಜನ ಚರಿತ್ರೆ

ನಾರದರು ಮುಂದುವರಿದು ಸೃಂಜಯನನ್ನು ಸಮಾಧಾನಗೊಳಿಸಲು ಭರತನ ಕಥೆಯನ್ನು ಹೇಳಲು ಉಪಕ್ರಮಿಸುತ್ತಾರೆ:

"ಸೃಂಜಯ! ದುಷ್ಯಂತನ ಮಗನಾದ ಭರತನು ಬೇರೆಯವರಿಂದ ಮಾಡಲು ಅಸಾಧ್ಯವಾದ ಕಾರ್ಯಗಳನ್ನು ಇನ್ನೂ ಶಿಶುವಾಗಿದ್ದಾಗಲೇ ಮಾಡಿತೋರಿಸಿದನು. ಅಂತಹ ಮಹಾಪರಾಕ್ರಮಿಯಾದ ಭರತನೂ ಸಹ ಮೃತನಾದನೆಂದು ನಾವು ಕೇಳಿದ್ದೇವೆ. ಬಲಿಷ್ಠನಾದ ಭರತನು ಬಾಲಕನಾಗಿದ್ದಾಗಲೇ ಉಗುರುಗಳು ಮತ್ತು ಕೋರೆದಾಡೆಗಳೇ ಆಯುಧವಾಗಿ ಉಳ್ಳ, ಹಿಮದಂತೆ ಬಿಳುಪಾಗಿರುವ ಸಿಂಹಗಳನ್ನು ಬಹಳ ಬೇಗ ಶಕ್ತಿರಹಿತವನ್ನಾಗಿ ಮಾಡಿ ಅವುಗಳನ್ನು ಅಲ್ಲಿಂದಿಲ್ಲಿಗೆ ಎಳೆದಾಡುತ್ತಾ ಕಟ್ಟಿಹಾಕುತ್ತಿದ್ದನು.

ಅರಗಿನ ರಾಶಿಗಳಿಂದ ಕೂಡಿದ ಮನಶ್ಶಿಲೆಯಂತೆ (ಗೈರಿಕಾದಿ ಧಾತುಗಳಂತೆ) ಬಂಡೆಗಳನ್ನೂ ಮೃದುವಾಗಿ ಮಾಡುತ್ತಿದ್ದನು. (ಪುಡಿ-ಪುಡಿ

ಮಾಡುತ್ತಿದ್ದನು). ಕ್ರೂರವಾಗಿಯೂ ಮತ್ತು ಭಯಂಕರವಾಗಿಯೂ ಇದ್ದ ವ್ಯಾಘ್ರಗಳನ್ನು ಮರ್ದನಮಾಡುತ್ತಾ ಅವುಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಿದ್ದನು. ಮಹಾಬಲಿಷ್ಠನಾದ ಭರತನು ವಿಷಸರ್ಪವೇ



ಮೊದಲಾದುವುಗಳನ್ನೂ, ಸುಪ್ರತೀಕಜಾತಿಯ ಮಹಾಗಜಗಳನ್ನೂ ಕೋರೆ ದಾಡೆಗಳ ಸ್ಥಳದಲ್ಲಿ ಹಿಡಿದು ಅವುಗಳ ಮುಖವನ್ನು ತಿರುಗಿಸಿ (ತಿರುಚಿ) ಕಾಂತಿಹೀನವನ್ನಾಗಿಮಾಡಿ ತನ್ನ ವಶಕ್ಕೆ ತೆಗೆದುಕೊಳ್ಳುತ್ತಿದ್ದನು. ಮಹಾಬಲ ನಾದ ಭರತನು ಬಲಿಷ್ಠವಾಗಿದ್ದ ಕಾಡುಕೋಣಗಳ ಕೊಂಬುಗಳನ್ನು ಹಿಡಿದು ಎಳೆದಾಡುತ್ತಿದ್ದನು. ಮದದಿಂದ ಕೊಬ್ಬಿದ್ದ ನೂರಾರು ಸಿಂಹಗಳನ್ನು ಅವುಗಳಿದ್ದ ಗುಹೆಯಿಂದ ಬಲಾತ್ಕಾರವಾಗಿ ಸೆಳೆದುಕೊಂಡು ಬರುತ್ತಿದ್ದನು. ಬಲಿಷ್ಠವಾದ ದೊಡ್ಡಜಾತಿಯ ಸೃಮರಮೃಗಗಳನ್ನೂ, ಖಡ್ಗಮೃಗಗಳನ್ನೂ,

ಇವುಗಳೇ ಅಲ್ಲದೇ ಇನ್ನೂ ಅನೇಕ ಮಹಾಸತ್ತ್ವಯುಕ್ತವಾದ ವನ್ಯಪ್ರಾಣಿಗಳನ್ನೂ ಹಿಡಿದು ಬಂಧಿಸಿ ಮರ್ದನಮಾಡಿ ಅವುಗಳನ್ನು ಅರೆಜೀವಮಾಡಿ ಬಿಟ್ಟುಬಿಡುತ್ತಿದ್ದನು. ಅವನ ಇಂತಹ ಪರಮಾದ್ಭುತವಾದ ಕರ್ಮಗಳನ್ನು ನೋಡಿಯೇ ಆಶ್ರಮವಾಸಿಗಳಾಗಿದ್ದ ಬ್ರಾಹ್ಮಣರು ಅವನನ್ನು 'ಸರ್ವದಮನ' ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಅವನ ತಾಯಿಯಾದ ಶಕುಂತಲೆಯು ಪ್ರಾಣಿಗಳನ್ನು ಹಿಂಸಿಸಬೇಡವೆಂದು ಭರತನನ್ನು ತಡೆಯುತ್ತಿದ್ದಳು. ವೀರ್ಯವಂತನಾದ ಭರತನು ಯುವಕನಾಗಿ ರಾಜ್ಯದ ಅಧಿಕಾರವನ್ನು ಪಡೆದುಕೊಂಡ ಮೇಲೆ ಯಮುನಾನದಿಯ ತೀರದಲ್ಲಿ ನೂರು ಅಶ್ವಮೇಧಗಳನ್ನೂ, ಸರಸ್ವತೀನದಿಯ ತೀರದಲ್ಲಿ ಮೂರು ನೂರು ಅಶ್ವಮೇಧಗಳನ್ನೂ, ಗಂಗಾನದಿಯ ತೀರದಲ್ಲಿ ನಾಲ್ಕು ನೂರು ಅಶ್ವಮೇಧಗಳನ್ನೂ ಮಾಡಿದನು. ಅದಾದ ಮೇಲೆ ಭರತನು ಪುನಃ ಬಹುದಕ್ಷಿಣಾಕವಾದ ಮಹಾಯಜ್ಞಗಳಾದ ಸಾವಿರ ಅಶ್ವಮೇಧಗಳನ್ನೂ-ನೂರು ರಾಜಸೂಯಯಾಗಗಳನ್ನೂ ಮಾಡಿ ದೇವತೆಗಳನ್ನು ತೃಪ್ತಿಪಡಿಸಿದನು. ಅನಂತರ ಅಗ್ನಿಷ್ಟೋಮಾತಿರಾತ್ರಗಳನ್ನು ಮಾಡಿ 'ವಿಶ್ವಜಿತ್' ಎಂಬ ಯಜ್ಞವನ್ನೂ ಮಾಡಿದನು. ಅನಂತರ ಶಕುಂತಲಾಪುತ್ರನು ಸಮೃದ್ಧವಾದ ಸಾಮಗ್ರಿಗಳಿಂದ ಹತ್ತು ಲಕ್ಷ ವಾಜಪೇಯಯಾಗಗಳನ್ನು ಮಾಡಿ ಬ್ರಾಹ್ಮಣರನ್ನು ದಕ್ಷಿಣೆಗಳಿಂದ ತೃಪ್ತಿಪಡಿಸಿ, ಕುಲಪತಿಗಳಾದ ಕಣ್ವರಿಗೆ ಶುದ್ಧವಾದ ಜಾಂಬೂನದಚಿನ್ನದಿಂದ ಮಾಡಿದ್ದ ಒಂದು ಸಾವಿರ ಕಮಲಗಳನ್ನು ದಕ್ಷಿಣೆಯಾಗಿ ಕೊಟ್ಟನು. ಭರತನ ಯಜ್ಞದ ಸುವರ್ಣಮಯವಾದ ಯೂಪಸ್ತಂಭವು ನೂರು ವ್ಯಾಮಗಳಷ್ಟು (ಸುಮಾರು ನೂರು ಮಾರುಗಳಷ್ಟು) ಸುತ್ತಳತೆಯುಳ್ಳದ್ದಾಗಿದ್ದಿತು. ಅಷ್ಟು ದೊಡ್ಡದಾಗಿದ್ದ ಯೂಪಸ್ತಂಭವನ್ನು ಬ್ರಾಹ್ಮಣರೊಡನೆ ಇಂದ್ರನೇ ಮೊದಲಾದ ದೇವತೆಗಳೂ ಸೇರಿಕೊಂಡು ನೆಟ್ಟರು. ಶತ್ರುಗಳಿಂದ ಪರಾಜಿತನಾಗದೇ ಇದ್ದ, ಮಹಾದಾನಿಯಾದ ಭರತ ಚಕ್ರವರ್ತಿಯು ಮನೋಹರವಾದ, ಸರ್ವರತ್ನಗಳಿಂದಲೂ ಸಮಲಂಕೃತವಾದ, ಥಳ-ಥಳನೆ ಪ್ರಕಾಶಿಸುತ್ತಿದ್ದ, ಸುವರ್ಣಾಭರಣಗಳಿಂದ ಸುಶೋಭಿತವಾದ ಕುದುರೆಗಳನ್ನೂ, ಆನೆಗಳನ್ನೂ, ರಥಗಳನ್ನೂ, ಒಂಟೆಗಳನ್ನೂ, ಆಡುಗಳನ್ನೂ, ಕುರಿಗಳನ್ನೂ, ದಾಸರನ್ನೂ, ದಾಸಿಯರನ್ನೂ , ಧನವನ್ನೂ,

ಧಾನ್ಯವನ್ನೂ, ಕರುಗಳಿಂದ ಕೂಡಿದ್ದ ಹಾಲುಕೊಡುವ ಹಸುಗಳನ್ನೂ, ಗ್ರಾಮಗಳನ್ನೂ, ಮನೆಗಳನ್ನೂ, ಹೊಲ-ಗದ್ದೆಗಳನ್ನೂ, ವಿಧ-ವಿಧವಾದ ಸಾಮಗ್ರಿಗಳನ್ನೂ, ವಸ್ತ್ರಗಳನ್ನೂ, ಹತ್ತು ಲಕ್ಷ ಕೋಟಿ ಸುವರ್ಣಮುದ್ರೆಗಳನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.

ಸೃಂಜಯ! ಭರತನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ಅವನು ನಿನ್ನ ಮಗನಿಗಿಂತಲೂ ಹೆಚ್ಚಿನ ಪುಣ್ಯವಂತನೂ ಆಗಿದ್ದನು. ಅವನಲ್ಲಿ ಅಗಾಧವಾದ ಶಕ್ತಿಯೂ ಇದ್ದಿತು. ಅಂತಹವನೇ ಮೃತ್ಯುವಶನಾದನು. ಆದುದರಿಂದ ನಿನ್ನ ಮಗನು ಹೋದುದಕ್ಕಾಗಿ ನೀನು ಪರಿತಪಿಸಬೇಡ. ನಿನ್ನ ಮಗನು ಯಜ್ಞವನ್ನೂ ಮಾಡಲಿಲ್ಲ; ದಕ್ಷಿಣೆಯನ್ನೂ ಕೊಡಲಿಲ್ಲ."

ಯುಧಿಷ್ಠಿರ! ನಾರದರು ಪುತ್ರಶೋಕದಿಂದ ಪರಿತಪಿಸುತ್ತಿದ್ದ ಸೃಂಜಯನಿಗೆ ಭರತರಾಜನ ಕಥೆಯನ್ನು ಹೇಳಿ ಸಮಾಧಾನಪಡಿಸಿದರು.

೬೮ನೆಯ ಅಧ್ಯಾಯವು ಮುಗಿಯಿತು.

೬೯ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಪೃಥುರಾಜನ ಚರಿತ್ರೆ

ಬಾಡಿದ ಮುಖದಿಂದ ಕೂಡಿದ್ದ ಸೃಂಜಯನನ್ನು ಸಮಾಧಾನಗೊಳಿಸಲು ನಾರದರು ಪುನಃ ಮತ್ತೊಂದು ಕಥೆಯನ್ನು ಆರಂಭಿಸುತ್ತಾರೆ:

"ಮಹಾರಾಜ! ಯಾವನಿಗೆ ಮಹರ್ಷಿಗಳೆಲ್ಲರೂ ಸೇರಿ ಸಾಮ್ರಾಜ್ಯ ಪಟ್ಟಾಭಿಷೇಕವನ್ನು ಮಾಡಿದರೋ ಅಂತಹ ಮಹಾವೈಭವಶಾಲಿಯಾದ ವೇನಪುತ್ರನಾದ ಪೃಥುವೂ ಕಾಲಗತಿಯನ್ನೈದಿದನೆಂದು ನಾವು ಕೇಳಿದ್ದೇವೆ.

**ಯತ್ನತಃ ಪ್ರಥಿತೇತ್ಯೂಚುಃ ಸರ್ವಾನಭಿಭವನ್ಪೃಥುಃ।**
**ಕ್ಷತಾನ್ನಸ್ತ್ರಾಸ್ಯತೇ ಸರ್ವಾನಿತ್ಯೇವಂ ಕ್ಷತ್ರಿಯೋಽಭವತ್ ॥೨॥**

"ಪ್ರಯತ್ನಪೂರ್ವಕವಾಗಿ ಸರ್ವಶತ್ರುಗಳನ್ನೂ ಪರಾಜಯಗೊಳಿಸಿ ಪ್ರಥಿತನಾದುದರಿಂದ ಅವನು ಪೃಥುವಾದನು. ಗಾಯಗೊಳಿಸುವವರಿಂದ (ಸಂಕಟಗಳಿಂದ) ನಮ್ಮೆಲ್ಲರನ್ನೂ ರಕ್ಷಿಸುತ್ತಾನೆ. ಆದುದರಿಂದ ಇವನು

ಕ್ಷತ್ರಿಯನೂ ಆಗಿದ್ದಾನೆ”–ಎಂಬುದಾಗಿ ಅವನನ್ನು ಋಷಿಗಳು ಹೊಗಳುತ್ತಿದ್ದರು.

**ಪೃಥುಂ ವೈನ್ಯಂ ಪ್ರಜಾ ದೃಷ್ಟ್ವಾ ರಕ್ತಾಃ ಸ್ಮೇತಿ ಯದಬ್ರುವನ್।**
**ತತೋ ರಾಜೇತಿ ನಾಮಾಸ್ಯ ಅನುರಾಗಾದಜಾಯತ ॥೩॥**

ವೇನನ ಮಗನಾದ ಪೃಥುವನ್ನು ಕಂಡು ಪ್ರಜೆಗಳು–‘ನಾವು ಇವನಲ್ಲಿ ಅನುರಕ್ತರಾಗಿದ್ದೇವೆ’–ಎಂದು ಹೇಳಿದರು. ಪ್ರಜಾರಂಜನದಿಂದ ಉಂಟಾದ ಅನುರಾಗದ ಕಾರಣದಿಂದ ಪೃಥುವಿನ ಹೆಸರು ‘ರಾಜಾ’ ಎಂದೂ ಆಯಿತು. ವೇನನ ಮಗನಾದ ಪೃಥುವಿನ ರಾಜ್ಯದಲ್ಲಿ ಭೂಮಿಯು ಉಳದೆಯೇ ಬೆಳೆಯನ್ನು ಕೊಡುತ್ತಿದ್ದಿತು. ಸರ್ವವಿಧವಾದ ಕಾಮನೆಗಳನ್ನೂ ಕೊಡುವುದಾಗಿದ್ದಿತು. ಅವನ ರಾಜ್ಯದಲ್ಲಿದ್ದ ಎಲ್ಲ ಹಸುಗಳೂ ಕಾಮಧೇನುವಿಗೆ ಸಮಾನವಾಗಿದ್ದುವು. ಎಲ್ಲರ ಮನೆಗಳಲ್ಲಿಯೂ ದೊನ್ನೆ-ದೊನ್ನೆಗಳಲ್ಲಿ ಜೇನುತುಪ್ಪವಿರುತ್ತಿದ್ದಿತು.

ಪೃಥುವಿನ ರಾಜ್ಯದಲ್ಲಿ ದರ್ಭೆಗಳು ಸುವರ್ಣಮಯವಾಗಿದ್ದುವು. ಅವುಗಳ ಸ್ಪರ್ಶವು ಕೋಮಲವಾಗಿಯೂ, ಸುಖಕರವಾಗಿಯೂ ಇದ್ದಿತು. ಆ ಚಿನ್ನದ ದರ್ಭೆಗಳ ಮಧ್ಯದಲ್ಲಿ ನಾರುಮಡಿಯನ್ನು ಸೇರಿಸಿ ಅವುಗಳ ಮೇಲೆಯೇ ಪ್ರಜೆಗಳು ಮಲಗುತ್ತಿದ್ದರು. ಹಣ್ಣುಗಳು ಅಮೃತಸದೃಶವಾಗಿಯೂ (ರುಚಿಯಾಗಿಯೂ), ಮಧುರವಾಗಿಯೂ ಇರುತ್ತಿದ್ದುವು. ಪ್ರಜೆಗಳಿಗೆ ಆ ಹಣ್ಣುಗಳೇ ಆಹಾರವಾಗಿದ್ದುವು. ಆಹಾರವಿಲ್ಲದೇ ಇರುವವರು ಪೃಥುವಿನ ರಾಜ್ಯದಲ್ಲಿ ಯಾರೂ ಇರಲಿಲ್ಲ. ಮನುಷ್ಯರು ನೀರೋಗ ದೃಢಕಾಯರಾಗಿದ್ದರು. ಅವರ ಎಲ್ಲ ಕಾಮನೆಗಳೂ ಪೂರ್ಣಗೊಳ್ಳುತ್ತಿದ್ದುವು. ಅವರಿಗೆ ಭಯವೆಂದರೆ ಏನೆಂಬುದೇ ಗೊತ್ತಿರಲಿಲ್ಲ. (ಯಾವ ಕಡೆಯಿಂದಲೂ ಭಯವಿರಲಿಲ್ಲ.) ತಮಗಿಷ್ಟಬಂದಂತೆ ಅವರು ವೃಕ್ಷಗಳ ಅಡಿಯಲ್ಲಿಯೂ, ಗುಹೆಗಳಲ್ಲಿಯೂ ವಾಸಮಾಡುತ್ತಿದ್ದರು. ಪೃಥುವು ರಾಜನಾಗಿದ್ದಾಗ ರಾಷ್ಟ್ರ, ಪುರ, ಪಟ್ಟಣ, ಇತ್ಯಾದಿ ವಿಭಾಗಗಳೇನೂ ಇರಲಿಲ್ಲ. ಪ್ರಜೆಗಳು ತಮಗಿಷ್ಟಬಂದಂತೆ ತಮಗೆ ಹೇಗೆ ಸುಖವೆನ್ನಿಸುವುದೋ ಆ ರೀತಿಯಲ್ಲಿ ಸಂತೋಷಭರಿತರಾಗಿ ಇದ್ದುಬಿಡುತ್ತಿದ್ದರು. ಪೃಥುಚಕ್ರವರ್ತಿಯು ಸಮುದ್ರದ ಮೇಲೂ ಪ್ರಯಾಣಮಾಡುತ್ತಿದ್ದನು. ಆ ಸಮಯದಲ್ಲಿ ಸಮುದ್ರದ ನೀರು

ಸ್ತಂಭಿತವಾಗುತ್ತಿದ್ದಿತು. (ರಾಜನ ರಥವನ್ನು ಮುಳುಗಗೊಡುತ್ತಿರಲಿಲ್ಲ.) ಅವನು ಭೂಮಿಯ ಮೇಲೆ ಪ್ರಯಾಣಮಾಡುವಾಗ ಎದುರಿಗೆ ಪರ್ವತ ಗಳೇನಾದರೂ ಸಿಕ್ಕಿದರೆ ಅವುಗಳೂ ಅವನಿಗೆ ಹಾದಿಯನ್ನು ಮಾಡಿ ಕೊಡುತ್ತಿದ್ದುವು; ಅವನ ಪ್ರಯಾಣಕ್ಕೆ ಅಡ್ಡಿಯನ್ನುಂಟುಮಾಡುತ್ತಿರಲಿಲ್ಲ. ರಥವು ಹೋಗುತ್ತಿರುವಾಗ ಯಾವುದೇ ಅಡೆ-ತಡೆಗಳು ಬಂದರೂ ಅವನ ರಥದ ಧ್ವಜವು ಭಗ್ನವಾಗುತ್ತಿರಲಿಲ್ಲ.

ಒಂದು ದಿನ ಸುಖಾಸೀನನಾಗಿ ಕುಳಿತಿದ್ದ ಪೃಥುರಾಜನ ಸಮೀಪಕ್ಕೆ ವನಸ್ಪತಿಗಳು (ಅವುಗಳ ಅಧಿದೇವತೆಗಳು), ಪರ್ವತಗಳು (ಅವುಗಳ ಅಧಿದೇವತೆಗಳು), ದೇವತೆಗಳು, ಅಸುರರು, ಮಾನವರು, ಸರ್ಪಗಳು, ಸಪ್ತಋಷಿಗಳು, ಪುಣ್ಯಜನರು (ರಾಕ್ಷಸರು), ಗಂಧರ್ವರು, ಅಪ್ಸರೆಯರು, ಪಿತೃದೇವತೆಗಳು-ಇವರೆಲ್ಲರೂ ಬಂದು ಹೀಗೆ ಹೇಳಿದರು: "ಪೃಥುರಾಜ! ನೀನು ಸಮ್ರಾಟನಾಗಿರುವ ಕ್ಷತ್ರಿಯನಾಗಿರುವೆ. ಪ್ರಜಾರಂಜಕನಾದ ರಾಜ ನಾಗಿರುವೆ. ರಕ್ಷಕನಾಗಿರುವೆ. ಪ್ರಜೆಗಳೆಲ್ಲರಿಗೂ ಪಿತೃಸ್ವರೂಪನಾಗಿರುವೆ. ನಮಗೆಲ್ಲರಿಗೂ ಪ್ರಭುವಾಗಿರುವ ನೀನು ನಾವು ಅಪೇಕ್ಷಿಸುವ ಈ ವರಗಳನ್ನು ದಯಪಾಲಿಸು. ಆ ವರಗಳಿಂದ ನಾವು ಅನಂತಕಾಲದವರೆಗೂ ತೃಪ್ತಿ ಮತ್ತು ಸುಖಗಳಿಂದ ಇರಲು ಇಚ್ಛಿಸಿದ್ದೇವೆ." 'ಹಾಗೆಯೇ ಆಗಲಿ' ಎಂದು ಹೇಳಿದ ವೇನಪುತ್ರನು ತನ್ನ 'ಆಜಗವ' ಎಂಬ ಹೆಸರಿನ ಧನುಸ್ಸನ್ನು ತೆಗೆದುಕೊಂಡು ಅಪ್ರತಿಮವಾದ ಮತ್ತು ಮಹಾಘೋರವಾದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಸ್ವಲ್ಪಹೊತ್ತು ಯೋಚಿಸಿ ಭೂದೇವತೆಯನ್ನು ಕುರಿತು ಹೇಳಿದನು:

"ವಸುಧೇ! ನಿನಗೆ ಮಂಗಳವಾಗಲಿ. ಬೇಗ ಬಾ. ಇವರು ಅಪೇಕ್ಷಿಸುವಷ್ಟು ಹಾಲನ್ನು ಸುರಿಸು. ಅನಂತರ ನಾನು ಇವರು ಅಪೇಕ್ಷಿಸಿದಷ್ಟು ಅನ್ನವನ್ನು ಇವರಿಗೆ ಕೊಡುತ್ತೇನೆ."

ಅದಕ್ಕೆ ಉತ್ತರವಾಗಿ ವಸುಧೆಯು ಹೇಳಿದಳು: "ವೀರನೇ! ನನ್ನನ್ನು ನೀನು ಮಗಳನ್ನಾಗಿ ಅಂಗೀಕರಿಸು." ಭೂದೇವಿಯ ಮಾತಿಗೆ ಜಿತೇಂದ್ರಿಯ ನಾದ ಪೃಥುವು ಹಾಗೆಯೇ ಆಗಲೆಂದು ಹೇಳಿ ಅದಕ್ಕೆ ಮಾಡಬೇಕಾದ ಎಲ್ಲ ವಿಧಾನಗಳನ್ನೂ ಮಾಡಿದನು.

ಅನಂತರ ಎಲ್ಲ ಪ್ರಾಣಿಗಳ ಸಮುದಾಯಗಳೂ ವಸುಧೆಯಿಂದ ಹಾಲು ಕರೆಯಲು ಉಪಕ್ರಮಿಸಿದುವು. ಮೊಟ್ಟಮೊದಲು ವನಸ್ಪತಿಗಳು ಹಾಲು

ಕರೆದುಕೊಳ್ಳಲು ಇಚ್ಛಿಸಿದುವು. ಗೋರೂಪವನ್ನು ಧರಿಸಿದ್ದ ಪೃಥಿವಿಯು ವಾತ್ಸಲ್ಯಪೂರ್ಣವಾಗಿ ಹಾಲುಕೊಡಲು ಕರುವನ್ನೂ, ಕರೆಯುವವನನ್ನೂ, ಕರೆಯುವ ಪಾತ್ರೆಯನ್ನೂ ಇಚ್ಛಿಸಿ ನಿಂತಿದ್ದಿತು. ಸುಪುಷ್ಪಿತವಾದ ಸಾಲವೃಕ್ಷವೇ ಕರುವಿನ ರೂಪವನ್ನು ತಾಳಿತು. ಅರಳೀಮರವೇ ಹಾಲನ್ನು ಕರೆಯುವುದಾಯಿತು. ಅತ್ತೀಮರದ ರೆಂಬೆಯೇ ಶುಭವಾದ ಹಾಲಿನ ಪಾತ್ರೆಯಾಯಿತು. ಕತ್ತರಿಸಿದನಂತರ ಪುನಃ ಬೆಳೆಯುವುದೇ ಹಾಲಿನ ರೂಪವಾಯಿತು. ವನಸ್ಪತಿಗಳು ಹಾಲು ಕರೆದುಕೊಂಡನಂತರ ಶೈಲಗಳು ಹಾಲುಕರೆಯಲು ಉಪಕ್ರಮಿಸಿದುವು. ಉದಯಪರ್ವತವೇ ಕರುವಿನ ರೂಪವನ್ನು ತಾಳಿತು. ಮಹಾಗಿರಿಯಾದ ಮೇರುಪರ್ವತವು ಹಾಲನ್ನು ಕರೆಯುವುದಾಯಿತು. ಪರ್ವತದ ಶಿಲೆಯೇ ಕರೆಯುವ ಪಾತ್ರೆಯಾಯಿತು. ರತ್ನಗಳು ಮತ್ತು ಓಷಧಿಲತೆಗಳೇ ಹಾಲಿನ ರೂಪಗಳಾದುವು. ದೇವತೆಗಳಲ್ಲಿ ಒಬ್ಬರು ಕರುವಿನ ರೂಪವನ್ನೂ ಮತ್ತೊಬ್ಬರು ಕರೆಯುವವನ ರೂಪವನ್ನೂ ಧರಿಸಿದರು. ದೇವತೆಗಳು ಪುಷ್ಟಿಕಾರಕವಾದ ಅಮೃತವನ್ನೇ ಹಾಲಿನ ರೂಪದಲ್ಲಿ ಕರೆದರು. ಅಸುರರಲ್ಲಿ ದ್ವಿಮೂರ್ಧಾ ಎಂಬುವವನು ಹಾಲನ್ನು ಕರೆಯುವವನಾದನು. ವಿರೋಚನನು ಕರುವಾದನು. ಮಣ್ಣಿನ ಪಾತ್ರೆಯಲ್ಲಿ 'ಮಾಯಾ' ಎಂಬ ಹಾಲನ್ನು ದ್ವಿಮೂರ್ಧಾ ಎಂಬ ಅಸುರನು ಕರೆದನು. ಮನುಷ್ಯರಲ್ಲಿ ಸ್ವಾಯಂಭುವಮನುವು ಕರುವಾದನು. ಪೃಥುಚಕ್ರವರ್ತಿಯು ಹಾಲನ್ನು ಕರೆಯುವವನಾದನು. ಪೃಥಿವೀ ಎಂಬುದೇ ಪಾತ್ರೆಯಾಯಿತು. ಕೃಷಿ ಮತ್ತು ಸಸ್ಯ ಎಂಬ ಹಾಲನ್ನು ಪೃಥುವು ಕರೆದನು. ಸರ್ಪಗಳಲ್ಲಿ ಧೃತರಾಷ್ಟ್ರನೆಂಬುವನು ಹಾಲುಕರೆಯುವವನಾದನು. ತಕ್ಷಕನು ಕರುವಿನ ರೂಪವನ್ನು ಧರಿಸಿದನು. ಸೋರೆಕಾಯಿಯ ಬುರುಡೆಯು ಹಾಲನ್ನು ಕರೆಯುವ ಪಾತ್ರೆಯಾಯಿತು. ಧೃತರಾಷ್ಟ್ರನು ಗೋರೂಪಳಾಗಿದ್ದ ಭೂದೇವಿಯಿಂದ ವಿಷವನ್ನೇ ಹಾಲಿನ ರೂಪದಲ್ಲಿ ಕರೆದನು. ಯಾವುದೇ ಕಾರ್ಯವನ್ನಾದರೂ ಬಹಳ ಸುಲಭವಾಗಿ ಮಾಡುವ ಸಪ್ತರ್ಷಿಗಳಲ್ಲಿ ಬೃಹಸ್ಪತಿಯೇ ಹಾಲುಕರೆಯುವವನಾದನು. ಸೋಮರಾಜನೇ ಕರುವಾದನು. ಛಂದಸ್ಸುಗಳೇ ಪಾತ್ರೆಯಾಯಿತು. 'ಬ್ರಹ್ಮ' ಎಂಬ ಹಾಲನ್ನು ಬೃಹಸ್ಪತಿಯು ಕರೆದನು.

ಪುಣ್ಯಜನರಲ್ಲಿ ಕುಬೇರನು ಹಾಲನ್ನು ಕರೆಯುವವನಾಗಿದ್ದನು. ವೃಷಭಧ್ವಜನಾದ ಮಹಾದೇವನು ಕರುವಾಗಿದ್ದನು. ಮಣ್ಣಿನ ಪಾತ್ರೆಯಲ್ಲಿ

ಅಂತರ್ಧಾನವೆಂಬ ಹಾಲನ್ನು ಗೋವಿನ ರೂಪವನ್ನು ಧರಿಸಿದ್ದ ಭೂದೇವಿಯಿಂದ ಕರೆದರು. ಗಂಧರ್ವಾಪ್ಸರೆಯರಲ್ಲಿ ಚಿತ್ರರಥನು ಕರುವಾಗಿದ್ದನು. ಪ್ರಭುವಾದ ವಿಶ್ವರುಚಿಯು ಹಾಲುಕರೆಯುವವನಾಗಿದ್ದನು. ಪದ್ಮವೆಂಬ ಹಾಲಿನ ಪಾತ್ರೆಯಲ್ಲಿ ಗಂಧರ್ವಾಪ್ಸರೆಯರು ಪುಣ್ಯಗಂಧಗಳೆಂಬ ಹಾಲನ್ನು ಕರೆದರು. ಪಿತೃದೇವತೆಗಳಲ್ಲಿ ವೈವಸ್ವತನು ಕರುವಾಗಿದ್ದನು. ಅಂತಕನಾದ ಯಮನು ಹಾಲುಕರೆಯುವವನಾಗಿದ್ದನು. ಪಿತೃದೇವತೆಗಳು ರಜತಮಯಪಾತ್ರೆಯಲ್ಲಿ ಗೋವಿನ ರೂಪವನ್ನು ಧರಿಸಿದ್ದ ಪೃಥ್ವಿಯಿಂದ ಸ್ವಧಾ ಎಂಬ ಹಾಲನ್ನು ಕರೆದರು. ಈ ರೀತಿಯಲ್ಲಿ ಎಲ್ಲ ಪ್ರಾಣಿಗಳೂ ಕರುವಿನ, ಹಾಲಿನ ಪಾತ್ರೆಯ ಮತ್ತು ಕರೆಯುವವನ ಕಲ್ಪನೆಯನ್ನು ಮಾಡಿಕೊಂಡು ಗೋವಿನ ರೂಪವಾದ ಪೃಥಿವಿಯಿಂದ ಬೇಕಾದುದನ್ನೆಲ್ಲವನ್ನೂ ಹಾಲಿನ ರೂಪವಾಗಿ ಪಡೆದುಕೊಂಡರು. ಆ ರೀತಿ ಪಡೆದುಕೊಂಡ ಹಾಲಿನ ರೂಪವಾದ ಪದಾರ್ಥಗಳಿಂದಲೇ ಇಂದು ಎಲ್ಲ ಪ್ರಾಣಿಗಳೂ ಜೀವನವನ್ನು ನಡೆಸುತ್ತಿವೆ. ಪ್ರತಾಪವಂತನಾದ ವೇನಪುತ್ರನಾದ ಪೃಥುವು ಅನೇಕ ವಿಧವಾದ



ಯಜ್ಞಗಳನ್ನು ಮಾಡಿ ಮನಸ್ಸಿಗೆ ಬೇಕಾದ ಎಲ್ಲ ಕಾಮನೆಗಳಿಂದಲೂ ಎಲ್ಲ ಪ್ರಾಣಿಗಳನ್ನೂ ತೃಪ್ತಿಪಡಿಸಿದನು. ಆ ಸಮಯದಲ್ಲಿ ಭೂಮಂಡಲದಲ್ಲಿ ಪೃಥುವನ್ನು ಬಿಟ್ಟು ಉಳಿದ ಯಾವ ಕೆಲವು ರಾಜರಿದ್ದರೋ ಅವರ

ಪ್ರತಿಮೆಗಳನ್ನು ಚಿನ್ನದಲ್ಲಿ ಮಾಡಿಸಿ ಅವುಗಳನ್ನು ಅಶ್ವಮೇಧಮಹಾಯಾಗದ ಸಮಯದಲ್ಲಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಅರುವತ್ತಾರು ಸಾವಿರ ಆನೆಗಳನ್ನು ಚಿನ್ನದಲ್ಲಿ ಮಾಡಿಸಿ ಪೃಥುರಾಜನು ಬ್ರಾಹ್ಮಣರಿಗೆ ದಾನಕೊಟ್ಟನು. ಅಷ್ಟೇ ಅಲ್ಲದೇ ಈ ಭೂಮಂಡಲದ ಪ್ರತಿಮೆಯನ್ನೇ ಚಿನ್ನದಲ್ಲಿ ಮಾಡಿಸಿ ಮಣಿ, ರತ್ನಗಳಿಂದ ವಿಭೂಷಿತವಾಗಿದ್ದ ಆ ಪ್ರತಿಮೆಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.

ಶ್ವೈತ್ಯಸೃಂಜಯ! ಪೃಥುರಾಜನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೇ ಮರಣಹೊಂದಿದನೆಂದ ಮೇಲೆ ನೀನು ನಿನ್ನ ಪುತ್ರನು ಮೃತನಾದುದಕ್ಕೆ ಏಕೆ ಪರಿತಪಿಸುವೆ? ಯಜ್ಞಮಾಡದೇ ಇದ್ದವನೂ, ದಾನ-ದಕ್ಷಿಣೆಗಳನ್ನೂ ಕೊಡದೇ ಇದ್ದವನೂ ಆಗಿದ್ದ ನಿನ್ನ ಮಗನ ವಿಷಯದಲ್ಲಿ ಇನ್ನಾದರೂ ಚಿಂತಿಸಬೇಡ."

ಯುಧಿಷ್ಠಿರ! ನಾರದರು ಹೀಗೆ ಸೃಂಜಯನನ್ನು ಸಮಾಧಾನಗೊಳಿಸಲು ಮಹಾಮಹಿಮನಾದ ಪೃಥುವಿನ ಕಥೆಯನ್ನು ಹೇಳಿ ಮುಗಿಸಿದರು.

೬೯ನೆಯ ಅಧ್ಯಾಯವು ಮುಗಿಯಿತು.

೭೦ನೆಯ ಅಧ್ಯಾಯ ಅಭಿಮನ್ಯುವಧಪರ್ವ (ಮುಂದುವರಿದಿದೆ.)

## ಪರಶುರಾಮನ ಚರಿತ್ರೆ

ನಾರದರು ಖಿನ್ನಮನಸ್ಕನಾಗಿಯೇ ಇದ್ದ ಸೃಂಜಯನನ್ನು ಸಮಾಧಾನಗೊಳಿಸಲು ಮತ್ತೊಂದು ಕಥೆಯನ್ನು ಆರಂಭಿಸುತ್ತಾರೆ:

"ಸೃಂಜಯ! ಮಹಾತಪಸ್ವಿಯಾದ, ವೀರಜನವಂದಿತನಾದ, ಮಹಾಶೂರನಾದ, ಮಹಾಯಶೋವಂತನಾದ, ಜಮದಗ್ನಿಯ ಮಗನಾದ ಪರಶುರಾಮನೂ ಸಹ ಅತೃಪ್ತಾವಸ್ಥೆಯಲ್ಲಿಯೇ ಮೃತ್ಯುವಶನಾಗುವನು. ಪರಶುರಾಮನು ಈ ಭೂಮಿಯನ್ನು ಉಪದ್ರವರಹಿತವನ್ನಾಗಿ ಮಾಡಲು (ಸುಖಭೂಯಿಷ್ಠವನ್ನಾಗಿ ಮಾಡಲು) ಆದಿಯುಗವಿಹಿತವಾದ ಪರಿಪೂರ್ಣ ಧರ್ಮವನ್ನು ಪ್ರಚಾರಮಾಡುತ್ತಿದ್ದನು. ಉತ್ತಮವಾದ ಮತ್ತು ಅಪಾರವಾದ

ಐಶ್ವರ್ಯವನ್ನು ಪಡೆದುಕೊಂಡರೂ ಅವನ ಮನಸ್ಸಿಗೆ ಯಾವ ವಿಧವಾದ ವಿಕಾರವೂ ಉಂಟಾಗಲಿಲ್ಲ. ಕಾರ್ತವೀರ್ಯನ ಮಕ್ಕಳು ಆಶ್ರಮದಲ್ಲಿದ್ದ ಕರುವನ್ನು ಹಿಡಿದುಕೊಂಡರು. ಪರಶುರಾಮನ ತಂದೆಯಾದ ಜಮದಗ್ನಿಯನ್ನೂ ಸಂಹರಿಸಿದರು. ಆ ಸಮಯದಲ್ಲಿ ಪರಶುರಾಮನು ಏನೊಂದನ್ನೂ ಮಾತನಾಡದೇ ಶತ್ರುಗಳಿಂದ ಪರಾಜಯವನ್ನೇ ಹೊಂದಿರದಿದ್ದ ಕಾರ್ತವೀರ್ಯಾರ್ಜುನನನ್ನು ಸಂಹರಿಸಿದನು.

ಆಗ ಪರಶುರಾಮನು-ಮೃತ್ಯುವನ್ನು ಗುರಿಯನ್ನಾಗಿಟ್ಟುಕೊಂಡು ಒಂದೇ ಕಡೆಯಲ್ಲಿ ಸೇರಿದ್ದ ಅರುವತ್ತು ನಾಲ್ಕು ಕೋಟಿ ಕ್ಷತ್ರಿಯರನ್ನೂ ತನ್ನ ಒಂದೇ ಧನುಸ್ಸಿನಿಂದ ಜಯಿಸಿದನು. ಆ ಯುದ್ಧದ ಅನಂತರ ಪರಶುರಾಮನು ಬೇರೆಯ ಹದಿನಾಲ್ಕು ಸಾವಿರ ಬ್ರಹ್ಮದ್ವೇಷಿಗಳನ್ನು ದಮನಮಾಡಿ, ದಂತಕ್ರೂರನೆಂಬ ರಾಜನನ್ನೂ ಸಂಹರಿಸಿದನು. ಪರಶುರಾಮನು ಸಾವಿರ ಕ್ಷತ್ರಿಯರನ್ನು ಮುಸಲದಿಂದಲೂ, ಮತ್ತೊಂದು ಸಾವಿರ ಕ್ಷತ್ರಿಯರನ್ನು ಕತ್ತಿಯಿಂದಲೂ ಸಂಹರಿಸಿದನು. ಒಂದು ಸಾವಿರ ಕ್ಷತ್ರಿಯರನ್ನು ನೇಣು ಹಾಕಿಯೂ, ಒಂದು ಸಾವಿರ ಕ್ಷತ್ರಿಯರನ್ನು ನೀರಿನಲ್ಲಿ ಮುಳುಗಿಸಿಯೂ ಸಾಯಿಸಿದನು. ಸಾವಿರ ಕ್ಷತ್ರಿಯರ ಹಲ್ಲುಗಳನ್ನು ಮುರಿದುಹಾಕಿದನು. ಸಾವಿರ ಕ್ಷತ್ರಿಯರ ಕಿವಿ-ಮೂಗುಗಳನ್ನು ಕತ್ತರಿಸಿದನು. ಏಳು ಸಾವಿರ ಕ್ಷತ್ರಿಯರು ಖಾರವಾದ ಹೊಗೆಯನ್ನು ಕುಡಿಯುವಂತೆ ಮಾಡಿದನು. (ಅವರ ಮದವನ್ನು ಮುರಿದನು). ಉಳಿದ ಕ್ಷತ್ರಿಯರಲ್ಲಿ ಕೆಲವರನ್ನು ಬಂಧಿಸಿ ಸಂಹರಿಸಿದನು. ಉಳಿದವರ ತಲೆಗಳನ್ನು ಒಡೆದುಹಾಕಿದನು. ಗುಣಾವತಿಗೆ ಉತ್ತರದಲ್ಲಿಯೂ, ಖಾಂಡವವನಕ್ಕೆ ದಕ್ಷಿಣದಲ್ಲಿಯೂ ಇರುವ ಪ್ರದೇಶದಲ್ಲಿ ಲಕ್ಷೋಪಲಕ್ಷ ಹೈಹಯಕ್ಷತ್ರಿಯರು ಪಿತೃವಧೆಯಿಂದ ಕುಪಿತನಾದ ಧೀಮಂತನಾದ ಪರಶುರಾಮನಿಂದ ಕೊಲ್ಲಲ್ಪಟ್ಟವರಾಗಿ ರಥ-ಗಜಾಶ್ವಸೈನ್ಯಗಳೊಡನೆ ಬಿದ್ದಿದ್ದರು. ಪರಶುರಾಮನು ತನ್ನ ಗಂಡುಗೊಡಲಿಯಿಂದ ಹತ್ತು ಸಾವಿರ ಕ್ಷತ್ರಿಯರನ್ನೂ ಕತ್ತರಿಸಿದನು. ಕಾರ್ತವೀರ್ಯನ ಮಕ್ಕಳು ಆಶ್ರಮದ ಮೇಲೆ ದಾಳಿಮಾಡು (೧೬೫)—೧೬

ತ್ತಿದ್ದಾಗ ಬ್ರಾಹ್ಮಣಶ್ರೇಷ್ಠರು ಭಯದಿಂದ, ಸಂಕಟದಿಂದ, ದೈನ್ಯದಿಂದ ಕೂಗಿಕೊಂಡ "ಭಾರ್ಗವರಾಮ! ಓಡಿಬಾ. ನಮ್ಮನ್ನು ರಕ್ಷಿಸು. ಅಯ್ಯೋ! ಈ ದುರುಳರು ವೃಥಾ ನಮ್ಮನ್ನು ಥಳಿಸುತ್ತಿದ್ದಾರೆ"–ಎಂಬ ಆರ್ತನಾದವನ್ನು ಪರಶುರಾಮನು ಸಹಿಸಿಕೊಳ್ಳಲಿಲ್ಲ. ಅವನ ಕಿವಿಗಳಲ್ಲಿ ಈ ಮಾತುಗಳು ಕ್ಷಣ-ಕ್ಷಣಕ್ಕೂ ಪ್ರತಿಧ್ವನಿಸುತ್ತಿದ್ದುವು. ಇದರಿಂದಾಗಿ ಅವನಿಗೆ ಕ್ಷತ್ರಿಯರ ಮೇಲಿನ ಕೋಪವೂ ಇಮ್ಮಡಿಯಾಗುತ್ತಿದ್ದಿತು. ಅನಂತರ ಪರಶುರಾಮನು ಕಾಶ್ಮೀರ, ದರದ, ಕುಂತಿ, ಕ್ಷುದ್ರಕ, ಮಾಲವ, ಅಂಗ, ವಂಗ, ಕಲಿಂಗ, ವಿದೇಹ, ತಾಮ್ರಲಿಪ್ತ, ರಕ್ಷೋವಾಹ, ವೀತಿಹೋತ್ರ, ತ್ರಿಗರ್ತ, ಮಾರ್ತಿಕಾವತ, ಶಿಬಿ–ಇವರೇ ಮೊದಲಾದ ಇನ್ನೂ ಅನೇಕ ಸಾವಿರಾರು ದೇಶಗಳ ಕ್ಷತ್ರಿಯರನ್ನು ನಿಶಿತವಾದ ಬಾಣಗಳಿಂದ ಸಂಹರಿಸಿದನು. ಸಾವಿರ-ಲಕ್ಷ-ಕೋಟಿ ಕ್ಷತ್ರಿಯರ ಸಂಹಾರದಿಂದ ಮಿಂಚುಹುಳುವಿನ ಬಣ್ಣಕ್ಕೆ ಮತ್ತು ಕೆಂಪು ದಾಸವಾಳದ ಬಣ್ಣಕ್ಕೆ ಸದೃಶವಾಗಿದ್ದ ರಕ್ತದ ಪ್ರವಾಹದಿಂದ ಅನೇಕ ಸರೋವರಗಳನ್ನು ತುಂಬಿ ಅಷ್ಟಾದಶದ್ವೀಪಗಳನ್ನೂ ತನ್ನ ವಶಕ್ಕೆ ತೆಗೆದುಕೊಂಡ ಭಾರ್ಗವನು ಬಹುದಕ್ಷಿಣಾಕವಾದ ಪವಿತ್ರವಾದ ನೂರು ಯಜ್ಞಗಳನ್ನು ಮಾಡಿದನು. ಆ ಯಜ್ಞಗಳಲ್ಲಿ ಶಾಸ್ತ್ರವಿಧಿಗೆ ಅನುಸಾರವಾಗಿ ಮೂವತ್ತೆರಡು ಮಾರುಗಳಷ್ಟು ಉದ್ದವಾದ ಸುವರ್ಣಮಯವಾದ ವೇದಿಯನ್ನು ನಿರ್ಮಿಸಿದ್ದರು. ಆ ವೇದಿಯು ನೂರಾರು ರತ್ನಗಳಿಂದಲೂ ಮತ್ತು ನೂರಾರು ಪತಾಕೆಗಳ ಮಾಲೆಗಳಿಂದಲೂ ಸಮಲಂಕೃತವಾಗಿದ್ದಿತು. ಪರಶುರಾಮನು ಸುವರ್ಣಮಯವಾದ ಆ ವೇದಿಯನ್ನೂ ಮತ್ತು ಗ್ರಾಮ್ಯ ಮತ್ತು ಅರಣ್ಯಪ್ರಾಣಿಗಳ ಸಮೂಹದಿಂದ ತುಂಬಿದ್ದ ಅಖಂಡಭೂಮಿ ಯನ್ನೂ, ಚಿನ್ನದ ಆಭರಣಗಳಿಂದ ಅಲಂಕರಿಸಲ್ಪಟ್ಟ ಒಂದು ಲಕ್ಷ ಶ್ರೇಷ್ಠವಾದ ಆನೆಗಳನ್ನೂ ಕಶ್ಯಪಮಹರ್ಷಿಗಳಿಗೆ ದಾನವಾಗಿ ಕೊಟ್ಟನು. ಅಶ್ವಮೇಧ ಯಾಗದ ಸಮಯದಲ್ಲಿ ಪರಶುರಾಮನು ಪೃಥ್ವಿಯನ್ನು ಕಳ್ಳ-ಕಾಕರಿಂದ ರಹಿತವನ್ನಾಗಿಯೂ, ಶಿಷ್ಟಜನರಿಂದ ಸಂಪನ್ನವನ್ನಾಗಿಯೂ ಮಾಡಿದನು. ಪ್ರಭುವಾದ ಭಾರ್ಗವನು ಇಪ್ಪತ್ತೊಂದು ಬಾರಿ ಮಾಡಿದ ದಂಡಯಾತ್ರೆ ಯಿಂದ ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿ ಅನಂತರ ನೂರಾರು ಯಜ್ಞಗಳನ್ನು ಮಾಡಿ ಈ ವಸುಧೆಯನ್ನು ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ

ಕೊಟ್ಟನು. ಸಪ್ತದ್ವೀಪಗಳಿಂದ ಯುಕ್ತವಾದ ಈ ವಸುಧೆಯನ್ನು ಪರಶುರಾಮನಿಂದ ದಾನವಾಗಿ ಪಡೆದ ಕಶ್ಯಪನು ದಾನವನ್ನು ಪ್ರತಿಗ್ರಹಿಸುತ್ತಲೇ ಪರಶುರಾಮನಿಗೆ ಹೇಳಿದನು: "**ನಿರ್ಗಚ್ಛ ವಸುಧಾತೋ ಮಮಾಜ್ಞಯಾ**' –"ಈ ಭೂಮಿಯು ಈಗ ನನ್ನದಾಗಿದೆ. ಆದುದರಿಂದ ನೀನು ಈಗಲೇ ನನ್ನ ಆಜ್ಞೆಯಂತೆ ಈ ಭೂಮಿಯನ್ನು ಬಿಟ್ಟು ಎಲ್ಲಿಗಾದರೂ ಹೊರಟುಹೋಗು."

ಕಶ್ಯಪನ ನಿರ್ದೇಶವನ್ನು ಕೇಳಿದೊಡನೆಯೇ ಯೋಧಶ್ರೇಷ್ಠನಾದ ಪರಶುರಾಮನು ಬ್ರಾಹ್ಮಣನ ಆಜ್ಞೆಯನ್ನು ಪರಿಪಾಲಿಸುತ್ತಾ ಬಾಣವೊಂದನ್ನು ಸಮುದ್ರದ ಕಡೆಗೆ ಬಿಟ್ಟು, ಬಾಣವು ಹೋದಷ್ಟು ದೂರ ಸಮುದ್ರವನ್ನು ಹಿಂದಕ್ಕೆ ಸರಿಯುವಂತೆ ಮಾಡಿ, ಪರ್ವತಗಳಿಗೆಲ್ಲಾ ಶ್ರೇಷ್ಠವಾದ ಮಹೇಂದ್ರ ಪರ್ವತದ ತಪ್ಪಲಿನಲ್ಲಿ ವಾಸಮಾಡತೊಡಗಿದನು. ಈ ರೀತಿಯಲ್ಲಿ ಅದ್ಭುತ ವಾದ ಕಾರ್ಯಗಳನ್ನು ಮಾಡಿದ ಭೃಗುವಂಶೀಯರ ಕೀರ್ತಿವರ್ಧಕನಾದ, ನೂರಾರು ಸದ್ಗುಣಗಳಿಂದ ಸಂಪನ್ನನಾದ, ಮಹಾತೇಜಸ್ವಿಯಾದ, ಮಹಾ ಯಶಸ್ವಿಯಾದ ಪರಶುರಾಮನೂ ಸಹ ಒಂದು ದಿನ ಮೃತ್ಯುವಶನಾಗುವನು. ಸೃಂಜಯ! ಪರಶುರಾಮನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಹೆಚ್ಚು ಪುಣ್ಯವಂತನು. ಮೇಲಾಗಿ ನಿನ್ನ ಮಗನು ಯಜ್ಞಮಾಡಿದವನೂ ಅಲ್ಲ; ದಕ್ಷಿಣೆಗಳನ್ನು ಕೊಟ್ಟವನೂ ಅಲ್ಲ. ಅಂತಹ ಮಗನಿಗಾಗಿ ನೀನಿನ್ನು ಪರಿತಪಿಸಬೇಡ. ನಾನು ಇದುವರೆಗೆ ಎಷ್ಟು ಮಂದಿ ಪುರುಷಶ್ರೇಷ್ಠರ ಇತಿಹಾಸಗಳನ್ನು ಹೇಳಿದೆನೋ–ಅವರೆಲ್ಲರೂ ಸತ್ಯ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕರಾದವರು. ನಿನಗಿಂತಲೂ ನೂರು ಪಾಲು ಅಧಿಕವಾದ ಕಲ್ಯಾಣಗುಣಗಳುಳ್ಳವರು. ಹೀಗಿದ್ದರೂ ಕೂಡ ಅವರೆಲ್ಲರೂ ಮರಣಹೊಂದಿದರು; ಉಳಿದು ಕೊಂಡಿರುವವರೂ ಒಂದಲ್ಲ ಒಂದು ದಿನ ಮರಣಹೊಂದುತ್ತಾರೆ. ಆದುದರಿಂದ ನಿನ್ನ ಮಗನ ಮರಣಕ್ಕಾಗಿ ದುಃಖಿಸುವುದನ್ನು ಸಾಕುಮಾಡು."

ಯುಧಿಷ್ಠಿರ! ಹೀಗೆ ಪುತ್ರಶೋಕದಿಂದ ಸಂತಪ್ತನಾಗಿದ್ದ ಸೃಂಜಯನನ್ನು ಸಮಾಧಾನಗೊಳಿಸಲು ನಾರದರು ಪರಶುರಾಮನ ಇತಿಹಾಸವನ್ನು ಹೇಳಿ ಮುಗಿಸಿದರು."

೭೦ನೆಯ ಅಧ್ಯಾಯವು ಮುಗಿಯಿತು.

## ನಾರದರು ಸೃಂಜಯನ ಮಗನನ್ನು ಬದುಕಿಸಿಕೊಟ್ಟುದು: ವ್ಯಾಸರು ಯುಧಿಷ್ಠಿರನಿಗೆ ಸಮಾಧಾನಹೇಳಿ ಅಂತರ್ಹಿತರಾದುದು

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ:

"ಯುಧಿಷ್ಠಿರ! ನಾರದರು ಹೇಳಿದ ಹದಿನಾರು ಮಂದಿ ರಾಜರ ಆಯುರ್ವರ್ಧಕವಾದ ಪುಣ್ಯಪ್ರಾಪಕವಾದ ಉಪಾಖ್ಯಾನವನ್ನು ನಾರದರಿಂದ ಕೇಳಿದ ಮೇಲೆಯೂ ಸೃಂಜಯನು ಯಾವುದೊಂದು ಮಾತನ್ನೂ ಆಡದೇ ಸುಮ್ಮನಿದ್ದುಬಿಟ್ಟನು. ಹಾಗೆ ಮೌನಧರಿಸಿ ಕುಳಿತಿದ್ದ ಸೃಂಜಯನನ್ನು ಭಗವಾನ್ ನಾರದಮಹರ್ಷಿಗಳು ಪ್ರಶ್ನಿಸಿದರು:



"ದ್ಯುತಿಮಂತನೇ! ಸೃಂಜಯ! ನಾನು ಹೇಳಿದ ಆಖ್ಯಾನಗಳನ್ನು ಗಮನವಿಟ್ಟು ಕೇಳಿದೆಯಾ? ಅವುಗಳು ನಿನ್ನ ಮನಸ್ಸಿಗೆ ಹಿಡಿಸಿದುವೇ? ಅಥವಾ ನೀಚಸ್ತ್ರೀಯ ಸಂಬಂಧವನ್ನು ಬೆಳೆಸಿದ ಬ್ರಾಹ್ಮಣನನ್ನು ಶ್ರಾದ್ಧಕ್ಕೆ ಕರೆದರೆ ಶ್ರಾದ್ಧಕಾಲದಲ್ಲಿ ಮಾಡಿದ ದಾನವೂ ಮತ್ತು ಶ್ರಾದ್ಧವೂ ವ್ಯರ್ಥವಾಗಿ ಹೋಗುವಂತೆ ನಾನು ಇದುವರೆಗೆ ಆಡಿದ ಮಾತುಗಳೆಲ್ಲವೂ ನಿನ್ನ ವಿಷಯದಲ್ಲಿ ವ್ಯರ್ಥವೇ ಆಯಿತೇ?"

ನಾರದರು ಹೀಗೆ ಹೇಳುತ್ತಲೇ ಸೃಂಜಯನು ಬದ್ಧಾಂಜಲಿಯಾಗಿ

ನಾರದರಿಗೆ ಹೇಳಿದನು: "ಮಹಾಬಾಹುಗಳಾದ ಮಹರ್ಷಿಗಳೇ! ಅನೇಕ ಯಜ್ಞಗಳನ್ನು ಮಾಡಿದ ಮತ್ತು ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಟ್ಟ ಹಿಂದಿನ ರಾಜರ್ಷಿಗಳ ಶ್ಲಾಘ್ಯವಾದ, ಉತ್ತಮೋತ್ತಮವಾದ ಈ ಆಖ್ಯಾನಗಳನ್ನು ಕೇಳಿ ನಾನು ಅತ್ಯಂತವಿಸ್ಮಿತನಾಗಿದ್ದೇನೆ. ಸೂರ್ಯನ ತೇಜಸ್ಸಿನಿಂದ ಕತ್ತಲೆಯು ಹೋಗಿಬಿಡುವಂತೆ-ಈ ದಿವ್ಯವಾದ ಆಖ್ಯಾನಗಳ ಶ್ರವಣದಿಂದ ನನ್ನ ಶೋಕವು ಪೂರ್ಣವಾಗಿ ನಾಶವಾಯಿತು.

ಅಂತಹ ಮಹಾನುಭಾವರ ಆಖ್ಯಾನಗಳನ್ನು ಕೇಳಿದುದರಿಂದ ನಾನೀಗ ಪಾಪರಹಿತನೂ, ಪುತ್ರಶೋಕರಹಿತನೂ ಆಗಿದ್ದೇನೆ. ನಾನು ಮುಂದೆ ಏನು ಮಾಡಬೇಕೆಂಬುದನ್ನು ತಿಳಿಸಿರಿ."

"ಸೃಂಜಯ! ಭಾಗ್ಯವಿಶೇಷದಿಂದಲೇ ನೀನು ಪುತ್ರಶೋಕದಿಂದ ವಿಮುಕ್ತನಾಗಿರುವೆ. ಈಗ ನಿನಗೇನು ಬೇಕೆಂಬುದನ್ನು ಕೇಳು. ನೀನು ಯಾವುದನ್ನು ಕೇಳುವೆಯೋ ಅದೆಲ್ಲವನ್ನೂ ಪಡೆದುಕೊಳ್ಳುವೆ. ನಾವೆಂದಿಗೂ ಅನೃತವಾದಿಗಳಲ್ಲ."

"ನಾರದರೇ! ತಾವು ನನ್ನ ವಿಷಯದಲ್ಲಿ ಪ್ರಸನ್ನರಾಗಿರುವುದೇ ಸಾಕು. ಇಷ್ಟರಿಂದಲೇ ನಾನು ಸಂತೋಷಗೊಂಡಿದ್ದೇನೆ. ಭಗವತ್ಸ್ವರೂಪರಾದ ತಾವು ಯಾರ ವಿಷಯದಲ್ಲಿ ಪ್ರಸನ್ನರಾಗುವಿರೋ ಅವರಿಗೆ ದುರ್ಲಭವಾದುದು ಈ ಪ್ರಪಂಚದಲ್ಲಿ ಯಾವುದೂ ಇರುವುದಿಲ್ಲ."

"ಮಹಾರಾಜ! ದರೋಡೆಕಾರರು ನಿನ್ನ ಮಗನನ್ನು ಮಂತ್ರದಿಂದ ಪ್ರೋಕ್ಷಿಸಲ್ಪಟ್ಟ ಪಶುವನ್ನು ಕತ್ತರಿಸುವಂತೆ ವ್ಯರ್ಥವಾಗಿ ಕತ್ತರಿಸಿಹಾಕಿದರು. ಮರಣಹೊಂದಿದ ಆ ನಿನ್ನ ಮಗನನ್ನು ಕಷ್ಟಕರವಾದ ನರಕದಿಂದ ಹೊರತಂದು ನಿನಗೆ ಒಪ್ಪಿಸುತ್ತೇನೆ."

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ:

"ಧರ್ಮಜ! ಅದ್ಭುತವಾದ ಕಾಂತಿಯಿಂದ ಕೂಡಿದ್ದ, ಕುಬೇರನ ಮಗನಿಗೆ ಅನುರೂಪನಾಗಿದ್ದ ಸುವರ್ಣಷ್ಠೀವಿಯು ಪ್ರಸನ್ನರಾದ ನಾರದರ ದಿವ್ಯವಾದ ವರಪ್ರಸಾದದಿಂದಾಗಿ ತಂದೆಯಾದ ಸೃಂಜಯನ ಮುಂದೆ ಬಂದು ನಿಂತನು. ಮರಣಹೊಂದಿದ್ದ ಮಗನು ಪುನಃ ಬಂದು ತನ್ನೊಡನೆ

ಸೇರಿದುದಕ್ಕಾಗಿ ಸೃಂಜಯನ ಮನಸ್ಸು ಪ್ರಸನ್ನವಾಯಿತು. ಅನಂತರ ಅವನು ಶ್ರೇಷ್ಠವಾದ ದಕ್ಷಿಣೆಗಳಿಂದ ಕೂಡಿದ ಪುಣ್ಯಕರವಾದ ಯಜ್ಞಗಳಿಂದ ದೇವತೆಗಳನ್ನು ಆರಾಧಿಸಿದನು.

ಯುಧಿಷ್ಠಿರ! ನಾರದರು ಸೃಂಜಯನ ಮಗನನ್ನು ಬದುಕಿಸಲು ಅನೇಕಕಾರಣಗಳಿದ್ದುವು. ಸುವರ್ಣಷ್ಠೀವಿಯು ವೀರಕ್ಷತ್ರಿಯರಿಗೆ ಅನುಗುಣ ವಾಗಿ ಕವಚವನ್ನು ಧರಿಸಿ ಯುದ್ಧಮಾಡಿ ರಣಾಂಗಣದಲ್ಲಿ ಸಾಯಲಿಲ್ಲ. ಅವನು ಯಾವುದರಲ್ಲಿಯೂ ಕೃತಾರ್ಥನಾಗಿರಲಿಲ್ಲ. ಜೀವನದಲ್ಲಿ ಯಾವುದನ್ನೂ ಸಾಧಿಸಿರಲಿಲ್ಲ. ದಸ್ಯುಗಳಿಂದ ಭಯಗೊಂಡಿದ್ದನು. ಆಮುಷ್ಮಿಕಫಲದಾಯಕವಾದ ಯಾವ ಯಜ್ಞವನ್ನೂ ಮಾಡಿರಲಿಲ್ಲ. ಮೇಲಾಗಿ ಅವನಿಗಿನ್ನೂ ಮಕ್ಕಳಾಗಿರಲಿಲ್ಲ. ಈ ಎಲ್ಲ ಕಾರಣಗಳಿಂದಲೂ ನಾರದರು ಸೃಂಜಯನ ಮಗನನ್ನು ಪುನಃ ಬದುಕಿಸಿಕೊಟ್ಟರು. ನಿನ್ನ ಮಗನಾದ ಅಭಿಮನ್ಯುವು ಶೂರ-ವೀರ. ಹಿಡಿದ ಕಾರ್ಯವನ್ನು ಸಾಧಿಸಿ ಕೃತಾರ್ಥ ನಾಗಿರತಕ್ಕವನು. ಶತ್ರುಪಕ್ಷದ ಸಾವಿರಾರು ಮಂದಿ ಮಹಾಯೋಧರಿಗೆ ಸಂತಾಪವನ್ನುಂಟುಮಾಡಿ ಯುದ್ಧತತ್ಪರನಾಗಿಯೇ ಇದ್ದು ಹತನಾಗಿ ಸ್ವರ್ಗಲೋಕಕ್ಕೆ ಹೋಗಿದ್ದಾನೆ. ಬ್ರಹ್ಮಚರ್ಯದ ಪಾಲನೆಯಿಂದ, ಉತ್ತಮ ಜ್ಞಾನದಿಂದ, ವೇದ-ಶಾಸ್ತ್ರಗಳ ಅಧ್ಯಯನದಿಂದ ಮತ್ತು ಇಷ್ಟವಾದ ಯಜ್ಞಗಳನ್ನು ಮಾಡುವುದರಿಂದ ಮಾನವರು ಯಾವ ಅಕ್ಷಯವಾದ ಪುಣ್ಯಲೋಕಗಳನ್ನು ಪಡೆದುಕೊಳ್ಳುತ್ತಾರೆಯೋ ಅಂತಹ ಪುಣ್ಯಲೋಕಗಳನ್ನೇ ನಿನ್ನ ಮಗನೂ ಪಡೆದುಕೊಂಡು ಆ ಪುಣ್ಯಲೋಕಗಳಿಗೇ ಹೋಗಿದ್ದಾನೆ.

**ವಿದ್ವಾಂಸಃ ಕರ್ಮಭಿಃ ಪುಣ್ಯೈಃ ಸ್ವರ್ಗಮೀಹನ್ತಿ ನಿತ್ಯಶಃ।**
**ನ ತು ಸ್ವರ್ಗಾದಯಂ ಲೋಕಃ ಕಾಮ್ಯತೇ ಸ್ವರ್ಗವಾಸಿಭಿಃ ॥೧೪॥**

ವಿದ್ವಾಂಸರಾದವರು ಪುಣ್ಯಕರವಾದ ಕರ್ಮಗಳನ್ನು ಮಾಡುತ್ತಾ ಅನುದಿನವೂ ಸ್ವರ್ಗವನ್ನೇ ಆಶಿಸುತ್ತಿರುತ್ತಾರೆ. ಆದರೆ ಸ್ವರ್ಗವಾಸಿಗಳು ತಾವಿರುವ ಲೋಕದಿಂದ ಈ ಲೋಕಕ್ಕೆ ಬರಲು ಇಚ್ಛೆಪಡುವುದಿಲ್ಲ. ಈ ಕಾರಣದಿಂದ ಸ್ವರ್ಗಗತನಾಗಿರುವ ಅರ್ಜುನನ ಮಗನನ್ನು ಪುನಃ ಈ ಲೋಕಕ್ಕೆ ಕರೆತರಲು ಸಾಧ್ಯವಾಗುವುದಿಲ್ಲ. ಅಪ್ರಾಪ್ಯವಾದ ವಸ್ತುವು ಅಪೇಕ್ಷೆಪಟ್ಟ ಮಾತ್ರದಿಂದ ಲಭಿಸುವುದಿಲ್ಲ.

ಧ್ಯಾನದ ಮೂಲಕವಾಗಿ ಪವಿತ್ರವಾದ ಜ್ಞಾನದೃಷ್ಟಿಯನ್ನು ಪಡೆದಿರುವ ಯೋಗಿಗಳು ಕಾಲಾಂತರದಲ್ಲಿ ಯಾವ ಲೋಕಕ್ಕೆ ಹೋಗುತ್ತಾರೆಯೋ ಉತ್ತಮವಾದ ಯಾಗಗಳನ್ನು ಮಾಡಿದ ಜನರು ಯಾವ ಲೋಕಕ್ಕೆ ಹೋಗುತ್ತಾರೆಯೋ ಉಜ್ಜ್ವಲವಾದ ತಪಸ್ಸಿನ ಮೂಲಕವಾಗಿ ತಪಸ್ವಿಗಳು ಯಾವ ಲೋಕಕ್ಕೆ ಹೋಗುತ್ತಾರೆಯೋ– ಅಂತಹ ಅಕ್ಷಯವಾದ ಪುಣ್ಯಲೋಕಕ್ಕೇ ನಿನ್ನ ಮಗನೂ ಹೋಗಿ ಉತ್ತಮಗತಿಯನ್ನು ಹೊಂದಿದ್ದಾನೆ. ವೀರನಾದ ಅಭಿಮನ್ಯುವು ಮರಣಾನಂತರದಲ್ಲಿ ಪುನಃ ತನ್ನ ಹಿಂದಿನ ಭಾವವನ್ನು ಹೊಂದಿ, ಚಂದ್ರನಿಂದ ಉತ್ಪನ್ನವಾದ ದ್ವಿಜೋಚಿತವಾದ ಶರೀರದಲ್ಲಿ ಪ್ರತಿಷ್ಠಿತನಾಗಿ, ತನ್ನ ಅಮೃತಮಯವಾದ ಕಿರಣಗಳಿಂದ ತನ್ನ ತಂದೆಯಾದ ಚಂದ್ರನಿಗೆ ಸಮಾನನಾಗಿ ಪ್ರಕಾಶಿಸುತ್ತಿದ್ದಾನೆ. ಆದುದರಿಂದ ಅಭಿಮನ್ಯುವಿಗಾಗಿ ನೀನು ವ್ಯಥೆಪಡುವ ಕಾರಣವಿಲ್ಲ. ಹೀಗೆ ಭಾವಿಸಿ ಮನಸ್ಸಿಗೆ ಸ್ಥಿರತೆಯನ್ನು ತಂದುಕೊಂಡು ಧೈರ್ಯವನ್ನು ಹೊಂದಿ ಉತ್ಸಾಹ ಪೂರ್ಣನಾಗಿ ಶತ್ರುಗಳನ್ನು ಜಯಿಸು. ನಾವು, ಕಷ್ಟಪಡುತ್ತಲೇ ಇರುತ್ತ ಬದುಕಿರುವವರನ್ನು ನೋಡಿ ದುಃಖಿಸಬೇಕೇ ಹೊರತು ಸ್ವರ್ಗಕ್ಕೆ ಹೋಗಿರುವವರ ವಿಷಯದಲ್ಲಿ ದುಃಖಪಡಬೇಕಾದ ಕಾರಣವಿಲ್ಲ. ಶೋಕಿಸುವುದರಿಂದ ಮತ್ತು ಸತ್ತವರನ್ನೇ ಯಾವಾಗಲೂ ಸ್ಮರಿಸುತ್ತಿರುವುದರಿಂದ ಮತ್ತಷ್ಟು ದುಃಖವೇ ಹೆಚ್ಚಾಗುತ್ತದೆ. ಆದುದರಿಂದ ವಿದ್ವಾಂಸನಾದವನು ಹೆಚ್ಚಿನ ಹರ್ಷ, ಅತಿಶಯಸಮ್ಮಾನ ಮತ್ತು ಸುಖ–ಇವುಗಳನ್ನು ಹೊಂದುವ ಉಪಾಯವನ್ನೇ ಚಿಂತಿಸುತ್ತಾ ಶೋಕವನ್ನು ಸಂಪೂರ್ಣವಾಗಿ ಪರಿತ್ಯಜಿಸಿ, ಶ್ರೇಯಃಪ್ರಾಪ್ತಿಗಾಗಿ ಪ್ರಯತ್ನಿಸಬೇಕು. ಹೀಗೆ ಮನಗಂಡ ವಿದ್ವಾಂಸರು ಶೋಕಪಡುವುದಿಲ್ಲ. ದುಃಖ ಎಂದು ಬಗೆದರೆ ಮಾತ್ರವೇ ದುಃಖ. ವಿದ್ವಾಂಸನೇ! ಹೀಗೆ ಭಾವಿಸಿ ಯುದ್ಧಕ್ಕೆ ಸಿದ್ಧನಾಗು. ಮನಸ್ಸು ಮತ್ತು ಇಂದ್ರಿಯಗಳನ್ನು ಸಂಯಮದಲ್ಲಿಟ್ಟುಕೊ. ಪುನಃ-ಪುನಃ ದುಃಖಿಸಬೇಡ. ಮೃತ್ಯುವು ಹುಟ್ಟಿದ ವಿಷಯ ಮತ್ತು ಅದು ಮಾಡಿದ ಅನುಪಮವಾದ ತಪಸ್ಸು ಇವುಗಳನ್ನು ನೀನು ಕೇಳಿಯೇ ಇರುವೆ. ಮೃತ್ಯುವು ಎಲ್ಲ ಪ್ರಾಣಿಗಳಿಗೂ ಸಮಾನವಾಗಿಯೇ ಇರುತ್ತದೆ. ಧನ, ಐಶ್ವರ್ಯ–ಇವುಗಳು ಮಾತ್ರ ಚಂಚಲವಾಗಿರುತ್ತವೆ. ಇವು ಒಬ್ಬನಲ್ಲಿ ಇರುತ್ತವೆ; ಮತ್ತೊಬ್ಬನಲ್ಲಿ ಇರುವುದಿಲ್ಲ. ಸೃಂಜಯಪುತ್ರನ ಮರಣದ ಕಥೆಯನ್ನೂ ಮತ್ತು ಅವನನ್ನು

ಪುನಃ ನಾರದರು ಬದುಕಿಸಿಕೊಟ್ಟ ಕಥೆಯನ್ನೂ ಕೇಳಿರುವೆ. ವಿದ್ವಾಂಸನೇ! ಮಹಾರಾಜ! ಖಂಡಿತವಾಗಿಯೂ ಶೋಕಪರವಶನಾಗಬೇಡ. ನಾವಿನ್ನು ಹೋಗಿಬರುತ್ತೇವೆ."–ಹೀಗೆಂಬುದಾಗಿ ಹೇಳಿ ಭಗವಾನ್ ವ್ಯಾಸರು ಅಲ್ಲಿಯೇ ಅಂತರ್ಹಿತರಾದರು.

ಮೋಡವಿಲ್ಲದ ಆಕಾಶದಂತೆ–ಪ್ರಭೆಯಿಂದ ಕಂಗೊಳಿಸುತ್ತಿದ್ದ, ಬುದ್ಧಿವಂತರಲ್ಲಿ ಶ್ರೇಷ್ಠರಾದ, ವಾಗೀಶ್ವರರಾದ ಭಗವಾನ್ ವ್ಯಾಸರು ಯುಧಿಷ್ಠಿರನನ್ನು ಸಮಾಶ್ವಾಸಿಸಿ ಹೊರಟುಹೋದನಂತರ ವಿದ್ವಾಂಸನಾದ ಯುಧಿಷ್ಠಿರನು-ಮಹೇಂದ್ರಸದೃಶತೇಜಸ್ವಿಗಳಾದ, ನ್ಯಾಯದಿಂದಲೇ ಆರ್ಜಿಸಿದ ಐಶ್ವರ್ಯವುಳ್ಳವರಾಗಿದ್ದ, ಹಿಂದಿನ ರಾಜೇಂದ್ರರ ಯಜ್ಞವೈಭವದ ವಿಷಯವನ್ನು ವ್ಯಾಸರಿಂದ ಕೇಳಿ ಅವರೆಲ್ಲರನ್ನೂ ಮನಸ್ಸಿನಲ್ಲಿಯೇ ಅಭಿನಂದಿಸಿ, ಅಭಿಮನ್ಯುವಿನ ವಧೆಯಿಂದ ಪ್ರಾಪ್ತವಾಗಿದ್ದ ಶೋಕವನ್ನು ಸಂಪೂರ್ಣವಾಗಿ ಮರೆತನು. ಆದರೂ ದೀನನಾದ ಯುಧಿಷ್ಠಿರನು, ಅರ್ಜುನನಿಗೆ ಏನು ಹೇಳಬೇಕೆಂಬುದರ ಬಗೆಗೆ ಪುನಃ ಚಿಂತೆಮಾಡಲಾರಂಭಿಸಿದನು."

೭೧ನೆಯ ಅಧ್ಯಾಯವು ಮುಗಿಯಿತು.

೭೨ನೆಯ ಅಧ್ಯಾಯ ಪ್ರತಿಜ್ಞಾಪರ್ವ

## ಅಭಿಮನ್ಯುವಿನ ಮರಣವಾರ್ತೆಯನ್ನು ಕೇಳಿ ಅರ್ಜುನನು ವಿಷಾದಪಟ್ಟುದು ಮತ್ತು ಕೋಪಗೊಂಡುದು

ಸಂಜಯನು ಯುದ್ಧಾನಂತರದ ವಿಷಯವನ್ನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಪ್ರಾಣಧಾರಿಗಳ (ಯೋಧರ) ಕ್ಷಯಕರವಾದ ಹದಿಮೂರನೆಯ ದಿವಸದ ಆ ಹಗಲು ಕಳೆದುಹೋಯಿತು. ಸಂಧ್ಯಾಕಾಲ ವಾಯಿತು. ಸೂರ್ಯನು ಮುಳುಗಿದನು. ಎಲ್ಲ ಸೈನಿಕರೂ ವಿಶ್ರಾಂತಿ ಪಡೆಯುವ ಸಲುವಾಗಿ ತಮ್ಮ-ತಮ್ಮ ಶಿಬಿರಗಳಿಗೆ ಹೊರಟುಹೋದರು. ಕಪಿಧ್ವಜನಾದ ಅರ್ಜುನನು ಸಂಶಪ್ತಕಮಹಾಯೋಧರ ಸಮೂಹ ವನ್ನು ದಿವ್ಯಾಸ್ತ್ರಗಳ ಮೂಲಕವಾಗಿ ಸಂಹರಿಸಿ, ಜೈತ್ರರಥದಲ್ಲಿ (ಸರ್ವತ್ರ

ಜಯಗಳಿಸುವ ರಥದಲ್ಲಿ ) ಕುಳಿತು ಶಿಬಿರದ ಕಡೆಗೆ ಹೊರಟನು. ರಥದಲ್ಲಿ ಹೋಗುತ್ತಿರುವಾಗಲೇ ಕಂಬನಿದುಂಬಿದವನಾಗಿ ಶ್ರೀಕೃಷ್ಣನೊಡನೆ ಹೇಳಿದನು:

"ಕೇಶವ! ಇಂದು ನನ್ನ ಹೃದಯವು ಏಕೋ ಡವ-ಡವನೆ ಹೊಡೆದುಕೊಳ್ಳುತ್ತಿದೆ. ನನ್ನ ಮಾತು ತೊದಲುತ್ತಿದೆ. ಅನಿಷ್ಟಸೂಚಕವಾಗಿ ನನ್ನ ಶರೀರದ ಭಾಗಗಳು ಅದುರುತ್ತಿವೆ. ನನ್ನ ಶರೀರವೇ ದುರ್ಬಲಗೊಳ್ಳುತ್ತಿದೆ. ಯಾವುದೋ ಅನಿಷ್ಟದ ಚಿಂತೆಯು ನನ್ನ ಮನಸ್ಸನ್ನು ಹೊಕ್ಕಿದೆ. ಎಷ್ಟೇ ಪ್ರಯತ್ನಪಟ್ಟರೂ ಅದು ನನ್ನ ಹೃದಯವನ್ನು ಬಿಟ್ಟು ದೂರವಾಗುತ್ತಿಲ್ಲ. ಭೂಮಿಯ ಮೇಲೆ ಮತ್ತು ದಿಕ್ಕು-ದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿರುವ ಉತ್ಪಾತಗಳು ನನ್ನನ್ನು ಭಯಪಡಿಸುತ್ತಿವೆ. ಈ ಉತ್ಪಾತಗಳು ಅನೇಕ ಪ್ರಕಾರವಾಗಿ ಕಾಣಿಸಿಕೊಳ್ಳುತ್ತಿವೆ. ಎಲ್ಲವೂ ಅಮಂಗಳವನ್ನೇ ಸೂಚಿಸುತ್ತಿವೆ. ಅಮಾತ್ಯಸಹಿತನಾದ ಗುರುವಾದ ಯುಧಿಷ್ಠಿರರಾಜನು ಕುಶಲಿಯಾಗಿರ ಬಹುದೇ?"

"ಪಾರ್ಥ! ಬಂಧುಗಳಿಂದಲೂ, ಅಮಾತ್ಯರಿಂದಲೂ ಸಹಿತನಾದ ನಿನ್ನ ಅಣ್ಣನು ಕುಶಲಿಯಾಗಿರುವನು. ಆದರೆ ಬೇರೆ ಯಾವುದೋ ಅನಿಷ್ಟವು ಒದಗಿರಬಹುದು."

ಮಹಾರಾಜ! ಹೀಗೆಂದು ಕೃಷ್ಣಾರ್ಜುನರು ಹೇಳಿಕೊಂಡು ಕಳವಳ ಪಡುತ್ತಿದ್ದರೂ ವೀರರ ಅವಸಾನದ ಭೂಮಿಯಾದ ರಣಕ್ಷೇತ್ರದಲ್ಲಿಯೇ ಸಾಯಂಸಂಧ್ಯಾವಂದನೆಯನ್ನೂ ಮುಗಿಸಿಕೊಂಡು, ಅನಂತರ ರಥದಲ್ಲಿ ಕುಳಿತು ಅಂದಿನ ಭಯಂಕರಯುದ್ಧದ ಸಿಂಹಾವಲೋಕನಮಾಡುತ್ತಾ ಶಿಬಿರದ ಕಡೆಗೆ ತೆರಳಿದರು. ಅತ್ಯಂತದುಷ್ಕರವಾದ ಕಾರ್ಯವನ್ನು ಮಾಡಿ ಸಂಶಪ್ತಕರನ್ನು ಜಯಿಸಿ ಬಂದಿದ್ದ ಕೃಷ್ಣಾರ್ಜುನರು ಶಿಬಿರದ ಸಮೀಪಕ್ಕೆ ಬಂದರು. ಆದರೆ ಆ ಸಮಯದಲ್ಲಿ ಶಿಬಿರವು ಆನಂದಶೂನ್ಯವಾಗಿಯೂ, ಕಾಂತಿಹೀನವಾಗಿಯೂ ಇದ್ದಿತು. ನಾಶವಾಗಿಹೋದ ರೀತಿಯಲ್ಲಿಯೇ ಇದ್ದ ತನ್ನ ಶಿಬಿರವನ್ನು ನೋಡಿ ಶತ್ರುವೀರಹಂತಕನಾದ, ಅಸ್ವಸ್ಥಹೃದಯನಾಗಿದ್ದ ಬೀಭತ್ಸುವು ಶ್ರೀಕೃಷ್ಣನೊಡನೆ ಹೇಳಿದನು:

"ಜನಾರ್ದನ! ಇಂದು ಶಿಬಿರದಲ್ಲಿ ಯಾವ ಮಂಗಳವಾದ್ಯಗಳೂ ಕೇಳಿ ಬರುತ್ತಿಲ್ಲ. ದುಂದುಭಿಶಬ್ದಗಳಿಂದ ಮಿಶ್ರವಾದ, ತುತ್ತೂರಿಗಳಿಂದ ಕೂಡಿದ

ಶಂಖನಿನಾದಗಳೂ ಆಗುತ್ತಿಲ್ಲ. ತಾಳ-ಮೃದಂಗಗಳೊಡನೆ ವೀಣಾವಾದನವೂ ಇಂದು ಆಗುತ್ತಿಲ್ಲ. ನನ್ನ ಸೇನೆಯಲ್ಲಿ ವಂದಿ-ಮಾಗಧರು ಸ್ತುತಿಯುಕ್ತವಾದ, ರಮ್ಯವಾದ ಮತ್ತು ಮಂಗಳಕರವಾದ ಗೀತೆಗಳನ್ನು ಹಾಡುತ್ತಲೂ ಇಲ್ಲ; ಹೇಳುತ್ತಲೂ ಇಲ್ಲ. ಯೋಧರೂ ಸಹ ನನ್ನನ್ನು ನೋಡಿದೊಡನೆಯೇ ತಲೆತಗ್ಗಿಸಿಕೊಂಡು ಮುಂದೆ ಹೋಗುತ್ತಿದ್ದಾರೆ. ಹಿಂದೆ ಇವರು ನನ್ನನ್ನು ನೋಡಿದೊಡನೆಯೇ ಅಭಿನಂದಿಸಿ ಅಂದು ನಡೆದ ಯುದ್ಧದ ವಾರ್ತೆಯನ್ನು ಹೇಳುತ್ತಿದ್ದರು. ಈಗ ಹಾಗೆ ಮಾಡುತ್ತಿಲ್ಲ. ನಿಶ್ಚಯವಾಗಿಯೂ ನನ್ನ ಸಹೋದರರೆಲ್ಲರೂ ಕುಶಲಿಗಳಾಗಿರುವರೇ? ಕೃಷ್ಣ! ಇಂದು ನನ್ನ ಸ್ವಜನರ ವ್ಯಾಕುಲಯುಕ್ತವಾದ ಮುಖಗಳನ್ನು ನೋಡಿ ನನ್ನ ಆಶಂಕೆಯು ಮನಸ್ಸಿನಿಂದ ದೂರವಾಗುತ್ತಿಲ್ಲ. ಮಾನದನೇ! ಶ್ರೀಕೃಷ್ಣ! ಪಾಂಚಾಲರಾಜನಾದ ದ್ರುಪದ,



ವಿರಾಟ ಮತ್ತು ನನ್ನ ಎಲ್ಲ ಯೋಧರ ಸಮುದಾಯಗಳೂ ಕುಶಲಿಗಳಾಗಿರುವರೇ? ಸೌಭದ್ರನು ತನ್ನ ಸಹೋದರರೊಡನೆ ಹರ್ಷಯುಕ್ತನಾಗಿ ನಗುನಗುತ್ತಾ ಯುದ್ಧದಿಂದ ಶಿಬಿರಕ್ಕೆ ಹಿಂದಿರುಗಿದ ನನ್ನನ್ನು ಉಚಿತವಾದ ರೀತಿಯಲ್ಲಿ ಎದುರ್ಗೊಳ್ಳಲು ಪ್ರತಿದಿನವೂ ಬರುತ್ತಿದ್ದನು. ಇಂದು ಅವನೂ ಬರಲಿಲ್ಲ."

ಮಹಾರಾಜ! ಕೃಷ್ಣಾರ್ಜುನರಿಬ್ಬರೂ ಹೀಗೆ ಮಾತನಾಡಿಕೊಳ್ಳುತ್ತಾ ಶಿಬಿರವನ್ನು ಪ್ರವೇಶಿಸಿದರು. ಅಲ್ಲವರು ಅತ್ಯಂತವ್ಯಾಕುಲಗೊಂಡಿದ್ದ ಉತ್ಸಾಹಹೀನರಾಗಿದ್ದ ಪಾಂಡವರನ್ನು ನೋಡಿದರು. ತಮ್ಮ ಅಣ್ಣ-ತಮ್ಮಂದಿರನ್ನೂ ಮತ್ತು ಪ್ರತಿವಿಂಧ್ಯಾದಿ ಮಕ್ಕಳನ್ನೂ ನೋಡಿ ಅಭಿಮನ್ಯುವನ್ನು ಕಾಣದೇ ಮನಸ್ಸಿನಲ್ಲಿ ಕಳವಳಗೊಂಡ ಅರ್ಜುನನು ಅಲ್ಲಿದ್ದವರನ್ನು ಕುರಿತು ಈ ಮಾತನ್ನು ಹೇಳಿದನು:

"ನಿಮ್ಮೆಲ್ಲರ ಮುಖಗಳೂ ಅಪ್ರಸನ್ನವಾಗಿರುವಂತೆ ಕಾಣುತ್ತಿವೆ. ನಿಮ್ಮಲ್ಲಿ ಯಾರೂ ನನ್ನೊಡನೆ ಸಂತೋಷಪೂರ್ವಕವಾಗಿ ಮಾತನಾಡುತ್ತಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ನಾನು ನನ್ನ ಅಭಿಮನ್ಯುವನ್ನು ನಿಮ್ಮಗಳ ಮಧ್ಯದಲ್ಲಿ ಕಾಣುತ್ತಿಲ್ಲ. ಇಂದು ದ್ರೋಣರಿಂದ ಚಕ್ರವ್ಯೂಹವು ರಚಿಸಲ್ಪಟ್ಟಿತ್ತೆಂದು ಕೇಳಿದೆನು. ಕುಮಾರನಾದ ಸೌಭದ್ರನೊಬ್ಬನ ಹೊರತಾಗಿ ನಿಮ್ಮಲ್ಲಿ ಯಾರೂ ಚಕ್ರವ್ಯೂಹವನ್ನು ಭೇದಿಸುವವರು ಇರಲಿಲ್ಲ. ನಾನಾದರೋ ಅವನಿಗೆ ಚಕ್ರವ್ಯೂಹಪ್ರವೇಶರಹಸ್ಯವನ್ನು ಮಾತ್ರವೇ ಹೇಳಿಕೊಟ್ಟಿದ್ದೆನೇ ಹೊರತು ಚಕ್ರವ್ಯೂಹದಿಂದ ಹೊರಬರುವ ರಹಸ್ಯವನ್ನು ಉಪದೇಶಿಸಿರಲಿಲ್ಲ. ನಿಮ್ಮಲ್ಲಿ ಯಾರಾದರೂ ಕುಮಾರನಿಗೆ ಚಕ್ರವ್ಯೂಹವನ್ನು ಭೇದಿಸಲು ಹೇಳಿದಿರಾ? ಮಹಾಧನುಷ್ಮಂತನಾದ, ಶತ್ರುವೀರಹಂತಕನಾದ ಅಭಿಮನ್ಯುವು ಶತ್ರುಗಳ ವ್ಯೂಹವನ್ನು ಹಲವು ಬಾರಿ ಭೇದಿಸಿ ಕಡೆಯಲ್ಲಿ ಅಲ್ಲಿಯೇ ಮರಣಹೊಂದಲಿಲ್ಲ ತಾನೇ? ಪರ್ವತಗಳಲ್ಲಿ ಹುಟ್ಟಿದ ಸಿಂಹದಂತಿದ್ದ, ಲೋಹಿತಾಕ್ಷನಾದ, ಮಹಾಬಾಹುವಾದ, ಶ್ರೀಕೃಷ್ಣಸದೃಶನಾದ ಅಭಿಮನ್ಯುವು ಯುದ್ಧದಲ್ಲಿ ಹೇಗೆ ಮೃತನಾದನೆಂಬುದನ್ನು ಹೇಳಿರಿ. ಸುಕುಮಾರನಾದ, ಮಹಾಧನುರ್ಧರನಾದ, ಇಂದ್ರನ ಮೊಮ್ಮಗನಾದ ಮತ್ತು ನನಗೆ ಸದಾಕಾಲದಲ್ಲಿಯೂ ಅತ್ಯಂತಪ್ರಿಯನಾಗಿದ್ದ ಅಭಿಮನ್ಯುವು ಯುದ್ಧದಲ್ಲಿ ಹೇಗೆ ಹತನಾದನು? ಸುಭದ್ರೆಗೂ ಮತ್ತು ದ್ರೌಪದಿಗೂ ಪ್ರಿಯಪುತ್ರನಾಗಿದ್ದ, ಶ್ರೀಕೃಷ್ಣನಿಗೂ ಮತ್ತು ತಾಯಿಯಾದ ಕುಂತಿಗೂ ಪ್ರಿಯಕರನಾಗಿದ್ದ ನನ್ನ ಮಗನನ್ನು ಕೊಂದವರಾರು? ಪರಾಕ್ರಮ, ವಿದ್ಯೆ ಮತ್ತು ಮಹತ್ತ್ವಗಳಲ್ಲಿ ವೃಷ್ಣಿವೀರನಾದ, ಮಹಾತ್ಮನಾದ, ಕೇಶವನಿಗೆ ಸದೃಶನಾಗಿದ್ದ ಅಭಿಮನ್ಯುವು ಯುದ್ಧದಲ್ಲಿ ಹೇಗೆ ಹತನಾದನು? ಸುಭದ್ರೆಯ ಅತ್ಯಂತಪ್ರಿಯಪುತ್ರನಾದ, ಶೂರನಾದ, ನನ್ನಿಂದ ಸತತವಾಗಿ ಲಾಲಿಸಲ್ಪಡುತ್ತಿದ್ದ ಪುತ್ರನನ್ನು ನಾನೇ

ನಾದರೂ ಕಾಣದಿದ್ದರೆ ನಾನೂ ಸಹ ಯಮಲೋಕಕ್ಕೇ ಹೊರಟು ಹೋಗುತ್ತೇನೆ. ನನ್ನ ಪ್ರಿಯಪುತ್ರನಾದ ಅಭಿಮನ್ಯುವಿಗೆ ಮೃದುವಾಗಿದ್ದ ಗುಂಗುರು ಕೂದಲುಗಳಿದ್ದುವು. ಅವನಿನ್ನೂ ಎಳೆಯ ಪ್ರಾಯದವನಾಗಿದ್ದನು. ಜಿಂಕೆಯ ಮರಿಯ ಕಣ್ಣುಗಳಂತೆ ಅವನ ಕಣ್ಣುಗಳು ಸುಂದರವಾಗಿಯೂ, ಚಂಚಲವಾಗಿಯೂ ಇದ್ದುವು. ಮದಿಸಿದ ಆನೆಯಂತೆ ಮಹಾಪರಾಕ್ರಮಶಾಲಿ ಯಾಗಿದ್ದನು. ಎಳೆಯ ಸಾಲವೃಕ್ಷದಂತೆ ಎತ್ತರವಾಗಿದ್ದನು. ಯಾವಾಗಲೂ ನಗು-ನಗುತ್ತಲೇ ಮಾತನಾಡುತ್ತಿದ್ದನು. ಶಾಂತಸ್ವಭಾವದವನಾಗಿದ್ದನು. ಯಾವಾ ಗಲೂ ಹಿರಿಯರು ಹೇಳಿದ ಮಾತುಗಳನ್ನು ಶ್ರದ್ಧೆಯಿಂದ ಕೇಳಿ ಅದರಂತೆ ಕೆಲಸಮಾಡುತ್ತಿದ್ದನು. ಬಾಲ್ಯಾವಸ್ಥೆಯಲ್ಲಿಯೇ ಇದ್ದರೂ ಅವನ ಪರಾಕ್ರಮವು ಅತುಲವಾಗಿದ್ದಿತು. ಯಾವಾಗಲೂ ಎಲ್ಲರೊಡನೆಯೂ ಪ್ರಿಯವಾದ ಮಾತುಗಳನ್ನೇ ಆಡುತ್ತಿದ್ದನು. ಅವನಿಗೆ ಯಾರನ್ನು ಕಂಡರೂ ಮಾತ್ಸರ್ಯ ವಿರಲಿಲ್ಲ. ಅತಿಯಾದ ಉತ್ಸಾಹವುಳ್ಳವನಾಗಿದ್ದನು. ಅವನಿಗೆ ನೀಳವಾದ ತೋಳುಗಳಿದ್ದುವು. ಕಮಲದಂತಹ ಕಣ್ಣುಗಳಿದ್ದುವು. ಭಕ್ತಜನರ (ಆಶ್ರಿತ ಜನರ) ವಿಷಯದಲ್ಲಿ ಹೆಚ್ಚು ಅನುಕಂಪದಿಂದ ಇರುತ್ತಿದ್ದನು. ಜಿತೇಂದ್ರಿಯನಾಗಿದ್ದನು. ನೀಚಜನರನ್ನಾಗಲೀ, ನೀಚಮಾರ್ಗವನ್ನಾಗಲೀ ಅನುಸರಿಸುತ್ತಿರಲಿಲ್ಲ. ಮಾಡಿದ ಉಪಕಾರವನ್ನು ಎಂದಿಗೂ ಮರೆಯುತ್ತಿರ ಲಿಲ್ಲ. ಜ್ಞಾನಸಂಪನ್ನನಾಗಿದ್ದನು. ಅಸ್ತ್ರವಿದ್ಯೆಯಲ್ಲಿ ಪೂರ್ಣಪರಿಶ್ರಮವನ್ನು ಪಡೆದಿದ್ದನು. ಯಾವುದೇ ಕಾರಣದಿಂದಲೂ ಯುದ್ಧದಿಂದ ಹಿಂದಿರುಗುತ್ತಿರ ಲಿಲ್ಲ. ಯುದ್ಧದ ಪ್ರಶಂಸಕನಾಗಿದ್ದನು. ಶತ್ರುಗಳಿಗೆ ಭಯವನ್ನುಂಟುಮಾಡುತ್ತಿ ದ್ದನು. ಸ್ವಜನರಿಗೆ ಪ್ರಿಯವಾದ ಕಾರ್ಯವನ್ನು ಮಾಡುವುದರಲ್ಲಿ ಮತ್ತು ಅವರಿಗೆ ಹಿತವಾದ ಕಾರ್ಯವನ್ನು ಮಾಡುವುದರಲ್ಲಿ ಅವನಿಗೆ ಹೆಚ್ಚಿನ ಆಸಕ್ತಿಯಿದ್ದಿತು. ಪಿತೃಗಳಿಗೆ ಜಯವಾಗುವುದನ್ನೇ ಸರ್ವದಾ ಆಶಿಸುತ್ತಿದ್ದನು. ಯುದ್ಧದಲ್ಲಿ ಉತ್ಸಾಹವಿಲ್ಲದೇ ಇರುವವನನ್ನೂ, ಮೊದಲು ತನ್ನನ್ನು ಬಾಣಗಳಿಂದ ಪ್ರಹರಿಸದೇ ಇರುವವನನ್ನೂ ಅಭಿಮನ್ಯುವು ಎಂದೂ ಪ್ರಹರಿಸುತ್ತಿರಲಿಲ್ಲ. ಅಂತಹ ನನ್ನ ಮಗನನ್ನು ನಾನು ಕಾಣದಿದ್ದ ಪಕ್ಷದಲ್ಲಿ ಯಮಾಲಯಕ್ಕೇ ಹೋಗಿಬಿಡುತ್ತೇನೆ (ಸತ್ತು ಹೋಗುತ್ತೇನೆ). ಉಭಯ ಪಕ್ಷಗಳ ರಥಾತಿರಥರನ್ನು ಗಣನೆಮಾಡುವಾಗ ಭೀಷ್ಮರು ಅವನನ್ನು ಮಹಾರಥನೆಂದೇ ಪರಿಗಣಿಸಿದ್ದರು. ಯುದ್ಧಾಪೇಕ್ಷಿಯಾದ ಅವನಿಗೆ ನನ್ನ ಒಂದು ಮತ್ತು ಅರ್ಧದಷ್ಟು ಪರಾಕ್ರಮವಿದ್ದಿತು. ತರುಣನಾಗಿದ್ದನು. ನೀಳ

ವಾದ ಭುಜಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದನು. ಕೃಷ್ಣನ ಮಗನಾದ ಪ್ರದ್ಯುಮ್ನನಿಗೂ, ನನಗೂ ಮತ್ತು ಕೇಶವನಿಗೂ ಬಹಳ ಪ್ರಿಯನಾಗಿದ್ದನು. ಅಂತಹ ನನ್ನ ಮಗನನ್ನು ನಾನೇನಾದರೂ ಈಗ ಕಾಣದಿದ್ದರೆ ಕೂಡಲೇ ಪ್ರಾಣತ್ಯಾಗ ಮಾಡುತ್ತೇನೆ. ಅವನ ಮುಖಕಮಲವು ಶೋಭಾಯಮಾನವಾದ ಮೂಗನ್ನು ಹೊಂದಿದ್ದಿತು. ಹಣೆಯ ಅಂತ್ಯಭಾಗಗಳು ಬಹಳ ಸೊಗಸಾಗಿದ್ದುವು. ಅವನ ಕಣ್ಣುಗಳು, ಹುಬ್ಬುಗಳು ಮತ್ತು ಹಲ್ಲುಗಳು ಬಹಳ ಸುಂದರವಾಗಿದ್ದುವು. ಹೆಚ್ಚು ಮುದ್ದಾದ ಅಂತಹ ಮುಖವನ್ನು ಕಾಣದಿದ್ದರೆ ನನ್ನ ಮನಸ್ಸಿಗೆ ಶಾಂತಿಯು ಹೇಗೆ ತಾನೇ ಲಭಿಸೀತು? ಅಭಿಮನ್ಯುವಿನ ಮಾತಿನ ಮಾರ್ದವವು ವೀಣೆಯ ನಿನಾದದಂತೆ ಅತ್ಯಂತ ಸುಖಾವಹವಾಗಿದ್ದಿತು. ಗಂಡುಕೋಗಿಲೆಯ ಧ್ವನಿ ಯಂತೆಯೇ ಅವನ ಕಂಠಧ್ವನಿಯಿದ್ದಿತು. ಕರ್ಣಾ ನಂದಕರವಾದ ಅಂತಹ ಧ್ವನಿಯನ್ನು ಕೇಳದಿದ್ದರೆ ನನ್ನ ಮನಸ್ಸಿಗೆ ಯಾವ ಬಗೆಯ ಶಾಂತಿಯು ದೊರಕೀತು? ಅವನದು ಅಪ್ರತಿಮವಾದ ರೂಪ. ದೇವತೆಗಳಿಗೂ ಸಹ ಅಂತಹ ರೂಪವು ದುರ್ಲಭವೇ ಸರಿ. ಅಂತಹ ಸ್ಫುರದ್ರೂಪಿಯಾದ ಅಭಿಮನ್ಯುವನ್ನು ನೋಡದ ಮೇಲೆ ನನ್ನ ಹೃದಯಕ್ಕೆ ಯಾವ ಬಗೆಯ ಶಾಂತಿಯು ದೊರಕೀತು? ವಿನಯಪೂರ್ವಕವಾಗಿ ಹಿರಿಯರಿಗೆ ನಮಸ್ಕಾರಮಾಡುವುದರಲ್ಲಿ ಚತುರನಾಗಿಯೂ, ಪಿತೃಗಳ ಆಜ್ಞೆಯನ್ನು ಪರಿಪಾಲನೆ ಮಾಡುವುದರಲ್ಲಿ ನಿರತನಾಗಿಯೂ ಇದ್ದ ಅಭಿಮನ್ಯು ವನ್ನು ನಾನಿಂದು ಕಾಣದಿದ್ದರೆ ನನ್ನ ಹೃದಯಕ್ಕೆ ಶಾಂತಿಯೆಲ್ಲಿಯದು? ಸುಕುಮಾರನಾದ, ವೀರನಾದ, ಸದಾ ಹಂಸತೂಲಿಕಾತಲ್ಪದಲ್ಲಿಯೇ ಮಲ ಗಲು ಯೋಗ್ಯನಾದ, ನಾಥರಲ್ಲಿ (ಪ್ರಭುಗಳಲ್ಲಿ) ಶ್ರೇಷ್ಠನಾದ ಅಭಿಮನ್ಯು ವಿಂದು ಭೂಮಿಯಲ್ಲಿ ಅನಾಥನಂತೆ ಮಲಗಿದ್ದಾನೆ. ಹಂಸತೂಲಿಕಾತಲ್ಪದಲ್ಲಿ ಮಲಗಿರುತ್ತಿದ್ದ ವೀರನಾದ ಅಭಿಮನ್ಯುವನ್ನು ಹಿಂದೆ ಶ್ರೇಷ್ಠರಾದ ಸ್ತ್ರೀಯರು ಸಂಸೇವಿಸುತ್ತಿದ್ದರು. ಆದರೆ ಇಂದು ಕ್ಷತ-ವಿಕ್ಷತನಾಗಿ ರಣರಂಗದಲ್ಲಿ ಬಿದ್ದಿರುವ ಅಭಿಮನ್ಯುವನ್ನು ಅಮಂಗಳವಾದ ಶಬ್ದವನ್ನುಂಟುಮಾಡುವ ನರಿಗಳು ಸೇವಿಸುತ್ತಿವೆ. (ಅವನನ್ನು ಕಿತ್ತು ತಿನ್ನಲು ಕುಳಿತಿವೆ). ಹಿಂದೆ ಅವನು ಮಲಗಿದ್ದಾಗ ಸೂತರು, ವಂದಿ-ಮಾಗಧರು ಸುಮಧುರವಾದ ಹೊಗಳಿಕೆಯ ಗಾಯನಗಳಿಂದ ಎಚ್ಚರಗೊಳಿಸುತ್ತಿದ್ದರು. ಆದರೆ ಈಗ ಅವನನ್ನು ಕ್ರೂರ

ಮೃಗಗಳು ವಿಕಾರವಾಗಿ ಶಬ್ದಮಾಡುತ್ತಾ ಎಚ್ಚರಗೊಳಿಸುತ್ತವೆ. ಶುದ್ಧವಾಗಿಯೂ, ಸುಂದರವಾಗಿಯೂ ಇದ್ದ ಅವನ ಮುಖವು ಶ್ವೇತಚ್ಛತ್ರದ ನೆಳಲಿನಲ್ಲಿ ಇರಲು ಯೋಗ್ಯವಾಗಿದ್ದಿತು. ಅಂತಹ ಸುಂದರಮುಖದ ಮೇಲೆ ರಣರಂಗದಲ್ಲಿ ಹುಟ್ಟುವ ಧೂಳು ಬಿದ್ದು ಮುಖದ ಕಾಂತಿಯನ್ನೇ ವಿನಾಶಮಾಡಿಬಿಡುತ್ತಿದೆ. ಹಾ ಪುತ್ರ! ಅಭಿಮನ್ಯುವೇ! ಸತತವಾಗಿ ನಿನ್ನನ್ನು ನೋಡುತ್ತಿದ್ದರೂ ನನಗೆ ತೃಪ್ತಿಯೆಂಬುದೇ ಇರುತ್ತಿರಲಿಲ್ಲ. ನಿಶ್ಚಯವಾಗಿಯೂ ನಾನಿಂದು ಭಾಗ್ಯಹೀನನಾಗಿದ್ದೇನೆ. ಕಾಲನು ಬಲಾತ್ಕಾರಪೂರ್ವಕವಾಗಿ ನನ್ನಿಂದ ನಿನ್ನನ್ನು ಸೆಳೆದುಕೊಂಡು ಹೋಗುತ್ತಿದ್ದಾನೆ.

ನಿಶ್ಚಯವಾಗಿಯೂ ಆ ಸಂಯಮನೀಪಟ್ಟಣವು (ಯಮನ ಪಟ್ಟಣವು) ಪುಣ್ಯಶಾಲಿಗಳಾಗಿರುವವರಿಗೆ ಆಶ್ರಯಸ್ಥಾನವಾಗಿದೆ. ತನ್ನ ಪ್ರಭೆಗಳಿಂದಲೇ ಪ್ರಕಾಶಿಸುವ ಮತ್ತು ರಮ್ಯವಾದ ಆ ಯಮಪುರಿಯು ನಿನ್ನ ಸಾನ್ನಿಧ್ಯದಿಂದಾಗಿ ಇನ್ನೂ ಹೆಚ್ಚಾಗಿ ಬೆಳಗುತ್ತದೆ. ನಿಶ್ಚಯವಾಗಿಯೂ ಇಂದು ಅತಿಥಿಶ್ರೇಷ್ಠನಾದ, ನಿರ್ಭಯವೀರನಾದ ನಿನ್ನನ್ನು ವೈವಸ್ವತ (ಯಮ), ವರುಣ, ಇಂದ್ರ, ಕುಬೇರ–ಇವರು ಆದರಪೂರ್ವಕವಾಗಿ ಸತ್ಕರಿಸುತ್ತಾರೆ.”

ಮಹಾರಾಜ! ಈ ರೀತಿಯಲ್ಲಿ ಬಹಳವಾಗಿ ಗೋಳಾಡುತ್ತಾ–ಭಿನ್ನವಾದ ಹಡಗು ಸಮುದ್ರದಲ್ಲಿ ಮುಳುಗಿಹೋಗುವ ಸಮಯದಲ್ಲಿ ವ್ಯಾಪಾರಿಯು ಗೋಳಾಡುವಂತೆ–ಮಹಾದುಃಖದಿಂದ ಕೂಡಿದ್ದ ಅರ್ಜುನನು ಯುಧಿಷ್ಠಿರನನ್ನು ಪ್ರಶ್ನಿಸಿದನು:

“ಕುರುನಂದನ! ಅಭಿಮನ್ಯುವು ಶ್ರೇಷ್ಠರಾದ ವೀರರೊಡನೆ ಯುದ್ಧ ಮಾಡುತ್ತಾ, ರಣಭೂಮಿಯಲ್ಲಿ ಶತ್ರುಗಳನ್ನು ಸಂಹಾರಮಾಡುತ್ತಾ ಯುದ್ಧಾಭಿಮುಖವಾಗಿಯೇ ಇದ್ದಾಗ ಶಸ್ತ್ರದಿಂದ ಮರಣಹೊಂದಿ ಸ್ವರ್ಗಕ್ಕೆ ಹೋದನೇ? ಬಹುಸಂಖ್ಯಾತರಾದ, ಪ್ರಯತ್ನಶೀಲರಾದ ನರಶ್ರೇಷ್ಠರೊಡನೆ ಯುದ್ಧಮಾಡುತ್ತಿದ್ದ ಅವನು ಅಸಹಾಯಕನಾಗಿದ್ದಾಗ ಸಹಾಯಾರ್ಥವಾಗಿ ನಿಶ್ಚಯವಾಗಿಯೂ ನನ್ನನ್ನು ಸ್ಮರಿಸಿರಲೇಬೇಕು. ಕರ್ಣ-ದ್ರೋಣ-ಕೃಪಾದಿ ಗಳು ಶುದ್ಧಿಮಾಡಿದ ಅಗ್ರಭಾಗಗಳಿಂದ ಕೂಡಿದ್ದ, ತೀಕ್ಷ್ಣವಾದ, ಅನೇಕ ವಿಧವಾದ ಬಾಣಗಳಿಂದ ನನ್ನ ಮಗನನ್ನು ಪೀಡಿಸುತ್ತಿರಲಾಗಿ, ಆ ಮಹಾಯೋಧರೊಡನೆ ಸೆಣೆಸಿ ಸೊರಗಿದ ನನ್ನ ಮಗನು ‘ಈ ಸಮಯದಲ್ಲಿ

ನನ್ನ ತಂದೆಯು ನನ್ನ ರಕ್ಷಣೆಗೆ ಬರಬಹುದು’–ಎಂಬುದಾಗಿ ಪುನಃ ಪುನಃ ಹೇಳಿಕೊಂಡು ವಿಲಪಿಸುತ್ತಿದ್ದಾಗ ಕ್ರೂರಿಗಳಾದ ನಮ್ಮ ಶತ್ರುಗಳು ಅವನನ್ನು ಸಂಹರಿಸಿರಬಹುದೆಂದು ನಾನು ಭಾವಿಸುತ್ತೇನೆ. ಇಲ್ಲ; ನಾನು ಸೌಭದ್ರನ ವಿಷಯದಲ್ಲಿ ಹಾಗೆ ಹೇಳಬಾರದು. ಅವನು ನನ್ನ ಮಗ. ಮೇಲಾಗಿ ಶ್ರೀಕೃಷ್ಣನ ಸೋದರಳಿಯ. ಅದಕ್ಕಿಂತಲೂ ಮಿಗಿಲಾಗಿ ವೀರಮಾತೆಯಾದ ಸುಭದ್ರೆಯಲ್ಲಿ ಹುಟ್ಟಿದವನು. ಅವನು ರಣಾಂಗಣದಲ್ಲಿ ಶತ್ರುಗಳ ಮುಂದೆ ಅಳುವುದೆಂದರೇನು? ಅವನ ವಿಷಯದಲ್ಲಿ ಈ ಮಾತು ಸಲ್ಲದು. ಅಣ್ಣ! ನಿಶ್ಚಯವಾಗಿಯೂ ನನ್ನ ಹೃದಯವು ವಜ್ರದ ಸಾರದಿಂದ ಮಾಡಿದ್ದಾಗಿರಬೇಕು. ಏಕೆಂದರೆ ರಕ್ತಾಕ್ಷನಾದ ದೀರ್ಘಬಾಹುವಾದ ನನ್ನ ಪ್ರಿಯಪುತ್ರನನ್ನು ನೋಡದಿದ್ದರೂ ಅದು ಸೀಳಿಹೋಗಿಲ್ಲವಲ್ಲವೇ? ಶ್ರೀಕೃಷ್ಣನ ಸೋದರಳಿಯನ ಮೇಲೆ, ನನ್ನ ಮಗನ ಮೇಲೆ, ಇನ್ನೂ ಬಾಲಕನ ಮೇಲೆ ಕ್ರೂರಿಗಳಾದ ಮಹಾಧನುಷ್ಮಂತರಾದ ಕೌರವಯೋಧರು ಮರ್ಮಸ್ಥಳಗಳನ್ನು ಭೇದಿಸುವ ಬಾಣಗಳನ್ನು ಹೇಗೆ ಬಿಟ್ಟರು? ಶತ್ರುಗಳನ್ನು ಸಂಹರಿಸಿ ಶಿಬಿರಕ್ಕೆ ಬರುತ್ತಿದ್ದ ನನ್ನನ್ನು ಅನುದಿನವೂ ಪ್ರಫುಲ್ಲವಾದ ಮನಸ್ಸಿನಿಂದ ಕೂಡಿದ ಅಭಿಮನ್ಯುವು ಮುಂದೆ ಬಂದು ಅಭಿನಂದಿಸುತ್ತಿದ್ದನು. ಈಗವನು ನನ್ನನ್ನೇಕೆ ಬಂದು ನೋಡುತ್ತಿಲ್ಲ? ನಿಜ ಹೇಳಣ್ಣ! ನಿಶ್ಚಯವಾಗಿಯೂ ಅವನು ಶತ್ರುಗಳಿಂದ ಹತನಾಗಿ ರಕ್ತದಿಂದ ತೋಯ್ದವನಾಗಿ, ಭೂಮಿಯ ಮೇಲೆ ಬೀಳಿಸಲ್ಪಟ್ಟ ಸೂರ್ಯನಂತೆ-ತನ್ನ ಶರೀರಕಾಂತಿಯಿಂದ ರಣಾಂಗಣವನ್ನೇ ಶೋಭಾಯಮಾನವನ್ನಾಗಿ ಮಾಡುತ್ತಾ ಅಲ್ಲಿಯೇ ಮಲಗಿರಬಹುದಲ್ಲವೇ? ಸುಭದ್ರೆಯ ವಿಷಯವಾಗಿ ನಾನು ದುಃಖಪಡುತ್ತೇನೆ. ಯುದ್ಧದಲ್ಲಿ ಶತ್ರುಗಳಿಗೆ ಬೆನ್ನು ತೋರಿಸದೆ ತನ್ನ ಮಗನು ಕಾಳಗದಲ್ಲಿ ಹತನಾದನೆಂಬುದನ್ನು ಕೇಳಿ ಶೋಕಾತುರೆಯಾಗಿ ಪ್ರಾಣವನ್ನೇ ಬಿಡುತ್ತಾಳೆ. ಪ್ರಿಯಪುತ್ರನಾದ ಅಭಿಮನ್ಯುವನ್ನು ಕಾಣದ ಸುಭದ್ರೆಯು ನನಗೆ ಏನು ಹೇಳಿಯಾಳು? ದ್ರೌಪದಿಯಾದರೂ ನನ್ನೊಡನೆ ಏನು ಹೇಳುವಳು? ಪುತ್ರಶೋಕದಿಂದ ಸಂತಪ್ತರಾದ ಸುಭದ್ರಾ-ದ್ರೌಪದಿಯರಿಗೆ ನಾನೇನು ಹೇಳಲಿ? ನಿಶ್ಚಯವಾಗಿಯೂ ನನ್ನ ಹೃದಯವು ವಜ್ರದ ಸಾರದಿಂದಲೇ ಮಾಡಿದ್ದಾಗಿದೆ. ಶೋಕದಿಂದ ಸಂಕಟಪಡುತ್ತಿರುವ, ರೋದನಮಾಡುತ್ತಿರುವ, ನನ್ನ ಸೊಸೆಯಾದ ಉತ್ತರೆ

ಯನ್ನು ನೋಡಿದ ಮೇಲೆಯೂ ನನ್ನ ಎದೆಯು ಸಾವಿರ ಚೂರುಗಳಾಗಿ ಸೀಳಿಹೋಗಿಲ್ಲ. ವಿಜಯದಿಂದ ಕೊಬ್ಬಿಹೋದ ಧೃತರಾಷ್ಟ್ರನ ಮಕ್ಕಳ ಸಿಂಹನಾದಗಳು ನನಗೆ ಕೇಳಿಸಿತು. ಯುಯುತ್ಸುವು ಕೌರವವೀರರನ್ನು ನಿಂದಿಸುತ್ತಾ ಹೇಳುತ್ತಿದ್ದ ಮಾತೂ ಕೃಷ್ಣನಿಗೆ ಕೇಳಿಸಿತು.

"ಧರ್ಮವೆಂದರೇನೆಂಬುದನ್ನೇ ತಿಳಿಯದ ಮಹಾರಥರೇ! ಅರ್ಜುನನನ್ನು ಎದುರಿಸಲು ನಿಮಗೆ ಸಾಧ್ಯವಾಗದೇ ಇದ್ದಾಗ ಮಹಾರಥರೆಲ್ಲರೂ ಸೇರಿ ಬಾಲಕನೊಬ್ಬನನ್ನು ಕೊಂದು ಏಕೆ ಸಂತೋಷಪಡುವಿರಿ? ಪಾಂಡವರ ಬಲವೆಷ್ಟು?–ಎಂಬುದನ್ನು ನಾಳೆಯೇ ಕಾಣುವಿರಿ. ರಣಕ್ಷೇತ್ರದಲ್ಲಿ ಕೃಷ್ಣಾರ್ಜುನರಿಬ್ಬರಿಗೂ ಅಪರಾಧವನ್ನೆಸಗಿದ ಕಾರಣದಿಂದ ನಿಮಗೆ ದುಃಖದ ಕಾಲವು ಸನ್ನಿಹಿತವಾಗಿದೆ. ಇಂತಹ ಸಮಯದಲ್ಲಿ ನೀವು ಕೇವಲ ಬಾಲಕನೊಬ್ಬನ ವಧೆಮಾಡಿದುದಕ್ಕಾಗಿ ಪ್ರಸನ್ನಾತ್ಮರಾಗಿ ಸಿಂಹನಾದಗಳನ್ನು ಮಾಡುತ್ತಿರುವಿರಿ. ಪಾಪಕರ್ಮದ ಫಲವು ನಿಮಗೆ ಬಹಳ ಶೀಘ್ರವಾಗಿ ಲಭಿಸಲಿದೆ. ತೀವ್ರತರವಾದ ಅಧರ್ಮಕಾರ್ಯವನ್ನು ಮಾಡಿರುವ ನಿಮಗೆ ಅದರ ದುಷ್ಫಲವು ಪ್ರಾಪ್ತವಾಗಲು ವಿಳಂಬವಾಗುವುದಕ್ಕೆ ಕಾರಣವೇನಿದೆ?"

ಅಣ್ಣ! ಹೀಗೆಂಬುದಾಗಿ ಮಹಾಮತಿಯಾದ, ಧೃತರಾಷ್ಟ್ರನ ವೈಶ್ಯಸ್ತ್ರೀ ಪುತ್ರನಾದ ಯುಯುತ್ಸುವು ಕೌರವರೊಡನೆ ಹೇಳಿ ಕೋಪ-ದುಃಖ ಸಮನ್ವಿತನಾಗಿ ಶಸ್ತ್ರತ್ಯಾಗಮಾಡಿ ರಣರಂಗದಿಂದ ಹೊರಟು ಬಂದನು."

ಅರ್ಜುನನು ಶ್ರೀಕೃಷ್ಣನ ಕಡೆಗೆ ತಿರುಗಿ ಬಹಳ ವಿಷಾದದಿಂದ ಹೇಳಿದನು: "ಕೃಷ್ಣ! ಈ ವಿಷಯವನ್ನು ನೀನು ರಣಾಂಗಣದಲ್ಲಿಯೇ ನನಗೇಕೆ ಹೇಳಲಿಲ್ಲ? ಆಗಲೇ ನಾನು ಕ್ರೂರಿಗಳಾದ ಆ ಮಹಾರಥರೆಲ್ಲರನ್ನೂ ಸುಟ್ಟು ಹಾಕಿಬಿಡುತ್ತಿದ್ದೆನು."

ಮಹಾರಾಜ! ಈ ರೀತಿಯಲ್ಲಿ ಪುತ್ರಶೋಕದಿಂದ ಪೀಡಿತನಾಗಿ ಮತ್ತು ಅಭಿಮನ್ಯುವನ್ನೇ ಕುರಿತು ಚಿಂತಿಸುತ್ತಾ ಕಂಬನಿದುಂಬಿದ್ದ ಅರ್ಜುನನನ್ನು ಶ್ರೀಕೃಷ್ಣನು ಸಮಾಧಾನಮಾಡತೊಡಗಿದನು. ಪುತ್ರಶೋಕವೆಂಬ ದುಃಖ ಸಾಗರದಲ್ಲಿ ಮುಳುಗಿಹೋಗಿದ್ದ, ತೀವ್ರತರವಾದ ಶೋಕಕ್ಕೆ ಈಡಾಗಿದ್ದ ಅರ್ಜುನನನ್ನು ತಬ್ಬಿಕೊಂಡು ಶ್ರೀಕೃಷ್ಣನು ಹೇಳಿದನು:

" ಮೈವಂ" ಅರ್ಜುನ! ಹೀಗೆ ದುಃಖಿಸುತ್ತಾ ಕೂಡಬೇಡ.

**ಸರ್ವೇಷಾಮೇಷ ವೈ ಪನ್ಥಾಃ ಶೂರಾಣಾಮನಿವರ್ತಿನಾಮ್. ।**
**ಕ್ಷತ್ರಿಯಾಣಾಂ ವಿಶೇಷೇಣ ಯೇಷಾಂ ಯುದ್ಧೇನ ಜೀವಿಕಾ ॥೬೭॥**

ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸದೇ ಯುದ್ಧಮಾಡುವ, ಯುದ್ಧಜೀವಿಗಳಾದ ಎಲ್ಲ ಶೂರರಿಗೂ ಇದೇ ಮಾರ್ಗವೇ ನಿಯುಕ್ತವಾಗಿದೆ. ಅದರಲ್ಲಿಯೂ ವಿಶೇಷವಾಗಿ ಕ್ಷತ್ರಿಯರಿಗೆ ಈ ಮಾರ್ಗವು ಆದರಣೀಯವಾಗಿದೆ.

**ಏಷಾ ವೈ ಯುಧ್ಯಮಾನಾನಾಂ ಶೂರಾಣಾಮನಿವರ್ತಿನಾಮ್।**
**ವಿಹಿತಾ ಸರ್ವಶಾಸ್ತ್ರಜ್ಞೈರ್ಗತಿರ್ಮತಿಮತಾಂ ವರ ॥೬೮॥**

ಬುದ್ಧಿವಂತರಲ್ಲಿ ಶ್ರೇಷ್ಠನಾದವನೇ! ಯುದ್ಧದಿಂದ ಹಿಂದಿರುಗದೇ ಯುದ್ಧಾಸಕ್ತರಾದ ಎಲ್ಲ ಶೂರ-ವೀರರಿಗೂ ಇದೇ ಮಾರ್ಗವು ವಿಹಿತವಾದುದೆಂದು ಸರ್ವಶಾಸ್ತ್ರಗಳನ್ನೂ ತಿಳಿದಿರುವ ವಿದ್ವಾಂಸರಿಂದ ನಿಶ್ಚಯಿಸಲ್ಪಟ್ಟಿದೆ.

ಯುದ್ಧದಿಂದ ಪರಾಙ್ಮುಖನಾಗುವುದಿಲ್ಲವೆಂದು ಪ್ರತಿಜ್ಞೆಮಾಡಿ ಯುದ್ಧದಲ್ಲಿ ತೊಡಗುವ ವೀರರಿಗೆ ಮರಣವು ನಿಶ್ಚಿತವೇ ಆಗಿದೆ. ಅಂತೆಯೇ ಅವರಿಗೆ ಸ್ವರ್ಗಪ್ರಾಪ್ತಿಯೂ ಸ್ವತಃ ಸಿದ್ಧವಾಗಿರುತ್ತದೆ. ಅಭಿಮನ್ಯುವೂ ಪುಣ್ಯಮಾಡಿದವರಿಗೆ ಪ್ರಾಪ್ತವಾಗುವ ಲೋಕಗಳನ್ನೇ ಪಡೆದಿರುತ್ತಾನೆ. ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಭರತಶ್ರೇಷ್ಠನೇ! ಯುದ್ಧದಲ್ಲಿ ಶತ್ರು ಗಳನ್ನು ಎದುರಿಸಿ ಹೋರಾಡಿ ಮರಣವನ್ನು ಹೊಂದಬೇಕೆನ್ನುವುದು ಸರ್ವವೀರರ ಆಕಾಂಕ್ಷೆಯೂ ಆಗಿದೆ. ಅಭಿಮನ್ಯುವೂ ಮಹಾಬಲಿಷ್ಠರಾದ, ವೀರರಾದ ರಾಜಪುತ್ರರನ್ನು ಯುದ್ಧದಲ್ಲಿ ಸಂಹಾರಮಾಡಿ ವೀರರಿಂದ ಅಭಿಲಷಿತವಾದ ಮರಣವನ್ನು–ಯುದ್ಧಾಭಿಮುಖನಾಗಿದ್ದಾಗಲೇ ಪಡೆದು ಕೊಂಡನು. ಪುರುಷವ್ಯಾಘ್ರನೇ! ಖಂಡಿತವಾಗಿಯೂ ನಿನ್ನ ಮಗನು ವೀರಕ್ಷತ್ರಿ ಯರಿಗೆ ಉಚಿತವಾದ ರೀತಿಯಲ್ಲಿ ಮರಣಹೊಂದಿರುವುದಕ್ಕಾಗಿ ದುಃಖಿಸ ಬೇಡ. ಪ್ರಾಚೀನಧರ್ಮಶಾಸ್ತ್ರಕಾರರು ಸಂಗ್ರಾಮದಲ್ಲಿ ಮರಣಹೊಂದುವುದು

ಕ್ಷತ್ರಿಯರಿಗೆ ಸನಾತನಧರ್ಮವೆಂದು ನಿಶ್ಚಯಮಾಡಿರುತ್ತಾರೆ. ಭರತ ಸತ್ತಮನೇ! ನೀನು ದುಃಖಪಡುತ್ತಿರಲಾಗಿ ನಿನ್ನ ಈ ಸಹೋದರರು, ರಾಜರು, ಸುಹೃದರು ಎಲ್ಲರೂ ದೀನಚಿತ್ತರಾಗಿದ್ದಾರೆ. ಮಾನದನೇ! ಇವರೆಲ್ಲರನ್ನೂ ನೀನು ಸಮಾಧಾನಪೂರ್ವಕವಾದ ಆಶ್ವಾಸನೆಯ ಮಾತುಗಳಿಂದ ಸಂತೈಸು. ತಿಳಿದುಕೊಳ್ಳಬೇಕಾದ ತತ್ತ್ವಗಳೆಲ್ಲವನ್ನೂ ನೀನು ತಿಳಿದುಕೊಂಡಿರುವೆ. ಆದುದರಿಂದ ನೀನು ಶೋಕಪಡುವುದು ಯುಕ್ತವಲ್ಲ."

ಅದ್ಭುತಕರ್ಮನಾದ ಶ್ರೀಕೃಷ್ಣನು ಹೀಗೆ ಅರ್ಜುನನನ್ನು ಸಂತೈಸಿದ ನಂತರ, ಅರ್ಜುನನು-ಮಾತನಾಡಲೂ ಸಾಧ್ಯವಾಗದೇ ಇದ್ದ ಪರಿಸ್ಥಿತಿಯಲ್ಲಿದ್ದ ತನ್ನ ಸೋದರರರನ್ನು ಕೇಳಿದನು:

"ಸಹೋದರರರೇ! ದೀರ್ಘಬಾಹುವಾದ, ದಪ್ಪವಾದ ಹೆಗಲುಗಳನ್ನು ಹೊಂದಿದ್ದ, ನೀಳವಾದ ಮತ್ತು ಕಮಲದಂತಿರುವ ಕಣ್ಣುಗಳನ್ನು ಹೊಂದಿದ್ದ ಅಭಿಮನ್ಯುವು ರಣರಂಗದಲ್ಲಿ ಯಾವ ರೀತಿ ನಡೆದುಕೊಂಡನು? (ಯಾವ ರೀತಿ ಮರಣಹೊಂದಿದನು?) ಈ ವಿಷಯವನ್ನು ನಿಮ್ಮಿಂದ ಕೇಳಿ ತಿಳಿಯಬೇಕೆಂದಿರುತ್ತೇನೆ. ನನ್ನ ಮಗನ ವೈರಿಗಳಾದವರನ್ನೂ, ಅವರ ರಥ-ಗಜಾಶ್ವಗಳನ್ನೂ ಅವರ ಸಂಬಂಧಿಗಳ ಸಮೇತವಾಗಿ ನಾನು ಧ್ವಂಸಮಾಡುವುದನ್ನು ನೀವು ನಾಳೆಯೇ ಕಾಣುತ್ತೀರಿ. ಆದರೆ ನನಗೊಂದು ಸಂಶಯವು ಮೂಡಿದೆ. ನೀವೆಲ್ಲರೂ ಅಸ್ತ್ರವಿದ್ಯಾನಿಪುಣರಾಗಿರುತ್ತೀರಿ. ಯುದ್ಧಸಮಯದಲ್ಲಿ ನೀವೆಲ್ಲರೂ ಶಸ್ತ್ರಪಾಣಿಗಳಾಗಿಯೇ ಇದ್ದಿರಿ. ಹೀಗಿರುವಾಗ ವಜ್ರಪಾಣಿಯಾದ ಇಂದ್ರನೇ ಯುದ್ಧಕ್ಕೆ ಬಂದಿದ್ದರೂ ಅಭಿಮನ್ಯುವು ಹೇಗೆ ಮರಣಹೊಂದಲು ಸಾಧ್ಯ? ಒಂದು ವೇಳೆ ಪಾಂಡು-ಪಾಂಚಾಲಯೋಧರೆಲ್ಲರೂ ಸೇರಿಯೂ ನನ್ನ ಮಗನನ್ನು ರಕ್ಷಿಸಲು ಅಶಕ್ತರೆಂಬುದು ನನಗೆ ಮೊದಲೇ ತಿಳಿದಿದ್ದರೆ ಮಗನ ರಕ್ಷಣೆಗೆ ನಾನೇ ಬರುತ್ತಿದ್ದೆನು. ರಥಗಳಲ್ಲಿ ಕುಳಿತು ಬಾಣಗಳನ್ನು ಸುರಿಸುತ್ತಿದ್ದ ನಿಮ್ಮೆಲ್ಲರನ್ನೂ ತೃಣೀಕರಿಸಿ ನಮ್ಮ ಶತ್ರುಗಳು ಅಭಿಮನ್ಯುವನ್ನು ಹೇಗೆ ಸಂಹರಿಸಿದರು?

**ಅಹೋ ವಃ ಪೌರುಷಂ ನಾಸ್ತಿ ನ ಚ ವೋಽಸ್ತಿ ಪರಾಕ್ರಮಃ।**
**ಯತ್ರಾಭಿಮನ್ಯುಃ ಸಮರೇ ಪಶ್ಯತಾಂ ವೋ ನಿಪಾತಿತಃ ॥೮೧॥**

ನಿಶ್ಚಯವಾಗಿಯೂ ನಿಮಗೆ ಪೌರುಷವೂ ಇಲ್ಲ; ಪರಾಕ್ರಮವೂ ಇಲ್ಲ. ನೀವೆಲ್ಲರೂ ನೋಡುತ್ತಿರುವಂತೆಯೇ ಅಭಿಮನ್ಯುವು ಶತ್ರುಗಳಿಂದ

ಹತನಾದನಲ್ಲವೇ? ಆದರೆ ಈಗ ನಿಮ್ಮನ್ನು ನಿಂದಿಸಿ ಯಾವ ಪ್ರಯೋಜನವೂ ಇಲ್ಲ. ನಾನು ಮಾಡಿದ ಅಕೃತ್ಯಕ್ಕಾಗಿ ನಾನೇ ನನ್ನನ್ನು ನಿಂದಿಸಿಕೊಳ್ಳಬೇಕಾಗಿದೆ. ಏಕೆಂದರೆ: ಅತ್ಯಂತದುರ್ಬಲರಾದ, ಶತ್ರುವನ್ನು ಜಯಿಸಬೇಕೆಂಬ ದೃಢನಿಶ್ಚಯವಿಲ್ಲದ, ಭೀರುಗಳಾದ ನಿಮ್ಮ ರಕ್ಷಣೆಗೆ ಅಭಿಮನ್ಯುವನ್ನು ಒಪ್ಪಿಸಿ ನಾನು ಹೊರಟುಹೋದೆನಲ್ಲವೇ?

**ಅಹೋಸ್ವಿದ್ಭೂಷಣಾರ್ಥಾಯ ವರ್ಮ ಶಸ್ತ್ರಾಯುಧಾನಿ ವಃ।**
**ವಾಚಸ್ತು ವಕ್ತುಂ ಸಂಸತ್ಸು ಮಮ ಪುತ್ರಮರಕ್ಷತಾಮ್ ॥೮೩॥**

ಅಥವಾ ನನ್ನ ಪುತ್ರನನ್ನು ರಕ್ಷಣೆಮಾಡಲು ಅಸಮರ್ಥರಾದ ಈ ನಿಮ್ಮ ಕವಚಗಳು, ಶಸ್ತ್ರಗಳು ಮತ್ತು ಆಯುಧಗಳು ಎಲ್ಲವೂ ಕೇವಲ ಭೂಷಣಾರ್ಥವಾದುವೇ ಸರಿ. ಸಭೆಗಳಲ್ಲಿ ಮಾತ್ರವೇ ವೀರಾವೇಶದಿಂದ ಮಾತನಾಡಲು ನೀವು ಸಮರ್ಥರು."

ಮಹಾರಾಜ ! ಅರ್ಜುನನು ಹೀಗೆ ಹೇಳಿ ಧನುಸ್ಸನ್ನೂ ಶ್ರೇಷ್ಠವಾದ ಕತ್ತಿಯನ್ನೂ ಹಿಡಿದು ಮೇಲೆದ್ದು ನಿಂತನು. ಆ ಸಮಯದಲ್ಲಿ ಅವನನ್ನು ತಲೆಯೆತ್ತಿ ನೋಡಲು ಕೂಡ ಯಾರೂ ಸಮರ್ಥರಾಗಲಿಲ್ಲ. ಅವನು ಆ ಸಮಯದಲ್ಲಿ ಯಮಧರ್ಮನಂತೆಯೇ ಪರಮಕ್ರುದ್ಧನಾಗಿದ್ದನು. ಬಾರಿ-ಬಾರಿಗೂ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದನು. ಪುತ್ರಶೋಕದಿಂದ ಪರಿತಪಿಸುತ್ತಿದ್ದನು. ಅವನ ಮುಖವೆಲ್ಲವೂ ಕಣ್ಣೀರಿನಿಂದ ತುಂಬಿ ಹೋಗಿದ್ದಿತು. ಅವನು ಅಂತಹ ಸ್ಥಿತಿಯಲ್ಲಿದ್ದಾಗ ಅವನೊಡನೆ ಮಾತನಾಡಲು ಮತ್ತು ಅವನ ಕಡೆಗೆ ನೋಡಲು ಶ್ರೀಕೃಷ್ಣನನ್ನು ಮತ್ತು ಜ್ಯೇಷ್ಠಭ್ರಾತೃವಾದ ಯುಧಿಷ್ಠಿರನನ್ನು ಬಿಟ್ಟು, ಮತ್ತಾವ ಸುಹೃದರೂ ಧೈರ್ಯಮಾಡಲಿಲ್ಲ. ಶ್ರೀಕೃಷ್ಣ ಮತ್ತು ಯುಧಿಷ್ಠಿರ- ಈ ಇಬ್ಬರು ಎಲ್ಲ ಸಮಯಗಳಲ್ಲಿಯೂ ಅರ್ಜುನನ ಹಿತೈಷಿಗಳಾಗಿಯೂ ಅವನ ಮನಸ್ಸನ್ನೇ ಅನುಸರಿಸುವವರಾಗಿಯೂ ಇದ್ದರು. ಅರ್ಜುನನಿಗೆ ಆ ಇಬ್ಬರಲ್ಲಿದ್ದ ಆದರ-ಗೌರವಗಳಿಂದಲೂ ಮತ್ತು ಪ್ರಿಯತ್ವ ದಿಂದಲೂ ಆ ಇಬ್ಬರು ಮಾತ್ರವೇ ಅವನೊಡನೆ ಮಾತನಾಡಲು ಯೋಗ್ಯ ರಾಗಿದ್ದರು. ಆ ಕಾರಣದಿಂದ ಪುತ್ರಶೋಕದಿಂದ ಅತ್ಯಂತವ್ಯಥಿತನಾಗಿದ್ದ, ಕ್ರುದ್ಧನಾಗಿದ್ದ, ಕಮಲಾಕ್ಷನಾದ ಅರ್ಜುನನನ್ನು ಕುರಿತು ಯುಧಿಷ್ಠಿರನು ಈ ಮಾತನ್ನು ಹೇಳಿದನು.

ಎ೨ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನಿಂದ ಅಭಿಮನ್ಯುವಿನ ವಧೆಯ ವೃತ್ತಾಂತವನ್ನು ಕೇಳಿದ ಅರ್ಜುನನು ಜಯದ್ರಥನನ್ನು ಸಂಹರಿಸುವುದಾಗಿ ಪ್ರತಿಜ್ಞೆ ಮಾಡಿದುದು

ಯುಧಿಷ್ಠಿರನು ಅರ್ಜುನನಿಗೆ ಹೇಳುತ್ತಾನೆ:

"ಮಹಾಬಾಹುವಾದ ಅರ್ಜುನನೇ! ನೀನು ಸಂಶಪ್ತಕಸೈನಿಕರೊಡನೆ ಯುದ್ಧಮಾಡಲು ಹೊರಟುಹೋದನಂತರ ನನ್ನನ್ನು ಜೀವಸಹಿತವಾಗಿ ಬಂಧಿಸಲು ಆಚಾರ್ಯರು ಬಹಳವಾಗಿ ಪ್ರಯತ್ನಿಸಿದರು. ರಥಸೈನ್ಯದ ಪ್ರತಿವ್ಯೂಹವನ್ನು ರಚಿಸಿಕೊಂಡು ನನ್ನ ಗ್ರಹಣಕ್ಕಾಗಿ ಬಾರಿ-ಬಾರಿಗೂ ಪ್ರಯತ್ನಿಸುತ್ತಿದ್ದ ದ್ರೋಣರನ್ನು-ವ್ಯೂಹಕ್ರಮದಲ್ಲಿ ಸೈನ್ಯವನ್ನು ಸಜ್ಜುಗೊಳಿಸಿದ್ದ ನಾವೂ ಸಹ ಎಲ್ಲ ಕಡೆಗಳಿಂದಲೂ ಅವರು ಮುಂದೆ ಬರದಂತೆ ತಡೆಯುತ್ತಿದ್ದೆವು.

ನಮ್ಮ ಕಡೆಯ ರಥಿಕರು ಆಚಾರ್ಯ ದ್ರೋಣರನ್ನು ಮುಂದೆ ಬರದಂತೆ ತಡೆಯುತ್ತಿದ್ದರು. ನಾನೂ ಸುರಕ್ಷಿತನಾಗಿಯೇ ಇದ್ದೆನು. ಆ ಸಮಯದಲ್ಲಿ ಆಚಾರ್ಯರು ನಿಶಿತವಾದ ಬಾಣಗಳಿಂದ ನಮ್ಮನ್ನು ಬಹುವಾಗಿ ಪೀಡಿಸುತ್ತಾ ನಮ್ಮ ಕಡೆಗೆ ರಭಸದಿಂದ ನುಗ್ಗಿದರು. ದ್ರೋಣರಿಂದ ಪೀಡಿಸಲ್ಪಡುತ್ತಿದ್ದ ನಾವು ದ್ರೋಣರ ಸೈನ್ಯವ್ಯೂಹದ ಕಡೆಗೆ ನೋಡಲು ಕೂಡ ಅಸಮರ್ಥರಾದೆವು. ನೋಡುವುದಕ್ಕೇ ಸಾಧ್ಯವಾಗದಿದ್ದಾಗ ಆ ವ್ಯೂಹವನ್ನು ಭೇದಿಸುವ ಸಾಧ್ಯತೆಯೇ ಇರಲಿಲ್ಲ. ಆ ಸಮಯದಲ್ಲಿ ನಾವೆಲ್ಲರೂ ಅಪ್ರತಿಮವೀರ್ಯನಾದ ನಿನ್ನ ಮಗನಾದ ಸೌಭದ್ರನಿಗೆ ಚಕ್ರವ್ಯೂಹವನ್ನು ಭೇದಿಸುವಂತೆ ಹೇಳಿದೆವು. ನಮ್ಮಿಂದ ಪ್ರೇರಿತನಾದೊಡನೆಯೇ ವೀರ್ಯವಂತನಾದ ಅಭಿಮನ್ಯುವು–ಒಳ್ಳೆಯ ಜಾತಿಯ ಕುದುರೆಯಂತೆ–ವಹಿಸಿಕೊಳ್ಳಲು ಅಸಾಧ್ಯವಾದ ಗುರುತರವಾದ ಭಾರವನ್ನೂ ವಹಿಸಿಕೊಳ್ಳಲು ಪ್ರಯತ್ನಿಸಿದನು. ನೀನು ಮಾಡಿದ್ದ ಅಸ್ತ್ರೋಪದೇಶದ ಬಲದಿಂದಲೂ, ವೀರ್ಯದಿಂದಲೂ ಕೂಡಿದ್ದ ಬಾಲನಾದ ಅಭಿಮನ್ಯುವು ಸಮುದ್ರದ ಮೇಲೆ ಗರುಡನು ಹಾರಿಹೋಗುವಂತೆ–ದ್ರೋಣರ ಚಕ್ರವ್ಯೂಹವನ್ನು ಪ್ರವೇಶಿಸಿದನು. ಅವನು ಪ್ರವೇಶಿಸಿದ

ಮಾರ್ಗದಿಂದಲೇ ನಾವೆಲ್ಲರೂ ವ್ಯೂಹವನ್ನು ಪ್ರವೇಶಿಸಲು ಇಚ್ಛಿಸಿದವರಾಗಿ ಸುಭದ್ರೆಯ ಮಗನಾದ ಅಭಿಮನ್ಯುವನ್ನೇ ಅನುಸರಿಸಿ ಹೋದೆವು. ಆದರೆ ಆ ಸಮಯದಲ್ಲಿ ಸಿಂಧುದೇಶದ ರಾಜನಾದ ಕ್ಷುದ್ರನಾದ ಜಯದ್ರಥನು-ರುದ್ರನ ವರದಾನದ ಪ್ರಭಾವದಿಂದ ನಮ್ಮೆಲ್ಲರನ್ನೂ ತಡೆದುಬಿಟ್ಟನು. ಅನಂತರ ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮಾ, ಬೃಹದ್ಬಲ ಮತ್ತು ಕೃತವರ್ಮಾ-ಈ ಆರು ಮಂದಿ ಮಹಾರಥರೂ ಅಭಿಮನ್ಯುವನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಆ ಆರು ಮಂದಿ ಮಹಾರಥರಿಂದ ಆಕ್ರಮಿತನಾದ, ಬಾಲನಾದ ಅಭಿಮನ್ಯುವು ಅವರೆಲ್ಲರನ್ನೂ ಜಯಿಸಲು ಬಹಳವಾಗಿ ಪ್ರಯತ್ನಿಸುತ್ತಿದ್ದನು. ಆದರೆ ಆರು ಮಂದಿ ಮಹಾರಥರೂ ಒಟ್ಟಾಗಿ ಅಭಿಮನ್ಯುವನ್ನು ರಥಹೀನನನ್ನಾಗಿ ಮಾಡಿದರು. ಅಭಿಮನ್ಯುವಿನ ಪ್ರಹಾರದಿಂದ ಪ್ರಾಣಸಂಕಟವನ್ನು ಅನುಭವಿಸುತ್ತಿದ್ದ ದುಃಶಾಸನನ ಮಗನು ಷಣ್ಮಹಾರಥರಿಂದ ರಥಹೀನನಾಗಿ ಮಾಡಲ್ಪಟ್ಟಿದ್ದ ಅಭಿಮನ್ಯುವನ್ನು ಬಹಳ ಶೀಘ್ರವಾಗಿ ಗದೆಯಿಂದ ಪ್ರಹರಿಸಿ ಸಂಹರಿಸಿದನು. ಅಭಿಮನ್ಯುವು ಅದಕ್ಕೆ ಮೊದಲು ಸಾವಿರಾರು ಗಜಾಶ್ವ-ರಥ-ಪದಾತಿಸೈನಿಕರನ್ನು ಸಂಹರಿಸಿದ್ದನು. ಎಂಟು ಸಾವಿರ ರಥಿಕರನ್ನೂ, ಒಂಬತ್ತು ನೂರು ಆನೆಗಳನ್ನೂ ಸೌಭದ್ರನು ಸಂಹರಿಸಿದ್ದನು. ಎರಡು ಸಾವಿರ ರಾಜಪುತ್ರರನ್ನೂ, ಗಣನೆಗೆ ಸಿಕ್ಕದ ಬಹುಸಂಖ್ಯಾತರಾದ ವೀರರನ್ನೂ ಸಂಹರಿಸಿ ಮಹಾರಥನಾದ ಬೃಹದ್ಬಲ ನನ್ನೂ ಸ್ವರ್ಗಕ್ಕೆ ಅತಿಥಿಯನ್ನಾಗಿ ಮಾಡಿದನು. ಇಂತಹ ಪರಮಾದ್ಭುತವಾದ ಸಾಹಸಕಾರ್ಯವನ್ನು ಮಾಡಿದನಂತರವೇ ಅಭಿಮನ್ಯುವು ಮೃತ್ಯುವಶ ನಾದನು. ನಮ್ಮೆಲ್ಲರಿಗೂ ಶೋಕವರ್ಧಕವಾದ ಅಭಿಮನ್ಯುವಿನ ಮರಣವು ಈ ರೀತಿಯಲ್ಲಿ ಸಂಭವಿಸಿತು. ಪುರುಷವ್ಯಾಘ್ರನಾದ ಅಭಿಮನ್ಯುವು ಈ ರೀತಿಯಲ್ಲಿ ಸ್ವರ್ಗಲೋಕವನ್ನು ಸೇರಿದನು."

ಮಹಾರಾಜ ! ಧರ್ಮರಾಜನು ಹೇಳಿದ ಮಾತನ್ನು ಕೇಳಿ ಅರ್ಜುನನು "ಹಾ ಪುತ್ರ!' -ಎಂದೆನ್ನುತ್ತಾ, ನಿಟ್ಟುಸಿರುಬಿಡುತ್ತಾ ಅತ್ಯಂತದುಃಖಿತನಾಗಿ ಭೂಮಿಯ ಮೇಲೆ ಬಿದ್ದುಬಿಟ್ಟನು. ಯುಧಿಷ್ಠಿರಾದಿಗಳೆಲ್ಲರೂ ಕುಂದಿದ ಮುಖದಿಂದ ಕೂಡಿದವರಾದರು. ದೀನರಾದ ಧರ್ಮಾದಿಗಳು ಧನಂಜಯನನ್ನು ಸುತ್ತುವರಿದು ಕುಳಿತು ಎವೆಯಿಕ್ಕದೇ ಪರಸ್ಪರವಾಗಿ ನೋಡುತ್ತಿದ್ದರು. ಸ್ವಲ್ಪಹೊತ್ತು ಕಳೆದನಂತರ ಅರ್ಜುನನು ಮೂರ್ಛೆಯಿಂದ

ಎಚ್ಚೆತ್ತು ಕ್ರೋಧಮೂರ್ಛಿತನಾಗಿ ಜ್ವರದಿಂದ ನಡುಗುತ್ತಿರುವನೋ ಎಂಬಂತೆ ಮೈ-ಕೈ-ಕಾಲುಗಳು ನಡುಗುತ್ತಿರಲು, ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಾ, ಒಂದು ಕೈಯಿಂದ ಮತ್ತೊಂದು ಕೈಯನ್ನು ಉಜ್ಜುತ್ತಾ, ಕಣ್ಣುಗಳಲ್ಲಿ ನೀರು ತುಂಬಿಕೊಂಡು ಉನ್ಮತ್ತನಂತೆ ಯಾವುದೋ ದಿಕ್ಕನ್ನು ನೋಡುತ್ತಾ ಈ ಮಾತನ್ನು ಹೇಳಿದನು:

**ಸತ್ಯಂ ವಃ ಪ್ರತಿಜಾನಾಮಿ ಶ್ವೋಽಸ್ಮಿ ಹನ್ತಾ ಜಯದ್ರಥಮ್।**
**ನ ಚೇದ್ವಧಭಯಾದ್ಭೀತೋ ಧಾರ್ತರಾಷ್ಟ್ರಾನ್ಪ್ರಹಾಸ್ಯತಿ ॥೨೦॥**

**ನ ಚಾಸ್ಮಾಞ್ಶರಣಂ ಗಚ್ಛೇತ್ಕೃಷ್ಣಂ ವಾ ಪುರುಷೋತ್ತಮಮ್ ।**
**ಭವನ್ತಂ ವಾ ಮಹಾರಾಜ ಶ್ವೋಽಸ್ಮಿ ಹನ್ತಾ ಜಯದ್ರಥಮ್ ॥೨೧॥**

"ತಮ್ಮೆಲ್ಲರ ಸಮ್ಮುಖದಲ್ಲಿ ನಾನು ಈ ಸತ್ಯಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ. ನಾನು ನಾಳೆಯೇ ಜಯದ್ರಥನನ್ನು ಸಂಹರಿಸುತ್ತೇನೆ. ಆದರೆ ಅವನು ತನ್ನ ವಧೆಯಾಗುವುದೆಂಬ ಭಯದಿಂದ ಕೌರವರ ಪಕ್ಷವನ್ನೇ ಬಿಟ್ಟು ಓಡಿಹೋಗದಿದ್ದರೆ–ನಮಗೆ ಅಥವಾ ಪುರುಷೋತ್ತಮನಾದ ಶ್ರೀಕೃಷ್ಣನಿಗೆ ಅಥವಾ ನಿನಗೆ (ಯುಧಿಷ್ಠಿರನಿಗೆ) ಶರಣಾಗತನಾಗದಿದ್ದರೆ–ನಾಳೆಯೇ ಅವನನ್ನು ಸಂಹರಿಸುತ್ತೇನೆ. ಧೃತರಾಷ್ಟ್ರನ ಮಕ್ಕಳಿಗೆ ಪ್ರಿಯಕರನಾದ, ಹಿಂದೆ ನಾನು ಅವನ ವಿಷಯದಲ್ಲಿ ತೋರಿದ್ದ ಸೌಹಾರ್ದವನ್ನು ಮರೆತಿರುವ (ದ್ರೌಪದಿಯನ್ನು ಅಪಹರಿಸಿದ ಕಾಲದಲ್ಲಿ ಪ್ರಾಣವನ್ನು ಉಳಿಸಿದುದನ್ನೂ ಮರೆತಿರುವ,) ಬಾಲಕನಾದ ಅಭಿಮನ್ಯುವಿನ ಸಂಹಾರಕ್ಕೆ ಕಾರಣನಾದ, ಪಾಪಿಷ್ಠನಾದ ಜಯದ್ರಥನನ್ನು ನಾನು ನಾಳೆಯೇ ಕೊಲ್ಲುತ್ತೇನೆ. ಯುದ್ಧದಲ್ಲಿ ಜಯದ್ರಥನನ್ನು ರಕ್ಷಣೆಮಾಡುತ್ತಾ, ಯಾವ ಕೆಲವರು ನನ್ನೊಡನೆ ಯುದ್ಧಮಾಡಲು ಬರುತ್ತಾರೆಯೋ ಅವರು ದ್ರೋಣ-ಕೃಪರೇ ಆಗಿದ್ದರೂ ಅವರೆಲ್ಲರನ್ನೂ ನಾನು ಬಾಣಗಳಿಂದ ಮುಚ್ಚಿಬಿಡುತ್ತೇನೆ.

ಪುರುಷರ್ಷಭರೇ! ನಾಳಿನ ಯುದ್ಧದಲ್ಲಿ ನಾನು ಹೀಗೆ ಮಾಡದಿದ್ದರೆ ಶೂರಸಮ್ಮತವಾದ ಪುಣ್ಯಲೋಕಗಳು ನನಗೆ ಲಭ್ಯವಾಗದೇ ಇರಲಿ.

**ಯೇ ಲೋಕಾ ಮಾತೃಹನ್ತೄಣಾಂ ಯೇ ಚಾಪಿ ಪಿತೃಘಾತಿನಾಮ್।**
**ಗುರುದಾರಗತಾನಾಂ ಯೇ ಪಿಶುನಾನಾಂ ಚ ಯೇ ಸದಾ ॥೨೫॥**

ಸಾಧೂನಸೂಯತಾಂ ಯೇ ಚ ಯೇ ಚಾಪಿ ಪರಿವಾದಿನಾಮ್।
ಯೇ ಚ ನಿಕ್ಷೇಪಹರ್ತೄಣಾಂ ಯೇ ಚ ವಿಶ್ವಾಸಘಾತಿನಾಮ್ ॥೨೬॥

ಭುಕ್ತಪೂರ್ವಾಂ ಸ್ತ್ರಿಯಂ ಯೇ ಚ ವಿನ್ದತಾಮಘಶಂಸಿನಾಮ್ ।
ಬ್ರಹ್ಮಘ್ನಾನಾಂ ಚ ಯೇ ಲೋಕಾ ಯೇ ಚ ಗೋಘಾತಿನಾಮಪಿ॥

ಪಾಯಸಂ ವಾ ಯವಾನ್ನಂ ವಾ ಶಾಕಂ ಕೃಸರಮೇವ ವಾ ।
ಸಂಯಾವಾಪೂಪಮಾಂಸಾನಿ ಯೇ ಚ ಲೋಕಾ ವೃಥಾಶ್ನತಾಮ್।
ತಾನಹ್ನಾಯಾಧಿಗಚ್ಛೇಯಂ ನ ಚೇದ್ಧನ್ಯಾಂ ಜಯದ್ರಥಮ್ ॥೨೮॥

ಮಾತಾ-ಪಿತೃಗಳ ಹತ್ಯೆಮಾಡಿದವರಿಗೆ, ಗುರುಪತ್ನಿಯನ್ನು ಉಪಭೋಗಿಸುವವರಿಗೆ, ಚಾಡಿಕೋರರಿಗೆ, ಸಾಧುಗಳನ್ನು ನಿಂದಿಸುವವರಿಗೆ, ಇತರರ ಮೇಲೆ ಮಿಥ್ಯಾಪವಾದವನ್ನು ಹೊರಿಸುವವರಿಗೆ, ವಿಶ್ವಾಸದಿಂದ ಇಟ್ಟ ನಿಧಿಯನ್ನು ಅಪಹರಿಸುವವರಿಗೆ, ವಿಶ್ವಾಸಘಾತಿಗಳಿಗೆ, ಒಬ್ಬರು ಉಪಭೋಗಿಸಿದ ಸ್ತ್ರೀಯನ್ನು ಪಾಣಿಗ್ರಹಣಮಾಡಿಕೊಳ್ಳುವವರಿಗೆ, ಯಾವಾಗಲೂ ಪಾಪಕರವಾದ ಮಾತುಗಳನ್ನೇ ಆಡುತ್ತಿರುವವರಿಗೆ, ಬ್ರಹ್ಮಹತ್ಯೆಯನ್ನು ಮಾಡಿದವರಿಗೆ, ಗೋಹತ್ಯೆಯನ್ನು ಮಾಡಿದವರಿಗೆ, ಪಾಯಸ, ಗೋಧಿಯ ಅನ್ನ, ಕಾಯಿ-ಪಲ್ಯಗಳು, ತಿಲಾನ್ನ, ಪೊಂಗಲು, ಹೋಳಿಗೆ, ಮಾಂಸ-ಇವುಗಳನ್ನು ವೃಥಾ (ಬಲಿಹರಣ-ವೈಶ್ವದೇವಾದಿಗಳನ್ನು ಮಾಡದೇ) ಭಕ್ಷಿಸುವವರಿಗೆ ಯಾವ ನರಕಲೋಕಗಳು ಪ್ರಾಪ್ತವಾಗುವುವೋ-ಜಯದ್ರಥನನ್ನು ನಾನು ನಾಳೆಯೇ ಸಂಹಾರಮಾಡದಿದ್ದರೆ ಆ ಲೋಕಗಳಿಗೆ ಒಡನೆಯೇ ಹೋಗುತ್ತೇನೆ.

ವೇದಾಧ್ಯಾಯಿನಮತ್ಯರ್ಥಂ ಸಂಶಿತಂ ವಾ ದ್ವಿಜೋತ್ತಮಮ್ ॥೨೯॥

ಅಮನ್ಯಮಾನೋ ಯಾನ್ಯಾತಿ ವೃದ್ಧಾನ್ಸಾಧೂನ್ಗುರೂಂಸ್ತಥಾ ।
ಸ್ಪೃಶತೋ ಬ್ರಾಹ್ಮಣಂ ಗಾಂ ಚ ಪಾದೇನಾಗ್ನಿಂ ಚ ಯಾ ಭವೇತ್।

ಯಾಪ್ಸು ಶ್ಲೇಷ್ಮ ಪುರೀಷಂ ಚ ಮೂತ್ರಂ ವಾ ಮುಞ್ಚತಾಂ ಗತಿಃ
ತಾಂ ಗಚ್ಛೇಯಂ ಗತಿಂ ಕಷ್ಟಾಂ ನ ಚೇದ್ಧನ್ಯಾಂ ಜಯದ್ರಥಮ್॥೩೧॥

ವೇದಾಧ್ಯಾಯಿಯಾದ–ಅತ್ಯಂತಕಠೋರವ್ರತನಿಷ್ಠನಾದ ಬ್ರಾಹ್ಮಣೋತ್ತಮನನ್ನೂ, ವೃದ್ಧರನ್ನೂ, ಸಾಧುಗಳನ್ನೂ, ಗುರುಜನರನ್ನೂ ಅವ

ಮಾನಗೊಳಿಸುವವರಿಗೆ, ಬ್ರಾಹ್ಮಣನನ್ನೂ, ಹಸುವನ್ನೂ ಮತ್ತು ಅಗ್ನಿಯನ್ನೂ ಕಾಲಿನಿಂದ ಒದೆಯುವವರಿಗೆ, ನೀರಿನಲ್ಲಿ ಕಫವನ್ನು ಉಗಿಯುವವರಿಗೆ, ಮೂತ್ರ-ಪುರೀಷಗಳನ್ನು ಉತ್ಸರ್ಜನಮಾಡುವವರಿಗೆ ಯಾವ ಕಷ್ಟಕರವಾದ ನರಕಲೋಕಗಳು ಪ್ರಾಪ್ತವಾಗುವುವೋ–ಅಂತಹ ನರಕಲೋಕಗಳಿಗೆ ನಾಳೆಯೇ ನಾನು ಜಯದ್ರಥನನ್ನು ಕೊಲ್ಲದಿದ್ದರೆ ಒಡನೆಯೇ ಹೋಗುತ್ತೇನೆ.

**ನಗ್ನಸ್ಯ ಸ್ನಾಯಮಾನಸ್ಯ ಯಾ ಚ ವನ್ಧ್ಯಾತಿಥೇರ್ಗತಿಃ ।**
**ಉತ್ಕೋಚಿನಾಂ ಮೃಷೋಕ್ತೀನಾಂ ವಞ್ಚಕಾನಾಂ ಚ ಯಾ ಗತಿಃ॥**
**ಆತ್ಮಾಪಹಾರಿಣಾಂ ಯಾ ಚ ಯಾ ಚ ಮಿಥ್ಯಾಭಿಶಂಸಿನಾಮ್ ।**
**ಭೃತ್ಯೈಃ ಸಂದಿಶ್ಯಮಾನಾನಾಂ ಪುತ್ರದಾರಾಶ್ರಿತೈಸ್ತಥಾ ॥೩೩॥**

**ಅಸಂವಿಭಜ್ಯ ಕ್ಷುದ್ರಾಣಾಂ ಯಾ ಗತಿರ್ಮಿಷ್ಟಮಶ್ನತಾಮ್ ।**
**ತಾಂ ಗಚ್ಛೇಯಂ ಗತಿಂ ಘೋರಾಂ ನ ಚೇದ್ಧನ್ಯಾಂ ಜಯದ್ರಥಮ್।**

ನಗ್ನವಾಗಿ ಸ್ನಾನಮಾಡುವವರಿಗೆ, ಮನೆಗೆ ಬಂದ ಅತಿಥಿಯನ್ನು ಸತ್ಕರಿಸದೇ ನಿಂದಿಸಿ ಕಳುಹಿಸುವವರಿಗೆ, ಲಂಚತಿನ್ನುವವರಿಗೆ, ಸುಳ್ಳುಹೇಳುವವರಿಗೆ, ಮೋಸಮಾಡುವವರಿಗೆ, ಆತ್ಮಾಪಹಾರಿಗಳಿಗೆ (ಆತ್ಮಹತ್ಯೆಯನ್ನು ಮಾಡಿಕೊಳ್ಳುವವರಿಗೆ), ಇತರರ ಮೇಲೆ ಸುಳ್ಳಿನ ದೋಷಾರೋಪಣೆ ಮಾಡುವವರಿಗೆ, ಬೃತ್ಯರ ಆಜ್ಞೆಯಂತೆ ನಡೆಯುವವರಿಗೆ, ಪುತ್ರ-ಹೆಂಡತಿ-ಆಶ್ರಿತರು ಮುಂತಾದವರಿಗೆ ಯಥಾಯೋಗ್ಯವಾಗಿ ಹಂಚಿಕೊಡದೇ ತಾನೊಬ್ಬನೇ ಕುಳಿತು ಮೃಷ್ಟಾನ್ನವನ್ನು ಭುಂಜಿಸುವ ಕ್ಷುದ್ರಮನುಷ್ಯರಿಗೆ ಯಾವ ಘೋರವಾದ ಲೋಕಗಳು ಪ್ರಾಪ್ತವಾಗುತ್ತವೆಯೋ- ಅಂತಹ ಲೋಕಗಳಿಗೆ ನಾಳೆಯೇ ನಾನು ಜಯದ್ರಥನನ್ನು ಕೊಲ್ಲದಿದ್ದರೆ ಒಡನೆಯೇ ಹೋಗುತ್ತೇನೆ.

**ಸಂಶ್ರಿತಂ ಚಾಪಿ ಯಸ್ತ್ಯಕ್ತ್ವಾ ಸಾಧುಂ ತದ್ವಚನೇ ರತಮ್ ।**
**ನ ಬಿಭರ್ತಿ ನೃಶಂಸಾತ್ಮಾ ನಿನ್ದತೇ ಚೋಪಕಾರಿಣಮ್ ॥೩೫॥**

**ಅರ್ಹತೇ ಪ್ರಾತಿವೇಶ್ಯಾಯ ಶ್ರಾದ್ಧಂ ಯೋ ನ ದದಾತಿ ಚ ।**
**ಅನರ್ಹೇಭ್ಯಶ್ಚ ಯೋ ದದ್ಯಾದ್ವೃಷಲೀಪತಯೇ ತಥಾ ॥೩೬॥**

**ಮದ್ಯಪೋ ಭಿನ್ನಮರ್ಯಾದಃ ಕೃತಘ್ನೋ ಭರ್ತೃನಿನ್ದಕಃ ।**
**ತೇಷಾಂ ಗತಿಮಿಯಾಂ ಕ್ಷಿಪ್ರಂ ನ ಚೇದ್ಧನ್ಯಾಂ ಜಯದ್ರಥಮ್॥೩೭॥**

ಆಶ್ರಿತನಾದವನನ್ನೂ, ಸಾಧುಪುರುಷನನ್ನೂ, ಆಜ್ಞಾಪಾಲಕನನ್ನೂ, ಯಾವನು ತ್ಯಜಿಸುತ್ತಾನೆಯೋ ಮತ್ತು ಅಂತಹವರ ಭರಣ-ಪೋಷಣಗಳನ್ನು ಮಾಡುವುದಿಲ್ಲವೋ-ಅಂತಹ ಕ್ರೂರಿಗಳಿಗೆ, ಉಪಕಾರಮಾಡುವವರನ್ನು ನಿಂದಿಸುವವರಿಗೆ, ಯೋಗ್ಯನಾಗಿರುವ ಪಕ್ಕದ ಮನೆಯವನನ್ನು ಶ್ರಾದ್ಧಕ್ಕೆ ಕರೆಯದೇ ಇರುವವನಿಗೆ, ಅನರ್ಹನಾದವನನ್ನೂ ಮತ್ತು ಶೂದ್ರಸ್ತ್ರೀಯನ್ನು ಮದುವೆಮಾಡಿಕೊಂಡ ಬ್ರಾಹ್ಮಣನನ್ನು ಶ್ರಾದ್ಧಕ್ಕೆ ಕರೆಯುವವನಿಗೆ, ಮದ್ಯಪಾನಮಾಡುವವನಿಗೆ, ಧರ್ಮಮರ್ಯಾದೆಯನ್ನು ಮೀರಿದವನಿಗೆ, ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳದೇ ಇರುವವನಿಗೆ, ಒಡೆಯನನ್ನು ನಿಂದಿಸುವವನಿಗೆ ಯಾವ ಘೋರವಾದ ನರಕಗಳು ಪ್ರಾಪ್ತವಾಗುತ್ತವೆಯೋ–ಅದೇ ಲೋಕಗಳಿಗೆ ನಾನು ನಾಳೆಯೇ ಜಯದ್ರಥನನ್ನು ಸಂಹಾರಮಾಡದಿದ್ದರೆ ಕ್ಷಿಪ್ರವಾಗಿ ಹೋಗುತ್ತೇನೆ.



**ಭುಞ್ಜಾನಾನಾಂ ತು ಸವ್ಯೇನ ಉತ್ಸಙ್ಗೇ ಚಾಪಿ ಖಾದತಾಮ್ ।**
**ಪಾಲಾಶಮಾಸನಂ ಚೈವ ತಿನ್ದುಕೈರ್ದನ್ತಧಾವನಮ್ ।**
**ಯೇ ಚಾವರ್ಜಯತಾಂ ಲೋಕಾಃ ಸ್ವಪತಾಂ ಚ ತಥೋಷಸಿ ॥**

ಎಡಗೈಯಿಂದ ಭೋಜನಮಾಡುವವರಿಗೆ, ತೊಡೆಯ ಮೇಲೆ ತಟ್ಟೆಯನ್ನಿಟ್ಟುಕೊಂಡು ಭೋಜನಮಾಡುವವರಿಗೆ, ಮುತ್ತುಗದ ಎಲೆಯನ್ನು (ಮುತ್ತುಗದ ಮರದ ಮಣೆಯನ್ನು) ಆಸನವನ್ನಾಗಿ ಬಳಸುವವರಿಗೆ, ತುಂಬೇ

ಗಿಡದ ಕಡ್ಡಿಯಿಂದ ಹಲ್ಲುಜ್ಜುವವರಿಗೆ, ಉಷಃಕಾಲದಲ್ಲಿ ಮಲಗಿರುವವರಿಗೆ ಯಾವ ನರಕಲೋಕಗಳು ಪ್ರಾಪ್ತವಾಗುತ್ತವೆಯೋ-ಆ ಲೋಕಗಳಿಗೆ ನಾಳೆಯೇ ಜಯದ್ರಥನನ್ನು ಸಂಹರಿಸದಿದ್ದರೆ ನಾನು ಹೋಗುತ್ತೇನೆ.

**ಶೀತಭೀತಾಶ್ಚ ಯೇ ವಿಪ್ರಾ ರಣಭೀತಾಶ್ಚ ಕ್ಷತ್ರಿಯಾಃ ॥೩೯॥**
**ಏಕಕೂಪೋದಕಗ್ರಾಮೇ ವೇದಧ್ವನಿವಿವರ್ಜಿತೇ ।**
**ಷಣ್ಮಾಸಂ ತತ್ರ ವಸತಾಂ ತಥಾ ಶಾಸ್ತ್ರಂ ವಿನಿನ್ದತಾಮ್ ॥೪೦॥**
**ದಿವಾಮೈಥುನಿನಾಂ ಚಾಪಿ ದಿವಸೇಷು ಚ ಶೇರತೇ ।**
**ಅಗಾರದಾಹಿನಾಂ ಚೈವ ಗರದಾನಾಂ ಚ ಯೇ ಮತಾಃ ॥೪೧॥**
**ಅಗ್ನ್ಯಾತಿಥ್ಯವಿಹೀನಾಶ್ಚ ಗೋಪಾನೇಷು ಚ ವಿಘ್ನದಾಃ ।**
**ರಜಸ್ವಲಾಂ ಸೇವಯನ್ತಃ ಕನ್ಯಾಂ ಶುಲ್ಕೇನ ದಾಯಿನಃ ॥೪೨॥**
**ಯಾ ಚ ವೈ ಬಹುಯಾಜೀನಾಂ ಬ್ರಾಹ್ಮಣಾನಾಂ ಶ್ವವೃತ್ತಿನಾಮ್।**
**ಆಸ್ಯಮೈಥುನಿಕಾನಾಂ ಚ ಯೇ ದಿವಾ ಮೈಥುನೇ ರತಾಃ ॥೪೩॥**
**ಬ್ರಾಹ್ಮಣಸ್ಯ ಪ್ರತಿಶ್ರುತ್ಯ ಯೋ ವೈ ಲೋಭಾದ್ದದಾತಿ ನ ।**
**ತೇಷಾಂ ಗತಿಂ ಗಮಿಷ್ಯಾಮಿ ಶ್ವೋ ನ ಹನ್ಯಾಂ ಜಯದ್ರಥಮ್॥೪೪॥**

ಶೀತಕ್ಕೆ ಭಯಪಡುವ ಬ್ರಾಹ್ಮಣರಿಗೆ, ಯುದ್ಧಕ್ಕೆ ಭಯಪಡುವ ಕ್ಷತ್ರಿಯರಿಗೆ, ವೇದಧ್ವನಿಯಿಂದ ವರ್ಜಿತವಾದ, ಊರಿಗೆಲ್ಲಾ ಒಂದೇ ಬಾವಿಯಿರುವ ಗ್ರಾಮದಲ್ಲಿ ಆರು ತಿಂಗಳು ವಾಸಮಾಡುವವರಿಗೆ, ಶಾಸ್ತ್ರವನ್ನು ನಿಂದಿಸುವವರಿಗೆ, ಹಗಲು ಮೈಥುನಮಾಡುವವರಿಗೆ, ಹಗಲಿನಲ್ಲಿ ಮಲಗು ವವರಿಗೆ, ಮನೆಯನ್ನು ಸುಡುವವರಿಗೆ, ವಿಷವಿಡುವವರಿಗೆ, ಯಾವಾಗಲೂ ಅಗ್ನಿಹೋತ್ರಾತಿಥಿಸತ್ಕಾರಗಳನ್ನು ಮಾಡದವರಿಗೆ, ಹಸುವು ನೀರು ಕುಡಿಯು ವುದನ್ನು ತಪ್ಪಿಸುವವರಿಗೆ, ರಜಸ್ವಲಾಸಮಾಗಮಮಾಡುವವರಿಗೆ, ಶುಲ್ಕವನ್ನು ತೆಗೆದುಕೊಂಡು ಹೆಣ್ಣನ್ನು ಮದುವೆಮಾಡಿಕೊಡುವವರಿಗೆ, ಬಹುಜನರ ಯಾಜಕರಿಗೆ, ಬ್ರಾಹ್ಮಣನಾಗಿದ್ದುಕೊಂಡು ಸೇವಾವೃತ್ತಿಯಿಂದ ಇರುವವರಿಗೆ, ಮುಖಮೈಥುನಿಗಳಿಗೆ, ದಿವಾಮೈಥುನಿಗಳಿಗೆ, ಬ್ರಾಹ್ಮಣನಿಗೆ ದಾನಕೊಡು ವೆನೆಂದು ಪ್ರತಿಜ್ಞೆಮಾಡಿ ಅನಂತರ ಲೋಭದಿಂದ ದಾನವನ್ನು ಕೊಡದವನಿಗೆ ಯಾವ ದುರ್ಗತಿಯುಂಟಾಗುವುದೋ-ಅಂತಹ ದುರ್ಗತಿಯನ್ನು ನಾನು ನಾಳೆಯೇ ಜಯದ್ರಥನನ್ನು ಸಂಹರಿಸದಿದ್ದರೆ ಹೊಂದುತ್ತೇನೆ.

ನಾನು ಈ ಹಿಂದೆ ಯಾವ ಪಾಪಕರ್ಮಿಗಳ ಹೆಸರುಗಳನ್ನು ಹೇಳಿರುವೆನೋ ಅವರೇ ಅಲ್ಲದೇ ಇನ್ನೂ ಯಾವ ಪಾಪಕರ್ಮಿಗಳಿದ್ದಾರೆಯೋ ಅವರೆಲ್ಲರಿಗೂ ಪ್ರಾಪ್ತವಾಗುವ ದುರ್ಗತಿಯನ್ನು ನಾನು–ಈ ರಾತ್ರಿಯು ಕಳೆದು ನಾಳೆಯೇ ಜಯದ್ರಥನನ್ನು ಸಂಹರಿಸದಿದ್ದರೆ–ಹೊಂದುತ್ತೇನೆ.

**ಇಮಾಂ ಚಾಪ್ಯಪರಾಂ ಭೂಯಃ ಪ್ರತಿಜ್ಞಾಂ ಮೇ ನಿಬೋಧತ ।**
**ಯದ್ಯಸ್ಮಿನ್ನಹತೇ ಪಾಪೇ ಸೂರ್ಯೋಽಸ್ತಮುಪಯಾಸ್ಯತಿ ।**
**ಇಹೈವ ಸಮ್ಪ್ರವೇಷ್ಯಾಹಂ ಜ್ವಲಿತಂ ಜಾತವೇದಸಮ್ ॥೪೭॥**

ಪುನಃ ಈ ನನ್ನ ಮತ್ತೊಂದು ಪ್ರತಿಜ್ಞೆಯನ್ನೂ ನೀವೆಲ್ಲರೂ ಕೇಳಿರಿ. ಒಂದು ವೇಳೆ ಆ ಪಾಪಿಯನ್ನು ನಾನು ಕೊಲ್ಲಲಾಗದೆ, ಆ ಪಾಪಿಯು ಬದುಕಿರುವಂತೆಯೇ ಸೂರ್ಯನು ಮುಳುಗಿದರೆ ಇದೇ ಸ್ಥಳದಲ್ಲಿ ನಾನು ಪ್ರಜ್ವಲಿಸುವ ಯಜ್ಞೇಶ್ವರನನ್ನು ಪ್ರವೇಶಿಸುತ್ತೇನೆ.

**ಅಸುರಸುರಮನುಷ್ಯಾಃ ಪಕ್ಷಿಣೋ ವೋರಗಾ ವಾ**
**ಪಿತೃರಜನಿಚರಾ ವಾ ಬ್ರಹ್ಮದೇವರ್ಷಯೋ ವಾ ।**
**ಚರಮಚರಮಪೀದಂ ಯತ್ಪರಂ ಚಾಪಿ ತಸ್ಮಾ -**
**ತ್ತದಪಿ ಮಮ ರಿಪುಂ ತಂ ರಕ್ಷಿತುಂ ನೈವ ಶಕ್ತಾಃ ॥**

ಅಸುರರು, ದೇವತೆಗಳು, ಮನುಷ್ಯರು, ಪಕ್ಷಿಗಳು, ಸರ್ಪಗಳು, ಪಿತೃಗಣಗಳು, ನಿಶಾಚರರು, ಬ್ರಹ್ಮರ್ಷಿಗಳು, ದೇವರ್ಷಿಗಳು, ಈ ಚರಾಚರ ಜಗತ್ತು, ಇವುಗಳಲ್ಲದೇ ಇನ್ನೂ ಯಾವ ಶಕ್ತಿಗಳಿವೆಯೋ ಅವುಗಳೆಲ್ಲವೂ ಸೇರಿದರೂ ನನ್ನ ಶತ್ರುವನ್ನು ರಕ್ಷಿಸಲು ಶಕ್ತರಾಗುವುದಿಲ್ಲ.

**ಯದಿ ವಿಶತಿ ರಸಾತಲಂ ತದಗ್ರ್ಯಂ**
**ವಿಯದಪಿ ದೇವಪುರಂ ದಿತೇಃ ಪುರಂ ವಾ ।**
**ತದಪಿ ಶರಶತೈರಹಂ ಪ್ರಭಾತೇ**
**ಭೃತಮಭಿಮನ್ಯುರಿಪೋಃ ಶಿರೋಽಭಿಹರ್ತಾ ॥೪೯॥**

ಜಯದ್ರಥನು ಪಾತಾಳಕ್ಕೇ ಹೋಗಲಿ; ಅಲ್ಲಿಂದ ಮುಂದಕ್ಕೂ ಹೋಗಲಿ; ಆಕಾಶಕ್ಕೇ ಹೋಗಲಿ; ದೇವಲೋಕಕ್ಕೇ ಹೋಗಲಿ; ದೈತ್ಯರ ಪಟ್ಟಣಕ್ಕಾದರೂ ಹೋಗಲಿ–ಬೆಳಗಾದೊಡನೆಯೇ ನಾನು ಅಲ್ಲಿಗೇ ಹೋಗಿ

ನೂರಾರು ಬಾಣಗಳಿಂದ ಅಭಿಮನ್ಯುವಿನ ಶತ್ರುವಾದ ಜಯದ್ರಥನ ಕತ್ತನ್ನು ಹಾರಿಸುತ್ತೇನೆ.”

ಮಹಾರಾಜ! ಅರ್ಜುನನು ಹೀಗೆ ಪ್ರತಿಜ್ಞೆಮಾಡಿ ಗಾಂಡೀವಧನುಸ್ಸನ್ನು ಎರಡು ಕೈಗಳಿಂದಲೂ ಮಿಡಿದು ಟೇಂಕರಿಸಿದನು. ಆ ಮಹಾಟೇಂಕಾರಶಬ್ದವು ಇತರ ಎಲ್ಲ ಶಬ್ದಗಳನ್ನೂ ಅತಿಕ್ರಮಿಸಿ ಆಕಾಶವನ್ನೂ ಮುಟ್ಟಿತು. ಅರ್ಜುನನು ಪ್ರತಿಜ್ಞೆಮಾಡಿದನಂತರದಲ್ಲಿ ಜನಾರ್ದನನು ಪಾಂಚಜನ್ಯಶಂಖವನ್ನು ಊದಿದನು. ಸಂಕ್ರುದ್ಧನಾಗಿದ್ದ ಧನಂಜಯನು ಅದರ ಜೊತೆಯಲ್ಲಿಯೇ ದೇವದತ್ತಶಂಖವನ್ನೂ ಊದಿದನು. ಶ್ರೀಕೃಷ್ಣನ ಮುಖದ ವಾಯುವಿನಿಂದ ಪಾಂಚಜನ್ಯಶಂಖದ ಉದರಭಾಗವು ತುಂಬಿಹೋಗಿ ಅಲ್ಲಿಂದ ಹೊರಬಂದ ಶಬ್ದವು ಪಾತಾಲ, ಆಕಾಶ, ದಿಕ್ಕುಗಳು ಮತ್ತು ದಿಕ್ಪಾಲಕರಿಂದ ಕೂಡಿದ ಸಂಪೂರ್ಣಜಗತ್ತು–ಇವೆಲ್ಲವನ್ನೂ ಯುಗಾಂತ್ಯದೋಪಾದಿಯಲ್ಲಿ ನಡುಗಿಸಿ ಬಿಟ್ಟಿತು.

ಮಹಾತ್ಮನಾದ ಅರ್ಜುನನು ಘೋರವಾದ ಪ್ರತಿಜ್ಞೆಯನ್ನು ಮಾಡಿದ ನಂತರ ಸಾವಿರಾರು ಬಗೆಯ ವಾದ್ಯಘೋಷಗಳು ಮೊಳಗಿದುವು. ಪಾಂಡವರೆಲ್ಲರೂ ಸಿಂಹನಾದಗಳನ್ನು ಮಾಡಿದರು.”

ಲ೩ನೆಯ ಅಧ್ಯಾಯವು ಮುಗಿಯಿತು.

ಲ೪ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಅರ್ಜುನನ ಪ್ರತಿಜ್ಞೆಯನ್ನು ಕೇಳಿ ಜಯದ್ರಥನು ಭಯಪಟ್ಟುದು: ದ್ರೋಣ–ದುರ್ಯೋಧನರಿಂದ ಆಶ್ವಾಸನೆ

“ಮಹಾರಾಜ! ಜಯದ್ರಥನು-ವಿಜಯೇಚ್ಛುಗಳಾದ ಪಾಂಡವರು ಮಾಡಿದ ಮಹಾಘೋಷಣೆಯನ್ನು ಕೇಳಿದನು. ಅರ್ಜುನನು ಮಾಡಿದ ಘೋರಪ್ರತಿಜ್ಞೆಯನ್ನೂ ಗುಪ್ತಚಾರರ ಮೂಲಕವಾಗಿ ಕೇಳಿದ ಅವನ ಹೃದಯವು ಶೋಕದಿಂದ ವ್ಯಾಕುಲವಾಯಿತು. ದುಃಖದಿಂದ ವ್ಯಾಪ್ತನಾಗಿ ದೊಡ್ಡದಾದ ಮತ್ತು ಅಗಾಧವಾದ ಶೋಕಸಾಗರದಲ್ಲಿ ಮುಳುಗಿಹೋದವ ನಂತೆ ಸಂಕಟಪಡುತ್ತಾ ಮೇಲೆದ್ದ ಸೈಂಧವನು, ಮುಂದಿನ ಪರಿಣಾಮದ

ವಿಷಯದಲ್ಲಿ ಬಹಳವಾಗಿ ಆಲೋಚಿಸುತ್ತಾ ರಾಜಸಭೆಗೆ ಹೋದನು. ಅಲ್ಲವನು ನೆರೆದಿದ್ದ ರಾಜರ ಮುಂದೆ ವಿಲಪಿಸಿದನು. ಅಭಿಮನ್ಯುವಿನ ತಂದೆಗೆ ಭಯಪಟ್ಟ ಸೈಂಧವನು ಈ ಮಾತನ್ನು ಆ ರಾಜಸಭೆಯಲ್ಲಿ ಹೇಳಿದನು:

"ಪಾಂಡುವಿನ ಕ್ಷೇತ್ರದಲ್ಲಿ (ಭಾರ್ಯೆಯಲ್ಲಿ) ಕಾಮಿಯಾದ ಇಂದ್ರನಿಂದ ಹುಟ್ಟಿದ ದುರ್ಬುದ್ಧಿಯಾದ ಅರ್ಜುನನು ನನ್ನೊಬ್ಬನನ್ನೇ ಯಮಾಲಯಕ್ಕೆ ಕಳುಹಿಸಲು ಇಚ್ಛಿಸಿದ್ದಾನೆ. ಜೀವಿಸಿರುವ ಇಚ್ಛೆಯಿಂದ ನಾನು ನನ್ನ ದೇಶಕ್ಕೆ ಹೊರಟುಹೋಗುತ್ತೇನೆ. ನಿಮ್ಮೆಲ್ಲರಿಗೂ ಮಂಗಳವಾಗಲಿ. ಕ್ಷತ್ರಿಯ ಸತ್ತಮರೇ! ಅಥವಾ ನಾನು ಯುದ್ಧವನ್ನು ಬಿಟ್ಟು ಹೋಗಕೂಡದೆಂಬುದು ನಿಮ್ಮ ಅಭಿಪ್ರಾಯವಾದರೆ ಅರ್ಜುನನಿಗೆ ಸಮಾನವಾದ ಅಸ್ತ್ರಬಲದಿಂದ ಕೂಡಿರುವ ನೀವು ನನ್ನನ್ನು ರಕ್ಷಿಸಿರಿ. ಪಾರ್ಥನು ನನ್ನ ಪ್ರಾಣಾಪಹರಣ ಮಾಡುವೆನೆಂದು ಮಾಡಿರುವ ಪ್ರತಿಜ್ಞೆಗೆ ಪ್ರತಿಯಾಗಿ- ನನಗೆ ಅಭಯದಾನದ ಪ್ರತಿಜ್ಞೆಯನ್ನು ಮಾಡಿರಿ. ದ್ರೋಣ-ದುರ್ಯೋಧನ-ಕೃಪರೂ, ಕರ್ಣ-ಮದ್ರೇಶ-ಬಾಹ್ಲಿಕರೂ, ದುಃಶಾಸನಾದಿಗಳೂ ನನ್ನನ್ನು ಯಮನ ಬಾಧೆಯಿಂದ ತಪ್ಪಿಸಲು ಸಮರ್ಥರಾಗಿರುತ್ತಾರೆ. ಹೀಗಿರುವಾಗ ನನ್ನೊಬ್ಬನನ್ನೇ ವಧಿಸಲು ಇಚ್ಛಿಸಿರುವ ಅರ್ಜುನನಿಂದ ರಕ್ಷಿಸಲಾರರೇ? ಭೂಮಂಡಲಕ್ಕೇ ಒಡೆಯ ರಾಗಿರುವ ನೀವೆಲ್ಲರೂ ಸೇರಿದರೆ ನನ್ನೊಬ್ಬನ ರಕ್ಷಣೆಯನ್ನು ಮಾಡಲು ಸಾಧ್ಯವಾಗುವುದಿಲ್ಲವೇ? ಪಾರ್ಥಿವರೇ! ಪಾಂಡವರ ಹರ್ಷೋದ್ಗಾರಗಳನ್ನು ಕೇಳಿ ನನಗೆ ಬಹಳ ಭಯವುಂಟಾಗಿದೆ. ಮರಣಹೊಂದಲಿರುವ ಮನುಷ್ಯನ ಶರೀರವು ಶಿಥಿಲಗೊಳ್ಳುವಂತೆ–ನನ್ನ ಶರೀರವೂ ಶಿಥಿಲಗೊಳ್ಳುತ್ತಿದೆ. ಗಾಂಡೀವಧನ್ವನಾದ ಅರ್ಜುನನು ಪ್ರತಿಜ್ಞೆಮಾಡಿರುವುದರಿಂದ ನನ್ನ ವಧೆಯು ನಿಶ್ಚಿತವಾಗಿ ಹೋಗಿದೆ. ಈ ಕಾರಣದಿಂದಲೇ ಅಭಿಮನ್ಯುವಿನ ವಧೆಯಿಂದ ಶೋಕಪಡಬೇಕಾಗಿದ್ದ ಈ ಸಮಯದಲ್ಲಿ ಪಾಂಡವರು ಪ್ರಹೃಷ್ಟರಾಗಿ ಕೂಗಿಕೊಳ್ಳುತ್ತಿದ್ದಾರೆ. 'ದೇವ-ಗಂಧರ್ವಾಸುರೋರಗ-ರಾಕ್ಷಸರಲ್ಲಿ ಯಾರೂ ಸಹ ಅರ್ಜುನನ ಪ್ರತಿಜ್ಞೆಯನ್ನು ಮಿಥ್ಯೆಗೊಳಿಸಲು ಉತ್ಸುಕರಾಗಿಲ್ಲ. ಹೀಗಿರುವಾಗ ಈ ನರಾಧಿಪರಿಗೆ ಅವನ ಪ್ರತಿಜ್ಞೆಯನ್ನು ನಿರರ್ಥಕಗೊಳಿ ಸುವ ಸಾಮರ್ಥ್ಯವೆಲ್ಲಿದೆ?' ಎಂದೂ ಅವರು ಹೇಳುತ್ತಿದ್ದಾರೆ. ಆದುದರಿಂದ,

ನರರ್ಷಭರೇ! ನನಗೆ ಹೋಗಲು ಅನುಜ್ಞೆನ್ನೀಡಿರಿ. ನಿಮಗೆ ಮಂಗಳವಾಗಲಿ. ನಾನು ಅದೃಶ್ಯನಾಗಿ ಹೋಗುತ್ತೇನೆ. ಆಗ ನನ್ನನ್ನು ಪಾಂಡವರು ಕಾಣಲಾರರು."

ಇಂತಹ ಸಮಯದಲ್ಲಿ ತನ್ನ ಕಾರ್ಯಸಾಧನೆಯು ಮುಖ್ಯವಾದುದರಿಂದ ದುರ್ಯೋಧನನು, ಭಯದಿಂದ ವ್ಯಾಕುಲಚಿತ್ತನಾಗಿ ವಿಲಪಿಸುತ್ತಿದ್ದ ಜಯದ್ರಥನಿಗೆ ಹೇಳಿದನು:

"ಪುರುಷರ್ಷಭನೇ! ನರಶ್ರೇಷ್ಠನೇ! ನೀನು ಭಯಪಡಬೇಕಾದ ಕಾರಣವಿಲ್ಲ. ಸರ್ವಕ್ಷತ್ರಿಯರ ಮಧ್ಯದಲ್ಲಿ ನಿಂತಿರುವ ನಿನ್ನನ್ನು ಸಂಹಾರಮಾಡಲು ಯಾವನು ತಾನೇ ಇಚ್ಛೆಪಟ್ಟಾನು? ನಾನು, ವೈಕರ್ತನ ಕರ್ಣ, ಚಿತ್ರಸೇನ, ವಿವಿಂಶತಿ, ಭೂರಿಶ್ರವಸ, ಶಲ, ಶಲ್ಯ, ದುರ್ಧರ್ಷನಾದ ವೀರವೃಷಸೇನ, ಪುರುಮಿತ್ರ, ಜಯ, ಭೋಜ, ಕಾಂಬೋಜರಾಜನಾದ ಸುದಕ್ಷಿಣ, ಸತ್ಯವ್ರತ, ಮಹಾಬಾಹುವಾದ ವಿಕರ್ಣ, ದುರ್ಮುಖ, ದುಃಶಾಸನ, ಸುಬಾಹು, ಆಯುಧವನ್ನೆತ್ತಿಕೊಂಡೇ ಬರುವ ಕಳಿಂಗರಾಜ, ಅವಂತೀದೇಶದ ರಾಜಕುಮಾರರಾದ ವಿಂದಾನುವಿಂದರು, ದ್ರೋಣರು, ದ್ರೌಣಿ, ಶಕುನಿ–ಇವರೇ ಅಲ್ಲದೇ ಇನ್ನೂ ಅನೇಕ ದೇಶಗಳ ರಾಜರೆಲ್ಲರೂ ಸಸೈನ್ಯರಾಗಿ ನಿನ್ನನ್ನು ಅನುಸರಿಸಿ ಬರುತ್ತೇವೆ. ಆದುದರಿಂದ ನಿನ್ನ ಮನಸ್ಸಿನ ಚಿಂತೆಯನ್ನು ದೂರಮಾಡು. ಅಮಿತದ್ಯುತಿಮಂತನೇ! ಸೈಂಧವ! ನೀನೂ ಸಾಮಾನ್ಯನಲ್ಲ. ರಥಿಗಳಲ್ಲಿ ಶ್ರೇಷ್ಠನಾಗಿರುವೆ. ಮಹಾಶೂರನಾಗಿರುವೆ. ಹೀಗಿರುವಾಗ ಪಾಂಡವರಿಂದ ಈಗೇಕೆ ಭಯವನ್ನು ಕಾಣುತ್ತಿರುವೆ? (ಪಾಂಡವರಿಗೇಕೆ ಭಯಪಡುವೆ?) ನನ್ನಲ್ಲಿರುವ ಹನ್ನೊಂದು ಅಕ್ಷೌಹಿಣೀ ಸೈನ್ಯವೂ ನಿನ್ನ ರಕ್ಷಣೆಯನ್ನೇ ಗುರಿಯನ್ನಾಗಿಟ್ಟುಕೊಂಡು ಪ್ರಯತ್ನಪೂರ್ವಕವಾಗಿ ಪಾಂಡವರೊಡನೆ ಯುದ್ಧಮಾಡುತ್ತದೆ. ಆದುದರಿಂದ ನೀನು ಖಂಡಿತವಾಗಿಯೂ ಭಯಪಡಬೇಡ. ಈಗ ಮನಸ್ಸಿನಲ್ಲಿ ಹುಟ್ಟಿಕೊಂಡಿರುವ ಭಯವನ್ನು ಹೊರಹಾಕು."

ಮಹಾರಾಜ! ನಿನ್ನ ಮಗನು ನಿನ್ನ ಅಳಿಯನಿಗೆ ಹೀಗೆ ಹೇಳಿ ಸಂತೈಸಿದನು. ಆ ಆಶ್ವಾಸನೆಯಿಂದ ಸ್ವಲ್ಪ ಧೈರ್ಯವನ್ನು ತಾಳಿದ ಸೈಂಧವನು ದುರ್ಯೋಧನನ ಸಂಗಡ ರಾತ್ರಿಯಲ್ಲಿಯೇ ದ್ರೋಣರ ಬಳಿಗೆ ಹೋದನು. ಅಲ್ಲವನು ದ್ರೋಣರ ಕಾಲುಮುಟ್ಟಿ ವಿಧಿಪೂರ್ವಕವಾಗಿ ನಮಸ್ಕಾರಮಾಡಿ

ಅವರ ಅನುಮತಿಯನ್ನು ಪಡೆದು ಅವರ ಸಮೀಪದಲ್ಲಿ ಕುಳಿತು ವಿನಯಾನ್ವಿತನಾಗಿ ಕೇಳಿದನು:

“ಆಚಾರ್ಯರೇ! ಲಕ್ಷ್ಯಭೇದನದಲ್ಲಿ, ಬಹಳ ದೂರದಲ್ಲಿರುವ ಲಕ್ಷ್ಯವನ್ನೂ ಭೇದಿಸುವುದರಲ್ಲಿ, ಬಾಣಗಳನ್ನು ಬಿಡುವ ಕೈಚಳಕದಲ್ಲಿ, ದೃಢವಾಗಿ (ಗುರಿತಪ್ಪದಂತೆ) ಲಕ್ಷ್ಯವನ್ನು ಭೇದಿಸುವುದರಲ್ಲಿ ನನಗೂ ಮತ್ತು ಅರ್ಜುನನಿಗೂ ಇರುವ ವಿಶೇಷವಾದ ಅಂತರವೇನೆಂಬುದನ್ನು ದಯಮಾಡಿ ಹೇಳಿರಿ. ಧನುರ್ವಿದ್ಯೆಯಲ್ಲಿ ನನಗೂ ಮತ್ತು ಅರ್ಜುನನಿಗೂ ಇರುವ ಅಂತರವನ್ನು ಯಥಾವತ್ತಾಗಿ ತಿಳಿದುಕೊಳ್ಳಲು ಇಚ್ಛಿಸಿದ್ದೇನೆ. ಆದುದರಿಂದ ನೀವು ಈ ವಿಷಯದಲ್ಲಿ ಯಥಾರ್ಥವಾದ ಮಾತನ್ನೇ ಹೇಳಿರಿ.”

“ಮಗು, ಸೈಂಧವ! ನೀನೂ ಮತ್ತು ಅರ್ಜುನನೂ ಒಬ್ಬರೇ ಆಚಾರ್ಯರಲ್ಲಿ ವಿದ್ಯೆಯನ್ನು ಕಲಿತಿರುವಿರಿ. ಇಬ್ಬರೂ ಧನುರ್ವಿದ್ಯೆಯಲ್ಲಿ ಒಂದೇ ವಿಧವಾದ ಪ್ರೌಢಿಮೆಯನ್ನು ಪಡೆದಿರುವಿರಿ. ಆದರೆ ಅರ್ಜುನನಿಗೆ ಅನೇಕ ದಿವ್ಯಾಸ್ತ್ರಗಳು ಲಭಿಸಿವೆ ಮತ್ತು ಅವನೀಗ ದುಃಖದಲ್ಲಿದ್ದಾನೆ. ಈ ಎರಡು ಕಾರಣಗಳಿಂದ ಅವನು ನಿನಗಿಂತಲೂ ಅಧಿಕನಾಗುತ್ತಾನೆ. ಆದರೆ ಯುದ್ಧದಲ್ಲಿ ನೀನು ಪಾರ್ಥನಿಗಾಗಿ ಸ್ವಲ್ಪವೂ ಭಯಪಡುವ ಕಾರಣವಿಲ್ಲ. ಅರ್ಜುನನ ಭಯದಿಂದ ನಾನು ನಿನ್ನನ್ನು ರಕ್ಷಿಸುತ್ತೇನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ನನ್ನ ತೋಳುಗಳ ರಕ್ಷಣೆಯನ್ನು ಪಡೆದವನಿಗೆ ದೇವತೆಗಳಿಂದಲೂ ಭಯವಿಲ್ಲ. (ನನ್ನ ಆಶ್ರಯವನ್ನು ಪಡೆದಿರುವವನನ್ನು ದೇವತೆಗಳೂ ಮುಟ್ಟಲಾರರು.) ಪಾರ್ಥನು ದಾಟಲು ಆಗದೇ ಇರತಕ್ಕ ವ್ಯೂಹವನ್ನು ನಾನು ರಚಿಸುತ್ತೇನೆ. ಆದುದರಿಂದ ಭಯಪಡಬೇಡ. ಸ್ವಧರ್ಮವನ್ನು ಪರಿಪಾಲಿಸುತ್ತಾ ಯುದ್ಧಮಾಡು. ಮಹಾರಥನೇ! ನಿನ್ನ ತಂದೆ, ತಾತ, ಮುತ್ತಾತಂದಿರು ಅನುಸರಿಸಿರುವ ಮಾರ್ಗವನ್ನೇ ಅನುಸರಿಸು. ವಿಧಿವತ್ತಾಗಿ ವೇದಗಳನ್ನು ಅಧ್ಯಯನಮಾಡಿರುವೆ. ಶ್ರದ್ಧೆಯಿಂದ ಅಗ್ನಿ ಹೋತ್ರಾದಿಗಳನ್ನು ಮಾಡಿ ಯಜ್ಞೇಶ್ವರನನ್ನು ತೃಪ್ತಿಪಡಿಸಿರುವೆ. ಅನೇಕ ಯಜ್ಞಗಳನ್ನೂ ಮಾಡಿರುವೆ. ಈ ಕಾರಣಗಳಿಂದ ಮೃತ್ಯುವು ನಿನಗೆ ಭಯಂಕರನಾಗಕೂಡದು. (ಮೃತ್ಯುವಿಗೆ ನೀನು ಭಯಪಡಬಾರದು.) ಮಂದಭಾಗ್ಯರಾದ ಮನುಷ್ಯರಿಗೆ ದುರ್ಲಭವಾದ, ರಣಕ್ಷೇತ್ರದಲ್ಲಿ ಮೃತ

ನಾಗುವ ಪರಮಸೌಭಾಗ್ಯವನ್ನು ಪಡೆದು ಭುಜವೀರ್ಯದಿಂದ ಆರ್ಜಿತವಾದ, ದಿವ್ಯವಾದ, ಉತ್ತಮೋತ್ತಮವಾದ ಲೋಕಗಳನ್ನು ಪಡೆಯುವೆ.

**ಕುರವಃ ಪಾಣ್ಡವಾಶ್ಚೈವ ವೃಷ್ಣಯೋಽನ್ಯೇ ಚ ಮಾನವಾಃ ।**
**ಅಹಂ ಚ ಸಹ ಪುತ್ರೇಣ ಅಧ್ರುವಾ ಇತಿ ಚಿನ್ತ್ಯತಾಮ್ ॥೩೧॥**

ಕೌರವರೂ, ಪಾಂಡವರೂ, ವೃಷ್ಣಿಗಳೂ, ಇನ್ನೂ ಇತರ ಅನೇಕ ಮಾನವರೂ, ಪುತ್ರಸಹಿತನಾದ ನಾನೂ ಸಹ ನಾಶವನ್ನು ಹೊಂದತಕ್ಕವರೇ. ಶಾಶ್ವತವಾಗಿ ಯಾರೂ ಉಳಿಯುವುದಿಲ್ಲ. ಈ ವಿಷಯವನ್ನು ನೀನು ಯಾವಾಗಲೂ ಚಿಂತಿಸುತ್ತಿರು. (ಯುದ್ಧದಿಂದ ತಪ್ಪಿಸಿಕೊಂಡು ಹೋದರೆ ಮುಂದೆ ಮರಣವೇ ಇಲ್ಲದೇ ಹೋಗುವುದೇ? ಮರಣವು ಎಂದಾದರೊಂದು ದಿನ ತಪ್ಪಿದ್ದಲ್ಲ. ಪ್ರಪಂಚದಲ್ಲಿ ಯಾರೂ ಶಾಶ್ವತವಾಗಿ ಉಳಿಯುವುದಿಲ್ಲ. ರೋಗ-ರುಜಿನಾದಿಗಳಿಂದ ಪೀಡಿತನಾಗಿ ಸಾಯುವುದಕ್ಕಿಂತಲೂ ಕ್ಷತ್ರಿಯ ನಾದವನಿಗೆ ಯುದ್ಧಮಾಡುತ್ತಲೇ ಮರಣಹೊಂದುವುದು ಶ್ರೇಯಸ್ಕರ.)

**ಪರ್ಯಾಯೇಣ ವಯಂ ಸರ್ವೇ ಕಾಲೇನ ಬಲಿನಾ ಹತಾಃ ।**
**ಪರಲೋಕಂ ಗಮಿಷ್ಯಾಮಃ ಸ್ವೈಃ ಸ್ವೈಃ ಕರ್ಮಭಿರನ್ವಿತಾಃ ॥೩೨॥**

ಬಲಿಷ್ಠನಾದ ಕಾಲನಿಂದ ಹತರಾಗಿ ನಾವೆಲ್ಲರೂ ಒಬ್ಬರಾದ ಮೇಲೆ ಮತ್ತೊಬ್ಬರು ನಾವು ಮಾಡಿದ ಕರ್ಮಗಳನ್ನು ನಮ್ಮ ಸೆರಗಿನಲ್ಲಿ ಕಟ್ಟಿಕೊಂಡು ಪರಲೋಕಕ್ಕೆ ಹೋಗಿಯೇ ಹೋಗುತ್ತೇವೆ.

**ತಪಸ್ತಪ್ತ್ವಾ ತು ಯಾನ್ಲೋಕಾನ್ಪ್ರಾಪ್ನುವನ್ತಿ ತಪಸ್ವಿನಃ ।**
**ಕ್ಷತ್ರಧರ್ಮಾಶ್ರಿತಾ ವೀರಾಃ ಕ್ಷತ್ರಿಯಾಃ ಪ್ರಾಪ್ನುವನ್ತಿ ತಾನ್ ॥೩೩॥**

ತಪಸ್ವಿಗಳಾದವರು ಘೋರವಾದ ತಪಸ್ಸನ್ನು ಮಾಡಿ ಯಾವ ಪುಣ್ಯಲೋಕಗಳನ್ನು ಹೊಂದುತ್ತಾರೆಯೋ ಅದೇ ಲೋಕಗಳನ್ನೇ ಕ್ಷತ್ರಧರ್ಮವನ್ನು ಆಶ್ರಯಿಸಿ ಕ್ಷತ್ರಧರ್ಮಾನುಸಾರವಾಗಿ ನಡೆಯುವ ವೀರಕ್ಷತ್ರಿಯರೂ ಪಡೆಯುತ್ತಾರೆ."

ಮಹಾರಾಜ! ದ್ರೋಣರು ಸೈಂಧವನನ್ನು ಈ ಮಾತುಗಳಿಂದ ಸಂತೈಸಿದನಂತರ ಜಯದ್ರಥನು ಅರ್ಜುನನಿಂದ ಉಂಟಾಗಿದ್ದ ಭಯವನ್ನು

ತೊರೆದು ಯುದ್ಧಮಾಡಲು ನಿಶ್ಚಯಿಸಿದನು. ದ್ರೋಣರು ಸೈಂಧವನಿಗಿತ್ತ ಆಶ್ವಾಸನೆಯಿಂದ ನಿನ್ನ ಸೈನಿಕರೆಲ್ಲರಿಗೂ ಅಮಿತಾನಂದವಾಯಿತು. ವೀರರ ಸಿಂಹನಾದಗಳೊಡನೆ ರಣವಾದ್ಯಗಳ ಭಯಂಕರಧ್ವನಿಯು ಎಲ್ಲ ದಿಕ್ಕುಗಳಲ್ಲಿಯೂ ಮೊಳಗಿತು."

೭೪ನೆಯ ಅಧ್ಯಾಯವು ಮುಗಿಯಿತು.

೭೫ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಜಯದ್ರಥನ ರಕ್ಷಣೆಗಾಗಿ ಕೌರವರು ಕೈಗೊಂಡ ಕಾರ್ಯಕ್ರಮಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಸಿಂಧುರಾಜನ ವಧೆಯನ್ನು ನಾಳೆಯೇ ಮಾಡುವೆನೆಂದು ಪಾರ್ಥನು ಪ್ರತಿಜ್ಞೆಮಾಡಿದನಂತರ ಮಹಾಬಾಹುವಾದ ವಾಸುದೇವನು ಅರ್ಜುನನೊಡನೆ ಹೇಳಿದನು:

"ಅರ್ಜುನ! ನಿನ್ನ ಸಹೋದರರ ಅಭಿಪ್ರಾಯವೇನೆಂಬುದನ್ನು ತಿಳಿಯದೆಯೇ ನೀನು ಮಾತಿನ ಮೂಲಕವಾಗಿ–'ಸೈಂಧವನನ್ನು ನಾನು ಸಂಹರಿಸುತ್ತೇನೆ'–ಎಂಬ ಪ್ರತಿಜ್ಞೆಯನ್ನು ಮಾಡಿಬಿಟ್ಟೆ. ಇದರಿಂದ ನೀನು ಅತ್ಯಂತ ಸಾಹಸಪೂರ್ಣವಾದ ದುಡುಕಿನ ಕಾರ್ಯವನ್ನೇ ಕೈಗೊಂಡಂತಾಗಿದೆ. ನನ್ನೊಡನೆಯೂ ಕೂಡ ನೀನು ಸಮಾಲೋಚಿಸದೇ ಅತ್ಯಂತಗುರುತರವಾದ ಈ ಕಾರ್ಯವನ್ನು ವಹಿಸಿಕೊಂಡಿರುವೆ. ನೀನು ಪ್ರತಿಜ್ಞೆ ಮಾಡಿರುವುದಕ್ಕಾಗಿ ನಾನೀಗ ಯೋಚಿಸಬೇಕಾಗಿದೆ. 'ಸರ್ವಲೋಕಗಳ ಮುಂದೆ ಅಪಹಾಸ್ಯಕ್ಕೀಡಾಗದಂತೆ ಈಗ ನಾವು ಏನು ಮಾಡಬೇಕು?'–ಎಂಬುದೇ ಈಗಿನ ನನ್ನ ಯೋಚನೆಯಾಗಿದೆ. ದುರ್ಯೋಧನನ ಶಿಬಿರಕ್ಕೆ ನಾನು ಗೂಢಚಾರರನ್ನು ಕಳುಹಿಸಿಕೊಟ್ಟಿದ್ದೆನು. ಅವರು ಶೀಘ್ರಾತಿಶೀಘ್ರವಾಗಿ ನನ್ನ ಬಳಿಗೆ ಬಂದು ನಿನ್ನ ಪ್ರತಿಜ್ಞೆಗೆ ಅವರ ಶಿಬಿರದಲ್ಲಿ ಆಗಿರುವ ಪ್ರತಿಕ್ರಿಯೆಯನ್ನೂ ಮತ್ತು ಮುಂದೆ ಅವರ ಕಾರ್ಯವಿಧಾನವನ್ನೂ ನನಗೆ ತಿಳಿಸಿದ್ದಾರೆ. ಸಿಂಧುರಾಜನನ್ನು ವಧೆಮಾಡುವೆನೆಂದು ನೀನು ಇಲ್ಲಿ ಪ್ರತಿಜ್ಞೆ ಮಾಡಿದೊಡನೆಯೇ ನಮ್ಮ

ಶಿಬಿರದಲ್ಲಿ ಮೊಳಗಿದ ರಣವಾದ್ಯಗಳ ಶಬ್ದಗಳಿಂದಲೂ-ಸಿಂಹನಾದ ಗಳಿಂದಲೂ ಭಯಗೊಂಡ ಧಾರ್ತರಾಷ್ಟ್ರರೂ ಮತ್ತು ಸೈಂಧವರೂ-ನಿಷ್ಕಾರಣ ವಾಗಿ ಈ ಸಿಂಹನಾದಗಳಾಗಿಲ್ಲವೆಂದು ಭಾವಿಸಿ ಒಡನೆಯೇ ಸನ್ನದ್ಧರಾದರು. ಕೌರವರ ಸೈನ್ಯದಲ್ಲಿಯೂ ದೊಡ್ಡದಾದ ಕೋಲಾಹಲಶಬ್ದವುಂಟಾಯಿತು. ಗಜಾಶ್ವ- ರಥ-ಪದಾತಿಗಳ ಭಯಂಕರಘೋಷವು ಎಲ್ಲ ದಿಕ್ಕುಗಳಲ್ಲಿಯೂ ಮೊಳಗಿತು. ಅಭಿಮನ್ಯುವಿನ ವಧೆಯನ್ನು ಕೇಳಿ ಆರ್ತನಾದ ಮತ್ತು ಕ್ರುದ್ಧನಾದ ಧನಂಜಯನು ರಾತ್ರಿಯಲ್ಲಿಯೇ ತಮ್ಮ ಮೇಲೆ ದಾಳಿಮಾಡಲು ಬರುವ ನೆಂದು ಭಾವಿಸಿ ಎಲ್ಲರೂ ಯುದ್ಧಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದರು. ರಾಜೀವಲೋಚನ! ಹೀಗೆ ಅವರು ಯುದ್ಧದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ ಸಮಯದಲ್ಲಿ ಸಿಂಧುರಾಜನನ್ನು ವಧೆಮಾಡುವೆನೆಂದು ಸತ್ಯವ್ರತನಾದ ನೀನು ಮಾಡಿದ ಸತ್ಯಪ್ರತಿಜ್ಞೆಯನ್ನು ಕೇಳಿ ಜಯದ್ರಥನೂ, ದುರ್ಯೋಧನನ ಸಚಿವರೂ ಸಿಂಹಕ್ಕೆ ಬೆದರುವ ಕ್ಷುದ್ರಮೃಗಗಳಂತೆ–ಭಯಗೊಂಡು ನಿರುತ್ಸಾಹಿಗಳಾದರು. ಅನಂತರ ಸಿಂಧು-ಸೌವೀರದೇಶಗಳ ಅರಸನಾದ ಜಯದ್ರಥನು ಬಹಳ ದುಃಖಿತನಾಗಿ ಮಂತ್ರಿಗಳ ಸಮೇತನಾಗಿ ಮೇಲೆದ್ದು ತನ್ನ ಶಿಬಿರದಿಂದ ಹೊರಬಂದನು. ಮಂತ್ರಸಮಾಲೋಚನೆಯ ಸಮಯದಲ್ಲಿ ಶ್ರೇಯಸ್ಸಿಗೆ ಸಾಧನವಾದ ಸಕಲೋಪಾಯಗಳನ್ನೂ ಚೆನ್ನಾಗಿ ಸಮಾಲೋಚಿಸಿ, ಬಳಿಕ ರಾಜಸಭೆಗೆ ಬಂದು ಅಲ್ಲಿ ದುರ್ಯೋಧನಾದಿಗಳನ್ನು ಕುರಿತು ಈ ಮಾತುಗಳನ್ನು ಹೇಳಿದನು : "ದುರ್ಯೋಧನ! ನನ್ನನ್ನೇ ತನ್ನ ಮಗನ ಹಂತಕನೆಂದು ಭಾವಿಸಿರುವ ಅರ್ಜುನನು ನಾಳೆ ನನ್ನ ಮೇಲೆ ಆಕ್ರಮಣನಡೆಸುತ್ತಾನೆ. ಏಕೆಂದರೆ: ಅವನು ತನ್ನ ಸೈನ್ಯದ ಮಧ್ಯದಲ್ಲಿ ನನ್ನನ್ನು ನಾಳೆಯೇ ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ್ದಾನೆ.

ಅರ್ಜುನನ ಆ ಪ್ರತಿಜ್ಞೆಯನ್ನು ದೇವ-ಗಂಧರ್ವರಾಗಲೀ, ಅಸುರ-ಸರ್ಪ-ರಾಕ್ಷಸರಾಗಲೀ ಅನ್ಯಥಾ ಮಾಡಲು ಉತ್ಸುಕರಾಗಿಲ್ಲ. (ಸಮರ್ಥರಾಗಿಲ್ಲ.) ನೀವು ಯುದ್ಧದಲ್ಲಿ ನನ್ನ ರಕ್ಷಣೆಯನ್ನು ಮಾಡಬೇಕು. ಹಾಗೆ ಮಾಡದಿದ್ದರೆ ನಿಮ್ಮೆಲ್ಲರ ತಲೆಯಮೇಲೂ ಕಾಲನ್ನಿಟ್ಟು (ನಿಮ್ಮೆಲ್ಲರನ್ನೂ ಅವಮಾನಿಸಿ) ಅರ್ಜುನನು ತನ್ನ ಲಕ್ಷ್ಯವನ್ನು ಸಾಧಿಸಿಯಾನು. ಆದುದರಿಂದ

ನೀವೆಲ್ಲರೂ ಈಗಲೇ ನನ್ನ ರಕ್ಷಣೆಗೆ ಅವಶ್ಯವಾದ ವ್ಯವಸ್ಥೆಯನ್ನು ಮಾಡಿರಿ. ಕುರುನಂದನ! ಒಂದು ವೇಳೆ ನಿನಗೆ ನನ್ನ ರಕ್ಷಣೆಯನ್ನು ಮಾಡಲಾಗದಿದ್ದರೆ ಅದನ್ನಾದರೂ ಈಗಲೇ ಹೇಳಿಬಿಡು. ನನಗೆ ಅನುಮತಿಯನ್ನಿತ್ತರೆ ನಾನು ನನ್ನ ದೇಶಕ್ಕೆ ಹೊರಟುಹೋಗುತ್ತೇನೆ."

ಜಯದ್ರಥನು ಹೀಗೆ ಹೇಳಿದನಂತರ ದುರ್ಯೋಧನನು ನೀನು ಮಾಡಿರುವ ಪ್ರತಿಜ್ಞೆಯನ್ನು ಕೇಳಿ ಬಹುದುಃಖಿತನಾಗಿ ತಲೆಯನ್ನು ತಗ್ಗಿಸಿಕೊಂಡು ಬಹಳವಾಗಿ ಚಿಂತಿಸತೊಡಗಿದನು. ಆರ್ತನಾಗಿದ್ದ ಅವನನ್ನು ನೋಡಿ ಸಿಂಧುರಾಜನಾದ ಜಯದ್ರಥನು ವ್ಯಂಗ್ಯವಾಗಿಯೂ, ಮೃದುವಾಗಿಯೂ ಮತ್ತು ತನಗೆ ಹಿತವಾಗಿಯೂ ಇದ್ದ ಈ ಮಾತನ್ನು ಹೇಳಿದನು:



**ನೇಹ ಪಶ್ಯಾಮಿ ಭವತಾಂ ತಥಾ ವೀರ್ಯಂ ಧನುರ್ಧರಮ್।**
**ಯೋಽರ್ಜುನಸ್ಯಾಸ್ತ್ರಮಸ್ತ್ರೇಣ ಪ್ರತಿಹನ್ಯಾನ್ಮಹಾಹವೇ ॥೧೯॥**

"ದುರ್ಯೋಧನ! ನಿನ್ನ ಸೈನ್ಯದಲ್ಲಿ ಅರ್ಜುನನು ಬಿಡುವ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ನಿವಾರಣೆಮಾಡುವ, ಅವನಂತೆಯೇ ವೀರ್ಯವಂತನಾದ ಯಾವ ಧನುರ್ಧರನನ್ನೂ ನಾನು ಕಾಣುತ್ತಿಲ್ಲ.

ವಾಸುದೇವನೇ ಸಹಾಯಕನಾಗಿರುವ, ಗಾಂಡೀವಧನುಸ್ಸನ್ನು ಮುಂದೂಡಿಕೊಂಡು ಬರುತ್ತಿರುವ ಅರ್ಜುನನ ಮುಂದೆ ಯಾರು ತಾನೇ ನಿಲ್ಲುತ್ತಾರೆ? ಸಾಕ್ಷಾತ್ ಇಂದ್ರನೇ ಆದರೂ ಅವನ ಮುಂದೆ ನಿಲ್ಲಲು

ಸಾಧ್ಯವಾಗುವುದಿಲ್ಲ. ಹಿಂದೆ ಹಿಮವತ್ಪರ್ವತದ ತಪ್ಪಲಿನಲ್ಲಿ ಪದಾತಿಯಾದ (ರಥ-ಕುದುರೆಗಳೊಂದೂ ಇಲ್ಲದ) ಮಹಾವೀರ್ಯನಾದ ಅರ್ಜುನನು ಮಹೇಶ್ವರನೊಡನೆಯೇ ಯುದ್ಧಮಾಡಿದನೆಂದು ನಾನು ಕೇಳಿದ್ದೇನೆ. ದೇವರಾಜನಿಂದ ಪ್ರಚೋದಿತನಾದ ಅರ್ಜುನನು ಏಕರಥಸಹಾಯನಾಗಿ ಹಿರಣ್ಯಪುರವಾಸಿಗಳಾದ ಸಾವಿರಾರು ರಾಕ್ಷಸರನ್ನು ಸಂಹರಿಸಿದನು. ಧೀಮಂತನಾದ ವಾಸುದೇವನೊಡನೆ ಕೂಡಿಕೊಂಡು ಕೌಂತೇಯನು ದೇವತೆಗಳ ಸಹಿತವಾಗಿ ಮೂರು ಲೋಕಗಳನ್ನೂ ವಿನಾಶಗೊಳಿಸಬಲ್ಲನೆಂದು ನಾನು ಭಾವಿಸುತ್ತೇನೆ. ಈ ಕಾರಣದಿಂದ ನಾನು ಇಲ್ಲಿಂದ ಹೊರಟು ಹೋಗಲು ನಿನ್ನಿಂದ ಅನುಮತಿಯನ್ನು ಅಪೇಕ್ಷಿಸುತ್ತೇನೆ. ಅಥವಾ ಪುತ್ರಸಹಿತರಾದ ಆಚಾರ್ಯ ದ್ರೋಣರಿಂದ ರಕ್ಷಣೆಯ ಆಶ್ವಾಸನೆಯನ್ನು ನಾನು ಅಪೇಕ್ಷಿಸುತ್ತೇನೆ."

ಅರ್ಜುನ! ಜಯದ್ರಥನ ಮಾತನ್ನು ಕೇಳಿ ದುರ್ಯೋಧನನು ತಾನೇ ದ್ರೋಣರ ಬಳಿಗೆ ಹೋಗಿ ಜಯದ್ರಥನನ್ನು ರಕ್ಷಿಸಬೇಕೆಂದು ಬಹಳವಾಗಿ ಕೇಳಿಕೊಂಡನು. ಅವನ ಪ್ರಾರ್ಥನೆಯಂತೆ ದ್ರೋಣರು ಈಗಾಗಲೇ ಅವನ ರಕ್ಷಣೆಗೆ ಸಂಪೂರ್ಣವಾದ ವ್ಯವಸ್ಥೆಯನ್ನು ಮಾಡಿದ್ದಾರೆ. ರಥಗಳೂ ಈಗಾಗಲೇ ಸಜ್ಜಾಗಿವೆ. ಅವರ ಯೋಜನೆಯಂತೆ ಕರ್ಣ, ಭೂರಿಶ್ರವಸ, ಅಶ್ವತ್ಥಾಮ, ದುರ್ಜಯನಾದ ವೃಷಸೇನ, ಕೃಪರು, ಮದ್ರರಾಜನಾದ ಶಲ್ಯ–ಈ ಆರು ಮಂದಿ ಮಹಾರಥರು ಜಯದ್ರಥನ ಮುಂಭಾಗದಲ್ಲಿರುತ್ತಾರೆ. ದ್ರೋಣರು ನಾಳೆಯ ವ್ಯೂಹವನ್ನು ವಿಚಿತ್ರರೀತಿಯಲ್ಲಿ ರಚಿಸುತ್ತಾರೆ. ಅದರ ಅರ್ಧಭಾಗವು ಶಕಟಾಕಾರವಾಗಿಯೂ, ಉಳಿದ ಅರ್ಧಭಾಗವು ಕಮಲದಂತೆಯೂ ಇರುತ್ತದೆ. ಕಮಲವ್ಯೂಹದ ಬೀಜಕೋಶದ ಮಧ್ಯಭಾಗದಲ್ಲಿ ಸೂಚೀವ್ಯೂಹದ ಪಾರ್ಶ್ವದಲ್ಲಿ ಯುದ್ಧದುರ್ಮದನಾದ ಸಿಂಧುರಾಜನಿರುತ್ತಾನೆ. ಧನುರ್ವೇದದಲ್ಲಿ (ಧನುರ್ವಿದ್ಯೆಯಲ್ಲಿ ಮತ್ತು ಅಸ್ತ್ರಗಳಲ್ಲಿ), ವೀರ್ಯದಲ್ಲಿ, ಪರಾಕ್ರಮದಲ್ಲಿ, ಪ್ರಾಣಶಕ್ತಿಯಲ್ಲಿ ಮತ್ತು ಮನೋದಾರ್ಢ್ಯದಲ್ಲಿ ಈ ಆರು ಮಂದಿ ಮಹಾರಥರೂ ಎದುರಿಸಲಾಗದವರೆಂದು ವಿಖ್ಯಾತರಾಗಿದ್ದಾರೆ. ಈ ಆರು ಮಂದಿ ಮಹಾರಥರನ್ನೂ ಜಯಿಸದೇ ಜಯದ್ರಥನು ಸಿಕ್ಕುವುದಿಲ್ಲ. ಪುರುಷಸಿಂಹನೇ! ಮೊದಲು ನೀನು ಈ ಮಹಾರಥರಲ್ಲಿ ಒಬ್ಬೊಬ್ಬರ ಪರಾಕ್ರಮವೇ ಎಷ್ಟೆಂಬುದನ್ನು ಚಿಂತಿಸು. ಅವರೆಲ್ಲರೂ ಒಟ್ಟಾಗಿ

ಸೇರಿದರೆಂದರೆ ಅವರನ್ನು ಜಯಿಸುವುದು ಅಷ್ಟು ಸುಲಭಸಾಧ್ಯವಾಗುವುದಿಲ್ಲ. ನಿನ್ನ ಹಿತಕ್ಕಾಗಿ ಮತ್ತು ಕಾರ್ಯವನ್ನು ಸಾಧಿಸುವ ಸಲುವಾಗಿ ಮಂತ್ರಜ್ಞರಾದ (ನೀತಿವಿಶಾರದರಾದ) ಸಚಿವರೊಡನೆ ನಾನು ಪುನಃ ಸಮಾಲೋಚನೆಯನ್ನು ನಡೆಸುತ್ತೇನೆ."

೭೫ನೆಯ ಅಧ್ಯಾಯವು ಮುಗಿಯಿತು.

೭೬ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಅರ್ಜುನನ ವೀರೋಚಿತವಾದ ವಚನ

ಶ್ರೀಕೃಷ್ಣನ ಮಾತಿಗೆ ಉತ್ತರವಾಗಿ ಅರ್ಜುನನು ಹೇಳುತ್ತಾನೆ:



"ಮಧುಸೂದನ! ಧೃತರಾಷ್ಟ್ರಪುತ್ರನ ಆರು ಮಂದಿ ಮಹಾರಥರನ್ನು ನನಗಿಂತಲೂ ಬಲದಲ್ಲಿ ಅಧಿಕರೆಂದು ಭಾವಿಸುವೆಯಾ? ಅವರೆಲ್ಲರ

ವೀರ್ಯವೂ ಒಟ್ಟಾಗಿ ಸೇರಿದರೂ ನನ್ನ ಪರಾಕ್ರಮದ ಅರ್ಧಕ್ಕೆ ಸಮವಾಗಲಾರದೆಂದು ನಾನು ಭಾವಿಸುತ್ತೇನೆ. ಜಯದ್ರಥನನ್ನು ವಧಿಸಲು ನಿಶ್ಚಯಿಸಿರುವ ನಾನು ಆ ಎಲ್ಲ ಮಹಾರಥರ ಅಸ್ತ್ರಗಳನ್ನೂ ನನ್ನ ಪ್ರತ್ಯಸ್ತ್ರಗಳಿಂದ ಭಗ್ನಗೊಳಿಸುವುದನ್ನು ನೀನೇ ಕಾಣುವೆ. ದ್ರೋಣರು ನೋಡುತ್ತಿರುವಂತೆಯೇ ಸೈನಿಕರೊಡನೆ ವಿಲಾಪಮಾಡುತ್ತಿರುವ ಸಿಂಧುರಾಜನ ತಲೆಯನ್ನು ಕತ್ತರಿಸಿ ಭೂಮಿಯ ಮೇಲೆ ಕೆಡುವುತ್ತೇನೆ.

ಕೃಷ್ಣ! ಸಾಧ್ಯರು, ರುದ್ರರು, ವಸುಗಳು, ಅಶ್ವಿನೀದೇವತೆಗಳು, ಇಂದ್ರ ಸಹಿತರಾದ ಮರುದ್ಗಣಗಳು, ವಿಶ್ವೇದೇವತೆಗಳು, ಈಶ್ವರ, ಪಿತೃದೇವತೆಗಳು, ಗಂಧರ್ವರು, ಗರುಡರು, ಸಮುದ್ರ, ಪರ್ವತ, ಸ್ವರ್ಗ, ಆಕಾಶ, ಭೂಮಿ, ದಿಕ್ಕುಗಳು, ದಿಕ್ಪಾಲಕರು, ಗ್ರಾಮಗಳಲ್ಲಿಯೂ ಮತ್ತು ಅರಣ್ಯಗಳಲ್ಲಿಯೂ ಇರುವ ಪ್ರಾಣಿಗಳು, ಸ್ಥಾವರಗಳು, ಜಂಗಮಗಳು– ಇವುಗಳೆಲ್ಲವೂ ಜಯದ್ರಥನ ರಕ್ಷಣೆಗೆ ಬಂದರೂ ಅವನು ನಾಳೆ ನನ್ನ ಬಾಣಗಳಿಂದ ಹತನಾಗುವುದನ್ನು ನೀನೇ ನೋಡುವೆ. ಈ ಮಾತನ್ನು ಸತ್ಯದಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ ಮತ್ತು ಆಯುಧವನ್ನು ಮುಟ್ಟಿ ಹೇಳುತ್ತಿದ್ದೇನೆ. ಪಾಪಿಷ್ಠನಾದ, ದುರ್ಮತಿಯಾದ ಆ ಜಯದ್ರಥನಿಗೆ ಯಾರು ರಕ್ಷಕರಾಗಿರುವರೋ ಮಹಾಧನುಷ್ಮಂತರಾದ ಆ ದ್ರೋಣರನ್ನೇ ನಾನು ಮೊದಲು ಆಕ್ರಮಿಸುತ್ತೇನೆ. ದ್ಯೂತರೂಪವಾಗಿರುವ ಈ ಯುದ್ಧವು ಆಚಾರ್ಯರನ್ನೇ ಅವಲಂಬಿಸಿದೆಯೆಂದೂ, ಈ ದ್ಯೂತರೂಪದ ಜಯಾಪಜಯಗಳಿಗೆ ದ್ರೋಣರೇ ಬದ್ಧರೆಂದೂ ದುರ್ಯೋಧನನು ಭಾವಿಸಿದ್ದಾನೆ. ಆದುದರಿಂದ ದ್ರೋಣರ ಸೈನ್ಯದ ಅಗ್ರಭಾಗವನ್ನೇ ಭೇದಿಸಿಕೊಂಡು ನಾನು ಸೈಂಧವನ ಬಳಿಗೆ ಹೋಗುತ್ತೇನೆ. ಇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳ ಶಿಖರಗಳನ್ನು ಕತ್ತರಿಸುತ್ತಿದ್ದಂತೆ ತೀಕ್ಷ್ಣವಾಗಿ ಹರಿತಮಾಡಲ್ಪಟ್ಟ ಬಾಣಗಳಿಂದ ಮಹಾಧನುಷ್ಮಂತರ ಶಿರಸ್ಸುಗಳನ್ನು ಹಾರಿಸಿ ಕೆಳಕ್ಕೆ ಬೀಳಿಸುವುದನ್ನು ನೀನು ನಾಳೆಯೇ ನೋಡುವೆ. ಕೃಷ್ಣ! ನಿಶಿತವಾದ ಬಾಣಗಳಿಂದ ಸಂಹರಿಸಿ ಕೆಳಕ್ಕೆ ಬೀಳಿಸಿದ ಮತ್ತು ಬೀಳಿಸುತ್ತಿರುವ ಮತ್ತು ಗಾಯಗೊಂಡಿರುವ ಆನೆ, ಕುದುರೆ ಮತ್ತು ಪದಾತಿಗಳ ದೇಹಗಳಿಂದ ರಕ್ತವು ಧಾರಾಕಾರವಾಗಿ ಸುರಿಯುತ್ತಿರುತ್ತದೆ.

ವೇಗದಲ್ಲಿ ಮನಸ್ಸಿಗೂ ಮತ್ತು ಗಾಳಿಗೂ ಸಮಾನವಾದ, ಗಾಂಡೀವಧನುಸ್ಸಿನಿಂದ ಪ್ರಮುಕ್ತವಾದ ಬಾಣಗಳು ಸಾವಿರಾರು ಗಜಾಶ್ವ-ಪದಾತಿಗಳ ದೇಹಗಳನ್ನೂ, ಪ್ರಾಣಗಳನ್ನೂ ನಾಶಗೊಳಿಸುತ್ತವೆ. ಯಮ, ಕುಬೇರ, ವರುಣ, ಇಂದ್ರ, ರುದ್ರರಿಂದ ನಾನು ಯಾವ ಘೋರವಾದ ಮಹಾಸ್ತ್ರಗಳನ್ನು ಪಡೆದಿರುವೆನೋ-ಅವುಗಳೆಲ್ಲವನ್ನೂ ನಾಳೆ ಮಾನವರು ಯುದ್ಧಸಮಯದಲ್ಲಿ ನೋಡುತ್ತಾರೆ. ಸೈಂಧವನ ರಕ್ಷಕರು ನನ್ನ ಮೇಲೆ ಪ್ರಯೋಗಿಸುವ ಮಹಾಸ್ತ್ರಗಳೆಲ್ಲವನ್ನೂ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ನಿರಸನಗೊಳಿಸುವುದನ್ನು ನೀನು ನಾಳೆಯೇ ಕಾಣುವೆ. ಕೇಶವ! ನನ್ನ ಬಾಣಗಳ ವೇಗದಿಂದ ಕತ್ತರಿಸಲ್ಪಡುವ ರಾಜರ ತಲೆಗಳಿಂದ ರಣಾಂಗಣವು ತುಂಬಿ ಹೋಗುವುದನ್ನು ನಾಳೆ ನೀನೇ ನೋಡುತ್ತೀಯೆ.

**ಕ್ರವ್ಯಾದಾಂಸ್ತರ್ಪಯಿಷ್ಯಾಮಿ ದ್ರಾವಯಿಷ್ಯಾಮಿ ಶಾತ್ರವಾನ್।**
**ಸುಹೃದೋ ನನ್ದಯಿಷ್ಯಾಮಿ ಪ್ರಮಥಿಷ್ಯಾಮಿ ಸೈನ್ಧವಮ್ ॥೧೬॥**

ಮಾಂಸಾಶಿಗಳಾದ ಪ್ರಾಣಿಗಳನ್ನು ನಾಳೆ ತೃಪ್ತಿಪಡಿಸುತ್ತೇನೆ. ಶತ್ರುಪಕ್ಷದ ಸೈನಿಕರನ್ನು ಪಲಾಯನಮಾಡಿಸುತ್ತೇನೆ. ಸುಹೃದರನ್ನು ಸಂತೋಷ ಗೊಳಿಸುತ್ತೇನೆ. ಸೈಂಧವನನ್ನು ಸಂಹಾರಮಾಡುತ್ತೇನೆ.

ಸಿಂಧುರಾಜನಾದ ಜಯದ್ರಥನು ಪಾಪಪೂರ್ಣವಾದ ದೇಶದಲ್ಲಿಯೇ ಹುಟ್ಟಿದ್ದಾನೆ. ಅವನು ನಮಗೆ ಅನೇಕ ಅಪರಾಧಗಳನ್ನು ಮಾಡಿದ್ದಾನೆ. ಅವ ನೊಬ್ಬ ಕೆಟ್ಟ ಸಂಬಂಧಿಯಾಗಿದ್ದಾನೆ. ಅವನು ನಾಳೆಯೇ ನನ್ನಿಂದ ಹತನಾಗಿ ಸ್ವಜನರನ್ನು ಶೋಕಸಾಗರದಲ್ಲಿ ಮುಳುಗಿಸುತ್ತಾನೆ. ಸರ್ವಕಾಲದಲ್ಲಿಯೂ ಕ್ಷೀರಾನ್ನವನ್ನೇ ಊಟಮಾಡುವ, ಪಾಪಚಾರಿಯಾದ ಜಯದ್ರಥನು ರಣಾಂಗಣದಲ್ಲಿ ತನ್ನ ಕಡೆಯ ರಾಜರ ಸಮೇತನಾಗಿ ನನ್ನ ಕ್ರೂರವಾದ ಬಾಣಗಳಿಂದ ಭಿನ್ನನಾಗುವುದನ್ನು ನೀನು ಪ್ರತ್ಯಕ್ಷವಾಗಿ ಕಾಣುವೆ. “ಪಾರ್ಥನಿಗೆ ಸಮಾನನಾದ ಧನುರ್ಧಾರಿಯು ಈ ಲೋಕದಲ್ಲಿ ಬೇರೊಬ್ಬನಿಲ್ಲ”– ಎಂಬುದನ್ನು ದುರ್ಯೋಧನನಿಗೆ ಮನಗಾಣಿಸಲು ಬೆಳಗಾಗುತ್ತಲೇ ನಾನು ಬಹು ಘೋರವಾದ ಯುದ್ಧಮಾಡುತ್ತೇನೆ. ನರಶ್ರೇಷ್ಠನೇ! ಹೃಷೀಕೇಶ!

ದಿವ್ಯವಾದ ಗಾಂಡೀವಧನುಸ್ಸಿರುವಾಗ ನಾನೇ ಯೋಧನಾಗಿರುವಾಗ ಮಹಾಮಹಿಮ ನಾದ ನೀನೇ ಸಾರಥಿಯಾಗಿರುವಾಗ–ನಾನು ಯಾರನ್ನು ತಾನೇ ಜಯಿಸದೇ ಇದ್ದೇನು? ಭಗವನ್! ನಿನ್ನ ಪ್ರಸಾದದಿಂದಾಗಿ ಈ ರಣಾಂಗಣದಲ್ಲಿ ನನ್ನಿಂದ ಎದುರಿಸಲಾಗದುದು ಯಾವುದಿದೆ? ಹೃಷೀಕೇಶನೇ! ಈ ವಿಷಯವನ್ನು ನೀನು ತಿಳಿದಿದ್ದರೂ ವೃಥಾ ನನ್ನನ್ನೇಕೆ ನಿಂದಿಸುವೆ? ಚಂದ್ರನಲ್ಲಿ ಮೃಗಲಾಂಛನವು ಹೇಗೆ ಸ್ಥಿರವಾಗಿರುವುದೋ ಸಮುದ್ರದಲ್ಲಿ ನೀರು ಹೇಗೆ ಸ್ಥಿರವಾಗಿರುವುದೋ–ಅದೇ ರೀತಿಯಲ್ಲಿ ನನ್ನ ಪ್ರತಿಜ್ಞೆಯೂ ಸತ್ಯವಾದು ದೆಂದೂ–ಸ್ಥಿರವಾದುದೆಂದೂ ಭಾವಿಸು, ಕೃಷ್ಣ!

**ಮಾವಮಂಸ್ಥಾ ಮಮಾಸ್ತ್ರಾಣಿ ಮಾವಮಂಸ್ಥಾ ಧನುರ್ದೃಢಮ್।**
**ಮಾವಮಂಸ್ಥಾ ಬಲಂ ಬಾಹ್ವೋರ್ಮಾವಮಂಸ್ಥಾ ಧನಂಜಯಮ್॥**

ಪ್ರಭುವೇ! ನನ್ನ ಅಸ್ತ್ರಗಳನ್ನು ಅವಹೇಳನಮಾಡಬೇಡ. ನನ್ನ ಸುದೃಢವಾದ ಈ ಗಾಂಡೀವಧನುಸ್ಸನ್ನು ತಿರಸ್ಕಾರಮಾಡಬೇಡ. ನನ್ನ ಈ ಭುಜಗಳ ಬಲವನ್ನು ಕಳಪೆಯಾಗಿ ಕಾಣಬೇಡ. ಈ ಧನಂಜಯನನ್ನು ಅಪಮಾನಗೊಳಿಸಬೇಡ. ನಾನು ಯುದ್ಧವನ್ನು ಹೇಗೆ ಮಾಡುವೆನೆಂದರೆ: ಶತ್ರುಗಳನ್ನು ನಾನು ಜಯಿಸುತ್ತೇನೆಯೇ ಹೊರತು ಶತ್ರುಗಳಿಂದ ನಾನು ಜಯಿಸಲ್ಪಡುವುದಿಲ್ಲ. ಆ ರೀತಿಯಲ್ಲಿ ನಾನು ಯುದ್ಧಮಾಡುತ್ತೇನೆ. ಈ ಸತ್ಯದ ಪ್ರಭಾವದಿಂದ ನಾಳಿನ ಸಂಗ್ರಾಮದಲ್ಲಿ ಜಯದ್ರಥನು ಹತನಾದನೆಂದೇ ಭಾವಿಸು.

**ಧ್ರುವಂ ವೈ ಬ್ರಾಹ್ಮಣೇ ಸತ್ಯಂ ಧ್ರುವಾ ಸಾಧುಷು ಸಂನತಿಃ।**
**ಶ್ರೀರ್ಧ್ರುವಾಪಿ ಚ ಯಜ್ಞೇಷು ಧ್ರುವೋ ನಾರಾಯಣೇ ಜಯಃ॥**

ಬ್ರಹ್ಮನಿಷ್ಠನಾದ ಬ್ರಾಹ್ಮಣನಲ್ಲಿ ಸತ್ಯವು ಮೂರ್ತಿಮತ್ತಾಗಿ ನೆಲೆಸಿರುವಂತೆ ಸತ್ಪುರುಷರಲ್ಲಿ ವಿನಯವಿರುವಂತೆ ಯಜ್ಞಗಳಲ್ಲಿ ಲಕ್ಷ್ಮಿಯು ಸುಪ್ರತಿಷ್ಠಿತಳಾಗಿರುವಂತೆ–ನಾರಾಯಣನಾದ ನೀನೆಲ್ಲಿರುವೆಯೋ ಅಲ್ಲಿ ವಿಜಯವೂ ಪ್ರತಿಷ್ಠಿತವಾಗಿರುತ್ತದೆ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಇಂದ್ರನ ಮಗನಾದ ಅರ್ಜುನನು ಗರ್ಜನೆಮಾಡುತ್ತಾ

ಹೃಷೀಕೇಶನನ್ನು ಕುರಿತು ಹೀಗೆ ಹೇಳಿ ಆತ್ಮಸ್ವರೂಪನಾದ ಶ್ರೀಕೃಷ್ಣನನ್ನು ಮನಸ್ಸಿನಿಂದ ತಾನೇ ಸ್ವಲ್ಪಕಾಲ ಚಿಂತಿಸಿ, ಬಳಿಕ ಪ್ರಭುವಾದ ಶ್ರೀಕೃಷ್ಣನಿಗೆ ಆದೇಶವನ್ನಿತ್ತನು:

**ಯಥಾ ಪ್ರಭಾತಾಂ ರಜನೀಂ ಕಲ್ಪಿತಃ ಸ್ಯಾದ್ರಥೋ ಮಮ।**
**ತಥಾ ಕಾರ್ಯಂ ತ್ವಯಾ ಕೃಷ್ಣ ಕಾರ್ಯಂ ಹಿ ಮಹದುದ್ಯತಮ್॥**

"ಕೃಷ್ಣ ! ನಾಳೆ ಬೆಳಗಾಗುತ್ತಲೇ ನನ್ನ ರಥವು ಯುದ್ಧಕ್ಕೆ ಸಜ್ಜಾಗಿರುವಂತೆ ನೀನು ವ್ಯವಸ್ಥೆಮಾಡಬೇಕು. ಏಕೆಂದರೆ: ನಾವು ಅಗಾಧವಾದ ಒಂದು ಮಹಾಕಾರ್ಯವನ್ನು ಪ್ರಾರಂಭಿಸಿಬಿಟ್ಟಿದ್ದೇವೆ. ಯಶಸ್ವಿಯಾಗಿ ಅದನ್ನು ನಿರ್ವಹಿಸುವುದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಬೇಕಾಗಿದೆ."

೭೬ನೆಯ ಅಧ್ಯಾಯವು ಮುಗಿಯಿತು.

೭೭ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ನಾನಾರೀತಿಯ ಅಶುಭಸೂಚಕಗಳಾದ ಉತ್ಪಾತಗಳು: ಕೌರವ ಸೈನಿಕರಲ್ಲಿ ಭಯವುಂಟಾದುದು: ಶ್ರೀಕೃಷ್ಣನು ತಂಗಿಯಾದ ಸುಭದ್ರೆಯನ್ನು ಸಂತೈಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ದುಃಖ-ಶೋಕಾರ್ತರಾಗಿದ್ದ, ಹಾವುಗಳಂತೆಯೇ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ವಾಸುದೇವ-ಧನಂಜಯರಿಗೆ ಆ ರಾತ್ರಿಯಲ್ಲಿ ನಿದ್ರೆಯೇ ಬರಲಿಲ್ಲ. ನರ-ನಾರಾಯಣರಿಬ್ಬರೂ ಕುಪಿತ ರಾಗಿರುವುದನ್ನು ತಿಳಿದು ಇಂದ್ರಪ್ರಮುಖರಾದ ದೇವತೆಗಳೂ ವ್ಯಥಿತರಾಗಿ ಮುಂದೇನಾಗಬಹುದೆಂಬುದರ ಬಗೆಗೆ ಚಿಂತಿಸತೊಡಗಿದರು. ಭಯಸೂಚಕ ವಾದ, ಕ್ರೂರವಾದ ಮತ್ತು ದಾರುಣವಾದ ಗಾಳಿಯು ಬೀಸತೊಡಗಿತು. ರಾಹುವಿನೊಡನೆ ಸೂರ್ಯನಿದ್ದನು. (ಸೂರ್ಯನು ರಾಹುಗ್ರಸ್ತನಾಗಿದ್ದನು.) ಸೂರ್ಯನ ಸುತ್ತಲೂ ದುಂಡಾದ ಪರಿಧಿಯು ಕಬಂಧದೊಡನೆ ಕಾಣಿಸಿ ಕೊಂಡಿತು. ಮಳೆಯೇ ಇಲ್ಲದ ಸಮಯದಲ್ಲಿ ಶುಷ್ಕವಾದ ಸಿಡಿಲುಗಳು ಗರ್ಜನೆಯೊಡನೆ ಮತ್ತು ಮಿಂಚಿನೊಡನೆ ಭೂಮಿಯ ಮೇಲೆ ಬೀಳುತ್ತಿದ್ದುವು.

ಪರ್ವತ-ವನಾರಣ್ಯಗಳಿಂದ ಕೂಡಿದ ಪೃಥ್ವಿಯು ನಡುಗಿತು. ಮೊಸಳೆಗಳಿಗೆ ಆಶ್ರಯಸ್ಥಾನಗಳಾದ ಸಮುದ್ರಗಳು ಅಲ್ಲೋಲ-ಕಲ್ಲೋಲವಾದುವು. ಸಮುದ್ರದ ಕಡೆಗೆ ಹರಿಯುತ್ತಿದ್ದ ನದಿಗಳು ಹುಟ್ಟಿದ ಕಡೆಗೇ ತಿರುಗಿ ಹರಿಯತೊಡಗಿದುವು. ಯಮನ ರಾಷ್ಟ್ರದ ವೃದ್ಧಿಗಾಗಿ ಮತ್ತು ಹಿಂಸ್ರಪ್ರಾಣಿಗಳ ಸಂತೋಷಾರ್ಥವಾಗಿ ಅಶ್ವ-ಗಜ-ರಥ-ಪದಾತಿಸೈನಿಕರ ಎರಡು ತುಟಿಗಳೂ ಅದುರತೊಡಗಿದುವು. ಆನೆ-ಕುದುರೆ ಮೊದಲಾದ ಪ್ರಾಣಿಗಳು ಮಲ-ಮೂತ್ರೋತ್ಸರ್ಜನೆಗಳನ್ನು ಮಾಡುತ್ತಾ ಗಟ್ಟಿಯಾಗಿ ಕಿರುಚತೊಡಗಿದುವು. ರೋಮಾಂಚಕಾರಕವಾದ, ದಾರುಣವಾದ ಆ ಎಲ್ಲ ಉತ್ಪಾತಗಳನ್ನೂ ನೋಡಿ, ಮಹಾಬಲನಾದ ಸವ್ಯಸಾಚಿಯ ಉಗ್ರವಾದ ಪ್ರತಿಜ್ಞೆಯನ್ನೂ ಕೇಳಿ ನಿನ್ನ ಕಡೆಯ ಎಲ್ಲ ಸೈನಿಕರೂ ವ್ಯಥಿತರಾದರು. ಅನಂತರ ಮಹಾಬಾಹುವಾದ ಅರ್ಜುನನು ಕೃಷ್ಣನನ್ನು ಕುರಿತು ಹೇಳಿದನು: "ಮಾಧವ! ನಿನ್ನ ತಂಗಿಯಾದ ಸುಭದ್ರೆಯನ್ನೂ, ಸೊಸೆಯಾದ ಉತ್ತರೆಯನ್ನೂ ಸಂತೈಸು. ಉತ್ತರೆಯ ಮತ್ತು ಅವಳ ಸಖಿಯರ ಶೋಕವನ್ನು ಸುನೀತವಾದ ಮಾತುಗಳಿಂದ ದೂರಮಾಡು. ಕೃಷ್ಣ! ಶಾಂತಿಪೂರ್ಣವಾದ, ಸತ್ಯವಾದ ಮತ್ತು ಯುಕ್ತಿಯುಕ್ತವಾದ ಮಾತುಗಳಿಂದ ಅವರನ್ನು ಸಂತೈಸು."

ಮಹಾರಾಜ! ಅರ್ಜುನನು ಹೀಗೆ ಹೇಳುತ್ತಲೇ ಬಹಳ ಭಾರವಾದ ಮನಸ್ಸಿನಿಂದ ಶ್ರೀಕೃಷ್ಣನು ಅರ್ಜುನನ ಮನೆಗೆ ಹೋಗಿ ಪುತ್ರಶೋಕಾರ್ತಳಾಗಿದ್ದ, ಬಹಳ ದುಃಖಿತಳಾಗಿದ್ದ ತನ್ನ ತಂಗಿಯನ್ನು ಸವಿಮಾತುಗಳಿಂದ ಸಂತೈಸಿದನು:

"ವತ್ಸೇ ಸುಭದ್ರೇ! ನೀನಾಗಲೀ, ನಿನ್ನ ಸೊಸೆಯಾದ ಉತ್ತರೆಯಾಗಲೀ ಅಭಿಮನ್ಯುಕುಮಾರನ ಮರಣದ ವಿಷಯವಾಗಿ ದುಃಖಪಡಬಾರದು.

ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳಿಗೂ ಕಾಲನಿರ್ಮಿತವಾದ ಇಂತಹ ಒಂದು ಅವಸ್ಥೆಯು ಬಂದೇ ಬರುತ್ತದೆ. ಸತ್ಕುಲಪ್ರಸೂತನಾದ, ಧೀರನಾದ, ಅದರಲ್ಲಿಯೂ ವಿಶೇಷವಾಗಿ ಕ್ಷತ್ರಿಯನಾದ ನಿನ್ನ ಮಗನಿಗೆ ಇದು ಯೋಗ್ಯವಾದ ಮರಣವೇ ಆಗಿದೆ. ಆದುದರಿಂದ ನೀನು ದುಃಖಿಸಬೇಡ.

ತಂದೆಗೆ ಸಮಾನವಾದ ಪರಾಕ್ರಮದಿಂದ ಕೂಡಿದ್ದ, ಮಹಾರಥನಾದ, ಧೀರನಾದ ಅಭಿಮನ್ಯುವು ಸೌಭಾಗ್ಯವಶಾತ್ ಕ್ಷಾತ್ರಧರ್ಮವನ್ನು ಪರಿಪಾಲನೆಮಾಡುತ್ತಾ ವೀರಪುರುಷರು ಆಶಿಸುವ ಉತ್ತಮಗತಿಯನ್ನೇ ಪಡೆದಿರುವನು. ಸಾವಿರಾರು ಶತ್ರುಗಳನ್ನು ಜಯಿಸಿ, ಸಾವಿರಾರು ಶತ್ರುಗಳನ್ನು ಯಮಲೋಕಕ್ಕೂ ಕಳುಹಿಸಿ, ಸಕಲವಿಧವಾದ ಕಾಮನೆಗಳನ್ನೂ ಒದಗಿಸಿ ಕೊಡುವ, ಪುಣ್ಯಮಾಡಿದವರಿಗೆ ಮಾತ್ರವೇ ಲಭಿಸುವ ಅಕ್ಷಯವಾದ ಲೋಕಗಳಿಗೆ ಹೋಗಿರುವನು. ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ಶಾಸ್ತ್ರಜ್ಞಾನದಿಂದಲೂ, ಸದ್ಬುದ್ಧಿಯಿಂದಲೂ-ಸತ್ಪುರುಷರು ಯಾವ ಪುಣ್ಯ ಲೋಕಗಳನ್ನು ಪಡೆದುಕೊಳ್ಳಲು ಇಚ್ಛಿಸುತ್ತಾರೆಯೋ ಅಂತಹ ಪುಣ್ಯ ಲೋಕಗಳನ್ನು ನಿನ್ನ ಮಗನು ಹೊಂದಿರುವನು.



ವೀರಸೂರ್ವೀರಪತ್ನೀ ತ್ವಂ ವೀರಜಾ ವೀರಬಾನ್ಧವಾ ।
ಮಾ ಶುಚಸ್ತನಯಂ ಭದ್ರೇ ಗತಃ ಸ ಪರಮಾಂ ಗತಿಮ್ ॥೧೭॥

ಸುಭದ್ರೇ! ನೀನು ವೀರಮಾತೆಯಾಗಿರುವೆ. ವೀರಪತ್ನಿಯಾಗಿರುವೆ. ವೀರಪುತ್ರಿಯಾಗಿರುವೆ. ನಿನ್ನ ಬಾಂಧವರೆಲ್ಲರೂ ಮಹಾವೀರರೇ ಆಗಿದ್ದಾರೆ. ಆದುದರಿಂದ ವೀರಪುತ್ರನಿಗಾಗಿ ನೀನು ದುಃಖಿಸಬೇಡ. ಅವನು ಉತ್ತಮಗತಿಯನ್ನು ಹೊಂದಿದ್ದಾನೆ.

ಪಾಪಕರ್ಮವನ್ನು ಮಾಡಿರುವ, ಬಾಲಘಾತಕನಾದ, ಪಾಪಿಷ್ಠನಾದ ಆ ಸೈಂಧವನೂ ರಾತ್ರಿಯು ಕಳೆದು ಬೆಳಗಾಗುತ್ತಲೇ ತನ್ನ ಪಾಪಕರ್ಮದ (ಗರ್ವದ) ಫಲವನ್ನು ಸುಹೃದ್ಗಣ-ಬಂಧುಸಮೇತನಾಗಿ ಪಡೆದುಕೊಳ್ಳುತ್ತಾನೆ. ಅಮರಾವತಿಯನ್ನು ಪ್ರವೇಶಿಸಿದರೂ ಅವನು ಅರ್ಜುನನಿಂದ ತಪ್ಪಿಸಿಕೊಳ್ಳಲಾರನು. ಯುದ್ಧದಲ್ಲಿ ಆ ಪಾಪಿಷ್ಠನಾದ ಸೈಂಧವನ ಶಿರಸ್ಸು ಹಾರಿಹೋಯಿತೆಂಬ ಮತ್ತು ಅದು ಸಮಂತಪಂಚಕದ ಹೊರಭಾಗದಲ್ಲಿ ಬಿದ್ದಿತೆಂಬ ಶುಭವಾರ್ತೆಯನ್ನು ನಾಳೆಯೇ ನೀನು ಕೇಳುವೆ. ಆದುದರಿಂದ ನೀನು ಶೋಕರಹಿತಳಾಗು; ವೃಥಾ ಅಳಬೇಡ. ಕ್ಷತ್ರಧರ್ಮವನ್ನು ಪುರಸ್ಕರಿಸಿ ಶೂರನಾದ ಅಭಿಮನ್ಯುವು ಸತ್ಪುರುಷರು ಪಡೆಯುವ ಸದ್ಗತಿಯನ್ನೇ ಪಡೆದಿದ್ದಾನೆ. ಈ ಪ್ರಪಂಚದಲ್ಲಿರುವ ಇತರ ಶಸ್ತ್ರಜೀವಿಗಳೂ ಮತ್ತು ನಾವೂ ಸಹ ಮುಂದೆ ಅದೇ ಗತಿಯನ್ನೇ ಹೊಂದುತ್ತೇವೆ. ತಂಗಿ! ವಿಶಾಲವಾದ ಎದೆಯುಳ್ಳ, ಮಹಾಬಾಹುವಾದ, ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸದೇ ಇದ್ದ, ಶತ್ರುಪಕ್ಷದ ರಥಸೈನಿಕರನ್ನು ಬಾರಿ-ಬಾರಿಗೂ ಜಯಿಸುತ್ತಿದ್ದ ನಿನ್ನ ಮಗನು ಸ್ವರ್ಗಕ್ಕೆ ಹೋಗಿದ್ದಾನೆ. ಇನ್ನಾದರೂ ನಿನ್ನ ಚಿಂತೆಯನ್ನು ದೂರಮಾಡು. ಬಲಿಷ್ಠನಾದ, ಶೂರನಾದ, ಮಹಾರಥನಾದ ಅಭಿಮನ್ಯುವು ಪಿತೃಕುಲ ಮತ್ತು ಮಾತೃಕುಲಗಳ ಮರ್ಯಾದೆಯನ್ನು ಅನುಸರಿಸುತ್ತಾ ಸಾವಿರಾರು ಮಂದಿ ಶತ್ರುಗಳನ್ನು ಸಂಹರಿಸಿ ಕಡೆಯಲ್ಲಿ ಹತನಾದನು.

ನಂದಿನಿ! ನೀನೂ ಹೀಗೆ ದುಃಖಿಸುತ್ತಾ ಕುಳಿತಿದ್ದರೆ ನಿನ್ನ ಸೊಸೆಯನ್ನು ಸಮಾಧಾನಮಾಡುವುದೆಂತು? ನೀನೂ ಸಮಾಧಾನವನ್ನು ತಂದುಕೊ. ಕ್ಷತ್ರಿಯಳೇ! ಮಹಾರಾಜ್ಞಿ! ದುಃಖಸಾಗರದಲ್ಲಿ ಮುಳುಗಿಹೋಗಿರುವ ನಿನ್ನ ಸೊಸೆಯನ್ನೂ ಸಾಂತ್ವವಚನಗಳಿಂದ ಸಂತೈಸು. ನಾಳೆಯೇ ನೀನು ಅತ್ಯಂತ ಪ್ರಿಯಕರವಾದ ಮಾತನ್ನು ಕೇಳುವೆ; ವಿಶೋಕಳಾಗು. ಪಾರ್ಥನು ಯಾವ

ವಿಷಯಕ್ಕೆ ಪ್ರತಿಜ್ಞೆಮಾಡುತ್ತಾನೆಯೋ ಅದು ಹಾಗೆಯೇ ನಡೆಯುತ್ತದೆ. ಅನ್ಯರೀತಿಯಲ್ಲಿ ಅಥವಾ ತದ್ವಿರುದ್ಧವಾಗಿ ನಡೆಯುವುದಿಲ್ಲ. ನಿನ್ನ ಪತಿಯು ಯಾವುದನ್ನು ಮಾಡಲು ಇಚ್ಛಿಸುತ್ತಾನೆಯೋ ಅದು ಇದುವರೆಗೆ ಯಾವಾಗಲೂ ನಿಷ್ಫಲವಾಗಿಲ್ಲ. ಮನುಷ್ಯರು, ಸರ್ಪಗಳು, ಪಿಶಾಚಗಳು, ರಜನೀಚರರು, ಪಕ್ಷಿಗಳು, ಸುರರು, ಅಸುರರು–ಇವರೆಲ್ಲರೂ ಒಟ್ಟಾಗಿ ಸೇರಿ ರಣಕ್ಷೇತ್ರಕ್ಕೆ ಹೋಗಿರುವ ಸಿಂಧುರಾಜನನ್ನು ರಕ್ಷಿಸಲು ಹೋದರೂ ನಾಳೆ ಮುಂಜಾನೆ ಅವರೆಲ್ಲರೊಡನೆಯೂ ಅವನು ಉಳಿಯುವುದಿಲ್ಲ. ಅವನೂ ಹತನಾಗುತ್ತಾನೆ. ಅವನನ್ನು ರಕ್ಷಿಸಲು ಬರುವ ಪ್ರಾಣಿಗಳೂ ಹತವಾಗುತ್ತವೆ. (ರಕ್ಷಿಸಲು ಬರುವವರೂ ಹತರಾಗುತ್ತಾರೆ.)"

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಸುಭದ್ರೆಯ ವಿಲಾಪ: ಶ್ರೀಕೃಷ್ಣನು ಎಲ್ಲರನ್ನೂ ಸಂತೈಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮಹಾತ್ಮನಾದ, ಕೇಶವನ ಸಾಂತ್ವವಚನಗಳನ್ನು ಕೇಳಿಯೂ ಪುತ್ರಶೋಕಾರ್ತಳಾದ ಬಹುದುಃಖಿತಳಾದ ಸುಭದ್ರೆಯು ಗಟ್ಟಿಯಾಗಿ ಅಳುತ್ತಿದ್ದಳು.

"ಹಾ ಪುತ್ರ! ಹಾ ಕುಮಾರ! ನೀನು ಮಂದಭಾಗ್ಯಳಾದ ನನ್ನ ಗರ್ಭದಲ್ಲಿ ಹುಟ್ಟಿದೆ. ತಂದೆಗೆ ಅನುರೂಪನಾದ ಪರಾಕ್ರಮಿಯೂ ಆದೆ. ಅಂತಹ ಅತುಲಪರಾಕ್ರಮಿಯಾದ ನೀನು ಯುದ್ಧದಲ್ಲಿ ಹೇಗೆ ಮರಣಹೊಂದಿದೆ? ವತ್ಸ! ನಿನ್ನ ಮುಖವು ಕನ್ನೈದಿಲೆಯಂತೆ ಶ್ಯಾಮಲವರ್ಣದ್ದಾಗಿದ್ದಿತು. ನಿನಗೆ ಮುತ್ತಿನಂತಹ ಮುದ್ದಾದ ಹಲ್ಲುಗಳ ಸಾಲುಗಳಿದ್ದುವು. ನಿನ್ನ ಕಣ್ಣುಗಳು ಥಳ-ಥಳಿಸುತ್ತಾ ಬಹಳ ಸುಂದರವಾಗಿದ್ದುವು. ಶ್ಯಾಮಲವರ್ಣದಿಂದಲೂ, ಒಳ್ಳೆಯ ಹಲ್ಲುಗಳಿಂದಲೂ, ಚೆಲುವಾದ ಕಣ್ಣುಗಳಿಂದಲೂ ಕೂಡಿದ್ದ ಸುಂದರಮುಖವು ಇಂದು ಧೂಳಿನಿಂದ ಆಚ್ಛಾದಿತವಾಗಿ ಹೇಗೆ ಕಾಣುತ್ತಿದೆಯೋ? ಯುದ್ಧದಿಂದ ಹಿಂದಿರುಗದ, ಸುಂದರವಾದ ಶಿರಸ್ಸಿನಿಂದಲೂ

ಕಂಬುಕಂಠದಿಂದಲೂ, ನೀಳವಾದ ಬಾಹುಗಳಿಂದಲೂ, ಉನ್ನತವಾದ ಹೆಗಲುಗಳಿಂದಲೂ, ವಿಸ್ತಾರವಾದ ಎದೆಯಿಂದಲೂ, ಆಳವಾಗಿರುವ ಅಥವಾ ಚಪ್ಪಟೆಯಾಗಿರುವ ಹೊಟ್ಟೆಯಿಂದಲೂ, ಸುಂದರವಾಗಿರುವ ಮತ್ತು ದಷ್ಟ-ಪುಷ್ಟವಾಗಿರುವ ಸರ್ವಾಂಗಗಳಿಂದಲೂ, ಸುಂದರವಾದ ಕಣ್ಣು ಗಳಿಂದಲೂ ಕೂಡಿರುವ, ಶಸ್ತ್ರಗಳಿಂದ ಕ್ಷತ-ವಿಕ್ಷತವಾದ ಶರೀರದಿಂದ ಕೂಡಿ ಭೂಮಿಯ ಮೇಲೆ ಬಿದ್ದಿರುವ ಉದಯಿಸಿದ ಚಂದ್ರನಂತೆಯೇ ಕಾಣುತ್ತಿರುವ ನಿನ್ನನ್ನು ಎಲ್ಲ ಪ್ರಾಣಿಗಳೂ ಎವೆಯಿಕ್ಕದೆ ನೋಡುತ್ತವೆ. ವತ್ಸ! ಹಿಂದೆ, ಬಹುಮೂಲ್ಯವಾದ ರತ್ನಗಂಬಳಿಯಿಂದ ಆಚ್ಛಾದಿತವಾದ ಹಂಸತೂಲಿಕಾ ತಲ್ಪದಲ್ಲಿ ನೀನು ಮಲಗುತ್ತಿದ್ದೆ. ಸುಖಪಡಲು ಯೋಗ್ಯನಾದ ನೀನು ಈ ವಯಸ್ಸಿನಲ್ಲಿ ಇಂದು ಬಾಣಗಳಿಂದ ಗಾಯಗೊಂಡು ಭೂಮಿಯ ಮೇಲೆ ಹೇಗೆ ಮಲಗಿರುವೆ? ಮಹಾಬಾಹುವಾದ ನನ್ನ ವೀರಪುತ್ರನ ಬಳಿಯಲ್ಲಿ ಹಿಂದೆ ಸುಂದರಸ್ತ್ರೀಯರು ಕುಳಿತು ಸೇವೆಮಾಡುತ್ತಿದ್ದರು. ಆ ನನ್ನ ಕುಮಾರನೇ ಈಗ ಯುದ್ಧಭೂಮಿಯಲ್ಲಿ ಮಲಗಿದ್ದಾನೆ. ಈಗ ಅವನ ಬಳಿಯಲ್ಲಿ ನಾಯಿ-ನರಿಗಳಿವೆ. ಇದು ಹೇಗೆ ಸಂಭವಿಸಿತು? ಮೊದಲು ನಿನ್ನನ್ನು ಹೃಷ್ಟರಾದ ಸೂತ-ಮಾಗಧ-ವಂದಿಗಳು ಸ್ತೋತ್ರಮಾಡುತ್ತಿದ್ದರು. ಅಂತಹ ನೀನಿಂದು ಘೋರವಾಗಿ ಕೂಗಿಕೊಳ್ಳುವ ಮಾಂಸಾಶಿಗಳಾದ ಪ್ರಾಣಿಗಳಿಂದ ಉಪಾಸ್ಯನಾಗಿರುವೆ. ಮಗು! ಅಭಿಮನ್ಯೋ! ನಿನಗೆ ರಕ್ಷಕರಿರಲಿಲ್ಲವೇ? ಪಾಂಡವರೂ ನಿನಗೆ ರಕ್ಷಕರೇ ಆಗಿದ್ದರು. ವೃಷ್ಣಿಗಳೂ ರಕ್ಷಕರೇ ಆಗಿದ್ದರು. ಪಾಂಚಾಲವೀರರೂ ಸಹ ನಿನ್ನ ರಕ್ಷಣೆಯಲ್ಲಿಯೇ ಸರ್ವದಾ ನಿರತರಾಗಿದ್ದರು. ಇಂತಹ ಮಹಾವೀರರ ರಕ್ಷಣೆಯಲ್ಲಿದ್ದ ನೀನು ರಕ್ಷಕರೇ ಇರಲಿಲ್ಲವೋ ಎಂಬಂತೆ ಯಾವನೋ ಒಬ್ಬ ಸಾಮಾನ್ಯನಾದ ಮನುಷ್ಯನಿಂದ ಹತನಾದೆ. ಇದನ್ನು ನಾನು ಹೇಗೆ ಸಹಿಸಲಿ? ಪುತ್ರ! ನಿನ್ನನ್ನು ನೋಡಲೆಂದೇ ನಾನು ಸರ್ವದಾ ಕಾತರಳಾಗಿರುತ್ತಿದ್ದೆನು. ನಿನ್ನನ್ನು ಎಷ್ಟು ನೋಡಿದರೂ ನನಗೆ ಸಾಕೆನ್ನಿಸುತ್ತಿರಲೇ ಇರಲಿಲ್ಲ. ಆದುದರಿಂದ ನಿನ್ನನ್ನು ಕಾಣದ ಮಂದಭಾಗ್ಯಳಾದ ನಾನು ಯಮಾಲಯಕ್ಕೆ ಹೋಗುವುದು ನಿಶ್ಚಯ.

ವಿಶಾಲಾಕ್ಷನಾದ, ಸುಂದರವಾದ ಗುಂಗುರುಕೂದಲಿನಿಂದ ಕೂಡಿ ರುವ, ಇಂಪಾಗಿ ಮಾತನಾಡುವ, ಸುಗಂಧಯುಕ್ತವಾದ, ಗಾಯಗಳಿಂದ ವಿಹೀನವಾಗಿರುವ ನಿನ್ನ ಸುಂದರಮುಖಾರವಿಂದವನ್ನು ನಾನು ಪುನಃ ಯಾವಾಗ ನೋಡುವೆನು? ನಿನ್ನಂತಹ ಸುಂದರನಾದ ಎಳೆಯ ಪ್ರಾಯದ

ಬಾಲಕನನ್ನು ರಕ್ಷಿಸದೇ ಯುದ್ಧದಲ್ಲಿ ಬಲಿಗೊಟ್ಟ ಭೀಮಸೇನನ ಬಲಕ್ಕೂ ಧಿಕ್ಕಾರವಿರಲಿ! ಪಾರ್ಥನ ಧನುಷ್ಮತ್ತೆಗೂ ಧಿಕ್ಕಾರವಿರಲಿ! ಯುದ್ಧಕ್ಕೆ ಹೋಗಿದ್ದ, ವೀರರಾದ, ನಿನ್ನನ್ನು ರಕ್ಷಿಸಲು ಅಸಮರ್ಥರಾದ ವೃಷ್ಣಿವೀರರಿಗೂ, ಪಾಂಚಾಲರಿಗೂ, ಕೇಕಯರಿಗೂ, ಚೇದಿಗಳಿಗೂ, ಮತ್ಸ್ಯರಿಗೂ, ಸೃಂಜಯರಿಗೂ ಧಿಕ್ಕಾರವಿರಲಿ! ಅಭಿಮನ್ಯುವನ್ನು ನೋಡದೇ ಇರುವುದ ರಿಂದ ನನ್ನ ಕಣ್ಣುಗಳು ಶೋಕದಿಂದ ವ್ಯಾಕುಲಗೊಂಡಿವೆ. ಇಂದು ನನಗೆ ಈ ಪ್ರಪಂಚವೇ ಶೂನ್ಯವಾಗಿಯೂ, ಕಾಂತಿಹೀನವಾಗಿಯೂ ಕಾಣುತ್ತಿದೆ. ವಾಸುದೇವನ ಸೋದರಳಿಯನೂ, ಗಾಂಡೀವಧನ್ವನಾದ ಅರ್ಜುನನ ಪುತ್ರನೂ, ಅತಿರಥನೂ ಆಗಿರುವ ಅಭಿಮನ್ಯುವು ಇಂದು ರಣಾಂಗಣದಲ್ಲಿ ಬಿದ್ದಿರುವುದನ್ನು ನಾನು ಹೇಗೆ ನೋಡಲಿ?"

ಸುಭದ್ರೆಯು ಭ್ರಾಂತಳಾಗಿ ಹೇಳುತ್ತಾಳೆ:

"ಬಾ ಮಗು! ಬೇಗ ಬಾ. ನಿನಗೆ ದಣಿದು ಬಾಯಾರಿಕೆ ಯಾಗಿದೆಯಲ್ಲವೇ? ನಿನ್ನನ್ನು ಎಷ್ಟು ನೋಡಿದರೂ ತೃಪ್ತಿಯೇ ಇಲ್ಲದ ಮಂದಭಾಗ್ಯಳಾದ ನನ್ನ ತೊಡೆಯ ಮೇಲೆ ಮಲಗಿ ಕ್ಷೀರಪೂರ್ಣವಾಗಿರುವ ಸ್ತನಗಳಿಂದ ಹಾಲುಕುಡಿ. ವೀರನೇ! ನೀನು ಸ್ವಪ್ನದಲ್ಲಿ ಸಿಕ್ಕುವ ಹಣದಂತೆ–ಕಾಣಿಸಿಕೊಂಡು ಸ್ವಲ್ಪಕಾಲದಲ್ಲಿಯೇ ನಷ್ಟವಾಗಿ ಹೋದೆ. ನಿಶ್ಚಯವಾಗಿಯೂ ಮನುಷ್ಯಜನ್ಮವು ನೀರಿನಲ್ಲಿನ ನೊರೆಯಂತೆ–ಚಂಚಲವಾದುದು ಮತ್ತು ಅನಿತ್ಯವಾದುದು. ವಿರಹರೂಪವಾದ ಶೋಕಸಾಗರದಲ್ಲಿ ಮುಳುಗಿಹೋಗಿ ರುವ, ತರುಣಿಯಾದ, ಕರುವನ್ನು ಕಳೆದುಕೊಂಡ ಹಸುವಿನಂತೆ ಚಡಪಡಿಸುತ್ತಿರುವ ಈ ನಿನ್ನ ಪತ್ನಿಯನ್ನು ನಾನು ಹೇಗೆ ತಾನೇ ಸಂತೈಸಲಿ? ಪುತ್ರಕ! ನಿನಗೆ ಪುತ್ರಪ್ರಾಪ್ತಿಯಾಗಲಿದ್ದ ಈ ಸಮಯದಲ್ಲಿ ನಿನ್ನನ್ನು ನೋಡಲು ಉತ್ಸುಕಳಾಗಿದ್ದ ನನ್ನನ್ನೂ ನೋಡದೇ ಅಕಾಲದಲ್ಲಿ ನೀನು ಇಲ್ಲಿಂದ ಹೊರಟುಹೋದೆ. (ಅದರ ಫಲವೇ ಇದಾಗಿರಬಹುದು.) ನಿಶ್ಚಯ ವಾಗಿಯೂ ಕಾಲಗತಿಯನ್ನು ವಿದ್ವಾಂಸರಿಂದಲೂ ತಿಳಿಯಲು ಸಾಧ್ಯವಾಗುವು ದಿಲ್ಲ. ವಿಶ್ವಕ್ಕೇ ನಾಥನಾದ ಶ್ರೀಕೇಶವನೇ ನಿನಗೆ ನಾಥನಾಗಿದ್ದರೂ ಕೇವಲ ಅನಾಥನಂತೆ–ರಕ್ಷಕರೇ ಇಲ್ಲದವನಂತೆ ನೀನು ಯುದ್ಧದಲ್ಲಿ ಹತನಾದೆ ಯಲ್ಲವೇ? ವತ್ಸ!

**ಯಜ್ವನಾಂ ದಾನಶೀಲಾನಾಂ ಬ್ರಾಹ್ಮಣಾನಾಂ ಕೃತಾತ್ಮನಾಮ್।**
**ಚರಿತಬ್ರಹ್ಮಚರ್ಯಾಣಾಂ ಪುಣ್ಯತೀರ್ಥಾವಗಾಹಿನಾಮ್ ॥೨೧॥**

**ಕೃತಜ್ಞಾನಾಂ ವದಾನ್ಯಾನಾಂ ಗುರುಶುಶ್ರೂಷಿಣಾಮಪಿ।**
**ಸಹಸ್ರದಕ್ಷಿಣಾನಾಂ ಚ ಯಾ ಗತಿಸ್ತಾಮವಾಪ್ನುಹಿ ॥೨೨॥**

ಯಜ್ಞಮಾಡಿದವರಿಗೆ, ದಾನಿಗಳಿಗೆ, ಜಿತೇಂದ್ರಿಯರಿಗೆ, ಬ್ರಹ್ಮವಿದರಾದ ಬ್ರಾಹ್ಮಣರಿಗೆ, ಬ್ರಹ್ಮಚರ್ಯವ್ರತದಿಂದ ಇರುವವರಿಗೆ, ಪುಣ್ಯತೀರ್ಥಗಳಲ್ಲಿ ವಿಧಿಪ್ರಕಾರವಾಗಿ ಮಿಂದವರಿಗೆ, ಕೃತಜ್ಞರಿಗೆ, ಉದಾರಿಗಳಿಗೆ, ಗುರುಸೇವಾತತ್ಪರರಿಗೆ, ಸಾವಿರಾರು ಸಂಖ್ಯೆಯಲ್ಲಿ ದಕ್ಷಿಣೆಯನ್ನು ಕೊಡುವ ಪುಣ್ಯಾತ್ಮರಿಗೆ ಯಾವ ಸದ್ಗತಿಯು ಲಭಿಸುವುದೋ–ಅದೇ ಸದ್ಗತಿಯನ್ನು ನೀನೂ ಹೊಂದು.

**ಯಾ ಗತಿರ್ಯುಧ್ಯಮಾನಾನಾಂ ಶೂರಾಣಾಮನಿವರ್ತಿನಾಮ್ ।**
**ಹತ್ವಾರೀನ್ನಿಹತಾನಾಂ ಚ ಸಂಗ್ರಾಮೇ ತಾಂ ಗತಿಂ ವ್ರಜ ॥೨೩॥**

ರಣಾಂಗಣದಲ್ಲಿ ಶತ್ರುಗಳಿಗೆ ಬೆನ್ನುತೋರಿಸದೇ ಯುದ್ಧಮಾಡುತ್ತಾ, ಶತ್ರುಗಳನ್ನು ಅಪಾರಸಂಖ್ಯೆಯಲ್ಲಿ ಸಂಹಾರಮಾಡಿ ಕಡೆಗೆ ಆಯುಧಗಳಿಂದಲೇ ಮಡಿಯುವ ವೀರರಿಗೆ ಯಾವ ಸದ್ಗತಿಯುಂಟೋ-ಆ ಸದ್ಗತಿಯನ್ನೇ ನೀನೂ ಪಡೆದುಕೊ.

**ಗೋಸಹಸ್ರಪ್ರದಾತ್ಯಣಾಂ ಕ್ರತುದಾನಾಂ ಚ ಯಾ ಗತಿಃ ।**
**ನೈವೇಶಿಕಂ ಚಾಭಿಮತಂ ದದತಾಂ ಯಾ ಗತಿಃ ಶುಭಾ ॥೨೪॥**

ಸಾವಿರ ಗೋವುಗಳನ್ನು ದಾನಮಾಡುವವರಿಗೆ, ಯಜ್ಞಮಾಡಲು ಬೇಕಾಗುವ ಸಾಮಗ್ರಿಗಳನ್ನು ದಾನಮಾಡುವವರಿಗೆ, ಮನಸ್ಸಿಗೆ ತೃಪ್ತಿಯಾಗುವ ರೀತಿಯಲ್ಲಿರುವ ಸಕಲಸಂಭಾರಗಳಿಂದಲೂ ಸಮೃದ್ಧವಾದ ನಿವಾಸಸ್ಥಾನಗಳನ್ನು ದಾನಮಾಡುವವರಿಗೆ ಯಾವ ಸದ್ಗತಿಯು ಸಿಕ್ಕುವುದೋ-ಆ ಸದ್ಗತಿಯೇ ನಿನಗೂ ಲಭಿಸಲಿ.

**ಬ್ರಾಹ್ಮಣೇಭ್ಯಃ ಶರಣ್ಯೇಭ್ಯೋ ನಿಧಿಂ ನಿದಧತಾಂ ಚ ಯಾ ।**
**ಯಾ ಚಾಪಿ ನ್ಯಸ್ತದಣ್ಡಾನಾಂ ತಾ ಗತಿಂ ವ್ರಜ ಪುತ್ರಕ ॥೨೫॥**

ರಕ್ಷಣೆಗೆ ಯೋಗ್ಯರಾದ ಬ್ರಾಹ್ಮಣರ ಧಾರಣ-ಪೋಷಣೆಗಳಿಗೆ ನಿಧಿಯನ್ನು ಸ್ಥಾಪಿಸಿರುವವರಿಗೆ, ದಂಡವೆಂಬುದನ್ನೇ ಸಂಪೂರ್ಣವಾಗಿ ಪರಿತ್ಯಜಿಸಿರುವವರಿಗೆ (ಯಾವ ಪ್ರಾಣಿಯನ್ನೂ ಹಿಂಸಿಸದೇ ಇರುವವರಿಗೆ) ಯಾವ ಸದ್ಗತಿಯು ಪ್ರಾಪ್ತವಾಗುವುದೋ-ಅದೇ ಸದ್ಗತಿಯೇ ನಿನಗೂ ಲಭಿಸಲಿ.

**ಬ್ರಹ್ಮಚರ್ಯೇಣ ಯಾಂ ಯಾನ್ತಿ ಮುನಯಃ ಸಂಶಿತವ್ರತಾಃ।**
**ಏಕಪತ್ನ್ಯಶ್ಚ ಯಾಂ ಯಾನ್ತಿ ತಾಂ ಗತಿಂ ವ್ರಜ ಪುತ್ರಕ ॥೨೬॥**

ಕಠೋರವ್ರತನಿಷ್ಠರಾದ ಮುನಿಗಳು ಬ್ರಹ್ಮಚರ್ಯದಿಂದ ಯಾವ ಸದ್ಗತಿಯನ್ನು ಪಡೆಯುತ್ತಾರೆಯೋ ಮತ್ತು ಪತಿಯನ್ನೇ ಪರದೈವವೆಂದು ಭಾವಿಸಿರುವ ಪತಿವ್ರತೆಯರು ಯಾವ ಸದ್ಗತಿಯನ್ನು ಹೊಂದುತ್ತಾರೆಯೋ–ಅಂತಹ ಸುದುರ್ಲಭವಾದ ಸದ್ಗತಿಯೇ ನಿನಗೂ ಲಭ್ಯವಾಗಲಿ.

**ರಾಜ್ಞಾಂ ಸುಚರಿತೈರ್ಯಾ ಚ ಗತಿರ್ಭವತಿ ಶಾಶ್ವತೀ।**
**ಚತುರಾಶ್ರಮಿಣಾಂ ಪುಣ್ಯೈಃ ಪಾವಿತಾನಾಂ ಸುರಕ್ಷಿತೈಃ ॥೨೭॥**
**ದೀನಾನುಕಮ್ಪಿನಾಂ ಯಾ ಚ ಸತತಂ ಸಂವಿಭಾಗಿನಾಮ್।**
**ಪೈಶುನ್ಯಾಚ್ಚ ನಿವೃತ್ತಾನಾಂ ತಾಂ ಗತಿಂ ವ್ರಜ ಪುತ್ರಕ ॥೨೮॥**

ಸದಾಚಾರವನ್ನು ಪರಿಪಾಲಿಸುವುದರಿಂದ ರಾಜರಿಗೆ ಯಾವ ಶಾಶ್ವತವಾದ ಸದ್ಗತಿಯು ಸಿಕ್ಕುವುದೋ–ಅಂತಹ ಸದ್ಗತಿಯು ನಿನಗೂ ಲಭಿಸಲಿ. ಸುರಕ್ಷಿತವಾದ ಪುಣ್ಯಕರ್ಮಗಳಿಂದ ಪಾವನರಾಗಿ ಮಾಡಲ್ಪಟ್ಟ ನಾಲ್ಕು ಆಶ್ರಮಿಗಳಿಗೆ ಯಾವ ಸದ್ಗತಿಯು ಸಿಕ್ಕುವುದೋ–ಆ ಸದ್ಗತಿಯು ನಿನಗೂ ಲಭಿಸಲಿ. ದೀನರಾದವರನ್ನು ಅನುಕಂಪದಿಂದ ಕಾಣುವವರಿಗೆ, ಸತತವಾಗಿ ತಮ್ಮಲ್ಲಿರುವ ಉತ್ತಮವಸ್ತುಗಳನ್ನು ಇತರರಿಗೂ ಹಂಚಿಕೊಡುವವರಿಗೆ, ಬೇರೆಯವರ ವಿಷಯದಲ್ಲಿ ದೋಷವನ್ನು ಹೇಳದೇ ಇರುವವರಿಗೆ ಯಾವ ಸದ್ಗತಿಯು ಸಿಕ್ಕುವುದೋ–ಆ ಸದ್ಗತಿಯು ನಿನಗೂ ಲಭಿಸಲಿ.

**ವ್ರತಿನಾಂ ಧರ್ಮಶೀಲಾನಾಂ ಗುರುಶುಶ್ರೂಷಿಣಾಮಪಿ।**
**ಅಮೋಘಾತಿಥಿನಾಂ ಯಾ ಚ ತಾಂ ಗತಿಂ ವ್ರಜ ಪುತ್ರಕ ॥೨೯॥**

ವ್ರತಪರಾಯಣರಾದವರಿಗೆ, ಧರ್ಮಶೀಲರಾದವರಿಗೆ, ಗುರು ಶುಶ್ರೂಷೆಯನ್ನು ಮಾಡುವವರಿಗೆ, ಅತಿಥಿಗಳಿಗೆ ನಿರಾಶೆಯನ್ನು ಉಂಟು ಮಾಡದೇ ಇರುವವರಿಗೆ (ಅತಿಥಿಗಳನ್ನು ಸತ್ಕರಿಸುವವರಿಗೆ) ಯಾವ ಸದ್ಗತಿಯು ಲಭಿಸುವುದೋ-ಅದೇ ಸದ್ಗತಿಯು ನಿನಗೂ ಲಭಿಸಲಿ.

**ಕೃಚ್ಛ್ರೇಷು ಯಾ ಧಾರಯತಾಮಾತ್ಮಾನಂ ವ್ಯಸನೇಷು ಚ ।**
**ಗತಿಃ ಶೋಕಾಗ್ನಿದಗ್ಧಾನಾಂ ತಾಂ ಗತಿಂ ವ್ರಜ ಪುತ್ರಕ ॥೩೦॥**

ಕಷ್ಟಕಾಲಗಳಲ್ಲಿ, ವ್ಯಸನಕಾಲಗಳಲ್ಲಿ ಶೋಕವೆಂಬ ಅಗ್ನಿಯಿಂದ ದಹಿಸಿ ಹೋಗುತ್ತಿರುವ ಸಮಯಗಳಲ್ಲಿಯೂ ಯಾರು ಆತ್ಮಸಂಯಮದಿಂದ ಕಷ್ಟ-ವ್ಯಸನ-ಶೋಕಗಳನ್ನು ಸಹಿಸಿಕೊಳ್ಳುತ್ತಾರೆಯೋ ಅಂತಹವರಿಗೆ ಪ್ರಾಪ್ತವಾಗುವ ಸದ್ಗತಿಯು ನಿನಗೂ ಲಭಿಸಲಿ.

**ಮಾತಾಪಿತ್ರೋಶ್ಚ ಶುಶ್ರೂಷಾಂ ಕಲ್ಪಯನ್ತೀಹ ಯೇ ಸದಾ।**
**ಸ್ವದಾರನಿರತಾನಾಂ ಚ ಯಾ ಗತಿಸ್ತಾಮವಾಪ್ನುಹಿ ॥೩೧॥**

ತಂದೆ-ತಾಯಿಗಳ ಶುಶ್ರೂಷೆಯನ್ನು ಸದಾಕಾಲದಲ್ಲಿಯೂ ಮಾಡುವವರಿಗೆ, ತಮ್ಮ ಧರ್ಮಪತ್ನಿಯರಲ್ಲಿಯೇ ಅನುರಕ್ತರಾಗಿರತಕ್ಕವರಿಗೆ ಯಾವ ಸದ್ಗತಿಯು ಸಿಕ್ಕುವುದೋ–ಆ ಸದ್ಗತಿಯು ನಿನಗೂ ಲಭಿಸಲಿ.

**ಋತುಕಾಲೇ ಸ್ವಕಾಂ ಭಾರ್ಯಾಂ ಗಚ್ಛತಾಂ ಯಾ ಮನೀಷಿಣಾಮ್ ।**
**ಪರಸ್ತ್ರೀಭ್ಯೋ ನಿವೃತ್ತಾನಾಂ ತಾಂ ಗತಿಂ ವ್ರಜ ಪುತ್ರಕ ॥೩೨॥**

ಋತುಸಮಯದಲ್ಲಿ ತಮ್ಮ ಭಾರ್ಯೆಯ ಸಮಾಗಮಮಾಡುವ ಮತ್ತು ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡದಿರುವ, ಜಿತೇಂದ್ರಿಯರಾದ ಮನುಷ್ಯರಿಗೆ ಯಾವ ಸದ್ಗತಿಯು ಪ್ರಾಪ್ತವಾಗುವುದೋ–ಆ ಸದ್ಗತಿಯು ನಿನಗೂ ಲಭಿಸಲಿ.

**ಸಾಮ್ನಾ ಯೇ ಸರ್ವಭೂತಾನಿ ಪಶ್ಯನ್ತಿ ಗತಮತ್ಸರಾಃ।**
**ನಾರುಂತುದಾನಾಂ ಕ್ಷಮಿಣಾಂ ಯಾ ಗತಿಸ್ತಾಮವಾಪ್ನುಹಿ ॥೩೩॥**

ಈರ್ಷ್ಯಾ-ದ್ವೇಷಗಳನ್ನು ದೂರಮಾಡಿ ಸಮಸ್ತಪ್ರಾಣಿಗಳನ್ನೂ ಸೌಹಾರ್ದ ಭಾವದಿಂದ ನೋಡುವವರಿಗೆ, ಯಾರೊಡನೆಯೂ ಮರ್ಮಭೇದಕವಾಗಿ ಚುಚ್ಚುಮಾತುಗಳನ್ನು ಆಡದವರಿಗೆ, ಕ್ಷಮಾವಂತರಿಗೆ ಯಾವ ಸದ್ಗತಿಯು ಲಭಿಸುವುದೋ-ಅದು ನಿನಗೂ ಲಭಿಸಲಿ.

**ಮಧುಮಾಂಸನಿವೃತ್ತಾನಾಂ ಮದಾದ್ದಮ್ಭಾತ್ತಥಾನೃತಾತ್।**
**ಪರೋಪತಾಪತ್ಯಕ್ತಾನಾಂ ತಾಂ ಗತಿಂ ವ್ರಜ ಪುತ್ರಕ ॥೩೪॥**

ಮದ್ಯ-ಮಾಂಸಗಳನ್ನು ಸೇವಿಸದೇ ಇರತಕ್ಕವರಿಗೆ, ಮದ-ದಂಭ ಮತ್ತು

ಅಸತ್ಯಗಳಿಂದ ದೂರವಾಗಿರುವವರಿಗೆ, ಯಾವುದೇ ಕಾರಣದಿಂದಲೂ ಇತರರಿಗೆ ಸಂತಾಪವನ್ನುಂಟುಮಾಡದೇ ಇರುವವರಿಗೆ ಯಾವ ಸದ್ಗತಿಯು ಪ್ರಾಪ್ತವಾಗುವುದೋ–ಅದು ನಿನಗೂ ಲಭಿಸಲಿ.

**ಹ್ರೀಮನ್ತಃ ಸರ್ವಶಾಸ್ತ್ರಜ್ಞಾ ಜ್ಞಾನತೃಪ್ತಾ ಜಿತೇನ್ದ್ರಿಯಾಃ**
**ಯಾಂ ಗತಿಂ ಸಾಧವೋ ಯಾನ್ತಿ ತಾಂ ಗತಿಂ ವ್ರಜ ಪುತ್ರಕ ॥೩೫॥**

ಸಕಲಶಾಸ್ತ್ರಗಳನ್ನೂ ತಿಳಿದಿರುವ, ಲಜ್ಜಾಶೀಲರಾದ, ಜ್ಞಾನದಿಂದ ತೃಪ್ತಿಹೊಂದಿರುವ, ಜಿತೇಂದ್ರಿಯರಾದ ಸಾಧುಗಳು ಯಾವ ಸದ್ಗತಿಯನ್ನು ಪಡೆಯುತ್ತಾರೆಯೋ–ಅಂತಹ ಸದ್ಗತಿಯನ್ನು ನೀನೂ ಹೊಂದು."

ಈ ರೀತಿಯಲ್ಲಿ ಉತ್ತರೆಯೊಡನೆ ವಿಲಾಪಮಾಡುತ್ತಿದ್ದ, ಅತ್ತು-ಅತ್ತು ಕೃಶಳಾಗಿದ್ದ, ದೀನಳಾಗಿದ್ದ ಸುಭದ್ರೆಯ ಬಳಿಗೆ ದ್ರೌಪದಿಯು ಬಂದಳು. ಆ ಮೂವರೂ ಅತ್ಯಂತ ದುಃಖಿತರಾಗಿ ಬಹಳ ಹೊತ್ತಿನವರೆಗೂ ಅಳುತ್ತಿದ್ದು, ಅಭಿಮನ್ಯುವನ್ನೇ ಬಾರಿ-ಬಾರಿಗೂ ನೆನೆಯುತ್ತಾ ಹುಚ್ಚರಂತಾಗಿಬಿಟ್ಟರು. ಅನಂತರ ಮೂರ್ಛಿತರಾಗಿ ಕೆಳಕ್ಕೂ ಬಿದ್ದುಬಿಟ್ಟರು. ಅದನ್ನು ನೋಡಿದ ಕಮಲನಯನನಾದ ಶ್ರೀಕೃಷ್ಣನಿಗೂ ಅತ್ಯಂತದುಃಖವಾಯಿತು. ಅವರನ್ನು ಎಚ್ಚರಗೊಳಿಸಲು ಶೈತ್ಯೋಪಚಾರಮಾಡಿದನು. ಶ್ರೀಕೃಷ್ಣನು ದುಃಖಿತೆಯಾದ ತಂಗಿಯ ತಲೆಯನ್ನು ನೀರಿನಿಂದ ತಟ್ಟುತ್ತಾ ನಾನಾಪ್ರಕಾರವಾದ ಹಿತವಚನ ಗಳನ್ನು ಹೇಳಿ ಅವಳನ್ನು ಸಂತೈಸಿದನು. ಪುತ್ರನಾಶವೆಂಬುದು ಸುಭದ್ರೆಗೆ ಮರ್ಮಸ್ಥಾನಗಳಲ್ಲಿ ಘಾತವನ್ನುಂಟುಮಾಡಿದ್ದಿತು. ಮೂರ್ಛಿತಳಾದಂತಿದ್ದ, ಅಳುತ್ತಿದ್ದ ಮತ್ತು ತರ-ತರನೆ ನಡುಗುತ್ತಿದ್ದ ತಂಗಿಯನ್ನು ಕುರಿತು ಪುಂಡರೀಕಾಕ್ಷನು ಈ ಮಾತುಗಳನ್ನು ಹೇಳಿದನು:

"ಸುಭದ್ರೇ! ಮಗನ ವಿಷಯವಾಗಿ ಪುನಃ-ಪುನಃ ಶೋಕಿಸುತ್ತಿರಬೇಡ."

ದ್ರೌಪದಿಯ ಕಡೆಗೆ ತಿರುಗಿ ಹೇಳಿದನು: "ದ್ರೌಪದಿ! ನೀನು ಉತ್ತರಾ ಕುಮಾರಿಯನ್ನು ಸಾಂತ್ವವಚನಗಳಿಂದ ಸಂತೈಸು. ಕ್ಷತ್ರಿಯಶಿರೋಮಣಿಯಾದ ಅಭಿಮನ್ಯುವು ಸರ್ವಶ್ರೇಷ್ಠವಾದ ಸದ್ಗತಿಯನ್ನು ಹೊಂದಿದ್ದಾನೆ. ನಮ್ಮ ಕುಲದಲ್ಲಿ ಇನ್ನೂ ಇತರ ವೀರಪುರುಷರು ಯಾರಿದ್ದಾರೆಯೋ ಅವರೂ ಸಹ ಯಶೋವಂತನಾದ ಅಭಿಮನ್ಯುವಿನ ಗತಿಯನ್ನೇ ಹೊಂದಲಿ.

ತಂಗಿ! ಮಹಾರಥನಾದ ನಿನ್ನ ಮಗನು ಏಕಾಕಿಯಾಗಿ ಇಂದು ಯಾವ ಪರಾಕ್ರಮವನ್ನು ತೋರಿದನೋ–ಅಂತಹ ಪರಾಕ್ರಮವನ್ನು ನಾವೂ ಮತ್ತು ನಮ್ಮ ಸುಹೃದರೂ ಕಾರ್ಯರೂಪದಲ್ಲಿ ತೋರಿಸಬೇಕಾಗಿದೆ.”

ಮಹಾರಾಜ! ಮಹಾಬಾಹುವಾದ, ಅರಿಂದಮನಾದ ಶ್ರೀಕೃಷ್ಣನು ಈ ರೀತಿಯಲ್ಲಿ ತಂಗಿಯನ್ನೂ, ದ್ರೌಪದಿಯನ್ನೂ, ಉತ್ತರೆಯನ್ನೂ ಸಂತೈಸಿ ಪಾರ್ಥನ ಬಳಿಗೆ ಹೊರಟುಹೋದನು. ಅನಂತರ ಶ್ರೀಕೃಷ್ಣನು ರಾಜರನ್ನೂ, ಬಂಧುಜನರನ್ನೂ, ಅರ್ಜುನನನ್ನೂ ಕಳುಹಿಸಿಕೊಟ್ಟು ಅಂತಃಪುರವನ್ನು ಪ್ರವೇಶಿಸಿದನು. ರಾಜರೂ ಸಹ ತಮ್ಮ-ತಮ್ಮ ಬಿಡಾರಗಳಿಗೆ ತೆರಳಿದರು.”

೭೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಅರ್ಜುನನ ವಿಜಯಕ್ಕಾಗಿ ರಾತ್ರಿಯಲ್ಲಿ ಶಿವನ ಪೂಜೆಯನ್ನು ಮಾಡಿಸಿದುದು: ಪ್ರಾತಃಕಾಲವಾಗುತ್ತಲೇ ಸೈನಿಕರು ಅರ್ಜುನನಿಗೆ ಶುಭಾಶಂಸನೆಗಳನ್ನು ಮಾಡಿದುದು: ಅರ್ಜುನನ ಪ್ರತಿಜ್ಞೆಯು ಫಲಿಸಲೆಂದು ಶ್ರೀಕೃಷ್ಣನು ದಾರುಕನೊಡನೆ ಉತ್ಸಾಹಯುಕ್ತವಾದ ಮಾತುಗಳನ್ನಾಡಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಕಮಲನಯನನಾದ ಭಗವಾನ್ ಶ್ರೀಕೃಷ್ಣನು ಅರ್ಜುನನ ಅಪ್ರತಿಮವಾದ ಭವನವನ್ನು ಪ್ರವೇಶಿಸಿ ನೀರನ್ನು ಮುಟ್ಟಿ (ಆಚಮನಮಾಡಿ) ಶುಭಲಕ್ಷಣಯುಕ್ತವಾದ ವೇದಿಯ ಮೇಲೆ ವೈಡೂರ್ಯ ಮಣಿಸದೃಶವಾದ ಸುಂದರವಾದ ದರ್ಭೆಗಳನ್ನು ಹಾಸಿದನು. ಅನಂತರ ವಿಧಿಪೂರ್ವಕವಾಗಿ ಪರಮಮಂಗಳಕರವಾದ ಅರಳುಗಳಿಂದಲೂ, ಗಂಧ ದಿಂದಲೂ, ಪುಷ್ಪಮಾಲಿಕೆಗಳಿಂದಲೂ ದರ್ಭಶಯ್ಯೆಯನ್ನು ಅಲಂಕರಿಸಿದನು. ಆ ವೇದಿಕೆಯ ಸುತ್ತಲೂ ಶ್ರೇಷ್ಠವಾದ ಆಯುಧಗಳನ್ನಿಟ್ಟನು. ಅನಂತರ

ಪಾರ್ಥನು ಆಚಮನ ಮಾಡಿದನು. ವಿನೀತರಾದ ಮತ್ತು ಸುಶಿಕ್ಷಿತರಾದ ಪರಿಚಾರಕರು ಅರ್ಜುನನಿಗೆ ಎಲ್ಲವನ್ನೂ ತೋರಿಸುತ್ತಾ ಆ ವೇದಿಕೆಯ ಸಮೀಪದಲ್ಲಿಯೇ ಭಗವಾನ್ ಶಂಕರನನ್ನು ರಾತ್ರಿಯಲ್ಲಿ ಆಚರಿಸಬೇಕಾದ ಪೂಜಾವಿಧಾನದಿಂದ ಅರ್ಚಿಸಿದರು.

ಬಳಿಕ ಸುಪ್ರೀತನಾದ ಪಾರ್ಥನು ಗಂಧ-ಮಾಲ್ಯಾದಿಗಳಿಂದ ಮಾಧವನನ್ನೂ ಅಲಂಕರಿಸಿ ರಾತ್ರಿಯ ಸಂಬಂಧವಾದ ಉಪಹಾರವನ್ನು ಶ್ರೀಕೃಷ್ಣನಿಗೆ ನಿವೇದನಮಾಡಿದನು. ಗೋವಿಂದನು ನಸುನಗುತ್ತಾ ಅರ್ಜುನನಿಗೆ ಹೇಳಿದನು:

"ಪಾರ್ಥ! ನಿನಗೆ ಮಂಗಳವಾಗಲಿ. ಈಗ ನೀನಿನ್ನು ಮಲಗಲು ಹೋಗು. ನಿನ್ನ ಕಲ್ಯಾಣವನ್ನು ಸಾಧಿಸುವುದಕ್ಕಾಗಿ ನಾನೂ ಮನೆಗೆ ಹೋಗುತ್ತೇನೆ." ಹೀಗೆಂದು ಹೇಳಿ ಶ್ರೀಕೃಷ್ಣನು ದ್ವಾರಪಾಲಕರನ್ನೂ, ಆಯುಧಪಾಣಿಗಳಾದ ಅಂಗರಕ್ಷಕರನ್ನೂ ಅರ್ಜುನನ ಭವನದ ಬಾಗಿಲಿನಲ್ಲಿ ನಿಲ್ಲಿಸಿ ಸಾರಥಿಯಾದ ದಾರುಕನೊಡನೆ ತನ್ನ ಭವನಕ್ಕೆ ಹೋದನು. ಶ್ರೀಕೃಷ್ಣನು ನಾಳಿನ ಮಹತ್ತರವಾದ ಅನೇಕಕಾರ್ಯಗಳನ್ನು ಚಿಂತಿಸುತ್ತಾ ಶುಭ್ರವಾದ ಹಂಸತೂಲಿಕಾತಲ್ಪದಲ್ಲಿ ಮಲಗಿದನು. ಸರ್ವರಿಗೂ ಈಶ್ವರನಾದವನು ಸರ್ವೇಶ್ವರ. ಸರ್ವೇಶ್ವರನಿಗೂ ಈಶ್ವರನಾದವನು ಸರ್ವೇಶ್ವರೇಶ್ವರ. ಇಂತಹ ಸರ್ವೇಶ್ವರೇಶ್ವರನಾದ, ಪುಂಡರೀಕಾಕ್ಷನಾದ, ಅರ್ಜುನನಿಗೆ ಪ್ರಿಯಕರನಾದ ಮತ್ತು ಶ್ರೇಯಸ್ಕಾಮನಾದ, ಮಹಾಯಶೋವಂತನಾದ ಶ್ರೀಕೃಷ್ಣನು ಜಿತೇಂದ್ರಿಯನಾಗಿ, ಯೋಗಾರೂಢನಾಗಿ ಕುಳಿತು ಪಾರ್ಥನ ಶೋಕ ದುಃಖಾಪಹಾರಕವಾದ ಮತ್ತು ತೇಜಸ್ಸನ್ನೂ-ಕಾಂತಿಯನ್ನೂ ವರ್ಧಿಸುವ ಸಕಲವಿಧಾನಗಳನ್ನೂ ಸಿದ್ಧಪಡಿಸಿದನು.

ಮಹಾರಾಜ! ಅಂದು ಪಾಂಡವರ ಶಿಬಿರದಲ್ಲಿ ಯಾರೊಬ್ಬರೂ ಮಲಗಲಿಲ್ಲ. ಎಲ್ಲ ಜನರನ್ನೂ ಜಾಗರಣೆಯೇ ಆವರಿಸಿಬಿಟ್ಟಿತು. "ಪುತ್ರ ಶೋಕದಿಂದ ಸಂತಪ್ತನಾಗಿದ್ದ ಅರ್ಜುನನು ಒಡನೆಯೇ ಸಿಂಧುರಾಜನ ವಧೆಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿಬಿಟ್ಟಿದ್ದಾನೆ. ಶತ್ರುವೀರಸಂಹಾರಕ ನಾದ, ಮಹಾಬಾಹುವಾದ, ಇಂದ್ರನ ಮಗನಾದ ಅರ್ಜುನನು ತನ್ನ

ಪ್ರತಿಜ್ಞೆಯನ್ನು ಹೇಗೆ ಸಾಧಿಸುತ್ತಾನೆ?"–ಎಂಬುದನ್ನೇ ಎಲ್ಲರೂ ಬಗೆ-ಬಗೆಯಾಗಿ ಚಿಂತಿಸತೊಡಗಿದರು.

"ಮಹಾತ್ಮನಾದ ಪಾಂಡವನು ಬಹಳ ಕಷ್ಟಕರವಾದ ನಿಶ್ಚಯವನ್ನು ಮಾಡಿಬಿಟ್ಟಿದ್ದಾನೆ. ಪುತ್ರಶೋಕದಿಂದ ಸಂತಪ್ತನಾದ ಅರ್ಜುನನು ದೊಡ್ಡ ದಾದ ಪ್ರತಿಜ್ಞೆಯನ್ನೇ ಮಾಡಿಬಿಟ್ಟನು. ಸೈಂಧವರಾಜನೂ ಸಹ ಮಹಾ ವೀರ್ಯವಂತನು. ಅವನ ಸೋದರರೂ ಮಹಾಪರಾಕ್ರಮಿಗಳು. ಅವರ ಸೇನಾಬಲವೂ ಅಸಂಖ್ಯವಾಗಿದೆ. ಹೇಗಾದರೂ ಆಗಲಿ. ನಮ್ಮ ಅರ್ಜುನನು ತಾನು ಮಾಡಿರುವ ಪ್ರತಿಜ್ಞೆಯನ್ನು ಸಫಲಗೊಳಿಸಲಿ."

"ಧೃತರಾಷ್ಟ್ರನ ಮಗನಾದ ದುರ್ಯೋಧನನು ತನ್ನ ಸರ್ವಸೈನ್ಯವನ್ನೂ ಸೈಂಧವನ ರಕ್ಷಣೆಗಾಗಿಯೇ ಕಳುಹಿಸಿಬಿಟ್ಟಿದ್ದಾನೆ. ಸೈಂಧವನೂ ತನ್ನ ರಕ್ಷಣೆಗೆ ಸಾಕಷ್ಟು ಸಿದ್ಧತೆಗಳನ್ನೂ ಮಾಡಿಕೊಂಡಿದ್ದಾನೆ. ಹೇಗಾದರೂ ಆಗಲಿ; ಯುದ್ಧದಲ್ಲಿ ಅರ್ಜುನನು ಸೈಂಧವನನ್ನು ಸಂಹರಿಸಿ ಹಿಂದಿರುಗುವಂತಾಗಲಿ."

"ಶತ್ರುಸೈನಿಕರೆಲ್ಲರನ್ನೂ ಜಯಿಸಿ ನಮ್ಮ ಅರ್ಜುನನು ತಾನು ಮಾಡಿರುವ ಪ್ರತಿಜ್ಞೆಯನ್ನು ಪೂರ್ಣಗೊಳಿಸಲಿ."

"ಒಂದು ವೇಳೆ ಸೈಂಧವನನ್ನು ಅರ್ಜುನನಿಂದ ಸಂಹರಿಸಲು ಸಾಧ್ಯ ವಾಗದೆಯೇ ಹೋದರೆ ಅವನು ತನ್ನ ಪ್ರತಿಜ್ಞೆಯಂತೆ ಅಗ್ನಿಪ್ರವೇಶ ಮಾಡುವುದಂತೂ ನಿಶ್ಚಯ. ಏಕೆಂದರೆ: ಕುಂತೀಕುಮಾರನು ತನ್ನ ಮಾತನ್ನು ಯಾವುದೇ ಕಾರಣದಿಂದಲೂ ಸುಳ್ಳಾಗಿ ಮಾಡಲಾರನು. ಒಂದು ವೇಳೆ ಅರ್ಜುನನು ಅಗ್ನಿಪ್ರವೇಶಮಾಡಿ ಮೃತನಾದರೆ ಧರ್ಮಪುತ್ರನಾದ ಯುಧಿಷ್ಠಿರನು ಹೇಗೆ ತಾನೇ ಉಳಿದಾನು?"

"ಪಾಂಡುನಂದನನಾದ ಯುಧಿಷ್ಠಿರನು ವಿಜಯಗಳಿಸುವ ಹೊಣೆ ಯನ್ನು ಸಂಪೂರ್ಣವಾಗಿ ಅರ್ಜುನನ ಮೇಲೆಯೇ ಹಾಕಿಬಿಟ್ಟಿದ್ದಾನೆ. ನಾವು ಮಾಡಿರುವ ಸತ್ಕಾರ್ಯಗಳು ಅಲ್ಪ-ಸ್ವಲ್ಪವಾದರೂ ಇದ್ದರೆ–ದಾನ ಮಾಡಿದುದು, ಹೋಮಮಾಡಿದುದು ಯಾವುದಾದರೂ ಇದ್ದರೆ–ಆ ಎಲ್ಲ ಶುಭಕರ್ಮಗಳ ಫಲದಿಂದ ಸವ್ಯಸಾಚಿಯು ಶತ್ರುಗಳನ್ನು ಸಂಹರಿಸಲಿ."

ಮಹಾರಾಜ! ಇವೇ ಮುಂತಾಗಿ ಪರಸ್ಪರವಾಗಿ ಸಂಭಾಷಿಸುತ್ತಾ ಅರ್ಜುನನಿಗೆ ಪದೇ ಪದೇ ವಿಜಯವನ್ನಾಶಿಸುತ್ತಿದ್ದ ಪಾಂಡವಯೋಧರು ಆ ರಾತ್ರಿಯನ್ನು ಬಹಳ ಕಷ್ಟದಿಂದ ಕಳೆದರು.

ಅತ್ತಲಾಗಿ ಶ್ರೀಕೃಷ್ಣನು ಮಧ್ಯರಾತ್ರಿಯಲ್ಲಿ ಜಾಗ್ರತನಾಗಿ, ಅರ್ಜುನನ ಪ್ರತಿಜ್ಞೆಯನ್ನು ಸ್ಮರಿಸಿ ದಾರುಕನೊಡನೆ ಹೇಳಿದನು:

"ದಾರುಕ! ಪುತ್ರನಾದ ಅಭಿಮನ್ಯುವಿನ ಸಂಹಾರದಿಂದ ಶೋಕಾರ್ತನಾದ ಅರ್ಜುನನು–'ನಾಳೆಯೇ ಜಯದ್ರಥನನ್ನು ಕೊಲ್ಲುತ್ತೇನೆ' – ಎಂದು ಪ್ರತಿಜ್ಞೆಯನ್ನು ಮಾಡಿರುವನು. ಅರ್ಜುನನು ಮಾಡಿರುವ ಪ್ರತಿಜ್ಞಾವಚನವನ್ನು ಚಾರರ ಮೂಲಕ ದುರ್ಯೋಧನನು ಕೇಳಿ, ಪಾರ್ಥನು ಜಯದ್ರಥನನ್ನು ಸಂಹರಿಸಲಾಗದಂತೆ ಯಾವ ಕಾರ್ಯಕ್ರಮವನ್ನು ತೆಗೆದುಕೊಳ್ಳಬೇಕೆಂಬುದರ ಬಗೆಗೆ ಮಂತ್ರಿಗಳೊಡನೆ ಸಮಾಲೋಚನೆಯನ್ನು ನಡೆಸಿರುವನು. ಅವರು ಈಗ ಸಿದ್ಧಪಡಿಸಿರುವ ಯೋಜನೆಯಂತೆ



ಸರ್ವಾಸ್ತ್ರಗಳ ವಿಧಿ-ವಿಧಾನಗಳಲ್ಲಿ ಪಾರಂಗತರಾದ ದ್ರೋಣರು ತಮ್ಮ ಪುತ್ರನಾದ ಅಶ್ವತ್ಥಾಮನೊಡನೆ ಜಯದ್ರಥನನ್ನು ರಕ್ಷಿಸುತ್ತಾರೆ. ಹಾಗೂ ಹನ್ನೊಂದು ಅಕ್ಷೌಹಿಣೀಸೈನ್ಯಗಳೂ ಜಯದ್ರಥನನ್ನು ರಕ್ಷಿಸುತ್ತವೆ. ಮೂರುಲೋಕಗಳಲ್ಲಿಯೂ ಏಕಮಾತ್ರವೀರನಾದ, ದೈತ್ಯ-ದಾನವರ ದರ್ಪ

ವನ್ನಡಗಿಸಿರುವ, ಸಹಸ್ರಾಕ್ಷನಾದ ಇಂದ್ರನೂ ಸಹ ದ್ರೋಣರಿಂದ ರಕ್ಷಣೆ ಪಡೆದವನನ್ನು ಸಂಹರಿಸಲು ಉತ್ಸಾಹಿತನಾಗುವುದಿಲ್ಲ. (ಶಕ್ತನಲ್ಲ). (ಇಂದ್ರನೇ ಅಸಮರ್ಥನೆಂದಮೇಲೆ ಉಳಿದವರಿಂದ ದ್ರೋಣಾಶ್ರಿತನನ್ನು ಸಂಹರಿಸಲು ಹೇಗೆ ಸಾಧ್ಯವಾಗುವುದು?) ಆದರೂ ನಾನೂ ಒಂದು ಯೋಜನೆಯನ್ನು ಸಿದ್ಧಗೊಳಿಸಿದ್ದೇನೆ. ನಾಳೆಯೇ ಅದನ್ನು ಕಾರ್ಯರೂಪಕ್ಕೆ ತರುತ್ತೇನೆ. ನನ್ನ ಯೋಜನೆಯ ಪ್ರಕಾರ ಸೂರ್ಯನು ಅಸ್ತಮಿಸುವುದರೊಳಗಾಗಿ ಕುಂತೀಪುತ್ರನಾದ ಅರ್ಜುನನು ಜಯದ್ರಥನನ್ನು ವಧಿಸುವಂತೆ ಮಾಡುತ್ತೇನೆ.

**ನ ಹಿ ದಾರಾ ನ ಮಿತ್ರಾಣಿ ಜ್ಞಾತಯೋ ನ ಚ ಬಾನ್ಧವಾಃ।**
**ಕಶ್ಚಿದನ್ಯಃ ಪ್ರಿಯತರಃ ಕುನ್ತೀಪುತ್ರಾನ್ಮಮಾರ್ಜುನಾತ್ ॥೨೬॥**

ಪತ್ನಿಯರು, ಮಿತ್ರರು, ಜ್ಞಾತಿಗಳು, ಬಾಂಧವರು–ಇವರಾಗಲೀ, ಬೇರೆ ಯಾರೇ ಆಗಲೀ–ಕುಂತೀಪುತ್ರನಾದ ಅರ್ಜುನನಿಗಿಂತಲೂ ನನಗೆ ಪ್ರಿಯತರರಾಗುವುದಿಲ್ಲ. (ಇವರೆಲ್ಲರಿಗಿಂತಲೂ ಅರ್ಜುನನೇ ಪರಮಪ್ರಿಯನು.)

ದಾರುಕ! ಅರ್ಜುನನಿಲ್ಲದ ಈ ಲೋಕವನ್ನು ಮುಹೂರ್ತ ಕಾಲವಾದರೂ ನಾನು ನೋಡಲು ಶಕ್ತನಲ್ಲ. (ಅರ್ಜುನನು ಈ ಲೋಕದಲ್ಲಿ ಇಲ್ಲವೆಂಬುದನ್ನು ನನಗೆ ಭಾವಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ.) ಆದರೆ ಹಾಗೆ ಮಾತ್ರ ಸರ್ವಥಾ ಆಗಬಾರದು. ಅಂತಹ ಕ್ಲಿಷ್ಟಪರಿಸ್ಥಿತಿಯೇ ಒದಗಿದ್ದಾದರೆ:

**ಅಹಂ ವಿಜಿತ್ಯ ತಾನ್ಸರ್ವಾನ್ಸಹಸಾ ಸಹಯದ್ವಿಪಾನ್ ।**
**ಅರ್ಜುನಾರ್ಥಂ ಹನಿಷ್ಯಾಮಿ ಸಕರ್ಣಾನ್ಸ ಸುಯೋಧನಾನ್॥**

ಅರ್ಜುನನ ಸಲುವಾಗಿ ನಾನು ಗಜಾಶ್ವಸೈನ್ಯಗಳ ಸಹಿತವಾಗಿ, ಕರ್ಣ-ದುರ್ಯೋಧನರ ಸಹಿತವಾಗಿ ಸಮಸ್ತಶತ್ರುಗಳನ್ನೂ ಜಯಿಸಿ ಸೈಂಧವನ ವಧೆಯನ್ನು ಮಾಡುತ್ತೇನೆ.

ದಾರುಕ! ನಾಳಿನ ಮಹಾಯುದ್ಧದಲ್ಲಿ ಮೂರುಲೋಕಗಳೂ ಅರ್ಜುನನ ಸಲುವಾಗಿ ನಾನು ತೋರಿಸುವ ಪರಾಕ್ರಮವನ್ನೂ ಮತ್ತು

ವೀರ್ಯವನ್ನೂ ನಿರೀಕ್ಷಿಸಲಿ. ನಾಳಿನ ಯುದ್ಧದಲ್ಲಿ ಸಾವಿರಾರು ರಾಜರನ್ನೂ ನೂರಾರು ರಾಜಪುತ್ರರನ್ನೂ ತಮ್ಮ ಗಜಾಶ್ವ-ರಥ- ಪದಾತಿಸೈನ್ಯಗಳೊಡನೆ ರಣಾಂಗಣದಿಂದ ಪಲಾಯನಮಾಡುವಂತೆ ಮಾಡುತ್ತೇನೆ. ನಾಳಿನ ಯುದ್ಧದಲ್ಲಿ ಕ್ರುದ್ಧನಾದ ನಾನು ಅರ್ಜುನನ ಸಲುವಾಗಿ ನನ್ನ ಚಕ್ರದಿಂದ ದುರ್ಯೋಧನನ ಸೈನ್ಯವನ್ನು ವಿಧ್ವಂಸನಗೊಳಿಸುವುದನ್ನೂ ನೀನು ಕಾಣಲಿರುವೆ. ದೇವ-ಗಂಧರ್ವ-ಪಿಶಾಚೋರಗ-ರಾಕ್ಷಸ-ಮಾನವ ರಿಂದ ಕೂಡಿರುವ ಎಲ್ಲ ಲೋಕಗಳೂ ನಾಳೆ ನಾನು ಅರ್ಜುನನ ಪರಮಹಿತೈಷಿಯಾದ ಮಿತ್ರನೆಂಬುದನ್ನು ತಿಳಿದುಕೊಳ್ಳುತ್ತವೆ.

**ಯಸ್ತಂ ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತಂ ಚಾನು ಸ ಮಾಮನು ।**
**ಇತಿ ಸಂಕಲ್ಪ್ಯತಾಂ ಬುದ್ಧ್ಯಾ ಶರೀರಾರ್ಧಂ ಮಮಾರ್ಜುನಃ ॥೩೩॥**

ದಾರುಕ! ಅರ್ಜುನನನ್ನು ಯಾರು ದ್ವೇಷಿಸುತ್ತಾರೆಯೋ ಅವರು ನನ್ನನ್ನೂ ದ್ವೇಷಿಸುತ್ತಾರೆ. ಅವನನ್ನು ಯಾರು ಅನುಸರಿಸಿ ಇರುತ್ತಾರೆಯೋ ಅವರು ನನ್ನನ್ನೂ ಅನುಸರಿಸಿರುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ ಅರ್ಜುನನು ನನ್ನ ಶರೀರದ ಅರ್ಧಭಾಗವೇ ಆಗಿದ್ದಾನೆ. ನೀನು ಬುದ್ಧಿಯಿಂದ ಈ ವಿಷಯವನ್ನು ಚೆನ್ನಾಗಿ ನಿರ್ಧರಿಸು. (ಈ ಸೂಕ್ಷ್ಮವಿಷಯವನ್ನು ನೀನು ಮನಗಾಣು.)

ದಾರುಕ! ನೀನು ನಾಳೆ ಮುಂಜಾನೆ ಶಾಸ್ತ್ರವಿಧಿಗೆ ಅನುಸಾರವಾಗಿ ಉತ್ತಮೋತ್ತಮವಾದ ನನ್ನ ರಥವನ್ನು ಸಜ್ಜುಗೊಳಿಸಿಕೊಂಡು ನಿಯತ ಮನಸ್ಕನಾಗಿ ರಣಾಂಗಣಕ್ಕೆ ಹೋಗಬೇಕು. ಕೌಮೋದಕೀ ಗದೆ, ದಿವ್ಯವಾದ ಶಕ್ತ್ಯಾಯುಧ, ಚಕ್ರ, ಧನುಸ್ಸು, ಬಾಣಗಳು ಮತ್ತು ಅವಶ್ಯಕವಾದ ಇನ್ನೂ ಇತರ ಯುದ್ಧಸಾಮಗ್ರಿಗಳನ್ನೂ ರಥದಲ್ಲಿಟ್ಟುಕೊಂಡು, ರಥದ ಹಿಂಭಾಗದಲ್ಲಿ ರಥಕ್ಕೆ ಶೋಭೆಯನ್ನುಂಟುಮಾಡುವ ವೀರನಾದ ಗರುಡನ ಚಿಹ್ನೆಯುಳ್ಳ ಧ್ವಜಕ್ಕೂ ಸ್ಥಾನವನ್ನು ಕಲ್ಪಿಸು. ರಥದ ಮೇಲೆ ಶ್ವೇತಚ್ಛತ್ರವನ್ನೂ ಇಟ್ಟು ಅನಂತರ ಅಗ್ನಿ ಮತ್ತು ಸೂರ್ಯರ ಪ್ರಭೆಗೆ ಸಮಾನವಾದ ಪ್ರಭೆಯಿಂದ ಪ್ರಕಾಶಿಸುವ, ವಿಶ್ವಕರ್ಮನಿರ್ಮಿತವಾದ, ದಿವ್ಯವಾದ, ಸುವರ್ಣಮಯ ವಾದ ಬಲೆಗಳಿಂದ ಸಮಲಂಕೃತವಾದ ಬಲಾಹಕ-ಮೇಘಪುಷ್ಪ-ಶೈಬ್ಯ-ಸುಗ್ರೀವಗಳೆಂಬ ನಾಲ್ಕು ಕುದುರೆಗಳನ್ನೂ ರಥದಲ್ಲಿ ಯೋಜಿಸಿ

ನೀನೂ ಸಹ ಕವಚವನ್ನು ಧರಿಸಿ ಸಿದ್ಧನಾಗಿರು. *ಋಷಭಸ್ವರದಿಂದಲೇ ಊದಲ್ಪಡುವ ಪಾಂಚಜನ್ಯಶಂಖದ ಧ್ವನಿಯನ್ನೂ, ಭಯಂಕರವಾದ ಕೋಲಾಹಲಶಬ್ದವನ್ನೂ ಕೇಳಿದೊಡನೆಯೇ ನೀನು ನನ್ನ ಬಳಿಗೆ ಬೇಗ ಬಂದು ಬಿಡು. ನನ್ನ ತಂದೆಯ ತಂಗಿಯ ಮಗನ ತಮ್ಮನಾದ (ಸೋದರತ್ತೆಯ ಮಗನಾಗಿ ಸೋದರನಂತಿರುವ) ಅರ್ಜುನನ ಎಲ್ಲ ದುಃಖಗಳನ್ನೂ ಮತ್ತು ಕೋಪವನ್ನೂ ನಾನು ಒಂದೇ ದಿವಸದಲ್ಲಿ ತೊಲಗಿಸಿಬಿಡುತ್ತೇನೆ. ಆದರೆ ಈ ಉಗ್ರಕ್ರಮವನ್ನು ತೆಗೆದುಕೊಳ್ಳುವುದಕ್ಕೆ ಮೊದಲು ನಾನು ಎಲ್ಲ ಉಪಾಯಾಂತರಗಳಿಂದಲೂ–ಧೃತರಾಷ್ಟ್ರನ ಮಕ್ಕಳು ನೋಡುತ್ತಿದ್ದಂತೆಯೇ ಅರ್ಜುನನು ಸೈಂಧವನನ್ನು ಸಂಹರಿಸುವಂತೆ ಮಾಡಲು ಪ್ರಯತ್ನಿಸುತ್ತೇನೆ. ಸೂತ! ನಾಳೆ ಅರ್ಜುನನು ಶತ್ರುಪಕ್ಷದ ಯಾವ ಯಾವ ವೀರರನ್ನು ಸಂಹರಿಸಲು ಪ್ರಯತ್ನಿಸುತ್ತಾನೆಯೋ ಆಯಾ ವೀರರನ್ನು ಅರ್ಜುನನು ಜಯಿಸುತ್ತಾನೆಂಬುದೂ ನಿಶ್ಚಯ. ಅವನು ಹಾಗೆ ಜಯಗಳಿಸಬೇಕೆಂದೇ ನಾನೂ ಆಶಿಸುತ್ತೇನೆ."

ಶ್ರೀಕೃಷ್ಣನು ಹೇಳಿದ ಮಾತುಗಳಿಗೆ ಉತ್ತರವಾಗಿ ದಾರುಕನು ಹೇಳುತ್ತಾನೆ:

**ಜಯ ಏವ ಧ್ರುವಸ್ತಸ್ಯ ಕುತ ಏವ ಪರಾಜಯಃ।**
**ಯಸ್ಯ ತ್ವಂ ಪುರುಷವ್ಯಾಘ್ರ ಸಾರಥ್ಯಮುಪಜಗ್ಮಿವಾನ್ ॥೪೩॥**

"ಪುರುಷವ್ಯಾಘ್ರನೇ! ಅರ್ಜುನನಿಗೆ ಜಯವೆಂಬುದು ಸ್ವತಃ ಸಿದ್ಧವಾಗಿದೆ. ನೀನು ಯಾವನಿಗೆ ಸಾರಥ್ಯವನ್ನು ಮಾಡಲು ಹೊರಟಿರು ವೆಯೋ ಅಂತಹ ಮಹಾನುಭಾವನಿಗೆ ಪರಾಜಯವೆಂಬುದೆಲ್ಲಿ?

ಪ್ರಭುವೇ! ಆದರೂ ರಾತ್ರಿಯು ಕಳೆದು ಬೆಳಗಾದೊಡನೆಯೇ ನಿನ್ನ ಆಜ್ಞೆಯಂತೆ ಅರ್ಜುನನ ವಿಜಯದ ಸಲುವಾಗಿ ಎಲ್ಲವನ್ನೂ ಸಿದ್ಧಮಾಡುತ್ತೇನೆ".

೭೯ನೆಯ ಅಧ್ಯಾಯವು ಮುಗಿಯಿತು.

---

.*ಋಷಭಸ್ವರಃ- ವೀಣೆ ಮುಂತಾದುವುಗಳಲ್ಲಿ ಹೊರಡುವ ಸಪ್ತಸ್ವರಗಳಲ್ಲಿ ಇದು ಎರಡನೆಯದು. ಋಷತಿ ಹೃದಯಂ ಇತಿ ಋಷಭಃ. ಹೃದಯವನ್ನು ಪ್ರವೇಶಿಸಿ ಈ ಸ್ವರವು ಹೊರಬರುವುದರಿಂದ ಇದಕ್ಕೆ ಈ ಹೆಸರು.

೮೦ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಅರ್ಜುನನು ಕನಸಿನಲ್ಲಿ ಶ್ರೀಕೃಷ್ಣನೊಡನೆ ಶಿವನ ಸಮೀಪಕ್ಕೆ ಹೋದುದು ಮತ್ತು ಶಿವನನ್ನು ಸ್ತುತಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಇತ್ತಲಾಗಿ ಅಚಿಂತ್ಯವಿಕ್ರಮನಾದ, ಕುಂತಿಯ ಮಗನಾದ ಅರ್ಜುನನು ತಾನು ಮಾಡಿದ ಪ್ರತಿಜ್ಞೆಯನ್ನು ರಕ್ಷಿಸಿಕೊಳ್ಳುವ ಅಪೇಕ್ಷೆಯಿಂದ ವನವಾಸದಲ್ಲಿದ್ದಾಗ ವ್ಯಾಸರು ಉಪದೇಶಿಸಿದ್ದ



ಮಹಾಮಂತ್ರವನ್ನೇ ಮನಸ್ಸಿನಲ್ಲಿ ಜಪಿಸುತ್ತಾ ನಿದ್ರೆ ಹೋದನು. ಸ್ವಪ್ನದಲ್ಲಿಯೂ ಮಗನ ಮರಣವನ್ನೇ ಚಿಂತಿಸುತ್ತಾ ಶೋಕತಪ್ತನಾಗಿದ್ದ ಅರ್ಜುನನ ಸಮೀಪಕ್ಕೆ ಮಹಾತೇಜಸ್ವಿಯಾದ, ಗರುಡಧ್ವಜನಾದ ಶ್ರೀಕೃಷ್ಣನು

ಆಗಮಿಸಿದನು. ಯಾವುದೇ ಸ್ಥಿತಿಯಲ್ಲಿದ್ದರೂ ಸಹ ಧರ್ಮಾತ್ಮನಾದ ಧನಂಜಯನು, ಆಗಮಿಸಿದ ಶ್ರೀಕೃಷ್ಣನಿಗೆ ಭಕ್ತಿಯಿಂದಲೂ ಆದರದಿಂದಲೂ ಮೇಲೆದ್ದುನಿಂತು ವಿನೀತನಾಗಿ ಸ್ವಾಗತ ನೀಡಬೇಕೆಂಬ ನಿಯಮಕ್ಕೆ ಲೋಪವನ್ನುಂಟು ಮಾಡುತ್ತಿರಲಿಲ್ಲ. ಈ ನಿಯಮವು ಸ್ವಪ್ನಾವಸ್ಥೆಗೂ ಅನ್ವಯಿಸುವುದಾಗಿದ್ದಿತು. ಗರುಡಧ್ವಜನಾದ ಶ್ರೀಕೃಷ್ಣನು ಆಗಮಿಸಿದೊಡನೆಯೇ ಧನಂಜಯನು ಯಥಾಪೂರ್ವವಾಗಿ ಮೇಲೆದ್ದು ನಿಂತು ವಿನೀತನಾಗಿ ಭಕ್ತಿಯಿಂದಲೂ, ಆದರದಿಂದಲೂ ಸ್ವಾಗತಿಸಿ ಶ್ರೀಕೃಷ್ಣನಿಗೆ ಕುಳಿತುಕೊಳ್ಳಲು ಆಸನವನ್ನಿತ್ತನು. ಆದರೆ ತಾನೂ ಸಹ ಶ್ರೀಕೃಷ್ಣನ ಜೊತೆಯಲ್ಲಿ ಆಸನಾರೂಢನಾಗಿ ಕುಳಿತುಕೊಳ್ಳಬೇಕೆಂಬುದರ ಬಗೆಗೆ ಅವನು ಅಷ್ಟಾಗಿ ಯೋಚಿಸಲಿಲ್ಲ. ಮಹಾತೇಜಸ್ವಿಯಾದ ಶ್ರೀಕೃಷ್ಣನು ಪಾರ್ಥನ ಮನಃಸಂಕಲ್ಪವನ್ನು ತಿಳಿದವನಾಗಿ ತಾನೊಬ್ಬನೇ ಆಸನದ ಮೇಲೆ ಕುಳಿತು ವಿನೀತನಾಗಿ ನಿಂತಿದ್ದ ಅರ್ಜುನನೊಡನೆ ಈ ಮಾತುಗಳನ್ನು ಹೇಳಿದನು:

**ಮಾ ವಿಷಾದೇ ಮನಃ ಪಾರ್ಥ ಕೃಥಾಃ ಕಾಲೋ ಹಿ ದುರ್ಜಯಃ।**
**ಕಾಲಃ ಸರ್ವಾಣಿ ಭೂತಾನಿ ನಿಯಚ್ಛತಿ ಪರೇ ವಿಧೌ ॥೬॥**

"ಅರ್ಜುನ! ನಿನ್ನ ಮನಸ್ಸನ್ನು ವಿಷಾದದಲ್ಲಿ ತೊಡಗಿಸಬೇಡ. ಕಾಲವೆಂಬುದು ದುರ್ಜಯವಾದುದು. ಕಾಲವನ್ನು ಜಯಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಕಾಲವೆಂಬುದು ಎಲ್ಲ ಪ್ರಾಣಿಗಳನ್ನೂ ವಿಧಾತನ ವಿಧಾನದಲ್ಲಿ ತೊಡಗಿಸುತ್ತದೆ.

ಮನುಷ್ಯಶ್ರೇಷ್ಠನೇ! ಯಾವ ಕಾರಣದಿಂದಾಗಿ ನೀನು ವಿಷಾದ ಪಡುತ್ತಿರುವೆಯೆಂಬುದನ್ನು ಹೇಳು. ವಿದ್ವದ್ವರನೇ! ನಿನ್ನಂತಹವನು ಖಂಡಿತವಾಗಿಯೂ ಶೋಕಪಡಬಾರದು. ಶೋಕಃ ಕಾರ್ಯವಿನಾಶನಃ, ಶೋಕವೆಂಬುದು ಕೈಗೊಂಡ ಕಾರ್ಯದ ವಿನಾಶಕ್ಕೆ ಕಾರಣವಾಗುತ್ತದೆ. ಯಾವ ಕಾರ್ಯವನ್ನು ಮಾಡಬೇಕಾಗಿದೆಯೋ ಅದನ್ನು ಪ್ರಯತ್ನ ಪೂರ್ವಕವಾಗಿ ಕಾರ್ಯತಃ ಮಾಡು. 'ಹೀನಚೇಷ್ಟಸ್ಯ ಯಃ ಶೋಕಃ ಸ ಹಿ ಶತ್ರುಃ' ಉದ್ಯೋಗಹೀನನ ಶೋಕವು ಅವನಿಗೇ ಶತ್ರುವಾಗಿ ಪರಿಣಮಿಸುತ್ತದೆ.

ಶೋಚನ್ನನ್ದಯತೇ ಶತ್ರೂನ್ಕರ್ಶಯತ್ಯಪಿ ಬಾನ್ಧವಾನ್ ।
ಕ್ಷೀಯತೇ ಚ ನರಸ್ತಸ್ಮಾನ್ನ ತ್ವಂ ಶೋಚಿತುಮರ್ಹಸಿ ॥೯॥

ಶೋಕಪಡುವವನು ಶತ್ರುಗಳಿಗೆ ಸಂತೋಷವನ್ನುಂಟುಮಾಡುತ್ತಾನೆ. ಅವನು ಶೋಕಿಸುತ್ತಿರುವುದನ್ನು ನೋಡಿ ಶತ್ರುಪಕ್ಷದವರು ಹಿರಿಹಿಗ್ಗುತ್ತಾರೆ. ಶೋಕಪಡುವವನು ತನ್ನ ಬಂಧುಗಳಿಗೂ ಸಂಕಟವನ್ನುಂಟುಮಾಡುತ್ತಾನೆ. ಶೋಕದಿಂದಲೇ ಮನುಷ್ಯನು ಕ್ಷಯಿಸಿಹೋಗುತ್ತಾನೆ. ಆದುದರಿಂದ ನೀನು ಸರ್ವಥಾ ಶೋಕಿಸಬಾರದು."

ಮಹಾರಾಜ! ವಾಸುದೇವನು ಅಪರಾಜಿತನಾದ ಪಾರ್ಥನೊಡನೆ ಹೀಗೆಂದು ಹೇಳಿದನಂತರ ವಿದ್ವಾಂಸನಾದ ಅರ್ಜುನನು ಶ್ರೀಕೃಷ್ಣನೊಡನೆ ಮಾತನಾಡಿದನು:

"ಕೇಶವ! ಜಯದ್ರಥನ ವಧೆಯ ಸಲುವಾಗಿ ನಾನು ಬಹಳ ದೊಡ್ಡದಾದ ಪ್ರತಿಜ್ಞೆಯನ್ನೇ ಮಾಡಿದ್ದೇನೆ. 'ನಾಳೆಯೇ ನಾನು ಪುತ್ರಹಂತಕನಾದ ದುರಾತ್ಮನಾದ ಸೈಂಧವನನ್ನು ಸಂಹರಿಸುತ್ತೇನೆ'–ಎಂಬುದೇ ಆ ನನ್ನ ಪ್ರತಿಜ್ಞೆಯಾಗಿದೆ. ಆದರೆ ಈ ನನ್ನ ಪ್ರತಿಜ್ಞೆಗೆ ವಿಘ್ನವನ್ನುಂಟುಮಾಡುವ ಸಲುವಾಗಿ ಧೃತರಾಷ್ಟ್ರನ ಪಕ್ಷದ ಎಲ್ಲ ಮಹಾರಥರೂ ಸಿಂಧುರಾಜನನ್ನು ಎಲ್ಲ ಸೈನ್ಯಗಳ ಹಿಂಭಾಗದಲ್ಲಿ ನಿಲ್ಲಿಸಿ ಎಲ್ಲರೂ ಒಟ್ಟಾಗಿ ಸೇರಿ ಅವನನ್ನು ರಕ್ಷಿಸುತ್ತಾರೆ. ಮಾಧವ! ಜಯಿಸಲು ದುಃಸಾಧ್ಯವಾದ ಹನ್ನೊಂದು ಅಕ್ಷೌಹಿಣೀಸೈನ್ಯಗಳು ದುರ್ಯೋಧನನಲ್ಲಿವೆ. ಅದರಲ್ಲಿ ಎಷ್ಟೋ ಜನ ಹತರಾಗಿದ್ದಾರೆ. ಆದರೂ ಉಳಿದಿರುವ ಸೈನಿಕರೂ ಅಪಾರಸಂಖ್ಯೆಯಲ್ಲೇ ಇದ್ದಾರೆ. ಆ ಹನ್ನೊಂದು ಅಕ್ಷೌಹಿಣೀಸೈನಿಕರಿಂದಲೂ ಮತ್ತು ಎಲ್ಲ ಮಹಾರಥರಿಂದಲೂ ಸೈಂಧವನು ಸುತ್ತುವರಿಯಲ್ಪಟ್ಟಿರುತ್ತಾನೆ. ಅಂತಹ ಭದ್ರಕೋಟೆಯಲ್ಲಿರುವ ಅವನನ್ನು ನೋಡಲು ತಾನೇ ಹೇಗೆ ಸಾಧ್ಯ? ಕೃಷ್ಣ! ಇಂತಹ ಸಂದರ್ಭದಲ್ಲಿ ಪ್ರತಿಜ್ಞಾಪೂರಣವು ಆಗುವುದೇ ಇಲ್ಲ. ಮಾಡಿದ ಪ್ರತಿಜ್ಞೆಯು ಭಂಗವಾಗಿಬಿಟ್ಟರೆ ನನ್ನಂತಹವನು ಹೇಗೆ ತಾನೇ ಜೀವಿಸಿಯಾನು? ದುಃಖಕ್ಕೆ ದ್ವಾರಭೂತವಾದ ನನ್ನ ಪ್ರತಿಜ್ಞೆಗೆ ಭಂಗವೇ ಆಗುವಂತೆ ಕಾಣುತ್ತದೆ. ಇದಕ್ಕೂ ಮಿಗಿಲಾಗಿ ಈ ದಿವಸಗಳಲ್ಲಿ ಸೂರ್ಯನೂ

ಬಹಳ ಬೇಗ ಅಸ್ತನಾಗಿಬಿಡುತ್ತಾನೆ. ಈ ಕಾರಣಗಳಿಂದ ನಾನು ಹೀಗೆ ಮಾತನಾಡುತ್ತಿದ್ದೇನೆ.”

ಮಹಾರಾಜ! ಗರುಡಧ್ವಜನಾದ, ಕಮಲಾಕ್ಷನಾದ, ಮಹಾತೇಜಸ್ವಿಯಾದ, ಮಹಾವಿಷ್ಣುಸ್ವರೂಪನಾದ ಶ್ರೀಕೃಷ್ಣನು ಅರ್ಜುನನ ಶೋಕಕ್ಕೆ ಕಾರಣವು ಯಾವುದೆಂಬುದನ್ನು ಅವನಿಂದಲೇ ತಿಳಿದುಕೊಂಡವನಾಗಿ ಆಚಮನಮಾಡಿ ಪೂರ್ವಾಭಿಮುಖವಾಗಿ ಕುಳಿತು ಪಾಂಡುಪುತ್ರನ ಹಿತಾರ್ಥವಾಗಿಯೂ ಸೈಂಧವನ ಸಂಹಾರದ ಸಲುವಾಗಿಯೂ ಈ ವಾಕ್ಯವನ್ನು ಹೇಳಿದನು:

“ಪಾರ್ಥ! ಪಾಶುಪತವೆಂಬ ಶ್ರೇಷ್ಠವಾದ ಮತ್ತು ಸನಾತನವಾದ ಅಸ್ತ್ರವೊಂದಿದೆ. ಆ ಅಸ್ತ್ರದಿಂದಲೇ ದೇವದೇವನಾದ ಪರಮೇಶ್ವರನು ಯುದ್ಧದಲ್ಲಿ ಎಲ್ಲ ದೈತ್ಯರನ್ನೂ ಸಂಹರಿಸಿದನು. ಆ ಮಹಾಸ್ತ್ರವು (ಆ ಮಹಾಸ್ತ್ರದ ಅನುಸಂಧಾನಪ್ರಯೋಗವು) ಈಗ ನಿನಗೆ ತಿಳಿದಿರುವುದೇ ಆದರೆ ನಾಳೆ ನೀನು ನಿಶ್ಚಯವಾಗಿಯೂ ಜಯದ್ರಥನನ್ನು ಸಂಹರಿಸುವೆ. ಒಂದು ವೇಳೆ ಆ ಮಹಾಸ್ತ್ರವು ನಿನ್ನ ಸ್ಮೃತಿಪಥದಲ್ಲಿ ಇಲ್ಲದಿದ್ದರೆ ಈಗಲೇ ನೀನು ಮನಸ್ಸಿನ ಮೂಲಕವಾಗಿ ಶಂಕರನಲ್ಲಿ ಮೊರೆಯಿಡು. ಧನಂಜಯ! ಆ ಪರಶಿವನನ್ನು ಮನಸ್ಸಿನಲ್ಲಿಯೇ ಧ್ಯಾನಮಾಡುತ್ತಾ ಮೌನಿಯಾಗು. ಭಕ್ತನಾದ ನೀನು ಅವನ ಪ್ರಸಾದದಿಂದ ಮಹಾಪಾಶುಪತಾಸ್ತ್ರವನ್ನು ಪಡೆದುಕೊಳ್ಳುವೆ.”

ಮಹಾರಾಜ! ಶ್ರೀಕೃಷ್ಣನ ಮಾತನ್ನು ಕೇಳಿ ಧನಂಜಯನು ಆಚಮನಮಾಡಿ ನೆಲದ ಮೇಲೆಯೇ ಕುಳಿತು ಏಕಾಗ್ರಚಿತ್ತನಾಗಿ ಮನಸ್ಸಿನ ಮೂಲಕವಾಗಿ ಶಿವನ ಬಳಿಗೆ ಹೋದನು. (ಈಶ್ವರನನ್ನು ಧ್ಯಾನಮಾಡಿದನು.) ಅನಂತರ ಶುಭಲಕ್ಷಣಯುಕ್ತವಾದ ಬ್ರಾಹ್ಮಮುಹೂರ್ತದಲ್ಲಿ ಧ್ಯಾನಯೋಗ ದಲ್ಲಿದ್ದ ಅರ್ಜುನನಿಗೆ ತಾನು ಶ್ರೀಕೃಷ್ಣನೊಡನೆ ಆಕಾಶದಲ್ಲಿ ಹೋಗುತ್ತಿರುವಂತೆ ಭಾಸವಾಯಿತು. ಹಾಗೆಯೇ ಮುಂದೆ ಹೋಗುತ್ತಾ ಪವಿತ್ರವಾದ ಹಿಮಾಲಯದ ಶಿಖರವನ್ನೂ-ಜ್ಯೋತಿರ್ಲತೆಗಳಿಂದ ಸಮಾಕೀರ್ಣವಾಗಿದ್ದ, ಸಿದ್ಧ-ಚಾರಣರಿಂದ ಸೇವಿತವಾದ ಮಣಿಮಂತಪರ್ವತವನ್ನೂ ನೋಡಿದನು. ಆ ಸಮಯದಲ್ಲಿ ಅರ್ಜುನನು ಶ್ರೀಕೃಷ್ಣನೊಡನೆ ವಾಯುವೇಗಕ್ಕೆ

ಸಮಾನವಾದ ತೀವ್ರಗತಿಯಿಂದ, ಭೂಮಿಯಿಂದ ಬಹಳ ಎತ್ತರದಲ್ಲಿ ಹೋಗುತ್ತಿದ್ದನು. ಶ್ರೀಕೇಶವನು ಅರ್ಜುನನ ಬಲಭುಜವನ್ನು ಹಿಡಿದು ಕೊಂಡಿದ್ದನು. ಅನಂತರ ಧರ್ಮಾತ್ಮನಾದ ಅರ್ಜುನನು ಮಾರ್ಗದಲ್ಲಿ ಪರಮಾದ್ಭುತವಾದ ಅನೇಕ ದೃಶ್ಯಗಳನ್ನು ನೋಡುತ್ತಿದ್ದನು. ಹೀಗೆಯೇ ಮುಂದೆ-ಮುಂದೆ ಹೋಗುತ್ತಿದ್ದಾಗ ಅರ್ಜುನನು ಉತ್ತರದಿಕ್ಕಿನಲ್ಲಿ ಶ್ವೇತ ಪರ್ವತವನ್ನು ನೋಡಿದನು. ಅನಂತರ ಅವನು ಕುಬೇರನ ಉದ್ಯಾನವನದಲ್ಲಿ ಕಮಲಗಳಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಸರೋವರವನ್ನೂ-ಪೂರ್ಣಪ್ರವಾಹದಿಂದ ಕೂಡಿದ್ದ, ನದಿಗಳಲ್ಲೆಲ್ಲಾ ಶ್ರೇಷ್ಠಳಾದ ಗಂಗಾನದಿ ಯನ್ನೂ ವೀಕ್ಷಿಸಿದನು. ಗಂಗಾನದಿಯ ದಂಡೆಗಳಲ್ಲಿ ಸ್ಪಟಿಕಮಣಿಮಯವಾದ ಕಲ್ಲಿನ ಸೋಪಾನಗಳಿದ್ದುವು. ತೀರಪ್ರದೇಶಗಳಲ್ಲಿ ಪುಷ್ಪಗಳಿಂದಲೂ, ಫಲಗಳಿಂದಲೂ ಸಮೃದ್ಧವಾದ ವೃಕ್ಷಗಳಿದ್ದುವು. ಸಿಂಹಗಳಿಂದಲೂ, ವ್ಯಾಘ್ರಗಳಿಂದಲೂ ಮತ್ತು ನಾನಾವಿಧವಾದ ಮೃಗಗಳಿಂದಲೂ ವ್ಯಾಪ್ತವಾಗಿದ್ದ ಅರಣ್ಯಪ್ರದೇಶಗಳಿದ್ದುವು. ಅವುಗಳೆಲ್ಲವನ್ನೂ ನೋಡುತ್ತಾ ಅರ್ಜುನನು ಶ್ರೀಕೃಷ್ಣನೊಡನೆ ಆಕಾಶಮಾರ್ಗದಲ್ಲಿ ಮುಂದೆ-ಮುಂದೆ ಹೋಗುತ್ತಲೇ ಇದ್ದನು. ಪವಿತ್ರವಾದ ಅನೇಕಾಶ್ರಮಗಳಿಂದ ಯುಕ್ತವಾಗಿದ್ದ ಮನೋಹರ ವಾದ ಪಕ್ಷಿಗಳ ಸಮೂಹದಿಂದ ಸಂಸೇವಿತವಾಗಿದ್ದ ಗಂಗಾನದಿಯನ್ನು ಸಂದರ್ಶಿಸಿ ಮುಂದೆ ಹೋಗುತ್ತಾ ಕಿನ್ನರರ ಉಚ್ಚಸ್ವರದ ಗಾಯನದಿಂದ ನಿನಾದಿತವಾಗಿದ್ದ ಮಂದರಾಚಲ ಪ್ರದೇಶಗಳನ್ನೂ ಅರ್ಜುನನು ನೋಡಿ ದನು. ಮಂದರಾಚಲದಲ್ಲಿ ಸುವರ್ಣಮಯವಾದ ಮತ್ತು ರಜತಮಯವಾದ ಶಿಖರಗಳಿದ್ದುವು. ಆ ಶಿಖರಗಳು ಓಷಧೀಲತೆಗಳಿಂದ ಪ್ರಕಾಶಮಾನವಾಗಿ ಕಾಣುತ್ತಿದ್ದುವು. ಸುಪುಷ್ಪಯುಕ್ತವಾಗಿದ್ದ ಮಂದಾರವೃಕ್ಷಗಳಿಂದ ಶೋಭಾಯ ಮಾನವಾಗಿ ಕಾಣುತ್ತಿದ್ದ ಮಂದರಾಚಲದ ಪ್ರದೇಶಗಳನ್ನು ನೋಡಿದನು. ಹೀಗೆಯೇ ಆಕಾಶದಲ್ಲಿ ಮುಂದೆ ಹೋಗುತ್ತಿದ್ದ ಅರ್ಜುನನು ದಟ್ಟವಾದ ಕಾಡಿಗೆಯ ರಾಶಿಯಂತಿದ್ದ ಕಾಲಪರ್ವತದ ಸಮೀಪಕ್ಕೆ ಹೋದನು. ಮುಂದೆ ಬ್ರಹ್ಮತುಂಗವೆಂಬ ಪರ್ವತವನ್ನೂ ಇತರ ಅನೇಕ ನದಿಗಳನ್ನೂ, ದೇಶಗಳನ್ನೂ ನೋಡಿದನು. ಅಲ್ಲಿಂದ ಮುಂದೆ ಅರ್ಜುನನು ಆಕಾಶಮಾರ್ಗದಲ್ಲಿಯೇ ಶ್ರೀಕೃಷ್ಣನೊಡನೆ ಹೋಗುತ್ತಾ ಅನುಕ್ರಮವಾಗಿ ಎತ್ತರವಾದ ಶತಶೃಂಗ

ಪರ್ವತವನ್ನೂ, ಶರ್ಯಾತಿವನವನ್ನೂ, ಪುಣ್ಯತಮವಾದ ಅಶ್ವಶಿರಃಸ್ಥಾನ ವನ್ನೂ, ಅಥರ್ವಣಮುನಿಯ ಸ್ಥಾನವನ್ನೂ, ಪರ್ವತಶ್ರೇಷ್ಠವಾದ ವೃಷದಂಶನನ್ನೂ, ಅಪ್ಸರೆಯರಿಂದ ವ್ಯಾಪ್ತವಾದ ಮತ್ತು ಕಿನ್ನರರಿಂದ ಶೋಭಾಯಮಾನವಾಗಿ ಕಾಣುತ್ತಿದ್ದ ಮಹಾಮಂದರಪರ್ವತವನ್ನೂ ನೋಡಿ ದನು. ಮಹಾಮಂದರಪರ್ವತದ ಮೇಲೆ ಶ್ರೀಕೃಷ್ಣನ ಸಮೇತನಾಗಿ ಹೋಗುತ್ತಿದ್ದ ಪಾರ್ಥನು ಕೆಳಭಾಗದಲ್ಲಿ ಪಟ್ಟಣಗಳ ಮತ್ತು ನಗರಗಳ ಸಾಲುಗಳಿಂದ ಸುಶೋಭಿತವಾಗಿದ್ದ, ಸುವರ್ಣಮಯವಾದ ಧಾತುಗಳಿಂದ ವಿಭೂಷಿತವಾಗಿದ್ದ, ಶುಭಕರವಾದ ಝರಿಗಳಿಂದ ಯುಕ್ತವಾಗಿದ್ದ, ಚಂದ್ರನ ಬೆಳದಿಂಗಳಿನಿಂದ ಪ್ರಕಾಶಿತವಾದ ಪ್ರದೇಶಗಳನ್ನು ಹೊಂದಿರುವ ಭೂಮಿಯನ್ನು ನೋಡಿದನು. ಹಾಗೆಯೇ ಮುಂದೆ ಹೋಗುತ್ತಾ ಅರ್ಜುನನು ರತ್ನಗಳ ಉತ್ಪತ್ತಿಸ್ಥಾನವಾದ ಅದ್ಭುತಾಕಾರವಾದ ಸಮುದ್ರಗಳನ್ನು ನೋಡಿ ದನು. ಈ ರೀತಿಯಲ್ಲಿ ಅವನು ಪೃಥಿವ್ಯಾಕಾಶಗಳನ್ನೂ ಏಕಕಾಲದಲ್ಲಿ ಸಂದರ್ಶಿಸುತ್ತಾ ಆಕಾಶದ ಉಚ್ಚತಮಭಾಗದಲ್ಲಿ (ವಿಷ್ಣುಪದದಲ್ಲಿ) ಹೋಗುತ್ತಾ ಆಶ್ಚರ್ಯಚಕಿತನಾಗಿ ಧನುಸ್ಸಿನಿಂದ ಚ್ಯುತವಾದ ಬಾಣದೋಪಾದಿಯಲ್ಲಿ ಶ್ರೀಕೃಷ್ಣನೊಡನೆ ಮುಂದೆ ಸಾಗಿದನು.

ಅನಂತರ ಅರ್ಜುನನು ಗ್ರಹಗಳು, ನಕ್ಷತ್ರಗಳು, ಚಂದ್ರ, ಸೂರ್ಯ, ಅಗ್ನಿ–ಇವರಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಜ್ವಲಿಸುತ್ತಿದೆಯೋ ಎಂಬಂತೆ ಕಾಣುತ್ತಿದ್ದ ಪರ್ವತವೊಂದನ್ನು ನೋಡಿದನು. ಪರ್ವತದ ಸಮೀಪಕ್ಕೆ ಹೋಗಿ, ಆ ಪರ್ವತದ ಶಿಖರದ ಅಗ್ರಭಾಗದಲ್ಲಿ ನಿತ್ಯವೂ ತಪಸ್ಸಿನಲ್ಲಿಯೇ ನಿರತನಾಗಿರುವ, ಮಹಾತ್ಮನಾದ, ವೃಷಭಧ್ವಜನಾದ ಶ್ರೀಶಂಕರನನ್ನು ಸಂದರ್ಶಿಸಿದನು. ಸಾವಿರ ಸೂರ್ಯರಂತೆ ತನ್ನ ತೇಜಸ್ಸಿನಿಂದ ದೇದೀಪ್ಯಮಾನನಾಗಿ ಕಾಣುತ್ತಿದ್ದ, ಶೂಲಪಾಣಿಯಾದ, ಜಟಾಧರನಾದ, ನಾರುಮಡಿ ಮತ್ತು ಮೃಗಚರ್ಮಗಳನ್ನೇ ವಸ್ತ್ರವನ್ನಾಗಿ ಹೊಂದಿದ್ದ, ಗೌರಾಂಗನಾದ ಪರಶಿವನನ್ನು ಅರ್ಜುನನು ಸಂದರ್ಶಿಸಿದನು. ಸಾವಿರ ಕಣ್ಣುಗಳನ್ನು ಹೊಂದಿದ್ದ, ವಿಚಿತ್ರವಾದ ಶರೀರದಿಂದ ಕಂಗೊಳಿಸುತ್ತಿದ್ದ, ಮಹಾತೇಜಸ್ವಿಯಾದ, ತೇಜೋಮಯರಾದ ಭೂತಗಣಗಳಿಂದ ಸೇವಿಸಲ್ಪಡುತ್ತಿದ್ದ, ಪಾರ್ವತೀಸಮೇತನಾದ ಪರಶಿವನನ್ನು ನೋಡಿದನು. ಅವನ ಬಳಿಯಲ್ಲಿ ಗೀತೆಗಳ ಗಾನವಾಗುತ್ತಿದ್ದಿತು. ವಾದ್ಯಗಳು ಮೊಳಗು

ತ್ತಿದ್ದುವು. ಹಾಸ್ಯಪ್ರಹಸನಗಳೂ ನಡೆಯುತ್ತಿದ್ದುವು. ನಯನಾನಂದಕರವಾದ ನೃತ್ಯವಾಗುತ್ತಿದ್ದಿತು. ಈಶ್ವರನ ಪ್ರಮಥಗಣಗಳು ಅಲ್ಲಿಂದಿಲ್ಲಿಗೆ ನಾಟ್ಯಭಂಗಿ ಯಲ್ಲಿ ಹಾಸ್ಯಪ್ರದರ್ಶನಮಾಡುತ್ತಾ, ಭುಜಗಳನ್ನು ಅಪ್ಪಳಿಸುತ್ತಾ, ಗಟ್ಟಿಯಾಗಿ ಕೂಗುತ್ತಾ, ಈಶ್ವರನಿಗೆ ಮನೋರಂಜನೆಯನ್ನುಂಟುಮಾಡುತ್ತಿದ್ದುವು. ಅವನ ಸೇವೆಗಾಗಿ ಪವಿತ್ರವಾದ ಸುಗಂಧದ್ರವ್ಯಗಳೂ ಸಿದ್ಧವಾಗಿದ್ದುವು. ಬ್ರಹ್ಮಾದಿ ಗಳಾದ ಮಹರ್ಷಿಗಳು ಅವನನ್ನು ದಿವ್ಯವಾದ ಸ್ತುತಿಗಳಿಂದ ಸ್ತೋತ್ರ



ಮಾಡುತ್ತಿದ್ದರು. ತನ್ನ ಮಹಿಮೆಯಿಂದ ಯಾವಾಗಲೂ ಚ್ಯುತನಾಗದೇ ಇದ್ದ (ನಾಶರಹಿತನಾದ), ಸಕಲಪ್ರಾಣಿಗಳ ರಕ್ಷಕನಾದ, ಧನುರ್ಧರನಾದ ಪರಮೇಶ್ವರನನ್ನು ಅರ್ಜುನನು ಸಂದರ್ಶಿಸಿದನು. ಅರ್ಜುನನ ಜೊತೆಯಲ್ಲಿದ್ದ (೧೬೮)–೧೬

ಧರ್ಮಾತ್ಮನಾದ ವಾಸುದೇವನು-ಸನಾತನನಾದ, ಬ್ರಹ್ಮಸ್ವರೂಪನಾದ ಮಹಾ ದೇವನನ್ನು ನೋಡಿದೊಡನೆಯೇ ಸ್ತೋತ್ರಮಾಡುತ್ತಾ ಅರ್ಜುನನೊಡನೆ ಭೂಮಿಯ ಮೇಲೆ ತಲೆಯನ್ನಿಟ್ಟು ಸಾಷ್ಟಾಂಗಪ್ರಣಾಮಮಾಡಿದನು.

**ಲೋಕಾದಿಂ ವಿಶ್ವಕರ್ಮಾಣಮಜಮೀಶಾನಮವ್ಯಯಮ್ ।**
**ಮನಸಃ ಪರಮಂ ಯೋನಿಂ ಖಂ ವಾಯುಂ ಜ್ಯೋತಿಷಾಂ ನಿಧಿಮ್ ॥**

**ಸ್ರಷ್ಟಾರಂ ವಾರಿಧಾರಾಣಾಂ ಭುವಶ್ಚ ಪ್ರಕೃತಿಂ ಪರಾಮ್ ।**
**ದೇವದಾನವಯಕ್ಷಾಣಾಂ ಮಾನವಾನಾಂ ಚ ಸಾಧನಮ್ ॥೪೫॥**

**ಯೋಗಾನಾಂ ಚ ಪರಂ ಧಾಮ ದೃಷ್ಟಂ ಬ್ರಹ್ಮವಿದಾಂ ನಿಧಿಮ್।**
**ಚರಾಚರಸ್ಯ ಸ್ರಷ್ಟಾರಂ ಪ್ರತಿಹರ್ತಾರಮೇವ ಚ ॥೪೬॥**

**ಕಾಲಕೋಪಂ ಮಹಾತ್ಮಾನಂ ಶಕ್ರಸೂರ್ಯಗುಣೋದಯಮ್।**
**ವವನ್ದೇ ತಂ ತದಾ ಕೃಷ್ಣೋ ವಾಙ್ಮನೋಬುದ್ಧಿಕರ್ಮಭಿಃ ॥೪೭॥**

ಜಗತ್ತಿಗೆ ಆದಿಕಾರಣನಾದ, ಲೋಕಸ್ರಷ್ಟೃವಾದ, ಜನ್ಮರಹಿತನಾದ, ಈಶ್ವರನಾದ, ನಾಶರಹಿತನಾದ, ಮನಸ್ಸಿನ ಉತ್ಪತ್ತಿಗೆ ಪ್ರಧಾನಕಾರಣನಾದ, ಆಕಾಶಸ್ವರೂಪನಾದ, ವಾಯುಸ್ವರೂಪನಾದ, ತೇಜಸ್ಸುಗಳಿಗೆ ಆಶ್ರಯ ಭೂತನಾದ, ಜಲಧಾರೆಗಳ ಉತ್ಪತ್ತಿಗೆ ಕಾರಣನಾದ, ಭೂಮಿಯ ಉತ್ಪತ್ತಿಗೂ ಕಾರಣನಾದ, ದೇವ-ದಾನವ-ಯಕ್ಷರ ಮತ್ತು ಮನುಷ್ಯರ ಉತ್ಪತ್ತಿಗೂ ಪ್ರಧಾನಕಾರಣನಾದ, ಯೋಗಗಳಿಗೆಲ್ಲಾ ಪರಮಾಶ್ರಯನಾದ, ಬ್ರಹ್ಮವಿದರಿಗೆ ಪ್ರತ್ಯಕ್ಷನಿಧಿಸ್ವರೂಪನಾದ, ಚರಾಚರರೂಪವಾದ ಜಗತ್ತಿನ ಸೃಷ್ಟಿಗೂ ಮತ್ತು ಲಯಕ್ಕೂ ಕಾರಣನಾದ, ಕಾಲನನ್ನೇ ಕೋಪದ ರೂಪದಲ್ಲಿ ಹೊಂದಿರುವ, ಇಂದ್ರ ಮತ್ತು ಸೂರ್ಯರಲ್ಲಿರುವ ಗುಣಗಳಿಗೆ ಕಾರಣಭೂತನಾದ, ಮಹಾತ್ಮನಾದ ಪರಶಿವನನ್ನು, ಶ್ರೀಕೃಷ್ಣನು ಕಾಯೇನ, ವಾಚಾ, ಮನಸಾ, ಬುದ್ಧ್ಯಾ, ಕರ್ಮಣಾ ನಮಸ್ಕರಿಸಿದನು, (ಮನೋಬುದ್ಧಿಪೂರ್ವಕವಾಗಿ ಸ್ತುತಿಸುತ್ತಾ ಸಾಷ್ಟಾಂಗಪ್ರಣಾಮಮಾಡಿದನು.)

**ಯಂ ಪ್ರಪದ್ಯನ್ತಿ ವಿದ್ವಾಂಸಃ ಸೂಕ್ಷ್ಮಾಧ್ಯಾತ್ಮಪದೈಷಿಣಃ ।**
**ತಮಜಂ ಕಾರಣಾತ್ಮಾನಂ ಜಗ್ಮತುಃ ಶರಣಂ ಭವಮ್ ॥೪೮॥**

ಸೂಕ್ಷ್ಮವಾದ ಅಧ್ಯಾತ್ಮಪದವನ್ನು ಪಡೆಯಲಿಚ್ಛಿಸುವ ವಿದ್ವಾಂಸರು ಯಾವನನ್ನು ಶರಣುಹೊಂದುತ್ತಾರೆಯೋ–ಅಂತಹ ಕಾರಣಸ್ವರೂಪನಾದ, ಹುಟ್ಟು-ಸಾವುಗಳಿಲ್ಲದ ಭವದೇವನನ್ನು ಕೃಷ್ಣಾರ್ಜುನರು ಶರಣುಹೊಂದಿದರು. ಅರ್ಜುನನೂ ಕೂಡ ಪರಮೇಶ್ವರನನ್ನು ಸರ್ವಪ್ರಾಣಿಗಳಿಗೂ ಆದಿಪುರುಷನೆಂದೂ, ಭೂತ-ಭವಿಷ್ಯದ್ವರ್ತಮಾನಜಗತ್ತುಗಳ ಉತ್ಪತ್ತಿಗೂ ಕಾರಣನೆಂಬುದಾಗಿಯೂ ಭಾವಿಸಿ-ಪುನಃ ಅವನಿಗೆ ಸಾಷ್ಟಾಂಗಪ್ರಣಾಮ ಮಾಡಿದನು.

ಅನಂತರ ಶರ್ವನು ನರ-ನಾರಾಯಣರಿಬ್ಬರೂ ತನ್ನ ಬಳಿಗೆ ಬಂದಿರುವುದನ್ನು ನೋಡಿ ಪ್ರಸನ್ನಚಿತ್ತನಾಗಿ ನಗುತ್ತಿರುವನೋ ಎಂಬ ಮುಖಭಾವದಿಂದ ಕೂಡಿದವನಾಗಿ ಈ ಮಾತುಗಳನ್ನು ಹೇಳಿದನು:

**ಸ್ವಾಗತಂ ವೋ ನರಶ್ರೇಷ್ಠಾವುತ್ತಿಷ್ಠೇತಾಂ ಗತಕ್ಲಮೌ ।**
**ಕಿಂ ಚ ವಾಮೀಪ್ಸಿತಂ ವೀರೌ ಮನಸಃ ಕ್ಷಿಪ್ರಮುಚ್ಯತಾಮ್ ॥೫೧॥**

“ನರಶ್ರೇಷ್ಠರೇ! ನಿಮ್ಮಿಬ್ಬರಿಗೂ ಸ್ವಾಗತವನ್ನು ಬಯಸುತ್ತೇನೆ. ಮೇಲೇಳಿರಿ. ನಿಮ್ಮ ಶ್ರಮವು ಪರಿಹಾರವಾಗಲಿ. ವೀರರೇ! ನಿಮ್ಮಿಬ್ಬರ ಮನಸ್ಸಿನಲ್ಲಿಯೂ ಯಾವ ಅಭಿಲಾಷೆಯಿದೆಯೆಂಬುದನ್ನು ಬೇಗ ಹೇಳಿರಿ.

**ಯೇನ ಕಾರ್ಯೇಣ ಸಂಪ್ರಾಪ್ತೌ ಯುವಾಂ ತತ್ಸಾಧಯಾಮಿ ಕಿಮ್।**
**ವ್ರಿಯತಾಮಾತ್ಮನಃ ಶ್ರೇಯಸ್ತತ್ಸರ್ವಂ ಪ್ರದದಾನಿ ವಾಮ್ ॥೫೨॥**

ನೀವಿಬ್ಬರೂ ಯಾವ ಕಾರ್ಯದ ನಿಮಿತ್ತವಾಗಿ ಇಲ್ಲಿಗೆ ಬಂದಿರಿ? ನಾನು ನಿಮ್ಮ ಯಾವ ಕಾರ್ಯವನ್ನು ಆಗುಮಾಡಿಕೊಡಬೇಕಾಗಿದೆ? ನಿಮ್ಮಿಬ್ಬರಿಗೂ ಕಲ್ಯಾಣಕಾರಿಯಾದ ವರವನ್ನು ಕೇಳಿರಿ. ನೀವು ಕೇಳಿದುದೆಲ್ಲವನ್ನೂ ನಾನು ಕೊಡುತ್ತೇನೆ.”

ಭವದೇವನ ಮಾತುಗಳನ್ನು ಕೇಳಿ ಕೃಷ್ಣಾರ್ಜುನರಿಬ್ಬರೂ ಪ್ರತ್ಯುತ್ಥಾನಮಾಡಿ ಬದ್ಧಾಂಜಲಿಗಳಾಗಿ ನಿಂತರು. ಮಹಾಬುದ್ಧಿವಂತರಾದ, ಮಹಾತ್ಮರಾದ, ಅನಿಂದಿತರಾದ (ದೋಷರಹಿತರಾದ) ಕೃಷ್ಣಾರ್ಜುನರು ಭಕ್ತಿಪೂರ್ವಕವಾಗಿ ದಿವ್ಯವಾದ ಸ್ತೋತ್ರಗಳಿಂದ ಶರ್ವನನ್ನು ಸ್ತುತಿಮಾಡಿದರು.

**ನಮೋ ಭವಾಯ ಶರ್ವಾಯ ರುದ್ರಾಯ ವರದಾಯ ಚ ।**
**ಪಶೂನಾಂ ಪತಯೇ ನಿತ್ಯಮುಗ್ರಾಯ ಚ ಕಪರ್ದಿನೇ ॥೫೫॥**

ಮಹಾದೇವಾಯ ಭೀಮಾಯ ತ್ರ್ಯಮ್ಬಕಾಯ ಚ ಶಾನ್ತಯೇ ।
ಈಶಾನಾಯ ಮಖಘ್ನಾಯ ನಮೋಽಸ್ತ್ವನ್ಧಕಘಾತಿನೇ ॥೫೬॥
ಕುಮಾರಗುರವೇ ತುಭ್ಯಂ ನೀಲಗ್ರೀವಾಯ ವೇಧಸೇ ।
ಪಿನಾಕಿನೇ ಹವಿಷ್ಯಾಯ ಸತ್ಯಾಯ ವಿಭವೇ ಸದಾ ॥೫೭॥
ವಿಲೋಹಿತಾಯ ಧೂಮ್ರಾಯ ವ್ಯಾಧಾಯಾಪರಾಜಿತೇ ।
ನಿತ್ಯನೀಲಶಿಖಣ್ಡಾಯ ಶೂಲಿನೇ ದಿವ್ಯಚಕ್ಷುಷೇ ॥೫೮॥
ಹನ್ತ್ರೇ ಗೋಪ್ತ್ರೇ ತ್ರಿನೇತ್ರಾಯ ವ್ಯಾಧಾಯ ವಸುರೇತಸೇ ।
ಅಚಿನ್ತ್ಯಾಯಾಮ್ಬಿಕಾಭರ್ತ್ರೇ ಸರ್ವದೇವಸ್ತುತಾಯ ಚ ॥೫೯॥
ವೃಷಧ್ವಜಾಯ ಮುಣ್ಡಾಯ ಜಟಿನೇ ಬ್ರಹ್ಮಚಾರಿಣೇ ।
ತಪ್ಯಮಾನಾಯ ಸಲಿಲೇ ಬ್ರಹ್ಮಣ್ಯಾಯಾಜಿತಾಯ ಚ ॥೬೦॥
ವಿಶ್ವಾತ್ಮನೇ ವಿಶ್ವಸೃಜೇ ವಿಶ್ವಮಾವೃತ್ಯ ತಿಷ್ಠತೇ।
ನಮೋ ನಮಸ್ತೇ ಸೇವ್ಯಾಯ ಭೂತಾನಾಂ ಪ್ರಭವೇ ಸದಾ ॥೬೧॥
ಬ್ರಹ್ಮವಕ್ತ್ರಾಯ ಸರ್ವಾಯ ಶಂಕರಾಯ ಶಿವಾಯ ಚ।
ನಮೋಽಸ್ತು ವಾಚಸ್ಪತಯೇ ಪಶೂನಾಂ ಪತಯೇ ನಮಃ ॥೬೨॥
ನಮೋ ವಿಶ್ವಸ್ಯ ಪತಯೇ ಮಹತಾಂ ಪತಯೇ ನಮಃ।
ನಮಃ ಸಹಸ್ರಶಿರಸೇ ಸಹಸ್ರಭುಜಮೃತ್ಯವೇ ॥೬೩॥
ಸಹಸ್ರನೇತ್ರಪಾದಾಯ ನಮೋಽಸಂಖ್ಯೇಯಕರ್ಮಣೇ ।
ನಮೋ ಹಿರಣ್ಯವರ್ಣಾಯ ಹಿರಣ್ಯಕವಚಾಯ ಚ।
ಭಕ್ತಾನುಕಮ್ಪಿನೇ ನಿತ್ಯಂ ಸಿಧ್ಯತಾಂ ನೋ ವರಃ ಪ್ರಭೋ ॥೬೪॥

"ಎಲ್ಲರ ಉತ್ಪತ್ತಿಗೂ ಕಾರಣನಾದ ಭವನಿಗೆ, ಎಲ್ಲರ ಸಂಹಾರಕ್ಕೂ ಕಾರಣನಾದ ಶರ್ವನಿಗೆ, ದುಃಖವನ್ನು ದೂರಗೊಳಿಸುವ [೧]ರುದ್ರನಿಗೆ, ವರಗಳನ್ನು ದಯಪಾಲಿಸುವ ವರದನಿಗೆ, ಎಲ್ಲ ಪ್ರಾಣಿಗಳಿಗೂ ಒಡೆಯನಾದ ಪಶುಪತಿಗೆ, ಸದಾ ಉಗ್ರರೂಪದಲ್ಲಿಯೇ ಇರುವ ಉಗ್ರನಿಗೆ, [೨]ಕಪರ್ದವನ್ನು (ಜಟೆಗಳ ಸಮೂಹವನ್ನು) ಹೊಂದಿರುವ ಕಪರ್ದಿಗೆ ನಮಸ್ಕಾರವು. ಎಲ್ಲ ದೇವತೆಗಳಿಗಿಂತಲೂ ಅತಿ ದೊಡ್ಡ ದೇವತೆಯಾದ ಮಹಾದೇವನಿಗೆ,

೧ ರುದ್ರಃ ರು = ದುಃಖಂ, ತತ್ ದ್ರಾವತೀತಿ = ರುದ್ರಃ

೨ ಕಪರ್ದಃ = ಪರಮೇಶ್ವರನ ಜಟೆಗಳ ಸಮೂಹ.

ಭಯಂಕರರೂಪಧರನಾದ ಭೀಮನಿಗೆ, ಮೂರು ಕಣ್ಣುಗಳನ್ನು ಹೊಂದಿರುವ ತ್ರ್ಯಂಬಕನಿಗೆ, ಶಾಂತಿಸ್ವರೂಪನಾದ ಶಾಂತನಿಗೆ, ಎಲ್ಲವನ್ನೂ ಶಾಸನಮಾಡುವ ಈಶಾನನಿಗೆ, ದಕ್ಷಯಜ್ಞವನ್ನು ನಾಶಮಾಡಿದ ಮಖಘ್ನನಿಗೆ, ಅಂಧಕಾಸುರ ನನ್ನು ಸಂಹಾರಮಾಡಿದ ಅಂಧಕಘಾತಿಗೆ ನಮಸ್ಕಾರವು. ಕುಮಾರಕಾರ್ತಿ ಕೇಯನ ತಂದೆಯಾದ ಕುಮಾರಗುರುವಿಗೆ, ಕಂಠದಲ್ಲಿ ನೀಲಚಿಹ್ನೆಯನ್ನು ಧಾರಣೆಮಾಡಿರುವ ನೀಲಗ್ರೀವನಿಗೆ, ಲೋಕವನ್ನು ಸೃಷ್ಟಿಸಿದ ವೇಧಸನಿಗೆ, ಪಿನಾಕಧರನಾದ ಪಿನಾಕಿಗೆ, ಹವಿಸ್ಸುಗಳಿಗೆ ಅಧಿಕಾರಿಯಾದ ಹವಿಷ್ಯನಿಗೆ, ಸತ್ಯಸ್ವರೂಪನಾದ ಸತ್ಯನಿಗೆ, ಸರ್ವವ್ಯಾಪಕನಾದ ವಿಭುವಿಗೆ ಸದಾಕಾಲ ದಲ್ಲಿಯೂ ನಮಸ್ಕಾರಮಾಡುತ್ತೇನೆ.

ವಿಶೇಷವಾಗಿ ಕೆಂಪುಬಣ್ಣದಿಂದ ಕೂಡಿರುವ ವಿಲೋಹಿತನಿಗೆ, ಬೂದುಬಣ್ಣವನ್ನು ಹೊಂದಿರುವ ಧೂಮ್ರನಿಗೆ, ಮೃಗವನ್ನು ಸಂಹಾರಮಾಡಿದ ವ್ಯಾಧನಿಗೆ, ಸಮಸ್ತಪ್ರಾಣಿಗಳನ್ನೂ ಪರಾಜಯಗೊಳಿಸುವ ಅಪರಾಜಿತನಿಗೆ, ಸರ್ವದಾ ನೀಲಕೇಶವನ್ನು ಧರಿಸಿರುವ ನಿತ್ಯನೀಲಶಿಖಂಡಿಗೆ, ತ್ರಿಶೂಲಧಾರಿ ಯಾದ ಶೂಲಿಗೆ, ದಿವ್ಯವಾದ ಕಣ್ಣುಗಳನ್ನು ಹೊಂದಿರುವ ದಿವ್ಯಚಕ್ಷುವಿಗೆ, ಪ್ರಳಯಕಾಲದಲ್ಲಿ ಎಲ್ಲ ಪ್ರಾಣಿಗಳನ್ನೂ ಹನನಮಾಡುವ ಹಂತೃವಿಗೆ, ಎಲ್ಲ ಪ್ರಾಣಿಗಳನ್ನೂ ರಕ್ಷಿಸುವ ಗೋಪ್ತಾರನಿಗೆ, ಮುಕ್ಕಣ್ಣನಾದ ತ್ರಿನೇತ್ರನಿಗೆ, ಪಾಪರೂಪವಾದ ಮೃಗಗಳನ್ನು ಸಂಹಾರಮಾಡುವ ವ್ಯಾಧನಿಗೆ, ಹಿರಣ್ಯವನ್ನೇ ರೇತಸ್ಸನ್ನಾಗಿ ಹೊಂದಿರುವ ವಸುರೇತಸನಿಗೆ, ಊಹಿಸುವುದಕ್ಕೂ ಸಾಧ್ಯವಾಗ ದಷ್ಟು ಪ್ರಭಾವದಿಂದ ಕೂಡಿರುವ ಅಚಿಂತ್ಯನಿಗೆ, ಪಾರ್ವತಿಯ ಪತಿಯಾದ ಅಂಬಿಕಾಭರ್ತೃವಿಗೆ, ಸರ್ವದೇವತೆಗಳಿಂದಲೂ ಸರ್ವದಾ ಸ್ತುತಿಸಲ್ಪಡುವ ಸರ್ವದೇವಸ್ತುತನಿಗೆ, ಬಸವನನ್ನೇ ಧ್ವಜದಲ್ಲಿ ಹೊಂದಿರುವ ವೃಷಧ್ವಜನಿಗೆ, ಯಾಗಾಂಗವಾದ ವ್ರತವನ್ನು ಹಿಡಿದು ದೀಕ್ಷಿತನಾಗಿ ಮುಂಡನಮಾಡಿಸಿ ಕೊಳ್ಳುವ ಮುಂಡನಿಗೆ, ಜಟೆಗಳ ಸಮೂಹವನ್ನು ಧಾರಣೆಮಾಡಿರುವ ಜಟಿಗೆ, ಊರ್ಧ್ವರೇತಸ್ಕನಾದ ಬ್ರಹ್ಮಚಾರಿಗೆ, ನೀರಿನಲ್ಲಿ ತಪಸ್ಸುಮಾಡುವ ತಪಸ್ವಿಗೆ, ಬ್ರಾಹ್ಮಣಪ್ರಿಯನಾದ ಬ್ರಹ್ಮಣ್ಯನಿಗೆ, ಯಾರಿಂದಲೂ ಜಯಿಸ

ಲ್ಪಡದೇ ಇರತಕ್ಕ ಅಜಿತನಿಗೆ, ಪ್ರಪಂಚವೇ ಆತ್ಮನಾಗಿ ಉಳ್ಳ ವಿಶ್ವಾತ್ಮನಿಗೆ, ವಿಶ್ವವನ್ನೇ ಸೃಷ್ಟಿಮಾಡುವ ವಿಶ್ವಸೃಜನಿಗೆ, ವಿಶ್ವವನ್ನೇ ಆವರಿಸಿಕೊಂಡಿರುವ ವಿಷ್ಣುರೂಪನಾದ ಶಿವನಿಗೆ, ಸರ್ವರಿಂದಲೂ ಸೇವಿಸಲ್ಪಡುವ ಸೇವ್ಯನಿಗೆ, ಸರ್ವಪ್ರಾಣಿಗಳ ಉತ್ಪತ್ತಿಗೂ ಕಾರಣನಾದ ಪ್ರಭುವಾದ ನಿನಗೆ ಸದಾಕಾಲ ದಲ್ಲಿಯೂ ನಮಸ್ಕಾರವಿರಲಿ. ಬ್ರಹ್ಮನೇ ಮುಖವಾಗಿ ಉಳ್ಳ ಬ್ರಹ್ಮವಕ್ತ್ರನಿಗೆ, ವಿಶ್ವದ ಸರ್ವಸ್ವವೂ ತಾನೇ ಆಗಿರುವ ಸರ್ವನಿಗೆ, ಮಂಗಳಕರನಾದ ಶಂಕರನಿಗೆ, ವಾಕ್ಕುಗಳಿಗೆಲ್ಲಾ ಅಧೀಶ್ವರನಾದ ವಾಚಸ್ಪತಿಗೆ, ಪ್ರಜೆಗಳಿಗೆಲ್ಲಾ ಪಾಲಕನೂ ಒಡೆಯನೂ ಆದ ನಿನಗೆ ನಮಸ್ಕಾರವಿರಲಿ. ಪ್ರಪಂಚಕ್ಕೆಲ್ಲಾ ಸ್ವಾಮಿಯಾದ ವಿಶ್ವಪತಿಗೆ, ಮಹಾಪುರುಷರನ್ನು ಪಾಲನೆಮಾಡುವ ಮತ್ತು ಮಹಾಪುರುಷರ ಒಡೆಯನಾದ ಮಹತ್ಪತಿಗೆ, ಸಾವಿರ (ಅಸಂಖ್ಯಾತ) ಶಿರಸ್ಸುಗಳನ್ನು ಹೊಂದಿರುವ ಸಹಸ್ರಶೀರ್ಷನಿಗೆ, ಸಾವಿರ (ಅಪಾರವಾದ) ಭುಜಗಳನ್ನು ಹೊಂದಿರುವ ಸಹಸ್ರಭುಜನಿಗೆ, ಮೃತ್ಯುಸ್ವರೂಪನಾಗಿರುವ ಮೃತ್ಯುವಿಗೆ, ಸಾವಿರ (ಅಸಂಖ್ಯಾತ) ಕಣ್ಣುಗಳನ್ನು ಹೊಂದಿರುವ ಸಹಸ್ರಾಕ್ಷ ನಿಗೆ, ಸಾವಿರ (ಅಪಾರವಾದ) ಕಾಲುಗಳನ್ನು ಹೊಂದಿರುವ ಸಹಸ್ರಪಾದನಿಗೆ, ಲೆಕ್ಕವಿಲ್ಲದಷ್ಟು ಕರ್ಮಗಳನ್ನು ಮಾಡುವ ಅಸಂಖ್ಯೇಯಕರ್ಮನಾದ ನಿನಗೆ ನಮಸ್ಕಾರವಿರಲಿ. ಸುವರ್ಣಕ್ಕೆ ಸಮಾನವಾದ ಬಣ್ಣದಿಂದ ಕೂಡಿರುವ ಹಿರಣ್ಯವರ್ಣನಿಗೆ, ಸುವರ್ಣಮಯವಾದ ಕವಚವನ್ನು ಧರಿಸಿರುವ ಹಿರಣ್ಯಕವಚನಿಗೆ, ಭಕ್ತಾನುಕಂಪಿಯಾದ, ಭಕ್ತವತ್ಸಲನಾದ ನಿನಗೆ ನಮಸ್ಕಾರವಿರಲಿ. ನಮ್ಮ ಮನೋಭೀಷ್ಟವಾದ ವರವು ಸಿದ್ಧಿಸಲಿ."

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ ! ಈ ರೀತಿಯಾಗಿ ಅರ್ಜುನಸಮೇತನಾದ ಶ್ರೀಕೃಷ್ಣನು ಮಹಾದೇವನನ್ನು ಸ್ತೋತ್ರಮಾಡಿ ಪಾಶುಪತಾಸ್ತ್ರದ ಪ್ರಾಪ್ತಿಗೋಸ್ಕರ ಪ್ರಸನ್ನಗೊಳಿಸಿದನು."

೮೦ನೆಯ ಅಧ್ಯಾಯವು ಮುಗಿಯಿತು.

ಅ೧ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ)

## ಅರ್ಜುನನಿಗೆ ಸ್ವಪ್ನದಲ್ಲಿ ಪುನಃ ಪಾಶುಪತಾಸ್ತ್ರದ ಪ್ರಾಪ್ತಿ

ಸಂಜಯನು ಸ್ವಪ್ನದ ಕಥೆಯನ್ನು ಮುಂದುವರಿಸಿ ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಅನಂತರ ಕುಂತಿಯ ಮಗನಾದ ಅರ್ಜುನನು ಪ್ರಸನ್ನಚಿತ್ತನಾಗಿ ಕೈಮುಗಿದುಕೊಂಡು ಸಮಸ್ತತೇಜಸ್ಸುಗಳಿಗೂ ನಿಧಿಪ್ರಾಯ ನಾಗಿದ್ದ ವೃಷಭಧ್ವಜನನ್ನು ಹರ್ಷದಿಂದ ಅರಳಿದ ಕಣ್ಣುಗಳಿಂದ ನೋಡಿದನು. ಅರ್ಜುನನು ಈ ಹಿಂದೆ ರಾತ್ರಿಯ ಪೂಜೆಗೆ ಸಂಬಂಧಿಸಿದಂತೆ ಯಾವ ಆತ್ಮಕಲ್ಪಿತವಾದ ಉಪಹಾರವನ್ನು ತಾನೇ ಶ್ರೀಕೃಷ್ಣನಿಗೆ ಸಮರ್ಪಿಸಿದ್ದನೋ-ಆ ಉಪಹಾರವು ತ್ರ್ಯಂಬಕನ ಸಮೀಪದಲ್ಲಿಯೇ ಇದ್ದುದನ್ನು ನೋಡಿದನು. ಅನಂತರ ಅರ್ಜುನನು ಶ್ರೀಕೃಷ್ಣನನ್ನೂ-ಶಂಕರನನ್ನೂ ಮನಸ್ಸಿನ ಮೂಲಕ ವಾಗಿಯೇ ಸಂಪೂಜಿಸಿ 'ಇಚ್ಛಾಮ್ಯಹಂ ದಿವ್ಯಮಸ್ತ್ರಂ' 'ನಾನು ದಿವ್ಯಾಸ್ತ್ರವನ್ನು ನಿನ್ನಿಂದ ಪಡೆದುಕೊಳ್ಳಲು ಇಚ್ಛಿಸಿದ್ದೇನೆ'–ಎಂಬುದಾಗಿ ಈಶ್ವರನೊಡನೆ ಹೇಳಿದನು. ಅರ್ಜುನನು ವರಪ್ರಾಪ್ತಿಗಾಗಿ ಹೇಳಿದ ಮಾತನ್ನು ಕೇಳಿ ಮಹಾದೇವನು ನಸುನಗುತ್ತಾ ಕೃಷ್ಣಾರ್ಜುನರಿಬ್ಬರನ್ನೂ ಕುರಿತು ಹೇಳಿದನು:

"ನರಶ್ರೇಷ್ಠರೇ! ನಿಮ್ಮಿಬ್ಬರಿಗೂ ಸುಸ್ವಾಗತವನ್ನು ಬಯಸುತ್ತೇನೆ. ನಿಮ್ಮ ಮನಸ್ಸಿನ ಆಶಯವು ನನಗೆ ತಿಳಿಯಿತು. ಯಾವುದನ್ನು ಪಡೆದುಕೊಳ್ಳಬೇಕೆಂಬ ಕಾಮನೆಯನ್ನು ಇಟ್ಟುಕೊಂಡು ನೀವು ಇಲ್ಲಿಗೆ ಆಗಮಿಸಿರುವಿರೋ ಅದನ್ನು ನಾನು ನಿಮಗೆ ಕೊಡುತ್ತೇನೆ. ಶತ್ರುಸೂದನರೇ! ಇಲ್ಲಿಯೇ ಸಮೀಪದಲ್ಲಿ ಅಮೃತಮಯವಾದ, ದಿವ್ಯವಾದ ಸರೋವರವಿದೆ. ಅಲ್ಲಿ ನನ್ನ ದಿವ್ಯವಾದ ಧನುಸ್ಸನ್ನೂ ಬಾಣಗಳನ್ನೂ ಇಟ್ಟಿದ್ದೇನೆ. ಆ ಧನುರ್ಬಾಣಗಳಿಂದಲೇ ನಾನು ದೇವತೆಗಳ ಶತ್ರುಗಳನ್ನು ಸಂಹಾರಮಾಡಿದ್ದೆನು. ನೀವಿಬ್ಬರೂ ಹೋಗಿ ಆ ಸರೋವರದಿಂದ ಶರಸಹಿತವಾದ ಧನುಸ್ಸನ್ನು ತನ್ನಿರಿ."

ಮಹಾರಾಜ! ಹಾಗೆಯೇ ಆಗಲೆಂದು ಹೇಳಿ ವೀರರಾದ, ನರ-ನಾರಾಯಣರ್ಷಿಗಳಾದ ಕೃಷ್ಣಾರ್ಜುನರಿಬ್ಬರೂ ಯಾವ ವಿಧವಾದ ಆತಂಕವೂ ಇಲ್ಲದೆ ಶಂಕರನ ಪಾರ್ಷದರೊಡನೆ ಕೂಡಿಕೊಂಡು ಭಗವಂತನಿಂದ ನಿರ್ದಿಷ್ಟವಾಗಿದ್ದ, ನೂರಾರು ದಿವ್ಯೈಶ್ವರ್ಯಗಳಿಂದ ಸಂಪನ್ನವಾಗಿದ್ದ, ಪವಿತ್ರವಾದ, ಸರ್ವಾರ್ಥಸಾಧಕವಾದ ಸರೋವರದ ಕಡೆಗೆ ತೆರಳಿದರು. ಸರೋವರದ ಸಮೀಪಕ್ಕೆ ಕೃಷ್ಣಾರ್ಜುನರು ಹೋಗಿ ಅಲ್ಲವರು ನೀರಿನ ಕೆಳಭಾಗದಲ್ಲಿ ಘೋರವಾದ ಸೂರ್ಯಮಂಡಲಸದೃಶವಾಗಿದ್ದ ಸರ್ಪವನ್ನು ನೋಡಿದರು. ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಸಾವಿರ ಹೆಡೆಗಳಿಂದ ಯುಕ್ತವಾಗಿದ್ದ, ಸಾವಿರ ಮುಖಗಳಿಂದಲೂ ಪ್ರಚಂಡ ವಾದ ಜ್ವಾಲೆಗಳನ್ನು ಹೊರಕ್ಕೆ ಉಗುಳುತ್ತಿದ್ದ ಮತ್ತೊಂದು ಸರ್ಪವನ್ನೂ ನರ-ನಾರಾಯಣರು ನೋಡಿದರು. ಅನಂತರ ಸರೋವರದಲ್ಲಿಯೇ ಆಚಮನಮಾಡಿ ಕೈಜೋಡಿಸಿ ಶಂಕರನಿಗೆ ಮನಸ್ಸಿನಿಂದಲೇ ಪ್ರಣಾಮಮಾಡಿ ಸರ್ಪಗಳ ಸಮೀಪಕ್ಕೆ ಹೋಗಿ ನಿಂತುಕೊಂಡರು. ವೇದವಿದ್ವಾಂಸರಾಗಿದ್ದ ಕೃಷ್ಣಾರ್ಜುನರು ಶತರುದ್ರೀಯಮಂತ್ರಗಳನ್ನು ಪಠಿಸುತ್ತಾ ಸಾಕ್ಷಾತ್ ಬ್ರಹ್ಮ ರೂಪನಾದ, ಅಪ್ರಮೇಯನಾದ ಶಂಕರನನ್ನು ಸರ್ವಾತ್ಮನಾ ಮರೆಹೊಕ್ಕು ಪ್ರಣಮಿಸಿದರು. ರುದ್ರನ ಮಹಿಮೆಯಿಂದ ಆ ಎರಡು ಸರ್ಪಗಳೂ ತಮ್ಮ ರೂಪವನ್ನು ಬಿಟ್ಟು ಶತ್ರುಸಂಹಾರಕವಾದ ಧನುರ್ಬಾಣದ್ವಂದ್ವವಾಗಿ ಪರಿಣಾಮಹೊಂದಿದುವು. ಮಹಾತ್ಮರಾದ ಕೃಷ್ಣಾರ್ಜುನರು ಪ್ರಸನ್ನಾತ್ಮರಾಗಿ ಅತುಲವಾದ ಪ್ರಭೆಯಿಂದ ಕೂಡಿದ್ದ ಧನುರ್ಬಾಣಗಳನ್ನು ತೆಗೆದುಕೊಂಡು ಶಿವನ ಸಮೀಪಕ್ಕೆ ಬಂದು ಧನುರ್ಬಾಣಗಳನ್ನು ಮಹಾತ್ಮನಾದ ಶಿವನಿಗೆ ಒಪ್ಪಿಸಿದರು. ಆ ಸಮಯದಲ್ಲಿ ವೃಷಾಂಕನ ಪಾರ್ಶ್ವಭಾಗದಿಂದ ಬ್ರಹ್ಮಚಾರಿ ಯೊಬ್ಬನು ಹೊರಬಂದನು. ಅವನು ಹಳದೀಬಣ್ಣದ ಕಣ್ಣುಗಳುಳ್ಳವ ನಾಗಿಯೂ, ತಪಸ್ಸಿಗೆ ಕ್ಷೇತ್ರಪ್ರಾಯನಾಗಿಯೂ, ಬಲಿಷ್ಠನಾಗಿಯೂ, ನೀಲಿ ಮತ್ತು ಕೆಂಪುಬಣ್ಣದವನಾಗಿಯೂ ಇದ್ದನು. ಆ ಬ್ರಹ್ಮಚಾರಿಯು ಶ್ರೇಷ್ಠವಾದ ಆ ಧನುಸ್ಸನ್ನು ಕೈಗೆ ತೆಗೆದುಕೊಂಡು, ಯಾವ ರೀತಿಯಲ್ಲಿ ನಿಲ್ಲಬೇಕೋ ಹಾಗೆ ಏಕಾಗ್ರಚಿತ್ತನಾಗಿ ನಿಂತು, ಶ್ರೇಷ್ಠವಾದ ಧನುಸ್ಸಿನ ಶಿಂಜಿನಿಯನ್ನು ವಿಧಿ ವತ್ತಾಗಿ ಬಾಣದೊಡನೆ ಸೆಳೆದನು. ಆ ಸಮಯದಲ್ಲಿ ಅಚಿಂತ್ಯವಿಕ್ರಮನಾದ

ಪಾಂಡವನು–ಬ್ರಹ್ಮಚಾರಿಯು ಆ ಮಹಾಧನುಸ್ಸಿನ ಮೌರ್ವಿಯನ್ನು ಸೆಳೆದ ರೀತಿಯನ್ನೂ, ಮುಷ್ಟಿಯಿಂದ ಧನುಸ್ಸನ್ನು ಹಿಡಿದಿರುವ ವೈಶಿಷ್ಟ್ಯವನ್ನೂ ಮತ್ತು ವಿಶೇಷಭಂಗಿಯಲ್ಲಿ ನಿಂತಿರುವ ಅವನ ನಿಲುವನ್ನೂ ನೋಡಿ, ಭವನು ಹೇಳಿದ ಮಹಾಮಂತ್ರವನ್ನೂ ಕೇಳಿ–ಅವುಗಳೆಲ್ಲವನ್ನೂ ಮನಸ್ಸಿನಿಂದಲೇ ಗ್ರಹಣಮಾಡಿದನು. ಅನಂತರ ಅತಿಬಲನಾದ, ಪ್ರಭುವಾದ ಪರಶಿವನು ಆ ಬಾಣವನ್ನು ಸರೋವರದಲ್ಲಿಯೇ ಹಾಕಿದನು. ವಿಶೇಷವಾದ ಸ್ಮರಣಶಕ್ತಿಯನ್ನು ಹೊಂದಿದ್ದ ಅರ್ಜುನನು ಭವನು ಪ್ರೀತನಾಗಿರುವನೆಂಬುದನ್ನು ತಿಳಿದು, ವನವಾಸಕಾಲದಲ್ಲಿ ಕಿರಾತರೂಪಧರನಾಗಿದ್ದ ಪರಶಿವನು ತನಗೆ



ಕೊಟ್ಟಿದ್ದ ವರವನ್ನೂ ಮತ್ತು ಆಗಿನ ಅವನ ದಿವ್ಯಸ್ವರೂಪವನ್ನೂ ಮನಸ್ಸಿನಲ್ಲಿಯೇ ಚಿಂತಿಸಿದನು ಮತ್ತು ಪಾಶುಪತಾಸ್ತ್ರವನ್ನು ಪಡೆದುಕೊಳ್ಳ

ಬೇಕೆನ್ನುವ ತನ್ನ ಆಶೆಯೂ ಪೂರ್ಣವಾಗಲೆಂದು ಅಪೇಕ್ಷಿಸಿದನು. ಅರ್ಜುನನ ಮನೋವಾಂಛಿತವನ್ನು ತಿಳಿದ ಭವನು ಸುಪ್ರೀತನಾಗಿ ಅರ್ಜುನನಿಗೆ ವರವನ್ನೂ ಕೊಟ್ಟನು ಮತ್ತು ಪ್ರತಿಜ್ಞಾಪೂರಣಕ್ಕೆ ಸಾಧಕವಾದ ಘೋರವಾದ ಪಾಶುಪತಾಸ್ತ್ರವನ್ನೂ ಕೊಟ್ಟನು. ದುರ್ಧರ್ಷನಾದ ಅರ್ಜುನನು ಭಗವಾನ್ ಶಂಕರನಿಂದ ಪಾಶುಪತಾಸ್ತ್ರವನ್ನು ಪಡೆದುಕೊಂಡು ರೋಮಾಂಚಿತನಾಗಿ ತನ್ನ ಕಾರ್ಯವು ಪೂರ್ಣವಾಯಿತೆಂದು ಭಾವಿಸಿದನು. ಸಂಹೃಷ್ಟರಾದ ಕೃಷ್ಣಾರ್ಜುನರು ಮಹೇಶ್ವರನಿಗೆ ತಲೆಬಾಗಿ ನಮಸ್ಕರಿಸಿದರು. ಆ ಸಮಯದಲ್ಲಿ ಭವನಿಂದ ಅನುಜ್ಞಾತರಾದ ವೀರರಾದ ಅರ್ಜುನ-ಕೇಶವರು ಅತ್ಯಧಿಕವಾದ ಸಂತೋಷದಿಂದ ತಮ್ಮ ಶಿಬಿರದ ಕಡೆಗೆ ಹೊರಟರು.

ಪೂರ್ವಕಾಲದಲ್ಲಿ ಜಂಭಾಸುರನನ್ನು ವಧಿಸುವ ಇಚ್ಛೆಯಿಂದ ಇಂದ್ರ-ವಿಷ್ಣುಗಳು ಮಹಾಸುರರ ವಿನಾಶಕನಾದ ಶಂಕರನ ಅನುಮತಿಯನ್ನು ಪಡೆದು ಪ್ರಸನ್ನಾತ್ಮರಾಗಿ ಹೋದಂತೆ–ಕೃಷ್ಣಾರ್ಜುನರೂ ಈಶ್ವರನ ಅನುಮತಿಯನ್ನು ಪಡೆದು ಆನಂದತುಂದಿಲರಾಗಿ ಶಿಬಿರಕ್ಕೆ ಬಂದರು. ”

೮೧ನೆಯ ಅಧ್ಯಾಯವು ಮುಗಿಯಿತು.

೮೨ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಹದಿನಾಲ್ಕನೆಯ ದಿವಸ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಬ್ರಾಹ್ಮಣರಿಗೆ ದಾನಕೊಟ್ಟುದು: ವಸ್ತ್ರಾಭರಣಭೂಷಿತನಾಗಿ ಸಿಂಹಾಸನಾರೋಹಣಮಾಡಿದುದು: ಅಲ್ಲಿಯೇ ಇದ್ದ ಶ್ರೀಕೃಷ್ಣನನ್ನು ಸಂಪೂಜಿಸಿದುದು

ಸಂಜಯನು ಅರ್ಜುನನ ಕನಸಿನ ವೃತ್ತಾಂತವನ್ನು ಮುಗಿಸಿ ಬೆಳಗಾದನಂತರ ನಡೆದ ವಿದ್ಯಮಾನವನ್ನು ಹೇಳುತ್ತಾನೆ:

“ಮಹಾರಾಜ! ಇತ್ತಲಾಗಿ ಕೃಷ್ಣ-ದಾರುಕರಿಬ್ಬರೂ ನಾನು ಹಿಂದೆ ಹೇಳಿದರೀತಿಯಲ್ಲಿ ಸಂಭಾಷಣೆಯನ್ನು ಮಾಡುತ್ತಿರುವಾಗಲೇ ರಾತ್ರಿಯು ಕಳೆದುಹೋಯಿತು. ತನ್ನ ಶಿಬಿರದಲ್ಲಿ ಮಲಗಿದ್ದ ಯುಧಿಷ್ಠಿರರಾಜನೂ ಎಚ್ಚೆತ್ತನು. ತಾಳವನ್ನು ತಟ್ಟುವ ರೀತಿಯಲ್ಲಿ ಕೈಗಳನ್ನೇ ತಟ್ಟಿಕೊಂಡು

(ಭಜನೆಮಾಡುವಾಗ ತಟ್ಟುವಂತೆ) ಪಾಣಿಸ್ವನಿಕರು ಸುಮಧುರವಾದ ಗೀತಗಳನ್ನು ಪಠನಮಾಡುತ್ತಿದ್ದರು. ಮಧುಪರ್ಕಿಕರು ಮಂಗಳದ್ರವ್ಯಗಳನ್ನು ರಾಜನ ಮುಂದೆ ಹಿಡಿಯುತ್ತಿದ್ದರು. ಮಾಗಧರೂ ವೈತಾಲಿಕರೂ ಮತ್ತು ಸೂತರೂ ಪುರುಷರ್ಷಭನಾದ ಯುಧಿಷ್ಠಿರನನ್ನು ಸ್ತುತಿಸುತ್ತಿದ್ದರು. ನರ್ತಕರು ನೃತ್ಯವಾಡುತ್ತಿದ್ದರು. ಮಧುರಕಂಠವುಳ್ಳ ಗಾಯಕರು ಕುರುವಂಶೀಯರ ಸ್ತುತಿ ಗಳಿಂದ ಯುಕ್ತವಾದ ಮಧುರಗೀತಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಸುಶಿಕ್ಷಿತರಾದ ಮತ್ತು ಅತ್ಯಂತಕುಶಲರಾದ ವಾದ್ಯಗಾರರು ಅತ್ಯಂತಹರ್ಷ



ಯುಕ್ತರಾಗಿ ಮೃದಂಗಗಳನ್ನೂ, ತಮಟೆಗಳನ್ನೂ, ಭೇರಿಗಳನ್ನೂ, ಮದ್ದಲೆ ಗಳನ್ನೂ, ನಗಾರಿಗಳನ್ನೂ, ಗೋಮುಖಗಳನ್ನೂ, ತುತ್ತೂರಿಗಳನ್ನೂ, ಶಂಖ ಗಳನ್ನೂ, ಮಹಾಶಬ್ದದಿಂದ ಕೂಡಿದ ದುಂದುಭಿಗಳನ್ನೂ, ಇವುಗಳೇ ಅಲ್ಲದೇ ಇನ್ನೂ ಅನೇಕ ಘೋಷವಾದ್ಯಗಳನ್ನೂ ಬಾರಿಸುತ್ತಿದ್ದರು. ಮೇಘಗಳ ಶಬ್ದಕ್ಕೆ ಸಮಾನವಾದ ವಾದ್ಯಘೋಷಗಳ ಮಹಾನ್ ಶಬ್ದವು ಆಕಾಶವನ್ನೂ

ಮುಟ್ಟಿತು. ಈ ರೀತಿಯಲ್ಲಿ ಮಂಗಳವಾದ್ಯಗಳು ಮೊಳಗುತ್ತಿರಲಾಗಿ ಪಾರ್ಥಿವಪ್ರವರನಾದ ಯುಧಿಷ್ಠಿರನು ಜಾಗ್ರತನಾದನು. ಬಹುಮೂಲ್ಯವಾದ, ಶ್ರೇಷ್ಠವಾದ ಹಾಸಿಗೆಯಲ್ಲಿ ಸುಖಸುಪ್ತನಾಗಿದ್ದ ಯುಧಿಷ್ಠಿರನು ಎಚ್ಚರಗೊಂಡು ಮೇಲೆದ್ದು ಅವಶ್ಯಕವಾದ ಪ್ರಾತರ್ವಿಧಿಗಳನ್ನು ಮುಗಿಸುವ ಸಲುವಾಗಿ, ಸ್ನಾನಗೃಹಕ್ಕೆ ಹೋದನು. ಅಲ್ಲಿ ಅವನಿಗೆ ಸ್ನಾನಮಾಡಿಸುವ ಸಲುವಾಗಿ ಸ್ನಾನಮಾಡಿ ಬಿಳುಪಾದ ವಸ್ತ್ರಗಳನ್ನುಟ್ಟಿದ್ದ ತರುಣರಾದ ನೂರೆಂಟು ಮಂದಿ ಸ್ನಾಪಕರು (ಸ್ನಾನಮಾಡಿಸುವವರು) ಜಲಪೂರ್ಣವಾದ ಸುವರ್ಣಕುಂಭ ಗಳನ್ನು ಹಿಡಿದು ಸಿದ್ಧರಾಗಿ ನಿಂತಿದ್ದರು. ಆ ಸಮಯದಲ್ಲಿ ರಾಜನು ಲಘುವಾದ ಸ್ನಾನವಸ್ತ್ರವನ್ನುಟ್ಟು ಭದ್ರಾಸನದಲ್ಲಿ ಕುಳಿತು ಚಂದನಯುಕ್ತವಾದ ಮಂತ್ರಾಭಿಪೂತವಾದ ನೀರಿನಿಂದ ಸ್ನಾನಮಾಡಿದನು. ಅದಕ್ಕೂ ಮೊದಲು ಬಲಿಷ್ಠರಾದ ಮತ್ತು ಸುಶಿಕ್ಷಿತರಾದ ಜಟ್ಟಿಗಳು (ಮೈಯ್ಯನ್ನು ಉಜ್ಜಿ ಶುದ್ಧಿಮಾಡುವವರು) ಸುಗಂಧಯುಕ್ತವಾದ ಕಷಾಯದಿಂದ ರಾಜನ ಮೈಯ್ಯನ್ನು ಚೆನ್ನಾಗಿ ಉಜ್ಜಿದರು. ಅನಂತರ ರಾಜನು ಸುಗಂಧವಾಸನೆಯಿಂದ ಯುಕ್ತವಾದ ನೀರಿನಿಂದ ಸ್ನಾನಮಾಡಿದನು. ಬಳಿಕ ರಾಜನು ತಲೆಯಲ್ಲಿರುವ ನೀರುಹೋಗುವುದಕ್ಕಾಗಿ ರಾಜಹಂಸದಂತೆ ಬಿಳುಪಾಗಿದ್ದ ಮತ್ತು ಸಡಿಲವಾಗಿದ್ದ ರುಮಾಲನ್ನು ತಲೆಯಲ್ಲಿ ಧರಿಸಿದನು. ಅನಂತರ ಮಹಾಭುಜನಾದ ಯುಧಿಷ್ಠಿರನು ಹರಿಚಂದನವನ್ನು ಅಂಗಾಂಗಗಳಿಗೆಲ್ಲಾ ಪೂಸಿಕೊಂಡು, ಹಾರವನ್ನು ಧರಿಸಿ, ಶರೀರಕ್ಕೆ ಆಯಾಸವಾಗದಿರುವ ವಸ್ತ್ರಗಳನ್ನುಟ್ಟು, ಪೂರ್ವದಿಕ್ಕಿಗೆ ಅಭಿಮುಖವಾಗಿ ಬದ್ಧಾಂಜಲಿಯಾಗಿ ಕುಳಿತನು. ಸತ್ಪುರುಷರ ಮಾರ್ಗಾನುವರ್ತಿಯಾದ ಯುಧಿಷ್ಠಿರನು ಜಪಮಾಡಲು ಯೋಗ್ಯವಾದ ಗಾಯತ್ರೀಮಂತ್ರವನ್ನು ಜಪಿಸಿದನು. ಅನಂತರ ಪ್ರಕಾಶಮಾನವಾಗಿದ್ದ ಅಗ್ನಿಗೃಹವನ್ನು ವಿನಯಭಾವದಿಂದ ಪ್ರವೇಶಿಸಿದನು. ಅಲ್ಲವನು * ಪವಿತ್ರಗಳಿಂದ ಕೂಡಿದ, ಮಂತ್ರಪೂತವಾದ ಆಜ್ಯಾಹುತಿಗಳಿಂದಲೂ–ಸಮಿತ್ತುಗಳಿಂದಲೂ ಅಗ್ನಿದೇವನನ್ನು ಸಂಪೂಜಿಸಿ ಅಗ್ನಿಗೃಹದಿಂದ ಹೊರಟನು.

---

*ಪವಿತ್ರಗಳು : ಹೋಮದಲ್ಲಿ ಆಜ್ಯವನ್ನು ಶುದ್ಧಿಮಾಡುವ ಎರಡು ದರ್ಭೆಗಳು.

ಅನಂತರ ಪಾರ್ಥಿವನು ಎರಡನೆಯ ಪಡಸಾಲೆಗೆ ಬಂದು ಅಲ್ಲಿ ವೇದವಿದರಾದ, ವೃದ್ಧರಾದ ಬ್ರಾಹ್ಮಣಶ್ರೇಷ್ಠರನ್ನು ಸಂದರ್ಶಿಸಿದನು. ಜಿತೇಂದ್ರಿಯರನ್ನೂ, ವೇದಾಧ್ಯಯನವನ್ನೂ ಮತ್ತು ವ್ರತಚತುಷ್ಟಯಗಳನ್ನೂ ಮುಗಿಸಿ ಸ್ನಾತಕರಾಗಿರುವವರನ್ನೂ, ಯಜ್ಞದ ಅವಭೃತದಲ್ಲಿ ಸ್ನಾನಮಾಡಿ ಬಂದಿದ್ದ ಪವಿತ್ರಾತ್ಮರನ್ನೂ, ಸಾವಿರದ ಎಂಟುಮಂದಿ ಸೂರ್ಯೋಪಾಸಕರನ್ನೂ ಮತ್ತು ಅವರನ್ನು ಹಿಂಬಾಲಿಸಿ ಬಂದಿದ್ದ ಸಾವಿರಾರು ಶಿಷ್ಯರನ್ನೂ ಯುಧಿಷ್ಠಿರನು ಸಂದರ್ಶಿಸಿದನು. ಮಹಾಭುಜನಾದ ಧರ್ಮಜನು ಅವರಿಗೆ ಪುಷ್ಪ-ಮಂತ್ರಾಕ್ಷತೆಗಳನ್ನಿತ್ತು ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿದನು. ತುಪ್ಪ, ಜೇನುತುಪ್ಪ ಮತ್ತು ಮಂಗಳದಾಯಕವಾದ ಫಲಗಳಿಂದ ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ, ಒಬ್ಬೊಬ್ಬ ಬ್ರಾಹ್ಮಣನಿಗೂ ಒಂದೊಂದು ಚಿನ್ನದ ಮುದ್ರೆಯನ್ನು ದಕ್ಷಿಣೆಯಾಗಿ ಕೊಟ್ಟನು. ಅಷ್ಟೇ ಅಲ್ಲದೇ ಸುವರ್ಣ ಮಾಲೆಗಳಿಂದ ಸಮಲಂಕೃತವಾದ ನೂರು ಕುದುರೆಗಳನ್ನೂ, ಉತ್ತಮ ವಸ್ತ್ರಗಳನ್ನೂ, ಯಥೇಷ್ಟವಾದ ದಕ್ಷಿಣೆಗಳನ್ನೂ, ಕರುಗಳಿಂದ ಕೂಡಿದ್ದ ಹಾಲು ಕರೆಯುವ ಸುವರ್ಣಮಯವಾದ ಕೊಂಬುಗಳಿಂದಲೂ - ರಜತಮಯ ವಾದ ಗೊರಸುಗಳಿಂದಲೂ ಅಲಂಕೃತವಾಗಿದ್ದ ಕಪಿಲವರ್ಣದ ಹಸುಗಳನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಗೋಬ್ರಾಹ್ಮಣರಿಗೆ ಪ್ರದಕ್ಷಿಣೆಮಾಡಿದನು. ಸುವರ್ಣಮಯವಾದ *ಸ್ವಸ್ತಿಕಗಳನ್ನೂ, ಶರಾವೆಗಳನ್ನೂ, ಮುಚ್ಚಳವಿರುವ ಅರ್ಘ್ಯಪಾತ್ರೆಗಳನ್ನೂ, ಪುಷ್ಪಮಾಲೆಗಳನ್ನೂ, ಜಲಪೂರ್ಣವಾದ ಕಲಶ ಗಳನ್ನೂ, ಪ್ರಜ್ವಲಿಸುತ್ತಿರುವ ಅಗ್ನಿಕುಂಡಗಳನ್ನೂ, ಅಕ್ಷತೆಗಳಿಂದ ತುಂಬಿದ ಪೂರ್ಣಪಾತ್ರೆಗಳನ್ನೂ, ಮಾದಳದ ಹಣ್ಣುಗಳನ್ನೂ, ಗೋರೋಜನವನ್ನೂ, ಸುವರ್ಣಾಭರಣಗಳಿಂದ ಸಮಲಂಕೃತರಾದ ಕನ್ಯೆಯರನ್ನೂ, ಮೊಸರು-ತುಪ್ಪ-ಜೇನುತುಪ್ಪ ಮತ್ತು ಉದಕಗಳನ್ನೂ, ಮಂಗಳವನ್ನುಂಟುಮಾಡುವ ಗರುಡನೇ ಮುಂತಾದ ಪಕ್ಷಿಗಳನ್ನೂ, ಪ್ರಶಸ್ತವಾದ ಇನ್ನೂ ಅನೇಕಪದಾರ್ಥ ಗಳನ್ನೂ ನೋಡಿಯೂ ಮತ್ತು ಕೆಲವನ್ನು ಮುಟ್ಟಿಯೂ ಹೊರಗಿನ ಹಜಾರಕ್ಕೆ ಬಂದನು. ಆ ಕೊಠಡಿಯಲ್ಲಿ ಕುಳಿತುಕೊಳ್ಳಲಿದ್ದ ಯುಧಿಷ್ಠಿರನಿಗೆ ಪರಿಚಾರಕರು, ಸುವರ್ಣಮಯವಾದ ಸರ್ವತೋಭದ್ರವೆಂಬ ಆಸನವನ್ನು ತಂದರು, ಶ್ರೇಷ್ಠವಾದ ಆ ಭದ್ರಾಸನವು ಮುತ್ತು-ವೈಡೂರ್ಯಗಳಿಂದ

---

* ಸ್ವಸ್ತಿಕಃ ಮಂಗಳಸೂಚಕವಾದ ಒಂದು ಬಗೆಯ ತಾಂತ್ರಿಕ ಚಿಹ್ನೆ.

ಸಮಲಂಕೃತವಾಗಿದ್ದಿತು. ಅದರ ಮೇಲೆ ಬಹುಮೂಲ್ಯವಾದ ರತ್ನಗಂಬಳಿ ಯನ್ನು ಹಾಸಿದ್ದರು. ಅದರ ಹಿಂಬದಿಯಲ್ಲಿ ಒರಗಿಕೊಳ್ಳಲು ಸುಂದರವಾದ ಒರಗುದಿಂಬುಗಳನ್ನಿಟ್ಟಿದ್ದರು. ದಿವ್ಯವಾದ ಆ ಸರ್ವತೋಭದ್ರಾಸನವು ವಿಶ್ವಕರ್ಮನಿಂದಲೇ ನಿರ್ಮಿಸಲ್ಪಟ್ಟಿದ್ದಿತು.

ಅದರ ಮೇಲೆ ಉಪವಿಷ್ಟನಾದ ಮಹಾತ್ಮನಾದ ಯುಧಿಷ್ಠಿರನಿಗೆ ಸೇವಕರು ಉಜ್ಜ್ವಲವಾದ, ಬಹುಮೂಲ್ಯವಾದ ಮತ್ತು ಶುಭ್ರವಾದ ಆಭರಣಗಳನ್ನು ಅರ್ಪಿಸಿದರು. ಮುತ್ತಿನಿಂದ ಮಾಡಿದ ಆಭರಣಗಳಿಂದ ಸಮಲಂಕೃತನಾಗಿದ್ದ ಮಹಾತ್ಮನಾದ ಕೌಂತೇಯನ ರೂಪವು ಶತ್ರುಗಳಿಗೆ ಶೋಕವನ್ನು ಹೆಚ್ಚಿಸುವುದಾಗಿದ್ದಿತು. ಸೇವಕರು ಸುವರ್ಣಮಯವಾದ ಹಿಡಿಗಳನ್ನು ಹೊಂದಿದ್ದ, ಚಂದ್ರನ ರಶ್ಮಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಚಾಮರಗಳಿಂದ ರಾಜನ ಎರಡು ಪಾರ್ಶ್ವದಲ್ಲಿಯೂ ನಿಂತು ಗಾಳಿಯನ್ನು ಬೀಸುತ್ತಿದ್ದರು. ಮಿಂಚಿನಿಂದ ಕೂಡಿದ ಮೇಘವು ಶೋಭಿಸುವಂತೆ–ಚಾಮರಗಳಿಂದ ರಾಜನು ಶೋಭಿಸುತ್ತಿದ್ದನು. ಆ ಸಮಯದಲ್ಲಿ ಯುಧಿಷ್ಠಿರನನ್ನು ಸೂತರು ಸ್ತುತಿಸುತ್ತಿದ್ದರು. ವಂದಿ-ಮಾಗಧರು ಅಭಿನಂದಿಸುತ್ತಿದ್ದರು. ಗಂಧರ್ವರು ಯಶಸ್ಸನ್ನು ಹಾಡಿ ಹೊಗಳುತ್ತಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ರಥಗಳ ಮಹಾಶಬ್ದವಾಯಿತು. ರಥಚಕ್ರಗಳ ಗಡ-ಗಡಾ ಶಬ್ದವೂ ಕುದುರೆಗಳ ಗೊರಸುಗಳ ಟಪ-ಟಪಾ ಶಬ್ದವೂ ಕೇಳಿಸಿತು. ಆನೆಗಳ ಕತ್ತಿನಲ್ಲಿರುವ ಘಂಟೆಗಳ ಶಬ್ದದಿಂದಲೂ, ಶಂಖಗಳ ನಿನಾದದಿಂದಲೂ, ಪದಾತಿಸೈನಿಕರ ಪದಾಘಾತದಿಂದ ಉಂಟಾದ ಶಬ್ದಗಳಿಂದಲೂ ಭೂಮಿಯೇ ನಡುಗುತ್ತಿರುವಂತೆ ಭಾಸವಾಯಿತು. ಬಳಿಕ ಕರ್ಣಕುಂಡಲಗಳನ್ನು ಧರಿಸಿದ್ದ, ಕತ್ತಿಯನ್ನು ಸೊಂಟಕ್ಕೆ ಬಿಗಿದಿದ್ದ, ಕವಚವನ್ನು ತೊಟ್ಟಿದ್ದ ತರುಣನಾದ ದ್ವಾರಪಾಲಕನು ಧರ್ಮರಾಜನಿದ್ದ ಕೊಠಡಿಯೊಳಕ್ಕೆ ಬಂದು ವಂದನೀಯ ನಾದ, ಜನೇಶ್ವರನಾದ, ಮಹಾತ್ಮನಾದ ಯುಧಿಷ್ಠಿರನಿಗೆ ಮಂಡಿಯೂರಿ ತಲೆಬಾಗಿ ನಮಸ್ಕರಿಸಿ, ಹೃಷೀಕೇಶನು ಬಂದಿರುವ ವಾರ್ತೆಯನ್ನು ನಮ್ರತೆ ಯಿಂದ ನಿವೇದಿಸಿದನು. ಒಡನೆಯೇ ಪುರುಷವ್ಯಾಘ್ರನಾದ ಯುಧಿಷ್ಠಿರನು ಶ್ರೀಕೃಷ್ಣನನ್ನು ಸುಸ್ವಾಗತದೊಡನೆ ಕರೆತರಬೇಕೆಂದೂ, ಅರ್ಘ್ಯವನ್ನೂ ಮತ್ತು ಉತ್ತಮವಾದ ದಿವ್ಯಾಸನವನ್ನೂ ಸಿದ್ಧಗೊಳಿಸಬೇಕೆಂದೂ ದ್ವಾರಪಾಲಕನಿಗೆ

ಆಜ್ಞಾಪಿಸಿದನು. ಯುಧಿಷ್ಠಿರನ ನಿರ್ದೇಶದಂತೆ ದ್ವಾರಪಾಲಕನು ಶ್ರೀಕೃಷ್ಣನನ್ನು ಒಳಕ್ಕೆ ಕರೆತಂದು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿದನು. ಅನಂತರ



ಧರ್ಮರಾಜನು ಶ್ರೀಕೃಷ್ಣನನ್ನು ವಿಧಿವತ್ತಾಗಿ ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿದನು."

ಎಂಭತ್ತೆರಡನೆಯ ಅಧ್ಯಾಯವು ಮುಗಿಯಿತು.

ಎಂಭತ್ಮೂರನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಅರ್ಜುನನ ಪ್ರತಿಜ್ಞೆಯನ್ನು ಸಫಲಗೊಳಿಸಬೇಕೆಂದು ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಾರ್ಥಿಸಿದುದು: ಶ್ರೀಕೃಷ್ಣನ ಆಶ್ವಾಸನೆ

ಸಂಜಯನು ಶ್ರೀಕೃಷ್ಣ-ಯುಧಿಷ್ಠಿರರ ಸಮಾಗಮಾನಂತರದ ವಿಷಯವನ್ನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಅನಂತರ ಕುಂತೀಪುತ್ರನಾದ ಯುಧಿಷ್ಠಿರನು ಪರಮ ಪ್ರೀತನಾಗಿ ಜನಾರ್ದನನನ್ನು ಅಭಿನಂದಿಸಿ ಈ ಮಾತುಗಳನ್ನು ಹೇಳಿದನು:

"ಮಧುಸೂದನ! ರಾತ್ರಿಯು ಸುಖವಾಗಿ ಕಳೆಯಿತೇ? ನಿನ್ನ ಎಲ್ಲ ಜ್ಞಾನೇಂದ್ರಿಯಗಳೂ ಪ್ರಸನ್ನವಾಗಿವೆಯೇ?"

ಯುಧಿಷ್ಠಿರನು ಕೇಳಿದ ಪ್ರಶ್ನೆಗೆ ಯಥೋಚಿತವಾಗಿ–'ರಾತ್ರಿಯು ಸುಖವಾಗಿ ಕಳೆಯಿತು. ಮನಸ್ಸು ಪ್ರಸನ್ನವಾಗಿದೆ'–ಎಂದು ಶ್ರೀಕೃಷ್ಣನು ಉತ್ತರಿಸಿ ಯುಧಿಷ್ಠಿರನನ್ನೂ ಕುಶಲಪ್ರಶ್ನೆಮಾಡಿದನು. ಆ ವೇಳೆಗೆ ಸರಿಯಾಗಿ ಪ್ರಹರಿಯು ಯುಧಿಷ್ಠಿರನ ಬಳಿಗೆ ಬಂದು ಮಂತ್ರಿ-ಸೇನಾಪತಿಗಳೇ ಮೊದಲಾದವರು ನೋಡಲು ಬಂದಿರುವರೆಂಬ ವಾರ್ತೆಯನ್ನು ಯುಧಿಷ್ಠಿರನಿಗೆ ನಿವೇದಿಸಿದನು. ರಾಜನು ಅನುಜ್ಞೆಯನ್ನು ನೀಡಿದನಂತರ ಸಂದರ್ಶನಕ್ಕೆ ಕಾದಿದ್ದ ವಿರಾಟ, ಭೀಮಸೇನ, ಧೃಷ್ಟದ್ಯುಮ್ನ, ಸಾತ್ಯಕಿ, ಚೇದಿರಾಜನಾದ ಧೃಷ್ಟಕೇತು, ಮಹಾರಥನಾದ ದ್ರುಪದ, ಶಿಖಂಡೀ, ನಕುಲ-ಸಹದೇವರು, ಚೇಕಿತಾನ, ಕೇಕಯರಾಜಕುಮಾರರು, ಕುರುವಂಶೀಯನಾದ ಯುಯುತ್ಸು, ಪಾಂಚಾಲವೀರನಾದ ಉತ್ತಮೌಜಸ, ಯುಧಾಮನ್ಯು, ಸುಬಾಹು, ದ್ರೌಪದಿಯ ಐವರು ಮಕ್ಕಳು–ಇವರೆಲ್ಲರನ್ನೂ ಪ್ರಹರಿಯು ಒಳಕ್ಕೆ ಕಳುಹಿಸಿದನು. ಅವರೇ ಅಲ್ಲದೇ ಇನ್ನೂ ಅನೇಕ ಕ್ಷತ್ರಿಯವೀರರು ಕ್ಷತ್ರಿಯರ್ಷಭನಾದ, ಮಹಾತ್ಮನಾದ ಯುಧಿಷ್ಠಿರನನ್ನು ಸಮೀಪಿಸಿ ಕುಶಲಪ್ರಶ್ನೆಗಳನ್ನು ಮಾಡಿ ಸುಖಾಸನಗಳಲ್ಲಿ ಕುಳಿತರು. ಮಹಾಬಲಿಷ್ಠರಾದ, ಮಹಾತೇಜಸ್ವಿಗಳಾದ, ವೀರರಾದ, ಮಹಾತ್ಮರಾದ ಶ್ರೀಕೃಷ್ಣ-ಸಾತ್ಯಕಿಯರು ಒಂದೇ ಆಸನದಲ್ಲಿ ಕುಳಿತಿದ್ದರು. ಅನಂತರ ಯುಧಿಷ್ಠಿರನು ಅಲ್ಲಿ ಕುಳಿತಿದ್ದ ರಾಜರೆಲ್ಲರೂ ಕೇಳಿಸಿಕೊಳ್ಳುತ್ತಿರುವಂತೆ ಕಮಲನಯನನಾದ ಮಧುಸೂದನನನ್ನು ಸಂಬೋಧಿಸಿ ಮಧುರವಾದ ಈ ಮಾತುಗಳನ್ನು ಹೇಳಿದನು :

**ಏಕಂ ತ್ವಾಂ ವಯಮಾಶ್ರಿತ್ಯ ಸಹಸ್ರಾಕ್ಷಮಿವಾಮರಾಃ।**
**ಪ್ರಾರ್ಥಯಾಮೋ ಜಯಂ ಯುದ್ಧೇ ಶಾಶ್ವತಾನಿ ಸುಖಾನಿ ಚ ॥೧೦॥**

"ಪ್ರಭುವೇ! ಯಾವ ರೀತಿಯಲ್ಲಿ ದೇವತೆಗಳು ಇಂದ್ರನ ಆಶ್ರಯವನ್ನು ಪಡೆಯುತ್ತಾರೆಯೋ–ಅದೇ ರೀತಿಯಲ್ಲಿ ನಾವೂ ಸಹ ನಿನ್ನೊಬ್ಬನನ್ನೇ ಆಶ್ರಯಿಸಿದ್ದು ಯುದ್ಧದಲ್ಲಿ ಜಯವನ್ನೂ ಶಾಶ್ವತವಾದ ಸುಖವನ್ನೂ ಆಶಿಸುತ್ತೇವೆ.

ಶ್ರೀಕೃಷ್ಣ! ಶತ್ರುಗಳ ಕಪಟದಿಂದ ನಮಗೆ ಸಂಭವಿಸಿದ ರಾಜ್ಯನಾಶ, ನಮ್ಮನ್ನು ತಿರಸ್ಕರಿಸಿದುದು ಮತ್ತು ಅವರಿಂದ ನಾವು ನಾನಾವಿಧವಾದ ಕಷ್ಟಗಳನ್ನು ಅನುಭವಿಸಿದುದು–ಈ ಎಲ್ಲ ವಿಷಯಗಳೂ ನಿನಗೆ ತಿಳಿದೇ ಇವೆ.

**ತ್ವಯಿ ಸರ್ವೇಶ ಸರ್ವೇಷಾಮಸ್ಮಾಕಂ ಭಕ್ತವತ್ಸಲ।**
**ಸುಖಮಾಯತ್ತಮತ್ಯರ್ಥಂ ಯಾತ್ರಾ ಚ ಮಧುಸೂದನ ॥೧೨॥**

ಭಕ್ತವತ್ಸಲ ! ಸರ್ವೇಶ್ವರ ! ಮಧುಸೂದನ ! ನಮ್ಮೆಲ್ಲರ ಸುಖ ಮತ್ತು ಜೀವನನಿರ್ವಹಣೆ–ಎಲ್ಲವೂ ಸಂಪೂರ್ಣವಾಗಿ ನಿನ್ನ ಅಧೀನದಲ್ಲಿಯೇ ಇವೆ.

**ಸ ತಥಾ ಕುರು ವಾರ್ಷ್ಣೇಯ ಯಥಾ ತ್ವಯಿ ಮನೋ ಮಮ।**
**ಅರ್ಜುನಸ್ಯ ಯಥಾ ಸತ್ಯಾ ಪ್ರತಿಜ್ಞಾಸ್ಯಾಚ್ಚಿಕೀರ್ಷಿತಾ ॥೧೩॥**

ವಾರ್ಷ್ಣೇಯ ! ನನ್ನ ಮನಸ್ಸು ನಿನ್ನಲ್ಲಿಯೇ ಲೀನವಾಗಿರುವಂತೆ ಮಾಡು. ಅರ್ಜುನನ ಅಭೀಷ್ಟವಾದ ಪ್ರತಿಜ್ಞೆಯು ಯಾವ ರೀತಿಯಲ್ಲಿ ಸತ್ಯಪ್ರತಿಜ್ಞೆಯಾಗುವುದೋ ಹಾಗೆ ಮಾಡು.

ಶ್ರೀಕೃಷ್ಣ! ಮಾಧವ! ದುಃಖಮಯವಾದ ಮತ್ತು ಕೋಪ ಭೂಯಿಷ್ಠವಾದ ಮಹಾಸಾಗರವನ್ನು ದಾಟಲಿಚ್ಛಿಸಿ ಹೊರಟಿರುವ ನಮಗೆ ನೀನು ನೌಕಾರೂಪನಾಗಿರುವೆ. ನೀನೇ ಈ ಮಹಾಸಂಕಟದಿಂದ ನಮ್ಮನ್ನು ಪಾರುಮಾಡಬೇಕು. ಸಂಗ್ರಾಮಭೂಮಿಯಲ್ಲಿ ಶತ್ರುವಧೋದ್ಯುಕ್ತ ನಾದ ರಥಿಕನು ಮಾಡಲಾಗದ ಸಾಹಸಕಾರ್ಯವನ್ನು ಪ್ರಯತ್ನಶೀಲನಾದ, ಜಾಗರೂಕನಾದ ಸಾರಥಿಯು ಮಾಡಬಲ್ಲನು. ಮಹಾಬಾಹುವೇ ! ಯಾವ ರೀತಿಯಲ್ಲಿ ನೀನು ವೃಷ್ಣಿಗಳನ್ನು ಎಲ್ಲ ಆಪತ್ತುಗಳಿಂದಲೂ ಪಾರು ಮಾಡುವೆಯೋ–ಅದೇ ರೀತಿಯಲ್ಲಿ ನಮ್ಮನ್ನೂ ಈ ಸಂಕಟದಿಂದ ಪಾರುಮಾಡು. ಶಂಖ-ಚಕ್ರ-ಗದಾಧರನೇ! ಶ್ರೀಕೃಷ್ಣ ! ದೋಣಿಯೇ ಇಲ್ಲದೇ ಅಗಾಧವಾದ ಕುರುಸಾಗರದಲ್ಲಿ ಮುಳುಗಿರುವ ನಮ್ಮನ್ನು ನೀನೇ ನೌಕಾರೂಪ ನಾಗಿ ಉದ್ಧರಿಸು.

**ನಮಸ್ತೇ ದೇವದೇವೇಶ ಸನಾತನ ವಿಶಾತನ।**
**ವಿಷ್ಣೋ ಜಿಷ್ಣೋ ಹರೇ ಕೃಷ್ಣ ವೈಕುಂಠ ಪುರುಷೋತ್ತಮ ॥೧೮॥**

(೧೭೦)–೧೬

ದೇವನೇ! ದೇವತೆಗಳಿಗೂ ಈಶನೇ! ಸನಾತನನೇ! ಶತ್ರುನಾಶಕನೇ! ವಿಷ್ಣುವೇ! ಜಿಷ್ಣುವೇ! ಹರಿಯೇ! ಕೃಷ್ಣನೇ! ವೈಕುಂಠನೇ! ಪುರುಷೋತ್ತಮನೇ! ನಿನಗೆ ನಮಸ್ಕಾರವಿರಲಿ.

ದೇವರ್ಷಿಗಳಾದ ನಾರದರು ನಿನ್ನನ್ನು ಪುರಾತನ ಋಷಿಶ್ರೇಷ್ಠನಾದ ನಾರಾಯಣನೆಂದೂ, ವರದನೆಂದೂ, ಶಾರ್ಙ್ಗಧನುಸ್ಸನ್ನು ಧರಿಸಿರುವವನೆಂದೂ ಸರ್ವೋತ್ತಮನೆಂದೂ ಹೇಳಿರುವರು. ಅವರ ಆ ಮಾತನ್ನು ಸತ್ಯವಾಗಿಸು."

ಮಹಾರಾಜ! ರಾಜಸಭೆಯಲ್ಲಿ ಧರ್ಮರಾಜನು ಹೀಗೆ ಹೇಳಿದನಂತರ ವಾಗ್ಮಿಯಾದ ಪುಂಡರೀಕಾಕ್ಷನು–ನೀರಿನಿಂದ ಕೂಡಿರುವ ಮೇಘದ ಶಬ್ದಕ್ಕೆ ಸಮಾನವಾದ ಗಂಭೀರಧ್ವನಿಯಿಂದ ಯುಧಿಷ್ಠಿರನಿಗೆ ಪ್ರತ್ಯುತ್ತರಿಸಿದನು:

"ಯುಧಿಷ್ಠಿರ! ದೇವತೆಗಳ ಲೋಕವೂ ಸೇರಿದಂತೆ ಯಾವ ಲೋಕಗಳಲ್ಲಿಯೇ ಆಗಲೀ ಕುಂತಿಯ ಮಗನಾದ ಧನಂಜಯನಂತಹ ಧನುರ್ಧರನು ಬೇರೊಬ್ಬನಿಲ್ಲ. ಅರ್ಜುನನು ಮಹಾವೀರ್ಯವಂತನು. ಸಕಲವಿಧವಾದ ಅಸ್ತ್ರಗಳಿಂದಲೂ ಸಂಪನ್ನನಾದವನು. ಮಹಾಪರಾಕ್ರಮಿಯು. ಮಹಾಬಲಿಷ್ಠನು. ಯುದ್ಧಕುಶಲನು. ಅಸಹನಶೀಲನು ಮತ್ತು ಮನುಷ್ಯರಲ್ಲಿಯೇ ಮಹಾತೇಜಸ್ವಿಯಾಗಿರತಕ್ಕವನು. ಇನ್ನೂ ಯುವಕನು. ವೃಷಭಸ್ಕಂಧದಂತೆ ಹೆಗಲುಗಳುಳ್ಳವನು. ದೀರ್ಘಬಾಹುವು. ಮಹಾಬಲನು. ಸಿಂಹ ಮತ್ತು ಗೂಳಿಗಳಂತೆ ನಡಿಗೆಯುಳ್ಳವನು. ಶ್ರೀಮಂತನು. ಇಂತಹ ಸಕಲಗುಣಪರಿಪೂರ್ಣನಾದ ಅರ್ಜುನನು ನಿನ್ನ ಶತ್ರುಗಳನ್ನು ನಿಜವಾಗಿಯೂ ಸಂಹರಿಸುತ್ತಾನೆ. ಅಗ್ನಿಯು ಕಟ್ಟಿಗೆಯನ್ನು ದಹಿಸುವಂತೆ ಕುಂತೀಪುತ್ರನಾದ ಅರ್ಜುನನು ದುರ್ಯೋಧನನ ಸೈನ್ಯವನ್ನು ದಹಿಸುತ್ತಾನೆ. ಈ ಕಾರ್ಯಕ್ಕೆ ನಾನು ಸಂಪೂರ್ಣವಾಗಿ ಒತ್ತಾಸೆನೀಡುತ್ತೇನೆ. ಇಂದು ಸೌಭದ್ರನ ಮೃತ್ಯುವಿಗೆ ಕಾರಣನಾದ, ಪಾಪಕರ್ಮಿಯಾದ, ಕ್ಷುದ್ರನಾದ ಜಯದ್ರಥನನ್ನು ಅರ್ಜುನನು ತನ್ನ ನಿಶಿತವಾದ ಬಾಣಗಳಿಂದ ಪುನಃ ಅವನನ್ನು ನೋಡಲು ಸಾಧ್ಯವಾಗದೇ ಇರತಕ್ಕ ಮಾರ್ಗಕ್ಕೆ ಕಳುಹಿಸುತ್ತಾನೆ. (ಅರ್ಜುನನು ಬಾಣಗಳಿಂದ ಜಯದ್ರಥನನ್ನು ಸಂಹರಿಸುತ್ತಾನೆ.) ರಣಹದ್ದುಗಳು, ಗಿಡಗಗಳು, ಪ್ರಚಂಡವಾದ ನರಿಗಳು, ಇತರ ನರಭಕ್ಷಕಪ್ರಾಣಿಗಳು ಇಂದು ಜಯದ್ರಥನ ಮಾಂಸವನ್ನು ತಿನ್ನುತ್ತವೆ. ಅವನಿಗೆ ಇಂದ್ರಸಹಿತರಾದ ದೇವತೆಗಳೇ ರಕ್ಷಕರಾಗಿ ಬಂದರೂ ಇಂದಿನ ಯುದ್ಧದಲ್ಲಿ

ಅವನು ಹತನಾಗಿ ಯಮನ ರಾಜಧಾನಿಗೆ ಹೋಗಿಯೇಹೋಗುತ್ತಾನೆ. ವಿಜಯಶೀಲನಾದ ಅರ್ಜುನನು ಜಯದ್ರಥನನ್ನು ಇಂದು ಸಂಹಾರಮಾಡಿಯೇ ನಿನ್ನ ಬಳಿಗೆ ಬರುತ್ತಾನೆ. ಐಶ್ವರ್ಯಸಂಪನ್ನನಾಗಿರುವ ನೀನು ಶೋಕರಹಿತನೂ ಚಿಂತಾರಹಿತನೂ ಆಗು."

೮೩ನೆಯ ಅಧ್ಯಾಯವು ಮುಗಿಯಿತು.

೮೪ನೆಯ ಅಧ್ಯಾಯ ಪ್ರತಿಜ್ಞಾಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಅರ್ಜುನನನ್ನು ಆಶೀರ್ವದಿಸಿದುದು : ಅರ್ಜುನನಿಗಾದ ಸ್ವಪ್ನವನ್ನು ಕೇಳಿ ವಿಶ್ವಾಸಿಗಳೆಲ್ಲರೂ ಆನಂದಪಟ್ಟುದು: ಅರ್ಜುನನು ಸಾತ್ಯಕಿ ಮತ್ತು ಕೃಷ್ಣರೊಡನೆ ರಥದಲ್ಲಿ ಕುಳಿತು ರಣರಂಗಕ್ಕೆ ಹೊರಟುದು: ಅರ್ಜುನನ ಮಾತಿನಂತೆ ಸಾತ್ಯಕಿಯು ಯುಧಿಷ್ಠಿರನ ರಕ್ಷಣೆಗೆ ಹೋದುದು

ಸಂಜಯನು ಅರ್ಜುನನ ರಣಯಾತ್ರೆಯ ವಿಷಯವಾಗಿ ಹೇಳುತ್ತಾನೆ:

"ಮಹಾರಾಜ ! ರಾಜಸಭೆಯಲ್ಲಿ ಎಲ್ಲರೂ ಕುಳಿತು ಹಿಂದೆ ಹೇಳಿದಂತೆ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದಾಗ ಅರ್ಜುನನು, ಸ್ನೇಹಿತರೊಡನಿದ್ದ ಭರತಶ್ರೇಷ್ಠನಾದ ಯುಧಿಷ್ಠಿರನನ್ನು ನೋಡುವ ಇಚ್ಛೆಯಿಂದ ಆಗಮಿಸಿದನು. ಸುಂದರವಾದ ಆ ಕೊಠಡಿಯೊಳಕ್ಕೆ ಪ್ರವೇಶಿಸಿ ರಾಜನಾದ ಯುಧಿಷ್ಠಿರನಿಗೆ ಪ್ರಣಾಮಮಾಡಿ ಮುಂದೆ ನಿಂತನು. ಪಾಂಡವಶ್ರೇಷ್ಠನಾದ ಯುಧಿಷ್ಠಿರನು ಸಿಂಹಾಸನದಿಂದ ಮೇಲೆದ್ದು ಅರ್ಜುನನನ್ನು ಪ್ರೇಮಪೂರ್ವಕವಾಗಿ ಆಲಿಂಗಿಸಿಕೊಂಡು, ನೆತ್ತಿಯನ್ನು ಆಘ್ರಾಣಿಸಿ, ತೋಳುಗಳಿಂದ ಬಿಗಿದಪ್ಪಿ, ಶ್ರೇಷ್ಠವಾದ ಆಶೀರ್ವಾದವನ್ನು ಮಾಡುತ್ತಾ, ಮಂದಸ್ಮಿತನಾಗಿ ಈ ಮಾತನ್ನು ಹೇಳಿದನು:

"ಅರ್ಜುನ! ಇಂದಿನ ಯುದ್ಧದಲ್ಲಿ ನಿನಗೆ ಮಹಾವಿಜಯವು ಲಭಿಸುವುದು ನಿಶ್ಚಯ. ಈ ವಿಷಯವು ಸ್ಪಷ್ಟವಾಗಿ ದೃಷ್ಟಿಗೋಚರವಾಗುತ್ತಿದೆ. ವಿಜಯಗಳಿಸುವೆಯೆಂಬುದಕ್ಕೆ ಅನುರೂಪವಾಗಿಯೇ ನಿನ್ನ ಮುಖದ ಕಾಂತಿಯೂ ಇದೆ. ಮೇಲಾಗಿ ಮಾಧವನು ನಿನ್ನ ವಿಷಯದಲ್ಲಿ ಅತ್ಯಂತ

ಪ್ರಸನ್ನತೆಯಿಂದ ಇದ್ದಾನೆ.” ಹೀಗೆ ಹೇಳಿದ ಹಿರಿಯಣ್ಣನನ್ನು ಕುರಿತು ಅರ್ಜುನನು ಹೇಳಿದನು:

“ಮಹಾರಾಜ! ನಿನಗೆ ಮಂಗಳವಾಗಲಿ. ನಾನು ನಿನ್ನೆ ರಾತ್ರಿ ಉತ್ತಮೋತ್ತಮವಾದ ಆಶ್ಚರ್ಯಕರವಾದ ಮತ್ತು ಶ್ರೀಕೃಷ್ಣನ ಪ್ರಸಾದದಿಂದಲೇ ಉಂಟಾದ ಸ್ವಪ್ನವನ್ನು ಕಂಡೆನು.”

ಮಹಾರಾಜ! ಅನಂತರ ಧನಂಜಯನು ಸುಹೃದರಿಗೆ ಆಶ್ವಾಸನೆಯನ್ನು ಕೊಡುವ ಸಲುವಾಗಿ ತಾನು ನೋಡಿದ ಕನಸನ್ನೂ ಮತ್ತು ತ್ರ್ಯಂಬಕನೊಡನೆ ತನ್ನ ಸಮಾಗಮವನ್ನೂ ವಿವರಿಸಿ ಹೇಳಿದನು. ಕನಸಿನ ಕಥೆಯನ್ನು ಕೇಳಿದವ ರೆಲ್ಲರೂ ಪರಮವಿಸ್ಮಿತರಾಗಿ ಎಲ್ಲರೂ ತಮ್ಮ ತಲೆಗಳಿಂದ ಭೂಮಿಯನ್ನು ಮುಟ್ಟಿ ವೃಷಾಂಕನಾದ ಪರಶಿವನಿಗೆ ನಮಸ್ಕರಿಸಿ ‘ಸಾಧು–ಸಾಧು! ಬಹಳ ಒಳ್ಳೆಯದಾಯಿತು’–ಎಂಬುದಾಗಿ ಹೇಳಿದರು. ಅನಂತರ ಎಲ್ಲ ಸುಹೃದರೂ ಧರ್ಮರಾಜನ ಅನುಜ್ಞೆಯನ್ನು ಪಡೆದು ಪರಮಹೃಷ್ಟರಾಗಿ ತ್ವರೆಯಿಂದ ಯುದ್ಧಕ್ಕೆ ಹೊರಟರು. ಯುಯುಧಾನ, ಅಚ್ಯುತ ಮತ್ತು ಅರ್ಜುನರು ಯುಧಿಷ್ಠಿರನಿಗೆ ನಮಸ್ಕರಿಸಿ ಪರಮಹೃಷ್ಟರಾಗಿ ಯುಧಿಷ್ಠಿರನ ಶಿಬಿರದಿಂದ ಹೊರಟರು. ವೀರರಾದ ಸಾತ್ಯಕಿ-ಜನಾರ್ದನರು ಒಂದೇ ರಥದಲ್ಲಿ ಕುಳಿತು ಒಟ್ಟಾಗಿ ಅರ್ಜುನನ ಮನೆಗೆ ಹೋದರು. ಅರ್ಜುನನ ಮನೆಗೆ ಹೋದೊಡನೆಯೇ ಹೃಷೀಕೇಶನು ಸೂತನಂತೆ ರಥಶ್ರೇಷ್ಠನಾದ ಅರ್ಜುನನ ವಾನರಚಿಹ್ನೆಯಿಂದ ಕೂಡಿದ್ದ ರಥವನ್ನು ಸಜ್ಜುಗೊಳಿಸಿದನು. ಮೇಘದ ಶಬ್ದಕ್ಕೆ ಸದೃಶವಾದ ಶಬ್ದದಿಂದ ಕೂಡಿದ್ದ, ಪುಟಕ್ಕೆ ಹಾಕಿದ ಚಿನ್ನದ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಸುಸಜ್ಜಿತವಾಗಿದ್ದ ಆ ರಥವು ಪ್ರಾತಃಕಾಲದ ಸೂರ್ಯನಂತೆ ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಅನಂತರ ಸುಸಜ್ಜಿತಪುರುಷರಲ್ಲಿ ಶ್ರೇಷ್ಠನಾದ, ಪುರುಷಸಿಂಹನಾದ ಶ್ರೀಕೃಷ್ಣನು ಪ್ರಾತರಾಹ್ನಿಕಗಳನ್ನು ಮುಗಿಸಿ ಕುಳಿತಿದ್ದ ಅರ್ಜುನನಿಗೆ ರಥವು ಯುದ್ಧಕ್ಕೆ ಹೊರಡಲು ಸಜ್ಜಾಗಿದೆಯೆಂದು ಹೇಳಿದನು. ಪುರುಷಶ್ರೇಷ್ಠನಾದ, ಲೋಕಪ್ರವರನಾದ ಅರ್ಜುನನು ಸುವರ್ಣಮಯವಾದ ಕವಚವನ್ನೂ ಮತ್ತು ಕಿರೀಟವನ್ನೂ ಧರಿಸಿದವನಾಗಿ, ಧನುರ್ಬಾಣಗಳನ್ನೂ ತೆಗೆದುಕೊಂಡು ರಥವನ್ನು ಪ್ರದಕ್ಷಿಣೆಮಾಡಿದನು. ಅನಂತರ ವಿದ್ಯೆಯಿಂದ ಮತ್ತು ತಪಸ್ಸಿನಿಂದ

ವೃದ್ಧರಾಗಿರುವ, ಜಿತೇಂದ್ರಿಯರಾದ ತಪಸ್ವೀಜನರು ವಿಜಯದಾಯಕವಾದ ಆಶೀರ್ವಾದಗಳನ್ನು ಮಾಡುತ್ತಿರಲಾಗಿ, ವಂದಿ-ಮಾಗಧರು ಸ್ತುತಿಸುತ್ತಿರಲಾಗಿ ಅರ್ಜುನನು ಆ ಮಹಾರಥವನ್ನು ಹತ್ತಿದನು. ಶ್ರೇಷ್ಠವಾದ ಆ ರಥವನ್ನು ವಿಜಯಸಾಧಕವಾದ, ಯುದ್ಧಸಂಬಂಧವಾದ ಮಂತ್ರಗಳಿಂದ ಮೊದಲೇ ಅಭಿಮಂತ್ರಿಸಲಾಗಿತ್ತು. ಉದಯಾಚಲವನ್ನೇರಿ ಕುಳಿತಿರುವ ಸೂರ್ಯನೋಪಾದಿಯಲ್ಲಿ ರಥಾರೂಢನಾಗಿದ್ದ ಅರ್ಜುನನು ಪ್ರಕಾಶಿಸಿದನು. ಸುವರ್ಣಮಯವಾದ ಕವಚವನ್ನು ತೊಟ್ಟಿದ್ದ, ರಥಿಗಳಲ್ಲಿ ಶ್ರೇಷ್ಠನಾದ, ಉಜ್ವಲವಾದ ಕಾಂತಿಯನ್ನು ಹೊಂದಿದ್ದ, ತೇಜಸ್ವಿಯಾದ ಅರ್ಜುನನು– ಮೇರುಪರ್ವತದ ಮೇಲಿರುವ ಸೂರ್ಯನಂತೆಯೇ ಪ್ರಕಾಶಿಸಿದನು. ಶರ್ಯಾತಿಯ ಯಜ್ಞಕ್ಕೆ ಹೋಗುತ್ತಿದ್ದ ಇಂದ್ರನನ್ನು ಅಶ್ವಿನೀದೇವತೆಗಳು ಅನುಸರಿಸಿ ಹೋದಂತೆ– ಅರ್ಜುನನು ರಥಾರೂಢನಾದಮೇಲೆ ಅವನನ್ನು ಅನುಸರಿಸಿ ಸಾತ್ಯಕಿ-ಜನಾರ್ದನರೂ ರಥಾರೋಹಣಮಾಡಿದರು. ವೃತ್ರನ ಸಂಹಾರಕ್ಕಾಗಿ ಇಂದ್ರನು ಹೊರಟಾಗ ರಥದ ಕುದುರೆಗಳ ಕಡಿವಾಣಗಳನ್ನು ಮಾತಲಿಯು ಹಿಡಿದಂತೆ–ಕಡಿವಾಣಗಳನ್ನು ಹಿಡಿಯುವ ಕಲೆಗಾರರಲ್ಲಿ ಶ್ರೇಷ್ಠನಾಗಿದ್ದ ಶ್ರೀಗೋವಿಂದನು ಅರ್ಜುನನ ರಥದ ಕುದುರೆಗಳ ಕಡಿವಾಣಗಳನ್ನು ಹಿಡಿದನು. ಬುಧ-ಶುಕ್ರಸಮೇತನಾದ ಅಂಧಕಾರನಾಶಕನಾದ ಚಂದ್ರನಂತೆ ಅರ್ಜುನನು ಸಾತ್ಯಕಿ-ಜನಾರ್ದನರ ಸಹಿತನಾಗಿ ರಥದಲ್ಲಿ ಕುಳಿತಿದ್ದನು. ಮಿತ್ರಾವರುಣರೊಡನೆ ಇಂದ್ರನು ತಾರಕಾಸುರನೊಡನೆ ಸಂಗ್ರಾಮಕ್ಕೆ ಹೋದಂತೆ–ಶತ್ರುಸಮೂಹವನ್ನೇ ನಾಶಮಾಡಲು ಸಮರ್ಥನಾದ ಅರ್ಜುನನು ಸೈಂಧವನ ವಧೆಯನ್ನು ಇಚ್ಛಿಸಿ ಸಾತ್ಯಕಿ-ಕೃಷ್ಣರೊಡನೆ ಯುದ್ಧಕ್ಕೆ ಹೊರಟನು. ರಣವಾದ್ಯಗಳ ಘೋಷಗಳೊಡನೆ, ಶುಭವಾಗಿಯೂ ಮತ್ತು ಮಂಗಳಮಯವಾಗಿಯೂ ಇದ್ದ ಸ್ತುತಿಗಳೊಡನೆ ರಣರಂಗಕ್ಕೆ ಹೋಗುತ್ತಿದ್ದ ವೀರನಾದ ಅರ್ಜುನನನ್ನು ವಂದಿ-ಮಾಗಧರು ಸ್ತುತಿಮಾಡಿದರು. ವಿಜಯಸೂಚಕವಾದ ಆಶೀರ್ವಾದಗಳು, ಪುಣ್ಯಾಹವಾಚನಗಳು ಮತ್ತು ಸೂತ-ಮಾಗಧರು ಮಾಡುತ್ತಿದ್ದ ಸ್ತುತಿಗಳು ರಣವಾದ್ಯಗಳೊಡನೆ ಮಿಳಿತವಾಗಿ ಎಲ್ಲರಿಗೂ ಸಂತೋಷವನ್ನುಂಟುಮಾಡುತ್ತಿದ್ದುವು. ಅರ್ಜುನನು ರಣರಂಗಕ್ಕೆ ಪ್ರಯಾಣಮಾಡುತ್ತಿದ್ದಾಗ ಅವನ ಹಿಂದಿನಿಂದ, ಪ್ರಯಾಣಮಾಡುತ್ತಿದ್ದ ದಿಕ್ಕಿನ ಕಡೆಗೆ–ಪುಣ್ಯಗಂಧವನ್ನು ಹೊತ್ತಿದ್ದ ಶುಭಾವಹವಾದ ಗಾಳಿಯು ಪಾರ್ಥನನ್ನು

ಹರ್ಷಗೊಳಿಸುತ್ತಾ, ಶತ್ರುಗಳನ್ನು ಶೋಷಿಸುತ್ತಾ ಬೀಸುತ್ತಿದ್ದಿತು. ಆ ಸಮಯದಲ್ಲಿಯೇ ಅನೇಕ ಶುಭಶಕುನಗಳು ಕಂಡುಬಂದುವು. ಪಾಂಡವರಿಗೆ ಶುಭಸೂಚಕವಾದ ಅನೇಕ ಶುಭಶಕುನಗಳೂ–ಕೌರವರಿಗೆ ಅದಕ್ಕೆ ವಿರುದ್ಧವಾದ ಅಶುಭಶಕುನಗಳೂ ಕಂಡುಬಂದುವು. ಅರ್ಜುನನು ತನ್ನ ಬಲಭಾಗದಲ್ಲಿ ಕಾಣುತ್ತಿದ್ದ ವಿಜಯಸೂಚಕವಾದ ಶುಭಶಕುನಗಳನ್ನು ಕಂಡು ಮಹಾಧನುಷ್ಮಂತನಾದ ಸಾತ್ಯಕಿಗೆ ಹೇಳಿದನು:

"ಶಿನಿಪುಂಗವನೇ! ಯುಯುಧಾನ! ಈ ಶುಭಶಕುನಗಳು ಕಾಣುತ್ತಿರುವುದರಿಂದ ಇಂದು ನನಗೆ ಯುದ್ಧದಲ್ಲಿ ವಿಜಯವು ನಿಶ್ಚಯವೆಂದು ಕಾಣುತ್ತದೆ. ಯಮಲೋಕಕ್ಕೆ ಹೋಗುವ ಅಪೇಕ್ಷೆಯಿಂದ ನನ್ನ ಪರಾಕ್ರಮವನ್ನು ನಿರೀಕ್ಷಿಸುತ್ತಿರುವ ಸೈಂಧವನಿರುವ ಸ್ಥಳಕ್ಕೆ ನಾನು ಹೋಗುತ್ತೇನೆ. ಸೈಂಧವನ ವಧೆಯು ಹೇಗೆ ಅತಿಮಹತ್ತ್ವದ ಕಾರ್ಯವಾಗಿದೆಯೋ ಹಾಗೆಯೇ ಯುಧಿಷ್ಠಿರನ ರಕ್ಷಣೆಯೂ ನನಗೆ ಅತಿ ಮಹತ್ತ್ವಪೂರ್ಣವೇ ಆಗಿದೆ.

ಮಹಾಬಾಹುವೇ! ನೀನೀಗ ರಾಜನನ್ನು ಎಲ್ಲ ಕಡೆಗಳಿಂದಲೂ ರಕ್ಷಿಸು. ನನ್ನಿಂದ ಅವನು ಹೇಗೆ ರಕ್ಷಿತನಾಗುತ್ತಾನೆಯೋ, ನಿನ್ನಿಂದಲೂ ಅವನು ಹಾಗೆಯೇ ರಕ್ಷಿತನಾಗುತ್ತಾನೆ. (ನೀನು ಅವನ ರಕ್ಷಣೆಗೆ ನಿಂತರೆ ನಾನೇ ಅವನನ್ನು ರಕ್ಷಣೆಮಾಡುತ್ತಿರುವೆನೆಂಬ ಭರವಸೆಯು ನನಗುಂಟಾಗುತ್ತದೆ.) ವಾಸುದೇವನಿಗೆ ಸಮಾನನಾದ ನಿನ್ನನ್ನು ಯುದ್ಧದಲ್ಲಿ ಪರಾಜಯಗೊಳಿಸುವ ವೀರರನ್ನು ನಾನು ಈ ಲೋಕದಲ್ಲಿ ಕಂಡಿಲ್ಲ. ಅಮರೇಶ್ವರನಾದ ಇಂದ್ರನೂ ಕೂಡ ನಿನ್ನೊಡನೆ ಯುದ್ಧಮಾಡಿ ನಿನ್ನನ್ನು ಜಯಿಸಲಾರನು. ರಾಜನ ರಕ್ಷಣೆಯ ವಿಷಯದಲ್ಲಿ ನೀನು ಅವನನ್ನು ರಕ್ಷಣೆಮಾಡುವೆಯೆಂಬ ಭರವಸೆಯಿದೆ. ನಿನ್ನನ್ನು ಬಿಟ್ಟರೆ ನಿನ್ನಂತೆ ಅಥವಾ ನನ್ನಂತೆ ಪ್ರದ್ಯುಮ್ನನೂ ರಾಜನ ರಕ್ಷಣೆಮಾಡಬಲ್ಲನು. ಮತ್ತಾರಲ್ಲಿಯೂ ನನಗೆ ರಾಜನನ್ನು ರಕ್ಷಣೆ ಮಾಡುವರೆಂಬ ಭರವಸೆಯಿಲ್ಲ. ಪ್ರದ್ಯುಮ್ನನು ಇಲ್ಲಿ ಇಲ್ಲದೇ ಇರುವಾಗ ರಾಜನ ರಕ್ಷಣಾಭಾರವನ್ನು ನೀನೇ ವಹಿಸಬೇಕಾಗಿದೆ. ಯಾರ ಸಹಾಯವನ್ನೂ ಅಪೇಕ್ಷಿಸದೇ ನಾನು ಸೈಂಧವನನ್ನು ಸಂಹಾರಮಾಡಬಲ್ಲೆನು. ಸಾತ್ವತನೇ! ನೀನು ಯಾವುದೇ ಕಾರಣದಿಂದಲೂ ನನ್ನನ್ನು ಅನುಸರಿಸಿ ಬರುವ

ಅವಶ್ಯಕತೆಯಿಲ್ಲ. ಆದರೆ ಸರ್ವಪ್ರಕಾರದಿಂದಲೂ ಯುಧಿಷ್ಠಿರನನ್ನು ರಕ್ಷಿಸುವ ಕಾರ್ಯವು ನಿನ್ನದಾಗಿದೆ. ಎಲ್ಲಿ ಮಹಾಬಾಹುವಾದ ವಾಸುದೇವ ನಿರುತ್ತಾನೆಯೋ ಮತ್ತು ನಾನೂ ಇರುತ್ತೇನೆಯೋ ಅಲ್ಲಿ ಯಾವ ವಿಧವಾದ ದುಷ್ಪರಿಣಾಮಗಳೂ ಉಂಟಾಗುವುದಿಲ್ಲವೆಂಬುದು ನಿಶ್ಚಯ."

ಮಹಾರಾಜ! ಪಾರ್ಥನು ಸಾತ್ಯಕಿಯನ್ನು ಕುರಿತು ಹೀಗೆ ಹೇಳಿದನಂತರ ಶತ್ರುವೀರಹಂತಕನಾದ ಸಾತ್ಯಕಿಯು 'ಹಾಗೆಯೇ ಆಗಲಿ '–ಎಂದು ಹೇಳಿ ಯುಧಿಷ್ಠಿರನಿದ್ದೆಡೆಗೆ ಹೊರಟುಹೋದನು."

ಲ೪ನೆಯ ಅಧ್ಯಾಯವು ಮುಗಿಯಿತು.

ಲ೫ನೆಯ ಅಧ್ಯಾಯ ಜಯದ್ರಥವಧಪರ್ವ

## ಧೃತರಾಷ್ಟ್ರನ ವಿಲಾಪ

ಧೃತರಾಷ್ಟ್ರನು ಸಂಜಯನೊಡನೆ ಹೇಳುತ್ತಾನೆ:

"ಸಂಜಯ! ಅಭಿಮನ್ಯುವು ಹತನಾದನಂತರ ದುಃಖದಿಂದಲೂ, ಶೋಕದಿಂದಲೂ ಕೂಡಿದ್ದ ಪಾಂಡವರು ಬೆಳಗಾಗುತ್ತಲೇ ಏನು ಮಾಡಿದರು? ಸವ್ಯಸಾಚಿಯಾದ ಅರ್ಜುನನ ಅದ್ಭುತಕರ್ಮಗಳನ್ನು ತಿಳಿದಿದ್ದ ಕುರುಗಳು ಅವನಿಗೆ ಮಹಾಪರಾಧವನ್ನೆಸಗಿದ್ದರೂ ನಿರ್ಭಯರಾಗಿ ಹೇಗಿದ್ದರು? ಪುತ್ರಶೋಕದಿಂದ ಪರಿತಪಿಸುತ್ತಿದ್ದ, ಕ್ರುದ್ಧನಾಗಿದ್ದ, ಪ್ರಳಯಕಾಲದ ಮೃತ್ಯುವಿನಂತೆಯೇ ರಣಾಂಗಣಕ್ಕೆ ಬರುತ್ತಿದ್ದ, ಪುರುಷ ವ್ಯಾಘ್ರನಾದ ಅರ್ಜುನನನ್ನು ನಮ್ಮವರು ಹೇಗೆ ಎದುರಿಸಿದರು? ಕಪಿರಾಜನನ್ನು ಧ್ವಜದಲ್ಲಿ ಚಿಹ್ನೆಯನ್ನಾಗಿ ಹೊಂದಿದ್ದ, ಪುತ್ರವಿಯೋಗದಿಂದ ವ್ಯಥಿತನಾಗಿದ್ದ, ಮಹಾಧನುಸ್ಸನ್ನು ಬಾರಿ-ಬಾರಿಗೂ ಶಬ್ದಮಾಡುತ್ತಿದ್ದ (ಟೇಂಕರಿಸುತ್ತಿದ್ದ) ಅರ್ಜುನನನ್ನು ನೋಡಿ ನನ್ನ ಮಕ್ಕಳು ಏನು ಮಾಡಿದರು? ದುರ್ಯೋಧನನ ಪಕ್ಷದಲ್ಲಿ ಈಗೇನು ಸಂಭವಿಸುತ್ತಿದೆ? ಸಂಜಯ! ಈ ದಿವಸಗಳಲ್ಲಿ ನಾನು ನಮ್ಮ ಕಡೆಯಲ್ಲಿ ವಿಲಾಪಧ್ವನಿಗಳನ್ನೇ ಹೆಚ್ಚಾಗಿ ಕೇಳುತ್ತಿದ್ದೇನೆ. ಆಮೋದ-ಪ್ರಮೋದಗಳ ಧ್ವನಿಯನ್ನೇ ಕೇಳುತ್ತಿಲ್ಲ. ಹಿಂದೆ ಸಿಂಧುರಾಜನ ಶಿಬಿರದಲ್ಲಿ ಮನಸ್ಸಿಗೆ ಹಿತಕರವಾದ, ಕಿವಿಗಳಿಗೂ ಇಂಪಾದ ಯಾವ ಶಬ್ದಗಳು ಕೇಳಿಸುತ್ತಿದ್ದುವೋ–ಆ ಶಬ್ದಗಳು ಈಗ ಕೇಳಿಸುತ್ತಿಲ್ಲ. ನನ್ನ

ಮಕ್ಕಳ ಶಿಬಿರದಲ್ಲಿ ಸ್ತುತಿಪಾಠಕರಾದ ಸೂತ-ಮಾಗಧಸಂಘಗಳ ಮತ್ತು ನರ್ತಕರ ಶಬ್ದವನ್ನು ನಾನು ಇತ್ತೀಚೆಗೆ ಒಮ್ಮೆಯೂ ಕೇಳುತ್ತಲೇ ಇಲ್ಲ. ಮೊದಲು ಸ್ವಜನರ ಆನಂದ ಕೋಲಾಹಲಶಬ್ದಗಳಿಂದ ನನ್ನ ಕಿವಿಗಳು ನಿರಂತರವೂ ತುಂಬಿರುತ್ತಿದ್ದುವು. ಆದರೆ ಇತ್ತೀಚೆಗೆ ದೀನರಾಗಿ ಹೋಗಿರುವ ನನ್ನ ಮಕ್ಕಳಿಂದ ನಾನು ಅಂತಹ ಆನಂದ ಕೋಲಾಹಲಶಬ್ದಗಳನ್ನೇ ಕೇಳುತ್ತಿಲ್ಲ. ಸಂಜಯ! ನಾನು ಈ ಹಿಂದೆ ಸತ್ಯಪರಾಕ್ರಮನಾದ ಸೋಮದತ್ತನ ಮನೆಯಲ್ಲಿ ಕುಳಿತು ಹರ್ಷೋತ್ಸಾಹಗಳಿಂದ ಕೂಡಿದ, ಉತ್ತಮವಾದ, ಕರ್ಣಾನಂದಕರವಾದ ಶಬ್ದಗಳನ್ನೇ ಕೇಳುತ್ತಿದ್ದೆನು. ಆದರೆ ಈಗ ಪುಣ್ಯಹೀನ ನಾದ ನಾನು ನನ್ನ ಮಕ್ಕಳ ಮನೆಯಲ್ಲಿ ಉತ್ಸಾಹರಹಿತವಾದ ಆರ್ತಸ್ವರದಿಂದ ಕೂಡಿದ ಧ್ವನಿಯನ್ನೇ ಕೇಳುತ್ತಿದ್ದೇನೆ. ವಿವಿಂಶತಿ, ದುರ್ಮುಖ, ಚಿತ್ರಸೇನ, ವಿಕರ್ಣ ಮತ್ತು ನನ್ನ ಇತರ ಮಕ್ಕಳ ಮನೆಗಳಲ್ಲಿಯೂ ನಾನು ಹಿಂದಿನಂತೆ ಹರ್ಷೋತ್ಸಾಹವರ್ಧಕವಾದ ಶಬ್ದಗಳನ್ನು ಕೇಳುತ್ತಿಲ್ಲ. ನನ್ನ ಮಕ್ಕಳಿಗೆ ಪರಮಾಶ್ರಯನಾದ, ಮಹಾಧನುರ್ಧರನಾದ, ದ್ರೋಣರ ಮಗನಾದ ಅಶ್ವತ್ಥಾಮನನ್ನು ಬ್ರಾಹ್ಮಣ-ಕ್ಷತ್ರಿಯ-ವೈಶ್ಯಶಿಷ್ಯರು ಸರ್ವದಾ ಸೇವಿಸುತ್ತಿರುತ್ತಾರೆ. ವಿತಂಡಾವಾದಗಳು (ಅಸಂಬದ್ಧವಾದ ಚರ್ಚೆಗಳು,) ಪರಸ್ಪರ ಸರಸಸಲ್ಲಾಪಗಳು, ದ್ರುತಸ್ವರದಲ್ಲಿ ಬಾರಿಸುವ ವಾದ್ಯಗಳ ವಾದನ, ವಿಧ-ವಿಧವಾದ ಮತ್ತು ಇಷ್ಟವಾದ ಗೀತೆಗಳು–ಇವುಗಳಿಂದ ಅಶ್ವತ್ಥಾಮನು ಅವರುಗಳೊಡನೆ ಆನಂದಪಡುತ್ತಿದ್ದನು. ಹಗಲು-ರಾತ್ರಿಗಳೆಂಬ ಭೇದವೇ ಇಲ್ಲದೇ ಕುರು-ಪಾಂಡವ-ಸಾತ್ವತಯೋಧರು ಅವನನ್ನು ಸಂಸೇವಿಸುತ್ತಿದ್ದರು. ಅಂತಹ ಅಶ್ವತ್ಥಾಮನ ಮನೆಯಲ್ಲಿ ಈಗ ಹಿಂದಿನಂತೆ ಯಾವ ಶಬ್ದವೂ ಕೇಳಿಸುತ್ತಿಲ್ಲ. ಮಹಾಧನುರ್ಧರನಾದ ದ್ರೋಣಪುತ್ರನ ಸೇವೆಯಲ್ಲಿ ಗಾಯಕರು ಸರ್ವದಾ ಇರುತ್ತಿದ್ದರು. ಈಗ ಅವರ ಧ್ವನಿಯೇ ಕೇಳಿಬರುತ್ತಿಲ್ಲ. ವಿಂದಾನುವಿಂದರ ಶಿಬಿರಗಳಲ್ಲಿಯೂ ಮತ್ತು ಸರ್ವದಾ ಆನಂದತುಂದಿಲರಾಗಿರುತ್ತಿದ್ದ ಕೇಕಯರ ಭವನಗಳಲ್ಲಿಯೂ ಪ್ರತಿನಿತ್ಯವೂ ಗುಂಪು-ಗುಂಪಾಗಿ ನೃತ್ಯಮಾಡುತ್ತಿದ್ದ ನರ್ತಕರ ತಾಳಗಳ ಮತ್ತು ಗಾಯನದ ಮಹಾಧ್ವನಿಯು ಹಿಂದೆ ಕೇಳಿಬರುತ್ತಿದ್ದಿತು. ಆದರೆ ಈಗ ಆ ಶಬ್ದವೇ ಕೇಳಿಬರುತ್ತಿಲ್ಲ. ಯಜ್ಞಗಳನ್ನು ಮಾಡುವ ಯಾಜಕರು ಸೋಮದತ್ತನ ಮಗನಾದ ವೇದವಿದ್ಯಾನಿಧಿಯಾದ ಭೂರಿಶ್ರವಸನನ್ನು ಸರ್ವದಾ ಉಪಾಸಿಸುತ್ತಿದ್ದರು. (ಸರ್ವದಾ ಅವನ ಮನೆಯಲ್ಲಿಯೇ ಇರುತ್ತಿದ್ದರು.) ಈಗ ಆ ಬ್ರಾಹ್ಮಣರ

ಶಬ್ದವೇ ಅವನ ಮನೆಯಲ್ಲಿ ಕೇಳಿಬರುತ್ತಿಲ್ಲ. ದ್ರೋಣರ ಮನೆಯಲ್ಲಿ ಯಾವಾಗಲೂ ಮೌರ್ವಿಯ ಟೇಂಕಾರಶಬ್ದ, ವೇದಘೋಷ, ತೋಮರ, ಕತ್ತಿ ಮತ್ತು ರಥಗಳ ಶಬ್ದಗಳು ಅನವರತವಾಗಿ ಕೇಳಿಬರುತ್ತಿದ್ದುವು. ಆದರೆ ಈಗ ಅಂತಹ ಯಾವ ಶಬ್ದವನ್ನೂ ನಾನು ಇತ್ತೀಚೆಗೆ ಕೇಳಿಲ್ಲ. ನಾನಾ ದೇಶಗಳಿಂದ ಬಂದಿರುವ ಜನರು ಹಾಡುತ್ತಿದ್ದ ಗೀತಗಳ ಶಬ್ದಗಳಾಗಲೀ, ಬಾರಿಸುತ್ತಿದ್ದ ವಾದ್ಯಗಳ ಶಬ್ದಗಳಾಗಲೀ ಈಗ ಕೇಳಿಬರುತ್ತಿಲ್ಲ. ತನ್ನ ಮಹಿಮೆಯಿಂದ ಯಾವಾಗಲೂ ಚ್ಯುತನಾಗದೇ ಇರುವ ಜನಾರ್ದನನು ಎಲ್ಲ ಪ್ರಾಣಿಗಳಿಗೂ ಕೃಪೆಯನ್ನು ತೋರುವ ಸಲುವಾಗಿ ಪಾಂಡವ-ಕೌರವರ ನಡುವೆ ಶಾಂತಿಯನ್ನು ಸ್ಥಾಪಿಸಬೇಕೆಂಬ ಇಚ್ಛೆಯಿಂದ ಯಾವಾಗ ಉಪಪ್ಲವ್ಯದಿಂದ ಹೊರಟು ಹಸ್ತಿನಾಪುರಕ್ಕೆ ಆಗಮಿಸಿದನೋ-ಆಗಲೇ ನಾನು ನನ್ನ ಮೂರ್ಖಪುತ್ರನಿಗೆ ಹೇಳಿದೆನು :

**ವಾಸುದೇವೇನ ತೀರ್ಥೇನ ಪುತ್ರ ಸಂಶಾಮ್ಯ ಪಾಣ್ಡವೈಃ ।**
**ಕಾಲಪ್ರಾಪ್ತಮಹಂ ಮನ್ಯೇ ಮಾ ತ್ವಂ ದುರ್ಯೋಧನಾತಿಗಾಃ ॥೨೩॥**

"ಪುತ್ರ! ಭಗವಂತನಾದ ವಾಸುದೇವನ ಮೂಲಕವಾಗಿ ಪಾಂಡವರೊಡನೆ ಶಾಂತಿಯನ್ನು ಮಾಡಿಕೋ. ಇದೇ ಸಮಯೋಚಿತವಾದ ಕರ್ತವ್ಯವೆಂದು ನನಗನ್ನಿಸುತ್ತದೆ. ಈ ನನ್ನ ಮಾತನ್ನು ಮೀರಿ ನಡೆಯಬೇಡ.

**ಶಮಂ ಚೇದ್ಯಾಚಮಾನಂ ತ್ವಂ ಪ್ರತ್ಯಾಖ್ಯಾಸ್ಯಸಿ ಕೇಶವಮ್ ।**
**ಹಿತಾರ್ಥಮಭಿಜಲ್ಪನ್ತಂ ನ ತವಾಸ್ತಿ ರಣೇ ಜಯಃ ॥೨೪॥**

ಶ್ರೀಕೃಷ್ಣನು ನಿನ್ನ ಹಿತಕ್ಕಾಗಿಯೇ ಮಾತನಾಡುತ್ತಿದ್ದಾನೆ. ಸಂಧಿಗಾಗಿ ತಾನೇ ಯಾಚನೆಮಾಡುತ್ತಿದ್ದಾನೆ. ಈ ಪರಿಸ್ಥಿತಿಯಲ್ಲಿ ನೀನು ಅವನ ಮಾತನ್ನು ಕೇಳದೆಯೇ ಹೋದರೆ ನಿನಗೆ ಖಂಡಿತವಾಗಿಯೂ ಯುದ್ಧದಲ್ಲಿ ಜಯವು ಲಭಿಸುವುದಿಲ್ಲ."

ನಾನು ಇಷ್ಟು ಸ್ಪಷ್ಟವಾಗಿ ಹೇಳಿದರೂ ನನ್ನ ಮಗನು-ಸಮಾಧಾನ ಗೊಳಿಸಲು ಯೋಗ್ಯವಾದ ಮಾತುಗಳನ್ನೇ ಹೇಳುತ್ತಿದ್ದ, ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನನ್ನು (ಶ್ರೀಕೃಷ್ಣನ ಸಲಹೆಯನ್ನು) ತಿರಸ್ಕರಿಸಿದನು. ವಿಧಿಯ ಸೆಳೆತಕ್ಕೆ ಸಿಕ್ಕಿದ ದುರ್ಯೋಧನನು ನನ್ನ ಹಿತೋಕ್ತಿಯನ್ನು ಸಂಪೂರ್ಣವಾಗಿ

ತಿರಸ್ಕರಿಸಿ ದುಃಶಾಸನ ಮತ್ತು ಕರ್ಣರ ಅಭಿಪ್ರಾಯಾನುಸಾರವಾಗಿಯೇ ನಡೆದುಕೊಂಡನು. ದ್ಯೂತವಾಡುವುದನ್ನು ನಾನು ಇಚ್ಛಿಸಿರಲಿಲ್ಲ. ವಿದುರನೂ ದ್ಯೂತವಾಡುವುದನ್ನು ಪ್ರಶಂಸೆಮಾಡಲಿಲ್ಲ. ಜಯದ್ರಥನೂ ದ್ಯೂತವಾಡುವುದನ್ನು ಇಚ್ಛಿಸಿರಲಿಲ್ಲ. ಭೀಷ್ಮನೂ ಇಚ್ಛಿಸಿರಲಿಲ್ಲ. ಶಲ್ಯ, ಭೂರಿಶ್ರವಸ, ಪುರುಮಿತ್ರ, ಜಯ, ಅಶ್ವತ್ಥಾಮಾ, ಕೃಪರು, ದ್ರೋಣರು–ಇವರೂ ಸಹ ಜೂಜಾಡುವುದನ್ನು ಇಚ್ಛಿಸಿರಲಿಲ್ಲ. ಇವರುಗಳ ಅಭಿಪ್ರಾಯವನ್ನೇನಾದರೂ ಪಡೆದುಕೊಂಡು ನನ್ನ ಮಗನು ವರ್ತಿಸಿದ್ದರೆ ಜ್ಞಾತಿಗಳಿಂದಲೂ, ಮಿತ್ರರಿಂದಲೂ ಕೂಡಿದವನಾಗಿ ಇನ್ನೂ ಬಹಳ ಕಾಲದವರೆಗೆ ಅವನು ನೀರೋಗ ದೃಢಕಾಯನಾಗಿ ಬದುಕಿರಬಹುದಾಗಿದ್ದಿತು. ಸರಳಸ್ವಭಾವದವರಾದ, ಮಧುರಭಾಷಿಗಳಾದ, ಸೋದರರೊಡನೆಯೂ-ಬಂಧುಗಳೊಡನೆಯೂ ಪ್ರಿಯವಾದ ಮಾತುಗಳನ್ನಾಡುವ, ಕುಲೀನರಾದ, ಸಾಧುಸಮ್ಮತರಾದ, ವಿದ್ವಾಂಸರಾದ ಪಾಂಡವರು ಸುಖವನ್ನೇ ಪಡೆಯುತ್ತಾರೆ.

**ಧರ್ಮಾಪೇಕ್ಷೀ ನರೋ ನಿತ್ಯಂ ಸರ್ವತ್ರ ಲಭತೇ ಸುಖಮ್ ।**
**ಪ್ರೇತ್ಯಭಾವೇ ಚ ಕಲ್ಯಾಣಂ ಪ್ರಸಾದಂ ಪ್ರತಿಪದ್ಯತೇ ॥೩೧॥**

ಧರ್ಮಮಾರ್ಗದಲ್ಲಿಯೇ ನಡೆಯಬೇಕೆಂದು ಅಪೇಕ್ಷೆಯನ್ನಿಟ್ಟುಕೊಂಡಿರುವ ಮನುಷ್ಯನು ಯಾವಾಗಲೂ, ಎಲ್ಲ ಕಡೆಗಳಲ್ಲಿಯೂ ಸುಖವನ್ನೇ ಹೊಂದುತ್ತಾನೆ. ಮರಣಾನಂತರದಲ್ಲಿಯೂ ಉತ್ತಮಲೋಕಗಳನ್ನೂ, ಮನಃಪ್ರಸನ್ನತೆಯನ್ನೂ ಪಡೆದುಕೊಳ್ಳುತ್ತಾನೆ.

ಸಂಜಯ! ನಾನು ನನ್ನ ಮಗನಿಗೆ ಈ ಮಾತುಗಳನ್ನು ಹೇಳಿದೆನು:

“ದುರ್ಯೋಧನ! ಈ ಪೃಥ್ವಿಯನ್ನು ಉಪಭೋಗಿಸಲು ಧರ್ಮಾತ್ಮರಾದ ಪಾಂಡವರು ಅರ್ಹರೇ ಆಗಿದ್ದಾರೆ. ಅವರು ಇದನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ಸಮರ್ಥರೂ ಆಗಿದ್ದಾರೆ. ಸಮುದ್ರಾಂತವಾದ ಈ ಭೂಮಿಯು ನಿನ್ನ ಪಿತೃ-ಪಿತಾಮಹರದ್ದಾಗಿರುವಂತೆ ಪಾಂಡವರ ಪಿತೃ-ಪಿತಾಮಹರದ್ದೂ ಆಗಿದೆ. ಪಾಂಡವರಿಗೆ ಯಾವುದಾದರೂ ವಿಷಯದಲ್ಲಿ ಉಚಿತವಾದ ಸಲಹೆಗಳನ್ನು ನೀಡಿದರೆ ಅವರು ಅದನ್ನು ಕೇಳುತ್ತಾರೆ. ಧರ್ಮಮಾರ್ಗದಲ್ಲಿಯೇ ನಡೆದುಕೊಳ್ಳುತ್ತಾರೆ. ನನಗೂ ಅನೇಕ

ಜ್ಞಾತಿ-ಬಾಂಧವರು ಇದ್ದಾರೆ. ಅವರ ಮಾತನ್ನೂ ಪಾಂಡವರು ಕೇಳುತ್ತಾರೆ. ಶಲ್ಯ, ಸೋಮದತ್ತ, ಮಹಾತ್ಮರಾದ ಭೀಷ್ಮ, ದ್ರೋಣಾ ಚಾರ್ಯರು, ವಿಕರ್ಣ, ಬಾಹ್ಲೀಕ, ಕೃಪರು–ಹೀಗೆಯೇ ಇನ್ನೂ ವೃದ್ಧರಾದ ಭರತವಂಶೀಯರಾದ ಅನೇಕಮಹಾತ್ಮರು ನಿನ್ನ ಸಲುವಾಗಿ ಹೇಳುವ ಮಾತನ್ನು ಪಾಂಡವರು ನಡೆಸಿಕೊಡುತ್ತಾರೆ. ಮಹಾನುಭಾವರಾದ ಪಾಂಡ ವರ ವಿಷಯದಲ್ಲಿ ನಾನು ಹೇಳಿದುದಕ್ಕೆ ವಿರೋಧಿಸಿ ಹೇಳುವವರು–ನಾನು ಹೇಳಿದ ನಮ್ಮ ಕಡೆಯ ಶಲ್ಯನೇ ಮೊದಲಾದವರಲ್ಲಿ–ಒಬ್ಬರಾದರೂ ಇರುವರೆಂದು ನೀನು ಭಾವಿಸಿರುವೆಯಾ? ಹಾಗೆ ಭಾವಿಸಬೇಡ. ಅವರೆಲ್ಲರೂ ಪಾಂಡವರ ವಿಷಯದಲ್ಲಿ ಒಂದೇ ಸದಭಿಪ್ರಾಯವನ್ನು ಇಟ್ಟು ಕೊಂಡಿರುತ್ತಾರೆ. ಇದಕ್ಕೆ ಕಾರಣವಿಷ್ಟೇ: ಶ್ರೀಕೃಷ್ಣನು ಯಾವುದೇ ಕಾರಣ ದಿಂದಲೂ ಧರ್ಮಮಾರ್ಗವನ್ನು ಬಿಡತಕ್ಕವನಲ್ಲ. ಎಲ್ಲ ಪಾಂಡವರೂ ಅವನ ಮಾರ್ಗವನ್ನೇ ಅನುಸರಿಸುವವರಾಗಿದ್ದಾರೆ. ನಮ್ಮ ಬಾಂಧವರೂ ಅವರೊಡನೆ ಏನೂ ಹೇಳಬೇಕಾಗಿಲ್ಲ. ಧರ್ಮಯುಕ್ತವಾದ ಮಾತನ್ನು ನಾನೇ ಹೇಳಿದರೂ ವೀರರಾದ ಪಾಂಡವರು ನನ್ನ ಮಾತನ್ನು ಖಂಡಿತವಾಗಿಯೂ ತಿರಸ್ಕರಿಸುವುದಿಲ್ಲ. ಪಾಂಡವರು ಧರ್ಮಾತ್ಮರಲ್ಲವೇ? ಆದುದರಿಂದ ನಾನಾದರೂ ಹೇಳುತ್ತೇನೆ ಅಥವಾ ನಮ್ಮ ಬಂಧುಗಳಾದರೂ ಅವರಿಗೆ ಹೇಳುತ್ತಾರೆ. ಅವರೊಡನೆ ಸಂಧಿಯನ್ನು ಮಾಡಿಕೊ."

ಸಂಜಯ! ಹೀಗೆ ನಾನು ಅನೇಕ ಬಾರಿ ಗೋಳಾಡುತ್ತಾ ನನ್ನ ಮಗನೊಡನೆ ಹೇಳಿದೆನು. ಮೂಢನಾದ ಅವನು ನನ್ನ ಮಾತನ್ನು ಕೇಳಲೇ ಇಲ್ಲ. ಇದನ್ನು ನಾನು ಕಾಲದ ವೈಪರೀತ್ಯವೆಂದೇ ಭಾವಿಸುತ್ತೇನೆ.

ವೃಕೋದರ, ಅರ್ಜುನ, ವೃಷ್ಣಿವೀರನಾದ ಸಾತ್ಯಕಿ, ಪಾಂಚಾಲ ವೀರನಾದ ಉತ್ತಮೌಜಸ, ದುರ್ಜಯನಾದ ಯುಧಾಮನ್ಯು, ದುರ್ಧರ್ಷ ನಾದ ಧೃಷ್ಟದ್ಯುಮ್ನ, ಅಪರಾಜಿತನಾದ ಶಿಖಂಡೀ, ಅಶ್ಮಕರು, ಕೇಕಯರಾಜ ಕುಮಾರರು, ಸೋಮಕನ ಮಗನಾದ ಕ್ಷತ್ರಧರ್ಮಾ, ಚೇದಿಗಳ ರಾಜನಾದ ಧೃಷ್ಟಕೇತು, ಚೇಕಿತಾನ, ಕಾಶೀರಾಜನ ಮಗನಾದ ಅಭಿಭೂ, ದ್ರೌಪದಿಯ ಐವರು ಮಕ್ಕಳು, ವಿರಾಟರಾಜ, ಮಹಾರಥನಾದ ದ್ರುಪದ, ಪುರುಷ ಶ್ರೇಷ್ಠರಾದ ನಕುಲ-ಸಹದೇವರು, ಪಾಂಡವರ ಮಂತ್ರಿಯಾದ ಮಧು

ಸೂದನ-ಇವರುಗಳೊಡನೆ ಲೋಕದಲ್ಲಿ ಇನ್ನೂ ಸ್ವಲ್ಪಕಾಲದವರೆಗೆ ಜೀವಿಸಿರಬೇಕೆಂದು ಇಚ್ಛಿಸಿರುವ ಯಾರು ತಾನೇ ಯುದ್ಧಮಾಡಿಯಾರು? ಪಾಂಡವರ ಅಸ್ತ್ರವೇಗವನ್ನು ಯಾರು ತಾನೇ ಸಹಿಸಿಯಾರು? ಪಾಂಡವಮಹಾವೀರರೊಡನೆ ಯುದ್ಧಮಾಡಲು ಮತ್ತು ಅವರ ಅಸ್ತ್ರವೇಗವನ್ನು ಸಹಿಸಿಕೊಳ್ಳಲು ಸಮರ್ಥರಾಗಿರುವವರು ನಾಲ್ವರು ಮಾತ್ರ. ದುರ್ಯೋಧನ, ಕರ್ಣ, ಸುಬಲನ ಮಗನಾದ ಶಕುನಿ, ನಾಲ್ಕನೆಯವನು ದುಃಶಾಸನ. ಈ ನಾಲ್ವರನ್ನು ಬಿಟ್ಟರೆ ಐದನೆಯವನು ಯಾರೆಂಬುದನ್ನು ನಾನು ಕಾಣೆನು.

**ಯೇಷಾಮಭೀಷುಹಸ್ತಃ ಸ್ಯಾದ್ವಿಷ್ವಕ್ಸೇನೋ ರಥೇ ಸ್ಥಿತಃ।**
**ಸಂನದ್ಧಶ್ಚಾರ್ಜುನೋ ಯೋದ್ಧಾ ತೇಷಾಂ ನಾಸ್ತಿ ಪರಾಜಯಃ॥**

ಯಾರ ಪಕ್ಷದಲ್ಲಿ ವಿಷ್ವಕ್ಸೇನನೇ ಚಾವಟಿಯನ್ನು ಹಿಡಿದು ರಥದಲ್ಲಿ ಕುಳಿತಿರುವನೋ ಮತ್ತು ಅರ್ಜುನನೇ ಕವಚವನ್ನು ಧರಿಸಿ ಯುದ್ಧಸನ್ನದ್ಧನಾದ ಯೋಧನಾಗಿರುವನೋ–ಅವರ ಪಕ್ಷಕ್ಕೆ ಪರಾಜಯವೆಂಬುದೇ ಇಲ್ಲ.

ಸಂಜಯ! ನನ್ನ ಆ ವಿಲಾಪಗಳಿಗೆ ದುರ್ಯೋಧನನು ಯಾವಾಗಲೂ ಗಮನವನ್ನೇ ಕೊಡಲಿಲ್ಲ. ಅವನು ನಾನು ವಿಲಪಿಸುವುದನ್ನು ಸ್ಮರಿಸುವುದೂ ಇಲ್ಲ.

ಪುರುಷವ್ಯಾಘ್ರರಾದ ಭೀಷ್ಮ-ದ್ರೋಣರಿಬ್ಬರೂ ಹತರಾದರೆಂದು ನೀನು ಹೇಳಿದೆಯಲ್ಲವೇ? ಮುಂದಿನ ಆಗು-ಹೋಗುಗಳನ್ನು ದೂರದರ್ಶಿತ್ವದಿಂದ ವಿವೇಚಿಸಿ ಹೇಳಿದ್ದ ವಿದುರನ ಅಂದಿನ ಮಾತುಗಳು ಅವನು ಹೇಳಿದ್ದಂತೆಯೇ ಫಲಿತವಾಗುತ್ತಿರುವುದನ್ನು ಕಂಡು, ಸಾತ್ಯಕಿಯಿಂದಲೂ- ಅರ್ಜುನನಿಂದಲೂ ಕುರುಸೈನ್ಯವು ಆಕ್ರಮಿಸಲ್ಪಟ್ಟಿರುವುದನ್ನು ನೋಡಿ, ನನ್ನ ಮಕ್ಕಳು ಶೋಕಿಸು ವರೆಂದು ನಾನು ಭಾವಿಸಿದ್ದೇನೆ. ಅನೇಕ ರಥಗಳ ಆಸನಗಳು ರಥಿಕರಿಂದ ಶೂನ್ಯವಾಗಿರುವುದನ್ನು ನೋಡಿ ನನ್ನ ಮಕ್ಕಳು ಶೋಕಿಸುತ್ತಾರೆಂಬುದು ನನ್ನ ಭಾವನೆಯಾಗಿದೆ. ಹೇಮಂತಋತುವು ಕಳೆದನಂತರ ಒಣಗಿಹೋಗಿರುವ ಪೊದರನ್ನು ಗಾಳಿಯಿಂದ ಕೂಡಿದ ಅಗ್ನಿಯು ಯಾವ ರೀತಿ ದಹಿಸುತ್ತದೆಯೋ ಅದೇ ರೀತಿಯಲ್ಲಿ ಅರ್ಜುನನೂ ನನ್ನ ಸೈನ್ಯವನ್ನು ಸುಡುತ್ತಿರಬಹುದು. ನನಗೆ

ಆ ಯುದ್ಧದ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳು. ನೀನು ಯಾಥಾವತ್ತಾಗಿ ಹೇಳುವುದರಲ್ಲಿ ಬಹಳ ಕುಶಲನಾಗಿರುವೆ. ಅಭಿಮನ್ಯುವು ಹತನಾದನು. ಅರ್ಜುನನಿಗೆ ಬಹುಪ್ರಿಯನಾದ ಅಭಿಮನ್ಯುವನ್ನು ಸಂಹರಿಸಿ ನೀವು ಅವನಿಗೆ ಅಪರಾಧವನ್ನೆಸಗಿ ಸಾಯಂಕಾಲವಾಗುತ್ತಲೇ ನಿಮ್ಮ ಶಿಬಿರಕ್ಕೆ ಹಿಂದಿರುಗಿದಿರಲ್ಲವೇ? ಆ ಸಮಯದಲ್ಲಿ ನಿಮ್ಮ ಮನಸ್ಸಿನ ಸ್ಥಿತಿಯು ಹೇಗಿದ್ದಿತು?

ಸಂಜಯ! ಗಾಂಡೀವಧನುರ್ಧರನಾದ ಅರ್ಜುನನಿಗೆ ಅವನ ಮಗನನ್ನು ಕೊಂದು ದೊಡ್ಡ ಅಪರಾಧವನ್ನೆಸಗಿರುವ ನನ್ನ ಮಕ್ಕಳು ಯುದ್ಧದಲ್ಲಿ ಅವನ ಘೋರಪರಾಕ್ರಮವನ್ನು ಖಂಡಿತವಾಗಿಯೂ ಸಹಿಸಿಕೊಳ್ಳಲಾರರು. ನಮ್ಮ ಪಕ್ಷದ ಸ್ಥಿತಿಯು ಇಂತಹ ದುರವಸ್ಥೆಯಲ್ಲಿದ್ದಾಗ ದುರ್ಯೋಧನನು ನಮ್ಮ ಪಕ್ಷದ ರಕ್ಷಣೆಗಾಗಿ ಯಾವ ಕಾರ್ಯವನ್ನು ಮಾಡಲು ನಿಶ್ಚಯಿಸಿದನು? ಕರ್ಣನು ಯಾವ ಕಾರ್ಯಮಾಡಲು ಸಲಹೆ ನೀಡಿದನು? ದುಃಶಾಸನ ಮತ್ತು ಶಕುನಿಗಳು ಯಾವ ಸಲಹೆಗಳನ್ನು ನೀಡಿದರು? ನನ್ನ ಹಿರಿಯ ಮಗನಾದ ದುರ್ಯೋಧನನ ಕೆಟ್ಟನೀತಿಗಳಿಂದಾಗಿ ಏಕತ್ರ ಸಮ್ಮಿಳಿತರಾಗಿದ್ದ ನನ್ನ ಉಳಿದ ಮಕ್ಕಳ ಸ್ಥಿತಿಯು ಹೇಗಿದ್ದಿತು? ಎಂಬುದನ್ನು ಹೇಳು. ಲೋಭಿಯಾದ, ದುರ್ಬುದ್ಧಿಯವನಾದ, ಕ್ರೋಧದಿಂದ ವಿಕೃತವಾದ ಬುದ್ಧಿಯಿಂದ ಕೂಡಿರುವ, ರಾಜ್ಯಕಾಮನಾದ, ಮೂಢನಾದ, ರಾಗ-ದ್ವೇಷಗಳಿಂದ ಕಲುಷಿತವಾದ ಹೃದಯದಿಂದ ಕೂಡಿರುವ ದುರ್ಯೋಧನನ ನೀತಿಯುಕ್ತವಾದ ಮತ್ತು ಅನೀತಿಯುಕ್ತವಾದ ಕಾರ್ಯಗಳೆಲ್ಲವನ್ನೂ ಸವಿಸ್ತರವಾಗಿ ಹೇಳು."

ಸಿ೫ನೆಯ ಅಧ್ಯಾಯವು ಮುಗಿಯಿತು.

೮೬ನೆಯ ಅಧ್ಯಾಯ — ಜಯದ್ರಥವಧಪರ್ವ (ಮುಂದುವರಿದಿದೆ.)

## ಸಂಜಯನು ಧೃತರಾಷ್ಟ್ರನನ್ನು ದೂಷಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಮುಂದಿನ ವೃತ್ತಾಂತವನ್ನು ಹೇಳುತ್ತಾನೆ:

"ಮಹಾರಾಜ! ಎಲ್ಲ ವಿಷಯಗಳನ್ನೂ ಪ್ರತ್ಯಕ್ಷವಾಗಿಯೇ ನೋಡಿರುವ ನಾನು ಎಲ್ಲ ವಿಷಯಗಳನ್ನೂ ಹೇಳುತ್ತೇನೆ. ದೃಢಮನಸ್ಕನಾಗಿ ನಾನು ಹೇಳುವುದನ್ನು ಕೇಳು. ನನ್ನ ಅಭಿಪ್ರಾಯದಲ್ಲಿ ನಿನ್ನ ಅಪರಾಧವೇ ಇಂದಿನ

ಈ ವಿನಾಶಕ್ಕೆ ಮೂಲಕಾರಣವಾಗಿದೆ. ನೀರೆಲ್ಲವೂ ಹೊರಟುಹೋದನಂತರ *ಸೇತುವೆಯನ್ನು ಕಟ್ಟುವುದು ಹೇಗೆ ನಿಷ್ಫಲವೋ–ಹಾಗೆಯೇ ಈಗಿನ ನಿನ್ನ ವಿಲಾಪವೂ ನಿಷ್ಫಲವೇ ಸರಿ. ಆದುದರಿಂದ ನೀನು ದುಃಖಿಸಬೇಡ. ಇದು ಕೃತಾಂತನ (ಯಮನ) ಪರಮಾದ್ಭುತವಾದ ನಿಯಮ. ಇದನ್ನು ಅತಿಕ್ರಮಿಸಿ ಹೋಗುವ ಸಾಧ್ಯತೆಯೇ ಇಲ್ಲ. ಭರತಶ್ರೇಷ್ಠನೇ! ಇದು ಪುರಾತನವಾದ ಪ್ರಾರಬ್ಧಕರ್ಮ. ಆದುದರಿಂದ ದುಃಖವನ್ನು ದೂರಮಾಡು. ಹಿಂದೆಯೇ ನೀನು ಕುಂತೀಪುತ್ರನಾದ ಯುಧಿಷ್ಠಿರನನ್ನೂ, ನಿನ್ನ ಮಕ್ಕಳನ್ನೂ ದ್ಯೂತ ವಾಡುವುದರಿಂದ ತಡೆಹಿಡಿದಿದ್ದರೆ ಆಗ ನೀನು ಹೀಗೆ ದುಃಖಿಸ ಬೇಕಾಗುತ್ತಿರಲಿಲ್ಲ. ಯುದ್ಧವು ಪ್ರಾರಂಭವಾಗುವುದರಲ್ಲಿದ್ದಾಗಲೂ ಕೂಡ ಕ್ರೋಧಾಭಿಭೂತರಾಗಿದ್ದ ನಿನ್ನ ಮಕ್ಕಳನ್ನು ಯುದ್ಧಮಾಡದಂತೆ ತಡೆದಿದ್ದರೆ ನಿನಗೆ ಇಂತಹ ದುಃಖವು ಪ್ರಾಪ್ತವಾಗುತ್ತಿರಲಿಲ್ಲ. ಅವಿಧೇಯನಾದ ದುರ್ಯೋಧನನನ್ನು ಬಂಧಿಸಿರೆಂದು ನೀನು ಕೌರವರಿಗೆ ಆಜ್ಞೆಮಾಡಿದ್ದರೆ ನಿನ್ನನ್ನು ಈ ವ್ಯಸನವು ಸಮೀಪಿಸುತ್ತಲೂ ಇರಲಿಲ್ಲ. ನಿನ್ನ ಬುದ್ಧಿಯ ವೈಪರೀತ್ಯದ ಫಲವನ್ನು ಪಾಂಡವರೂ, ವೃಷ್ಣಿಗಳೂ, ಇನ್ನೂ ಇತರ ಅನೇಕ ರಾಜರೂ ಅನುಭವಿಸುತ್ತಿದ್ದಾರೆ. ನೀನು ತಂದೆಯಾದವನು ಮಾಡ ಬೇಕಾದ ಕರ್ತವ್ಯದಂತೆ ಪುತ್ರನನ್ನು ಸನ್ಮಾರ್ಗಕ್ಕೆ ತಂದು ಧರ್ಮಮಾರ್ಗ ದಲ್ಲಿಯೇ ಇರುತ್ತಿದ್ದರೆ ನೀನು ಈ ಸಂಕಟವನ್ನು ಅನುಭವಿಸುತ್ತಿರಲಿಲ್ಲ. ನೀನು ಲೋಕದಲ್ಲಿ ಮಹಾಬುದ್ಧಿವಂತನೆಂದು ವಿಖ್ಯಾತನಾಗಿದ್ದರೂ ಸನಾತನಧರ್ಮ ವನ್ನು ಪರಿತ್ಯಜಿಸಿ, ದುರ್ಯೋಧನ-ಕರ್ಣ-ಶಕುನಿಗಳ ಅಭಿಮತದಂತೆಯೇ ನಡೆದುಕೊಂಡೆ. ಮಹಾರಾಜ! ನೀನು ಮಾಡಿದ ವಿಲಾಪವೆಲ್ಲವನ್ನೂ ನಾನು ಸಂಪೂರ್ಣವಾಗಿ ಕೇಳಿದೆನು. ಆದರೆ ಸ್ವಾರ್ಥದಲ್ಲಿಯೇ ನಿಷ್ಠವಾದ ಬುದ್ಧಿ ಯಿರುವ ನಿನ್ನ ಈ ವಿಲಾಪವು ವಿಷಮಿಶ್ರವಾದ ಮಧುವಿನಂತಿದೆಯೆಂದು ನಾನು ಭಾವಿಸುತ್ತೇನೆ. (ನೀನು ಪಾಂಡವರ ವಿಷಯವಾಗಿ ಯಾವ ಹೊಗಳಿ

---

*__ಗತೋದಕೇ ಸೇತುಬನ್ಧಃ__: ನೀರು ಹೋದಮೇಲೆ ಸೇತುವೆ ಕಟ್ಟುವುದು. ಇಲ್ಲಿ ಸೇತುವೆ ಎಂದರೆ ಒಡನೆಯೇ ನಮ್ಮ ಮನಸ್ಸಿಗೆ ಬರುವ ನದೀ ಅಥವಾ ಹಳ್ಳಗಳನ್ನು ದಾಟುವ ಸೇತುವೆಗಳಲ್ಲ. ಇಂತಹ ಸೇತುವೆಗಳನ್ನು ನಿರ್ಮಿಸಿದರೂ ನೀರು ಹೋಗುತ್ತಲೇ ಇರುತ್ತದೆ. ಸೇತುಬಂಧ ಎಂದರೆ ಜನರು ದಾಟಲೂ ಯೋಗ್ಯವಾದ-ಹೋಗುತ್ತಿರುವ ನೀರನ್ನು ತಡೆಯುವಂತೆಯೂ ಇರುವ ಏರಿ ಅಥವಾ ಅಣೆಕಟ್ಟು. ನೀರೆಲ್ಲಾ ಹೋದಮೇಲೆ ಇಂತಹ ಏರಿಗಳನ್ನು ಕಟ್ಟಿಯೂ ಪ್ರಯೋಜನವಿಲ್ಲ. 'ಊರು ಸೂರೆಹೋದ ಮೇಲೆ ಹೆಬ್ಬಾಗಿಲು ಹಾಕಿದರು'– ಎಂಬುದಕ್ಕೆ ಸಮಾನವಾದ ಗಾದೆ.

ಕೆಯ ಮಾತನ್ನಾಡಿದೆಯೋ ಅದು ಹೃದಯಾಂತರಾಳದಿಂದ ಬಂದುದಲ್ಲ. ಅವರ ವಿಷಯದಲ್ಲಿ ನಿನ್ನ ಹೃದಯದಲ್ಲಿಯೂ ಹಗೆತನವೇ ತುಂಬಿದೆ. ನಿನ್ನ ಮಾತು ಪಾಂಡವರ ವಿಷಯದಲ್ಲಿ ಮಧುವಿನಂತಿರುವುದೇನೋ ನಿಜ. ಆದರೆ ನಿನ್ನ ಹೊಟ್ಟೆಯಲ್ಲಿ ವಿಷವು ತುಂಬಿರುವುದರಿಂದ ನೀನಾಡಿದ ಮಧುವಿನಂತಹ ಮಾತು ಕಪಟದಿಂದ ಕೂಡಿದ್ದಾಗಿದೆ.) ಹಿಂದೆ ಶ್ರೀಕೃಷ್ಣನು ನಿನ್ನನ್ನು ಗೌರವಿಸುತ್ತಿದ್ದಂತೆ ಯುಧಿಷ್ಠಿರನನ್ನಾಗಲೀ, ಭೀಷ್ಮನನ್ನಾಗಲೀ, ದ್ರೋಣರನ್ನಾಗಲೀ ಗೌರವಿಸುತ್ತಿರಲಿಲ್ಲ. ನೀನು ರಾಜಧರ್ಮದಿಂದ ಚ್ಯುತನಾಗುತ್ತಿರುವೆಯೆಂಬುದು ಯಾವಾಗ ಅವನಿಗೆ ತಿಳಿಯಿತೋ–ಆವಾಗಿನಿಂದ ಶ್ರೀಕೃಷ್ಣನು ನಿನ್ನನ್ನು ಅಷ್ಟಾಗಿ ಗೌರವಿಸುತ್ತಿಲ್ಲ. ನಿನ್ನ ಮಕ್ಕಳಿಗೆ ಮಾತ್ರವೇ ಈ ಅಖಂಡರಾಜ್ಯವೂ ಲಭಿಸಬೇಕೆಂಬ ಅಭಿಲಾಷೆಯಿರುವ ಧೃತರಾಷ್ಟ್ರನೇ! ನಿನ್ನ ಮಕ್ಕಳು ಪಾಂಡವರ ವಿಷಯದಲ್ಲಿ ಕಠೋರವಾದ ಮಾತುಗಳನ್ನಾಡಿದರು. ಮನಬಂದಂತೆ ನಿಂದಿಸಿದರು. ಆಗ ನೀನು ನಿನ್ನ ಮಕ್ಕಳನ್ನು ತಡೆಹಿಡಿಯಲಿಲ್ಲ. ಪಾರ್ಥರನ್ನು ಉಪೇಕ್ಷಿಸಿದೆ. ಅಂದು ನೀನು ಮಾಡಿದ ಆ ಅನ್ಯಾಯದ ಫಲವು ಈಗ ನಿನಗೆ ಪ್ರಾಪ್ತವಾಗಿದೆ. ಮಹಾರಾಜ! ಪಿತೃ-ಪಿತಾಮಹರಿಂದ (ಆನುವಂಶಿಕವಾಗಿ) ಪ್ರಾಪ್ತವಾದ ಈ ರಾಜ್ಯವು ಅಂದು ನಿನ್ನ ಅಧೀನದಲ್ಲಿಯೇ ಇದ್ದಿತು. ಕುಂತಿಯ ಮಕ್ಕಳು ತಮ್ಮ ಸಾಮರ್ಥ್ಯದಿಂದ ಜಯಿಸಿದ ವಿಶಾಲವಾದ ರಾಜ್ಯಗಳನ್ನೂ ನೀನೇ ನಿನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡೆ. ನಿನ್ನ ತಮ್ಮನಾದ ಪಾಂಡುವೂ ಶತ್ರುಗಳನ್ನು ಜಯಿಸಿ ರಾಜ್ಯವನ್ನು ವಿಸ್ತರಿಸಿದ್ದನು. ಅಂತೆಯೇ ಕುರುವಂಶದ ಕೀರ್ತಿಯನ್ನೂ ಹರಡಿದ್ದನು. ಧರ್ಮಪರಾಯಣರಾದ ಪಾಂಡವರು ತಂದೆಯು ಜಯಿಸಿದ್ದುದಕ್ಕಿಂತಲೂ ಹೆಚ್ಚಿನ ರಾಜ್ಯಗಳನ್ನು ಜಯಿಸಿದರು ಮತ್ತು ಕುರುವಂಶದ ಕೀರ್ತಿಯನ್ನೂ ವರ್ಧಿಸಿದರು. ರಾಜ್ಯವು ನಿನ್ನ ಅಧೀನಕ್ಕೆ ಬಂದನಂತರ ಪಾಂಡವರ ಅಂತಹ ಅದ್ಭುತಕರ್ಮವೂ (ಪರಾಕ್ರಮದಿಂದ ರಾಜ್ಯಗಳನ್ನು ಜಯಿಸಿಕೊಟ್ಟುದೂ) ನಿಷ್ಫಲವಾಗಿ ಹೋಯಿತು. ರಾಜ್ಯಲೋಭಿಯಾದ ನೀನು ಪಾಂಡವರನ್ನು ಅವರ ಪಿತೃಸಂಬಂಧವಾದ ರಾಜ್ಯದಿಂದಲೂ ಭ್ರಷ್ಟರನ್ನಾಗಿ ಮಾಡಿದೆ. ಈ ರೀತಿಯಲ್ಲಿ ಅನೇಕವಿಧವಾದ ಅಪರಾಧಗಳನ್ನು ನೀನೇ ಮಾಡಿದ್ದರೂ ಯುದ್ಧಕಾಲವು ಪ್ರಾಪ್ತವಾಗಿರುವಾಗ (ನಿನ್ನ ಮಕ್ಕಳು ದಿನ-ದಿನಕ್ಕೂ ಕ್ಷಯಿಸುತ್ತಿರುವುದನ್ನು ಕೇಳಿದ ನಂತರ) ಈ ಕುಲಕ್ಷಯಕ್ಕೆ ಪುತ್ರರೇ ಕಾರಣರೆಂದು ಅವರನ್ನು ನಿಂದಿ

ಸುತ್ತಿರುವೆ. ಈ ಸಮಯದಲ್ಲಿ ಹಾಗೆ ಹೇಳುವುದು ನಿನಗೆ ಯುಕ್ತವಾಗಿ ಕಾಣುವುದಿಲ್ಲ. ನಿನಗಾಗಿ ಯುದ್ಧಮಾಡುತ್ತಿರುವ ಕ್ಷತ್ರಿಯರಾಜರು, ಯುದ್ಧ ಮಾಡುತ್ತಿರುವಾಗ ತಮ್ಮ ಜೀವವನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ಪಾರ್ಥರ ಸೈನ್ಯದೊಳಕ್ಕೆ ನುಗ್ಗಿ ವೀರಾವೇಶದಿಂದ ಹೋರಾಡುತ್ತಾರೆ. ಯಾವ ಸೈನ್ಯವನ್ನು ಕೃಷ್ಣಾರ್ಜುನರು ಮತ್ತು ಸಾತ್ಯಕಿ-ವೃಕೋದರರು ರಕ್ಷಿಸುತ್ತಿರುವರೋ ಅಂತಹ ಸೈನ್ಯದೊಡನೆ ಯುದ್ಧಮಾಡಲು ಕೌರವರಿಗಲ್ಲದೆ ಮತ್ತಾರಿಗೆ ಸಾಧ್ಯವಿದೆ? ಯಾರ ಕಡೆಯ ಯೋಧನು ಗುಡಾಕೇಶನಾದ ಅರ್ಜುನ ನಾಗಿರುವನೋ, ಯಾರ ಕಡೆಯ ಮಂತ್ರಿಯು ಶ್ರೀಕೃಷ್ಣನಾಗಿರುವನೋ, ಯಾರ ಕಡೆಯ ವೀರಯೋಧರು ಸಾತ್ಯಕಿ-ಭೀಮಸೇನರಾಗಿದ್ದಾರೆಯೋ ಅಂತಹವರೊಡನೆ ಯುದ್ಧಮಾಡಲು ಕೌರವರನ್ನೂ ಮತ್ತು ಅವರ ಅನುಯಾಯಿಗಳನ್ನೂ ಬಿಟ್ಟು ಬೇರೆಯ ಮರಣಧರ್ಮವಿರುವ ಧನುರ್ಧಾರಿಯಾದ ಯಾವ ಮನುಷ್ಯನು ತಾನೇ ಧೈರ್ಯದಿಂದ ಮುನ್ನುಗ್ಗುತ್ತಾನೆ? ಯುದ್ಧದ ಸಂಬಂಧವಾಗಿ ವಿಶೇಷವಿಷಯಗಳನ್ನು ತಿಳಿದಿರುವ, ಕ್ಷತ್ರಧರ್ಮರತರಾದ, ಶೂರರಾದ ರಾಜರಿಂದ ಎಷ್ಟು ಮಾಡಲು ಶಕ್ಯವೋ ಅಷ್ಟನ್ನೂ ಕೌರವರೂ ಮಾಡುತ್ತಾರೆ. ಪುರುಷಸಿಂಹರಾದ ಪಾಂಡವರೊಡನೆ ಕೌರವರ ಪರಮಸಂಕಟಮಯವಾದ ಯುದ್ಧವು ಹೇಗೆ ನಡೆಯಿತೆಂಬುದನ್ನು–ಹೇಗೆ ನಡೆಯಿತೋ ಹಾಗೆಯೇ ಯಥಾವತ್ತಾಗಿ ಹೇಳುವೆನು; ಕೇಳು."

ಲ೬ನೆಯ ಅಧ್ಯಾಯವು ಮುಗಿಯಿತು.

೮೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕೌರವಸೈನಿಕರ ಉತ್ಸಾಹ: ಆಚಾರ್ಯದ್ರೋಣರು ಚಕ್ರಶಕಟವ್ಯೂಹವನ್ನು ರಚಿಸಿದುದು

ಸಂಜಯನು ಹದಿನಾಲ್ಕನೆಯ ದಿವಸದ ಯುದ್ಧದ ವಿವರಗಳನ್ನು ಹೇಳಲು ಉಪಕ್ರಮಿಸುತ್ತಾನೆ:

"ಮಹಾರಾಜ! ಹದಿಮೂರನೆಯ ದಿವಸದ ರಾತ್ರಿಯು ಕಳೆದು ಬೆಳಗಾಗುತ್ತಲೇ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ತಮ್ಮ ಸಮಸ್ತ ಸೈನ್ಯವನ್ನೂ ವ್ಯೂಹಕ್ರಮದಲ್ಲಿ ನಿಲ್ಲಿಸಲು ಉಪಕ್ರಮಿಸಿದರು. ಆ ಸಮಯ

ದಲ್ಲಿ ಅತ್ಯಂತಸಂಕ್ರುದ್ಧರಾದ, ಅಸಹನಶೀಲರಾದ, ಪರಸ್ಪರವಾಗಿ ವಧೆಯನ್ನು ಮಾಡಲು ಇಚ್ಛಿಸಿ ಗರ್ಜನೆಮಾಡುತ್ತಿದ್ದ ಶೂರರ ವಿಚಿತ್ರವಾದ ಮಾತುಗಳು ಕೇಳಿಬರುತ್ತಿದ್ದುವು. ಕೆಲವರು ಧನುಸ್ಸುಗಳನ್ನು ಟೇಂಕರಿಸುತ್ತಿದ್ದರು. ಕೆಲವರು ಮೌರ್ವಿಗಳನ್ನು ತೀಡುತ್ತಿದ್ದರು. ಕೆಲವರು ಸುದೀರ್ಘವಾಗಿ ನಿಟ್ಟುಸಿರು ಬಿಡುತ್ತಾ–'ಈಗ ಆ ಧನಂಜಯನೆಲ್ಲಿ?'–ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು. ಕೆಲವರು ಆಕಾಶದಂತೆ ನಿರ್ಮಲವಾಗಿದ್ದ, ಹೊಂಬಣ್ಣದಿಂದ ಕೂಡಿದ್ದ, ಹರಿತವಾಗಿ ಮಾಡಲ್ಪಟ್ಟ ಅಂಚಿನಿಂದ ಕೂಡಿದ್ದ, ಸುಂದರವಾದ ಹಿಡಿಯಿಂದ ಕೂಡಿದ್ದ ಕತ್ತಿಗಳನ್ನು ಒರೆಯಿಂದ ತೆಗೆದು ತಿರುಗಿಸತೊಡಗಿದರು. ಸಂಗ್ರಾಮದಲ್ಲಿಯೇ ಆಸಕ್ತಚಿತ್ತರಾದ, ಸಾವಿರಾರು ಶೂರರು ತಾವು ಪಡೆದುಕೊಂಡಿದ್ದ ಶಿಕ್ಷಣಕ್ಕೆ ಅನುಸಾರವಾಗಿ ಕತ್ತೀವರಸೆಗಳನ್ನೂ ಮತ್ತು ಧನುಷ್ಟೇಂಕಾರವೇ ಮೊದಲಾಗಿ ಬಾಣಪ್ರಯೋಗದವರೆಗಿನ ಕ್ರಿಯೆಗಳನ್ನೂ ಆಯಾ ವರಸೆಗೆ ಬೇಕಾದ ನಡಿಗೆಗಳೊಡನೆ ಪ್ರದರ್ಶಿಸುತ್ತಿದ್ದರು. ಕೆಲವು ಯೋಧರು ಸಣ್ಣ-ಪುಟ್ಟ ಘಂಟೆಗಳಿಂದ ಕೂಡಿದ್ದ, ಚಂದನದಿಂದ ಲೇಪಿತವಾಗಿದ್ದ, ಸುವರ್ಣದಿಂದಲೂ–ವಜ್ರದಿಂದಲೂ ಸಮಲಂಕೃತವಾಗಿದ್ದ ಗದೆಗಳನ್ನು ಮೇಲಕ್ಕೆತ್ತಿ 'ಅರ್ಜುನನೆಲ್ಲಿ?'–ಎಂದು ಗರ್ಜಿಸುತ್ತಿದ್ದರು. ನೀಳವಾದ ಮತ್ತು ಸುಂದರವಾದ ತೋಳುಗಳನ್ನು ಹೊಂದಿದ್ದ, ಬಲಮದದಿಂದ ಉನ್ಮತ್ತರಾಗಿದ್ದ ಇತರ ಕೆಲವು ಯೋಧರು ಮೇಲಕ್ಕೆ ಹಾರಿಸಲ್ಪಟ್ಟ ಇಂದ್ರಧ್ವಜಗಳಂತೆಯೇ ಇದ್ದ ಪರಿಘಾಯುಧಗಳಿಂದ ಆಕಾಶವನ್ನೇ ಸಂಪೂರ್ಣವಾಗಿ ಮುಚ್ಚಿಬಿಟ್ಟರು. ಯುದ್ಧಮಾಡುವುದರಲ್ಲಿಯೇ ನೆಟ್ಟಮನಸ್ಸಿನಿಂದ ಕೂಡಿದ್ದ ಇತರ ಕೆಲವು ಶೂರರು ವಿಚಿತ್ರವಾದ ಮಾಲೆಗಳನ್ನು ಧರಿಸಿ ನಾನಾವಿಧವಾದ ಆಯುಧಗಳನ್ನು ಹಿಡಿದು ಸಜ್ಜಾಗಿ ನಿಂತಿದ್ದರು.

'ಅರ್ಜುನನೆಲ್ಲಿ?' 'ಆ ಗೋವಿಂದನೆಲ್ಲಿ?' 'ಮಾನಿಯಾದ ವೃಕೋದರನೆಲ್ಲಿ?' 'ಆ ಪಾಂಡವರ ಸುಹೃದರೆಲ್ಲಿದ್ದಾರೆ?' 'ಯಾರು ಬೇಕಾದರೂ ನಮ್ಮೊಡನೆ ಯುದ್ಧಕ್ಕೆ ಬರಲಿ ' ಎಂದು ಕೌರವಯೋಧರು ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದರು. ಬಳಿಕ ದ್ರೋಣರು ಶಂಖವನ್ನೂದಿ ರಥದ ಕುದುರೆಗಳನ್ನೂ ತಾವೇ ನಿಯಂತ್ರಿಸುತ್ತಾ, ವ್ಯೂಹಕ್ರಮದಲ್ಲಿ ಸೈನಿಕರನ್ನು

ನಿಲ್ಲಿಸುತ್ತಾ, ಅತ್ತಲಿತ್ತ ವೇಗವಾಗಿ ಸಂಚರಿಸುತ್ತಿದ್ದರು. ಯುದ್ಧಮಾಡುವುದ ರಲ್ಲಿಯೇ ಆನಂದವನ್ನು ಹೊಂದುವವರಾಗಿದ್ದ ಎಲ್ಲ ಸೈನಿಕರೂ ವ್ಯೂಹಕ್ರಮ ದಲ್ಲಿ ಸುಸ್ಥಿತರಾದನಂತರ ದ್ರೋಣರು ಜಯದ್ರಥನೊಡನೆ ಹೇಳಿದರು:

"ಸೈಂಧವ! ನೀನು, ಭೂರಿಶ್ರವಸ, ಮಹಾರಥಿಯಾದ ಕರ್ಣ, ಅಶ್ವತ್ಥಾಮಾ, ಶಲ್ಯ, ವೃಷಸೇನ ಮತ್ತು ಕೃಪರು–ಒಂದು ಲಕ್ಷ ಕುದುರೆಸವಾರರನ್ನೂ, ಅರುವತ್ತು ಸಾವಿರ ರಥಗಳನ್ನೂ, ಮದೋದಕವನ್ನು ಸುರಿಸುತ್ತಿರುವ ಹದಿನಾಲ್ಕು ಸಾವಿರ ಆನೆಗಳನ್ನೂ, ಕವಚಧಾರಿಗಳಾದ ಇಪ್ಪತ್ತೊಂದು ಸಾವಿರ ಪದಾತಿಗಳನ್ನೂ ಜೊತೆಯಲ್ಲಿ ಕರೆದುಕೊಂಡು ನನ್ನಿಂದ ಮೂರು *ಗವ್ಯೂತಿಗಳಷ್ಟು ದೂರಕ್ಕೆ ಹೋಗಿ ನಿಲ್ಲಿರಿ. ಅಲ್ಲಿ ನೀನಿರುವಾಗ ಇಂದ್ರನೇ ಆದಿಯಾಗಿ ಎಲ್ಲ ದೇವತೆಗಳೂ ನಿನ್ನ ಎದುರಾಗಿ ನಿಂತು ಯುದ್ಧಮಾಡಲಾರರು. ಹೀಗಿರುವಾಗ ಆ ಪಾಂಡವರೆಲ್ಲರೂ ಒಟ್ಟಾಗಿ ಬಂದರೂ ನಿನ್ನನ್ನು ಎದುರಿಸಿ ನಿಂತು ಯುದ್ಧಮಾಡಲು ಹೇಗೆ ಸಾಧ್ಯವಾದೀತು? ಆದುದರಿಂದ ನೀನು ಸಮಾಧಾನ ಹೊಂದು."

ದ್ರೋಣರು ಹೀಗೆಂದ ಬಳಿಕ ಸಿಂಧುರಾಜನಾದ ಜಯದ್ರಥನು ಸಮಾಧಾನಗೊಂಡು ಗಾಂಧಾರವೀರರೊಡನೆ ಆ ಮಹಾರಥರಿಂದ ಪರಿವೃತನಾಗಿ ದ್ರೋಣರು ನಿರ್ದೇಶಿಸಿದ ಸ್ಥಳಕ್ಕೆ ಹೊರಟುಹೋದನು. ಅವನನ್ನು ಅನುಸರಿಸಿ ಕವಚಧಾರಿಗಳಾಗಿದ್ದ, ಪ್ರಯತ್ನಶೀಲರಾದ ಕುದುರೆ ಸವಾರರು ಪ್ರಾಸಾಯುಧಗಳನ್ನು ಹಿಡಿದು ಹೊರಟರು. ಜಯದ್ರಥನ ಕುದುರೆಗಳು ಒಳ್ಳೆಯ ವಾಹನಗಳಾಗಿದ್ದುವು. ಚಾಮರಗಳಿಂದ ಅಲಂಕೃತ ವಾಗಿದ್ದುವು. ಸುವರ್ಣಮಯವಾದ ಆಭರಣಗಳಿಂದ ಭೂಷಿತವಾಗಿದ್ದುವು. ಸಿಂಧೂದೇಶದ ಆ ಕುದುರೆಗಳ ಸಂಖ್ಯೆ ಹತ್ತು ಸಾವಿರವಿದ್ದಿತು. ಭಯಂಕರ ವಾದ ಆಕಾರಗಳನ್ನು ಹೊಂದಿದ್ದ, ಕವಚಗಳನ್ನು ಧರಿಸಿದ್ದ, ಭಯಂಕರವಾದ ರೀತಿಯಲ್ಲಿ ವಿಧ್ವಂಸನಕಾರ್ಯವನ್ನು ಮಾಡುವ ಸಾಮರ್ಥ್ಯವನ್ನು ಹೊಂದಿದ್ದ ಮದಿಸಿದ ಆನೆಗಳಿದ್ದುವು. ಅವುಗಳ ಮೇಲೆ ಯುದ್ಧವಿಶಾರದ

* **ಗವ್ಯೂತಿಃ** =ನಾಲ್ಕು ಮೊಳಗಳ ಪ್ರಮಾಣ ಒಂದು ಧನುಸ್ಸು. ಒಂದು ಸಾವಿರ ಧನುಸ್ಸುಗಳಷ್ಟು ದೂರವು ಒಂದು ಕ್ರೋಶ. ಎರಡು ಕ್ರೋಶಗಳು= ಒಂದು ಗವ್ಯೂತಿ ಅಥವಾ ಗಾವುದ.

ರಾದ ಗಜಾರೋಹಿಗಳು ಉಪಸ್ಥಿತರಾಗಿದ್ದರು. ಅಂತಹ ಸಾವಿರದ ಐನೂರು ಗಜಸೈನ್ಯದೊಡನೆ ನಿನ್ನ ಮಗನಾದ ದುರ್ಮರ್ಷಣನು ಎಲ್ಲ ಸೈನ್ಯಗಳ ಅಗ್ರಭಾಗದಲ್ಲಿ ಯುದ್ಧಸನ್ನದ್ಧನಾಗಿ ನಿಂತಿದ್ದನು. ಅನಂತರ ನಿನ್ನ ಮಕ್ಕಳಾದ ದುಃಶಾಸನ-ವಿಕರ್ಣರು ಸಿಂಧುರಾಜನ ಅಭೀಷ್ಟಸಿದ್ಧಿಗಾಗಿ (ಅವನ ರಕ್ಷಣೆ ಗಾಗಿ) ಸೇನೆಯ ಅಗ್ರಭಾಗದಲ್ಲಿ ನಿಂತಿದ್ದರು. ಭಾರದ್ವಾಜರು ರಚಿಸಿದ್ದ ಚಕ್ರಗರ್ಭಶಕಟವ್ಯೂಹವು ಹನ್ನೆರಡು ಗವ್ಯೂತಿಗಳಷ್ಟು ಉದ್ದವಾಗಿದ್ದಿತು. ಹಿಂದಿನ ಅರ್ಧಭಾಗವು ಐದು ಗವ್ಯೂತಿಗಳಷ್ಟು ವಿಸ್ತಾರವಾಗಿದ್ದಿತು. ವೀರರಾದ ಅನೇಕದೇಶಗಳ ರಾಜರೂ, ಗಜಾಶ್ವ-ಪತ್ತಿ-ರಥಸಮೂಹಗಳೂ ದ್ರೋಣರ ನಿರ್ದೇಶನದಂತೆ ಅಲ್ಲಿ ವ್ಯವಸ್ಥಿತವಾಗಿ ನಿಂತಿದ್ದುವು. ಆ ವ್ಯೂಹ ವನ್ನು ದ್ರೋಣರೇ ಸ್ವತಃ ರಚಿಸಿದ್ದರು. ಚಕ್ರಶಕಟವ್ಯೂಹದ ಹಿಂಭಾಗದಲ್ಲಿ ಪದ್ಮ ಎಂಬ ಹೆಸರಿನ ದುರ್ಭೇದ್ಯವಾದ ಗರ್ಭವ್ಯೂಹವು ರಚಿತವಾಗಿದ್ದಿತು. ಆ ಪದ್ಮವ್ಯೂಹದ ಮಧ್ಯಭಾಗದಲ್ಲಿ ಸೂಚೀ ಎಂಬ ಹೆಸರಿನ ಅತ್ಯಂತನಿಗೂಢವಾದ ಮತ್ತೊಂದು ವ್ಯೂಹವನ್ನು ದ್ರೋಣರು ರಚಿಸಿದ್ದರು. ಈ ರೀತಿಯಲ್ಲಿ ಮಹಾವ್ಯೂಹವೊಂದನ್ನು ರಚಿಸಿ ದ್ರೋಣರು ಯುದ್ಧಸನ್ನದ್ಧ ರಾಗಿ ನಿಂತಿದ್ದರು. ಸೂಚೀಮುಖದಲ್ಲಿ ಮಹಾಧನುಷ್ಮಂತನಾದ ಕೃತವರ್ಮನು ನಿಂತಿದ್ದನು. ಕೃತವರ್ಮನ ಹಿಂಬದಿಯಲ್ಲಿ ಕಾಂಬೋಜರಾಜ ಮತ್ತು ಜಲಸಂಧರು ನಿಂತಿದ್ದರು. ಅವರ ಹಿಂದುಗಡೆ ದುರ್ಯೋಧನ-ಕರ್ಣರು ವ್ಯವಸ್ಥಿತರಾಗಿದ್ದರು. ಅನಂತರ ಯುದ್ಧದಲ್ಲಿ ಹಿಮ್ಮೆಟ್ಟದಿರುವ ಒಂದು ಲಕ್ಷಯೋಧರು ನಿಂತಿದ್ದರು. ಅವರೆಲ್ಲರೂ ಶಕಟವ್ಯೂಹದ ಅಗ್ರಭಾಗವನ್ನು ರಕ್ಷಿಸುವ ಸಲುವಾಗಿಯೇ ದ್ರೋಣರಿಂದ ನಿಯುಕ್ತರಾಗಿದ್ದರು. ಅವರ ಹಿಂದೆ ವಿಶಾಲವಾದ ಸೇನೆಯೊಡನೆ ಸೂಚೀವ್ಯೂಹದ ಪಾರ್ಶ್ವಭಾಗದಲ್ಲಿ ಜಯದ್ರಥ ರಾಜನು ನಿಂತಿದ್ದನು. ಶಕಟವ್ಯೂಹದ ಮುಖಭಾಗದಲ್ಲಿ ಭಾರದ್ವಾಜರು ನಿಂತಿದ್ದರು. ಅವರ ಹಿಂದೆ ಭೋಜನು ನಿಂತಿದ್ದನು. ವ್ಯೂಹದ ರಕ್ಷಣಾಭಾರ ವನ್ನು ದ್ರೋಣರೇ ವಹಿಸಿಕೊಂಡರು. ಬಿಳಿಯದಾದ ಕವಚವನ್ನೂ, ವಸ್ತ್ರವನ್ನೂ ಮತ್ತು ಉಷ್ಣೀಷವನ್ನೂ (ರುಮಾಲನ್ನೂ) ಧರಿಸಿದ್ದ, ವಿಶಾಲವಾದ ವಕ್ಷಃಸ್ಥಳದಿಂದ ಕೂಡಿದ್ದ, ಮಹಾಭುಜರಾದ ದ್ರೋಣರು ಧನುಸ್ಸನ್ನು ಟೇಂಕರಿಸುತ್ತಾ, ಕೋಪಗೊಂಡ ಅಂತಕನೋಪಾದಿಯಲ್ಲಿ-ಶಕಟವ್ಯೂಹದ

ಮುಖಭಾಗದಲ್ಲಿ ನಿಂತಿದ್ದರು. ವೇದಿಯಿಂದ ಯುಕ್ತವಾದ ಕೃಷ್ಣಾಜಿನವನ್ನು ಲಾಂಛನವನ್ನಾಗಿ ಹೊಂದಿದ್ದ ಧ್ವಜದಿಂದ ಯುಕ್ತವಾಗಿದ್ದ, ಪತಾಕೆಗಳಿಂದ ಸಮಲಂಕೃತವಾಗಿದ್ದ, ಕೆಂಪು ಕುದುರೆಗಳಿಂದ ಯುಕ್ತವಾಗಿದ್ದ ದ್ರೋಣರ ರಥವನ್ನು ನೋಡಿ ಕುರುಗಳೆಲ್ಲರೂ ಆನಂದಿತರಾದರು. ದ್ರೋಣರು ರಚಿಸಿದ್ದ ಕ್ಷೋಭೆಗೊಂಡ ಸಮುದ್ರದೋಪಾದಿಯಲ್ಲಿದ್ದ ವ್ಯೂಹವನ್ನು ನೋಡಿ ಸಿದ್ಧ-ಚಾರಣಸಮೂಹಗಳೂ ಬಹಳವಾಗಿ ವಿಸ್ಮಯಗೊಂಡುವು. ಅದ್ಭುತವಾದ ವ್ಯೂಹವು ಪರ್ವತ-ಸಮುದ್ರಗಳಿಂದಲೂ, ಅನೇಕಾನೇಕ ದೇಶಗಳಿಂದಲೂ ಸಮಾವೃತವಾಗಿರುವ ಈ ಪೃಥಿವಿಯನ್ನೇ ನುಂಗಿಬಿಡಬಹುದೆಂದು ಎಲ್ಲ ಪ್ರಾಣಿಗಳೂ ಭಾವಿಸಿದುವು. ಬಹುಸಂಖ್ಯಾತ ರಥಗಳಿಂದಲೂ, ಮನುಷ್ಯರಿಂದಲೂ, ಅಶ್ವ-ಗಜ-ಪದಾತಿಸೈನ್ಯಗಳಿಂದಲೂ ಪರಿಪೂರ್ಣವಾಗಿದ್ದ, ಭಯಂಕರವಾದ ಕೋಲಾಹಲದಿಂದ ಕೂಡಿದ್ದ, ಶತ್ರುಗಳ ಹೃದಯವನ್ನು ಭೇದಿಸುವುದರಲ್ಲಿ ಸಮರ್ಥವಾಗಿದ್ದ, ಅದ್ಭುತವಾಗಿಯೂ ಮತ್ತು ಸಮಯಕ್ಕೆ ತಕ್ಕುದಾಗಿಯೂ ಇದ್ದ ಚಕ್ರಶಕಟವ್ಯೂಹವನ್ನು ನೋಡಿ ದುರ್ಯೋಧನನು ಆನಂದಿಸಿದನು."

೮೭ನೆಯ ಅಧ್ಯಾಯವು ಮುಗಿಯಿತು.

೮೮ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕೌರವರ ಸೈನ್ಯಕ್ಕಾದ ಅಪಶಕುನ: ದುರ್ಮರ್ಷಣನು ಅರ್ಜುನನೊಡನೆ ಯುದ್ಧಮಾಡಲು ಉತ್ಸಾಹಿತನಾಗಿ ಮುಂದೆಬಂದುದು: ಅರ್ಜುನನ ರಣಭೂಮಿಪ್ರವೇಶ

ಸಂಜಯನು ಯುದ್ಧಸಿದ್ಧತೆಯ ವಾರ್ತೆಯನ್ನು ಮುಂದುವರಿಸುತ್ತಾನೆ:

"ಮಹಾರಾಜ! ನಾನು ವಿವರಿಸಿದ ರೀತಿಯಲ್ಲಿ ಕೌರವವ್ಯೂಹದ ರಚನೆ ಯಾಯಿತು. ಯುದ್ಧಮಾಡಲು ಉತ್ಸಾಹಿಗಳಾಗಿದ್ದ ಕೌರವಸೈನಿಕರು ಜಯ ಘೋಷಗಳನ್ನು ಕೂಗುತ್ತಿದ್ದರು. ಭೇರೀ-ಮೃದಂಗಗಳನ್ನು ಬಾರಿಸುತ್ತಿದ್ದರು. ಸೈನಿಕರ ಸಿಂಹಗರ್ಜನೆಗಳೊಡನೆ ರಣವಾದ್ಯಗಳು ಮೊಳಗುತ್ತಿದ್ದುವು. ಯುದ್ಧೇಚ್ಛುಗಳಾದ ಕೌರವವೀರರು ಕವಚಗಳನ್ನು ಧರಿಸಿ ಕ್ರಮ- ಕ್ರಮ ವಾಗಿ ಯುದ್ಧದಲ್ಲಿ ತೊಡಗುತ್ತಿದ್ದರು. ರೌದ್ರಮುಹೂರ್ತವು ಬಂದನಂತರ

ಅರ್ಜುನನು ಕೌರವರಿಗೆ ರಣರಂಗದಲ್ಲಿ ಕಾಣಿಸಿಕೊಂಡನು. ಅರ್ಜುನನ ಮುಂಭಾಗದಲ್ಲಿ ಅನೇಕ ಸಾವಿರ ಹೆಣ್ಣು ಮತ್ತು ಗಂಡು ಕಾಗೆಗಳು ಆಟವಾಡುತ್ತಿದ್ದುವು.

ಅರ್ಜುನನನ್ನು ಕಂಡೊಡನೆಯೇ ನಾವು ಮುಂದೆ-ಮುಂದೆ ಹೋಗತೊಡಗಿದೆವು. ಆ ಸಮಯದಲ್ಲಿ ಭಯಂಕರವಾದ ಶಬ್ದವನ್ನುಂಟು ಮಾಡುವ ಮೃಗಗಳೂ, ದರ್ಶನಮಾತ್ರದಿಂದಲೇ ಅಶುಭವನ್ನು ಸೂಚಿಸುವ ನರಿಗಳೂ ನಮ್ಮ ಬಲಭಾಗದಲ್ಲಿ ನಿಂತು ಕೋಲಾಹಲಶಬ್ದವನ್ನು ಮಾಡಿದುವು. ಘೋರವಾದ ಭಯವು ಸನ್ನಿಹಿತವಾಗಿರುವುದನ್ನು ಸೂಚಿಸಲು ಭಯಂಕರವಾದ ಶಬ್ದಗಳೊಡನೆ ಸಾವಿರಾರು ಉಲ್ಕೆಗಳು ಪ್ರಜ್ವಲಿಸುತ್ತಾ ಭೂಮಿಯ ಮೇಲೆ ಬೀಳುತ್ತಿದ್ದುವು. ಭೂಮಿಯು ಸರ್ವತ್ರ ಕಂಪಿಸಿತು. ಅರ್ಜುನನು ರಣಾಂಗಣಕ್ಕೆ ಬಂದು ಯುದ್ಧಕ್ಕೆ ಸಿದ್ಧನಾಗಲಾಗಿ, ಮಳಲನ್ನೇ (ಸಣ್ಣ ಕಲ್ಲುಗಳನ್ನೇ) ಹೊತ್ತು ಸರ್ವತ್ರ ಸುರಿಸುತ್ತಿದ್ದ, ಕ್ರೂರವಾದ, ಭೋರ್ಗರೆಯುವ ಶಬ್ದದಿಂದ ಕೂಡಿದ ಚಂಡಮಾರುತವು ಬೀಸತೊಡಗಿತು. ಪ್ರಾಜ್ಞನಾದ, ನಕುಲನ ಮಗನಾದ ಶತಾನೀಕನೂ ಮತ್ತು ದ್ರುಪದನ ಮಗನಾದ ಧೃಷ್ಟದ್ಯುಮ್ನನೂ ಪಾಂಡವರ ಸೈನ್ಯವನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿದರು.

ಅನಂತರ ದುರ್ಮರ್ಷಣನು ಒಂದು ಸಾವಿರ ರಥಿಗಳೊಡನೆಯೂ, ನೂರು ಆನೆಗಳೊಡನೆಯೂ, ಮೂರು ಸಾವಿರ ಕುದುರೆಗಳೊಡನೆಯೂ, ಹತ್ತು ಸಾವಿರ ಪದಾತಿಗಳೊಡನೆಯೂ ಬಂದು, ಅರ್ಜುನನಿಂದ ಒಂದು ಸಾವಿರದ ಐದುನೂರು ಧನುಸ್ಸುಗಳ ಪ್ರಮಾಣದಷ್ಟು ದೂರದಲ್ಲಿ ($1\frac{1}{2}$ ಕ್ರೋಶ) ಎಲ್ಲ ಸೈನಿಕರ ಅಗ್ರಭಾಗದಲ್ಲಿ ನಿಂತು ಹೇಳಿದನು:

"ಯುದ್ಧದುರ್ಮದನಾದ, ಶತ್ರುತಾಪಕನಾದ, ಗಾಂಡೀವಿಯನ್ನು-ತೀರಪ್ರದೇಶವು ಉಕ್ಕಿಬರುವ ಸಮುದ್ರವನ್ನು ತಡೆದು ನಿಲ್ಲಿಸುವಂತೆ–ನಾನು ತಡೆದು ನಿಲ್ಲಿಸುತ್ತೇನೆ. ಕಲ್ಲಿನ ಒಂದು ರಾಶಿಗೂ ಮತ್ತೊಂದು ರಾಶಿಗೂ ಆಗುವ ಘರ್ಷಣೆಯಂತೆ–ಇಂದಿನ ಸಂಗ್ರಾಮದಲ್ಲಿ ನನಗೂ ಮತ್ತು ದುರ್ಧರ್ಷನಾದ, ಅಸಹನಶೀಲನಾದ ಧನಂಜಯನಿಗೂ ಆಗುವ ಸಂಘರ್ಷವನ್ನು ಎಲ್ಲರೂ

ನೋಡಲಿ. ಯುದ್ಧಮಾಡಬೇಕೆಂಬ ಇಚ್ಛೆಯಿಂದಿರುವ ರಥಿಗಳೇ! ನೀವು ಸ್ವಲ್ಪಕಾಲದವರೆಗೆ ಯುದ್ಧದ ಪ್ರೇಕ್ಷಕರಾಗಿರಿ. ಸಂಘಟಿತರಾಗಿ ನನ್ನ ಮೇಲೆ ಬೀಳಲು ಬರುವ ಶತ್ರುಗಳೊಡನೆ ಕುರುವಂಶದ ಯಶಸ್ಸನ್ನೂ ಮತ್ತು ಮರ್ಯಾದೆಯನ್ನೂ ವರ್ಧಿಸುತ್ತಾ ನಾನೊಬ್ಬನೇ ಯುದ್ಧಮಾಡುತ್ತೇನೆ."

ಮಹಾರಾಜ! ಮಹಾತ್ಮನಾದ, ಮಹಾಮತಿಯಾದ, ಮಹಾಧನುಷ್ಮಂತನಾದ ದುರ್ಮರ್ಷಣನು ಹೀಗೆ ಹೇಳುತ್ತಾ ಮಹಾಧನುಷ್ಮಂತರಾದ ತನ್ನ ಕಡೆಯ ಯೋಧರಿಂದ ಪರಿವೃತನಾಗಿ, ಯುದ್ಧಮಾಡಲು ಸಿದ್ಧನಾಗಿ ನಿಂತಿದ್ದನು.

ಗಾಂಡೀವಧನುಸ್ಸನ್ನು ಟೇಂಕರಿಸುತ್ತಾ ನಾರಾಯಣನೊಡನೆ ರಥದಲ್ಲಿ ಕುಳಿತಿದ್ದ ಅರ್ಜುನನು–ಆಗ ತಾನೇ ಉದಯಿಸಿದ ಸೂರ್ಯನಂತೆ–ಪ್ರಕಾಶಿಸುತ್ತಿದ್ದನು. ಆ ಸಮಯದಲ್ಲಿ ಅರ್ಜುನನು ಕ್ರುದ್ಧನಾದ ಅಂತಕನಂತೆಯೇ ಕಾಣುತ್ತಿದ್ದನು. ವಜ್ರಪಾಣಿಯಾದ ಇಂದ್ರನಂತೆಯೂ–ದಂಡಪಾಣಿಯಾದ, ಕಾಲಚೋದಿತನಾದ, ಸಹಿಸಲಶಕ್ಯನಾದ ಮೃತ್ಯುದೇವತೆಯಂತೆಯೂ ಕಾಣುತ್ತಿದ್ದನು. ಕ್ಷೋಭೆಗೊಳಿಸಲು ಅಶಕ್ಯನಾದ ಶೂಲಪಾಣಿಯಂತೆಯೂ–ಪಾಶಹಸ್ತನಾದ ವರುಣನಂತೆಯೂ ಕಾಣುತ್ತಿದ್ದನು. ಪುನಃ ಸಮಸ್ತಪ್ರಜೆಗಳನ್ನೂ ಭಸ್ಮಮಾಡುವ ಇಚ್ಛೆಯಿಂದ ಹೊರಟಿರುವ ಮಹಾಜ್ವಾಲೆಗಳಿಂದ ಕೂಡಿದ ಪ್ರಳಯಾಗ್ನಿಯಂತೆಯೇ ಕಾಣುತ್ತಿದ್ದನು. ಕ್ರೋಧ, ಅಸಹನೆ ಮತ್ತು ಬಲಗಳಿಂದ ಚೋದಿತನಾಗಿ ಮುಂದೆ-ಮುಂದೆ ಹೋಗುತ್ತಿದ್ದನು. ನಿವಾತಕವಚರೆಂಬ ರಾಕ್ಷಸರನ್ನು ಸಂಹರಿಸಿದ್ದ ಅರ್ಜುನನು ತನ್ನ ಹೆಸರಾದ 'ಜಯ' ಎಂಬುದಕ್ಕೆ ಅನ್ವರ್ಥವಾಗಿ ಎಲ್ಲೆಡೆಗಳಲ್ಲಿಯೂ ವಿಜಯವನ್ನೇ ಗಳಿಸುತ್ತಿದ್ದನು. ಸತ್ಯದಲ್ಲಿಯೇ ಪ್ರತಿಷ್ಠಿತನಾಗಿದ್ದು, ತನ್ನ ಮಹಾಪ್ರತಿಜ್ಞೆಯನ್ನು ಪೂರ್ಣಗೊಳಿಸುವ ಇಚ್ಛೆಯಿಂದ ಹೊರಟಿದ್ದನು. ಕವಚವನ್ನು ಧರಿಸಿ ಸೊಂಟಕ್ಕೆ ಕತ್ತಿಯನ್ನು ಬಿಗಿದಿದ್ದನು. ಸುವರ್ಣಮಯವಾದ ಕಿರೀಟವನ್ನು ಧರಿಸಿದ್ದನು. ಶುಭ್ರವಾದ ಮಾಲೆಯನ್ನೂ-ವಸ್ತ್ರಗಳನ್ನೂ ಧರಿಸಿದ್ದನು. ಸುಮನೋಹರವಾದ ಕರ್ಣಕುಂಡಲಗಳನ್ನು ಧರಿಸಿದ್ದನು. ಅಂತಹ ಪ್ರತಾಪಿಯಾದ ಅರ್ಜುನನು ತನ್ನ ಮುಂದೆ ನಿಂತಿದ್ದ ವಿಶಾಲವಾದ ಶತ್ರುಸೇನೆಯ ಸಮ್ಮುಖದಲ್ಲಿ ಎಷ್ಟು ದೂರದಲ್ಲಿ ನಿಂತಿದ್ದರೆ ಬಾಣಗಳನ್ನು

ಬಿಡಲು ಸಾಧ್ಯವಾಗುವುದೋ ಅಷ್ಟು ದೂರದಲ್ಲಿ ರಥವನ್ನು ನಿಲ್ಲಿಸಿ ತನ್ನ ದೇವದತ್ತಶಂಖವನ್ನು ಗಟ್ಟಿಯಾಗಿ ಊದಿದನು. ಆ ಸಮಯದಲ್ಲಿ ಶ್ರೀಕೃಷ್ಣನೂ ಸಹ ಅಪ್ರಮತ್ತನಾಗಿ ಪಾರ್ಥನೊಡನೆಯೇ ತನ್ನ ಶ್ರೇಷ್ಠವಾದ ಪಾಂಚಜನ್ಯ ಶಂಖವನ್ನೂ ಬಲಪೂರ್ವಕವಾಗಿ ಊದಿದನು. ಮಹಾರಾಜ! ಆ ಇಬ್ಬರು ಮಹಾತ್ಮರೂ ಒಟ್ಟಾಗಿಯೇ ಸೇರಿ ತಮ್ಮ ತಮ್ಮ ಶಂಖಗಳನ್ನು ಊದುತ್ತಲೇ



ನಿನ್ನ ಸೈನಿಕರು ರೋಮಾಂಚಿತರಾದರು. ಎಷ್ಟೋ ಸೈನಿಕರು ತರ-ತರನೆ ನಡುಗಿದರು. ಮತ್ತೆ ಕೆಲವರು ಮೂರ್ಛಿತರಾದರು. ಎಲ್ಲ ಪ್ರಾಣಿಗಳೂ ಸಿಡಿಲಿನ ಧ್ವನಿಯಿಂದ ಹೇಗೆ ಭಯಪಡುತ್ತವೆಯೋ ಅದೇ ರೀತಿಯಲ್ಲಿ ಕೃಷ್ಣಾರ್ಜುನರ ಶಂಖಗಳ ನಿನಾದದಿಂದ ನಿನ್ನ ಸೈನಿಕರು ಭಯಪಟ್ಟರು. ಸೈನ್ಯದಲ್ಲಿದ್ದ ಆನೆ-ಕುದುರೆಗಳು ಭಯಗೊಂಡು ಮಲ-ಮೂತ್ರಗಳನ್ನು

ವಿಸರ್ಜನೆಮಾಡಿದುವು. ಈ ರೀತಿಯಲ್ಲಿ ವಾಹನಗಳಿಂದ (ಆನೆ-ಕುದುರೆ ಗಳಿಂದ) ಸಮೇತವಾದ ಸಮಸ್ತಸೈನ್ಯವೇ ಭಯದಿಂದ ಉದ್ವಿಗ್ನವಾಯಿತು. ಮಾರಿಷ! ಕೃಷ್ಣಾರ್ಜುನರ ಶಂಖಗಳ ಧ್ವನಿಯನ್ನು ಕೇಳಿದ ನಿನ್ನ ಕಡೆಯ ಎಲ್ಲ ಮನುಷ್ಯರೂ ಮನೋದೌರ್ಬಲ್ಯವನ್ನು ಹೊಂದಿದರು. ಕೆಲವು ಯೋಧರು ಪ್ರಜ್ಞೆತಪ್ಪಿದರು. ಕೆಲವರು ಭಯದಿಂದ ನಡುಗತೊಡಗಿದರು. ಅರ್ಜುನನ ಧ್ವಜವನ್ನೇ ನಿವಾಸವನ್ನಾಗಿ ಮಾಡಿಕೊಂಡಿದ್ದ, ಭೂತಗಳೊಡನೆ ಧ್ವಜಸ್ಥ ನಾಗಿದ್ದ ಹನುಮಂತನು ಬಾಯನ್ನು ಆಗಲವಾಗಿ ತೆರೆದುಕೊಂಡು ಶಂಖಗಳ ಘೋರಧ್ವನಿಯಿಂದ ಮೊದಲೇ ಹೆದರಿದ್ದ ನಿನ್ನ ಸೈನಿಕರನ್ನು ಮತ್ತಷ್ಟು ಭಯಗೊಳಿಸುತ್ತಾ ಗಟ್ಟಿಯಾಗಿ ಗರ್ಜನೆಮಾಡಿದನು. ಆ ಸಮಯದಲ್ಲಿ ಸೈನಿಕರನ್ನು ಉತ್ಸಾಹಗೊಳಿಸುವ ಮತ್ತು ಹರ್ಷಗೊಳಿಸುವ ಸಲುವಾಗಿ ನಿನ್ನ ಕಡೆಯಲ್ಲಿಯೂ ಮೃದಂಗ-ನಗಾರಿಗಳೊಡನೆ ಶಂಖಗಳನ್ನೂ ಊದಿದರು. ಭೇರಿಗಳನ್ನೂ ಬಾರಿಸಿದರು. ನಾನಾಪ್ರಕಾರವಾದ ರಣವಾದ್ಯಗಳ ಧ್ವನಿ ಯಿಂದಲೂ, ಗರ್ಜನ-ತರ್ಜನಗಳಿಂದಲೂ, ಚಪ್ಪಾಳೆಗಳಿಂದಲೂ, ಸಿಂಹ ನಾದಗಳಿಂದಲೂ, ಮಹಾರಥರ ಯುದ್ಧಾಹ್ವಾನದ ಕೂಗುಗಳಿಂದಲೂ ಸಮ್ಮಿಶ್ರವಾಗಿ ಬಹಳ ಭಯಂಕರವಾಗಿ ಕೇಳಿಸುತ್ತಿದ್ದ ಆ ಮಹಾಶಬ್ದವು ಭೀರುಗಳಿಗೆ ಭಯವನ್ನು ಉಂಟುಮಾಡುತ್ತಿದ್ದಿತು. ಆ ಸಮಯದಲ್ಲಿ ಇಂದ್ರನ ಮಗನಾದ ಅರ್ಜುನನು ಬಹಳ ಹೃಷ್ಟನಾಗಿ ಶ್ರೀಕೃಷ್ಣನೊಡನೆ ಹೇಳತೊಡಗಿದನು."

ಎಲನೆಯ ಅಧ್ಯಾಯವು ಮುಗಿಯಿತು.

೮೯ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಅರ್ಜುನನು ದುರ್ಮರ್ಷಣನ ಗಜಸೈನ್ಯವನ್ನು ಸಂಹರಿಸಿದುದು: ಕೌರವಸೈನ್ಯದ ಪಲಾಯನ

**ಚೋದಯಾಶ್ವಾನ್ ಹೃಷೀಕೇಶ ಯತ್ರ ದುರ್ಮರ್ಷಣಃ ಸ್ಥಿತಃ।**
**ಏತದ್ಭಿತ್ತ್ವಾ ಗಜಾನೀಕಂ ಪ್ರವೇಕ್ಷ್ಯಾಮ್ಯರಿವಾಹಿನೀಮ್ ॥೧॥**

"ಹೃಷೀಕೇಶ! ದುರ್ಮರ್ಷಣನು ಎಲ್ಲಿರುವನೋ ಅಲ್ಲಿಗೇ ಕುದುರೆಗಳನ್ನು ಓಡಿಸು. ಮೊದಲು ದುರ್ಮರ್ಷಣನ ಗಜಸೈನ್ಯವನ್ನು ಭೇದಿಸಿ ಅನಂತರ ಶತ್ರುಗಳ ವಿಶಾಲವಾದ ಸೈನ್ಯದೊಳಕ್ಕೆ ನುಗ್ಗುತ್ತೇನೆ."

ಮಹಾರಾಜ! ಅರ್ಜುನನು ಹೀಗೆ ಹೇಳಿದೊಡನೆಯೇ ಶ್ರೀಕೃಷ್ಣನು ದುರ್ಮರ್ಷಣನಿದ್ದೆಡೆಗೆ ಹೋಗುವಂತೆ ಕುದುರೆಗಳನ್ನು ಪ್ರಚೋದಿಸಿದನು. ಆ ಸಮಯದಲ್ಲಿ ಒಬ್ಬನೇ ಒಬ್ಬ ವೀರನಿಗೂ-ಅಸಂಖ್ಯಾತಸೈನಿಕರಿಗೂ ಮಧ್ಯೆ ಭಯಂಕರವಾದ, ಸುದಾರುಣವಾದ ರಥ-ಗಜ-ನರಕ್ಷಯಕರವಾದ ಯುದ್ಧವು ಪ್ರಾರಂಭವಾಯಿತು. ಮಳೆಯನ್ನು ಸುರಿಸುವ ಮೇಘದಂತೆ–ಅರ್ಜುನನು ಬಾಣಗಳ ಮಳೆಗರೆದನು. ಮೋಡಗಳು ಜಲಧಾರೆಗಳಿಂದ ಪರ್ವತಗಳನ್ನು ಮುಚ್ಚಿಬಿಡುವಂತೆ-ಪಾರ್ಥನು ಬಾಣಗಳಿಂದ ಶತ್ರುಗಳನ್ನು ಮುಚ್ಚಿಬಿಟ್ಟನು. ಶೀಘ್ರವೇ ಆ ಎಲ್ಲ ಕೌರವಮಹಾರಥರೂ ಬಾಣಬಿಡುವುದರಲ್ಲಿ ಸಿದ್ಧಹಸ್ತರಾಗಿರುವ ಮನುಷ್ಯರೋಪಾದಿಯಲ್ಲಿ ಬಾಣಗಳ ಮಳೆಗರೆಯುತ್ತಾ ಕೃಷ್ಣಾರ್ಜುನರನ್ನು ಬಹಳ ಶೀಘ್ರವಾಗಿ ಮುಚ್ಚಿಬಿಟ್ಟರು. ಈ ರೀತಿಯಲ್ಲಿ ಶತ್ರುಗಳಿಂದ ತಡೆಹಿಡಿಯಲ್ಪಟ್ಟ ಮಹಾಬಾಹುವಾದ ಅರ್ಜುನನು ಪರಮಕ್ರುದ್ಧನಾಗಿ ರಥಿಗಳ ಶಿರಸ್ಸುಗಳನ್ನು ಅವರ ಶರೀರಗಳಿಂದ ಬಾಣಗಳ ಮೂಲಕ ಪ್ರತ್ಯೇಕಿಸಿಬಿಟ್ಟನು. ಕಳವಳಗೊಂಡ ಕಣ್ಣುಗಳಿಂದ ಕೂಡಿದ್ದ, ಅವುಡುಕಚ್ಚಿದ್ದ ತುಟಿಗಳಿಂದ ಕೂಡಿದ್ದ, ಕರ್ಣಕುಂಡಲಗಳಿಂದಲೂ, ಶಿರಸ್ತ್ರಾಣಗಳಿಂದಲೂ (ಲೋಹದ ಟೋಪಿಗಳಿಂದಲೂ) ಯುಕ್ತವಾಗಿದ್ದ ಸುಂದರ ಮುಖಗಳಿಂದಲೂ ರಣಭೂಮಿಯು ವ್ಯಾಪ್ತವಾಯಿತು. ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಯೋಧರ ಮುಖಗಳು–ನಾಳಗಳನ್ನು ಕತ್ತರಿಸಿ ಕೆಳಕ್ಕೆ ಬೀಳಿಸಲ್ಪಟ್ಟಿದ್ದ ಕಮಲಗಳ ಸಮೂಹದಂತೆಯೇ–ಪ್ರಕಾಶಿಸುತ್ತಿದ್ದುವು. ಸುವರ್ಣಮಯವಾದ ಕವಚಗಳನ್ನು ಧರಿಸಿ ರಕ್ತದಿಂದ ತೋಯ್ದುಹೋಗಿದ್ದ ರಾಜರ ಶರೀರಗಳು ಮಿಂಚಿನಿಂದ ಕೂಡಿದ ಮೇಘಗಳಂತೆಯೇ ಕಾಣುತ್ತಿದ್ದುವು. ಸಕಾಲದಲ್ಲಿ ಪಕ್ವವಾದ ತಾಲಫಲಗಳು (ತಾಟಿನಿಂಗುಗಳು) ಮರದಿಂದ ಕೆಳಕ್ಕೆ ಬಿದ್ದಾಗ ಯಾವ ರೀತಿ ಶಬ್ದವುಂಟಾಗುತ್ತದೆಯೋ-ಅದೇ ರೀತಿ ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟ ವೀರರ ತಲೆಗಳು ಭೂಮಿಯ ಮೇಲೆ ಬಿದ್ದಾಗ ದೊಡ್ಡ ಶಬ್ದವೇ ಆಗುತ್ತಿದ್ದಿತು. ಶಿರಸ್ಸುಗಳು ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದನಂತರ ಉಳಿದ ಸಾವಿರಾರು ಮುಂಡಗಳಲ್ಲಿ ಕೆಲವು ಧನುಸ್ಸುಗಳನ್ನೇ ಊರೆಯಾಗಿ ಹೊಂದಿ ಹಾಗೆಯೇ ನಿಂತಿರುತ್ತಿದ್ದುವು. ಮತ್ತೆ ಕೆಲವು ಕತ್ತಿಯನ್ನು ಒರೆಯಿಂದ ಹೊರಸೆಳೆದು ಹೆಗಲಮೇಲೆ ಇಟ್ಟುಕೊಂಡೇ ನಿಂತಿದ್ದುವು. ಮಹಾರಾಜ!

ಮತ್ತೊಂದು ವೈಚಿತ್ರ್ಯವೆಂದರೆ ಯುದ್ಧದಲ್ಲಿ ಜಯಗಳಿಸಬೇಕೆಂದು ಇಚ್ಛಿಸಿದ್ದ ಅನೇಕ ಪುರುಷರು ಅರ್ಜುನನ ವಿಷಯದಲ್ಲಿ ಅತ್ಯಂತಕುಪಿತರಾಗಿ ತಮ್ಮ ಶಿರಸ್ಸುಗಳು ಹಾರಿಹೋಗಿರುವುದೆಂಬುದನ್ನೂ ಅರಿಯದೆ ಮುನ್ನುಗ್ಗುತ್ತಿದ್ದರು. (ಶಿರಸ್ಸುಗಳು ಕೆಳಕ್ಕೆ ಬಿದ್ದುಹೋಗಿದ್ದರೂ ಮುಂಡಗಳು ಸ್ವಲ್ಪದೂರ ಮುಂದೆ ಹೋಗುತ್ತಲೇ ಇರುತ್ತಿದ್ದುವು.) ಕುದುರೆಗಳ ಶಿರಸ್ಸುಗಳಿಂದಲೂ, ಆನೆಗಳ ಸೊಂಡಿಲುಗಳಿಂದಲೂ, ವೀರರ ಭುಜಗಳಿಂದಲೂ ಮತ್ತು ಶಿರಸ್ಸುಗಳಿಂದಲೂ ರಣಭೂಮಿಯು ವ್ಯಾಪ್ತವಾಗಿದ್ದಿತು.

**ಅಯಂ ಪಾರ್ಥಃ ಕುತಃ ಪಾರ್ಥ ಏಷ ಪಾರ್ಥ ಇತಿ ಪ್ರಭೋ ।**
**ತವ ಸೈನ್ಯೇಷು ಯೋಧಾನಾಂ ಪಾರ್ಥಭೂತಮಿವಾಭವತ್ ॥೧೪॥**

ಮಹಾರಾಜ! ನಿನ್ನ ಸೈನ್ಯದಲ್ಲಿದ್ದ ಸಮಸ್ತಯೋಧರೂ ಸರ್ವತ್ರ ವೀರನಾದ ಅರ್ಜುನನನ್ನೇ ಕಾಣುತ್ತಿದ್ದರು. ಅವರ ದೃಷ್ಟಿಯಲ್ಲಿ ರಣಾಂಗಣವೇ ಪಾರ್ಥಮಯವಾಗಿದ್ದಿತು. ಈ ಕಾರಣದಿಂದಲೇ '**ಅಯಂ ಪಾರ್ಥಃ**' 'ಪಾರ್ಥನು ಇದೋ ಇಲ್ಲಿಯೇ ಇದ್ದಾನೆ'–ಎಂದು ಕೆಲವರು ಕೂಗುತ್ತಿದ್ದರೆ ಮತ್ತೆ ಕೆಲವರು '**ಕುತಃ ಪಾರ್ಥಃ?**' 'ಪಾರ್ಥನೆಲ್ಲಿ? ಬೇಗ ಹೇಳಿರಿ'-ಎಂದು ಕೂಗಿಕೊಳ್ಳುತ್ತಿದ್ದರು. ಇನ್ನೂ ಕೆಲವರು 'ಏಷ ಪಾರ್ಥಃ' 'ಇವನೇ ಪಾರ್ಥನು'–ಎಂದೂ ಹೇಳುತ್ತಿದ್ದರು.

ತಮ್ಮ ಪಕ್ಕದಲ್ಲಿರುವವನನ್ನೇ ಪಾರ್ಥನೆಂದು ಭಾವಿಸಿ ನಮ್ಮ ಪಕ್ಷದ ಸೈನಿಕರೇ ಪರಸ್ಪರವಾಗಿ ಕಾಳಗವಾಡುತ್ತಾ ಒಬ್ಬರು ಮತ್ತೊಬ್ಬರನ್ನು ಸಂಹರಿಸಿ ಪಾರ್ಥನನ್ನು ಸಂಹರಿಸಿದಷ್ಟೇ ಆನಂದಪಡುತ್ತಿದ್ದರು. ಆ ವೇಳೆಗೆ ಮತ್ತೊಬ್ಬನು ಬಂದು ಪಾರ್ಥನನ್ನು ಕೊಂದ ಸಂತೋಷದ ಅಮಲಿನಲ್ಲಿರುವವನನ್ನೇ ಪಾರ್ಥನೆಂದು ಭಾವಿಸಿ ಸಂಹರಿಸುತ್ತಿದ್ದನು. ಕಾಲವಿಮೋಹಿತರಾದ ಅವರು ಪ್ರಪಂಚವೇ ಪಾರ್ಥಮಯವಾಗಿದೆಯೆಂದು ಭಾವಿಸಿದರು. ಏಕೆಂದರೆ ಒಬ್ಬ ಪಾರ್ಥನನ್ನು ಸಂಹರಿಸಿದರೆ ಅವನ ಪಕ್ಕದಲ್ಲಿರುವವನೂ ಅವರಿಗೆ ಪಾರ್ಥನಂತೆಯೇ ಕಾಣುತ್ತಿದ್ದನು.

ರಕ್ತದಿಂದ ತೋಯ್ದುಹೋಗಿ ಬಾಣಪ್ರಹಾರದಿಂದ ಉಂಟಾದ ಗಾಯದಿಂದ ಬಹಳವಾಗಿ ವೇದನೆಪಡುತ್ತಾ ಸಂಜ್ಞೆಯನ್ನು ಕಳೆದುಕೊಂಡು

ಅನೇಕರು ಕೂಗಿಕೊಳ್ಳುತ್ತಿದ್ದರು. ಮತ್ತೆ ಕೆಲವರು ರಣರಂಗದಲ್ಲಿಯೇ ಮಲಗಿ ಮೇಲಕ್ಕೇಳಲು ಕೂಡ ಸಾಧ್ಯವಾಗದೇ ತಮ್ಮ ಬಂಧುಗಳನ್ನು ಕೂಗುತ್ತಾ ತಮ್ಮ ಸಂಕಟವನ್ನು ಹೇಳಿಕೊಳ್ಳುತ್ತಿದ್ದರು. ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟ ಪರಿಘಾಯುಧಸದೃಶವಾಗಿಯೂ ಮತ್ತು ಮಹಾಸರ್ಪಗಳಂತೆಯೂ ದಪ್ಪವಾಗಿಯೂ ನೀಳವಾಗಿಯೂ ಇದ್ದ ಭಿಂದಿಪಾಲ, ಪ್ರಾಸ, ಶಕ್ತ್ಯಾಯುಧ, ಋಷ್ಟಿ, ಗಂಡುಗೊಡಲಿ, ನಿರ್ವ್ಯೂಹ, ಖಡ್ಗ, ಧನುಸ್ಸು, ತೋಮರ, ಬಾಣ, ಕವಚ, ಆಭರಣ, ಗದೆ, ಭುಜಕೀರ್ತಿ-ಇವೇ ಮೊದಲಾದುವುಗಳನ್ನು ಹೊಂದಿದ್ದ ತೋಳುಗಳು ಆವೇಶಯುಕ್ತವಾಗಿ ವೇಗವನ್ನು ಪ್ರಕಟಿಸುತ್ತಾ ಮೇಲಕ್ಕೆ ಹಾರುತ್ತಿದ್ದುವು. ಕೆಲವು ನೆಲದಲ್ಲಿಯೇ ಚಡಪಡಿಸುತ್ತಿದ್ದುವು. ಮತ್ತೆ ಕೆಲವು ತೋಳುಗಳು ತಮ್ಮ ಕೈಯಲ್ಲಿದ್ದ ಆಯುಧಗಳಿಂದಲೇ ಭೂಮಿಯನ್ನು ಕುಕ್ಕುತ್ತಿದ್ದುವು. ಇಂತಹ ದೃಶ್ಯಗಳು ರಣಾಂಗಣದ ಸುತ್ತಲೂ ಕಾಣಿಸುತ್ತಿದ್ದುವು. ಸಮರಾಂಗಣದಲ್ಲಿ ಯಾವನು ಅರ್ಜುನನನ್ನು ಎದುರಿಸಲು ಮುಂದೆ ಹೋಗುತ್ತಿದ್ದನೋ-ಅವನ ಶರೀರದೊಳಕ್ಕೆ ಪ್ರಾಣಾಂತಕವಾದ ಅರ್ಜುನನ ಬಾಣವು ಒಡನೆಯೇ ಪ್ರವೇಶಿಸುತ್ತಿದ್ದಿತು. ಈ ರೀತಿಯಲ್ಲಿ ನಿರಂತರವಾಗಿ ರಥಮಾರ್ಗದಲ್ಲಿ ಸಂಚರಿಸುತ್ತಾ ನೃತ್ಯಮಾಡುವವನಂತೆಯೇ ಧನುಸ್ಸನ್ನು ಒಮ್ಮೆ ಬಲಗೈಯಿಂದಲೂ, ಮತ್ತೊಮ್ಮೆ ಎಡಗೈಯಿಂದಲೂ ಸೆಳೆಯುತ್ತಾ ಇದ್ದ ಪಾರ್ಥನ ಮೇಲೆ ಬಾಣಪ್ರಹಾರವನ್ನು ಮಾಡಲು ನಮ್ಮ ಯೋಧರಿಗೆ ಅಣುಮಾತ್ರವಾದರೂ ಅವಕಾಶವು ಸಿಕ್ಕಲಿಲ್ಲ. ವಿಜಯವನ್ನು ಸಾಧಿಸಬೇಕೆಂದು ಸತತವಾಗಿ ಪ್ರಯತ್ನಿಸುತ್ತಿದ್ದ, ಬಹಳ ವೇಗವಾಗಿ ಬಾಣಗಳನ್ನು ಬಿಡುತ್ತಿದ್ದ, ಕುಂತೀಪುತ್ರನ ಚುರುಕಾದ ಕೈಚಳಕವನ್ನು ನೋಡಿ ಪ್ರೇಕ್ಷಕರು ಬಹಳವಾಗಿ ಆಶ್ಚರ್ಯಪಡುತ್ತಿದ್ದರು. ಫಾಲ್ಗುನನು ತನ್ನ ಬಾಣಗಳಿಂದ ಆನೆಗಳನ್ನೂ, ಮಾವಟಿಗರನ್ನೂ, ಕುದುರೆಗಳನ್ನೂ, ಸವಾರರನ್ನೂ, ರಥಿಕರನ್ನೂ, ಸಾರಥಿಗಳನ್ನೂ ಸಂಹರಿಸುತ್ತಿದ್ದನು. ಓಡಿಹೋಗಿದ್ದು ಪುನಃ ಹಿಂದಕ್ಕೆ ಬರುತ್ತಿರುವವನನ್ನೂ, ಯುದ್ಧಮಾಡುತ್ತಿರುವವನನ್ನೂ, ತನ್ನ ಎದುರಾಗಿ ಯುದ್ಧ ಮಾಡಲು ನಿಂತವನನ್ನೂ ಅರ್ಜುನನು ಸಂಹರಿಸದೇ ಬಿಡುತ್ತಿರಲಿಲ್ಲ. ಸೂರ್ಯನು ಹುಟ್ಟಿದೊಡನೆಯೇ ಯಾವ ರೀತಿಯಲ್ಲಿ ಆಕಾಶದಲ್ಲಿರುವ ಕತ್ತಲೆಯನ್ನು ವಿನಾಶಗೊಳಿಸುತ್ತಾನೆಯೋ–ಅದೇ ರೀತಿಯಲ್ಲಿ ಅರ್ಜುನನು

ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ, ರಶ್ಮಿರೂಪವಾದ ಬಾಣಗಳಿಂದ ತಮೋರೂಪವಾದ ಗಜಸೈನ್ಯವನ್ನು ಸಂಹರಿಸಿದನು. ಪ್ರಳಯಕಾಲದಲ್ಲಿ ಭೂಮಿಯು ಪರ್ವತಗಳಿಂದ ವ್ಯಾಪ್ತವಾಗಿರುವ ರೀತಿಯಲ್ಲಿ ಕಾಣುವಂತೆ–ಅರ್ಜುನನ ಬಾಣಗಳಿಂದ ಕ್ಷತ-ವಿಕ್ಷತವಾಗಿ ಬಿದ್ದಿದ್ದ ಆನೆಗಳಿಂದ ನಿಬಿಡ ವಾಗಿರುವಂತೆ ನಿನ್ನ ಸೈನ್ಯವು ಕಾಣಿಸಿತು. ಯಾವ ರೀತಿಯಲ್ಲಿ ಮಧ್ಯಾಹ್ನದ ಸೂರ್ಯನು ಪ್ರಾಣಿಗಳಿಂದ ದಿಟ್ಟಿಸಿನೋಡಲು ಅಸಾಧ್ಯನೋ–ಅದೇ ರೀತಿಯಲ್ಲಿ ಯುದ್ಧದಲ್ಲಿ ಕ್ರುದ್ಧನಾದ ಅರ್ಜುನನು ಶತ್ರುಗಳಿಂದ ನೋಡಲು ಅಸಾಧ್ಯನಾಗಿದ್ದನು. ಪರಂತಪನೇ! ಹೀಗೆ ಯುದ್ಧದಲ್ಲಿ ನಿನ್ನ ಸೈನ್ಯವು ಅರ್ಜುನನ ಬಾಣಗಳಿಂದ ಪೀಡಿಸಲ್ಪಟ್ಟು ಭಗ್ನವಾಗಿಹೋಯಿತು ಮತ್ತು ಅವನ ಎದುರಿನಲ್ಲಿ ಹೆಚ್ಚು ಹೊತ್ತು ನಿಲ್ಲಲಾರದೇ ಉದ್ವಿಗ್ನವಾಗಿ ಪಲಾಯನ ಮಾಡಿತು. ದೊಡ್ಡ ಚಂಡಮಾರುತವು ಮೋಡಗಳ ಸಮೂಹವನ್ನು ಛಿನ್ನ-ಭಿನ್ನಮಾಡುವಂತೆ-ದುರ್ಮರ್ಷಣನ ಸೈನ್ಯವನ್ನು ಅರ್ಜುನನು ಛಿನ್ನ-ಭಿನ್ನವಾಗಿ ಮಾಡಿದನು. ಅರ್ಜುನನಿಂದ ಕ್ಷುಭಿತವಾದ (ಅಲ್ಲೋಲ-ಕಲ್ಲೋಲಗೊಂಡ) ಆ ಸೈನ್ಯವು ಓಡಿಹೋಗುವುದರಲ್ಲಿ ನಿರತವಾಗಿದ್ದಿತೇ ಹೊರತು ಹಿಂದಿರುಗಿ ನೋಡಲು ಕೂಡ ಸಮರ್ಥವಾಗಿರಲಿಲ್ಲ. ಅರ್ಜುನನ ಬಾಣಗಳಿಂದ ಪೀಡಿತರಾದ ನಿನ್ನ ಪಕ್ಷದ ರಥಾಶ್ವಸೈನಿಕರು ಚಾವಟಿಗಳಿಂದಲೂ, ಧನುಸ್ಸುಗಳ ತುದಿಗಳಿಂದಲೂ, ಹುಂಕಾರಶಬ್ದಗಳಿಂದಲೂ, ಚಪ್ಪರಿಸುವುದರಿಂದಲೂ, ಬಾರುಕೋಲುಗಳ ಮತ್ತು ಹಿಮ್ಮಡಿಯ ಪ್ರಹಾರಗಳಿಂದಲೂ, ಗಟ್ಟಿಯಾಗಿ ಅಬ್ಬರಿಸುವಿಕೆಯಿಂದಲೂ ಕುದುರೆಗಳನ್ನು ಬಹಳ ವೇಗವಾಗಿ ಓಡುವಂತೆ ಪ್ರಚೋದಿಸುತ್ತಾ ಪಲಾಯನಮಾಡುತ್ತಿದ್ದರು. ಗಜಾರೋಹಿಗಳು ಹಿಮ್ಮಡಿ ಗಳಿಂದಲೂ, ಅಂಗುಷ್ಠಗಳಿಂದಲೂ, ಅಂಕುಶಗಳಿಂದಲೂ, ಆನೆಗಳನ್ನು ಶೀಘ್ರ ವಾಗಿ ಓಡಿಹೋಗುವಂತೆ ಪ್ರಚೋದಿಸುತ್ತಾ ಪಲಾಯನಮಾಡುತ್ತಿದ್ದರು. ಅರ್ಜುನನ ಬಾಣಗಳ ಪ್ರಹಾರದಿಂದ ಸಮ್ಮೋಹಿತರಾದ ಕೆಲವರು ಅರ್ಜುನನಿಗೆ ಅಭಿಮುಖವಾಗಿಯೇ ಹೋಗುತ್ತಿದ್ದರು. ಆ ಸಮಯದಲ್ಲಿ ನಿನ್ನ ಕಡೆಯ ಯೋಧರು ಉತ್ಸಾಹರಹಿತರಾಗಿಯೂ, ಗಾಬರಿಗೊಂಡ ಮನಸ್ಸುಳ್ಳವರಾಗಿಯೂ ಇದ್ದರು.”

೮೯ನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಅರ್ಜುನನ ಬಾಣದಿಂದ ಪ್ರಹೃತನಾದ ದುಃಶಾಸನನು ಸೈನ್ಯ ಸಮೇತನಾಗಿ ಪಲಾಯನಮಾಡಿದುದು

ಯುದ್ಧದ ವಾರ್ತೆಯನ್ನು ಕೇಳಿ ಖಿನ್ನನಾದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಅರ್ಜುನನಿಂದ ವಧಿಸಲ್ಪಟ್ಟು ಶಕಟವ್ಯೂಹದ ಅಗ್ರಭಾಗವು ಭಗ್ನವಾಗಿ ಹೋದನಂತರ ನನ್ನ ಕಡೆಯ ಯಾವ ವೀರರು ಅರ್ಜುನನನ್ನು ಎದುರಿಸಿದರು? ಅಥವಾ ಭಗ್ನಮನೋರಥರಾದ ನನ್ನ ಮಕ್ಕಳು ದ್ರೋಣರನ್ನು ಆಶ್ರಯಿಸಿ ನಿಂತಿದ್ದ, ಪ್ರಾಕಾರದೋಪಾದಿಯಲ್ಲಿದ್ದ, ಭಯರಹಿತವಾದ ಶಕಟವ್ಯೂಹವನ್ನಾದರೂ ಪ್ರವೇಶಿಸಿದರೇ?"

"ಅನಘನೇ! (ಪಾಪರಹಿತನೇ!) ನಾನು ಹೇಳಿದ ರೀತಿಯಲ್ಲಿ ನಿನ್ನ ಸೈನ್ಯವು ಅರ್ಜುನನಿಂದ ಭಗ್ನವಾಗಿ ಹೋಯಿತು. ನಿನ್ನ ಕಡೆಯ ಅನೇಕಸೈನಿಕರು ಹತರಾದರು. ಅಳಿದುಳಿದವರು ಯುದ್ಧಮಾಡಲು ನಿರುತ್ಸಾಹಿಗಳಾಗಿದ್ದು ಪಲಾಯನಮಾಡಲು ಸಮಯವನ್ನು ಕಾಯುತ್ತಿದ್ದರು. ಏಕೆಂದರೆ: ಅಲ್ಲಿ ನಿಂತರೆ ಅವರಿಗೆ ಉಳಿಗಾಲವೇ ಇರಲಿಲ್ಲ. ಪಾಕಶಾಸನಿಯು ಬಾರಿ-ಬಾರಿಗೂ ಉತ್ತಮವಾದ ಬಾಣಗಳಿಂದ ಎದುರಿಗೆ ಬಂದ ಯೋಧರನ್ನು ಕೊಲ್ಲುತ್ತಲೇ ಇದ್ದನು. ಆದುದರಿಂದ ಆ ಸಮಯದಲ್ಲಿ ಸಂಗ್ರಾಮಭೂಮಿ ಯಲ್ಲಿ ಯಾವ ಯೋಧನೂ ಅರ್ಜುನನನ್ನು ಕಣ್ಣೆತ್ತಿ ನೋಡಲೂ ಸಮರ್ಥನಾಗಿರಲಿಲ್ಲ.

ಅನಂತರ ನಿನ್ನ ಮಗನಾದ ದುಃಶಾಸನನು ತನ್ನ ಸೈನ್ಯವು ಅಸ್ತ ವ್ಯಸ್ತವಾದುದನ್ನು ಕಂಡು ಪರಮಕ್ರುದ್ಧನಾಗಿ ಯುದ್ಧಮಾಡಲು ಅರ್ಜುನನ ಬಳಿಗೆ ಹೋದನು. ದುಃಶಾಸನನು ಸುವರ್ಣಮಯವಾದ ಮತ್ತು ವಿಚಿತ್ರ ವಾದ ಕವಚವನ್ನು ಧರಿಸಿದ್ದನು. ಸುವರ್ಣಮಯವಾದ ಕಿರೀಟವನ್ನು ಶಿರಸ್ಸಿ ನಲ್ಲಿ ಧರಿಸಿದ್ದನು. ಅವನು ಶೂರನೂ ತೀಕ್ಷ್ಣಪರಾಕ್ರಮಿಯೂ ಆಗಿದ್ದನು. ದೊಡ್ಡದಾದೊಂದು ಗಜಸೈನ್ಯದೊಡನೆ ಭೂಮಿಯನ್ನೇ ನುಂಗಿಬಿಡುವ ರೀತಿಯಲ್ಲಿ ದುಃಶಾಸನನು ಸವ್ಯಸಾಚಿಯನ್ನು ಆಕ್ರಮಿಸಿದನು. ಆನೆಗಳ

ಕಂಠದಲ್ಲಿ ಕಟ್ಟಿದ್ದ ಗಂಟೆಗಳ ಧ್ವನಿಯಿಂದಲೂ, ಶಂಖಗಳ ಧ್ವನಿಯಿಂದಲೂ, ಧನುಸ್ಸಿನ ಟೇಂಕಾರಶಬ್ದದಿಂದಲೂ, ಮದಗಜಗಳ ಘೀಂಕಾರದಿಂದಲೂ-ಭೂಮಿಯೂ, ಅಷ್ಟದಿಕ್ಕುಗಳೂ ಮತ್ತು ಅಂತರಿಕ್ಷವೂ ಶಬ್ದಮಯವಾಗಿ ಹೋದುವು. ಆ ಶಬ್ದವು ಒಂದು ಮುಹೂರ್ತಪರ್ಯಂತ ವಾಗಿ ದಾರುಣವಾಗಿಯೂ, ಶತ್ರುಭಯಂಕರವಾಗಿಯೂ ಇದ್ದಿತು.

ಮಾವಟಿಗರ ಅಂಕುಶಗಳ ತಿವಿಯುವಿಕೆಯಿಂದ ಪ್ರಚೋದಿತವಾದ, ಕೋಪಗೊಂಡಿದ್ದ, ಸೊಂಡಿಲುಗಳನ್ನೆತ್ತಿಕೊಂಡು ಬರುತ್ತಿದ್ದ, ರೆಕ್ಕೆಗಳಿಂದ ಕೂಡಿದ ಪರ್ವತಗಳಂತೆಯೇ ಕಾಣುತ್ತಿದ್ದ ಆನೆಗಳು ತನ್ನ ಮೇಲೆ ಬಹಳ ರಭಸದಿಂದ ಬೀಳಲು ಬರುತ್ತಿರುವುದನ್ನು ಕಂಡು, ಭಯರಹಿತನಾದ, ನರಶ್ರೇಷ್ಠನಾದ ಧನಂಜಯನು ಗಟ್ಟಿಯಾಗಿ ಸಿಂಹನಾದಮಾಡಿ ಶತ್ರುಗಳ ಗಜಸೈನ್ಯವನ್ನು ಬಾಣಗಳಿಂದ ಧ್ವಂಸಮಾಡಲು ಉಪಕ್ರಮಿಸಿದನು. ಚಂಡಮಾರುತದಿಂದ ಉದ್ಭೂತವಾದ ಎತ್ತರವಾದ ಅಲೆಗಳನ್ನೊಳಗೊಂಡ ಸಮುದ್ರದೋಪಾದಿಯಲ್ಲಿ ತನ್ನ ಮೇಲೆರಗಿ ಬರುತ್ತಿದ್ದ ಆನೆಗಳ ಸೈನ್ಯವನ್ನೂ ಕಿರೀಟಿಯು ಮೊಸಳೆಯೋಪಾದಿಯಲ್ಲಿ ಪ್ರವೇಶಿಸಿದನು. ಪ್ರಳಯಕಾಲದಲ್ಲಿ ಸೂರ್ಯನು ತನ್ನ ಎಲ್ಲೆಯನ್ನು ಮೀರಿ ಪ್ರಪಂಚವನ್ನೆಲ್ಲಾ ದಹಿಸಿಬಿಡು ವಂತೆ–ಪರಪುರಂಜಯನಾದ ಅರ್ಜುನನು ರಣಾಂಗಣದಲ್ಲಿ ಅಮಿತಪರಾ ಕ್ರಮವನ್ನು ತೋರಿಸುತ್ತಾ ಸಂಚರಿಸುತ್ತಿದ್ದುದು ಕಂಡುಬಂದಿತು. ಕುದುರೆಗಳ ಗೊರಸಿನ ಟಪ-ಟಪಾ ಶಬ್ದಗಳಿಂದಲೂ, ರಥಚಕ್ರಗಳ ಗಡ-ಗಡಾಶಬ್ದ ಗಳಿಂದಲೂ, ಉಚ್ಚಸ್ವರದಲ್ಲಿ ಮಾಡುತ್ತಿದ್ದ ಗರ್ಜನ-ತರ್ಜನಗಳಿಂದಲೂ, ಮೌರ್ವಿಯ ಶಬ್ದಗಳಿಂದಲೂ, ನಾನಾಬಗೆಯ ರಣವಾದ್ಯಗಳ ಶಬ್ದಗಳಿಂದಲೂ, ಶ್ರೀಕೃಷ್ಣನ ಪಾಂಚಜನ್ಯಶಂಖದ ಧ್ವನಿಯಿಂದಲೂ, ಅರ್ಜುನನ ದೇವದತ್ತದ ಧ್ವನಿಯಿಂದಲೂ, ಗಾಂಡೀವಧನುಸ್ಸಿನ ಟೇಂಕಾರಧ್ವನಿಯಿಂದಲೂ–ಆನೆಗಳ ಮತ್ತು ಯೋಧರ ಗಮನವು ಕುಂಠಿತವಾಯಿತು. ಸರ್ಪಕ್ಕೆ ಸಮಾನವಾದ ಅರ್ಜುನನ ಬಾಣಗಳಿಂದ ಭಿನ್ನರಾದ ಮನುಷ್ಯರು ಪ್ರಜ್ಞಾಹೀನರಾದರು. ಅರ್ಜುನನಿಂದ ಬಿಡಲ್ಪಟ್ಟ ತೀಕ್ಷ್ಣವಾಗಿದ್ದ ಅನೇಕ ಶತಸಹಸ್ರಬಾಣಗಳು ಆನೆಗಳ ಸರ್ವಾಂಗ ಗಳಲ್ಲಿಯೂ ಚುಚ್ಚಿಕೊಂಡಿದ್ದುವು. ಅರ್ಜುನನಿಂದ ವಧಿಸಲ್ಪಡುತ್ತಿದ್ದ ಆನೆಗಳು

ಭಯಂಕರವಾಗಿ ಕೂಗಿಕೊಳ್ಳುತ್ತಾ ರೆಕ್ಕೆಗಳನ್ನು ಕತ್ತರಿಸಿದ ಪರ್ವತಗಳೋಪಾದಿ ಯಲ್ಲಿ-ನಿರಂತರವಾಗಿ ಭೂಮಿಯ ಮೇಲೆ ಬೀಳುತ್ತಲೇ ಇದ್ದುವು. ಮತ್ತೆ ಕೆಲವು ಆನೆಗಳು ದಂತಗಳ ಕೆಳಭಾಗಗಳಲ್ಲಿಯೂ (ಕೆಳದುಟಿಯಲ್ಲಿಯೂ), ಕುಂಭಸ್ಥಳಗಳಲ್ಲಿಯೂ, ಕಪೋಲಗಳಲ್ಲಿಯೂ ಅರ್ಜುನನ ನಿಶಿತವಾದ ಬಾಣಗಳಿಂದ ಪೆಟ್ಟುತಿಂದು ನೀರುಕೊಕ್ಕರೆಗಳಂತೆ ಪದೇ-ಪದೇ ಆರ್ತನಾದ ಮಾಡುತ್ತಿದ್ದುವು. ಅರ್ಜುನನು ಆನೆಗಳ ಹೆಗಲುಗಳ ಮೇಲೆ ಕುಳಿತಿರುವ ಯೋಧರ ಶಿರಸ್ಸುಗಳನ್ನೂ ಬಗ್ಗಿದ ಗಿಣ್ಣುಗಳಿದ್ದ ಭಲ್ಲಗಳಿಂದ ಕತ್ತರಿಸುತ್ತಿದ್ದನು. ಕುಂಡಲಗಳಿಂದ ಕೂಡಿದ್ದ ಮುಖಕಮಲಗಳಿಂದ ಶೋಭಿಸುತ್ತಿದ್ದ ಯೋಧರ ಶಿರಸ್ಸುಗಳು ರಾಶಿ-ರಾಶಿಯಾಗಿ ಭೂಮಿಯ ಮೇಲೆ ಬೀಳುತ್ತಿದ್ದುವು. ಅದನ್ನು ನೋಡಿದರೆ ಅರ್ಜುನನೇನಾದರೂ ಪದ್ಮಗಳ ರಾಶಿಯಿಂದ ಭೂದೇವಿಯನ್ನು ಪೂಜಿಸುತ್ತಿರುವನೋ-ಎಂಬಂತೆ ಕಾಣುತ್ತಿದ್ದಿತು. ಅರ್ಜುನನ ಬಾಣಗಳ ಪೆಟ್ಟುತಿಂದು ಆನೆಗಳು ರಣಾಂಗಣದಲ್ಲಿ ಅಲ್ಲಿಂದಿಲ್ಲಿಗೆ ದಿಕ್ಕುಗಾಣದೇ ಭ್ರಮಿಸುತ್ತಿರಲಾಗಿ-ಕವಚಗಳಿಂದ ಹೀನರಾಗಿದ್ದ, ರಕ್ತದಿಂದ ತೋಯ್ದು ಹೋಗಿದ್ದ, ಗಾಯಗಳಿಂದ ಸಂಕಟಪಡುತ್ತಿದ್ದ ಗಜಯೋಧರು ಯಂತ್ರದಿಂದ ಬದ್ಧರಾಗಿರುವಂತೆ ಆನೆಗಳ ಮೇಲೆ ಜೋತುಬಿದ್ದಿದ್ದರು. ಮತ್ತೆ ಕೆಲವರು, ಅರ್ಜುನನು ಕೌಶಲದಿಂದ ಪ್ರಯೋಗಿಸಿದ, ಸುಂದರವಾದ ರೆಕ್ಕೆಗಳಿಂದ ಕೂಡಿದ್ದ ಒಂದೇ ಒಂದು ಬಾಣದಿಂದ ಎರಡು-ಮೂರು ಭಾಗಗಳಾಗಿ ಅಥವಾ ಎರಡು-ಮೂರುಮಂದಿ ಒಟ್ಟೊಟ್ಟಿಗೆ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬೀಳುತ್ತಿದ್ದರು. ಪಾರ್ಥನು ಬಿಟ್ಟ ತೀಕ್ಷ್ಣವಾದ ನಾರಾಚಗಳಿಂದ ಬಹಳವಾಗಿ ಗಾಯಗೊಂಡು ಮುಖಗಳಿಂದ ರಕ್ತವನ್ನು ಸುರಿಸುತ್ತಾ ಹಲವು ಆನೆಗಳು ಸವಾರರ ಸಹಿತವಾಗಿ ವೃಕ್ಷಗಳಿಂದ ಕೂಡಿದ ಪರ್ವತಗಳು ಬೀಳುವಂತೆ–ನೆಲದ ಮೇಲೆ ಬೀಳುತ್ತಿದ್ದುವು. ಕೌಂತೇಯನು ರಥಿಕರ ಧನುಸ್ಸಿನ ಮೌರ್ವಿಯನ್ನೂ, ಧನುಸ್ಸನ್ನೂ, ಧ್ವಜವನ್ನೂ, ರಥದ ನೊಗವನ್ನೂ, ಈಷಾದಂಡವನ್ನೂ ಬಗ್ಗಿದ ಗಿಣ್ಣುಗಳಿದ್ದ ಭಲ್ಲಗಳಿಂದ ಚೂರು-ಚೂರುಗಳಾಗಿ ಕತ್ತರಿಸಿಬಿಡುತ್ತಿದ್ದನು. ಅರ್ಜುನನು ರಣಾಂಗಣದಲ್ಲಿ ಮಂಡಲಾಕಾರವಾದ ಧನುಸ್ಸನ್ನು ಹಿಡಿದು ನೃತ್ಯಮಾಡುತ್ತಿರುವನೋ-ಎಂಬಂತೆ ಕಾಣುತ್ತಿದ್ದನು. ಏಕೆಂದರೆ: ಅವನು ಬಾಣವನ್ನು ಬತ್ತಳಿಕೆಯಿಂದ ತೆಗೆಯುವುದಾಗಲೀ,

ಧನುಸ್ಸಿನಲ್ಲಿ ಯೋಜಿಸುವುದಾಗಲೀ, ಮೌರ್ವಿಯನ್ನು ಸೆಳೆಯುವುದಾಗಲೀ, ಪ್ರಯೋಗಿಸುವುದಾಗಲೀ ಗೋಚರಿಸುತ್ತಲೇ ಇರಲಿಲ್ಲ. ಧನುಸ್ಸು ಮಂಡಲಾಕಾರವಾಗಿರುವುದು ಮತ್ತು ಮಂಡಲಾಕಾರದ ಆ ಧನುಸ್ಸಿನ ಮೂಲಕ ಪುಂಖಾನುಪುಂಖವಾಗಿ ಬಾಣಗಳು ಹೊರಬರುತ್ತಿರುವುದು–ಇಷ್ಟು ಮಾತ್ರವೇ ಕಾಣಿಸುತ್ತಿದ್ದಿತು. ಮುಹೂರ್ತಕಾಲದಲ್ಲಿಯೇ ಉಳಿದ ಆನೆಗಳು ಅರ್ಜುನನ ನಾರಾಚಗಳಿಂದ ಪ್ರಹೃತವಾಗಿ ಮುಖಗಳಿಂದ ರಕ್ತವನ್ನು ವಮನಮಾಡುತ್ತಾ ಭೂಮಿಯ ಮೇಲೆ ಬಿದ್ದುವು.



ಮಹಾರಾಜ! ಅತ್ಯಂತಭಯಾನಕವಾದ ಆ ರಣಾಂಗಣದಲ್ಲಿ ಅಸಂಖ್ಯಾತವಾದ ಕಬಂಧಗಳು (ಮುಂಡಗಳು-ಶಿರಸ್ಸಿನಿಂದ ವಿಹೀನವಾದ ಶರೀರಗಳು) ಮೇಲೆದ್ದು ಕುಣಿಯುತ್ತಿರುವುದು ಕಂಡುಬಂದಿತು. ಧನುಸ್ಸುಗಳನ್ನು ಹಿಡಿದಿದ್ದ, ಅಂಗುಲಿತ್ರಾಣಗಳನ್ನು ತೊಟ್ಟಿದ್ದ, ಖಡ್ಗಗಳನ್ನು

ಹಿಡಿದಿದ್ದ, ಅಂಗದಗಳಿಂದ ಕೂಡಿದ್ದ, ಸುವರ್ಣಮಯವಾದ ಆಭರಣಗಳಿಂದ ಸಮಲಂಕೃತವಾಗಿದ್ದ ಯೋಧರ ತೋಳುಗಳು ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ಭಯಂಕರವಾಗಿ ಕಂಡುಬರುತ್ತಿದ್ದುವು. ಛಿನ್ನ-ಭಿನ್ನವಾದ ರಥದ ಉಪಕರಣಗಳಿಂದಲೂ, ಆಸನಗಳಿಂದಲೂ, ಈಷಾದಂಡಗಳಿಂದಲೂ, ಮೂಕಿಯ ಕಂಬಗಳಿಂದಲೂ, ಚಕ್ರಗಳಿಂದಲೂ, ಅಚ್ಚುಮರಗಳಿಂದಲೂ, ನೊಗಗಳಿಂದಲೂ–ಆ ರಣಾಂಗಣವು ತುಂಬಿಹೋಗಿದ್ದಿತು. ಕತ್ತಿ-ಗುರಾಣಿಗಳನ್ನೂ, ಧನುರ್ಬಾಣಗಳನ್ನೂ ಹಿಡಿದಿದ್ದ ಅನೇಕ ಯೋಧರು ಅಸುವನ್ನು ತೊರೆದು ರಣಾಂಗಣದ ಸುತ್ತಲೂ ಬಿದ್ದಿದ್ದರು. ಮಾಲೆಗಳೂ, ಆಭರಣಗಳೂ, ವಸ್ತ್ರಗಳೂ ಮತ್ತು ಸಮಲಂಕೃತವಾಗಿದ್ದ ಅನೇಕಧ್ವಜಗಳೂ ಅರ್ಜುನನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಿದ್ದುವು. ಪಾರ್ಥನ ಬಾಣಗಳಿಂದ ಅಸುವನ್ನು ತೊರೆದ ಆನೆಗಳಿಂದಲೂ, ಕುದುರೆಗಳಿಂದಲೂ ಮತ್ತು ಕ್ಷತ್ರಿಯರಿಂದಲೂ ರಣಾಂಗಣವು ತುಂಬಿಹೋಗಿದ್ದು ಬಹಳ ಭಯಂಕರವಾಗಿ ಕಾಣುತ್ತಿದ್ದಿತು.

ಹೀಗೆ ಕಿರೀಟಿಯು ದುಃಶಾಸನನ ಗಜಸೇನೆಯನ್ನು ಧ್ವಂಸಮಾಡಿದನು. ಅಳಿದುಳಿದ ಸೈನಿಕರೂ ಬಹಳವಾಗಿ ವ್ಯಥೆಗೊಂಡು ಅರ್ಜುನನ ಎದುರಿನಲ್ಲಿ ನಿಲ್ಲಲಾಗದೇ ನಾಯಕನ (ದುಃಶಾಸನನ) ಸಮೇತವಾಗಿಯೇ ಪಲಾಯನ ಮಾಡಿದರು. ಅರ್ಜುನನ ಬಾಣಗಳಿಂದ ಬಹಳವಾಗಿ ಪೀಡಿತನಾದ ದುಃಶಾಸನನು ಭಯಗೊಂಡು ಅಳಿದುಳಿದ ಸೈನಿಕರೊಡನೆ ದ್ರೋಣರನ್ನೇ ರಕ್ಷಕರನ್ನಾಗಿ ಆಶ್ರಯಿಸುತ್ತಾ ಅವರಿಂದ ರಕ್ಷಿಸಲ್ಪಡುತ್ತಿದ್ದ ಶಕಟವ್ಯೂಹವನ್ನು ಪ್ರವೇಶಿಸಿದನು."

೯೦ನೆಯ ಅಧ್ಯಾಯವು ಮುಗಿಯಿತು.

೯೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣಾರ್ಜುನರ ಸಂಭಾಷಣೆ ಮತ್ತು ಯುದ್ಧ: ಅರ್ಜುನನು ದ್ರೋಣರನ್ನು ಬಿಟ್ಟು ಮುನ್ನುಗ್ಗಿದುದು: ಕೌರವಸೈನಿಕರು ಅರ್ಜುನನನ್ನು ಪ್ರತಿರೋಧಿಸಿದುದು

ಸಂಜಯನು ಅರ್ಜುನನ ಪರಾಕ್ರಮಕಥನವನ್ನು ಮುಂದುವರಿಸುತ್ತಾನೆ: (೧೭೨)–೧೬

"ಮಹಾರಾಜ! ಮಹಾರಥನಾದ ಸವ್ಯಸಾಚಿಯು ದುಃಶಾಸನನ ಸೈನ್ಯ ವನ್ನು ಸಂಹರಿಸಿ ಸಿಂಧುರಾಜನಾದ ಜಯದ್ರಥನನ್ನು ಸಮೀಪಿಸುವ ಅಪೇಕ್ಷೆಯಿಂದ ದ್ರೋಣರ ಸೈನ್ಯದೆಡೆಗೆ ಧಾವಿಸಿದನು. ಶಕಟವ್ಯೂಹದ ಮುಖಭಾಗದಲ್ಲಿ ನಿಂತಿದ್ದ ದ್ರೋಣರನ್ನು ಸಮೀಪಿಸಿ ಅರ್ಜುನನು ಶ್ರೀಕೃಷ್ಣನ ಅನುಮತಿಯನ್ನು ಪಡೆದು ಬದ್ಧಾಂಜಲಿಯಾಗಿ ದ್ರೋಣರನ್ನು ಪ್ರಾರ್ಥಿಸಿದನು:

**ಶಿವೇನ ಧ್ಯಾಹಿ ಮಾಂ ಬ್ರಹ್ಮನ್ ಸ್ವಸ್ತಿ ಚೈವ ವದಸ್ವ ಮೇ।**
**ಭವತ್ಪ್ರಸಾದಾದಿಚ್ಛಾಮಿ ಪ್ರವೇಷ್ಟುಂ ದುರ್ಭಿದಾಂ ಚಮೂಮ್ ॥೩॥**

"ಬ್ರಾಹ್ಮಣೋತ್ತಮರೇ! ತಾವು ನನಗೆ ಕಲ್ಯಾಣವಾಗಲೆಂದು ಚಿಂತಿಸಿರಿ. ನನ್ನ ವಿಜಯಕ್ಕಾಗಿ ಸ್ವಸ್ತಿವಾಚನಮಾಡಿರಿ. ತಮ್ಮ ಕೃಪೆಯಿಂದಲೇ ನಾನು ದುರ್ಭೇದ್ಯವಾದ ಈ ವ್ಯೂಹವನ್ನು ಪ್ರವೇಶಿಸಲು ಇಚ್ಛಿಸಿದ್ದೇನೆ.

**ಭವಾನ್ಪಿತೃಸಮೋ ಮಹ್ಯಂ ಧರ್ಮರಾಜಸಮೋಽಪಿ ಚ ।**
**ತಥಾ ಕೃಷ್ಣಸಮಶ್ಚೈವ ಸತ್ಯಮೇತದ್ಬ್ರವೀಮಿ ತೇ ॥೪॥**

ತಾವು ನನಗೆ ತಂದೆಗೆ ಸಮಾನರಾಗಿರುವಿರಿ. ನನ್ನ ಹಿರಿಯಣ್ಣನಾದ ಧರ್ಮಜನಿಗೆ ಸಮಾನರಾಗಿರುವಿರಿ. ನನ್ನ ಪ್ರಿಯಸುಹೃದನಾದ ಶ್ರೀಕೃಷ್ಣನಿಗೆ ಸಮಾನರಾಗಿರುವಿರಿ. ನಾನು ಹೇಳುತ್ತಿರುವ ಈ ಮಾತು ಸತ್ಯವಾದುದು. (ಕೇವಲ ಮುಖಸ್ತುತಿಯಲ್ಲ.)

**ಅಶ್ವತ್ಥಾಮಾ ಯಥಾ ತಾತ ರಕ್ಷಣೀಯಸ್ತ್ವಯಾನಘ ।**
**ತಥಾಹಮಪಿ ತೇ ರಕ್ಷ್ಯಃ ಸದೈವ ದ್ವಿಜಸತ್ತಮ ॥೫॥**

ಪಾಪರಹಿತರೇ! ದ್ವಿಜಶ್ರೇಷ್ಠರೇ! ಅಶ್ವತ್ಥಾಮನು ಯಾವರೀತಿಯಲ್ಲಿ ನಿಮ್ಮಿಂದ ರಕ್ಷಣೀಯನಾಗಿದ್ದಾನೆಯೋ ಹಾಗೆಯೇ ನಾನೂ ರಕ್ಷಣೀಯನು. ನನ್ನನ್ನೂ ತಾವು ರಕ್ಷಿಸಲೇಬೇಕು.

**ತವ ಪ್ರಸಾದಾದಿಚ್ಛೇಯಂ ಸಿನ್ಧುರಾಜಾನಮಾಹವೇ ।**
**ನಿಹನ್ತುಂ ದ್ವಿಪದಾಂ ಶ್ರೇಷ್ಠ ಪ್ರತಿಜ್ಞಾಂ ರಕ್ಷ ಮೇ ಪ್ರಭೋ ॥೬॥**

ಮಾನವಶ್ರೇಷ್ಠರೇ! ತಮ್ಮ ಅನುಗ್ರಹದಿಂದ ಯುದ್ಧದಲ್ಲಿ ಸಿಂಧುರಾಜ ನಾದ ಜಯದ್ರಥನನ್ನು ಸಂಹರಿಸಲು ಇಚ್ಛಿಸಿದ್ದೇನೆ. ತಾವು ದಯಮಾಡಿ ನನ್ನ

ಪ್ರತಿಜ್ಞೆಯ ರಕ್ಷಣೆಯನ್ನು ಮಾಡಿರಿ. ನನ್ನ ಪ್ರತಿಜ್ಞೆಯು ಫಲಿಸುವಂತೆ ಅನುಗ್ರಹಿಸಿರಿ."

ಮಹಾರಾಜ! ಅರ್ಜುನನು ದ್ರೋಣರನ್ನು ಕುರಿತು ಹೀಗೆ ಹೇಳಿದನಂತರ ಆಚಾರ್ಯರು ಮುಗುಳ್ನಗೆಯೊಡನೆ ಪ್ರತ್ಯುತ್ತರಿಸಿದರು:

**ಮಾಮಜಿತ್ವಾ ನ ಭೀಭತ್ಸೋ ಶಕ್ಯೋ ಜೇತುಂ ಜಯದ್ರಥಃ ॥೭॥**

"ಅರ್ಜುನ! ನನ್ನನ್ನು ಜಯಿಸದೇ ನೀನು ಜಯದ್ರಥನನ್ನು ಜಯಿಸುವ ಸಾಧ್ಯತೆಯೇ ಇಲ್ಲ"–ಹೀಗೆ ಹೇಳಿ ದ್ರೋಣರು ಗಹಗಹಿಸಿ ನಗುತ್ತಾ ರಥಾಶ್ವ-ಧ್ವಜ-ಸಾರಥಿಗಳ ಸಮೇತನಾದ ಅರ್ಜುನನನ್ನು ಬಾಣಗಳ ಸಮೂಹದಿಂದಲೇ ಮುಚ್ಚಿಬಿಟ್ಟರು. ಅನಂತರ ಅರ್ಜುನನು ದ್ರೋಣರ ಬಾಣಗಳೆಲ್ಲವನ್ನೂ ಪ್ರತಿಬಾಣಗಳಿಂದ ನಿವಾರಣೆಮಾಡಿಕೊಂಡು ಘೋರ ರೂಪವಾದ ಮಹತ್ತರವಾದ ಬಾಣಗಳಿಂದ ದ್ರೋಣರನ್ನು ಆಕ್ರಮಿಸಿದನು. ಅರ್ಜುನನು ದ್ರೋಣರನ್ನು ಗೌರವಿಸುತ್ತಾ ಕ್ಷತ್ರಿಯಧರ್ಮವನ್ನು ಆಶ್ರಯಿಸಿ (ಕ್ಷತ್ರಧರ್ಮಾನುಸಾರವಾಗಿ) ಒಂಬತ್ತು ಬಾಣಗಳಿಂದ ದ್ರೋಣರ ಕಾಲುಗಳನ್ನು ಪ್ರಹರಿಸಿದನು. ಅರ್ಜುನನು ಬಿಟ್ಟ ಬಾಣಗಳನ್ನು ದ್ರೋಣರು ಬಾಣಗಳಿಂದಲೇ ಕತ್ತರಿಸಿ ಅನಂತರ ಪ್ರಜ್ಜ್ವಲಿಸುವ, ವಿಷಕ್ಕೆ ಮತ್ತು ಅಗ್ನಿಗೆ ಸಮಾನವಾಗಿ ಮಹಾತೇಜಸ್ಸಿನಿಂದ ಯುಕ್ತವಾಗಿದ್ದ ಬಾಣಗಳಿಂದ ಕೃಷ್ಣಾರ್ಜುನರಿಬ್ಬರನ್ನೂ ಪ್ರಹರಿಸಿದರು. ಬಾಣಗಳಿಂದ ಗಾಯಗೊಂಡ ಅರ್ಜುನನು ದ್ರೋಣರ ಧನುಸ್ಸನ್ನು ಕತ್ತರಿಸಲು ಇಚ್ಛಿಸಿ ಯೋಚಿಸುತ್ತಿರ ಲಾಗಿ–ಅಪ್ರಮತ್ತರಾದ, ವೀರ್ಯವಂತರಾದ ದ್ರೋಣರು ಮಹಾತ್ಮನಾದ ಫಾಲ್ಗುನನ ಮೌರ್ವಿಯನ್ನು ಬಹಳ ಬೇಗ ಕತ್ತರಿಸಿ ಅರ್ಜುನನ ಕುದುರೆ ಗಳನ್ನೂ, ಧ್ವಜವನ್ನೂ, ಸಾರಥಿಯನ್ನೂ ಹಲವಾರು ಬಾಣಗಳಿಂದ ಪ್ರಹರಿಸಿ ದರು. ವೀರರಾದ ದ್ರೋಣರು ನಸುನಗುತ್ತಾ ಪುನಃ ಅರ್ಜುನನನ್ನು ಬಾಣ ಗಳಿಂದ ಮುಚ್ಚಿಬಿಟ್ಟರು. ಆ ಮಧ್ಯದಲ್ಲಿ ಸರ್ವಾಸ್ತ್ರವಿಶಾರದರಲ್ಲಿ ಶ್ರೇಷ್ಠನಾದ ಅರ್ಜುನನು ಮತ್ತೊಂದು ಮೌರ್ವಿಯನ್ನು ಬಿಗಿದು ಮಹಾಧನುಸ್ಸನ್ನು ಸಜ್ಜುಗೊಳಿಸಿ ಆಚಾರ್ಯರ ಪರಾಕ್ರಮವನ್ನು ಮೀರಿಸಿದ ಪರಾಕ್ರಮವನ್ನು ತೋರಿಸುತ್ತಾ ಒಂದು ಬಾಣವನ್ನು ಬತ್ತಳಿಕೆಯಿಂದ ತೆಗೆದು ಶರಸಂಧಾನ ಮಾಡಿ ಕಿವಿಯ ತುದಿಯವರೆಗೂ ಸೆಳೆದು ಪ್ರಹರಿಸಲು ಬೇಕಾಗುವಷ್ಟು ಸಮಯದಲ್ಲಿಯೇ ಆರು ನೂರು ಬಾಣಗಳಿಂದ ಪ್ರಹರಿಸಿದನು. ಪುನಃ

ಅರ್ಜುನನು ಏಳುನೂರು ಬಾಣಗಳಿಂದ ಪ್ರಹರಿಸಿ, ದ್ರೋಣರ ಪ್ರತಿಬಾಣಗಳಿಂದಲೂ ಹಿಮ್ಮುಖವಾಗದೇ ಇರತಕ್ಕ ಅಥವಾ ಅವರ ಬಾಣಗಳಿಂದ ತಡೆಯಲು ಸಾಧ್ಯವಾಗದೇ ಇರತಕ್ಕ ಸಾವಿರ ಬಾಣಗಳನ್ನು ಬಿಟ್ಟನು. ಬಳಿಕ ಬಗೆ-ಬಗೆಯ ಹತ್ತುಸಾವಿರ ಬಾಣಗಳನ್ನು ಪ್ರಯೋಗಿಸಿ ದ್ರೋಣರ ಸೈನ್ಯವನ್ನು ಸಂಹರಿಸಿದನು. ಅಸ್ತ್ರವಿದನಾದ, ಮಹಾಬಲಿಷ್ಠನಾದ, ವಿಚಿತ್ರರೀತಿಯಲ್ಲಿ ಯುದ್ಧಮಾಡುವ ಸಾಮರ್ಥ್ಯವನ್ನು ಹೊಂದಿದ್ದ ಅರ್ಜುನನಿಂದ ಬಿಡಲ್ಪಡುತ್ತಿದ್ದ ಬಾಣಗಳಿಂದ ಶತ್ರುಪಕ್ಷದ ಮನುಷ್ಯರು (ಪದಾತಿಗಳು), ಕುದುರೆಗಳು, ಆನೆಗಳು, ಪ್ರಹೃತವಾಗಿ ಅಪಾರಸಂಖ್ಯೆಯಲ್ಲಿ ಅಸುನೀಗಿ ಕೆಳಗುರುಳಿದುವು. ಅರ್ಜುನನ ಬಾಣಗಳಿಂದ ಪೀಡಿತರಾದ ರಥಿಕರು-ಸೂತರನ್ನೂ, ಕುದುರೆಗಳನ್ನೂ, ಧ್ವಜಗಳನ್ನೂ, ಆಯುಧಗಳನ್ನೂ ಕಳೆದುಕೊಂಡು ಕಟ್ಟಕಡೆಗೆ ತಮ್ಮ ಪ್ರಾಣಗಳನ್ನೂ ಕಳೆದುಕೊಂಡು ಶ್ರೇಷ್ಠವಾದ ರಥಗಳಿಂದ ಬಹಳ ಬೇಗ ಕೆಳಕ್ಕೆ ಬೀಳುತ್ತಿದ್ದರು. ವಜ್ರಾಯುಧದ ಪ್ರಹಾರದಿಂದ ಛಿನ್ನ-ಭಿನ್ನವಾದ ಪರ್ವತಗಳಂತೆ–ಚಂಡಮಾರುತದಿಂದ ಚದುರಿಸಲ್ಪಟ್ಟ ಕಾರ್ಮುಗಿಲಿನಂತೆ ವಿಸ್ತೃತವಾಗಿ ಬಿದ್ದಿದ್ದ, ಅಗ್ನಿಯಿಂದ ಭಸ್ಮವಾಗಿ ಹೋದ ಮನೆಗಳಂತೆ ದಗ್ಧವಾದ–ಅರ್ಜುನನ ಬಾಣಗಳಿಂದ ಹತವಾಗಿದ್ದ ಆನೆಗಳು ರಣಾಂಗಣದ ಸುತ್ತಲೂ ಬಿದ್ದಿದ್ದುವು.

ಹಿಮವತ್ಪರ್ವತದ ತಪ್ಪಲಿನಲ್ಲಿ ನೀರಿನ ಪ್ರವಾಹಕ್ಕೆ ಸಿಕ್ಕಿ ಅನೇಕ ಹಂಸಗಳು ಸತ್ತುಹೋಗುವಂತೆ–ಅರ್ಜುನನ ಬಾಣಗಳಿಂದ ಸತ್ತುಹೋದ ಸಾವಿರಾರು ಕುದುರೆಗಳು ರಣಾಂಗಣದ ಸುತ್ತಲೂ ಬಿದ್ದಿದ್ದುವು. ಪ್ರಳಯ ಕಾಲದ ಸೂರ್ಯನ ರಶ್ಮಿಯಂತೆ–ಪ್ರಕಾಶಮಾನವಾಗಿದ್ದ ಅರ್ಜುನನ ಅಸ್ತ್ರ-ಶಸ್ತ್ರಗಳಿಂದ ಹತವಾದ ರಥಾಶ್ವ-ಗಜ-ಪದಾತಿಗಳ ಸಮೂಹಗಳು–ಸೂರ್ಯನ ಕಿರಣಗಳ ಮೂಲಕವಾಗಿ ಬತ್ತಿಹೋದ ಅದ್ಭುತವಾದ ಜಲರಾಶಿ ಯಂತೆಯೇ ಕಾಣುತ್ತಿದ್ದುವು. ಯುದ್ಧದಲ್ಲಿ ಕುರುಪ್ರವೀರರನ್ನು ಬಹಳವಾಗಿ ಪರಿತಾಪಗೊಳಿಸುತ್ತಿದ್ದ ಪಾಂಡವನೆಂಬ ಸೂರ್ಯನ ಬಾಣಕಿರಣಗಳ ಸಮೂಹವನ್ನು–ಮಹಾಮೇಘವು ಸೂರ್ಯನ ರಶ್ಮಿಗಳನ್ನು ಮುಚ್ಚಿಬಿಡು ವಂತೆ–ದ್ರೋಣರೆಂಬ ಮೇಘವು ಶರಗಳೆಂಬ ಮಳೆಯ ವೇಗದಿಂದ ಮುಚ್ಚಿಬಿಟ್ಟಿತು. (ಕುರುಪ್ರವೀರರನ್ನು ಸತತವಾಗಿ ಬಾಣಗಳಿಂದ ಪರಿತಾಪ ಗೊಳಿಸುತ್ತಿದ್ದ ಅರ್ಜುನನನ್ನು ದ್ರೋಣರು ಬಾಣಗಳಿಂದ ಮುಚ್ಚಿಬಿಟ್ಟರು.) ದ್ರೋಣರು, ಶತ್ರುಗಳ ಪ್ರಾಣಗಳೇ ಭೋಜನರೂಪವಾಗಿರುವ ಒಂದು

ನಾರಾಚದಿಂದ ಅರ್ಜುನನ ವಕ್ಷಃಸ್ಥಳವನ್ನು ಬಲವಾಗಿ ಪ್ರಹರಿಸಿದರು. ದ್ರೋಣರ ಬಲವಾದ ಆ ಬಾಣಪ್ರಹಾರದಿಂದ ಅರ್ಜುನನು ಕ್ಷಣಕಾಲ– ಭೂಕಂಪವಾದ ಸಮಯದಲ್ಲಿ ಪರ್ವತವು ನಡುಗುವಂತೆ–ತತ್ತರಿಸಿಬಿಟ್ಟನು. ಮರುಕ್ಷಣದಲ್ಲಿಯೇ ಚೇತರಿಸಿಕೊಂಡು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದ್ರೋಣರು ಐದು ಬಾಣಗಳಿಂದ–ವಾಸುದೇವನನ್ನೂ, ಎಪ್ಪತ್ತುಮೂರು ಬಾಣಗಳಿಂದ- ಅರ್ಜುನನನ್ನೂ, ಮೂರು ಬಾಣಗಳಿಂದ–ಅರ್ಜುನನ ರಥದ ಧ್ವಜವನ್ನೂ ಪ್ರಹರಿಸಿದರು. ಮಹಾರಾಜ! ಪರಾಕ್ರಮಿಗಳಾದ ದ್ರೋಣರು ತಮ್ಮ ಶಿಷ್ಯನಿಗಿಂತಲೂ ಹೆಚ್ಚು ಪರಾಕ್ರಮವನ್ನು ತೋರಿಸಬೇಕೆನ್ನುವ ಆಶಯದಿಂದ ನಿಮೇಷಮಾತ್ರದಲ್ಲಿ ಬಾಣಗಳ ವೃಷ್ಟಿಯಿಂದ ಅರ್ಜುನನು ಕಾಣದಂತೆಯೇ ಮಾಡಿಬಿಟ್ಟರು. ಧೃತರಾಷ್ಟ್ರ! ದ್ರೋಣರು ಬಿಡುತ್ತಿದ್ದ ಬಾಣಗಳು ಒಂದಕ್ಕೊಂದು ಅಂಟಿಕೊಂಡೇ ಧನುಸ್ಸಿನಿಂದ ಹೊರಬರುತ್ತಿರುವುದನ್ನು ನಾವು ನೋಡಿದೆವು. ಒಂದು ಬಾಣಕ್ಕೂ ಮತ್ತೊಂದು ಬಾಣಕ್ಕೂ ನಡುವೆ ವಿಚ್ಛಿತ್ತಿಯೆಂಬುದೇ ಇರಲಿಲ್ಲ. ಅವರ ಅದ್ಭುತವಾದ ಧನುಸ್ಸೂ ಸಹ ಯಾವಾಗಲೂ ಮಂಡಲಾಕಾರವಾಗಿಯೇ ಇರುತ್ತಿದ್ದಿತು. ದ್ರೋಣರಿಂದ ಉತ್ಸೃಷ್ಟವಾದ, ಬಹುಸಂಖ್ಯಾತವಾದ, ರಣಹದ್ದುಗಳ ರೆಕ್ಕೆಗಳಿಂದ ವಿಭೂಷಿತವಾಗಿದ್ದ ಬಾಣಗಳು ವಾಸುದೇವಾರ್ಜುನರ ಮೇಲೆ ಸತತವಾಗಿ ಬೀಳುತ್ತಿದ್ದುವು. ದ್ರೋಣ-ಪಾರ್ಥರ ನಡುವೆ ನಡೆಯುತ್ತಿದ್ದ ಕಡೆಗಾಣದ ಯುದ್ಧವನ್ನು ಕಂಡು ಮಹಾಬುದ್ಧಿಯಾದ ವಾಸುದೇವನು ಮುಂದಿನ ಕರ್ತವ್ಯದ ಬಗೆಗೆ ಕ್ಷಣಕಾಲ ಚಿಂತಿಸಿದನು. ಅನಂತರ ಏನು ಮಾಡಬೇಕೆಂಬುದನ್ನು ನಿಶ್ಚಯಿಸಿದವನಾಗಿ ಧನಂಜಯನೊಡನೆ ಹೇಳಿದನು:

"ಪಾರ್ಥ! ಅರ್ಜುನ! ಮಹಾಬಾಹೋ! ಈ ಸಮಯದಲ್ಲಿ ನಾವು ನಮ್ಮ ಕಾಲವು ವ್ಯರ್ಥವಾಗಿ ಹೋಗದಂತೆ ನಡೆದುಕೊಳ್ಳಬೇಕಾಗಿದೆ. ದ್ರೋಣರನ್ನು ಬಿಟ್ಟು ನಾವು ಮುಂದೆ ಹೋಗೋಣ. ಈ ಸಮಯದಲ್ಲಿ ಇದೇ ಅತ್ಯಂತಮಹತ್ತ್ವದ ಕಾರ್ಯವಾಗಿದೆ."

ಶ್ರೀಕೃಷ್ಣನ ಮಾತನ್ನು ಕೇಳಿದ ಪಾರ್ಥನು ಶ್ರೀಕೃಷ್ಣನಿಗೆ– "ಕೇಶವ! ನಿನ್ನ ಇಚ್ಛೆಯಿದ್ದಂತೆ ಆಗಲಿ"–ಎಂದು ಪ್ರತ್ಯುತ್ತರಿಸಿದನು. ಅನಂತರ ಅರ್ಜುನನು ಮಹಾಭುಜರಾದ ದ್ರೋಣರಿಗೆ ಪ್ರದಕ್ಷಿಣೆಮಾಡಿ ಅಲ್ಲಿಂದ ಹೊರಟುಬಿಟ್ಟನು. ದ್ರೋಣರ ಬಳಿಯಿಂದ ಹಿಂದಿರುಗಿದ ಅರ್ಜುನನು

ಬಾಣಗಳ ಮಳೆಗರೆಯುತ್ತಾ ವ್ಯೂಹದ ಸಮೀಪಕ್ಕೆ ನುಗ್ಗಿದನು. ಆಗ ದ್ರೋಣರೇ ಅರ್ಜುನನನ್ನು ಗಟ್ಟಿಯಾಗಿ ಕೂಗಿ ಹೇಳಿದರು: "ಪಾಂಡುನಂದನ! ನನ್ನೊಡನೆ ಮಾಡುತ್ತಿದ್ದ ಯುದ್ಧವನ್ನು ಮಧ್ಯದಲ್ಲಿಯೇ ನಿಲ್ಲಿಸಿ ನೀನೀಗ ಎಲ್ಲಿಗೆ ಹೋಗುತ್ತಿರುವೆ? ನೀನು ಯಾವಾಗಲೂ ಶತ್ರುಗಳನ್ನು ಜಯಿಸದೇ ಯುದ್ಧದಿಂದ ಹಿಮ್ಮೆಟ್ಟುತ್ತಿರಲಿಲ್ಲವಲ್ಲವೇ?"

**ಗುರುರ್ಭವಾನ್ನ ಮೇ ಶತ್ರುಃ ಶಿಷ್ಯಃ ಪುತ್ರಸಮೋಽಸ್ಮಿ ತೇ ।**
**ನ ಚಾಸ್ತಿ ಸ ಪುಮಾಂಲ್ಲೋಕೇ ಯಸ್ತ್ವಾಂ ಯುಧಿ ಪರಾಜಯೇತ್॥**

"ದ್ರೋಣರೇ! ನೀವು ನನಗೆ ಶತ್ರುಗಳಲ್ಲ. ಪೂಜ್ಯರಾದ ಗುರುಗಳು. ನಾನು ತಮ್ಮ ಶಿಷ್ಯನು. ನಾನು ತಮಗೆ ಪುತ್ರಸಮಾನನಾಗಿದ್ದೇನೆ. ತಮ್ಮನ್ನು ಯುದ್ಧದಲ್ಲಿ ಪರಾಜಯಗೊಳಿಸುವ ಪುರುಷನು ಈ ಲೋಕದಲ್ಲಿಯೇ ಯಾರೂ ಇಲ್ಲ."

ಮಹಾರಾಜ! ಹೀಗೆ ಹೇಳುತ್ತಾ ಜಯದ್ರಥನನ್ನು ಸಂಹಾರ ಮಾಡುವುದರಲ್ಲಿಯೇ ಹೆಚ್ಚು ಉತ್ಸುಕನಾಗಿದ್ದ, ಮಹಾಬಾಹುವಾದ ಅರ್ಜುನನು ಅತ್ಯಂತತ್ವರೆಯಿಂದ ನಿನ್ನ ಸೈನ್ಯದ ಮೇಲೆ ದಾಳಿಮಾಡಿದನು.

ಅರ್ಜುನನು ನಿನ್ನ ಸೇನಾವ್ಯೂಹವನ್ನು ಪ್ರವೇಶಿಸುತ್ತಿದ್ದಾಗ ಪಾಂಚಾಲ ವೀರರಾದ ಮಹಾತ್ಮರಾದ ಯುಧಾಮನ್ಯು ಮತ್ತು ಉತ್ತಮೌಜಸರು ಅರ್ಜುನನ ಚಕ್ರರಕ್ಷಕರಾಗಿ ಅವನ ಹಿಂದೆಯೇ ಹೋದರು. ಆ ಸಮಯದಲ್ಲಿ ಜಯನೂ, ಸಾತ್ವತವಂಶೀಯನಾದ ಕೃತವರ್ಮನೂ, ಕಾಂಬೋಜರಾಜನೂ, ಶ್ರುತಾಯುಷನೂ–ಅರ್ಜುನನನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದರು. ಅವರನ್ನು ಬೆಂಬಲಿಸಿ ಹತ್ತು ಸಾವಿರ ರಥಸೈನಿಕರೂ, ಅಭೀಷಾಹರೂ, ಶಿಬಿ-ಶೂರಸೇನರೂ, ವಸಾತಿ-ಮಾವೇಲ್ಲಕ-ಲಲಿತ್ಥ-ಕೇಕಯ-ಮದ್ರಕರೂ, ನಾರಾಯಣರೆಂಬ ಹೆಸರಿನ ಗೋಪಾಲಗಣಗಳೂ, ಕಾಂಬೋಜದೇಶದ ಸೈನಿಕರೂ ಹೊರಟರು. ಶೂರಸಮ್ಮತರಾದ ಅವರೆಲ್ಲರನ್ನೂ ಹಿಂದೆ ದುರ್ಯೋಧನನ ಸಲುವಾಗಿ ಕರ್ಣನು ಜಯಿಸಿ ಅವರ ರಾಜ್ಯಗಳೆಲ್ಲವನ್ನೂ ಸ್ವಾಧೀನಪಡಿಸಿಕೊಂಡಿದ್ದನು. ಹೃಷ್ಟಾತ್ಮರಾದ ಆ ರಾಜರೆಲ್ಲರೂ ಭಾರದ್ವಾಜರನ್ನು ಮುಂದೆಮಾಡಿಕೊಂಡು ಅರ್ಜುನನ ಮೇಲೆ ಯುದ್ಧಮಾಡತೊಡಗಿದರು. ಪುತ್ರಶೋಕದಿಂದ ಪರಿತಪಿಸುತ್ತಿದ್ದ, ಕ್ರುದ್ಧನಾಗಿದ್ದ, ಪ್ರಾಣಾಂತಕನಾದ (ಮೃತ್ಯುವಿಗೆ ಸಮಾನನಾಗಿದ್ದ), ಯುದ್ಧದಲ್ಲಿ

ತನ್ನ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧಮಾಡುತ್ತಿದ್ದ, ಕವಚವೇ ಮೊದಲಾದ ಸರ್ವೋಪಕರಣಗಳಿಂದಲೂ ಸನ್ನದ್ಧನಾಗಿದ್ದ, ಚಿತ್ರಯೋಧಿಯಾದ–ಮದಿಸಿದ ಸಲಗವು ಆನೆಯ ಗುಂಪಿನೊಳಗೆ ನುಗ್ಗಿಹೋಗುವಂತೆ–ನಿನ್ನ ಸೈನ್ಯದೊಳಗೆ ನುಗ್ಗಿಹೋಗುತ್ತಿದ್ದ, ಮಹಾಪರಾಕ್ರಮಿಯಾದ, ಮಹಾಧನುಷ್ಮಂತನಾದ, ನರವ್ಯಾಘ್ರನಾದ ಅರ್ಜುನನನ್ನು ನಿನ್ನ ಕಡೆಯ ಅಸಂಖ್ಯಾತಯೋಧರು ಮುಂದೆ ಹೋಗದಂತೆ ತಡೆದು ನಿಲ್ಲಿಸಿದರು. ಅನಂತರ ಪರಸ್ಪರವಾಗಿ ಯುದ್ಧಕ್ಕೆ ಆಹ್ವಾನಿಸುತ್ತಿದ್ದ ನಮ್ಮ ಕಡೆಯ ಯೋಧರಿಗೂ ಅರ್ಜುನನಿಗೂ ಭಯಂಕರವಾದ, ರೋಮಾಂಚಕರವಾದ ಯುದ್ಧವು ಪ್ರಾರಂಭವಾಯಿತು. ಜಯದ್ರಥನನ್ನು ವಧಿಸುವ ಇಚ್ಛೆಯಿಂದ ಮುನ್ನುಗ್ಗಿ ಬರುತ್ತಿದ್ದ ಪುರುಷರ್ಷಭನಾದ ಅರ್ಜುನನನ್ನು–ಶರೀರದಲ್ಲಿ ಕಾಣಿಸಿಕೊಂಡ ವ್ಯಾಧಿಯನ್ನು ಒಳ್ಳೆಯ ಚಿಕಿತ್ಸೆಗಳು ಮುಂದುವರಿಯಲು ಬಿಡದಂತೆ–ನಮ್ಮ ಕಡೆಯ ಮಹಾಯೋಧರೆಲ್ಲರೂ ಒಟ್ಟಾಗಿ ಸೇರಿ ನಿರೋಧಿಸಿದರು."

೯೧ನೆಯ ಅಧ್ಯಾಯವು ಮುಗಿಯಿತು.

೯೨ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣ–ಕೃತವರ್ಮರೊಡನೆ ಅರ್ಜುನನು ಯುದ್ಧಮಾಡುತ್ತಲೇ ವ್ಯೂಹವನ್ನು ಪ್ರವೇಶಿಸಿದುದು: ಶ್ರುತಾಯುಧನ ಮರಣ: ಅರ್ಜುನನಿಂದ ಸುದಕ್ಷಿಣನ ವಧೆ

"ಮಹಾರಾಜ! ಮಹಾಬಲವಿಕ್ರಮನಾದ ಪಾರ್ಥನನ್ನು ನಮ್ಮ ಕಡೆಯ ಅಸಂಖ್ಯಾತಯೋಧರು ತಡೆದು ನಿಲ್ಲಿಸಿದರು. ಅನಂತರ ದ್ರೋಣರೂ ಸಹ ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನನ್ನೇ ಹಿಂಬಾಲಿಸಿದರು. ಸೂರ್ಯನು ಕಿರಣಗಳನ್ನು ಸರ್ವತ್ರ ಪ್ರಸರಿಸುವಂತೆ–ಅರ್ಜುನನು ತನ್ನ ತೀಕ್ಷ್ಣವಾದ ಬಾಣಗಳನ್ನು ಶತ್ರುಸೈನ್ಯದ ಮೇಲೆ ಪ್ರಸರಿಸುತ್ತಾ (ಸುರಿಸುತ್ತಾ)–ಮನುಷ್ಯರ ಶರೀರಗಳನ್ನು ನಾನಾವಿಧವಾದ ವ್ಯಾಧಿಗಳು ಪರಿತಾಪಗೊಳಿಸುವಂತೆ–ಶತ್ರುಸೈನಿಕರನ್ನು ಪರಿತಾಪಗೊಳಿಸಿದನು. ಶತ್ರುಪಕ್ಷದ ಯೋಧರ ಕುದುರೆಗಳಿಗೆ ಅರ್ಜುನನ ಬಾಣಗಳಿಂದ ಗಾಯಗಳಾದುವು. ರಥಗಳು ಚೂರ್ಣೀಕೃತ

ವಾದುವು. ಮಾವಟಿಗರೊಡನೆಯೇ ಆನೆಗಳು ಅಸುವನ್ನು ತೊರೆದು ಕೆಳಗುರುಳಿದುವು. ರಥಗಳಲ್ಲಿದ್ದ ಛತ್ರಗಳು ಕತ್ತರಿಸಲ್ಪಟ್ಟು ರಣಾಂಗಣದ ಸುತ್ತಲೂ ಬಿದ್ದಿದ್ದುವು. ಅನೇಕರಥಗಳ ಚಕ್ರಗಳೇ ಧ್ವಂಸವಾಗಿಹೋಗಿದ್ದುವು. ಅರ್ಜುನನ ಬಾಣಗಳಿಂದ ಪೀಡಿತವಾದ ಸೈನ್ಯಗಳು ರಣಾಂಗಣದಿಂದ ಪಲಾಯನಮಾಡುತ್ತಿದ್ದುವು. ಈ ರೀತಿಯಲ್ಲಿ ಭಯಂಕರವಾದ ಯುದ್ಧ ವಾಗುತ್ತಿದ್ದಾಗ–'ಎಲ್ಲಿ ಏನಾಗುತ್ತಿದೆ?'–ಎಂಬುದೊಂದೂ ತಿಳಿಯುತ್ತಿರಲಿಲ್ಲ. ಯುದ್ಧದಲ್ಲಿ ಕೌರವಯೋಧರು, ಒಬ್ಬರು ಮತ್ತೊಬ್ಬರನ್ನು ಬೆಂಬಲಿಸುತ್ತಾ ನೇರವಾಗಿ ಹೋಗುವ ಬಾಣಗಳಿಂದ ಅರ್ಜುನನನ್ನು ಅನವರತವಾಗಿ ಪ್ರಹರಿಸುತ್ತಿದ್ದರು. ಅರ್ಜುನನೂ ತನ್ನ ತೀಕ್ಷ್ಣವಾದ ಬಾಣಗಳಿಂದ ನಿನ್ನ ಸೈನ್ಯವನ್ನು ಪದೇ-ಪದೇ ಕಂಪನಗೊಳಿಸುತ್ತಿದ್ದನು. ಸತ್ಯಸಂಗರನಾದ (ಸತ್ಯನಿಷ್ಠ ನಾದ), ಶ್ವೇತಾಶ್ವನಾದ ಅರ್ಜುನನು ತನ್ನ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡುವ ಇಚ್ಛೆಯಿಂದ (ಕಾರ್ಯರೂಪಕ್ಕೆ ತರುವ ಇಚ್ಛೆಯಿಂದ) ರಕ್ತಾಶ್ವ ರಾದ, ರಥಶ್ರೇಷ್ಠರಾದ ದ್ರೋಣರನ್ನು ಆಕ್ರಮಿಸಿದನು. ಮಹಾ ಧನುಷ್ಮಂತನಾದ, ಅಂತೇವಾಸಿಯಾದ (ಶಿಷ್ಯನಾದ) ಅರ್ಜುನನನ್ನು ಆಚಾರ್ಯರು ನೇರವಾಗಿಹೋಗುವ, ಮರ್ಮಭೇದಿಗಳಾದ ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದರು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೂ ದ್ರೋಣರ ಮರ್ಮಭೇದಿಗಳಾದ ಬಾಣಗಳ ವೇಗವನ್ನು ನಿರಸನಗೊಳಿಸಲು ಸಮರ್ಥವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ದ್ರೋಣ ರನ್ನು ಬಹಳ ಶೀಘ್ರವಾಗಿ ಎದುರಿಸಿದನು. ಮಹಾತ್ಮರಾದ ದ್ರೋಣರು– ಅರ್ಜುನನು ಬಿಟ್ಟ ಭಲ್ಲಗಳನ್ನು ಬಗ್ಗಿದ ಗಿಣ್ಣುಗಳಿದ್ದ ಭಲ್ಲಗಳಿಂದಲೇ ಪ್ರಹರಿಸಿ ನಿರಸನಗೊಳಿಸಿ ಅನಂತರ ಬ್ರಹ್ಮಾಸ್ತ್ರವನ್ನೂ ಪ್ರಕಟಿಸಿದರು. ಮಹಾರಾಜ! ಆ ಸಮಯದಲ್ಲಿ ನಾವು ಅಸ್ತ್ರವಿದ್ಯೆಯಲ್ಲಿ ದ್ರೋಣಾಚಾರ್ಯರಿಗಿದ್ದ ಅದ್ಭುತ ಪರಿ ಶ್ರಮವನ್ನು ನೋಡಿದೆವು. ಯುವಕನಾದ ಅರ್ಜುನನು ಎಷ್ಟೇ ಪ್ರಯತ್ನಿಸಿ ದರೂ ಅವನಿಗೆ ತನ್ನ ಬಾಣಗಳಿಂದ ದ್ರೋಣರನ್ನು ಗಾಯಗೊಳಿಸಲು ಕೂಡ ಸಾಧ್ಯವಾಗಲಿಲ್ಲ. ಮಹಾಮೇಘವು ಸಾವಿರಾರು ಪ್ರಕಾರವಾಗಿ ಜಲಧಾರೆ ಗಳನ್ನು ಸುರಿಸುವಂತೆ ದ್ರೋಣಮೇಘವು ಪಾರ್ಥಪರ್ವತದ ಮೇಲೆ ಬಾಣ ಗಳೆಂಬ ಜಲಧಾರೆಗಳನ್ನು ಸುರಿಸಿತು. ಆಚಾರ್ಯರು ಬ್ರಹ್ಮಾಸ್ತ್ರದ ಮೂಲಕ

ವಾಗಿ ಸುರಿಸಿದ ಬಾಣಗಳ ವರ್ಷವನ್ನು ತೇಜಸ್ವಿಯಾದ ಅರ್ಜುನನೂ ಬ್ರಹ್ಮಾಸ್ತ್ರಪ್ರಯೋಗದ ಮೂಲಕವಾಗಿಯೇ ಎದುರಿಸಿ, ಬ್ರಹ್ಮಾಸ್ತ್ರದ ಮೂಲಕ ವಾಗಿ ಬರುತ್ತಿದ್ದ ಬಾಣಗಳ ಸಮೂಹವನ್ನು ತನ್ನ ಬಾಣಸಮೂಹಗಳಿಂದಲೇ ನಿರಸನಗೊಳಿಸಿದನು. ಅನಂತರ ದ್ರೋಣರು ಇಪ್ಪತ್ತೈದು ಬಾಣಗಳಿಂದ ಶ್ವೇತವಾಹನನನ್ನು ಪ್ರಹರಿಸಿದರು. ಅಲ್ಲದೇ ಶೀಘ್ರವಾಗಿ ಹೋಗುವ ಎಪ್ಪತ್ತು ಬಾಣಗಳಿಂದ ವಾಸುದೇವನ ತೋಳುಗಳಲ್ಲಿಯೂ ಮತ್ತು ವಕ್ಷಃಸ್ಥಳದಲ್ಲಿಯೂ ಪ್ರಹರಿಸಿದರು. ಧೀಮಂತನಾದ ಪಾರ್ಥನು ಅದನ್ನು ನೋಡಿ ಗಹಗಹಿಸಿ ನಗುತ್ತಾ ನಿಶಿತವಾದ ಬಾಣಗಳನ್ನು ಸತತವಾಗಿ ಬಿಡುತ್ತಿದ್ದ, ಶರಗಳ ಸಮೂಹ ದಿಂದಲೇ ಕೂಡಿದ್ದ ದ್ರೋಣರನ್ನು ಪುನಃ ಬಾಣಗಳ ಪ್ರಯೋಗದಿಂದ ಎದುರಿಸಿದನು. ಆದರೆ ಯುದ್ಧವು ಮುಂದುವರಿದಂತೆಲ್ಲಾ ದ್ರೋಣರ ಪರಾಕ್ರಮವೇ ಹೆಚ್ಚುತ್ತಿದ್ದಿತು. ರಥಸತ್ತಮರಾದ ಕೃಷ್ಣಾರ್ಜುನರು, ದ್ರೋಣರು ಪ್ರಹರಿಸಿದ ಬಾಣಗಳಿಂದ ಬಹಳವಾಗಿ ಗಾಯಗೊಂಡರು. ಪ್ರಳಯಕಾಲದಲ್ಲಿ ಹುಟ್ಟಿದ ಅಗ್ನಿಯಂತೆಯೇ ತಮ್ಮನ್ನು ಬಾಣಗಳಿಂದ ದಹಿಸುತ್ತಿದ್ದ ದುರ್ಧರ್ಷರಾದ ದ್ರೋಣರನ್ನು ಬಿಟ್ಟು ಕೃಷ್ಣಾರ್ಜುನರು ಬೇರೆಯ ಕಡೆಗೆ ಹೊರಟುಹೋದರು. ದ್ರೋಣರ ಚಾಪದಿಂದ ಪುಂಖಾನುಪುಂಖವಾಗಿ ಹೊರಬರುತ್ತಿದ್ದ ನಿಶಿತವಾದ ಬಾಣಗಳ ಉಪಟಳದಿಂದ ತಪ್ಪಿಸಿಕೊಂಡ ಕಿರೀಟಧರನಾದ ಕೌಂತೇಯನು ಭೋಜವಂಶೀಯನಾದ ಕೃತವರ್ಮನ ಸೈನ್ಯಗಳನ್ನು ಧ್ವಂಸಮಾಡಲು ಉಪಕ್ರಮಿಸಿದನು. ಮೈನಾಕಪರ್ವತದಂತೆ ವಿಚಲಿತರಾಗದೇ, ಸ್ವಲ್ಪವಾದರೂ ಶ್ರಮವೇ ಇಲ್ಲದೇ ಯುದ್ಧಮಾಡುತ್ತಿದ್ದ ದ್ರೋಣರನ್ನು ಬಿಟ್ಟು ಅರ್ಜುನನು ಕೃತವರ್ಮ ಮತ್ತು ಕಾಂಬೋಜರ ರಥಗಳ ಮಧ್ಯಭಾಗದಲ್ಲಿ ತನ್ನ ರಥವನ್ನು ನುಗ್ಗಿಸಿ ಮುಂದೆ ಹೋದನು.

ಆ ಸಮಯದಲ್ಲಿ ಏಕಾಗ್ರತೆಯಿಂದಿದ್ದ ನರವ್ಯಾಘ್ರನಾದ ಕೃತವರ್ಮನು, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಹತ್ತು ಬಾಣಗಳಿಂದ ದುರ್ಧರ್ಷನಾದ, ಕುರುಶ್ರೇಷ್ಠನಾದ ಅರ್ಜುನನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನೂ ಕೃತವರ್ಮನನ್ನು ನೂರು ಬಾಣಗಳಿಂದ ಪ್ರಹರಿಸಿದನು. ಪುನಃ ಪಾರ್ಥನು ಕೃತವರ್ಮನನ್ನು ವಿಮೋಹಗೊಳಿಸಲೋ ಎಂಬಂತೆ ಮತ್ತೆ ಮೂರು ಬಾಣಗಳಿಂದ ಪ್ರಹರಿಸಿದನು. ಕೃತವರ್ಮನು ಅರ್ಜುನನ ಬಾಣಗಳ

ಪ್ರಹಾರದಿಂದ ವಿಮೋಹಗೊಳ್ಳದೇ ಗಹಗಹಿಸಿ ನಗುತ್ತಾ ವಸುದೇವನ ಮಗನಾದ ಮಾಧವನನ್ನೂ, ಕುಂತಿಯ ಮಗನಾದ ಪಾರ್ಥನನ್ನೂ ಇಪ್ಪತ್ತೈದು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನೂ ಕೃತವರ್ಮನ ಧನುಸ್ಸನ್ನು ಕತ್ತರಿಸಿ ಅಗ್ನಿಯ ಜ್ವಾಲೆಗಳಂತೆ ಆಕಾರಗಳನ್ನು ಹೊಂದಿದ್ದ, ಕೋಪಗೊಂಡ ನಾಗರಹಾವುಗಳಿಗೆ ಸಮಾನವಾಗಿದ್ದ ಇಪ್ಪತ್ತೊಂದು ಬಾಣ ಗಳಿಂದ ಕೃತವರ್ಮನನ್ನು ಗಾಯಗೊಳಿಸಿದನು. ಒಡನೆಯೇ ಮಹಾರಥಿ ಯಾದ ಭೋಜನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಐದು ಬಾಣಗಳಿಂದ ಅರ್ಜುನನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಕೃತವರ್ಮನು ನಿಶಿತವಾದ ಐದು ಬಾಣಗಳಿಂದ ಅರ್ಜುನನನ್ನು ಪುನಃ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಪಾರ್ಥನು ಒಂಬತ್ತು ಬಾಣಗಳಿಂದ ಕೃತವರ್ಮನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಬಹಳ ಹೊತ್ತಿನಿಂದ ಅರ್ಜುನನು ಕೃತವರ್ಮನೊಡನೆಯೇ ಯುದ್ಧದಲ್ಲಿ ತೊಡಗಿರುವುದನ್ನು ಕಂಡು ವೃಷ್ಣಿವಂಶಪ್ರದೀಪನಾದ ಶ್ರೀಕೃಷ್ಣನು 'ಇಂತಹ ಸಣ್ಣ-ಪುಟ್ಟ ಕಾಳಗಗಳಲ್ಲಿ ನಾವಿಂದು ಕಾಲಕಳೆಯ ಬಾರದು'–ಎಂದು ಯೋಚಿಸಿದವನಾಗಿ ಅರ್ಜುನನೊಡನೆ ಹೇಳಿದನು: "ಅರ್ಜುನ! ಕೃತವರ್ಮನು ನಿನ್ನ ಸಂಬಂಧಿಯೆಂಬ ಕಾರಣದಿಂದ ಅವನ ವಿಷಯದಲ್ಲಿ ನೀನು ದಯೆತೋರುವ ಕಾರಣವಿಲ್ಲ. ಇವನು ನಮ್ಮ ಸಂಬಂಧಿಯೆಂಬುದನ್ನು ಸಂಪೂರ್ಣವಾಗಿ ಮರೆತು ತೀಕ್ಷ್ಣವಾದ ಬಾಣ ಗಳಿಂದ ಮಥಿಸಿ ಇವನನ್ನು ಕೂಡಲೇ ಸಂಹರಿಸು." ಶ್ರೀಕೃಷ್ಣನು ಹೀಗೆ ಹೇಳಿದೊಡನೆಯೇ ಅರ್ಜುನನು ಜಾಗ್ರತನಾಗಿ ಕೃತವರ್ಮನನ್ನು ತೀಕ್ಷ್ಣವಾದ ಬಾಣಗಳಿಂದ ಮೂರ್ಛಿತನನ್ನಾಗಿ ಮಾಡಿ, ವೇಗವಾಗಿ ಹೋಗುವ ಕುದುರೆ ಗಳ ಸಹಾಯದಿಂದ ಕಾಂಬೋಜರ ಸೈನ್ಯದ ಬಳಿಗೆ ಹೋಗಿ ಆಕ್ರಮಿಸಿದನು. ಇತ್ತಲಾಗಿ ಮೂರ್ಛೆಯಿಂದ ಎಚ್ಚೆತ್ತ ಹಾರ್ದಿಕ್ಯನು (ಕೃತವರ್ಮನು) ಅರ್ಜುನನು ವ್ಯೂಹದೊಳಕ್ಕೆ ನುಗ್ಗಿಹೋದನೆಂದು ತಿಳಿದು ಪರಮಕ್ರುದ್ಧನಾಗಿ ಬಾಣದಿಂದ ಯುಕ್ತವಾಗಿದ್ದ ಧನುಸ್ಸನ್ನು ಟೇಂಕರಿಸುತ್ತಾ ಅರ್ಜುನನ ರಥದ ಚಕ್ರರಕ್ಷಕರಾಗಿದ್ದ ಪಾಂಚಾಲರಾಜಕುಮಾರರಾದ ಯುಧಾಮನ್ಯು ಮತ್ತು ಉತ್ತಮೌಜಸರನ್ನು ಆಕ್ರಮಿಸಿದನು. ಅವರಿಬ್ಬರೂ ಅರ್ಜುನನ ರಥದ ಚಕ್ರಗಳನ್ನು ರಕ್ಷಿಸುತ್ತಾ ಅರ್ಜುನನ ಹಿಂದೆಯೇ ಹೋಗುತ್ತಿದ್ದರು. ಅರ್ಜುನನು

ಮುಂದೆ ಹೋದಕೂಡಲೇ ರಥದಲ್ಲಿ ಕುಳಿತಿದ್ದ ಕೃತವರ್ಮನು ಅರ್ಜುನನನ್ನೇ ಹಿಂಬಾಲಿಸಿ ಬರುತ್ತಿದ್ದ ಪಾಂಚಾಲರಾಜಕುಮಾರರನ್ನು ಬಾಣಗಳಿಂದ ತಡೆದು ನಿಲ್ಲಿಸಿದನು. ಕೃತವರ್ಮನು ನಿಶಿತವಾದ ಮೂರು ಬಾಣಗಳಿಂದ ಯುಧಾಮನ್ಯುವನ್ನೂ, ನಾಲ್ಕು ಬಾಣಗಳಿಂದ ಉತ್ತಮೌಜಸನನ್ನೂ ಪ್ರಹರಿಸಿ ದನು. ಅದಕ್ಕೆ ಪ್ರತಿಯಾಗಿ ಪಾಂಚಾಲರು ಕೃತವರ್ಮನನ್ನು ಹತ್ತು-ಹತ್ತು ಬಾಣಗಳಿಂದ ಪ್ರಹರಿಸಿದರು. ಕೃತವರ್ಮನು ಪುನಃ ಯುಧಾಮನ್ಯುವನ್ನೂ ಮತ್ತು ಉತ್ತಮೌಜಸನನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಒಡನೆಯೇ ಪಾಂಚಾಲರಾಜಕುಮಾರರು ಹಾರ್ದಿಕ್ಯನ ಧ್ವಜವನ್ನೂ ಧನುಸ್ಸನ್ನೂ ಕತ್ತರಿಸಿದರು. ಅದರಿಂದ ಪರಮಕ್ರುದ್ಧನಾದ ಕೃತವರ್ಮನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಪಾಂಚಾಲಯೋಧರನ್ನು ಧನುಸ್ಸಿನಿಂದ ವಿಹೀನರನ್ನಾಗಿ ಮಾಡಿದುದಲ್ಲದೇ ಅವರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು.

ಯುಧಾಮನ್ಯು ಮತ್ತು ಉತ್ತಮೌಜಸರು ಒಡನೆಯೇ ಬೇರೆಯ ಧನುಸ್ಸುಗಳನ್ನು ತೆಗೆದುಕೊಂಡು ಹಾರ್ದಿಕ್ಯನನ್ನು ಬಾಣಗಳಿಂದ ಬಹಳವಾಗಿ ಪೀಡಿಸಿದರು. ಆ ಮಧ್ಯದಲ್ಲಿ ಅರ್ಜುನನು ಶತ್ರುಗಳ ವ್ಯೂಹವನ್ನು ಪ್ರವೇಶಿಸಿದನು. ಕೃತವರ್ಮನಿಂದ ತಡೆಯಲ್ಪಟ್ಟ ನರರ್ಷಭರಾದ ಯುಧಾಮನ್ಯು-ಉತ್ತಮೌಜಸರಿಗೆ ಅರ್ಜುನನನ್ನು ಹಿಂಬಾಲಿಸಿ ಕೌರವರ ಸೈನ್ಯದ ವ್ಯೂಹದೊಳಕ್ಕೆ ಪ್ರವೇಶಿಸಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಶ್ವೇತವಾಹನನಾದ ಅರ್ಜುನನು ಬಹಳ ತ್ವರೆಯಿಂದ ಯುದ್ಧದಲ್ಲಿ ಶತ್ರುಗಳ ಸೈನ್ಯವನ್ನು ಧ್ವಂಸಮಾಡುತ್ತಿದ್ದನು. ಆದರೆ ಶತ್ರುಹಂತಕನಾದ ಅರ್ಜುನನು ಕೃತವರ್ಮನನ್ನು ಕೊಲ್ಲಬಹುದಾಗಿದ್ದರೂ (ಬಂಧುವೆಂಬ ಅಭಿಪ್ರಾಯದಿಂದ) ಸಂಹಾರಮಾಡಲಿಲ್ಲ. ಈ ರೀತಿಯಲ್ಲಿ ಅರ್ಜುನನು ಶತ್ರುಗಳ ಮಧ್ಯದಲ್ಲಿ ನುಗ್ಗಿಹೋಗುತ್ತಿರುವುದನ್ನು ಶೂರನಾದ ಶ್ರುತಾಯುಧರಾಜನು ನೋಡಿ, ಪರಮಕ್ರುದ್ಧನಾಗಿ ತನ್ನ ದೊಡ್ಡದಾದ ಧನುಸ್ಸನ್ನು ಟೇಂಕರಿಸುತ್ತಾ ಅರ್ಜುನನನ್ನು ಎದುರಿಸಿ ಮೂರು ಬಾಣಗಳಿಂದ ಅರ್ಜುನನನ್ನೂ-ಎಪ್ಪತ್ತು ಬಾಣಗಳಿಂದ ಕೃಷ್ಣನನ್ನೂ ಪ್ರಹರಿಸಿ, ಸುತೀಕ್ಷ್ಣ ವಾದ ಕ್ಷುರಪ್ರದಿಂದ ಪಾರ್ಥನ ಧ್ವಜವನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಅರ್ಜುನನು-ದೊಡ್ಡ ಆನೆಯನ್ನು ಮಾವಟಿಗನು ಅಂಕುಶದಿಂದ ಚುಚ್ಚು ವಂತೆ–ಬಗ್ಗಿದ ಗಿಣ್ಣುಗಳಿದ್ದ ತೊಂಬತ್ತು ಬಾಣಗಳಿಂದ ಶ್ರುತಾಯುಧನನ್ನು

ಪ್ರಹರಿಸಿದನು. ಪಾಂಡವೇಯನ ಆ ಅದ್ಭುತಪರಾಕ್ರಮವನ್ನು ಕಂಡು ಶ್ರುತಾಯುಧನಿಗೆ ಸಹಿಸಲಾಗಲಿಲ್ಲ. ಶ್ರುತಾಯುಧನು ಒಡನೆಯೇ ಎಪ್ಪತ್ತೇಳು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಅದರಿಂದ ಕ್ರುದ್ಧನಾದ ಅರ್ಜುನನು ಶ್ರುತಾಯುಧನ ಧನುಸ್ಸನ್ನೂ ಮತ್ತು ಬತ್ತಳಿಕೆಯನ್ನೂ ಕತ್ತರಿಸಿ ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಶ್ರುತಾಯುಧನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಕ್ರೋಧಮೂರ್ಛಿತನಾದ ಶ್ರುತಾಯುಧರಾಜನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಒಂಬತ್ತು ಬಾಣಗಳಿಂದ ಅರ್ಜುನನ ತೋಳು ಗಳನ್ನೂ ಮತ್ತು ವಕ್ಷಃಸ್ಥಳವನ್ನೂ ಪ್ರಹರಿಸಿದನು. ಅನಂತರ ಅರಿಂದಮನಾದ ಅರ್ಜುನನು ನಗುನಗುತ್ತಲೇ ಶ್ರುತಾಯುಧನನ್ನು ಅನೇಕಸಾವಿರ ಬಾಣಗಳಿಂದ ಪೀಡಿಸತೊಡಗಿದನು. ಮಹಾಬಲನಾದ ಪಾರ್ಥನು ಬಹಳ ಶೀಘ್ರವಾಗಿ ಶ್ರುತಾಯುಧನ ಕುದುರೆಗಳನ್ನೂ ಮತ್ತು ಸಾರಥಿಯನ್ನೂ ಸಂಹರಿಸಿ, ಎಪ್ಪತ್ತು ಬಾಣಗಳಿಂದ ರಾಜನನ್ನೂ ಪ್ರಹರಿಸಿದನು. ಕುದುರೆಗಳು ಸತ್ತುಹೋದನಂತರ ವೀರ್ಯವಂತನಾದ ಶ್ರುತಾಯುಧನು ಆ ರಥವನ್ನು ಬಿಟ್ಟು ಗದೆಯನ್ನು ತೆಗೆದುಕೊಂಡು ಕೆಳಕ್ಕೆ ಧುಮುಕಿ ಪಾರ್ಥನ ಕಡೆಗೆ ಧಾವಿಸಿದನು.

ಮಹಾರಾಜ! ಶ್ರುತಾಯುಧರಾಜನು ಸಾಮಾನ್ಯನಲ್ಲ. ಅವನು ವರುಣನ ಮಗ. ಶೀತಲವಾದ ನೀರಿನಿಂದ ಕೂಡಿದ್ದ ಪರ್ಣಾಶಾ ಎಂಬ ಮಹಾನದಿಯೇ ಅವನ ತಾಯಿಯಾಗಿದ್ದಳು. ಅವನು ಹುಟ್ಟಿದ ಸಮಯದಲ್ಲಿ ಅವನ ತಾಯಿಯಾದ ಪರ್ಣಾಶಳು ತನ್ನ ಮಗನ ಸಲುವಾಗಿ ವರುಣನಿಂದ ಈ ವರವನ್ನು ಬೇಡಿದಳು:

**ಅವಧ್ಯೋಽಯಂ ಭವೇಲ್ಲೋಕೇ ಶತ್ರೂಣಾಂ ತನಯೋ ಮಮ।**

"ಈ ನನ್ನ ಮಗನು ಶತ್ರುಗಳಿಂದ ಅವಧ್ಯನಾಗಲಿ." –ಪರ್ಣಾಶಳ ಆ ಪ್ರಾರ್ಥನೆಯನ್ನು ಕೇಳಿ ಸುಪ್ರೀತನಾದ ವರುಣನು ಹೇಳಿದನು: "ಭದ್ರೇ! ಈ ನಿನ್ನ ಮಗನಿಗೆ ನಾನು ಹಿತಕರವಾದ ವರವನ್ನೇ ದಯಪಾಲಿಸುತ್ತೇನೆ. ಈ ದಿವ್ಯವಾದ ಅಸ್ತ್ರವನ್ನು ಇವನಿಗೆ ಕೊಡುತ್ತೇನೆ. ಈ ಅಸ್ತ್ರದ ಪ್ರಭಾವದಿಂದ ಇವನು ಶತ್ರುಗಳಿಂದ ಅವಧ್ಯನಾಗುತ್ತಾನೆ. (ಈ ಅಸ್ತ್ರವು ಇವನ ಬಳಿಯಲ್ಲಿ

ಇರುವವರೆಗೂ ಇವನನ್ನು ವಧಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.) ಆದರೆ:

**ನಾಸ್ತಿ ಚಾಪ್ಯಮರತ್ವಂ ವೈ ಮನುಷ್ಯಸ್ಯ ಕಥಂಚನ ।**
**ಸರ್ವೇಣಾವಶ್ಯಮರ್ತವ್ಯಂ ಜಾತೇನ ಸರಿತಾಂ ವರೇ ॥೪೭॥**
**ದುರ್ಧರ್ಷಸ್ತ್ವೇಷ ಶತ್ರೂಣಾಂ ರಣೇಷು ಭವಿತಾ ಸದಾ ।**
**ಅಸ್ತ್ರಸ್ಯಾಸ್ಯ ಪ್ರಭಾವಾದ್ವೈ ವ್ಯೇತು ತೇ ಮಾನಸೋ ಜ್ವರಃ ॥೪೮॥**

ಸರಿತ್‌ಶ್ರೇಷ್ಠಳೇ! ಇವನು ಮನುಷ್ಯನಾದುದರಿಂದ ಇವನಿಗೆ ಅಮರತ್ವವು ಪ್ರಾಪ್ತವಾಗುವುದಿಲ್ಲ. ಈ ಭೂಮಿಯಲ್ಲಿ ಹುಟ್ಟಿದ ಮೇಲೆ ಎಲ್ಲರೂ ಒಂದು ದಿನ ಸಾಯಲೇಬೇಕು. ಆದರೆ ನಾನು ಕೊಡಲಿರುವ ಈ ಅಸ್ತ್ರದ ಪ್ರಭಾವದಿಂದಾಗಿ ಇವನು ಯುದ್ಧದಲ್ಲಿ ಶತ್ರುಗಳಿಗೆ ದುರ್ಧರ್ಷನಾಗಿರುತ್ತಾನೆ. ಇವನನ್ನು ಶತ್ರುಗಳು ಸುಲಭವಾಗಿ ಜಯಿಸಲಾರರು. ಇಷ್ಟರಿಂದಲೇ ನೀನು ತೃಪ್ತಳಾಗಿ ನಿನ್ನ ಮನಸ್ಸಿನ ಚಿಂತೆಯನ್ನು ದೂರಮಾಡು."

ವರುಣನು ಹೀಗೆ ಹೇಳಿ ಮಂತ್ರೋಪದೇಶಪೂರ್ವಕವಾಗಿ ಶ್ರುತಾಯುಧನಿಗೆ ಗದೆಯನ್ನು ದಯಪಾಲಿಸಿದನು.

ಆ ಗದೆಯನ್ನು ಪಡೆದುಕೊಂಡನಂತರ ಪರ್ಣಾಶೆಯ ಮಗನು ಲೋಕದಲ್ಲಿ ದುರಾಧರ್ಷನೂ (ಶತ್ರುಗಳಿಂದ ಎದುರಿಸಲು ಅಸಾಧ್ಯನೂ) ಆದನು ಮತ್ತು ಶ್ರುತಾಯುಧನೆಂದೂ ಎಲ್ಲ ಲೋಕಗಳಲ್ಲಿಯೂ ವಿಖ್ಯಾತನಾದನು. ಗದೆಯನ್ನು ಅನುಗ್ರಹಿಸಿ ಕೊಟ್ಟನಂತರ ಮತ್ತೆ ಜಲೇಶ್ವರನಾದ ವರುಣನು ತನ್ನ ಮಗನಿಗೆ ಶ್ರೇಯಸ್ಕರವಾದ ಈ ಮಾತುಗಳನ್ನೂ ಹೇಳಿದ್ದನು:

**ಅಯುಧ್ಯತಿ ನ ಮೋಕ್ತವ್ಯಾ ಸಾ ತ್ವಯ್ಯೇವ ಪತೇದಿತಿ।**
**ಹನ್ಯಾದೇಷಾ ಪ್ರತೀಪಂ ಹಿ ಪ್ರಯೋಕ್ತಾರಮಪಿ ಪ್ರಭೋ ॥೫೧॥**

"ಯುದ್ಧಮಾಡದೇ ಇರುವವನ ಮೇಲೆ ಈ ಗದೆಯನ್ನು ಪ್ರಯೋಗಿಸಬಾರದು. ಹಾಗೆ ಪ್ರಯೋಗಿಸಿದ್ದೇ ಆದರೆ ಈ ಗದೆಯು ನಿನ್ನ ಮೇಲೆಯೇ ಬೀಳುತ್ತದೆ. ಪ್ರಯೋಕ್ತೃವು ಪ್ರತಿಕೂಲವಾದ ಆಚರಣೆಯುಳ್ಳ

ವನಾದರೆ (ದುರಾಚಾರಿಯಾದರೆ) ಆಗಲೂ ಸಹ ಇದು ಪ್ರಯೋಕ್ತೃವನ್ನೇ ಕೊಲ್ಲುತ್ತದೆ.”

ವರುಣನು ತನ್ನ ಮಗನಿಗೆ ಮೊದಲೇ ಇಂತಹ ಎಚ್ಚರಿಕೆಯನ್ನು ಕೊಟ್ಟಿದ್ದರೂ–ಅವಸಾನಕಾಲವು ಪ್ರಾಪ್ತವಾಗಿದ್ದುದರಿಂದ ಶ್ರುತಾಯುಧನು ಈ ಯುದ್ಧಸಮಯದಲ್ಲಿ ವರುಣನ ಮಾತನ್ನು ಉಲ್ಲಂಘಿಸಿದನು. ವೀರರನ್ನು ಸಂಹಾರಮಾಡುವ ಪ್ರಭಾವವನ್ನು ಹೊಂದಿದ್ದ ಆ ಗದೆಯಿಂದ ಶ್ರುತಾಯುಧನು ಯುದ್ಧಮಾಡದೇ ಕೇವಲ ಸಾರಥಿಯಾಗಿ ಅರ್ಜುನನ ರಥದಲ್ಲಿ ಕುಳಿತಿದ್ದ ಜನಾರ್ದನನನ್ನು ಪ್ರಹರಿಸಿದನು. ವೀರ್ಯವಂತನಾದ ಶ್ರೀಕೃಷ್ಣನು ತನ್ನ ದಪ್ಪವಾದ ಹೆಗಲಿನಿಂದ ಮಹಾಗದೆಯ ಆ ಪ್ರಹಾರವನ್ನು ಪ್ರತಿಗ್ರಹಿಸಿದನು. ಚಂಡಮಾರುತವು ವಿಂಧ್ಯಾಚಲವನ್ನು ಕಂಪನಗೊಳಿಸಲು ಹೇಗೆ ಸಮರ್ಥವಲ್ಲವೋ–ಅದೇ ರೀತಿ ಮಹಾಗದೆಯ ಆ ಪ್ರಹಾರವು ಶ್ರೀಕೃಷ್ಣನನ್ನು ಸ್ವಲ್ಪವಾದರೂ ವಿಚಲಿತನನ್ನಾಗಿ ಮಾಡಲಿಲ್ಲ. ಆದರೆ ಗದೆಯು ಮಾತ್ರ ವರುಣನು ಹೇಳಿದಂತೆ ತನ್ನ ಕರ್ತವ್ಯವನ್ನು ಮಾಡಿಯೇ ಬಿಟ್ಟಿತು. ಸರಿಯಾದ ಕಟ್ಟುಪಾಡಿನಿಂದ ಆಚರಿಸಲ್ಪಡದೇ ಇರುವ ಆಭಿಚಾರಿಕಕೃತ್ಯವು ಹಿಂದಿರುಗಿಕೊಂಡು ಕರ್ತೃವನ್ನೇ ಧ್ವಂಸಮಾಡಿಬಿಡುವಂತೆ–ಯುದ್ಧಮಾಡದೇ ಇದ್ದ ಶ್ರೀಕೃಷ್ಣನ ಮೇಲೆ ಪ್ರಯೋಗಿಸಿದ ಆ ಗದೆಯು ಶ್ರೀಕೃಷ್ಣನಿಂದ ಹಿಂದಿರುಗಿ ಅಲ್ಲಿಯೇ ನಿಂತಿದ್ದ ಕ್ರುದ್ಧನಾಗಿದ್ದ ಶ್ರುತಾಯುಧನನ್ನೇ ಅಪ್ಪಳಿಸಿತು. ಈ ರೀತಿಯಲ್ಲಿ ವೀರನಾದ ರಾಜನನ್ನು ಸಂಹರಿಸಿ ಆ ಗದೆಯು ಭೂಮಿಯ ಮೇಲೆ ಬಿದ್ದಿತು. ಆ ಮಹಾಗದೆಯು ಶ್ರೀಕೃಷ್ಣನಿಂದ ಹಿಂದಿರುಗಿದುದನ್ನೂ ಮತ್ತೆ ಶ್ರುತಾಯುಧನನ್ನೇ ಕೊಂದುದನ್ನೂ ನೋಡಿ ನಿನ್ನ ಕಡೆಯ ಸೈನಿಕರ ಸಮೂಹದಲ್ಲಿ ಹಾಹಾಕಾರವೆದ್ದಿತು. ತನ್ನ ಅಸ್ತ್ರದಿಂದಲೇ ಶ್ರುತಾಯುಧನ ವಧೆಯಾದುದನ್ನು ಕಂಡು ಎಲ್ಲ ಯೋಧರೂ ಹಿಂದೆ ವರುಣನು ಹೇಳಿದ್ದುದನ್ನು ಸ್ಮರಿಸಿಕೊಂಡರು. ಯುದ್ಧಮಾಡದೇ ಇರುವ ಕೇಶವನ ಮೇಲೆ ಶ್ರುತಾಯುಧನು ತನ್ನ ಮಹಾಸ್ತ್ರವಾದ ಗದೆಯನ್ನು ಪ್ರಯೋಗಿಸಿದ ಕಾರಣ ವರುಣನ ಮಾತಿಗೆ ಅನುಸಾರವಾಗಿ ಆ ಗದೆಯು ಶ್ರೀಕೃಷ್ಣನಿಂದ ಹಿಂತಿರುಗಿ ಬಂದು ಶ್ರುತಾಯುಧನನ್ನೇ ಸಂಹರಿಸಿತು. ವರುಣನು ಹೇಗೆ ಹೇಳಿದ್ದನೋ ಅದೇ ರೀತಿಯಲ್ಲಿ ಯುದ್ಧಭೂಮಿಯಲ್ಲಿ ಶ್ರುತಾಯುಧನು ನಿಧನಹೊಂದಿ

ದನು. ತನ್ನ ಗದೆಯಿಂದಲೇ ಪ್ರಹೃತನಾಗಿ ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬಿದ್ದನು. ಪರ್ಣಾಶೆಯ ಪ್ರಿಯಪುತ್ರನಾದ ಶ್ರುತಾಯುಧನು ಭೂಮಿಯ ಮೇಲೆ ಬೀಳುವಾಗ–ಹಲವು ರೆಂಬೆಗಳಿಂದ ಕೂಡಿದ ವೃಕ್ಷವು ಚಂಡಮಾರುತದ ಆಘಾತದಿಂದ ಭಗ್ನವಾಗಿ ಕೆಳಕ್ಕೆ ಬೀಳುವಂತೆ ಪ್ರಕಾಶಿಸಿದನು. ಅರಿಂದಮನಾದ ಶ್ರುತಾಯುಧನು ಹತನಾದುದನ್ನು ಕಂಡ ಸೇನಾಪ್ರಮುಖರೂ ಮತ್ತು ಎಲ್ಲ ಸೈನಿಕರೂ ದಿಕ್ಕಾಪಾಲಾಗಿ ಓಡಿದರು.

ಅನಂತರ ಕಾಂಬೋಜರಾಜನ ಮಗನಾದ ಶೂರನಾದ ಸುದಕ್ಷಿಣನು ವೇಗವಾಗಿ ಹೋಗುವ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಶತ್ರುಹಂತಕನಾದ ಫಾಲ್ಗುನನನ್ನು ಎದುರಿಸಿದನು. ಒಡನೆಯೇ ಪಾರ್ಥನು ಸುದಕ್ಷಿಣನ ಮೇಲೆ ಏಳು ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳು ಸುದಕ್ಷಿಣನನ್ನು ಭೇದಿಸಿಕೊಂಡು ಅವನ ಶರೀರದಿಂದ ಹೊರಕ್ಕೆ ಬಂದು ಭೂಮಿಯನ್ನು ಹೊಕ್ಕುವು. ಗಾಂಡೀವಧನುಸ್ಸಿನಿಂದ ಚ್ಯುತವಾದ ತೀಕ್ಷ್ಣವಾದ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ಸುದಕ್ಷಿಣನು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಹತ್ತು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಮರುಕ್ಷಣದಲ್ಲಿಯೇ ವಾಸುದೇವನನ್ನು ಮೂರು ಬಾಣಗಳಿಂದ ಪ್ರಹರಿಸಿ ಪುನಃ ಪಾರ್ಥನನ್ನು ಐದು ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಕ್ರುದ್ಧನಾದ ಪಾರ್ಥನು ಸುದಕ್ಷಿಣನ ಧನುಸ್ಸನ್ನು ಕತ್ತರಿಸಿ ಧ್ವಜವನ್ನು ಛಿನ್ನ-ಭಿನ್ನವಾಗಿ ಮಾಡಿ ಕೆಳಗುರುಳಿಸಿದನು. ಅನಂತರ ಪಾರ್ಥನು ಬಹಳ ತೀಕ್ಷ್ಣವಾಗಿದ್ದ ಎರಡು ಭಲ್ಲಗಳಿಂದ ಸುದಕ್ಷಿಣನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಸುದಕ್ಷಿಣನೂ ಮೂರು ಬಾಣಗಳಿಂದ ಪಾರ್ಥನನ್ನು ಪ್ರಹರಿಸಿ ಸಿಂಹನಾದವನ್ನು ಮಾಡಿದನು. ಪರಮಕ್ರುದ್ಧನಾಗಿದ್ದ, ಶೂರನಾದ ಸುದಕ್ಷಿಣನು ಅಷ್ಟರಿಂದಲೇ ತೃಪ್ತನಾಗದೇ ಸಂಪೂರ್ಣವಾಗಿ ಲೋಹದಿಂದಲೇ ಮಾಡಿದ್ದ, ಘಂಟೆಯಿಂದ ಯುಕ್ತವಾಗಿದ್ದ, ಘೋರತರವಾದ ಶಕ್ತ್ಯಾಯುಧವನ್ನು ಪಾರ್ಥನ ಮೇಲೆ ಪ್ರಯೋಗಿಸಿದನು. ಸುದಕ್ಷಿಣನು ಬಿಟ್ಟ ಶಕ್ತ್ಯಾಯುಧವು ಉಲ್ಕೆಯಂತೆಯೇ ಪ್ರಜ್ವಲಿಸುತ್ತಾ, ಬೆಂಕಿಯ ಕಿಡಿಗಳನ್ನು ಕಾರುತ್ತಾ, ಮಹಾರಥನಾದ ಅರ್ಜುನನನ್ನು ಪ್ರಹರಿಸಿ ಭೂಮಿಯ ಮೇಲೆ ಬಿದ್ದಿತು. ಶಕ್ತ್ಯಾಯುಧದಿಂದ ಆಳವಾಗಿ ಗಾಯಗೊಂಡ ಅರ್ಜುನನು ಮೂರ್ಛಿತನಾಗುವುದರಲ್ಲಿದ್ದನು.

ಅಚಿಂತ್ಯವಿಕ್ರಮನಾದ ಮಹಾತೇಜಸ್ವಿಯಾದ ಅರ್ಜುನನು ಕೆಲವು ಕ್ಷಣಗಳಲ್ಲಿಯೇ ಚೇತರಿಸಿಕೊಂಡು, ಕಟವಾಯಿಗಳನ್ನು ನಾಲಿಗೆಯಿಂದ ನೆಕ್ಕುತ್ತಾ, ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಹದಿನಾಲ್ಕು ಬಾಣಗಳಿಂದ ಅಶ್ವ-ಧ್ವಜ-ಧನುಸ್ಸು ಮತ್ತು ಸಾರಥಿಗಳ ಸಮೇತವಾಗಿ ಸುದಕ್ಷಿಣನನ್ನು ಪ್ರಹರಿಸಿದನು. ಅನೇಕ ಬಾಣಗಳಿಂದ ಅವನ ರಥವನ್ನೂ ಚೂರ್ಣೀಕರಿಸಿದನು. ತನ್ನನ್ನು ಕೊಲ್ಲಬೇಕೆಂಬ ವ್ಯರ್ಥಸಂಕಲ್ಪದಿಂದ ಕೂಡಿದ್ದ, ಪರಾಕ್ರಮಿಯಾದ, ಕಾಂಬೋಜಾಧಿಪತಿಯಾದ ಸುದಕ್ಷಿಣನನ್ನು ಅರ್ಜುನನು ರಥವಿಹೀನನನ್ನಾಗಿ ಮಾಡುತ್ತಾ ಬಹಳ ಘೋರವಾದ ಬಾಣದಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅರ್ಜುನನು ಬಿಟ್ಟ ಆ ಘೋರವಾದ ಬಾಣದಿಂದ ಸುದಕ್ಷಿಣನ ಕವಚವು ಕತ್ತರಿಸಿ ಹೋಯಿತು. ಶರೀರವು ಜರ್ಝರಿತವಾಯಿತು. ಕಿರೀಟ, ಅಂಗದ–ಮುಂತಾದ ಆಭರಣಗಳು ಶರೀರದಿಂದ ಕಳಚಿ ಚೆಲ್ಲಾಪಿಲ್ಲಿಯಾಗಿ ಭೂಮಿಯ ಮೇಲೆ ಬಿದ್ದುವು. ಅನಂತರ ಸುದಕ್ಷಿಣನೂ ಸಹ ಯಂತ್ರದಿಂದ ಮುಕ್ತವಾದ ಧ್ವಜವು ಕೆಳಕ್ಕೆ ಬಿದ್ದುಹೋಗುವಂತೆ ಅರ್ಜುನನಿಗೆ ಅಭಿಮುಖವಾಗಿ ಭೂಮಿಯ ಮೇಲೆ ಬಿದ್ದನು. ಪರ್ವತದ ಶಿಖರದಲ್ಲಿ ಹುಟ್ಟಿ ಬೆಳೆದಿರುವ, ಕಾಂತಿಯುಕ್ತವಾದ, ಮತ್ತು ಹಲವು ರೆಂಬೆಗಳಿಂದ ಕೂಡಿದ, ಚೆನ್ನಾಗಿ ಬೇರುಬಿಟ್ಟಿರುವ ಕರ್ಣಿಕಾರವೃಕ್ಷವು ಹಿಮಂತರ್ತುವಿನ ಕಡೆಯಲ್ಲಿ ಹುಟ್ಟಿದ ಚಂಡಮಾರುತದ ಆಘಾತಕ್ಕೆ ಸಿಕ್ಕಿ ಬುಡಮೇಲಾಗಿ ಕೆಳಕ್ಕೆ ಬೀಳುವಂತೆ– ಹಂಸತೂಲಿಕಾತಲ್ಪದಲ್ಲಿ ಮಲಗಲು ಅರ್ಹನಾಗಿದ್ದ ಕಾಂಬೋಜರಾಜನು ಅರ್ಜುನನಿಂದ ಹತನಾಗಿ ನೆಲದ ಮೇಲೆ ಬಿದ್ದಿದ್ದನು. ಬಹುಮೂಲ್ಯವಾದ ಆಭರಣಗಳನ್ನು ಧರಿಸಿದ್ದ, ಒಳ್ಳೆಯ ಸಾನುಪ್ರದೇಶಗಳುಳ್ಳ ಪರ್ವತದಂತೆ ಸುದರ್ಶನೀಯನಾಗಿದ್ದ, ಕೆಂಪಾದ ಕಣ್ಣುಗಳನ್ನು ಹೊಂದಿದ್ದ, ಕಾಂಬೋಜರಾಜನ ಮಗನಾದ ಸುದಕ್ಷಿಣನು ಅರ್ಜುನನ ಬಾಣಗಳಿಂದ ಹತನಾದನು. ಅಗ್ನಿಯಂತೆ ಥಳ-ಥಳಿಸುತ್ತಿದ್ದ, ಸುವರ್ಣಮಯವಾದ ಮಾಲೆಯನ್ನು ಕತ್ತಿನಲ್ಲಿ ಧರಿಸಿದ್ದ, ಮಹಾಬಾಹುವಾದ ಸುದಕ್ಷಿಣನು ಪ್ರಾಣಗಳನ್ನು ತೊರೆದು ಭೂಮಿಯಲ್ಲಿ ಬಿದ್ದಿದ್ದರೂ ಬಹಳವಾಗಿ ಶೋಭಿಸುತ್ತಿದ್ದನು. ಶ್ರುತಾಯುಧನೂ ಮತ್ತು ಕಾಂಬೋಜಾಧಿಪತಿಯಾದ ಸುದಕ್ಷಿಣನೂ ಹತರಾದುದನ್ನು ಕಂಡು ನಿನ್ನ ಮಗನ ಕಡೆಯ ಸೈನಿಕರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು."

೯೨ನೆಯ ಅಧ್ಯಾಯವು ಮುಗಿಯಿತು.

೯೩ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಶ್ರುತಾಯು, ಅಚ್ಯುತಾಯು, ನಿಯತಾಯು ಮತ್ತು ದೀರ್ಘಾಯುಗಳನ್ನು ಅರ್ಜುನನು ಸಂಹರಿಸಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಸುದಕ್ಷಿಣನೂ, ವೀರನಾದ ಶ್ರುತಾಯುಧನೂ ಹತರಾದ ನಂತರ ಕುಪಿತರಾದ ನಿನ್ನ ಸೈನಿಕರು ಬಹಳ ಶೀಘ್ರವಾಗಿ ಅರ್ಜುನನನ್ನು ಆಕ್ರಮಿಸಿದರು. ಅಭೀಷಾಹರು, ಶೂರಸೇನರು, ಶಿಬಿಗಳು ಮತ್ತು ವಸಾತಿ ಗಳು ಇವರೆಲ್ಲರೂ ಧನಂಜಯನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿ ದರು. ಅಭೀಷಾಹರೇ ಮೊದಲಾದವರ ಆರುಸಾವಿರ ಸೈನ್ಯಗಳನ್ನೂ ಮತ್ತು ಇನ್ನೂ ಅನೇಕ ಸೈನಿಕರನ್ನೂ ಅರ್ಜುನನು ಬಾಣಗಳಿಂದ ಧ್ವಂಸಮಾಡಿದನು. ಅಳಿದುಳಿದವರು ವ್ಯಾಘ್ರದಿಂದ ಭಯಗೊಂಡ ಕ್ಷುದ್ರಮೃಗಗಳಂತೆ ಪಲಾಯನಮಾಡಿದರು. ಆ ಸಮಯದಲ್ಲಿ ಅರ್ಜುನನು ಶತ್ರುಗಳನ್ನು ಜಯಿಸಬೇಕೆಂಬ ದೃಢೇಚ್ಛೆಯಿಂದ ಅವರನ್ನು ಅನವರತವಾಗಿ ಸಂಹರಿಸುತ್ತಿ ದ್ದನು. ಅದನ್ನು ಕಂಡ ಶತ್ರುಸೈನಿಕರು ಪುನಃ ಹಿಂದಿರುಗಿ ಬಂದು ಪಾರ್ಥನನ್ನು ನಾಲ್ಕುದಿಕ್ಕುಗಳಿಂದಲೂ ಸುತ್ತುಗಟ್ಟಿದರು. ಅರ್ಜುನನು ತನ್ನ ಮೇಲೆ ರಭಸದಿಂದ ಬೀಳಲು ಬರುತ್ತಿದ್ದ ಶತ್ರುಪಕ್ಷದ ಸೈನಿಕರ ಶಿರಸ್ಸುಗಳನ್ನೂ ಮತ್ತು ಭುಜಗಳನ್ನೂ ಗಾಂಡೀವಧನುಸ್ಸಿನಿಂದ ಪ್ರಮುಕ್ತವಾದ ಬಾಣಗಳಿಂದ ಬಹಳ ಶೀಘ್ರವಾಗಿ ಕತ್ತರಿಸಿದನು. ಅರ್ಜುನನು ಬಾಣಗಳಿಂದ ಕತ್ತರಿಸಿ ಭೂಮಿಯ ಮೇಲೆ ಕೆಡವಿದ ಶತ್ರುಯೋಧರ ಶಿರಸ್ಸುಗಳಿಂದ ರಣಾಂಗಣವೇ ತುಂಬಿ ಹೋಯಿತು. ಶಿರಸ್ಸುಗಳಿಂದ ವ್ಯಾಪ್ತವಾಗದಿದ್ದ ಸ್ಥಳವೇ ಆ ರಣಾಂಗಣ ದಲ್ಲಿರಲಿಲ್ಲ. ಬಕಪಕ್ಷಿ, ರಣಹದ್ದು ಮತ್ತು ಕಾಗೆಗಳ ಸಮೂಹದಿಂದ ತುಂಬಿಹೋಗಿದ್ದ ಆ ರಣಾಂಗಣವು ಮೇಘದ ಛಾಯೆಯಿಂದ ಆವೃತವಾಗಿರು ವಂತೆ ಕಾಣುತ್ತಿದ್ದಿತು. ಈ ರೀತಿಯಲ್ಲಿ ಅನೇಕಸೈನಿಕರ ಸಂಹಾರವಾಗುತ್ತಿರ ಲಾಗಿ, ಕ್ರೋಧದಿಂದಲೂ ಅಸಹನೆಯಿಂದಲೂ ಕೂಡಿದ್ದ ಶ್ರುತಾಯು ಮತ್ತು ಅಚ್ಯುತಾಯುಗಳು ಧನಂಜಯನನ್ನು ಆಕ್ರಮಿಸಿದರು. ಅವರು ಮಹಾ

ಬಲಿಷ್ಠರಾಗಿದ್ದರು. ಅರ್ಜುನನೊಡನೆ ಯುದ್ಧದಲ್ಲಿ ಸ್ಪರ್ಧಿಸುತ್ತಿದ್ದರು. ಮಹಾವೀರರಾಗಿದ್ದರು. ಸತ್ಕುಲಪ್ರಸೂತರಾಗಿದ್ದರು. ಸುಶೋಭಿತವಾದ ತೋಳುಗಳನ್ನು ಹೊಂದಿದ್ದರು. ಅವರಿಬ್ಬರೂ ಸೇರಿ ಅರ್ಜುನನ ಮೇಲೆ ಎಡ-ಬಲಭಾಗಗಳಿಂದ ಬಾಣಗಳ ಮಳೆಗರೆಯಲು ಪ್ರಾರಂಭಿಸಿದರು. ಮಹಾರಾಜ! ಶ್ರುತಾಯು-ಅಚ್ಯುತಾಯುಗಳು ಬಾಣಗಳ ಆದಾನ-ಸಂಧಾನ-ಪ್ರಯೋಗಗಳನ್ನು ಬಹಳ ತ್ವರೆಯಿಂದ ಮಾಡುತ್ತಿದ್ದರು. ಅರ್ಜುನನೊಡನೆ ಯುದ್ಧಮಾಡಿ ಮಹಾಯಶಸ್ಸನ್ನು ಗಳಿಸಬೇಕೆಂಬ ಆಶಯದಿಂದಿದ್ದರು. ನಿನ್ನ ಮಗನ ಸಲುವಾಗಿ ಆ ಇಬ್ಬರು ಧನುಷ್ಮಂತರೂ ಅರ್ಜುನನನ್ನು ವಧಿಸಲು ಇಚ್ಛಿಸಿದ್ದರು. ಎರಡು ಮೇಘಗಳು ಜಲಧಾರೆಯಿಂದ ತಟಾಕವನ್ನು ತುಂಬುವ ರೀತಿಯಲ್ಲಿ ಕ್ರುದ್ಧರಾಗಿದ್ದ ಆ ರಾಜಕುಮಾರರು ಬಗ್ಗಿದ ಗಿಣ್ಣುಗಳಿದ್ದ ಸಾವಿರ ಬಾಣಗಳಿಂದ ಅರ್ಜುನನನ್ನು ತುಂಬಿಬಿಟ್ಟರು. ರಥಿಗಳಲ್ಲಿ ಶ್ರೇಷ್ಠನಾದ ಶ್ರುತಾಯುವು ಪರಮಕ್ರುದ್ಧನಾಗಿ ಪೀತವಾಗಿಯೂ, ನಿಶಿತವಾಗಿಯೂ ಇದ್ದ ತೋಮರದಿಂದ ಧನಂಜಯನನ್ನು ಪ್ರಹರಿಸಿದನು. ಶತ್ರುಕರ್ಶನನಾದ ಅರ್ಜುನನು ಆ ಪ್ರಹಾರದಿಂದ ಬಹಳವಾಗಿ ಗಾಯಗೊಂಡು ಮೂರ್ಛಿತ ನಾದನು. ಅರ್ಜುನನು ಮೂರ್ಛಿತನಾದುದನ್ನು ಕಂಡು ಶ್ರೀಕೃಷ್ಣನೂ ಭ್ರಾಂತ ನಾದನು. ಅದೇ ಸಮಯದಲ್ಲಿಯೇ ಮಹಾರಥನಾದ ಅಚ್ಯುತಾಯುವು ಅತ್ಯಂತತೀಕ್ಷ್ಣವಾದ ಶೂಲಾಯುಧದಿಂದ ಪಾಂಡವನನ್ನು ಪ್ರಹರಿಸಿದನು. ಮಹಾತ್ಮನಾದ ಪಾಂಡವನ ಗಾಯಕ್ಕೆ ಅಚ್ಯುತಾಯುವು ಉಪ್ಪುಹಾಕಿ ದಂತಾಯಿತು. ಇಬ್ಬರ ಪ್ರಹಾರಗಳಿಂದಲೂ ಅರ್ಜುನನು ಬಹಳವಾಗಿ ಗಾಯಗೊಂಡು ಕುಳಿತುಕೊಳ್ಳಲು ಸಾಧ್ಯವಾಗದೇ ಧ್ವಜದಂಡವನ್ನೇ ಅವಲಂಬನೆಯನ್ನಾಗಿ ಹಿಡಿದುಕೊಂಡು ಕುಳಿತನು.

ಧನಂಜಯನು ಮೃತನಾದನೆಂದೇ ಭಾವಿಸಿದ ನಿನ್ನ ಸೈನಿಕರೆಲ್ಲರೂ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು. ಪಾರ್ಥನು ಅರ್ಧಮೂರ್ಛಿತ ನಾದುದನ್ನು ಕಂಡು ಶ್ರೀಕೃಷ್ಣನೂ ಬಹಳವಾಗಿ ಪರಿತಪಿಸಿದನು. ಮನಸ್ಸಿಗೆ ಹಿತವನ್ನು ಉಂಟುಮಾಡುವ ಪ್ರಿಯವಚನಗಳಿಂದ ಅರ್ಜುನನನ್ನು ಸಂತೈಸಿದನು. ರಥಿಕರಲ್ಲಿ ಶ್ರೇಷ್ಠರಾದ ಅಚ್ಯುತಾಯು-ಶ್ರುತಾಯುಷರು ಪುನಃ ಧನಂಜಯನನ್ನೂ ಮತ್ತು ವೃಷ್ಣಿಕುಲಾವತಂಸನಾದ ಶ್ರೀಕೃಷ್ಣನನ್ನೂ

ಲಕ್ಷ್ಯವನ್ನಾಗಿ ಮಾಡಿಕೊಂಡು ಅವರ ಸುತ್ತಲೂ ಬಾಣಗಳ ಮಳೆಗರೆದರು. ಮೂಕಿಯಿಂದಲೂ ಚಕ್ರಗಳಿಂದಲೂ ಕೂಡಿದ್ದ, ಅಶ್ವ- ಧ್ವಜ-ಪತಾಕೆಗಳಿಂದ ಯುಕ್ತವಾಗಿದ್ದ ಅರ್ಜುನನ ರಥವನ್ನು ತಮ್ಮ ಬಾಣಗಳ ಅವ್ಯಾಹತವಾದ ಸುರಿಸುವಿಕೆಯಿಂದ ಅದೃಶ್ಯವನ್ನಾಗಿ ಮಾಡಿಬಿಟ್ಟರು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಪ್ರೇತರಾಜನಾದ ಯಮನ ಪಟ್ಟಣಕ್ಕೆ ಹೋಗಿ ಪುನಃ ಅಲ್ಲಿಂದ ಹಿಂದಿರುಗಿ ಬಂದವನಂತೆ ಅರ್ಜುನನು ಮೆಲ್ಲ-ಮೆಲ್ಲನೆ ಪ್ರಜ್ಞೆಯನ್ನು ಪಡೆದುಕೊಂಡನು. ಕೇಶವಸಹಿತವಾದ ತನ್ನ ರಥವು ಬಾಣಗಳ ಸಮೂಹದಿಂದ ಮುಚ್ಚಿಹೋಗಿರುವುದನ್ನೂ ಅಗ್ನಿಗೆ ಸಮವಾದ ತೇಜಸ್ಸಿನಿಂದ ಕೂಡಿದ್ದ, ಪ್ರಜ್ವಲಿಸುತ್ತಿದ್ದ ಶ್ರುತಾಯು ಮತ್ತು ಅಚ್ಯುತಾಯುಗಳು ತನ್ನ ಎದುರಿನಲ್ಲಿಯೇ ನಿಂತಿರುವುದನ್ನೂ ಗಮನಿಸಿ ಮಹಾರಥನಾದ ಅರ್ಜುನನು ಐಂದ್ರಾಸ್ತ್ರವನ್ನು ಪ್ರದರ್ಶಿಸಿದನು. ಆ ಮಹಾಸ್ತ್ರದಿಂದ ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ಸಾವಿರಾರು ಬಾಣಗಳು ಪುಂಖಾನುಪುಂಖವಾಗಿ ಹೊರಬಂದುವು. ಐಂದ್ರಾಸ್ತ್ರದಿಂದ ಹೊರಬರುತ್ತಿದ್ದ ಬಾಣಗಳು ಮಹಾಧನುಷ್ಮಂತರಾದ ಆ ಇಬ್ಬರನ್ನೂ ಪ್ರಹರಿಸಿದುದಲ್ಲದೇ ಅವರು ಬಿಟ್ಟಿದ್ದ ಅಪಾರವಾದ ಬಾಣಗಳನ್ನೂ ತುಂಡು-ತುಂಡಾಗಿ ಕತ್ತರಿಸಿಬಿಟ್ಟುವು. ಶತ್ರುಗಳ ಬಾಣಗಳು ಪಾರ್ಥನ ಬಾಣಗಳಿಂದ ತುಂಡು-ತುಂಡುಗಳಾಗಿ ಕತ್ತರಿಸಲ್ಪಟ್ಟು ಆಕಾಶ ದಲ್ಲಿಯೇ ಚಲಿಸತೊಡಗಿದುವು. ಈ ರೀತಿಯಲ್ಲಿ ಐಂದ್ರಾಸ್ತ್ರದ ಬಾಣಗಳ ವೇಗದಿಂದ ಶತ್ರುಗಳು ಬಿಟ್ಟಿದ್ದ ಅಸಂಖ್ಯಾತ ಬಾಣಗಳನ್ನೂ ವಿನಾಶಮಾಡಿ, ಅರ್ಜುನನು ಮಹಾರಥರೊಡನೆ ಯುದ್ಧಮಾಡಲು ಅವರಿದ್ದ ಸ್ಥಳಕ್ಕೆ ಧಾವಿಸಿದನು. ಅರ್ಜುನನ ಆ ಬಾಣಗಳ ಸಮೂಹದಿಂದ ಶ್ರುತಾಯು ಮತ್ತು ಅಚ್ಯುತಾಯುಷರ ಬಾಹುಗಳು ಮತ್ತು ಕತ್ತುಗಳು ಕತ್ತರಿಸಲ್ಪಟ್ಟುವು. ಚಂಡ ಮಾರುತದಿಂದ ಬುಡಮೇಲಾದ ಎರಡು ವೃಕ್ಷಗಳಂತೆ ಇಬ್ಬರೂ ಗತಪ್ರಾಣ ರಾಗಿ ನೆಲದ ಮೇಲುರುಳಿದರು. ಮಹಾಪರಾಕ್ರಮಿಗಳಾಗಿದ್ದ ಅಚ್ಯುತಾಯು-ಶ್ರುತಾಯುಗಳ ಆ ಸಂಹಾರವು ಸಮುದ್ರವನ್ನೇ ಶೋಷಣೆ ಮಾಡುವುದರಿಂದ ಉಂಟಾಗಬಹುದಾದ ವಿಸ್ಮಯವನ್ನು ಪ್ರೇಕ್ಷಕರಲ್ಲಿ ಉಂಟುಮಾಡಿತು. (ಅವರ ಸಂಹಾರಕಾರ್ಯವು ಸಮುದ್ರವನ್ನು ಶೋಷಿಸುವ ಕಾರ್ಯದಷ್ಟೇ ಅದ್ಭುತವಾಗಿ ಪ್ರೇಕ್ಷಕರಿಗೆ ಕಂಡಿತು.) ಆ ಇಬ್ಬರು ರಾಜಕುಮಾರರ

ಪದಾನುಗರಾಗಿದ್ದ ಐವತ್ತು ರಥಿಕರನ್ನೂ ಅರ್ಜುನನು ಸಂಹರಿಸಿ ಕೌರವರ ಸೈನ್ಯದಲ್ಲಿ ಶ್ರೇಷ್ಠ-ಶ್ರೇಷ್ಠರಾದ ಯೋಧರನ್ನೂ ಸಂಹಾರಮಾಡುತ್ತಾ ಮುಂದೆ ನಡೆದನು.

ಶ್ರುತಾಯುಷನೂ ಮತ್ತು ಅಚ್ಯುತಾಯುಷನೂ ಹತರಾದುದನ್ನು ನೋಡಿ ಅವರ ಮಕ್ಕಳಾದ, ನರಶ್ರೇಷ್ಠರಾದ ನಿಯತಾಯುಷ ಮತ್ತು ದೀರ್ಘಾಯುಷರು ಪರಮಕ್ರುದ್ಧರಾದರು. ಪಿತೃವ್ಯಸನದಿಂದ ವ್ಯಥಿತರಾದ ಆ ಇಬ್ಬರೂ ನಾನಾವಿಧವಾದ ಬಾಣಗಳನ್ನು ಸುರಿಸುತ್ತಾ ಅರ್ಜುನನನ್ನು ಆಕ್ರಮಿಸಿದರು.

ಪರಮಕ್ರುದ್ಧನಾಗಿದ್ದ ಅರ್ಜುನನು ನಿಯತಾಯು-ದೀರ್ಘಾಯುಷರನ್ನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಪ್ರಹರಿಸಿ ಮುಹೂರ್ತಮಾತ್ರದಲ್ಲಿ ಯಮನ ಪಟ್ಟಣಕ್ಕೆ ಕಳುಹಿಸಿಕೊಟ್ಟನು. ಕಮಲಪುಷ್ಪಗಳಿರುವ ಸರೋವರ ವನ್ನು ವಿಧ್ವಂಸಗೊಳಿಸುತ್ತಿರುವ ಮದಿಸಿದ ಆನೆಯನ್ನು ತಡೆಯಲು ಸಾಧ್ಯವಾಗದಂತೆ ಕೌರವಸೈನ್ಯವನ್ನು ಮಥನಮಾಡುತ್ತಿದ್ದ ಅರ್ಜುನನನ್ನು ವಿಧ್ವಂಸನಕ್ರಿಯೆಯಿಂದ ತಡೆಯಲು ಕೌರವಪಕ್ಷದ ಕ್ಷತ್ರಿಯಪುಂಗವರಿಗೆ ಸಾಧ್ಯವಾಗಲಿಲ್ಲ. ಆ ಸಮಯದಲ್ಲಿ ಯುದ್ಧದ ವಿಷಯದಲ್ಲಿ ಸುಶಿಕ್ಷಿತರಾಗಿದ್ದ, ಅಂಗದೇಶದ ಸಾವಿರಾರು ಗಜಾರೋಹಿಗಳಾದ ಸೈನಿಕರು ಪರಮಕ್ರುದ್ಧರಾಗಿ ಆನೆಗಳೊಡನೆ ಅರ್ಜುನನನ್ನು ಸುತ್ತುವರಿದರು. ದುರ್ಯೋಧನನಿಂದ ನಿರ್ದೇಶಿತರಾದ ಪೂರ್ವ ಮತ್ತು ದಕ್ಷಿಣದೇಶಗಳ ಕಳಿಂಗಪ್ರಮುಖರಾದ ರಾಜರೂ ಪರ್ವತೋಪಮವಾದ ಆನೆಗಳೊಡನೆ ಅರ್ಜುನನ ಮೇಲೆ ದಾಳಿ ಮಾಡಿದರು. ಆ ಸಮಯದಲ್ಲಿ ಅತ್ಯುಗ್ರನಾಗಿದ್ದ ಅರ್ಜುನನು ತನ್ನ ಮೇಲೆ ಬೀಳಲು ಬರುತ್ತಿದ್ದ ಗಜಯೋಧರ ಶಿರಸ್ಸುಗಳನ್ನೂ ಮತ್ತು ಆಭರಣಗಳಿಂದ ಅಲಂಕೃತವಾಗಿದ್ದ ತೋಳುಗಳನ್ನೂ ಗಾಂಡೀವಧನುಸ್ಸಿನಿಂದ ಪ್ರಮುಕ್ತವಾದ ಬಾಣಗಳಿಂದ ಕತ್ತರಿಸಿದನು. ಗಜಯೋಧರ ಶಿರಸ್ಸುಗಳಿಂದಲೂ, ಅಂಗದಾಭರಣಯುಕ್ತವಾಗಿದ್ದ ಬಾಹುಗಳಿಂದಲೂ ಸಮಾಕೀರ್ಣವಾಗಿದ್ದ ರಣಭೂಮಿಯು ಸರ್ಪಗಳಿಂದ ಸಮಾಕೀರ್ಣವಾದ ಚಿನ್ನದ ಕಲ್ಲುಗಳಿರುವ ಭೂಭಾಗದಂತೆ ಶೋಭಿಸುತ್ತಿತ್ತು. ವೃಕ್ಷಗಳಿಂದ ಪಕ್ಷಿಗಳು ಕೆಳಕ್ಕೆ ಬೀಳುವಂತೆ ಬಾಣಗಳಿಂದ ಕತ್ತರಿಸಲ್ಪಟ್ಟ ಅನೇಕ ಭುಜಗಳೂ ಮತ್ತು ಶಿರಸ್ಸುಗಳೂ

ತೊಪ-ತೊಪನೆ ಆನೆಗಳ ಮೇಲಿನಿಂದ ಭೂಮಿಯ ಮೇಲೆ ಬೀಳುತ್ತಿದ್ದುದು ಕಂಡುಬಂದಿತು. ಮಳೆಗಾಲದಲ್ಲಿ ಪರ್ವತಗಳಿಂದ ಗೈರಿಕಾದಿಧಾತುಮಿಶ್ರಿತ ವಾದ ಬಣ್ಣ-ಬಣ್ಣದ ನೀರು ಹರಿದುಬರುವಂತೆ ಸಾವಿರಾರು ಬಾಣಗಳಿಂದ ಪ್ರಹೃತವಾದ ಆನೆಗಳ ಶರೀರಗಳಿಂದ ರಕ್ತವು ಸ್ರವಿಸುತ್ತಿದ್ದು ಝರಿಗಳಿಂದ ಕೂಡಿದ ಪರ್ವತಗಳಂತೆಯೇ ಆ ಆನೆಗಳು ಕಾಣುತ್ತಿದ್ದುವು. ನಾನಾವಿಧವಾದ ವಿಕಾರವಾದ ಆಕೃತಿಗಳನ್ನು ಹೊಂದಿದ್ದ ಮ್ಲೇಚ್ಛಸೈನಿಕರು ಅರ್ಜುನನ ನಿಶಿತವಾದ ಬಾಣಗಳಿಂದ ಹತರಾಗಿ ತಾವು ಕುಳಿತಿದ್ದ ಆನೆಗಳ ಮೇಲೆಯೇ ಮಲಗಿದರು. ನಾನಾವಿಧವಾದ ವೇಷ-ಭೂಷಣಗಳನ್ನು ಧರಿಸಿದ್ದ, ನಾನಾ ವಿಧವಾದ ಶಸ್ತ್ರಗಳ ಸಮೂಹದಿಂದ ಸಂಪನ್ನರಾಗಿದ್ದ ಮ್ಲೇಚ್ಛಯೋಧರು ಅರ್ಜುನನ ವಿಚಿತ್ರತರವಾದ ಬಾಣಗಳಿಂದ ಹತರಾಗಿ ರಕ್ತದಿಂದ ಲೇಪಿತ ವಾದ ಶರೀರವುಳ್ಳವರಾಗಿ ಪ್ರಕಾಶಿಸುತ್ತಿದ್ದರು. ಸವಾರರಿಂದಲೂ, ಅನುಚರ ರಿಂದಲೂ ಕೂಡಿದ್ದ ಸಾವಿರಾರು ಆನೆಗಳು ಅರ್ಜುನನ ಬಾಣಗಳಿಂದ ಪೀಡಿತವಾಗಿ ಛಿನ್ನ-ಭಿನ್ನವಾದ ಶರೀರದಿಂದ ಕೂಡಿ ಬಾಯಿಂದ ರಕ್ತವನ್ನು ಕಾರುತ್ತಿದ್ದುವು. ಅರ್ಜುನನ ಬಾಣಗಳಿಂದ ಪೀಡಿತವಾದ ಕೆಲವು ಆನೆಗಳು ಆರ್ತಧ್ವನಿಯಿಂದ ಕೂಗಿಕೊಳ್ಳುತ್ತಿದ್ದುವು; ಕೆಲವು ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬಿದ್ದಿದ್ದುವು; ಕೆಲವು ನೋವನ್ನು ತಡೆಯಲಾರದೇ ದಿಕ್ಕು-ದಿಕ್ಕುಗಳಲ್ಲಿಯೂ ಅನಿಯಂತ್ರಿತವಾಗಿ ಓಡಾಡುತ್ತಿದ್ದುವು; ಕೆಲವು ಆನೆಗಳು ಬಹಳ ತ್ರಾಸಗೊಂಡು ದಿಕ್ಕುಗಾಣದೆ ತಮ್ಮ ಕಡೆಯ ಯೋಧರನ್ನೇ ತುಳಿದು ಧ್ವಂಸಮಾಡುತ್ತಿದ್ದುವು. ಗುಪ್ತವಾಗಿ ತೀಕ್ಷ್ಣವಾದ ವಿಷವನ್ನಿಟ್ಟು ಕೊಂಡಿರುವ ಸರ್ಪಗಳಂತೆ ಕೆಲವು ಆನೆಗಳು ಆಯುಧಪಾಣಿಗಳಾದ ಯೋಧ ರನ್ನು ತಮ್ಮ ಹೊಟ್ಟೆಯ ಪ್ರದೇಶದಲ್ಲಿ ರಹಸ್ಯವಾಗಿ ಉಡುಗಿಸಿಟ್ಟುಕೊಂಡಿ ದ್ದುವು. ಯವನರೂ, ಪಾರದರೂ, ಶಕರೂ, ಬಾಹ್ಲಿಕರೊಡನೆ ಸೇರಿಕೊಂಡು ಅರ್ಜುನನೊಡನೆ ಯುದ್ಧಮಾಡುತ್ತಿದ್ದರು. ಯವನರು ಅಸುರರ ಮಾಯಾ ವಿದ್ಯೆಯನ್ನು ತಿಳಿದವರಾಗಿದ್ದರು. ಘೋರರೂಪಿಗಳಾಗಿದ್ದರು. ಭಯಂಕರ ವಾದ ಕಣ್ಣುಗಳಿಂದ ಕೂಡಿದ್ದರು. ಕಾಗೆಯ ಬಣ್ಣದವರಾಗಿದ್ದರು. ಅವರು ದುರಾಚಾರಿಗಳೂ, ಸ್ತ್ರೀಲೋಲರೂ ಮತ್ತು ಕಲಹಪ್ರಿಯರೂ ಆಗಿದ್ದರು.

ಮದಿಸಿದ ಆನೆಯ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ ದ್ರಾವಿಡರೂ ಅಲ್ಲಿ ಯುದ್ಧಮಾಡುತ್ತಿದ್ದರು. ನಂದಿನೀಧೇನು

ವಿನಿಂದ ಉತ್ಪನ್ನರಾದ, ಅಂತಕನಿಗೆ ಸಮಾನರಾಗಿದ್ದ, ಪ್ರಹಾರಕುಶಲರಾದ ಮ್ಲೇಚ್ಛರೂ ಆ ಯುದ್ಧದಲ್ಲಿ ಭಾಗವಹಿಸಿದ್ದರು. ದಾರ್ವಾತಿಸಾರರು, ದರದರು, ಪೌಂಡ್ರರೇ ಮೊದಲಾದ ಅನೇಕಸಾವಿರ-ಲಕ್ಷಸಂಖ್ಯಾಕರಾದ ಸಂಸ್ಕಾರಶೂನ್ಯರಾದ ವ್ರಾತ್ಯರು ಆ ಯುದ್ಧದಲ್ಲಿ ಭಾಗವಹಿಸಿದ್ದರು. ಅವರನ್ನು ಎಣಿಸುವುದಕ್ಕೇ ಸಾಧ್ಯವಿರಲಿಲ್ಲ. ನಾನಾವಿಧವಾದ ಯುದ್ಧಗಳಲ್ಲಿ ವಿಶಾರದ ರಾಗಿದ್ದ ಮ್ಲೇಚ್ಛರು ಪಾಂಡವನ ಮೇಲೆ ನಿಶಿತವಾದ ಬಾಣಗಳನ್ನು ಸುರಿಸಿ ಅವನನ್ನು ಮುಚ್ಚಿಬಿಟ್ಟರು. ಆ ಎಲ್ಲ ಮ್ಲೇಚ್ಛಯೋಧರ ಮೇಲೂ ಅರ್ಜುನನು ಬಾಣಗಳ ಮಳೆಯನ್ನೇ ಸುರಿಸಿದನು. ಮಿಡಿತೆಗಳ ದೊಡ್ಡ ಸೈನ್ಯವನ್ನೇ ಸೃಷ್ಟಿಸಿದಂತೆ ಅರ್ಜುನನು ಮ್ಲೇಚ್ಛರ ವಿನಾಶಕ್ಕಾಗಿ ಬಾಣಗಳನ್ನು ಸೃಷ್ಟಿಸಿದನು. ಅರ್ಜುನನು ಮ್ಲೇಚ್ಛಸೈನಿಕರ ಮೇಲೆ ಬಿಟ್ಟ ಅಗಣಿತವಾದ ಬಾಣಗಳು ಮೋಡಗಳ ನೆರಳಿನಂತೆಯೇ ಕಾಣುತ್ತಿದ್ದುವು. ಅರ್ಜುನನು ತನ್ನ ಮಹಾಸ್ತ್ರದ ತೇಜಸ್ಸಿನಿಂದ ಮುಂಡಿತರನ್ನೂ (ಬೋಳುತಲೆಯವರನ್ನೂ) ಅರ್ಧಮುಂಡಿತ ರನ್ನೂ (ಅರೆ-ಕೊರೆಯಾಗಿ ತಲೆಗೂದಲನ್ನು ಕತ್ತರಿಸಿಕೊಂಡಿರುವವರನ್ನೂ), ಜಟಾಧಾರಿಗಳನ್ನೂ, ಶ್ವಪಚರನ್ನೂ, ಮುಖದಲ್ಲಿ ಮಾತ್ರ ಜಟೆಯನ್ನು ಬಿಟ್ಟಿರುವವರನ್ನೂ (ಗಡ್ಡ ಬಿಟ್ಟಿರುವವರನ್ನೂ) ಇವರೇ ಮುಂತಾದ ಇನ್ನೂ ಅನೇಕ ಮ್ಲೇಚ್ಛಸೈನಿಕರನ್ನೂ ಸಂಹರಿಸಿದನು. ಅರ್ಜುನನ ನೂರಾರು ಬಾಣಗಳಿಂದ ಪ್ರಹೃತರಾದ, ಪರ್ವತಗಳಲ್ಲಿ ಸಂಚರಿಸುವ ಮತ್ತು ಪರ್ವತದ ಗುಹೆಗಳಲ್ಲಿಯೇ ವಾಸಮಾಡುವ ಸಾವಿರಾರು ಮ್ಲೇಚ್ಛರು ಭಯಗೊಂಡು ಯುದ್ಧದಿಂದ ಪಲಾಯನಮಾಡಿದರು. ಅರ್ಜುನನ ನಿಶಿತವಾದ ಬಾಣ ಗಳಿಂದ ಹತರಾಗಿ ಭೂಮಿಯ ಮೇಲೆ ಬಿದ್ದಿದ್ದ ಮ್ಲೇಚ್ಛದಳದ ಗಜಾರೋಹಿ ಗಳ ಮತ್ತು ಅಶ್ವಾರೋಹಿಗಳ ರಕ್ತವನ್ನು ಬಕಪಕ್ಷಿಗಳು, ಕಾಗೆಗಳು ಮತ್ತು ತೋಳಗಳು ಬಹಳ ಸಂತೋಷದಿಂದ ಕುಡಿಯುತ್ತಿದ್ದುವು. ಆ ಸಮಯದಲ್ಲಿ ಅರ್ಜುನನು ಆ ರಣಾಂಗಣದಲ್ಲಿ ಒಂದು ದೊಡ್ಡ ರಕ್ತದ ನದಿಯನ್ನೇ ಹರಿಸಿದನು. ಆ ನದಿಯು ಯುಗಾಂತ್ಯದಲ್ಲಿ ಪ್ರಾದುರ್ಭೂತವಾಗುವ ಕಾಲ ನಂತೆಯೇ ಇದ್ದಿತು. ಅದರ ಪ್ರವಾಹವು ಪದಾತಿ-ಅಶ್ವ-ಗಜ-ರಥಗಳ ಸಮೂಹದಿಂದ ಪ್ರಚ್ಛನ್ನವಾಗಿದ್ದಿತು. ಬಾಣಗಳ ವೃಷ್ಟಿಯೆಂಬುದೇ ರಕ್ತನದಿಯ ದೋಣಿಯಾಗಿದ್ದಿತು. ಯೋಧರ ಕೇಶಗಳು ಪಾಚಿಹುಲ್ಲಿನಂತಿದ್ದುವು. ರಕ್ತದ

ಪ್ರವಾಹದಲ್ಲಿಯೇ ತರಂಗಗಳೂ ಏಳುತ್ತಿದ್ದುವು. ಕತ್ತರಿಸಲ್ಪಟ್ಟು ಕೆಳಗೆ ಬಿದ್ದಿದ್ದ ಯೋಧರ ಬೆರಳುಗಳೇ ಆ ನದಿಯ ಸಣ್ಣ-ಸಣ್ಣ ಮೀನುಗಳಂತಿದ್ದುವು. ನಾಗಾಶ್ವ-ರಥ-ಪದಾತಿಗಳ ಮತ್ತು ರಾಜಪುತ್ರರ ಶರೀರಗಳಿಂದ ಹೊರಬರುತ್ತಿದ್ದ ರಕ್ತದ ಪ್ರವಾಹದಿಂದಲೇ ಅರ್ಜುನನು ಆ ನದಿಯನ್ನು ಸೃಷ್ಟಿಸಿದ್ದನು. ಆ ನದಿಯು ಸತ್ತುಹೋಗಿದ್ದ ಆನೆಗಳ ಶರೀರಗಳಿಂದ ವ್ಯಾಪ್ತವಾಗಿದ್ದಿತು.

ಇಂದ್ರನು ಮಳೆಗರೆಯುವ ಸಮಯದಲ್ಲಿ ಭೂಮಿಯಲ್ಲಿರುವ ಹಳ್ಳತಿಟ್ಟು ಪ್ರದೇಶಗಳೆಲ್ಲವೂ ನೀರಿನಿಂದ ಆವೃತವಾಗಿ ಒಂದೇ ಸಮನಾಗಿ ಕಾಣುವಂತೆ–ರಕ್ತದಿಂದ ಮುಳುಗಿಹೋಗಿದ್ದ ರಣರಂಗಪ್ರದೇಶವೂ ಒಂದೇ ಸಮನಾಗಿ ಕಾಣುತ್ತಿದ್ದಿತು. ಕ್ಷತ್ರಿಯಶ್ರೇಷ್ಠನಾದ ಅರ್ಜುನನು ಆರು ಸಾವಿರ ಕುದುರೆಸವಾರರನ್ನೂ ಮತ್ತು ಒಂದು ಸಾವಿರ ಶ್ರೇಷ್ಠಯೋಧರನ್ನೂ ಮೃತ್ಯುಲೋಕಕ್ಕೆ ಕಳುಹಿಸಿದನು. ವಿಧಿಪೂರ್ವಕವಾಗಿ ಯುದ್ಧಕ್ಕೆ ಸಜ್ಜಾಗಿದ್ದ ಆನೆಗಳು ಅರ್ಜುನನ ಸಾವಿರಾರು ಬಾಣಗಳಿಂದ ಪ್ರಹೃತವಾಗಿ ವಜ್ರಾಯುಧ ದಿಂದ ಪ್ರಹೃತವಾದ ಪರ್ವತಗಳಂತೆ–ರಣಾಂಗಣದಲ್ಲಿ ಬಿದ್ದಿದ್ದುವು. ಮದೋದಕವನ್ನು ಸುರಿಸುವ ಸಲಗವು ಲಾಳದ ಕಡ್ಡಿಗಳಿರುವ ಅರಣ್ಯವನ್ನು ಧ್ವಂಸಮಾಡುವಂತೆ–ಅರ್ಜುನನು ಕುದುರೆಗಳಿಂದಲೂ, ರಥಗಳಿಂದಲೂ ಯುಕ್ತವಾದ ಶತ್ರುಗಳ ಸೈನ್ಯವನ್ನು ವಿಧ್ವಂಸನಗೊಳಿಸುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ಒಣಗಿಹೋಗಿರುವ ಕಟ್ಟಿಗೆಗಳಿಂದಲೂ, ಹುಲ್ಲಿನಿಂದಲೂ, ಉಲಪಗಳಿಂದಲೂ (ಮೃದುವಾದ ಒಂದು ಜಾತಿಯ ಹುಲ್ಲು) ಕೂಡಿರುವ, ವೃಕ್ಷಗಳಿಂದಲೂ, ಲತೆಗಳ ಪೊದರುಗಳಿಂದಲೂ ಸಮೃದ್ಧವಾಗಿರುವ ಅರಣ್ಯ ವನ್ನು ವಾಯುವಿನ ಸಹಕಾರದಿಂದ ಅಗ್ನಿಯು ಯಾವ ರೀತಿಯಲ್ಲಿ ದಹಿಸುತ್ತಾನೆಯೋ ಅದೇ ರೀತಿಯಲ್ಲಿ ಅಗ್ನಿರೂಪನಾಗಿರುವ ಅರ್ಜುನನು ವಾಯುರೂಪನಾದ ಶ್ರೀಕೃಷ್ಣನ ಸಹಾಯದಿಂದ, ಬಾಣರೂಪವಾಗಿರುವ ಜ್ವಾಲೆಗಳ ಮೂಲಕ ಕೌರವರ ಸೈನ್ಯವೆಂಬ ಅರಣ್ಯವನ್ನು ಪರಮಕ್ರುದ್ಧನಾಗಿ ದಹಿಸಿದನು. ರಥಗಳಲ್ಲಿದ್ದ ರಥಿಕರ ಆಸನಗಳನ್ನು ಶೂನ್ಯವನ್ನಾಗಿ ಮಾಡುತ್ತಾ, ಅಸುನೀಗಿದ ಮನುಷ್ಯರಿಂದ ರಣಾಂಗಣವನ್ನು ತುಂಬುತ್ತಾ, ಆ ಯುದ್ಧದ ಮೈದಾನದಲ್ಲಿ ಧನುರ್ಧರನಾದ ಧನಂಜಯನು ನೃತ್ಯವಾಡುತ್ತಿರುವನೋ

ಎಂಬಂತೆಯೇ ಕಾಣುತ್ತಿದ್ದನು. ಕ್ರುದ್ಧನಾಗಿದ್ದ ಅರ್ಜುನನು ವಜ್ರಾಯುಧಕ್ಕೆ ಸಮಾನವಾಗಿದ್ದ ಬಾಣಗಳಿಂದ ರಣಾಂಗಣವನ್ನು ರಕ್ತದಲ್ಲಿಯೇ ಮುಳುಗಿಸಿ ಕೌರವವ್ಯೂಹದೊಳಕ್ಕೆ ನುಗ್ಗಿದನು. ಒಡನೆಯೇ ಅಂಬಷ್ಠದೇಶದ ಶ್ರುತಾಯುವು ಅರ್ಜುನನನ್ನು ಮುಂದೆ ಹೋಗದಂತೆ ತಡೆದನು. ಅರ್ಜುನನನ್ನು ಮುಂದೆ ಬಿಡಬಾರದೆಂದು ಬಹಳವಾಗಿ ಪ್ರಯತ್ನಿಸುತ್ತಿದ್ದ ಅಂಬಷ್ಠನ ಕುದುರೆಗಳನ್ನು ಅರ್ಜುನನು ರಣಹದ್ದುಗಳ ರೆಕ್ಕೆಗಳಿಂದ ಕೂಡಿದ್ದ ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿದನು. ಇನ್ನೂ ಕೆಲವು ಬಾಣಗಳಿಂದ ಅಂಬಷ್ಠನ ಧನುಸ್ಸನ್ನೂ ಕತ್ತರಿಸಿ ತನ್ನ ವಿಶೇಷಪರಾಕ್ರಮವನ್ನು ತೋರಿಸಿದನು. ಕೋಪದಿಂದ ಕದಡಿಹೋದ (ಕೆಂಪಾದ) ಕಣ್ಣುಗಳಿಂದ ಕೂಡಿದ್ದ ಅಂಬಷ್ಠನು ಒಡನೆಯೇ ಗದೆಯನ್ನು ತೆಗೆದುಕೊಂಡು ರಥದಿಂದ ಧುಮುಕಿ ಪಾರ್ಥ-ಕೃಷ್ಣರ ಬಳಿಗೆ ಧಾವಿಸಿದನು. ಅನಂತರ ವೀರನಾದ ಅಂಬಷ್ಠನು ಪ್ರಹರಿಸಲು ಗದೆಯನ್ನು ಮೇಲೆತ್ತಿ, ರಥವು ಮುಂದೆ ಹೋಗದಂತೆ ತಡೆದು ನಿಲ್ಲಿಸಿ, ಮೇಲೆತ್ತಿದ್ದ ಗದೆಯಿಂದ ಕೇಶವನನ್ನು ಪ್ರಹರಿಸಿದನು. ಅದನ್ನು ಕಂಡ ಶತ್ರುವೀರಹಂತಕನಾದ ಅರ್ಜುನನು *ಶ್ರುತಾಯುವಿನ ವಿಷಯದಲ್ಲಿ ಬಹಳವಾಗಿ ಕೋಪಗೊಂಡನು. ಅನಂತರ ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳಿಂದ–ಆಗ ತಾನೇ ಉದಯಿಸಿದ ಸೂರ್ಯನನ್ನು ಮೇಘಗಳು ಮುಚ್ಚುವಂತೆ–ಗದಾಪಾಣಿಯಾದ ಅಂಬಷ್ಠನನ್ನು ಮುಚ್ಚಿದನು. ಮತ್ತೆ ಕೆಲವು ಬಾಣಗಳಿಂದ ಅಂಬಷ್ಠನ ಗದೆಯನ್ನೂ ತುಂಡು-ತುಂಡುಮಾಡಿದನು. ಪಾರ್ಥನ ಆ ಕಾರ್ಯವು ನಮಗೆ ಪರಮಾದ್ಭುತವಾಗಿ ಕಂಡಿತು. ತನ್ನ ಕೈಲಿದ್ದ ಗದೆಯು ಅರ್ಜುನನ ಬಾಣಗಳಿಂದ ಛಿನ್ನ-ಭಿನ್ನವಾಗಿ ಕೆಳಕ್ಕೆ ಬಿದ್ದುದನ್ನು ನೋಡಿ ಅಂಬಷ್ಠನು ಮತ್ತೊಂದು ದೊಡ್ಡ ಗದೆಯನ್ನೇ ಎತ್ತಿಕೊಂಡು ಪಾರ್ಥ-ಕೃಷ್ಣರನ್ನು ಪುನಃ ಪ್ರಹರಿಸಿದನು. ಇಂದ್ರನ ಧ್ವಜದಂತೆಯೇ ಇದ್ದ ಗದೆಯನ್ನು ಮೇಲೆತ್ತಿ ಹಿಡಿದಿದ್ದ ಅಂಬಷ್ಠನ ಎರಡು ತೋಳುಗಳನ್ನೂ ಅರ್ಜುನನು ಎರಡು

---

*ಶ್ರುತಾಯುಃ: ಇದೇ ಅಧ್ಯಾಯದ ಮೊದಲಿನಲ್ಲಿ ಬಂದಿರುವ ಶ್ರುತಾಯು-ಅಚ್ಯುತಾಯುಗಳೇ ಬೇರೆ. ಇಲ್ಲಿ ಹೇಳಿರುವ ಶ್ರುತಾಯುವೇ ಬೇರೆ. ಅಂಬಷ್ಠ ಎಂಬುದು ಒಂದು ದೇಶ. ಆ ದೇಶದ ಅಧಿಪತಿಗೂ ಶ್ರುತಾಯುವೆಂದೇ ಹೆಸರು. ಅಂಬಷ್ಠ ಎಂಬ ಹೆಸರಿನಿಂದಲೂ ಇವನನ್ನು ಕರೆಯುತ್ತಿದ್ದರು.

ಕ್ಷುರಪ್ರಗಳಿಂದ ಕತ್ತರಿಸಿ ಮತ್ತೊಂದು ಬಾಣದಿಂದ ಅವನ ತಲೆಯನ್ನೂ ಕತ್ತರಿಸಿಬಿಟ್ಟನು. ಯಂತ್ರದ ಬಂಧನದಿಂದ ವಿಮುಕ್ತವಾದ ಇಂದ್ರನ ಧ್ವಜವು ಕೆಳಗೆ ಬೀಳುವಂತೆ– ಅಂಬಷ್ಠನು ಹತನಾಗಿ ಭೂಮಿಯನ್ನೇ ಶಬ್ದಾಯ ಮಾನವನ್ನಾಗಿ ಮಾಡುತ್ತಾ ಕೆಳಕ್ಕೆ ಬಿದ್ದನು. ಅಂಬಷ್ಠನನ್ನು ಸಂಹರಿಸಿದ ನಂತರ ಪಾರ್ಥನು ಶತ್ರುಪಕ್ಷದ ರಥಸೈನ್ಯದೊಳಕ್ಕೆ ನುಗ್ಗಿದನು. ಅಲ್ಲವನು ಗಜಾಶ್ವ-ಸೈನ್ಯಗಳಿಂದ ಪರಿವೃತನಾಗಿ ದಟ್ಟವಾದ ಮೋಡಗಳಿಂದ ಆವೃತನಾದ ಸೂರ್ಯನಂತೆಯೇ ಕಾಣುತ್ತಿದ್ದನು."

೯೩ನೆಯ ಅಧ್ಯಾಯವು ಮುಗಿಯಿತು.

೯೪ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದುರ್ಯೋಧನನ ತೆಗಳಿಕೆಯನ್ನು ಕೇಳಿದ ದ್ರೋಣರು ದುರ್ಯೋಧನನಿಗೆ ದಿವ್ಯವಾದ ಕವಚವನ್ನು ತೊಡಿಸಿ ಯುದ್ಧಕ್ಕೆ ಕಳುಹಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ನಾನು ಹಿಂದೆಯೇ ವಿವರಿಸಿದಂತೆ ಸಿಂಧುರಾಜನನ್ನು ಸಂಹರಿಸಬೇಕೆನ್ನುವ ಇಚ್ಛೆಯಿಂದ ಅರ್ಜುನನು ದ್ರೋಣರ ಸೈನ್ಯವನ್ನೂ ದುಸ್ತರವಾದ ಕೃತವರ್ಮನ ಸೈನ್ಯವನ್ನೂ ಭಗ್ನಗೊಳಿಸಿದನು. ಕಾಂಬೋಜನ ಮಗನಾದ ಸುದಕ್ಷಿಣನನ್ನೂ ಮಹಾಪರಾಕ್ರಮಿಯಾದ ವರುಣನ ಮಗನಾದ ಶ್ರುತಾಯುಧನನ್ನೂ ಸಂಹರಿಸಿದನು. ಅನಂತರ ಮಹಾವ್ಯೂಹದ ಒಳ ನುಗ್ಗಿದನು. ನಿನ್ನ ಕಡೆಯ ಸೈನಿಕರೆಲ್ಲರೂ ಛಿನ್ನ-ಭಿನ್ನರಾಗಿ ಅರ್ಜುನನನ್ನು ಎದುರಿಸಲಾಗದೇ ಪಲಾಯನಮಾಡಿದರು. ತನ್ನ ಸೈನ್ಯವು ಭಗ್ನವಾದುದನ್ನು ಕಂಡು ನಿನ್ನ ಮಗನು ಬಹಳ ತ್ವರೆಯಿಂದ ರಥದಲ್ಲಿ ಕುಳಿತು ಏಕಾಕಿಯಾಗಿ ದ್ರೋಣರ ಬಳಿಗೆ ಬಂದು ಹೇಳಿದನು:

"ಆಚಾರ್ಯರೇ! ನಮ್ಮ ಸೈನ್ಯವನ್ನು ಧ್ವಂಸಮಾಡಿ ಅರ್ಜುನನು ಈಗ ವ್ಯೂಹವನ್ನು ಪ್ರವೇಶಿಸಿಬಿಟ್ಟಿದ್ದಾನೆ. ಈ ಸಮಯದಲ್ಲಿ ನಾವು ಏನು ಮಾಡಬೇಕೆಂಬುದನ್ನು ಬುದ್ಧಿಯಲ್ಲಿ ಕೂಲಂಕಷವಾಗಿ ವಿಮರ್ಶಿಸಿ ನಿಶ್ಚಯಿಸಿರಿ. (ದಾರುಣವಾದ ರೀತಿಯಲ್ಲಿ ಜನಕ್ಷಯವಾಗುತ್ತಿರುವ ಈ

ಸಮಯದಲ್ಲಿ ಅರ್ಜುನನನ್ನು ವಿನಾಶಗೊಳಿಸಲು ನಾವು ಕೈಗೊಳ್ಳಬೇಕಾದ ಕಾರ್ಯಗಳೇನು?) ಪುರುಷವ್ಯಾಘ್ರನಾದ ಜಯದ್ರಥನನ್ನು ಅರ್ಜುನನು ಕೊಲ್ಲದಿರುವಂತೆ ಯೋಜನೆಯನ್ನು ಸಿದ್ಧಗೊಳಿಸಿರಿ. ನಿಮಗೆ ಮಂಗಳವಾಗಲಿ. ಈ ಸಮಯದಲ್ಲಿ ತಾವೇ ನಮ್ಮೆಲ್ಲರಿಗೂ ಶರಣ್ಯರಾಗಿರುತ್ತೀರಿ. ಅರಣ್ಯದಲ್ಲಿ ಹುಟ್ಟಿದ ಕಾಡುಗಿಚ್ಚು ಪೊದೆಯನ್ನು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ–ಧನಂಜಯನೆಂಬ ಅಗ್ನಿಯು ಕೋಪವೆಂಬ ಚಂಡಮಾರುತನಿಂದ ಪ್ರಚೋದಿತನಾಗಿ ಕಕ್ಷರೂಪವಾಗಿರುವ (ಪೊದೆಯ ರೂಪದಲ್ಲಿರುವ) ನಮ್ಮ ಸೈನ್ಯವನ್ನು ದಹಿಸುತ್ತಿದ್ದಾನೆ. ಪರಂತಪನಾದ ಕೌಂತೇಯನು ವ್ಯೂಹದ ಅಗ್ರಭಾಗದಲ್ಲಿದ್ದ ತಮ್ಮ ಸೈನ್ಯವನ್ನು ಭಗ್ನಗೊಳಿಸಿ ತಮ್ಮನ್ನೂ ಅತಿಕ್ರಮಿಸಿ ಮುಂದೆ ಹೋದನಂತರ ಜಯದ್ರಥನ ರಕ್ಷಕರು ಸಂಶಯಗ್ರಸ್ತರಾಗಿದ್ದಾರೆ. ಬ್ರಹ್ಮವಿದರಲ್ಲಿ ಶ್ರೇಷ್ಠರಾದವರೇ! ಧನಂಜಯನು ದ್ರೋಣರನ್ನು ಅತಿಕ್ರಮಿಸಿ ಮುಂದೆ ಬರಲು ಸಾಧ್ಯವಾಗದೆಂಬುದು ನಮ್ಮ ಕಡೆಯ ಎಲ್ಲ ನರೇಂದ್ರರ ದೃಢನಿಶ್ಚಯವಾಗಿದ್ದಿತು. ಆದರೆ ತಾವು ನೋಡುತ್ತಿದ್ದಂತೆಯೇ ಅರ್ಜುನನು ತಮ್ಮನ್ನೂ ಅತಿಕ್ರಮಿಸಿ ಮುಂದೆ ಹೋಗಿದ್ದಾನೆ. ಈಗ ಎಲ್ಲರೂ ಅರ್ಜುನನ ಬಾಣಗಳಿಂದ ಪೀಡಿತರಾಗುತ್ತಿದ್ದಾರೆ. ನನ್ನ ಸೈನ್ಯವು ಹೆಚ್ಚು ಕಾಲ ಉಳಿಯಲಾರದು. ನೀವು ಪಾಂಡವರ ಹಿತದಲ್ಲಿಯೇ ನಿರತರಾಗಿರತಕ್ಕವರೆಂಬುದನ್ನು ನಾನು ಚೆನ್ನಾಗಿ ತಿಳಿದುಕೊಂಡಿರುತ್ತೇನೆ. ಆದುದರಿಂದಲೇ ನಾನು,–'ತಾವು ನನ್ನ ಕಾರ್ಯದಲ್ಲಿ ಎಷ್ಟು ಆಸಕ್ತಿ ವಹಿಸಿರುವಿರಿ?'–ಎಂಬುದನ್ನು ಚಿಂತಿಸುತ್ತಾ ಭ್ರಾಂತನಾಗಿದ್ದೇನೆ. ಬ್ರಾಹ್ಮಣೋತ್ತಮರೇ! ತಾವು ಉತ್ತಮಜೀವಿಕೆಯನ್ನು ನಡೆಸಲು ನಾನು ಯಥಾಶಕ್ತಿ ವ್ಯವಸ್ಥೆಮಾಡಿರುತ್ತೇನೆ. ತಮ್ಮನ್ನು ನನ್ನ ವಿಷಯದಲ್ಲಿ ಪ್ರಸನ್ನರಾಗಿರುವಂತೆ ಮಾಡಲೂ ಸಾಕಷ್ಟು ಪ್ರಯತ್ನಿಸುತ್ತಲೇ ಇದ್ದೇನೆ. ಆದರೆ ಇವುಗಳಾವುದನ್ನೂ ತಾವು ತಮ್ಮ ಗಮನಕ್ಕೇ ತೆಗೆದುಕೊಂಡಿರುವುದಿಲ್ಲ. ಅಮಿತವಿಕ್ರಮರೇ! ನಾವೆಲ್ಲರೂ ತಮ್ಮ ವಿಷಯದಲ್ಲಿ ಅತ್ಯಂತ ಭಕ್ತಿಭಾವ ದಿಂದಲೇ ಇದ್ದೇವೆ. ಆದರೆ ನಮ್ಮ ವಿಷಯದಲ್ಲಿ ತಾವು ಪ್ರಸನ್ನರಾಗಿರುವಂತೆ ಕಾಣುವುದಿಲ್ಲ. ತಾವು ನಮ್ಮನ್ನು ನಿಮ್ಮವರೆಂದೇ ಭಾವಿಸಿದಂತೆ ತೋರುವುದಿಲ್ಲ. ಆದರೆ ಯಾರು ನಮ್ಮ ವಿಷಯದಲ್ಲಿ ಸದಾ ಅಪ್ರಿಯವಾದ ಕಾರ್ಯ

ಗಳನ್ನು ಮಾಡುವುದರಲ್ಲಿಯೇ ನಿರತರಾಗಿರುವರೋ–ಅಂತಹ ಪಾಂಡವರ ವಿಷಯದಲ್ಲಿ ತಾವು ಸರ್ವದಾ ಪ್ರಸನ್ನರಾಗಿಯೇ ಇರುವಿರಿ.

**ಅಸ್ಮಾನೇವೋಪಜೀವಂಸ್ತ್ವಮಸ್ಮಾಕಂ ವಿಪ್ರಿಯೇ ರತಃ।**
**ನ ಹ್ಯಹಂ ತ್ವಾಂ ವಿಜಾನಾಮಿ ಮಧುದಿಗ್ಧಮಿವ ಕ್ಷುರಮ್ ॥೧೪॥**

ಸುಖಮಯವಾದ ಜೀವನನಿರ್ವಹಣೆಗೆ ನಮ್ಮನ್ನೇ ಅವಲಂಬಿಸಿ ತಾವು ಜೀವಿಸುತ್ತಿದ್ದರೂ ನಮ್ಮ ವಿಷಯದಲ್ಲಿ ತಾವು ಅಪ್ರಿಯವಾದ ಕಾರ್ಯವನ್ನು ಮಾಡುವುದರಲ್ಲಿಯೇ ನಿರತರಾಗಿರುವಿರಿ. ಆದರೆ ನೀವು ಜೇನುತುಪ್ಪವನ್ನು ಲೇಪಿಸಿರುವ ಕತ್ತಿಯ ರೂಪದಲ್ಲಿರುವಿರೆಂಬುದನ್ನು ನಾನು ಇದುವರೆಗೂ ತಿಳಿದಿರಲಿಲ್ಲ. "ನಾನು ಪಾಂಡವರನ್ನು ನಿಗ್ರಹಿಸುವೆನು. ಜಯದ್ರಥನು ಭಯಪಡುವ ಕಾರಣವಿಲ್ಲ"–ಎಂದು ತಾವು ಆಶ್ವಾಸನೆಯನ್ನು ಕೊಡದೆಯೇ ಇದ್ದಿದ್ದರೆ ಜಯದ್ರಥನು ತನ್ನ ರಾಜ್ಯಕ್ಕೆ ಹೋಗುವುದನ್ನು ನಾನು ಖಂಡಿತವಾಗಿಯೂ ತಡೆಯುತ್ತಲೇ ಇರಲಿಲ್ಲ.

**ಮಯಾ ತ್ವಾಶಂಸಮಾನೇನ ತ್ವತ್ತಸ್ತ್ರಾಣಮಬುದ್ಧಿನಾ ।**
**ಆಶ್ವಾಸಿತಃ ಸಿನ್ಧುಪತಿರ್ಮೋಹಾದ್ದತ್ತಶ್ಚ ಮೃತ್ಯವೇ ॥೧೬॥**

ನಿಶ್ಚಯವಾಗಿಯೂ ನಾನು ಮಹಾಅಜ್ಞಾನಿ; ಮಹಾಮೂರ್ಖ; ಬುದ್ಧಿಗೆಟ್ಟವನು. ಏಕೆಂದರೆ ನಿಮ್ಮಿಂದ ರಕ್ಷಣೆಯು ಸಿಕ್ಕುವುದೆಂಬ ಭರವಸೆಯನ್ನಿಟ್ಟುಕೊಂಡು ನಾನು ಜಯದ್ರಥನಿಗೆ ಆಶ್ವಾಸನೆಯನ್ನು ನೀಡಿದೆನು. ಫಲಿತಾಂಶವೇನೆಂದರೆ ಮೋಹಪರವಶನಾದ ನಾನೇ ಜಯದ್ರಥನನ್ನು ಮೃತ್ಯುವಿಗೆ ಒಪ್ಪಿಸುವಂತಾಯಿತು.

**ಯಮದಂಷ್ಟ್ರಾನ್ತರಂ ಪ್ರಾಪ್ತೋ ಮುಚ್ಯೇತಾಪಿ ಹಿ ಮಾನವಃ ।**
**ನಾರ್ಜುನಸ್ಯ ವಶಂ ಪ್ರಾಪ್ತೋ ಮುಚ್ಯೇತಾಜೌ ಜಯದ್ರಥಃ ॥೧೭॥**

ಯಮನ ದವಡೆಗೆ ಸಿಕ್ಕಿದರೂ ಮಾನವನು ಬಿಡಿಸಿಕೊಂಡು ಬರಬಹುದು. ಆದರೆ ಯುದ್ಧದಲ್ಲಿ ಅರ್ಜುನನಿಗೆ ವಶನಾದ ಜಯದ್ರಥನು ಮಾತ್ರ ಖಂಡಿತವಾಗಿಯೂ ತಪ್ಪಿಸಿಕೊಂಡು ಬರಲಾರನು. ಈ ಕಾರಣದಿಂದಲೇ ನಾನು ಪುನಃ ತಮ್ಮನ್ನು ಕೈಜೋಡಿಸಿ ಪ್ರಾರ್ಥಿಸಿಕೊಳ್ಳುತ್ತೇನೆ.

ಶೋಣಾಶ್ವರೇ! ಸೈಂಧವನು ಅರ್ಜುನನ ಹಿಡಿತದಿಂದ ತಪ್ಪಿಸಿಕೊಳ್ಳು

ವಂತೆ ಮಾಡಿರಿ. ನಾನು ಮಾಡಿದ ಆರ್ತ (ಅಸಂಗತ) ಪ್ರಲಾಪದಿಂದ ಕುಪಿತರಾಗಬೇಡಿರಿ. ದಯಮಾಡಿ ಸೈಂಧವನನ್ನು ರಕ್ಷಿಸಿರಿ."

"ಮಗು ದುರ್ಯೋಧನ! ನೀನು ಹೀಗೆ ಹೇಳಿದುದಕ್ಕಾಗಿ ನಾನು ನಿನ್ನಲ್ಲಿ ದೋಷವನ್ನೆಣಿಸುವುದಿಲ್ಲ ಅಥವಾ ಕೋಪಗೊಳ್ಳುವುದೂ ಇಲ್ಲ. ಏಕೆಂದರೆ: ನೀನು ನನ್ನ ಮಗನಾದ ಅಶ್ವತ್ಥಾಮನಿಗೆ ಸಮನಾಗಿರುವೆ. ಆದರೆ ನಾನು ಸತ್ಯವಾದ ಮಾತನ್ನೇ ಹೇಳುತ್ತೇನೆ. ಅವ್ಯಗ್ರನಾಗಿ ಈ ನನ್ನ ಮಾತನ್ನು ಗ್ರಹಿಸು.

**ಸಾರಥಿಃ ಪ್ರವರಃ ಕೃಷ್ಣಃ ಶೀಘ್ರಾಶ್ಚಾಸ್ಯ ಹಯೋತ್ತಮಾಃ।**
**ಅಲ್ಪಂ ಚ ವಿವರಂ ಕೃತ್ವಾ ತೂರ್ಣಂ ಯಾತಿ ಧನಂಜಯಃ ॥೨೦॥**

ಶ್ರೀಕೃಷ್ಣನು ಅರ್ಜುನನಿಗೆ ಶ್ರೇಷ್ಠಸಾರಥಿಯಾಗಿದ್ದಾನೆ. ಅವನ ಶ್ರೇಷ್ಠ ವಾದ ಕುದುರೆಗಳೂ ಉತ್ತಮವಾದ ವೇಗವುಳ್ಳವುಗಳು. ಸ್ವಲ್ಪವೇ ಅವಕಾಶ ಸಿಕ್ಕಿದರೂ ಬಹುಶೀಘ್ರವಾಗಿ ಅರ್ಜುನನು ಸೇನೆಯೊಳಕ್ಕೆ ನುಗ್ಗಿಹೋಗುತ್ತಾನೆ.

ನೀನೇ ಪ್ರತ್ಯಕ್ಷವಾಗಿ ಕಾಣುತ್ತಿಲ್ಲವೇ? ದುರ್ಯೋಧನ! ನಾನು ಪುಂಖಾನುಪುಂಖವಾಗಿ ಅರ್ಜುನನ ಮೇಲೆ ಬಾಣಗಳನ್ನು ಬಿಡುತ್ತಲೇ ಇದ್ದೇನೆ. ಆದರೆ ನನ್ನ ಬಾಣಗಳು ಅವನಿಗೆ ತಲುಪುವುದರೊಳಗಾಗಿ ಅವನು ಮುಂದುವರಿದು ಬಂದುಬಿಟ್ಟಿರುತ್ತಾನೆ. ನಾನು ಬಿಟ್ಟ ಬಾಣಗಳು ಅವನ ರಥದಿಂದ ಒಂದು ಕ್ರೋಶದಷ್ಟು ಹಿಂದೆ ಬಿದ್ದಿರುತ್ತವೆಯೆಂದರೆ ಅವನ ಕುದುರೆಗಳು ನನ್ನ ಬಾಣಗಳಿಗಿಂತಲೂ ಎಷ್ಟು ವೇಗಯುಕ್ತವಾಗಿವೆ ಯೆಂಬುದನ್ನು ನೀನೇ ಊಹಿಸಬಹುದಾಗಿದೆ. ನಾನು ಬಹಳ ವೃದ್ಧನಾಗಿರು ವುದರಿಂದ ಅರ್ಜುನನಂತೆ ಶೀಘ್ರಯಾನದಲ್ಲಿ ಕುಳಿತು ಯುದ್ಧಮಾಡಲು ಅಸಮರ್ಥನಾಗಿದ್ದೇನೆ. ಮೇಲಾಗಿ ನನ್ನ ಸೈನ್ಯದ ಮುಂಭಾಗದಲ್ಲಿ ಪಾರ್ಥರ ಬಲವಾದ ಸೈನ್ಯವಿದೆ. "ಎಲ್ಲ ಧನುಷ್ಮಂತರೂ ನೋಡುತ್ತಿರುವಂತೆಯೇ ಯುಧಿಷ್ಠಿರನನ್ನು ಜೀವಸಹಿತವಾಗಿ ಬಂಧಿಸುತ್ತೇನೆ"–ಎಂದೂ ನಾನು ಸರ್ವಕ್ಷತ್ರಿಯರ ಮುಂದೆ ಪ್ರತಿಜ್ಞೆಮಾಡಿದ್ದೇನೆ. ಆ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳಲು ಇದು ನನಗೆ ಸಕಾಲವಾಗಿದೆ. ಈ ಸಮಯದಲ್ಲಿ ಧನಂಜಯನಿಂದ ಪರಿತ್ಯಕ್ತನಾದ ಯುಧಿಷ್ಠಿರನು ಈಗ ನನ್ನ ಮುಂದೆಯೇ ಇದ್ದಾನೆ. ಈ ಕಾರಣಗಳಿಂದ ನಾನು ವ್ಯೂಹಮುಖವನ್ನು ಬಿಟ್ಟು ಅರ್ಜುನ ನೊಡನೆ ಯುದ್ಧಮಾಡಲು ಹೋಗುವುದಿಲ್ಲ.

ಅರ್ಜುನನೂ ನಿನ್ನಂತೆಯೇ ಸತ್ಕುಲಪ್ರಸೂತನೂ, ಪರಾಕ್ರಮಿಯೂ ಆಗಿದ್ದಾನೆ. ಈ ಸಮಯದಲ್ಲವನು ಏಕಾಕಿಯಾಗಿ ಯುದ್ಧಮಾಡುತ್ತಿದ್ದಾನೆ. ನೀನು ಅನೇಕವೀರರನ್ನು ಸಹಾಯಕರನ್ನಾಗಿ ಪಡೆದಿರುವೆ. ಅರ್ಜುನನು ರಾಜ್ಯಕೋಶಾದಿಗಳೆಲ್ಲವನ್ನೂ ಕಳೆದುಕೊಂಡಿರುತ್ತಾನೆ. ನೀನಿಂದು ಈ ಸಂಪೂರ್ಣ ಜಗತ್ತಿಗೇ ಏಕೈಕಸ್ವಾಮಿಯಾಗಿರುವೆ. ಆದುದರಿಂದ ನೀನೇ ಹೋಗಿ ಅರ್ಜುನನೊಡನೆ ಯುದ್ಧಮಾಡು, ಹೆದರಬೇಡ.

**ರಾಜಾ ಶೂರಃ ಕೃತೀ ದಕ್ಷೋ ವೈರಮುತ್ಪಾದ್ಯ ಪಾಣ್ಡವೈಃ।**
**ವೀರ ಸ್ವಯಂ ಪ್ರಯಾಹ್ಯತ್ರ ಯತ್ರ ಪಾರ್ಥೋ ಧನಂಜಯಃ॥**

ದುರ್ಯೋಧನ! ನೀನು ರಾಜಾಧಿರಾಜನಾಗಿರುವೆ; ಮಹಾಶೂರನಾಗಿ ರುವೆ; ವಿದ್ವಾಂಸನಾಗಿರುವೆ; ಎಲ್ಲ ವಿಷಯಗಳನ್ನೂ ತಿಳಿದವನಾಗಿರುವೆ; ಯುದ್ಧನಿಯಂತ್ರಣದಲ್ಲಿಯೂ ದಕ್ಷನಾಗಿರುವೆ. ಪಾಂಡವರೊಡನೆ ವೈರವನ್ನು ಕಟ್ಟಿಕೊಂಡಿರುವವನೂ ನೀನೇ ಆಗಿರುವೆ. (ನಾವು ಯುದ್ಧಮಾಡಬೇಕೆಂದು ಯುದ್ಧಮಾಡುತ್ತಿರುವೆವೇ ಹೊರತು ಪಾಂಡವರ ವಿಷಯದಲ್ಲಿ ನಮಗೆ ವೈರವಿಲ್ಲ.) ಪಾಂಡವರೊಡನೆ ನೀನೇ ವೈರವನ್ನು ಕಟ್ಟಿಕೊಂಡಿರುವುದರಿಂದ ಹೆಚ್ಚು ರೊಚ್ಚಿನಿಂದ–ಹೆಚ್ಚು ಕೆಚ್ಚಿನಿಂದ ಯುದ್ಧಮಾಡಲು ನಿನಗೆ ಸಾಧ್ಯವಾಗುವುದು. ಆದುದರಿಂದ ಪಾರ್ಥನಿರುವೆಡೆಗೆ ನೀನೇ ಹೋಗಿ ಅವನೊಡನೆ ಯುದ್ಧಮಾಡು."

"ಆಚಾರ್ಯರೇ! ತಮ್ಮನ್ನೇ ಅತಿಕ್ರಮಿಸಿಹೋದ, ಸರ್ವಶಸ್ತ್ರವೇತ್ತರಿಗೂ ಶ್ರೇಷ್ಠನಾದ ಧನಂಜಯನನ್ನು ನಾನು ಹೇಗೆ ಎದುರಿಸಲಿ? ನನ್ನಿಂದ ಅವನನ್ನು ತಡೆಯಲು ಸಾಧ್ಯವಾಗುವುದೇ? ನನ್ನ ಅಭಿಪ್ರಾಯದಲ್ಲಿ ವಜ್ರಪಾಣಿಯಾದ ಪುರಂದರನನ್ನಾದರೂ ಯುದ್ಧದಲ್ಲಿ ಜಯಿಸಬಹುದು. ಆದರೆ ಪರಪುರಂಜಯನಾದ ಪಾರ್ಥನನ್ನು ಯುದ್ಧದಲ್ಲಿ ಜಯಿಸುವ ಸಾಧ್ಯತೆಯೇ ಇಲ್ಲ. ಭೋಜವಂಶೀಯನಾದ ಹಾರ್ದಿಕ್ಯನೂ, ದೇವೋಪಮರಾದ ತಾವೂ ಅರ್ಜುನನ ಅಸ್ತ್ರಪ್ರತಾಪದಿಂದ ಪರಾಜಯಹೊಂದಿರುತ್ತೀರಿ. ಶ್ರುತಾಯು, ಸುದಕ್ಷಿಣ, ಶ್ರುತಾಯುಧರಾಜ, ಶ್ರುತಾಯುಷ-ಅಚ್ಯುತಾಯುಷರು ಮತ್ತು ಸಾವಿರಾರು ಮ್ಲೇಚ್ಛಯೋಧರೂ ಅರ್ಜುನನ ಅಸ್ತ್ರಗಳಿಂದಲೇ ಹತರಾಗಿ ಹೋದರು. ಇಂತಹ ಶಸ್ತ್ರಕೋವಿದನಾದ, ದುರ್ಧರ್ಷನಾದ, ಅಗ್ನಿಗೆ ಸಮಾನವಾಗಿ ನಮ್ಮ ಸೈನ್ಯವನ್ನು ದಹಿಸುತ್ತಿರುವ ಪಾಂಡವನನ್ನು ನಾನು ಹೇಗೆ

ತಾನೇ ಎದುರಿಸಲಿ? ಅಂತಹ ಮಹಾಪರಾಕ್ರಮಿಯಾದ ಪಾರ್ಥನನ್ನು ನನ್ನಿಂದ ಎದುರಿಸಲು ಸಾಧ್ಯವಾಗುವುದೇ? ಇಂದು ನಾನು ಅವನೊಡನೆ ಯುದ್ಧಮಾಡುವುದು ಯುಕ್ತವೆಂದು ತಾವು ಭಾವಿಸುವಿರಾ? ಸೇವಕನಂತೆಯೇ ನಾನು ತಮ್ಮ ಆಜ್ಞಾಧಾರಕನಾಗಿದ್ದೇನೆ. ನನ್ನನ್ನೂ, ನನ್ನ ಯಶಸ್ಸನ್ನೂ ರಕ್ಷಿಸುವ ಭಾರವು ತಮಗೇ ಸೇರಿದ್ದಾಗಿದೆ."

"ಕೌರವ್ಯ! ನೀನು ಸತ್ಯವಾದ ಮಾತನ್ನೇ ಹೇಳುತ್ತಿರುವೆ. ನಿಶ್ಚಯ ವಾಗಿಯೂ ಧನಂಜಯನು ಎದುರಿಸಲು ಅಸಾಧ್ಯನಾದವನು. ಅಂತಹ ದುರ್ಧರ್ಷನ ವೇಗವನ್ನು ನೀನು ಸಹಿಸಿಕೊಳ್ಳಲು ಸಾಧ್ಯವಾಗುವಂತೆ ಈಗ ನಾನು ಒಂದು ಕಾರ್ಯವನ್ನು ಮಾಡುತ್ತೇನೆ. ವಾಸುದೇವನು ನೋಡುತ್ತಿರುವಂತೆಯೇ ನೀನು ಅರ್ಜುನನೊಡನೆ ಯುದ್ಧದಲ್ಲಿ ತೊಡಗುವ ಮತ್ತು ಅವನೊಡನೆ ಪರಾಕ್ರಮದಿಂದ ಸೆಣೆಸುವ ಅದ್ಭುತದೃಶ್ಯವನ್ನು ಇಂದು ಲೋಕದಲ್ಲಿರುವ ಎಲ್ಲ ಧನುಷ್ಮಂತರೂ ನೋಡಲಿ.

**ಏಷ ತೇ ಕವಚಂ ರಾಜಂಸ್ತಥಾ ಬಧ್ನಾಮಿ ಕಾಞ್ಚನಮ್ ।**
**ಯಥಾ ನ ಬಾಣಾ ನಾಸ್ತ್ರಾಣಿ ಪ್ರಹರಿಷ್ಯನ್ತಿ ತೇ ರಣೇ ॥೩೫॥**

ಈಗ ಒಂದು ಸುವರ್ಣಮಯವಾದ ಕವಚವನ್ನು ನಾನೇ ನಿನಗೆ ತೊಡಿಸುತ್ತೇನೆ. ಈ ಕವಚದ ಪ್ರಭಾವದಿಂದಾಗಿ ಯುದ್ಧದಲ್ಲಿ ಶತ್ರುವು ಪ್ರಹರಿಸುವ ಬಾಣಗಳಾಗಲೀ, ಅಸ್ತ್ರಗಳಾಗಲೀ, ನಿನಗೆ ಯಾವ ವಿಧವಾದ ಘಾತವನ್ನೂ ಉಂಟುಮಾಡಲಾರವು. ಒಂದು ವೇಳೆ ನಿನ್ನ ಶತ್ರುಗಳಾದ ಮಾನವರೊಡನೆ ದೇವತೆಗಳು, ಅಸುರರು, ಯಕ್ಷರು, ನಾಗರು, ರಾಕ್ಷಸರು ಅರ್ಥಾತ್ ಮೂರುಲೋಕದ ಪ್ರಾಣಿಗಳೂ ಒಟ್ಟಾಗಿಯೇ ಸೇರಿ ನಿನ್ನೊಡನೆ ಯುದ್ಧಮಾಡಲು ಬಂದರೂ ನಿನಗೆ ಯಾವ ಭಯವೂ ಇಲ್ಲ.

**ನ ಕೃಷ್ಣೋ ನ ಚ ಕೌನ್ತೇಯೋ ನ ಚಾನ್ಯಃ ಶಸ್ತ್ರಭೃದ್ರಣೇ ।**
**ಶರಾನರ್ಪಯಿತುಂ ಕಶ್ಚಿತ್ಕವಚೇ ತವ ಶಕ್ಷ್ಯತಿ ॥೩೭॥**

ಕೃಷ್ಣನಾಗಲೀ, ಪಾರ್ಥನಾಗಲೀ, ಶಸ್ತ್ರವನ್ನು ಧರಿಸಿರುವ ಮತ್ತಾವ ಯೋಧನೇ ಆಗಲೀ–ನೀನು ಈ ಕವಚವನ್ನು ಧರಿಸಿರುವಾಗ ನಿನ್ನ ಮೇಲೆ ಶಸ್ತ್ರಾಸ್ತ್ರಗಳನ್ನು ಪ್ರಯೋಗಮಾಡಿ ನಿನ್ನನ್ನು ಗಾಯಗೊಳಿಸಲು ಸಮರ್ಥ ರಾಗುವುದಿಲ್ಲ. ಎಲ್ಲ ಬಾಣಗಳೂ, ಎಲ್ಲ ಅಸ್ತ್ರಗಳೂ ಈ ದಿವ್ಯಕವಚವನ್ನು

ಧರಿಸಿರುವ ನಿನ್ನ ಮುಂದೆ ನಿರರ್ಥಕಗಳಾಗುತ್ತವೆ. ನಾನು ತೊಡಿಸಲಿರುವ ಈ ಕವಚದಿಂದ ಯುಕ್ತನಾಗಿ ಕ್ರುದ್ಧನಾಗಿರುವ ಅರ್ಜುನನ ಬಳಿಗೆ ತ್ವರೆಯಿಂದ ಹೋಗು. ನಿನ್ನ ವೇಗವನ್ನು ಅವನಿಂದು ಸಹಿಸಿಕೊಳ್ಳಲಾರನು."

ಮಹಾರಾಜ! ಬ್ರಹ್ಮವಿದರಾದ ದ್ರೋಣರು ಹೀಗೆ ನಿನ್ನ ಮಗನನ್ನು ಸಂತೈಸಿ ತಮ್ಮ ವಿದ್ಯೆಯ ಪ್ರಭಾವದಿಂದ ಎಲ್ಲ ಲೋಕಗಳನ್ನೂ ವಿಸ್ಮಯಾನ್ವಿತವನ್ನಾಗಿ ಮಾಡುವ ಆಶಯದಿಂದಲೂ, ಅಂದಿನ ಮಹಾಯುದ್ಧದಲ್ಲಿ ನಿನ್ನ ಮಗನಿಗೆ ವಿಜಯವನ್ನು ಗಳಿಸಿಕೊಡುವ ಆಶಯದಿಂದಲೂ ಶುದ್ಧಾಚಮನ ಮಾಡಿ ಸುವರ್ಣಮಯವಾಗಿದ್ದ, ಮಹಾತೇಜಸ್ಸಿನಿಂದ ಕೂಡಿದ್ದ ಪರಮಾದ್ಭುತವಾದ ದಿವ್ಯಕವಚವನ್ನು ಯಥಾವಿಧಿಯಾಗಿ ಮಂತ್ರಪುನಶ್ಚರಣೆಯೊಡನೆ ದುರ್ಯೋಧನನಿಗೆ ತೊಡಿಸಿದರು. ಅನಂತರ ದ್ರೋಣರು ನಿನ್ನ ಮಗನಿಗೆ ಮಂಗಳಾಶಾಸನವನ್ನೂ ಮಾಡಿದರು:

**ಕರೋತು ಸ್ವಸ್ತಿ ತೇ ಬ್ರಹ್ಮ ಬ್ರಹ್ಮಾ ಚಾಪಿ ದ್ವಿಜಾತಯಃ ।**
**ಸರೀಸೃಪಾಶ್ಚ ಯೇ ಶ್ರೇಷ್ಠಾಸ್ತೇಭ್ಯಸ್ತೇ ಸ್ವಸ್ತಿ ಭಾರತ ॥೪೧॥**

"ಭಾರತ! ಪರಬ್ರಹ್ಮರೂಪನಾದ ಪರಮಾತ್ಮನು ನಿನಗೆ ಕಲ್ಯಾಣವನ್ನುಂಟುಮಾಡಲಿ. ಬ್ರಹ್ಮನೂ, ಬ್ರಾಹ್ಮಣರೂ ನಿನಗೆ ಒಳ್ಳೆಯದನ್ನು ಮಾಡಲಿ. ಶ್ರೇಷ್ಠವಾದ ಸರ್ಪಗಳಿಂದಲೂ ನಿನಗೆ ಒಳ್ಳೆಯದಾಗಲಿ.

**ಯಯಾತಿರ್ನಾಹುಷಶ್ಚೈವ ಧುಂಧುಮಾರೋ ಭಗೀರಥಃ ।**
**ತುಭ್ಯಂ ರಾಜರ್ಷಯಃ ಸರ್ವೇ ಸ್ವಸ್ತಿ ಕುರ್ವನ್ತು ತೇ ಸದಾ ॥೪೨॥**

ಯಯಾತಿ, ನಹುಷ, ಧುಂಧುಮಾರ, ಭಗೀರಥ–ಇವರೇ ಮೊದಲಾದ ರಾಜರ್ಷಿಗಳೂ ನಿನಗೆ ಮಂಗಳವನ್ನುಂಟುಮಾಡಲಿ.

**ಸ್ವಸ್ತಿ ತೇಽಸ್ತ್ವೇಕಪಾದೇಭ್ಯೋ ಬಹುಪಾದೇಭ್ಯ ಏವ ಚ ।**
**ಸ್ವಸ್ತ್ಯಸ್ತ್ವಪಾದಕೇಭ್ಯಶ್ಚ ನಿತ್ಯಂ ತವ ಮಹಾರಣೇ ॥೪೩॥**

ಏಕಪಾದರಿಂದಲೂ, ಬಹುಪಾದರಿಂದಲೂ, ಪಾದರಹಿತ ಪ್ರಾಣಿಗಳಿಂದಲೂ ನಿತ್ಯವೂ ನಿನಗೆ ಮಂಗಳವು ಲಭಿಸಲಿ.

**ಸ್ವಾಹಾ ಸ್ವಧಾ ಶಚೀ ಚೈವ ಸ್ವಸ್ತಿ ಕುರ್ವನ್ತು ತೇ ಸದಾ ।**
**ಲಕ್ಷ್ಮೀರರುನ್ಧತೀ ಚೈವ ಕುರುತಾಂ ಸ್ವಸ್ತಿ ತೇಽನಘ ॥೪೪॥**

ನಿಷ್ಪಾಪನೇ! ಸ್ವಾಹಾದೇವೀ, ಸ್ವಧಾದೇವೀ, ಶಚೀದೇವೀ, ಲಕ್ಷ್ಮೀದೇವೀ, ಅರುಂಧತೀದೇವೀ–ಇವರೆಲ್ಲರೂ ನಿನಗೆ ಸದಾಕಾಲದಲ್ಲೂ ಒಳಿತನ್ನು ಮಾಡಲಿ.

**ಅಸಿತೋ ದೇವಲಶ್ಚೈವ ವಿಶ್ವಾಮಿತ್ರಸ್ತಥಾಙ್ಗಿರಾಃ ।**
**ವಸಿಷ್ಠಃ ಕಶ್ಯಪಶ್ಚೈವ ಸ್ವಸ್ತಿ ಕುರ್ವನ್ತು ತೇ ನೃಪ ॥೪೫॥**

ಅಸಿತರು, ದೇವಲರು, ವಿಶ್ವಾಮಿತ್ರರು, ವಸಿಷ್ಠರು ಮತ್ತು ಕಶ್ಯಪರು ನಿನಗೆ ಕ್ಷೇಮವನ್ನುಂಟುಮಾಡಲಿ.

**ಧಾತಾ ವಿಧಾತಾ ಲೋಕೇಶೋ ದಿಶಶ್ಚ ಸದಿಗೀಶ್ವರಾಃ ।**
**ಸ್ವಸ್ತಿ ತೇಽದ್ಯ ಪ್ರಯಚ್ಛನ್ತು ಕಾರ್ತಿಕೇಯಶ್ಚ ಷಣ್ಮುಖಃ ॥೪೬॥**

ಧಾತಾ, ವಿಧಾತಾ, ತ್ರಿಲೋಕೇಶನಾದ ಇಂದ್ರ, ದಿಕ್ಕುಗಳು, ದಿಕ್ಪಾಲಕರು ಮತ್ತು ಕೃತ್ತಿಕೆಯರ ಮಗನಾದ ಷಣ್ಮುಖ–ಇವರೆಲ್ಲರೂ ನಿನಗೆ ಮಂಗಳವನ್ನುಂಟುಮಾಡಲಿ.

**ವಿವಸ್ವಾನ್ಭಗವಾನ್ಸ್ವಸ್ತಿ ಕರೋತು ತವ ಸರ್ವಶಃ ।**
**ದಿಗ್ಗಜಾಶ್ಚೈವ ಚತ್ವಾರಃ ಕ್ಷಿತಿಶ್ಚ ಗಗನಂ ಗ್ರಹಾಃ ॥೪೭॥**

ಸೂರ್ಯಭಗವಂತನು ನಿನಗೆ ಕಲ್ಯಾಣವನ್ನುಂಟುಮಾಡಲಿ. ನಾಲ್ಕು ದಿಗ್ಗಜಗಳೂ ಭೂದೇವಿಯೂ, ಆಕಾಶ ಮತ್ತು ಗ್ರಹಗಳೂ ನಿನಗೆ ಶುಭದಾಯಕಗಳಾಗಲಿ.

**ಅಧಸ್ತಾದ್ಧರಣೀಂ ಯೋಽಸೌ ಸದಾ ಧಾರಯತೇ ನೃಪ ।**
**ಶೇಷಶ್ಚ ಪನ್ನಗಶ್ರೇಷ್ಠಃ ಸ್ವಸ್ತಿ ತುಭ್ಯಂ ಪ್ರಯಚ್ಛತು ॥೪೮॥**

ಯಾವಾಗಲೂ ಭೂಮಿಯ ಕೆಳಭಾಗದಲ್ಲಿಯೇ ಇದ್ದುಕೊಂಡು ಅನವರತವಾಗಿ ಈ ಭೂಮಿಯನ್ನೇ ಹೊತ್ತುಕೊಂಡಿರುವ ಸರ್ಪಶ್ರೇಷ್ಠನಾದ ಶೇಷನೂ ನಿನಗೆ ಶುಭದಾಯಕನಾಗಲಿ.

ಗಾಂಧಾರೀಪುತ್ರನೇ! ಹಿಂದೆ ವೃತ್ರಾಸುರನು ದೇವತೆಗಳೊಡನೆ

ಯುದ್ಧಮಾಡುತ್ತಿದ್ದಾಗ ತನ್ನ ಪರಾಕ್ರಮದಿಂದ ದೇವತೆಗಳ ಶರೀರಗಳನ್ನು ಛಿನ್ನ-ಭಿನ್ನಮಾಡಿ ಪರಾಜಯಗೊಳಿಸಿದನು. ತೇಜಸ್ಸಿನಿಂದಲೂ, ಬಲದಿಂದಲೂ ಹೀನರಾದ ಇಂದ್ರಸಹಿತರಾದ ದೇವತೆಗಳು ವೃತ್ರಾಸುರನಿಗೆ ಭಯಪಟ್ಟುಕೊಂಡು ಬ್ರಹ್ಮನನ್ನು ಶರಣುಹೊಕ್ಕರು.

"ದೇವಸತ್ತಮನೇ! ವೃತ್ರಾಸುರನಿಂದ ನಾವು ಬಹಳವಾಗಿ ಪೀಡಿತ ರಾಗಿದ್ದೇವೆ. ಸುರಶ್ರೇಷ್ಠನೇ! ನೀನು ನಮಗೆ ಶರಣ್ಯನಾಗು. ವೃತ್ರಾಸುರನ ಭಯದಿಂದ ನಮ್ಮನ್ನು ಕಾಪಾಡು."

ದುರ್ಯೋಧನ! ದೇವತೆಗಳ ಪ್ರಾರ್ಥನೆಯನ್ನು ಕೇಳಿ ಬ್ರಹ್ಮನು ತನ್ನ ಪಕ್ಕದಲ್ಲಿಯೇ ನಿಂತಿದ್ದ ವಿಷ್ಣುವನ್ನೂ, ಇಂದ್ರನೇ ಮೊದಲಾದ ವಿಷಣ್ಣ ವದನರಾಗಿದ್ದ ದೇವತೆಗಳನ್ನೂ ಕುರಿತು ಯಥಾರ್ಥವಾದ ಈ ಮಾತುಗಳನ್ನು ಹೇಳಿದನು:

"ದೇವತೆಗಳೇ! ಇಂದ್ರನೇ ಮೊದಲಾದ ದೇವತೆಗಳೂ ಮತ್ತು ಬ್ರಾಹ್ಮಣರೂ ಸದಾಕಾಲದಲ್ಲಿಯೂ ನನ್ನಿಂದ ರಕ್ಷಿಸಲ್ಪಡತಕ್ಕವರೇ ಆಗಿದ್ದಾರೆ. ಆದರೆ ವೃತ್ರಾಸುರನೂ ಸಾಮಾನ್ಯನಲ್ಲ. ತ್ವಷ್ಟೃಪ್ರಜಾಪತಿಯ ಸುದುರ್ಧರ ವಾದ (ಸಹಿಸಲು ಅಶಕ್ಯವಾದ) ಮಹಾತೇಜಸ್ಸಿನಿಂದಲೇ ವೃತ್ರಾಸುರನು ಹುಟ್ಟಿದ್ದಾನೆ. ಹಿಂದೆ ತ್ವಷ್ಟೃಪ್ರಜಾಪತಿಯು ಹತ್ತು ಲಕ್ಷ ವರ್ಷಗಳ ಪರ್ಯಂತ ವಾಗಿ ತಪಸ್ಸು ಮಾಡುತ್ತಿದ್ದು, ಮಹೇಶ್ವರನ ಅನುಜ್ಞೆಯನ್ನು ಪಡೆದು ವೃತ್ರಾಸುರನನ್ನು ಸೃಷ್ಟಿಸಿದನು. ನಿಶ್ಚಯವಾಗಿಯೂ ಶಂಕರನ ವರಪ್ರಸಾದ ದಿಂದಲೇ ಬಲಿಷ್ಠನಾದ ವೃತ್ರಾಸುರನು ನಿಮ್ಮೆಲ್ಲರನ್ನೂ ಧ್ವಂಸಮಾಡುತ್ತಿದ್ದಾನೆ. ಆದುದರಿಂದ ನಾವು ಈ ಸಮಯದಲ್ಲಿ ವೃತ್ರಾಸುರನನ್ನು ಜಯಿಸಲು ಶಂಕರನನ್ನೇ ಪ್ರಾರ್ಥಿಸಬೇಕಾಗಿದೆ. ಆದರೆ ಶಂಕರನಿರುವ ಸ್ಥಾನಕ್ಕೆ ನಾವೇ ಹೋಗದಿದ್ದರೆ ನಮಗೆ ಅವನ ದರ್ಶನವು ಲಭಿಸುವುದಿಲ್ಲ. ಅವನ ದಿವ್ಯ ದರ್ಶನವನ್ನು ಪಡೆದು ಅವನ ವರಪ್ರಸಾದದಿಂದಲೇ ನೀವು ವೃತ್ರಾಸುರನನ್ನು ಜಯಿಸುವಿರಿ. ಆದುದರಿಂದ ನೀವೀಗಲೇ ಮಂದರಪರ್ವತಕ್ಕೆ ಹೋಗಿರಿ. ಎಲ್ಲ ವಿಧವಾದ ತಪಸ್ಸುಗಳಿಗೂ ಉತ್ಪತ್ತಿಸ್ಥಾನನಾದ, ದಕ್ಷಯಜ್ಞವಿನಾಶಕ ನಾದ, ಪಿನಾಕಪಾಣಿಯಾದ, ಸರ್ವಭೂತಗಳಿಗೂ ಸ್ವಾಮಿಯಾದ, ಭಗದೇವತೆಯ ಕಣ್ಣುಗಳನ್ನು ಅಪಹರಿಸಿದ ಪರಮಶಿವನು ಈಗ ಮಂದರಪರ್ವತದಲ್ಲಿಯೇ ಇದ್ದಾನೆ."

ಬ್ರಹ್ಮನ ಮಾತಿನಂತೆ ದೇವತೆಗಳು ಬ್ರಹ್ಮನನ್ನೇ ಮುಂದುಮಾಡಿಕೊಂಡು ಮಂದರಪರ್ವತಕ್ಕೆ ಹೋಗಿ ಕೋಟಿಸೂರ್ಯರ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ತೇಜೋರಾಶಿಯಾದ ಪರಶಿವನನ್ನು ಸಂದರ್ಶಿಸಿದರು.

ದೇವತೆಗಳನ್ನು ಕಂಡೊಡನೆಯೇ ಶಂಕರನು '**ಸ್ವಾಗತಂ ದೇವಾಃ**' ಎಂದು ಹೇಳುತ್ತಾ ಸ್ವಾಗತವನ್ನು ಬಯಸಿದನು. "ನಾನು ನಿಮಗೆ ಯಾವ ಕಾರ್ಯವನ್ನು ಮಾಡಿಕೊಡಲಿ? ತಡಮಾಡದೇ ಹೇಳಿರಿ. ನನ್ನ ದರ್ಶನವು ಅಮೋಘವಾದುದು. ಯಾವ ಕಾರಣದಿಂದಲೂ ವ್ಯರ್ಥವಾಗತಕ್ಕುದಲ್ಲ. ಆದುದರಿಂದ ನಿಮ್ಮ ಮನಸ್ಸಿನ ಅಭೀಷ್ಟಗಳೆಲ್ಲವೂ ಸಿದ್ಧಿಸಲಿ."

ಶಂಕರನು ಹೀಗೆ ಅಭಯಪ್ರದಾನವನ್ನು ಮಾಡಿದನಂತರ ದೇವತೆಗಳು ವಿನಮ್ರರಾಗಿ ಪ್ರತ್ಯುತ್ತರಿಸಿದರು:

"ಮಹೇಶ್ವರ! ವೃತ್ರಾಸುರನು ನಮ್ಮೆಲ್ಲರ ತೇಜಸ್ಸನ್ನೂ ಅಪಹರಿಸಿ ಬಿಟ್ಟಿರುವನು. ದೇವತೆಗಳಿಗೆ ನೀನು ಶರಣ್ಯನಾಗು. ವೃತ್ರಾಸುರನ ಪ್ರಹಾರಗಳಿಂದ ಜರ್ಝರಿತವಾಗಿರುವ ನಮ್ಮ ಶರೀರಗಳನ್ನು ನೋಡು. ದೇವ! ಅವನಿಂದ ನಮಗೆ ಉಳಿಗಾಲವೇ ಇಲ್ಲವಾಗಿದೆ. ಆದುದರಿಂದ ನಿನಗೆ ನಾವು ಶರಣಾಗತರಾಗಿದ್ದೇವೆ. ನಮಗೆ ನೀನು ಆಶ್ರಯನಾಗು."

"ದೇವತೆಗಳೇ! ನಿಮಗೂ ತಿಳಿದಿರುವಂತೆ ಆ ವೃತ್ರಾಸುರನೆಂಬುವನು ತ್ವಷ್ಟ್ರುಪ್ರಜಾಪತಿಯ ತೇಜಸ್ಸಿನಿಂದ ಆವಿರ್ಭೂತವಾದ, ಮಹಾಬಲಿಷ್ಠವಾದ, ಬಹಳ ಭಯಂಕರವಾದ, ಜಿತೇಂದ್ರಿಯರಲ್ಲದವರಿಂದ ನಿವಾರಿಸಲು ಅಸಾಧ್ಯವಾದ ಒಂದು *ಕೃತ್ಯೆಯೇ (ಕ್ಷುದ್ರದೇವತೆಯೇ) ಆಗಿದೆ.

ಆದರೂ ಸರ್ವದೇವತೆಗಳಿಗೂ ನಾನು ಅವಶ್ಯವಾಗಿ ಸಹಾಯ ಮಾಡಲೇಬೇಕು. ಇಂದ್ರ! ನನ್ನ ಶರೀರದಿಂದಲೇ ಹುಟ್ಟಿರುವ ಮಹಾಕಾಂತಿಯುಕ್ತವಾದ ನನ್ನ ಈ ಕವಚವನ್ನು ಪ್ರತಿಗ್ರಹಿಸು. ದೇವತೆಗಳ

---

***ಕೃತ್ಯಾ:-** ಅಭಿಚಾರಿಕಕಾರ್ಯದ ಕ್ಷುದ್ರದೇವತೆ; ಶೂನ್ಯದೇವತೆ; ಮಾಟದ ಬೊಂಬೆ. ದ್ವೇಷಿಗಳು ಯಾರನ್ನಾದರೂ ನಾಶಪಡಿಸಬೇಕಾದರೆ ಮಾಟಮಾಡಿಸಿ ಶೂನ್ಯದೇವತೆಯನ್ನು ಪ್ರಯೋಗಿಸುವರು. ಸಂಬಂಧಪಟ್ಟವರು ಅದರಿಂದ ಬಹಳ ಕಷ್ಟ-ನಷ್ಟಗಳನ್ನೂ ಅನುಭವಿಸಬೇಕಾಗಬಹುದು. ತಕ್ಕ ಪ್ರತೀಕಾರವನ್ನು ನಡೆಸಿ ಅದರಿಂದ ಪಾರಾಗಲೂಬಹುದು.

ಶತ್ರುವಾದ ಅಸುರಮುಖ್ಯನಾದ ವೃತ್ರಾಸುರನ ಸಂಹಾರಕ್ಕಾಗಿ ನಾನು ಉಪದೇಶಿಸುವ ಮಂತ್ರವನ್ನು ಮನಸ್ಸಿನಲ್ಲಿಯೇ ಜಪಿಸುತ್ತಾ ಈ ಕವಚವನ್ನು ಧರಿಸು.”

ದುರ್ಯೋಧನ! ವರದನಾದ ಪರಶಿವನು ಹೀಗೆ ಹೇಳಿ ತೇಜೋಯುಕ್ತವಾದ ಕವಚವನ್ನು ಕೊಟ್ಟು ಪುನಶ್ಚರಣೆಮಾಡಬೇಕಾದ ಮಂತ್ರವನ್ನೂ ಉಪದೇಶಿಸಿದನು. ಆ ದಿವ್ಯಕವಚದಿಂದ ರಕ್ಷಿತನಾದ ಇಂದ್ರನು ವೃತ್ರಾಸುರನ ಸೈನ್ಯದೊಡನೆ ಯುದ್ಧಮಾಡಲು ಹೋದನು. ಘೋರವಾದ ಯುದ್ಧವು ಪ್ರಾರಂಭವಾಯಿತು. ಆ ಮಹಾಯುದ್ಧದಲ್ಲಿ ವೃತ್ರಾಸುರನು ನಾನಾವಿಧವಾದ ಅಸ್ತ್ರ-ಶಸ್ತ್ರಗಳನ್ನು ಇಂದ್ರನ ಮೇಲೆ ಪ್ರಯೋಗಿಸಿದನು. ಆದರೆ ಇಂದ್ರನು ಕಟ್ಟಿಕೊಂಡಿದ್ದ ಆ ಶಿವಕವಚದ ಪ್ರಭಾವದಿಂದಾಗಿ ವೃತ್ರನು ಪ್ರಯೋಗಿಸಿದ ಮಹಾಸ್ತ್ರಗಳು ಆ ಕವಚದಲ್ಲಿ ಒಂದೇ ಒಂದು ಸಣ್ಣರಂಧ್ರವನ್ನು ಮಾಡಲೂ ಸಮರ್ಥವಾಗಲಿಲ್ಲ. ಅನಂತರ ದೇವಪತಿಯಾದ ಇಂದ್ರನೇ ವೃತ್ರಾಸುರನನ್ನು ಸಂಹರಿಸಿದನು. ಬಳಿಕ ಇಂದ್ರನು ಆ ಶಿವಕವಚವನ್ನೂ ತದ್ಬಂಧನಮಹಾಮಂತ್ರವನ್ನೂ ಅಂಗಿರಸನಿಗೆ ಕೊಟ್ಟನು. ಆ ಶಿವಕವಚದ ಮಹಾಮಂತ್ರವನ್ನೇ ಅಂಗಿರಸನು ತನ್ನ ಮಗನಾದ ಮಂತ್ರಜ್ಞನಾದ ಬೃಹಸ್ಪತಿಗೆ ಉಪದೇಶಿಸಿದನು. ಮುಂದೆ ಅದೇ ಮಂತ್ರವನ್ನೇ ಬೃಹಸ್ಪತಿಯು ಧೀಮಂತರಾದ ಅಗ್ನಿವೇಶ್ಯರಿಗೆ ಉಪದೇಶಿಸಿದನು. ಅಗ್ನಿವೇಶ್ಯರು ಆ ಶಿವಕವಚದ ಮಹಾಮಂತ್ರವನ್ನೇ ನನಗೂ ಉಪದೇಶಿಸಿದರು. ಈಗ ನಿನ್ನ ದೇಹದ ರಕ್ಷಣಾರ್ಥವಾಗಿ ಅಗ್ನಿವೇಶ್ಯರು ನನಗೆ ಕೊಟ್ಟಿರುವ ಕವಚವನ್ನು ಅವರು ಉಪದೇಶಿಸಿರುವ ಶಿವಕವಚಮಂತ್ರವನ್ನೇ ಅಭಿಮಂತ್ರಿಸಿ–ನಿನಗೂ ತೊಡಿಸುತ್ತೇನೆ.”

ಮಹಾದ್ಯುತಿಮಂತನಾದ ನಿನ್ನ ಮಗನೊಡನೆ ಆಚಾರ್ಯಪುಂಗವರಾದ ದ್ರೋಣರು ಹೀಗೆ ಹೇಳಿ ಪುನಃ ನಿನ್ನ ಮಗನನ್ನು ಕುರಿತು ಮೆಲ್ಲನೆ ಈ ಮಾತನ್ನು ಹೇಳಿದರು:

“ಹಿರಣ್ಯಗರ್ಭನಾದ ಬ್ರಹ್ಮನು ಹಿಂದೆ ಯುದ್ಧದ ಸಮಯದಲ್ಲಿ ವಿಷ್ಣುವಿಗೆ ಕವಚವನ್ನು ಬಂಧಿಸಿದಂತೆ–ನಾನು ನಿನಗೆ ಈ ಕವಚವನ್ನು ಬ್ರಹ್ಮಸೂತ್ರದಿಂದ ಬಂಧಿಸುತ್ತೇನೆ. ತಾರಕಾಸುರನೊಡನೆ ನಡೆದ ಸಂಗ್ರಾಮ

ಸಮಯದಲ್ಲಿ ಬ್ರಹ್ಮನು ಇಂದ್ರನಿಗೆ ದಿವ್ಯವಾದ ಕವಚವನ್ನು ತೊಡಿಸಿದಂತೆ–ನಾನು ನಿನಗೆ ದಿವ್ಯವಾದ ಶಿವಕವಚವನ್ನು ತೊಡಿಸುತ್ತೇನೆ."

ಮಹಾರಾಜ! ಬ್ರಾಹ್ಮಣೋತ್ತಮರಾದ ದ್ರೋಣರು ಹೀಗೆ ಹೇಳಿ ಯಥಾವಿಧಿಯಾಗಿ ಮಂತ್ರದಿಂದ ಅಭಿಮಂತ್ರಿಸಿ ದುರ್ಯೋಧನನಿಗೆ ಅನಿರ್ಭೇದ್ಯವಾದ ಕವಚವನ್ನು ಕಟ್ಟಿ (ತೊಡಿಸಿ) ಮಹಾಯುದ್ಧಕ್ಕೆ ಕಳುಹಿಸಿ ಕೊಟ್ಟರು.

ಮಹಾತ್ಮರಾದ ಆಚಾರ್ಯರಿಂದ ಮಂತ್ರಪೂತವಾದ ದಿವ್ಯಕವಚವನ್ನು ತೊಡಿಸಿಕೊಂಡನಂತರ ಮಹಾಬಾಹುವಾದ ದುರ್ಯೋಧನನು ಪ್ರಹಾರ ಕುಶಲರಾದ ಒಂದು ಸಾವಿರ ತ್ರಿಗರ್ತರಥಿಕರಿಂದಲೂ, ಮದಿಸಿದ ಮತ್ತು ಬಲಿಷ್ಠವಾಗಿದ್ದ ಒಂದು ಸಾವಿರ ಗಜಸೈನ್ಯದಿಂದಲೂ, ಅಶ್ವಸೈನ್ಯದಿಂದಲೂ, ಇನ್ನೂ ಅನೇಕ ಮಹಾರಥರಿಂದಲೂ ಪರಿವೃತನಾಗಿ ನಾನಾಪ್ರಕಾರವಾದ ರಣವಾದ್ಯಗಳ ಘೋಷಣೆಗಳೊಡನೆ–ಹಿಂದೆ ವೈರೋಚನಿಯು ಇಂದ್ರ ನೊಡನೆ ಯುದ್ಧಮಾಡಲು ಹೋದಂತೆ–ಅರ್ಜುನನೊಡನೆ ಯುದ್ಧ ಮಾಡಲು ಅವನ ರಥದ ಬಳಿಗೆ ತೆರಳಿದನು.

ಆ ಸಮಯದಲ್ಲಿ ಅಗಾಧವಾದ ಸಮುದ್ರದೋಪಾದಿಯಲ್ಲಿದ್ದ ವಿಶಾಲವಾದ ಸೈನ್ಯದೊಡನೆ ಯುದ್ಧಕ್ಕೆ ಹೋಗುತ್ತಿದ್ದ ದುರ್ಯೋಧನನನ್ನು ಕಂಡು ನಿನ್ನ ಸೈನ್ಯದಲ್ಲಿ ದೊಡ್ಡ ಕೋಲಾಹಲವೆದ್ದಿತು."

೯೪ನೆಯ ಅಧ್ಯಾಯವು ಮುಗಿಯಿತು.

೯೫ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣ–ಧೃಷ್ಟದ್ಯುಮ್ನರ ಭಯಂಕರಸಮರ: ಉಭಯಪಕ್ಷಗಳ ಪ್ರಮುಖಯೋಧರ ನಡುವೆ ಭಯಂಕರಯುದ್ಧ

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ಪಾರ್ಥ-ಕೃಷ್ಣರು ವ್ಯೂಹವನ್ನು ಪ್ರವೇಶಿಸಿದರು. ಪುರುಷರ್ಷಭನಾದ ದುರ್ಯೋಧನನು ಅವರನ್ನು ತಡೆದು ನಿಲ್ಲಿಸುವ ಆಶಯದಿಂದ ಅವರ ಹಿಂದೆಯೇ ಹೋದನು. ಪಾಂಡವರು ಸೋಮಕ

ರೊಡನೆ ಗಟ್ಟಿಯಾಗಿ ಗರ್ಜನೆಮಾಡುತ್ತಾ ಅತಿಶೀಘ್ರವಾಗಿ ದ್ರೋಣರನ್ನು ಆಕ್ರಮಿಸಿದರು. ಅನಂತರ ಎರಡು ರಂಗಗಳಲ್ಲಿಯೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಕೌರವರಿಗೂ ಮತ್ತು ಪಾಂಡವರಿಗೂ ಶಕಟವ್ಯೂಹದ ಮುಂಭಾಗದಲ್ಲಿ ಅದ್ಭುತವೂ, ರೋಮಾಂಚಕಾರಕವೂ ಮತ್ತು ಅತಿಭಯಂಕರವೂ ಆದ ಯುದ್ಧವು ನಡೆಯಿತು. ಸೂರ್ಯನು ನೆತ್ತಿಯ ಮೇಲಕ್ಕೆ ಬಂದಿದ್ದನು. ಆ ಮಧ್ಯಾಹ್ನದ ವೇಳೆಯಲ್ಲಿ ಕೌರವ-ಪಾಂಡವರಿಗೆ ನಡೆಯುತ್ತಿದ್ದ ಭಯಂಕರಯುದ್ಧವನ್ನು ನಾವು ಈ ಹಿಂದೆ ಕಂಡೂ ಇರಲಿಲ್ಲ; ಕೇಳಿಯೂ ಇರಲಿಲ್ಲ. ಅತಿಭೀಷಣವಾದ ಯುದ್ಧವು ಆಗ ನಡೆಯುತ್ತಿದ್ದಿತು. ಪ್ರಹಾರಕುಶಲರಾದ ಪಾಂಡವರು ಧೃಷ್ಟದ್ಯುಮ್ನನ ನಾಯಕತ್ವದಲ್ಲಿ ತಮ್ಮ ಸೈನ್ಯಗಳನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿಕೊಂಡು ದ್ರೋಣರ ಸೈನ್ಯಕ್ಕೆ ಅಭಿಮುಖ ವಾಗಿ ನಿಂತು ದ್ರೋಣರ ಆ ಮಹಾಸೈನ್ಯವನ್ನು ಬಾಣಗಳಿಂದ ಮುಚ್ಚಿದರು. ಸರ್ವಶಸ್ತ್ರಧಾರಿಗಳಿಗೂ ಶ್ರೇಷ್ಠರಾದ ದ್ರೋಣರನ್ನು ಮುಂದುಮಾಡಿಕೊಂಡು ನಾವೂ ಸಹ ಧೃಷ್ಟದ್ಯುಮ್ನಸಹಿತರಾದ ಪಾಂಡವರ ಮೇಲೆ ಬಾಣಗಳ ಮಳೆ ಗರೆದೆವು. ರಥಸೈನಿಕರಿಂದ ಭೂಷಿತವಾಗಿದ್ದ ಎರಡೂ ಪಕ್ಷಗಳ ಸುಂದರವಾದ ಸೇನಾಸಮೂಹಗಳು–ಶಿಶಿರರ್ತುವಿನಲ್ಲಿ ಹುಟ್ಟಿದ ವಾಯುಮಿಶ್ರವಾದ ಮಹಾಮೇಘಗಳೋಪಾದಿಯಲ್ಲಿ–ಪ್ರಕಾಶಿಸುತ್ತಿದ್ದುವು. ವರ್ಷರ್ತುವಿನಲ್ಲಿ ಪ್ರವಾಹಪೂರ್ಣವಾದ ಗಂಗಾ-ಯಮುನೆಗಳು ಒಂದನ್ನೊಂದು ಸೇರುವಾಗ ರಭಸದಿಂದ ಮುನ್ನುಗ್ಗುವಂತೆ ಕೌರವ-ಪಾಂಡವಸೈನಿಕರು ಪರಸ್ಪರ ಮಿಳಿತರಾಗಿ, ಒಬ್ಬರು ಮತ್ತೊಬ್ಬರನ್ನು ಜಯಿಸುವ ಆಶಯದಿಂದ ಬಹಳ ವೇಗವಾಗಿ ಮುನ್ನುಗ್ಗತೊಡಗಿದರು. ಆ ಸಮಯದಲ್ಲಿ ಗಜಾಶ್ವ-ರಥ-ಪದಾತಿಗಳಿಂದ ಕೂಡಿದ್ದ ಆ ಕಾಳಗವು ಒಂದು ದೊಡ್ಡ ಮೋಡದಂತೆಯೇ ಭಾಸವಾಗುತ್ತಿದ್ದಿತು. ನಾನಾಶಸ್ತ್ರಗಳ ಪ್ರಹಾರವೆಂಬುದೇ ಸಂಗ್ರಾಮಮೇಘದ ಪೂರ್ವವಾಯುವಾಗಿದ್ದಿತು. (ಗಾಳಿಯು ಮೋಡಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಒಯ್ಯುವಂತೆ ಎಲ್ಲಿ ಶಸ್ತ್ರಾಸ್ತ್ರಗಳ ಪ್ರಹಾರವು ಪ್ರಾರಂಭ ವಾಗುತ್ತದೆಯೋ ಅಲ್ಲಿಯೇ ಯುದ್ಧವು ಪ್ರಾರಂಭವಾಗುತ್ತದೆ. ಆದುದ ರಿಂದ ಯುದ್ಧವೆಂಬ ಮೋಡಕ್ಕೆ ಶಸ್ತ್ರಾಸ್ತ್ರಗಳ ಪ್ರಹಾರವು ಪೂರ್ವವಾಯುವು

ಇದ್ದಂತೆ.) ಭಯಂಕರವಾದ ಗದಾಘಾತವೇ ಮೋಡದೊಳಗಿನ ವಿದ್ಯುತ್ತಿನ ರೂಪದಲ್ಲಿದ್ದಿತು. (ಒಂದು ಗಾಳಿಯು ಮೋಡಗಳನ್ನು ಸೆಳೆದುತಂದರೆ ಮತ್ತೊಂದು ಗಾಳಿಯು ಮಳೆಯನ್ನು ಸುರಿಸುತ್ತದೆ.) ಅದೇ ರೀತಿಯಲ್ಲಿ ಭಾರದ್ವಾಜರೆಂಬ ಗಾಳಿಯಿಂದ ಸಂಗ್ರಾಮಮೇಘವು ಭೇದಿಸಲ್ಪಟ್ಟಿತು. ಕಾಡುಗಿಚ್ಚಿನಂತೆ ಎಲ್ಲ ಕಡೆಗಳಲ್ಲಿಯೂ ಹರಡಿಕೊಳ್ಳುತ್ತಿದ್ದ ಅದ್ಭುತವಾದ ಪಾಂಡವಸೇನೆಯೆಂಬ ಅಗ್ನಿಯನ್ನು ಉಪಶಮನಗೊಳಿಸುವ ಸಲುವಾಗಿ ಕೌರವಮಹಾಸೈನ್ಯವು ನೀರಿನ ರೂಪದಲ್ಲಿ ಸಾವಿರಾರು ಬಾಣಗಳನ್ನು ಸುರಿಸಿತು. ಯಾವ ರೀತಿಯಲ್ಲಿ ಗ್ರೀಷ್ಮರ್ತುವು ಕಳೆದನಂತರ ಹುಟ್ಟುವ ಚಂಡ ಮಾರುತವು ಸಮುದ್ರವನ್ನು ಪ್ರವೇಶಿಸಿ ಸಮುದ್ರವನ್ನೇ ಅಲ್ಲೋಲ-ಕಲ್ಲೋಲ ಗೊಳಿಸುತ್ತದೆಯೋ–ಅದೇ ರೀತಿಯಲ್ಲಿ ದ್ವಿಜೋತ್ತಮರಾದ ದ್ರೋಣರು ಪಾಂಡವರ ಸೈನ್ಯದೊಳಕ್ಕೆ ನುಗ್ಗಿ ಸೈನ್ಯವನ್ನೇ ಅಲ್ಲೋಲ-ಕಲ್ಲೋಲಮಾಡಿ ಬಿಟ್ಟರು. ದೊಡ್ಡ-ದೊಡ್ಡ ನೀರಿನ ಪ್ರವಾಹಗಳು ಸೇತುವೆಯನ್ನು ಭಗ್ನ ಗೊಳಿಸಲು ಇಚ್ಛಿಸುವಂತೆ–ಪಾಂಡವಸೈನಿಕರೂ ಸಹ ಸರ್ವಪ್ರಯತ್ನ ದಿಂದಲೂ ದ್ರೋಣರ ಮೇಲೆಯೇ ಆಕ್ರಮಣವನ್ನು ನಡೆಸುತ್ತಿದ್ದರು. ಪರ್ವತವು ದೊಡ್ಡ-ದೊಡ್ಡ ಜಲಪ್ರವಾಹಗಳನ್ನೂ ತಡೆದು ನಿಲ್ಲಿಸುವಂತೆ–ದ್ರೋಣರು ಕ್ರುದ್ಧರಾಗಿದ್ದ ಪಾಂಡವರನ್ನೂ, ಪಾಂಚಾಲರನ್ನೂ, ಕೇಕಯರನ್ನೂ ಮುಂದಕ್ಕೆ ಹೋಗದಂತೆ ತಡೆದು ನಿಲ್ಲಿಸಿದರು. ಅದೇ ರೀತಿಯಲ್ಲಿ ದುರ್ಯೋಧನನ ಕಡೆಯ ಮಹಾವೀರರಾದ ಶೂರರಾದ ಇತರ ರಾಜರೂ ಸಹ ಎಲ್ಲ ಕಡೆಗಳಿಂದಲೂ ಬಂದು ಒಟ್ಟಾಗಿ ಸೇರಿ ಪಾಂಚಾಲರನ್ನು ತಡೆದರು. ಅನಂತರ ನರವ್ಯಾಘ್ರನಾದ ಧೃಷ್ಟದ್ಯುಮ್ನನು ಪಾಂಡವರ ಸಮೇತನಾಗಿ ಶತ್ರುಗಳ ವ್ಯೂಹವನ್ನು ಭೇದಿಸಬೇಕೆಂಬ ಆಶಯದಿಂದ ದ್ರೋಣರನ್ನು ಅನೇಕ ಬಾರಿ ಬಾಣಗಳಿಂದ ಪ್ರಹರಿಸಿದನು. ಯಾವ ರೀತಿಯಲ್ಲಿ ದ್ರೋಣರು ಪಾರ್ಷತನ ಮೇಲೆ ಬಾಣಗಳ ಮಳೆಗರೆಯುತ್ತಿದ್ದರೋ–ಅದೇ ರೀತಿಯಲ್ಲಿ ಧೃಷ್ಟದ್ಯುಮ್ನನೂ ಸಹ ದ್ರೋಣರ ಮೇಲೆ ಬಾಣಗಳ ಮಳೆಗರೆಯುತ್ತಿದ್ದನು. ಆ ಸಮಯದಲ್ಲಿ ಧೃಷ್ಟದ್ಯುಮ್ನನು ಒಂದು ಮಹಾಮೇಘದಂತೆಯೇ ಕಾಣುತ್ತಿದ್ದನು. ಅವನ ಕತ್ತಿಯು ಪೂರ್ವವಾಯುವಿನಂತಿದ್ದಿತು. ಅವನು ಶಕ್ತ್ಯಾಯುಧ, ಪ್ರಾಸ, ಋಷ್ಟಿ–ಮುಂತಾದ ಆಯುಧಗಳಿಂದ ಸಂಪನ್ನನಾಗಿದ್ದನು. ಅವನ ಮೌರ್ವಿಯೇ ವಿದ್ಯುತ್ತಾಗಿದ್ದಿತು. ಧನುಸ್ಸಿನ

ಟೇಂಕಾರವು ವಿದ್ಯುತ್ತಿನೊಂದಿಗೆ ಮೇಘದಿಂದ ಬರುವ ಗುಡುಗಿನ ಶಬ್ದ ವಾಗಿದ್ದಿತು. ಧೃಷ್ಟದ್ಯುಮ್ನನೆಂಬ ಮೇಘವು ಕ್ಷೇತ್ರರೂಪವಾದ ಶ್ರೇಷ್ಠರಥ ಗಳನ್ನೂ, ಕುದುರೆಗಳ ಸಮೂಹವನ್ನೂ ಧ್ವಂಸಮಾಡುತ್ತಾ, ಬಾಣಗಳ ರೂಪವಾದ ಜಲಧಾರೆಗಳಿಂದಲೂ ಅಸ್ತ್ರಗಳ ರೂಪವಾದ ಕಲ್ಲುಮಳೆ ಯಿಂದಲೂ ಕೌರವರ ಸೈನ್ಯವನ್ನು ಮುಳುಗಿಸಿಬಿಟ್ಟಿತು. ದ್ರೋಣರು ಪಾಂಡ ವರ ಪಕ್ಷದಲ್ಲಿದ್ದ ಇತರ ರಥಿಕರ ಮೇಲೂ ನಿಶಿತವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದರು. ಧೃಷ್ಟದ್ಯುಮ್ನನು ಅಲ್ಲಿಗೂ ಹೋಗಿ ದ್ರೋಣರಿಗೆ ಎದುರಾಗಿ ತಾನೇ ನಿಂತು ಅವರನ್ನು ತನ್ನ ಕಡೆಗೇ ಯುದ್ಧಮಾಡಲು ಆಕರ್ಷಿಸು ತ್ತಿದ್ದನು. ತನ್ನೊಬ್ಬನ ಹೊರತಾಗಿ ಬೇರೆಯ ರಥಿಗಳೊಡನೆ ಯುದ್ಧಮಾಡಲು ಧೃಷ್ಟದ್ಯುಮ್ನನು ದ್ರೋಣರಿಗೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಈ ರೀತಿಯಲ್ಲಿ ದುರ್ಯೋಧನನಿಗೆ ವಿಜಯವನ್ನು ಗಳಿಸಿಕೊಡಲು ಸತತವಾಗಿ ಪ್ರಯತ್ನಿಸು ತ್ತಿದ್ದ ದ್ರೋಣರ ಸೈನ್ಯವು ಧೃಷ್ಟದ್ಯುಮ್ನನನ್ನು ಎದುರಿಸಲು ಬಂದ ಅನಂತರ ಮೂರು ಭಾಗಗಳಾಗಿ ಒಡೆದುಹೋಯಿತು. ಪಾಂಡವರಿಂದ ಸತತವಾಗಿ ಹತರಾಗುತ್ತಿದ್ದ ಕೌರವಸೈನಿಕರಲ್ಲಿ ಕೆಲವರು ಕೃತವರ್ಮನ ಆಶ್ರಯವನ್ನು ಪಡೆಯಲು ಹೋದರು; ಕೆಲವರು ಜಲಸಂಧನನ್ನು ಆಶ್ರಯಿಸಿದರು; ಉಳಿದವರು ದ್ರೋಣರ ಹಿಂದೆಯೇ ಉಳಿದರು. ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರು ತಮ್ಮ ಸೈನ್ಯವನ್ನು ಪದೇ-ಪದೇ ಸಂಘಟಿಸುತ್ತಲೇ ಇದ್ದರು. ಮಹಾರಥನಾದ ಧೃಷ್ಟದ್ಯುಮ್ನನು ದ್ರೋಣರ ಸಂಘಟಿತವಾದ ಸೈನ್ಯವನ್ನು ಧ್ವಂಸಮಾಡುತ್ತಲೇ ಇದ್ದನು. ಅರಣ್ಯದಲ್ಲಿ ರಕ್ಷಕರಿಲ್ಲದ ಹಸುಗಳು ಅನೇಕ ಹಿಂಸ್ರಮೃಗಗಳಿಂದ ವಧಿಸಲ್ಪಡುವಂತೆ–ಕೌರವಸೈನಿಕರು ಪಾಂಡವ-ಸೃಂಜಯ ಯೋಧರಿಂದ ಸತತವಾಗಿ ಹತರಾಗುತ್ತಿದ್ದರು.

ಕಾಲಪುರುಷನೇ ಧೃಷ್ಟದ್ಯುಮ್ನನ ಮೂಲಕವಾಗಿ ಕೌರವಸೈನ್ಯವನ್ನು ವಿಮೋಹಗೊಳಿಸಿ ಸೈನಿಕರ ಪ್ರಾಣಗಳನ್ನು ಹೀರುತ್ತಿದ್ದಾನೆಂದು ಆ ಭಯಂಕರ ಸಂಗ್ರಾಮವನ್ನು ನೋಡುತ್ತಿದ್ದ ಜನರು ಭಾವಿಸಿದರು. ದುಷ್ಟರಾಜನ ರಾಜ್ಯವು ಯಾವ ರೀತಿಯಲ್ಲಿ ದುರ್ಭಿಕ್ಷ, ವ್ಯಾಧಿ ಮತ್ತು ಚೋರರ ಆಕ್ರಮಣದಿಂದ ಹಾಳುಬಿದ್ದುಹೋಗುತ್ತದೆಯೋ ಅದೇ ರೀತಿಯಲ್ಲಿ ಪಾಂಡವರ ಸೈನ್ಯಗಳ ಮೂಲಕವಾಗಿ ವಿಪತ್ತಿಗೊಳಗಾದ ನಿನ್ನ ಸೈನ್ಯವು ದಿಕ್ಕಾಪಾಲಾಯಿತು.

ಮಧ್ಯಾಹ್ನಕಾಲದ ಸೂರ್ಯನ ಚಂಡರಶ್ಮಿಗಳು ಯೋಧರ ಕವಚಗಳ ಮೇಲೂ ಮತ್ತು ಆಯುಧಗಳ ಮೇಲೂ ಬಿದ್ದಿದ್ದು, ಸೂರ್ಯನ ಕಿರಣಗಳಿಂದ ಮಿಶ್ರಿತವಾದ ಕವಚಗಳ ಮತ್ತು ಆಯುಧಗಳ ಪ್ರಕಾಶವು ಯೋಧರ ಕಣ್ಣುಗಳನ್ನು ಕೋರೈಸುತ್ತಿದ್ದಿತು. ಅಂತೆಯೇ ಸೈನಿಕರ ಪದಸಂಘಟ್ಟನೆಗಳಿಂದ ಉದ್ಧೂತವಾದ ಧೂಳೂ ಸಹ ಯೋಧರ ಕಣ್ಣುಗಳಲ್ಲಿ ತುಂಬಿಕೊಂಡು ಬಹಳ ಯಾತನೆಯನ್ನುಂಟುಮಾಡುತ್ತಿದ್ದಿತು. (ಆ ಸಮಯದಲ್ಲಿ ಉಭಯ ಪಕ್ಷಗಳ ಯೋಧರಿಗೂ ಕಣ್ಣುಗಳನ್ನು ಬಿಡಲು ಸಾಧ್ಯವಾಗುತ್ತಿರಲಿಲ್ಲ.) ಕೌರವರ ಸೈನ್ಯವು ಮೇಲೆ ಹೇಳಿದಂತೆ ಮೂರು ಭಾಗವಾದನಂತರವೂ ಪಾಂಡವರಿಂದ ವಧ್ಯವಾಗುತ್ತಿದ್ದುದನ್ನು ಕಂಡು ಕ್ರುದ್ಧರಾದ ದ್ರೋಣರು ಪಾಂಚಾಲರನ್ನು ನಿಶಿತವಾದ ಬಾಣಗಳಿಂದ ಸಂಹರಿಸಲು ಉಪಕ್ರಮಿಸಿದರು. ಸ್ವಲ್ಪ ಹೊತ್ತಿನಲ್ಲಿಯೇ ಪಾಂಚಾಲಸೈನಿಕರು ಧೂಳೀಪಟಲರಾದರು. ಬಾಣ ಗಳಿಂದ ಸತತವಾಗಿ ಪಾಂಚಾಲಸೈನಿಕರನ್ನು ಧ್ವಂಸಮಾಡುತ್ತಿದ್ದ ದ್ರೋಣರ ರೂಪವು–ಪ್ರದೀಪ್ತವಾದ ಪ್ರಳಯಕಾಲದ ಅಗ್ನಿಯಂತೆಯೇ–ಭಯಂಕರ ವಾಗಿ ಕಾಣುತ್ತಿದ್ದಿತು. ರಥವನ್ನಾಗಲೀ, ಆನೆಯನ್ನಾಗಲೀ, ಕುದುರೆ ಯನ್ನಾಗಲೀ, ಪದಾತಿಯನ್ನಾಗಲೀ–ಒಂದೊಂದೇ ಬಾಣದಿಂದ ಮಹಾರಥ ರಾದ ದ್ರೋಣರು ಸಂಹರಿಸುತ್ತಿದ್ದರು. ಆ ಸಮಯದಲ್ಲಿ ದ್ರೋಣರ ಧನುಸ್ಸಿ ನಿಂದ ಚ್ಯುತವಾಗುತ್ತಿದ್ದ ಉಗ್ರರೂಪದ ಬಾಣಗಳನ್ನು ಸಹಿಸಿಕೊಳ್ಳಲು ಸಮರ್ಥನಾದ ಒಬ್ಬ ಯೋಧನೂ ಪಾಂಡವರ ಸೈನ್ಯದಲ್ಲಿರಲಿಲ್ಲ. ಸೂರ್ಯನ ಚಂಡರಶ್ಮಿಗಳಿಂದ ಪ್ರಪಂಚದ ಎಲ್ಲ ಪ್ರಾಣಿಗಳೂ ಪರಿತಾಪಗೊಳ್ಳುವಂತೆ ದ್ರೋಣರ ಬಾಣಗಳಿಂದ ಪರಿತಾಪಗೊಂಡ ಪಾರ್ಷತನ ಸೈನ್ಯವೂ ದಿಕ್ಕುಕಾಣದೇ ಎಲ್ಲಿಗೆಂದರಲ್ಲಿಗೆ ಓಡಿಹೋಗುತ್ತಿದ್ದಿತು. ಅದೇ ರೀತಿಯಲ್ಲಿ ಧೃಷ್ಟದ್ಯುಮ್ನನಿಂದಲೂ ಅಲ್ಲೋಲ-ಕಲ್ಲೋಲ ಮಾಡಲ್ಪಡುತ್ತಿದ್ದ ನಿನ್ನ ಸೈನ್ಯವೂ-ಶುಷ್ಕವಾದ ಅರಣ್ಯವು ದಾವಾಗ್ನಿಯಿಂದ ದಹಿಸಲ್ಪಡುವಂತೆ–ಅಗ್ನಿಗೆಸಮಾನವಾದ ಪಾರ್ಷತನ ಬಾಣಗಳಿಂದ ದಹಿಸಲ್ಪಡುತ್ತಿದ್ದಿತು. ಹೀಗೆ ದ್ರೋಣ-ಧೃಷ್ಟದ್ಯುಮ್ನರಿಂದ ಪಾಂಡವ-ಕೌರವಸೈನ್ಯಗಳು ಪೀಡಿಸಲ್ಪಡುತ್ತಿರಲು ಎಲ್ಲ ಯೋಧರೂ ಪ್ರಾಣಗಳ ಹಂಗನ್ನೇ ತೊರೆದು ಶಕ್ತಿಮೀರಿ ಯುದ್ಧಮಾಡುತ್ತಿದ್ದರು. ಭಯಂಕರ ವಾದ ಯುದ್ಧದಲ್ಲಿ ತೊಡಗಿದ್ದ ನಿನ್ನ ಮತ್ತು ಪಾಂಡವರ ಕಡೆಯ ಯೋಧರಲ್ಲಿ ಯಾವನೊಬ್ಬನೂ ಭಯದಿಂದ ಯುದ್ಧ ಭೂಮಿಯನ್ನು ಬಿಟ್ಟು ಹೋಗಲಿಲ್ಲ. ಕುಂತಿಯ ಮಗನಾದ ಭೀಮಸೇನನನ್ನು

ಮಹಾರಥರಾದ ವಿವಿಂಶತಿ, ಚಿತ್ರಸೇನ, ವಿಕರ್ಣ–ಈ ಮೂವರು ಸಹೋದರರೂ ಸುತ್ತುವರಿದರು. ಆ ನಿನ್ನ ಮೂವರು ಮಕ್ಕಳನ್ನೂ ವಿಂದ-ಅನುವಿಂದ ಮತ್ತು ವೀರ್ಯವಂತನಾದ ಕ್ಷೇಮಧೂರ್ತಿ–ಈ ಮೂವರೂ ಅನುಸರಿಸಿ ಹೋದರು. ಮಹಾತೇಜಸ್ವಿ ಯಾದ, ಸತ್ಕುಲಪ್ರಸೂತನಾದ, ಮಹಾರಥನಾದ ಬಾಹ್ಲೀಕನು ದೊಡ್ಡದಾದ ಸೇನೆಯೊಡನೆಯೂ ಮಂತ್ರಿಗಳೊಡನೆಯೂ ದ್ರೌಪದಿಯ ಐವರು ಮಕ್ಕಳನ್ನು ಎದುರಿಸಿದನು. ಶಿಬಿಯ ಮಗನಾದ ಗೋವಾಸನರಾಜನು ಒಂದು ಸಾವಿರ ಯೋಧರೊಡನೆ ಕಾಶೀರಾಜನಾದ ಅಭಿಭೂವಿನ ಮಹಾಪರಾಕ್ರಮಿಯಾದ ಮಗನನ್ನು ಎದುರಿಸಿದನು. ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಮಹಾ ತೇಜಸ್ವಿಯಾಗಿದ್ದ, ಕುಂತಿಯ ಮಗನಾದ ಅಜಾತಶತ್ರುಮಹಾರಾಜನನ್ನು ಮದ್ರೇಶ್ವರನಾದ ಶಲ್ಯರಾಜನು ಎದುರಿಸಿದನು. ಮಹಾಕೋಪಿಷ್ಠನಾದ, ಮಹಾಶೂರನಾದ ದುಃಶಾಸನನು ತನ್ನ ಭಾಗದ ಸೈನ್ಯವನ್ನು ವ್ಯವಸ್ಥಿ ಗೊಳಿಸಿಕೊಂಡು ರಥಿಶ್ರೇಷ್ಠನಾದ ಸಾತ್ಯಕಿಯನ್ನು ಎದುರಿಸಿದನು. ನಾನೂ ಸಹ ಯುದ್ಧಸನ್ನದ್ಧನಾಗಿ ಕವಚವನ್ನು ತೊಟ್ಟುಕೊಂಡು ನನ್ನ ಸೈನ್ಯದೊಡನೆ ಮತ್ತು ನಾಲ್ಕು ನೂರು ಮಹಾಧನುಷ್ಮಂತರಾದ ಯೋಧರೊಡನೆ ಚೇಕಿತಾನನನ್ನು ಎದುರಿಸಿದೆನು. ಶಕುನಿಯು ಸೈನ್ಯಸಮೇತನಾಗಿ ಮಾದ್ರಿಯ ಮಗನಾದ ನಕುಲನನ್ನು ಎದುರಿಸಿದನು. ಏಳು ನೂರು ಮಂದಿ ಗಾಂಧಾರಯೋಧರು ಧನುಸ್ಸು, ಶಕ್ತ್ಯಾಯುಧ, ಕತ್ತಿ–ಇವೇ ಮುಂತಾದ ಆಯುಧಗಳನ್ನು ಹಿಡಿದು ಶಕುನಿಯನ್ನು ಅನುಸರಿಸಿ ಹೋದರು. ತಮ್ಮ ಮಿತ್ರನಾದ ದುರ್ಯೋಧನನ ಸಲುವಾಗಿ ಆಯುಧಗಳನ್ನು ಎತ್ತಿದ್ದ, ಮಹಾಧನುಷ್ಮಂತರಾದ, ಅವಂತೀ ದೇಶದ ರಾಜಕುಮಾರರಾದ ವಿಂದ ಮತ್ತು ಅನುವಿಂದರು ತಮ್ಮ ಪ್ರಾಣ ಗಳನ್ನೇ ಒತ್ತೆಯಾಗಿಟ್ಟು ಮತ್ಸ್ಯರಾಜನಾದ ವಿರಾಟನೊಡನೆ ಯುದ್ಧದಲ್ಲಿ ತೊಡಗಿದರು. ಯುದ್ಧದಲ್ಲಿ ಅಪರಾಜಿತನಾದ, ಮಹಾಪರಾಕ್ರಮಿಯಾದ, ಮಾರ್ಗವನ್ನೇ ನಿರೋಧಿಸಿ ನಿಂತಿದ್ದ, ಯಜ್ಞಸೇನನ ಮಗನಾದ ಶಿಖಂಡಿಯನ್ನು ಬಾಹ್ಲೀಕನು ಪ್ರಯತ್ನಪೂರ್ವಕವಾಗಿ ಎದುರಿಸಿದನು. ಅವಂತೀದೇಶದ ಮತ್ತೊಬ್ಬ ರಾಜನು ಕ್ರೂರಕರ್ಮಿಗಳಾದ ಪ್ರಭದ್ರಕರಿಂದಲೂ, ಸೌವೀರ ರಿಂದಲೂ ಕೂಡಿದವನಾಗಿ ಪಾಂಚಾಲರಾಜಕುಮಾರನಾದ, ಕ್ರುದ್ಧನಾದ ಧೃಷ್ಟದ್ಯುಮ್ನನನ್ನು ಎದುರಿಸಿದನು. ಕ್ರೂರಕರ್ಮಿಯಾದ, ಕ್ರುದ್ಧನಾಗಿದ್ದ, ಯುದ್ಧಮಾಡಲು ಬರುತ್ತಿದ್ದ ಘಟೋತ್ಕಚರಾಕ್ಷಸನನ್ನು ಅಲಾಯುಧನು

ಶೀಘ್ರವಾಗಿ ಆಕ್ರಮಿಸಿದನು. ರಾಕ್ಷಸೇಂದ್ರನಾದ ಕ್ರುದ್ಧನಾಗಿದ್ದ ಅಲಂಬುಷನನ್ನು ಮಹಾರಥನಾದ ಕುಂತಿಭೋಜನು ದೊಡ್ಡದಾದ ಸೈನ್ಯದೊಡನೆ ಆಕ್ರಮಿಸಿದನು. ಸೈಂಧವನು ಕೃಪಪ್ರಭೃತಿಗಳಾದ ಮಹಾರಥರಿಂದಲೂ ಮಹಾಧನುಷ್ಮಂತರಿಂದಲೂ ರಕ್ಷಿಸಲ್ಪಡುತ್ತಿದ್ದು ಎಲ್ಲ ಸೈನ್ಯಗಳ ಹಿಂಭಾಗದಲ್ಲಿದ್ದನು. ಇಬ್ಬರು ಮಹಾವೀರರು ಜಯದ್ರಥನ ಚಕ್ರರಕ್ಷಕರಾಗಿದ್ದರು. ದ್ರೋಣರ ಮಗನಾದ ಅಶ್ವತ್ಥಾಮನು ಬಲಭಾಗದ ಚಕ್ರವನ್ನೂ ಸೂತಪುತ್ರನಾದ ಕರ್ಣನು ಎಡಭಾಗದ ಚಕ್ರವನ್ನೂ ರಕ್ಷಿಸುತ್ತಿದ್ದರು. ಭೂರಿಶ್ರವನೇ ಮೊದಲಾದ ವೀರರು ಜಯದ್ರಥನ ಹಿಂಭಾಗದಲ್ಲಿದ್ದು ಅವನನ್ನು ರಕ್ಷಿಸುತ್ತಿದ್ದರು. ದುರ್ಯೋಧನನ ಹಿತದಲ್ಲಿಯೇ ನಿರತರಾಗಿದ್ದ ಕೃಪ, ವೃಷಸೇನ, ಶಲ ಮತ್ತು ದುರ್ಜಯನಾದ ಶಲ್ಯ–ಇವರೆಲ್ಲರೂ ನೀತಿಮಂತರಾಗಿಯೂ, ಮಹಾಧನುಷ್ಮಂತರಾಗಿಯೂ, ಯುದ್ಧವಿಶಾರದರಾಗಿಯೂ ಇದ್ದರು. ಸೈಂಧವನ ರಕ್ಷಣೆಗೆ ಈ ವಿಧವಾದ ವ್ಯವಸ್ಥೆಯನ್ನು ಮಾಡಿ ಅನಂತರ ಕೌರವರೆಲ್ಲರೂ ಪಾಂಡವರೊಡನೆ ಯುದ್ಧದಲ್ಲಿ ತೊಡಗಿದರು."

೯೫ನೆಯ ಅಧ್ಯಾಯವು ಮುಗಿಯಿತು.

೯೬ನೆಯ ಅಧ್ಯಾಯ — ಜಯದ್ರಥವಧಪರ್ವ (ಮುಂದುವರಿದಿದೆ.)

## ಎರಡೂ ಪಕ್ಷಗಳ ಪ್ರಧಾನವೀರರ ದ್ವಂದ್ವಯುದ್ಧ

ಸಂಜಯನು ಯುದ್ಧದ ವರ್ಣನೆಯನ್ನು ಮುಂದುವರಿಸುತ್ತಾನೆ:

"ಮಹಾರಾಜ! ಕೌರವರಿಗೂ-ಪಾಂಡವರಿಗೂ ಯಾವ ರೀತಿಯಲ್ಲಿ ಯುದ್ಧವು ನಡೆಯಿತೆಂಬುದನ್ನೂ-ಆಶ್ಚರ್ಯಕರವಾದ ಕೆಲವು ಘಟನೆಗಳನ್ನೂ ವಿವರಿಸಿ ಹೇಳುತ್ತೇನೆ; ಲಾಲಿಸು. ದ್ರೋಣರ ಸೇನೆಯನ್ನು ಭಗ್ನಗೊಳಿಸುವ ಇಚ್ಛೆಯಿಂದ ಪಾರ್ಥರು ಶಕಟವ್ಯೂಹದ ಮುಂಭಾಗದಲ್ಲಿ ನಿಂತಿದ್ದ ದ್ರೋಣರೊಡನೆ ಯುದ್ಧದಲ್ಲಿ ತೊಡಗಿದರು. ಯುದ್ಧದಲ್ಲಿ ಮಹಾಯಶಸ್ಸನ್ನು ಗಳಿಸಬೇಕೆಂಬ ಆಶಯದಿಂದ ದ್ರೋಣರು ತಮ್ಮ ಸೈನ್ಯವನ್ನೂ ರಕ್ಷಿಸುತ್ತಾ ಪಾರ್ಥರೊಡನೆಯೂ ವೇಗಪೂರ್ವಕವಾಗಿ ಯುದ್ಧಮಾಡುತ್ತಿದ್ದರು. ನಿನ್ನ ಮಕ್ಕಳ ಹಿತೈಷಿಗಳಾಗಿದ್ದ, ಪರಮಕ್ರುದ್ಧರಾಗಿದ್ದ ವಿಂದಾನುವಿಂದರು ಮತ್ಸ್ಯರಾಜನಾದ ವಿರಾಟನನ್ನು ಹತ್ತು ಬಾಣಗಳಿಂದ ಪ್ರಹರಿಸಿದರು. ಅತ್ಯಂತಪರಾಕ್ರಮದಿಂದ ಹೋರಾಡುತ್ತಿದ್ದ, ಅನುಚರಸಹಿತರಾಗಿದ್ದ,

ಯುದ್ಧದಲ್ಲಿ ತನ್ನೆದುರಾಗಿ ನಿಂತಿದ್ದ ವಿಂದಾನುವಿಂದರನ್ನು ವಿರಾಟನು ಅತ್ಯಂತಪರಾಕ್ರಮದಿಂದಲೇ ಎದುರಿಸಿ ಯುದ್ಧಮಾಡುತ್ತಿದ್ದನು. ಅರಣ್ಯದಲ್ಲಿ ಒಂದು ಸಿಂಹಕ್ಕೂ ಮತ್ತು ಮದೋದಕವನ್ನು ಸುರಿಸುತ್ತಿರುವ ಎರಡು ಸಲಗಗಳಿಗೂ ಕಾಳಗವು ನಡೆಯುವಂತೆ–ವಿರಾಟ ಮತ್ತು ವಿಂದಾನುವಿಂದರ ಯುದ್ಧವು ಮಹಾಭಯಂಕರವೂ ರಕ್ತದ ಕೋಡಿಯನ್ನೇ ನೀರಿನ ರೂಪದಲ್ಲಿ ಹರಿಸುವುದೂ ಆಗಿದ್ದಿತು. ಮಹಾಬಲನಾದ ಶಿಖಂಡಿಯು ವೇಗಯುಕ್ತ ನಾಗಿದ್ದ ಬಾಹ್ಲೀಕನನ್ನು ತೀಕ್ಷ್ಣವಾದ, ಘೋರವಾದ, ಮರ್ಮಸ್ಥಳಗಳನ್ನೂ ಮತ್ತು ಮೂಳೆಗಳನ್ನೂ ಭೇದಿಸುವ ಬಾಣಗಳಿಂದ ಗಾಯಗೊಳಿಸಿದನು. ಅದಕ್ಕೆ ಪ್ರತಿಯಾಗಿ ಪರಮಕ್ರುದ್ಧನಾದ ಬಾಹ್ಲೀಕನು ಯಾಜ್ಞಸೇನಿಯನ್ನು ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ, ಮಸೆಗಲ್ಲಿನಿಂದ ಚೂಪಾಗಿ ಮಾಡಲ್ಪಟ್ಟಿದ್ದ, ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಬಾಹ್ಲೀಕ-ಶಿಖಂಡಿಗಳ ಯುದ್ಧವು ಬಾಣಗಳ ಮತ್ತು ಶಕ್ತ್ಯಾಯುಧಗಳ ಪರಸ್ಪರಸಂಘರ್ಷಣೆಯಿಂದ ಕೂಡಿದ್ದು ಬಹಳ ಭಯಂಕರವಾಗಿ ಕಾಣುತ್ತಿ ದ್ದಿತು ಮತ್ತು ಅವರ ಯುದ್ಧವು ಭೀರುಗಳಾದವರಿಗೆ ಮತ್ತಷ್ಟು ಭಯವನ್ನುಂಟು ಮಾಡತಕ್ಕುದ್ದೂ, ಶೂರರಿಗೆ ಸಂತೋಷದಾಯಕವೂ ಆಗಿದ್ದಿತು. ಅವರಿಬ್ಬರೂ ಬಿಡುತ್ತಿದ್ದ ಬಾಣಗಳಿಂದ ಅಂತರಿಕ್ಷ ಮತ್ತು ದಿಕ್ಕುಗಳೂ ಮುಚ್ಚಿ ಹೋದುವು. ಎಲ್ಲಿ ಏನಾಗುತ್ತಿದೆ–ಎಂಬುದಾವುದೂ ತಿಳಿಯುತ್ತಲೇ ಇರಲಿಲ್ಲ.

ಶಿಬಿಯ ಮಗನಾದ ಗೋವಾಸನನು ಸೈನ್ಯಸಮೇತನಾಗಿ ಮಹಾರಥ ನಾದ ಕಾಶೀರಾಜನ ಪುತ್ರನೊಡನೆ–ಮದಿಸಿದ ಆನೆಯು ಮತ್ತೊಂದು ಮದಿಸಿದ ಆನೆಯೊಡನೆ ಸೆಣೆಸಾಡುವಂತೆ–ಅತ್ಯಂತಪರಾಕ್ರಮದಿಂದ ಯುದ್ಧ ಮಾಡುತ್ತಿದ್ದನು.

ಮನಸ್ಸು ಪಂಚೇಂದ್ರಿಯಗಳನ್ನು ಹತೋಟಿಗೆ ತೆಗೆದುಕೊಳ್ಳಲು ಸದಾ ಕಾಲದಲ್ಲಿಯೂ ಅವುಗಳೊಡನೆ ಸೆಣೆಸಾಡುವಂತೆ–ಕ್ರುದ್ಧನಾದ ಬಾಹ್ಲೀಕ ರಾಜನು ಐವರು ದ್ರೌಪದೇಯಮಹಾರಥರೊಡನೆ ಕಾಳಗವಾಡುತ್ತಾ ಬಹಳ ವಾಗಿ ಶೋಭಿಸಿದನು. ಶರೀರಧಾರಿಗಳಾದ ಮನುಷ್ಯರಲ್ಲಿ ಶ್ರೇಷ್ಠನಾದವನೇ! ಮಹಾರಾಜ! ಇಂದ್ರಿಯಾರ್ಥಗಳು (ಇಂದ್ರಿಯಗಳಿಗೆ ಆಕರ್ಷಕವಾದ ಪದಾರ್ಥಗಳು) ಯಾವ ರೀತಿಯಲ್ಲಿ ದೇಹವನ್ನು (ಮನಸ್ಸನ್ನು) ಕಲಕು

ತ್ತಿರುತ್ತವೆಯೋ–ಅದೇ ರೀತಿಯಲ್ಲಿ ಐವರು ದ್ರೌಪದಿಯ ಮಕ್ಕಳೂ ಸುತ್ತಲೂ ನಿಂತು ಬಾಹ್ಲೀಕನನ್ನು ಬಾಣಗಳ ಸಮೂಹದಿಂದ ಪ್ರಹರಿಸುತ್ತಿದ್ದರು.

ನಿನ್ನ ಮಗನಾದ ದುಃಶಾಸನನು ವೃಷ್ಣಿಕುಲಸಂಭೂತನಾದ ಸಾತ್ಯಕಿಯನ್ನು ತೀಕ್ಷ್ಣವಾದ, ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಬಲಿಷ್ಠನಾದ, ಮಹಾಧನುಷ್ಮಂತನಾದ ದುಃಶಾಸನನು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡ ಸತ್ಯವಿಕ್ರಮನಾದ ಸಾತ್ಯಕಿಯು ಕ್ಷಣಕಾಲ ಮೂರ್ಛಿತನಾಗಿದ್ದನು. ಸ್ವಲ್ಪ ಶೈತ್ಯೋಪಚಾರವಾದ ನಂತರ ಎಚ್ಚರಗೊಂಡ ಸಾತ್ಯಕಿಯು ಮಹಾರಥನಾದ ನಿನ್ನ ಮಗನನ್ನು ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ಹತ್ತು ಬಾಣಗಳಿಂದ ಶೀಘ್ರವಾಗಿ ಪ್ರಹರಿಸಿದನು. ಸಾತ್ಯಕಿ-ದುಃಶಾಸನರು ಒಬ್ಬರನ್ನು ಮತ್ತೊಬ್ಬರು ಬಲವಾಗಿ ಪ್ರಹರಿಸುತ್ತಿದ್ದರು. ಇಬ್ಬರೂ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡರು. ರಕ್ತದಿಂದ ತೋಯ್ದುಹೋಗಿದ್ದರು. ಆ ಸಮಯದಲ್ಲಿ ಅವರಿಬ್ಬರೂ–ಹೂಗಳಿಂದ ಸಮೃದ್ಧವಾಗಿದ್ದ ಎರಡು ಮುತ್ತುಗದ ಮರಗಳಂತೆಯೇ–ಕಾಣುತ್ತಿದ್ದರು.

ಕುಂತಿಭೋಜನ ಬಾಣಗಳಿಂದ ಪ್ರಹೃತನಾಗಿದ್ದ ಕ್ರುದ್ಧನಾದ ಅಲಂಬುಷನು–ಹೂಗಳಿಂದ ಯುಕ್ತವಾದ ಮುತ್ತುಗದ ಮರದ ಕಾಂತಿಯಿಂದ ಪ್ರಕಾಶಿಸಿದನು. ಅನಂತರ ರಾಕ್ಷಸನು ಕುಂತಿಭೋಜನನ್ನು ಲೋಹಮಯ ಬಾಣಗಳಿಂದ ಪ್ರಹರಿಸಿ ನಿನ್ನ ವ್ಯೂಹದ ಮುಂಭಾಗದಲ್ಲಿ ಭಯಂಕರವಾಗಿ ಗರ್ಜಿಸಿದನು.

ಮಹಾರಾಜ! ಹಿಂದೆ ಇಂದ್ರ ಮತ್ತು ಜಂಭಾಸುರರು ಯುದ್ಧಮಾಡಿದಂತೆ–ಶೂರರಾದ ಕುಂತಿಭೋಜ-ಅಲಂಬುಷರು ಪರಸ್ಪರವಾಗಿ ಯುದ್ಧ ಮಾಡುತ್ತಿರುವುದನ್ನು ಎರಡೂ ಪಕ್ಷಗಳ ಸೈನಿಕರೂ ನೋಡಿದರು. ಪರಮ ಕ್ರುದ್ಧರಾಗಿದ್ದ ನಕುಲ-ಸಹದೇವರು ತಮ್ಮೊಡನೆ ಹಗೆತನವನ್ನು ಬೆಳೆಸಿದ್ದ, ರಭಸದಿಂದ ಯುದ್ಧಮಾಡುತ್ತಿದ್ದ ಶಕುನಿಯನ್ನು ಬಾಣಗಳಿಂದ ಬಹಳವಾಗಿ ಪೀಡಿಸಿದರು. ಭಯಂಕರವಾದ ಮತ್ತು ಜನಕ್ಷಯಕರವಾದ ಯುದ್ಧವು ಈ ರೀತಿಯಲ್ಲಿ ರಣಾಂಗಣದ ಎಲ್ಲ ಕಡೆಗಳಲ್ಲಿಯೂ ನಡೆಯುತ್ತಿದ್ದಿತು. ವಿಶೇಷವಾಗಿ ನಿನ್ನಿಂದ ಹುಟ್ಟುಹಾಕಲ್ಪಟ್ಟು, ಕರ್ಣನಿಂದ ವೃದ್ಧಿಹೊಂದಿದ, ಕ್ರೋಧಮೂಲವಾದ ವೈರಾಗ್ನಿಯನ್ನು ನಿನ್ನ ಮಕ್ಕಳು ಬಹಳ ದಿವಸಗಳಿಂದಲೂ

ರಕ್ಷಿಸುತ್ತಾ ಬಂದಿದ್ದರು. ಆ ವೈರಾಗ್ನಿಯೇ ಇಂದು ಈ ಸಮಗ್ರ ಭೂಮಿಯನ್ನೇ ದಹಿಸಲು ಪ್ರಾರಂಭಿಸಿದೆ. ಮಾದ್ರಿಯ ಮಕ್ಕಳಾದ ನಕುಲ-ಸಹದೇವರೊಡನೆ ಯುದ್ಧಮಾಡುತ್ತಿದ್ದ ಶಕುನಿಯು, ಅವರು ಬಿಡುತ್ತಿದ್ದ ಬಾಣಗಳಿಂದ ಗಾಯಗೊಂಡು ಅವರ ಎದುರಿನಲ್ಲಿ ನಿಲ್ಲಲಾರದೇ ವಿಮುಖನಾದನು. ಆ ಸಮಯದಲ್ಲಿ ಶಕುನಿಯು ಯುದ್ಧಸಮಯದಲ್ಲಿ ತನ್ನ ಕರ್ತವ್ಯವೇನೆಂಬುದನ್ನೇ ತಿಳಿದವನಾಗಿರಲಿಲ್ಲ ಮತ್ತು ಅವನು ಯಾವ ಪರಾಕ್ರಮವನ್ನೂ ತೋರಿಸಲಿಲ್ಲ. ಮಹಾರಥರಾದ ನಕುಲ-ಸಹದೇವರು ಶಕುನಿಯು ಯುದ್ಧದಿಂದ ಹಿಂದಿರುಗುತ್ತಿರುವುದನ್ನು ಕಂಡು ಪುನಃ ಎರಡು ಮೇಘಗಳು ಪರ್ವತವನ್ನು ಜಲಧಾರೆಯಿಂದ ಮುಚ್ಚಿಬಿಡುವಂತೆ ಶಕುನಿ ಯನ್ನು ಬಾಣಗಳ ವೃಷ್ಟಿಯಿಂದ ಮುಚ್ಚಿಬಿಟ್ಟರು. ಬಗ್ಗಿದ ಗಿಣ್ಣುಗಳಿದ್ದ ಅನೇಕಬಾಣಗಳಿಂದ ಪ್ರಹೃತನಾದ ಶಕುನಿಯು ಶೀಘ್ರವಾಗಿ ಹೋಗುವ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ದ್ರೋಣರ ಸೈನ್ಯದ ಸಮೀಪಕ್ಕೆ ಹೋದನು.

ಘಟೋತ್ಕಚನು ಶೂರನಾದ ವೇಗಯುಕ್ತನಾಗಿದ್ದ ಅಲಾಯುಧ ರಾಕ್ಷಸನನ್ನು ಸಾಧಾರಣವೇಗದಿಂದ ಎದುರಿಸಿದನು. ಹಿಂದೆ ರಾಮ-ರಾವಣರ ಯುದ್ಧವು ನಡೆದಿದ್ದಂತೆಯೇ ಘಟೋತ್ಕಚ-ಅಲಾಯುಧರ ಯುದ್ಧವು ಆಶ್ಚರ್ಯಕರವಾದ ರೀತಿಯಲ್ಲಿ ನಡೆಯುತ್ತಿದ್ದಿತು.

ಇನ್ನೊಂದು ವಿಭಾಗದಲ್ಲಿ ಮದ್ರರಾಜನೊಡನೆ ಯುದ್ಧದಲ್ಲಿ ತೊಡಗಿದ್ದ ಯುಧಿಷ್ಠಿರನು ಶಲ್ಯನನ್ನು ಐವತ್ತು ಬಾಣಗಳಿಂದ ಪ್ರಹರಿಸಿ ಪುನಃ ಒಂಬತ್ತು ಬಾಣಗಳಿಂದ ಗಾಯಗೊಳಿಸಿದನು. ಹಿಂದೆ ಅಮರರಾಜನಾದ ಇಂದ್ರನಿಗೂ ಶಂಬರಾಸುರನಿಗೂ ನಡೆದ ಮಹಾಯುದ್ಧದಂತೆ–ಯುಧಿಷ್ಠಿರನಿಗೂ ಮತ್ತು ಶಲ್ಯನಿಗೂ ಪರಮಾದ್ಭುತವಾದ ಯುದ್ಧವು ನಡೆಯಿತು.

ಮತ್ತೊಂದು ವಿಭಾಗದಲ್ಲಿ ನಿನ್ನ ಮಕ್ಕಳಾದ ವಿವಿಂಶತಿ, ಚಿತ್ರಸೇನ ಮತ್ತು ವಿಕರ್ಣರು ದೊಡ್ಡದಾದ ಸೈನ್ಯದೊಡನೆ ಕೂಡಿಕೊಂಡು ಭೀಮಸೇನ ನೊಡನೆ ಯುದ್ಧಮಾಡುತ್ತಿದ್ದರು."

೯೬ನೆಯ ಅಧ್ಯಾಯವು ಮುಗಿಯಿತು.

೯೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣರೊಡನೆ ಧೃಷ್ಟದ್ಯುಮ್ನನ ಯುದ್ಧ: ಸಾತ್ಯಕಿಯು ಧೃಷ್ಟದ್ಯುಮ್ನನಿಗೆ ರಕ್ಷಣೆ ನೀಡಿದುದು

ಸಂಜಯನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ರೋಮಾಂಚಕರವಾದ ಯುದ್ಧವು ನಾನು ಹೇಳಿದ ರೀತಿಯಲ್ಲಿ ನಡೆಯುತ್ತಿರಲಾಗಿ, ಮೂರು ಭಾಗಗಳಾಗಿ ಒಡೆದುಹೋದ ಕೌರವರ ಸೈನ್ಯವನ್ನು ಪಾಂಡವರು ಆಕ್ರಮಿಸಿದರು. ಮಹಾಬಾಹುವಾದ ಜಲಸಂಧನನ್ನು ಭೀಮಸೇನನು ಆಕ್ರಮಿಸಿದನು. ಸಸೈನ್ಯನಾದ ಯುಧಿಷ್ಠಿರನು-ಕೃತವರ್ಮನನ್ನು ಆಕ್ರಮಿಸಿದನು. ಯಾವ ರೀತಿಯಲ್ಲಿ ಸೂರ್ಯನು ಸಾವಿರಾರು ಕಿರಣಗಳನ್ನು ಪ್ರಸರಿಸುತ್ತಾನೆಯೋ–ಅದೇ ರೀತಿಯಲ್ಲಿ ಧೃಷ್ಟ ದ್ಯುಮ್ನನು ಬಾಣಗಳ ಮಳೆಯನ್ನೇ ಸುರಿಸುತ್ತಾ ದ್ರೋಣರನ್ನು ಆಕ್ರಮಿಸಿದನು.

ಕ್ರೋಧಾಭಿಭೂತರಾಗಿದ್ದ, ತ್ವರೆಯಿಂದ ಯುದ್ಧಮಾಡುತ್ತಿದ್ದ ಪಾಂಡವ-ಕೌರವಪಕ್ಷಗಳಲ್ಲಿದ್ದ ಎಲ್ಲ ಧನುಷ್ಮಂತರಿಗೂ ಪರಸ್ಪರವಾಗಿ ಘೋರವಾದ ಯುದ್ಧವು ಪ್ರಾರಂಭವಾಯಿತು. ಹೀಗೆ ಮಹಾಭಯಂಕರವಾದ ಜನಕ್ಷಯಕಾರಕವಾದ ಯುದ್ಧವು ನಡೆಯುತ್ತಿರಲಾಗಿ, ಎರಡೂ ಪಕ್ಷಗಳ ಯೋಧರೂ ಭಯವೆಂಬುದನ್ನೇ ಸಂಪೂರ್ಣವಾಗಿ ತೊರೆದು ದ್ವಂದ್ವ ಯುದ್ಧವನ್ನು ಮಾಡುತ್ತಿರಲಾಗಿ, ಬಲಿಷ್ಠರಾದ ದ್ರೋಣರು ಬಲಿಷ್ಠನಾದ ಧೃಷ್ಟದ್ಯುಮ್ನನೊಡನೆ ದ್ವಂದ್ವಯುದ್ಧದಲ್ಲಿ ತೊಡಗಿ ಬಾಣಗಳ ಸಮೂಹಗಳನ್ನೇ ಧೃಷ್ಟದ್ಯುಮ್ನನ ಮೇಲೆ ಸುರಿಸುತ್ತಿದ್ದರು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ವಿಧ್ವಸ್ತವಾದ ಕಮಲವನದಲ್ಲಿ ಕಮಲಪುಷ್ಪಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವಂತೆ–ದ್ರೋಣ-ಧೃಷ್ಟದ್ಯುಮ್ನರಿಂದ ಕತ್ತರಿಸಲ್ಪಟ್ಟ ಯೋಧರ ಶಿರಸ್ಸುಗಳು ರಣಾಂಗಣದ ಸುತ್ತಲೂ ಬಿದ್ದಿದ್ದುವು. ಆ ಘೋರಯುದ್ಧದಲ್ಲಿ ವೀರಯೋಧರ ವಸ್ತ್ರಾಭರಣಗಳೂ, ಶಸ್ತ್ರಗಳೂ, ಧ್ವಜ-ಕವಚಗಳೂ ಮತ್ತು ಆಯುಧಗಳೂ ರಣಾಂಗಣದ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಿದ್ದ ಕವಚಗಳನ್ನು ಧರಿಸಿದ್ದ ಸೈನಿಕರು ರಕ್ತದಿಂದ ತೋಯ್ದವರಾಗಿ ಪರಸ್ಪರವಾಗಿ ಅಂಟಿಕೊಂಡಿರುವ, ವಿದ್ಯುತ್ತಿನಿಂದ

ಯುಕ್ತವಾದ ಮೋಡಗಳ ಸಮೂಹದಂತೆಯೇ ಕಾಣುತ್ತಿದ್ದರು. ಮಹಾರಥರು ನಲವತ್ತೆಂಟು ಅಂಗುಲಗಳಷ್ಟು ಉದ್ದವಾಗಿದ್ದ ಧನುಸ್ಸುಗಳನ್ನು ಸುದೀರ್ಘ ವಾಗಿ ಸೆಳೆಯುತ್ತಾ, ರೆಕ್ಕೆಗಳಿದ್ದ ಬಾಣಗಳಿಂದ ಅಶ್ವಸೈನಿಕರನ್ನೂ, ಗಜಸೈನಿಕರನ್ನೂ, ಪದಾತಿಗಳನ್ನೂ ಸಂಹಾರಮಾಡುತ್ತಿದ್ದರು. ಮಹಾತ್ಮರಾದ ವೀರರ ಆ ಮಹಾಯುದ್ಧದಲ್ಲಿ ಯೋಧರ ಕತ್ತಿ-ಗುರಾಣಿಗಳು, ಧನುಸ್ಸುಗಳು, ಶಿರಸ್ಸುಗಳು, ಕವಚಗಳು ರಣರಂಗದ ಸುತ್ತಲೂ ಹರಡಿಕೊಂಡು ಬಿದ್ದಿದ್ದುವು. ಮಹಾರಾಜ! ಭಯಾನಕವಾದ ಆ ಯುದ್ಧದಲ್ಲಿ ರಣರಂಗದ ಸುತ್ತಲೂ ಲೆಕ್ಕವಿಲ್ಲದಷ್ಟು ಮುಂಡಗಳು ಎದ್ದು ಕುಣಿಯುತ್ತಿರುವುದು ಕಂಡು ಬರುತ್ತಿದ್ದಿತು. ಹದ್ದುಗಳು, ರಣಹದ್ದುಗಳು, ಬಕಪಕ್ಷಿಗಳು, ಗಿಡಗಗಳು, ಕಾಗೆಗಳು, ನರಿಗಳು, ಮಾಂಸಾಶಿಗಳಾದ ಇನ್ನೂ ಅನೇಕಪ್ರಾಣಿಗಳು ಅಪಾರಸಂಖ್ಯೆಯಲ್ಲಿ ಆ ರಣಾಂಗಣದಲ್ಲಿ ಕಾಣಿಸಿಕೊಂಡುವು. ಆ ಎಲ್ಲ ಪ್ರಾಣಿಗಳೂ ಸತ್ತುಬಿದ್ದಿದ್ದ ಪ್ರಾಣಿಗಳ ಮಾಂಸವನ್ನು ಕಿತ್ತು ತಿನ್ನುತ್ತಿದ್ದುವು. ರಕ್ತವನ್ನು ಹೀರುತ್ತಿದ್ದುವು. ತಲೆಗೂದಲುಗಳನ್ನೂ ಮತ್ತು ಮಜ್ಜೆಯನ್ನೂ ಪಂಜಗಳಿಂದ ಬಾರಿ-ಬಾರಿಗೂ ಕೀಳುತ್ತಿದ್ದುವು. ಮಾಂಸಾಶಿಗಳಾದ ಆ ಪ್ರಾಣಿಗಳು ಯುದ್ಧದಲ್ಲಿ ಪ್ರಾಣಕಳೆದುಕೊಂಡಿದ್ದ ನರಾಶ್ವ-ಗಜಸಮೂಹಗಳ ಶರೀರಗಳನ್ನೂ, ಶರೀರದ ಅವಯವಗಳನ್ನೂ, ತಲೆಗಳನ್ನೂ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಎಳೆದಾಡುತ್ತಿದ್ದುವು. ಅಸ್ತ್ರವಿದ್ಯಾವಿಶಾರದರಾದ, ಸಂಗ್ರಾಮ ಶೋಭಿಗಳಾದ ಕೌರವ-ಪಾಂಡವಯೋಧರು ಯುದ್ಧಕ್ಕೆ ಸಂಬಂಧಿಸಿದ ಪ್ರತಿಜ್ಞಾವಚನಗಳಿಂದ ದೀಕ್ಷಾಬದ್ಧರಾಗಿ ತಮ್ಮ-ತಮ್ಮ ಪಕ್ಷಗಳಿಗೆ ವಿಜಯವನ್ನು ಆಶಿಸುತ್ತಾ ರಭಸದಿಂದ ಯುದ್ಧಮಾಡುತ್ತಿದ್ದರು. ಕತ್ತಿ-ಗುರಾಣಿಗಳನ್ನು ಹಿಡಿದಿದ್ದ ಅನೇಕ ಸೈನಿಕರು ಬಗೆ-ಬಗೆಯಾದ ವರಸೆಗಳನ್ನು ಪ್ರದರ್ಶಿಸುತ್ತಾ ರಣಾಂಗಣದ ಸುತ್ತಲೂ ತಿರುಗುತ್ತಿದ್ದರು. ರಣರಂಗವನ್ನು ಪ್ರವೇಶಿಸಿದ್ದ ವೀರಯೋಧರು ಪರಮಕ್ರುದ್ಧರಾಗಿ ಋಷ್ಟಿ, ಶಕ್ತ್ಯಾಯುಧ, ಪ್ರಾಸ, ಶೂಲ, ತೋಮರ, ಪಟ್ಟಿಶ, ಗದೆ, ಪರಿಘ–ಇವೇ ಮುಂತಾದ ಆಯುಧಗಳಿಂದಲೂ, ಭುಜಗಳಿಂದಲೂ ಯುದ್ಧಮಾಡುತ್ತಾ ಒಬ್ಬರು ಮತ್ತೊಬ್ಬರನ್ನು ಸಂಹಾರ ಮಾಡುತ್ತಿದ್ದರು. ರಥಿಕರು-ರಥಿಕರೊಡನೆಯೂ, ಅಶ್ವಾರೋಹಿಗಳು–ಅಶ್ವಾರೋಹಿಗಳೊಡನೆಯೂ, ಗಜಸೈನಿಕರು-ಗಜಸೈನಿಕರೊಡನೆಯೂ, ಪದಾತಿ

ಗಳು-ಪದಾತಿಗಳೊಡನೆಯೂ ಯುದ್ಧಮಾಡುತ್ತಿದ್ದರು. ರಂಗಸ್ಥಳಕ್ಕೆ ಸಮಾನವಾಗಿದ್ದ ಆ ರಣಾಂಗಣದಲ್ಲಿ, ಮದ್ಯವನ್ನು ಪಾನಮಾಡಿವೆಯೋ ಎಂಬಂತೆ ಕೆಲವು ಆನೆಗಳು ವಿಕಾರವಾಗಿ ಘೀಳಿಡುತ್ತಿದ್ದುವು. ಕೆಲವು ಆನೆಗಳು ಪರಸ್ಪರವಾಗಿ ಬಡಿದಾಡಿ ಸಾಯುತ್ತಿದ್ದುವು. ಯುದ್ಧಮರ್ಯಾದೆಯನ್ನೂ ಮೀರಿದ ಯುದ್ಧವು ಪ್ರಾರಂಭವಾಗಲಾಗಿ, ಧೃಷ್ಟದ್ಯುಮ್ನನು ತನ್ನ ರಥದ ಕುದುರೆಗಳನ್ನು ದ್ರೋಣರ ರಥದ ಕುದುರೆಗಳೊಡನೆ ಸೇರಿಸಿಬಿಟ್ಟನು. (ಧೃಷ್ಟದ್ಯುಮ್ನನ ಕುದುರೆಗಳು ದ್ರೋಣರ ಕುದುರೆಗಳ ಮೇಲೆ ನುಗ್ಗಿದುವು). ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಪಾರಿವಾಳದ ಬಣ್ಣದಿಂದಲೂ ಮತ್ತು ಕೆಂಪುಬಣ್ಣದಿಂದಲೂ ಕೂಡಿದ್ದ ದ್ರೋಣ-ಧೃಷ್ಟದ್ಯುಮ್ನರ ಕುದುರೆಗಳು ಒಟ್ಟಾಗಿ ಕಲೆತು ಬಹಳವಾಗಿ ಶೋಭಿಸಿದುವು. ಪಾರಿವಾಳದ ಬಣ್ಣದಿಂದ ಕೂಡಿದ್ದ ಧೃಷ್ಟದ್ಯುಮ್ನನ ಕುದುರೆಗಳು ಕೆಂಪು ಬಣ್ಣದಿಂದ ಕೂಡಿದ್ದ ದ್ರೋಣರ ಕುದುರೆಗಳೊಡನೆ ಸೇರಿಕೊಂಡು ವಿದ್ಯುತ್ತಿನಿಂದ ಕೂಡಿದ್ದ ಮೇಘಗಳಂತೆಯೇ ಪ್ರಕಾಶಿಸಿದುವು. ದ್ರೋಣರು ತನಗೆ ಸಮೀಪಸ್ಥರಾದುದನ್ನು ಕಂಡು ವೀರನಾದ ಧೃಷ್ಟದ್ಯುಮ್ನನು ಧನುಸ್ಸನ್ನು ಕೆಳಗಿಟ್ಟು ಕತ್ತಿ-ಗುರಾಣಿಗಳನ್ನು ಕೈಗೆತ್ತಿಕೊಂಡನು. ದುಷ್ಕರವಾದ ಕರ್ಮವನ್ನು ಮಾಡಲಿಚ್ಛಿಸಿದ, ಶತ್ರುವೀರಹಂತಕನಾದ ಧೃಷ್ಟದ್ಯುಮ್ನನು ಈಷಾದಂಡದ ಮೂಲಕವಾಗಿ (ಮೂಕಿಯ ಮರದ ಮೂಲಕವಾಗಿ) ತನ್ನ ರಥವನ್ನು ದಾಟಿ ದ್ರೋಣರ ರಥವನ್ನು ಪ್ರವೇಶಿಸಿ ನೊಗದ ಮಧ್ಯಭಾಗದಲ್ಲಿ ನಿಂತನು. ಪುನಃ ನೊಗವನ್ನು ಈಷಾದಂಡಕ್ಕೆ ಕಟ್ಟಿರುವ ಜಾಗದಲ್ಲಿ ನಿಂತನು. ಅನಂತರ ಕುದುರೆಗಳ ಹಿಂಭಾಗದ ಬೆನ್ನುಗಳ ಮೇಲೆಯೇ ನಿಂತನು. ಅವನ ಸಾಹಸದ ಆ ಕಾರ್ಯವನ್ನು ಕಂಡು ಎಲ್ಲ ಯೋಧರೂ ಧೃಷ್ಟದ್ಯುಮ್ನನನ್ನು ಬಹಳವಾಗಿ ಪ್ರಶಂಸಿಸಿದರು. ದ್ರೋಣರ ಕೆಂಪುಕುದುರೆಗಳ ಬೆನ್ನುಗಳ ಮೇಲೆ ನಿಂತು ವರಸೆ-ವರಸೆಯಾಗಿ ಕತ್ತಿಯನ್ನು ತಿರುಗಿಸುತ್ತಿದ್ದ ಧೃಷ್ಟದ್ಯುಮ್ನನನ್ನು ಪ್ರಹರಿಸಲು ದ್ರೋಣರಿಗೆ ಅವಕಾಶವೇ ಸಿಕ್ಕಲಿಲ್ಲ. ಅದು ನಮ್ಮೆಲ್ಲರಿಗೂ ಪರಮಾದ್ಭುತವಾಗಿ ಕಂಡಿತು. ಅರಣ್ಯದಲ್ಲಿ ಮಾಂಸದ ಅಭಿಲಾಷೆಯಿಂದ ಗಿಡಗವೊಂದು ಯಾವ ರೀತಿಯಲ್ಲಿ ಮತ್ತೊಂದು ಪಕ್ಷಿಯ ಮೇಲೆ ರಭಸದಿಂದ ಬೀಳುತ್ತದೆಯೋ–ಅದೇ ರೀತಿಯಲ್ಲಿ ದ್ರೋಣರನ್ನು ಸಂಹರಿಸುವ ಇಚ್ಛೆಯಿಂದ ಧೃಷ್ಟದ್ಯುಮ್ನನು ಆಚಾರ್ಯರ ಮೇಲೆ ಬಿದ್ದನು. ಪಾರ್ಷತನ ಆ

ಸಾಹಸಕೃತ್ಯವನ್ನು ಕ್ಷಣಕಾಲ ವೀಕ್ಷಿಸಿದ ದ್ರೋಣರು ಪರಮಕ್ರುದ್ಧರಾಗಿ ನೂರು ಬಾಣಗಳನ್ನು ಪ್ರಯೋಗಿಸಿ ಧೃಷ್ಟದ್ಯುಮ್ನನು ಹಿಡಿದಿದ್ದ ಗುರಾಣಿಯನ್ನು ಕತ್ತರಿಸಿ, ಪುನಃ ಹತ್ತು ಭಲ್ಲಗಳಿಂದ ಅವನ ಕತ್ತಿಯನ್ನೂ ಕತ್ತರಿಸಿದರು. ಅರುವತ್ತುನಾಲ್ಕು ಬಾಣಗಳಿಂದ ಧೃಷ್ಟದ್ಯುಮ್ನನ ರಥದ ಕುದುರೆಗಳನ್ನು ಸಂಹರಿಸಿ, ಎರಡು ಬಾಣಗಳಿಂದ ಧ್ವಜವನ್ನೂ ಮತ್ತು ಶ್ವೇತಚ್ಛತ್ರವನ್ನೂ ಕತ್ತರಿಸಿ, ಅನಂತರ ಧೃಷ್ಟದ್ಯುಮ್ನನ ಪಾರ್ಶ್ವರಕ್ಷಕರನ್ನೂ ಸಂಹರಿಸಿದರು. ಅನಂತರ ದ್ರೋಣರು ಜೀವವನ್ನೇ ಅಂತ್ಯಗೊಳಿಸುವ ಮತ್ತೊಂದು ಬಾಣವನ್ನು ತ್ವರೆಯಿಂದ ತೆಗೆದುಕೊಂಡು ಆಕರ್ಣಾಂತವಾಗಿ ಸೆಳೆದು–ವಜ್ರಪಾಣಿಯಾದ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸುವಂತೆ–ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿದರು. ಧೃಷ್ಟದ್ಯುಮ್ನನ ಪಕ್ಕದಲ್ಲಿಯೇ ಇದ್ದ ಸಾತ್ಯಕಿಯು ನಿರಾಯುಧನಾಗಿದ್ದ ಧೃಷ್ಟದ್ಯುಮ್ನನ ಮೇಲೆ ಬಿಟ್ಟ ಪ್ರಾಣಾಂತಕವಾದ ಬಾಣವನ್ನು ತೀಕ್ಷ್ಣವಾದ ಹದಿನಾಲ್ಕು ಬಾಣಗಳಿಂದ ಕತ್ತರಿಸಿ ಆಚಾರ್ಯಮುಖ್ಯರ ಹಿಡಿತಕ್ಕೆ ಸಿಕ್ಕಿಬಿದ್ದಿದ್ದ ಧೃಷ್ಟದ್ಯುಮ್ನನನ್ನು ವಿಮೋಚನಗೊಳಿಸಿದನು. ಜಿಂಕೆಯೊಂದು ಸಿಂಹದ ಹಿಡಿತಕ್ಕೆ ಸಿಕ್ಕುವಂತೆ–ನರಶ್ರೇಷ್ಠರಾದ ದ್ರೋಣರ ಹಿಡಿತಕ್ಕೆ ಸಿಕ್ಕಿಹಾಕಿಕೊಂಡಿದ್ದ ಧೃಷ್ಟದ್ಯುಮ್ನನನ್ನು ಸಾತ್ಯಕಿಯು ಬಿಡಿಸಿಕೊಂಡನು. ಪಾಂಚಾಲ್ಯನನ್ನು ಆ ಸಮಯದಲ್ಲಿ ರಕ್ಷಿಸಿದ ಸಾತ್ಯಕಿಯನ್ನು ನೋಡಿ ದ್ರೋಣರು ಪರಮಕ್ರುದ್ಧರಾಗಿ ಬಹಳ ತ್ವರೆಯಿಂದ ಅವನನ್ನು ಇಪ್ಪತ್ತಾರು ಬಾಣಗಳಿಂದ ಪ್ರಹರಿಸಿದರು. ಸಾತ್ಯಕಿಯು ತೋರಿಸಿದ ಪರಾಕ್ರಮಕ್ಕೆ ಪ್ರತಿಯಾಗಿ ಸೃಂಜಯರೆಲ್ಲರನ್ನೂ ನಿರ್ಮೂಲಮಾಡಿಬಿಡುವರೋ ಎಂಬಂತೆ ಕಾಣುತ್ತಿದ್ದ ದ್ರೋಣರನ್ನು ಸಾತ್ಯಕಿಯು ನಿಶಿತವಾಗಿದ್ದ ಇಪ್ಪತ್ತಾರು ಬಾಣಗಳಿಂದ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಈ ರೀತಿಯಲ್ಲಿ ದ್ರೋಣರು ಸಾತ್ಯಕಿಯೊಡನೆ ಯುದ್ಧದಲ್ಲಿ ತೊಡಗಿರಲಾಗಿ, ವಿಜಯೇಚ್ಛುಗಳಾದ, ಪಾಂಚಾಲ್ಯಮಹಾರಥರು ಧೃಷ್ಟದ್ಯುಮ್ನನನ್ನು ಬೇರೆಯ ಕಡೆಗೆ ಕೊಂಡೊಯ್ದರು."

೯೭ನೆಯ ಅಧ್ಯಾಯವು ಮುಗಿಯಿತು.

(೧೭೫)–೧೬

೯೮ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣ-ಸಾತ್ಯಕಿಯರ ಅದ್ಭುತಸಮರ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಪ್ರಾಣಾಂತಕವಾಗಿದ್ದ ದ್ರೋಣರ ಬಾಣವನ್ನು ವೃಷ್ಣಿಪ್ರವೀರನಾದ ಯುಯುಧಾನನು ಹದಿನಾಲ್ಕು ಬಾಣಗಳಿಂದ ಕತ್ತರಿಸಿ ಪಾರ್ಷತನನ್ನು ಪ್ರಾಣಾಪಾಯದಿಂದ ಪಾರುಮಾಡಿದನೆಂದು ಹೇಳಿದೆ. ಅದರಿಂದ ಪರಮಕ್ರುದ್ಧರಾದ, ಮಹಾಧನುಷ್ಮಂತರಾದ, ಸರ್ವಶಸ್ತ್ರಿಗಳಿಗೂ ಶ್ರೇಷ್ಠರಾದ, ನರವ್ಯಾಘ್ರರಾದ ದ್ರೋಣರು ಯುದ್ಧದಲ್ಲಿ ಸಾತ್ಯಕಿಯ ಮೇಲೆ ತಮ್ಮ ಸೇಡನ್ನು ಹೇಗೆ ತೀರಿಸಿಕೊಂಡರು? ಅದನ್ನು ವಿವರಿಸಿ ಹೇಳು."

"ಮಹಾರಾಜ! ನಿಶ್ಚಯವಾಗಿಯೂ ಆ ಸಮಯದಲ್ಲಿ ದ್ರೋಣರು ಅತ್ಯಂತಕ್ರುದ್ಧರೇ ಆಗಿದ್ದರು. ಕೋಪದಿಂದಲೂ ಮತ್ತು ಅಸಹನೆಯಿಂದಲೂ ಅವರ ಕಣ್ಣುಗಳು ಕೆಂಪಾಗಿದ್ದುವು. ಘಟಸರ್ಪವು ಬುಸುಗುಟ್ಟುವಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದರು. ಅವರ ಕೋಪವು ಹಾವಿನ ವಿಷದರೂಪದಲ್ಲಿದ್ದಿತು. ಅವರ ಧನುಸ್ಸು ತೆರೆದ ಮಹಾಸರ್ಪದ ಬಾಯಿಯಂತಿದ್ದಿತು. ತೀಕ್ಷ್ಣವಾದ ಮತ್ತು ಸುನಿಶಿತವಾದ ನಾರಾಚಗಳು ಹಾವಿನ ಕೋರೆದಾಡೆಗಳಂತಿದ್ದುವು. ಹೀಗೆ ಭಯಂಕರವಾದ ರೂಪವನ್ನು ಹೊಂದಿದ್ದ ದ್ರೋಣರು ಸಾತ್ಯಕಿಯನ್ನು ರಭಸದಿಂದ ಆಕ್ರಮಿಸಿದರು. ಕೋಪವೆಷ್ಟೇ ಇದ್ದರೂ ಮಹಾಪರಾಕ್ರಮಿಯಾದ ಸಾತ್ಯಕಿಯೊಡನೆ ಯುದ್ಧಮಾಡುವುದರಲ್ಲಿಯೂ ಅವರಿಗೆ ಆನಂದವಿದ್ದಿತು. ಪ್ರಮುದಿತರಾದ, ನರಶ್ರೇಷ್ಠರಾದ ದ್ರೋಣರು ಆಕಾಶದಲ್ಲೂ ಹಾರಿಹೋಗುವ ಮತ್ತು ಪರ್ವತಗಳನ್ನೂ ದಾಟಿಕೊಂಡು ಹೋಗುವಂತಹ ಸಾಮರ್ಥ್ಯವಿದ್ದ, ಮಹಾವೇಗಯುಕ್ತವಾಗಿದ್ದ, ಕೆಂಪುಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಾ ಸಾತ್ಯಕಿಯನ್ನು ಆಕ್ರಮಿಸಿದರು. ಆ ಸಮಯದಲ್ಲಿ ದ್ರೋಣರು ಅಶ್ವಗಳೆಂಬ ವಾಯುವಿನಿಂದ ಪ್ರಚೋದಿತವಾದ, ನಿವಾರಿಸಲು ಅಸಾಧ್ಯವಾದ ಕಾರ್ಮುಗಿಲಿನಂತೆಯೇ ಕಾಣುತ್ತಿದ್ದರು. ಅಸಂಖ್ಯಾತಬಾಣಗಳ ಪತನವೇ ಮಹಾವೃಷ್ಟಿಯ ರೂಪದಲ್ಲಿದ್ದಿತು. ರಥಚಕ್ರಗಳ ಗಡ-ಗಡಾ

ಶಬ್ದಗಳೇ ದ್ರೋಣಮೇಘದಲ್ಲಿನ ಗುಡುಗುಗಳ ಶಬ್ದವಾಗಿದ್ದಿತು. ಧನುಸ್ಸಿನ ಆಕರ್ಷಣ ಮತ್ತು ಬಾಣಗಳ ವಿಕ್ಷೇಪಗಳೇ ಶರವೃಷ್ಟಿಗೆ ಸಾಧನವಾಗಿದ್ದುವು. ಅಸಂಖ್ಯಾತವಾದ ನಾರಾಚಗಳೇ ದ್ರೋಣಮೇಘದ ಮಿಂಚಿನಂತಿದ್ದುವು. ದ್ರೋಣಮೇಘವು ಶಕ್ತ್ಯಾಯುಧ ಮತ್ತು ಖಡ್ಗಗಳನ್ನೇ ಸಿಡಿಲಿನ ರೂಪದಲ್ಲಿ ಹೊಂದಿದ್ದಿತು. ಆ ಕಾರ್ಮುಗಿಲು ಕೋಪದ ವೇಗದಿಂದ ಪ್ರಾದುರ್ಭವಿಸಿ ದ್ದಿತು. ಈ ರೀತಿಯಲ್ಲಿ ದ್ರೋಣರು ತನ್ನ ಮೇಲೆ ರಭಸದಿಂದ ಬೀಳುತ್ತಿರುವು ದನ್ನು ನೋಡಿ ಯುದ್ಧದುರ್ಮದನಾದ, ಪರಪುರಂಜಯನಾದ, ಶೈನೇಯನು ಗಹ-ಗಹಿಸಿ ನಗುತ್ತಾ ಸಾರಥಿಯೊಡನೆ ಹೇಳಿದನು: "ಸೂತ! ದ್ರೋಣರು ಬ್ರಾಹ್ಮಣರು. ಶೂರರು. ಆದರೆ ಸ್ವಕರ್ಮಾನುಷ್ಠಾನದಲ್ಲಿ ಇವರು ನಿರತರಾಗಿ ರುವುದಿಲ್ಲ. ದುರ್ಯೋಧನನಿಗೆ ಇವರು ಆಶ್ರಯರಾಗಿದ್ದು ಅವನ ದುಃಖ ಮತ್ತು ಭಯಗಳನ್ನು ನಿವಾರಣೆಮಾಡುವುದರಲ್ಲಿಯೇ ತತ್ಪರರಾಗಿದ್ದಾರೆ. ಇವರು ಎಲ್ಲ ರಾಜಪುತ್ರರಿಗೂ ಆಚಾರ್ಯರಾಗಿದ್ದಾರೆ. ತಾವೇ ಮಹಾಶೂರ ರೆಂದು ಇವರು ಭಾವಿಸಿಕೊಂಡಿದ್ದಾರೆ. (ಇವರನ್ನು ನೋಡಿದುದರಿಂದ ನೀನು ಭಯಪಡುವ ಕಾರಣವಿಲ್ಲ.) ಶೀಘ್ರವಾಗಿ ಹೋಗುವ ಕುದುರೆಗಳ ಸಹಾಯ ದಿಂದ ಸಂತೋಷಭರಿತನಾಗಿರುವಂತೆಯೇ ಅವರ ಬಳಿಗೆ ಹೋಗು." ಸಾತ್ಯಕಿಯ ಆಜ್ಞೆಯಂತೆ ಸಾರಥಿಯು ಕುದುರೆಗಳನ್ನು ಪ್ರಚೋದಿಸಿದನು. ವಾಯುವೇಗದಿಂದ ಕೂಡಿದ್ದ, ಬೆಳ್ಳಿಗೆ ಸದೃಶವಾದ ಬಿಳೀಬಣ್ಣದಿಂದ ಕೂಡಿದ್ದ, ಮಾಧವನ (ಸಾತ್ಯಕಿಯ) ಶ್ರೇಷ್ಠವಾದ ಕುದುರೆಗಳು ದ್ರೋಣರ ರಥಕ್ಕೆ ಅಭಿಮುಖವಾಗಿ ಹೋಗಿ ನಿಂತುವು. ಅನಂತರ ಪರಂತಪರಾದ ದ್ರೋಣ-ಸಾತ್ಯಕಿಯರು ಅನೇಕ ಶತಸಹಸ್ರಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಾ ಘೋರವಾದ ಯುದ್ಧದಲ್ಲಿ ತೊಡಗಿದರು. ಪುರುಷರ್ಷಭರಾದ ದ್ರೋಣ-ಸಾತ್ಯಕಿಯರು ಆಕಾಶವನ್ನೇ ಬಾಣಗಳ ಸಮೂಹಗಳಿಂದ ಆಚ್ಛಾದಿತವನ್ನಾಗಿ ಮಾಡಿದರು. ಆ ಇಬ್ಬರು ವೀರರೂ ತಮ್ಮ ಬಾಣಗಳಿಂದ ಹತ್ತು ದಿಕ್ಕುಗಳನ್ನೂ ತುಂಬಿದರು. ವರ್ಷಾಕಾಲದಲ್ಲಿ ಎರಡು ಮಹಾಮೇಘಗಳು ಜಲಧಾರೆಗಳಿಂದ ಆಕಾಶವನ್ನೂ ದಿಕ್ಕುಗಳನ್ನೂ ತುಂಬಿಬಿಡುವಂತೆ–ದ್ರೋಣ-ಸಾತ್ಯಕಿಯರು ಬಾಣಗಳ ಮಳೆಗರೆಯು ತ್ತಿದ್ದರು. ಆ ಸಮಯದಲ್ಲಿ ಸೂರ್ಯನೂ ಬೆಳಗುತ್ತಿರಲಿಲ್ಲ. ವಾಯುವೂ

ಬೀಸುತ್ತಿರಲಿಲ್ಲ. ಆಕಾಶವು ಬಾಣಗಳ ಸಮೂಹಗಳಿಂದ ಆವೃತವಾಗಿ ಸರ್ವತ್ರ ಅಂಧಕಾರವು ಕವಿಯಿತು. ಇತರ ಶೂರಯೋಧರಿಗೆ ಅವರು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಹೋಗಲು ಕೂಡ ಅಸಾಧ್ಯವಾಗಿ ಕಂಡಿತು. ಶೀಘ್ರವಾಗಿ ಅಸ್ತ್ರಗಳನ್ನು ಬಿಡುವುದರಲ್ಲಿ ಮಹಾಕುಶಲರಾಗಿದ್ದ ದ್ರೋಣ-ಸಾತ್ಯಕಿಯರ ಬಾಣಗಳಿಂದ ಲೋಕವೇ ಅಂಧಕಾರಮಯವಾಯಿತು. ಹಾಗಿದ್ದರೂ ಸಹ ನರಶ್ರೇಷ್ಠರಾದ ದ್ರೋಣ-ಸಾತ್ಯಕಿಯರು ಸುರಿಸುತ್ತಿದ್ದ ಶರವೃಷ್ಟಿಯಲ್ಲಿ ಯಾವ ವ್ಯತ್ಯಾಸವೂ ಕಂಡುಬರುತ್ತಿರಲಿಲ್ಲ. (ರಣಾಂಗಣದಲ್ಲಿ ಕತ್ತಲೆಯು ಕವಿದಿದ್ದರೂ ಆ ವೀರರು ಯಥಾಪೂರ್ವವಾಗಿ ಬಾಣಗಳನ್ನು ಬಿಡುತ್ತಲೇ ಇದ್ದರು.)

ಪರಾಕ್ರಮಿಗಳಾದ ದ್ರೋಣ-ಸಾತ್ಯಕಿಯರು ಸತತವಾಗಿ ಪ್ರಯೋಗಿಸುತ್ತಿದ್ದ ಚೂಪಾದ ಬಾಣಗಳ ಅಲುಗುಗಳು ಪರಸ್ಪರವಾಗಿ ಸಂಘರ್ಷಿಸುತ್ತಿದ್ದಾಗ ಅದರಿಂದ ಹೊರಟ ಶಬ್ದವು–ಇಂದ್ರನಿಂದ ವಿಮುಕ್ತವಾದ ವಜ್ರಾಯುಧದ ಶಬ್ದದಂತೆಯೇ–ಕೇಳಿಸುತ್ತಿದ್ದಿತು. ನಾರಾಚಗಳಿಂದ ಪ್ರಹೃತವಾದ ಬಾಣಗಳ ಸ್ವರೂಪವು ವಿಷದ ಹಾವುಗಳಿಂದ ಕಚ್ಚಲ್ಪಟ್ಟ ಸರ್ಪಗಳ ಸ್ವರೂಪದಂತೆಯೇ ಇದ್ದಿತು. ಯುದ್ಧಶೌಂಡರಾದ ದ್ರೋಣ-ಸಾತ್ಯಕಿಯರು ಮಾಡುತ್ತಿದ್ದ ಟೇಂಕಾರ ಶಬ್ದವು ಸತತವಾಗಿ ವಜ್ರಾಯುಧದ ಪ್ರಹಾರದಿಂದ ಪರ್ವತಶಿಖರಗಳಲ್ಲಿ ಉಂಟಾಗುತ್ತಿದ್ದ ಶಬ್ದಕ್ಕೆ ಅನುರೂಪವಾಗಿದ್ದಿತು.

ಆ ಇಬ್ಬರ ರಥಗಳೂ, ಕುದುರೆಗಳೂ ಮತ್ತು ಸಾರಥಿಗಳೂ, ದ್ರೋಣ-ಸಾತ್ಯಕಿಗಳು ಸತತವಾಗಿ ಬಿಡುತ್ತಿದ್ದ ಸುವರ್ಣಮಯವಾದ ರೆಕ್ಕೆಗಳಿಂದ ಕೂಡಿದ್ದ ಬಾಣಗಳಿಂದ ಕ್ಷತ-ವಿಕ್ಷತರಾಗಿ ವಿಚಿತ್ರರೂಪರಾಗಿ ಕಾಣುತ್ತಿದ್ದರು. ಪೊರೆಯನ್ನು ಕಳಚಿದ ಸರ್ಪಗಳಂತೆ ನಿರ್ಮಲವಾಗಿದ್ದ ಮತ್ತು ನೇರವಾಗಿ ಹೋಗುವ ನಾರಾಚಗಳ ಪರಸ್ಪರಸಂಘರ್ಷಣವು ಮಹಾಭಯಂಕರವಾಗಿದ್ದಿತು. ಇಬ್ಬರೂ ವಿಜಯಗಳಿಸುವ ಇಚ್ಛೆಯಿಂದಲೇ ಯುದ್ಧಮಾಡುತ್ತಿದ್ದರು. ಬಾಣಗಳ ಪರಸ್ಪರ ಪ್ರಹಾರದಿಂದಾಗಿ ಇಬ್ಬರ ರಥಗಳಲ್ಲಿದ್ದ ಛತ್ರಗಳೂ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದುವು. (ಇಬ್ಬರ ರಥಗಳ ಧ್ವಜಗಳೂ ಕೆಳಕ್ಕೆ ಬಿದ್ದುವು.) ದ್ರೋಣ-ಸಾತ್ಯಕಿಯರಿಬ್ಬರ ಶರೀರಗಳೂ ರಕ್ತದಿಂದ ತೋಯ್ದುಹೋಗಿದ್ದುವು.

ಇಬ್ಬರ ಶರೀರಗಳಿಂದಲೂ ರಕ್ತವು ಸ್ರವಿಸುತ್ತಿದ್ದು ಅವರಿಬ್ಬರೂ–ಮದೋದಕ ವನ್ನು ಸುರಿಸುತ್ತಿದ್ದ ಆನೆಗಳಂತೆಯೇ ಕಾಣುತ್ತಿದ್ದರು. ಜೀವಿತದ ಅಂತವನ್ನುಂಟುಮಾಡಲು ಸಮರ್ಥವಾದ ತೀಕ್ಷ್ಣಬಾಣಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಆ ಸಮಯದಲ್ಲಿ ಗರ್ಜನೆಗಳ ಶಬ್ದ ವಾಗಲೀ, ಕೂಗಿನ ಶಬ್ದವಾಗಲೀ, ಸಿಂಹನಾದಗಳ ಶಬ್ದವಾಗಲೀ, ಶಂಖ ಧ್ವನಿಗಳಾಗಲೀ, ನಗಾರಿಯ ಶಬ್ದವಾಗಲೀ ಎಲ್ಲಿಯೂ ಕೇಳಿಬರುತ್ತಿರಲಿಲ್ಲ. ಎಲ್ಲರೂ ದಿಗ್ಭ್ರಾಂತರಾಗಿ ನಿಂತು ರೋಮಾಂಚಕರವಾದ ದ್ರೋಣ-ಸಾತ್ಯಕಿ ಯರ ಯುದ್ಧವನ್ನು ನೋಡುತ್ತಿದ್ದರೇ ಹೊರತು ಯಾರೇ ಆಗಲೀ ಒಂದು ಮಾತನ್ನೂ ಆಡುತ್ತಿರಲಿಲ್ಲ. ಸೈನ್ಯಗಳೆಲ್ಲವೂ ಮೌನಧರಿಸಿ ನಿಂತುವು. ಎರಡೂ ಕಡೆಗಳ ಯೋಧರೂ ಯುದ್ಧದಿಂದ ವಿರಮಿತರಾದರು. ಕುತೂಹಲಾವಿಷ್ಟ ರಾದ ಅವರು ಆ ಇಬ್ಬರ ದ್ವೈರಥಯುದ್ಧವನ್ನು ಎವೆಯಿಕ್ಕದೇ ನೋಡುತ್ತಿ ದ್ದರು. ರಥಿಗಳು, ಗಜಸೈನಿಕರು, ಅಶ್ವಸೈನಿಕರು, ಪದಾತಿಗಳು-ಎಲ್ಲರೂ ದ್ರೋಣ-ಸಾತ್ಯಕಿಯರನ್ನು ಸುತ್ತುವರಿದು ಚಲಿಸದೇ ಇರುವ ಕಣ್ಣುಗಳಿಂದ (ನೆಟ್ಟದೃಷ್ಟಿಯಿಂದ) ಅದ್ಭುತವಾದ ಆ ಯುದ್ಧವನ್ನೇ ನೋಡುತ್ತಾ ನಿಂತುಬಿಟ್ಟರು. ವ್ಯೂಹಕ್ರಮದಲ್ಲಿ ನಿಂತಿದ್ದ ಗಜಾಶ್ವ-ರಥಸೈನಿಕರೂ ಸಹ ಪರಸ್ಪರವಾಗಿ ಯುದ್ಧಮಾಡದೇ ದ್ರೋಣ-ಸಾತ್ಯಕಿಯರ ಯುದ್ಧವನ್ನೇ ನೋಡುತ್ತಾ ಕಕ್ಕಾವಿಕ್ಕಿಯಾಗಿ ನಿಂತಿದ್ದರು.

ಮುತ್ತುಗಳಿಂದಲೂ ಹವಳಗಳಿಂದಲೂ ಚಿತ್ರಿತವಾಗಿದ್ದ, ಮಣಿ ಗಳಿಂದಲೂ ಸುವರ್ಣದಿಂದಲೂ ಸಮಲಂಕೃತವಾಗಿದ್ದ ಧ್ವಜಗಳಿಂದಲೂ, ವಿಚಿತ್ರವಾದ ಆಭರಣಗಳಿಂದಲೂ, ಸುವರ್ಣಮಯವಾದ ಕವಚ ಗಳಿಂದಲೂ, ವೈಜಯಂತಿಗಳಿಂದಲೂ (ಒಂದು ವಿಧವಾದ ಧ್ವಜ), ಪತಾಕೆಗಳಿಂದಲೂ, ಆನೆಗಳ ಮೇಲೆ ಹೊದ್ದಿಸುವ ರತ್ನಗಂಬಳಿಗಳಿಂದಲೂ, ಕಂಬಳಿಗಳಿಂದಲೂ, ಥಳ-ಥಳಿಸುವ ನಿಶಿತವಾದ ಶಸ್ತ್ರಗಳಿಂದಲೂ, ಕುದುರೆಗಳ ಚಾಮರಗಳಿಂದಲೂ, ಸುವರ್ಣಮಯವಾದ ಮತ್ತು ರಜತಮಯವಾದ ಆನೆಗಳ ತಲೆಯ ಪ್ರದೇಶದಲ್ಲಿದ್ದ ಕುಂಭಮಾಲೆ ಗಳಿಂದಲೂ, ಆನೆಯ ಕೊಂಬುಗಳಿಗೆ ಹಾಕಿರುವ ಬಳೆಗಳಿಂದಲೂ ಸಂವೃತ

ವಾಗಿದ್ದ ಉಭಯಪಕ್ಷಗಳ ಸೈನ್ಯಗಳೂ ವರ್ಷಾಕಾಲದಲ್ಲಿ ಬೆಳ್ಳಕ್ಕಿಗಳಿಂದಲೂ, ಮಿಂಚುಹುಳುಗಳಿಂದಲೂ, ಕಾಮನಬಿಲ್ಲುಗಳಿಂದಲೂ, ಮಿಂಚು ಗಳಿಂದಲೂ ಕೂಡಿದ ಮೇಘಗಳ ಕೂಟದಂತೆಯೇ ಪ್ರಕಾಶಿಸುತ್ತಿದ್ದುವು.

ನಮ್ಮ ಕಡೆಯವರೂ ಮತ್ತು ಯುಧಿಷ್ಠಿರನ ಕಡೆಯವರೂ ಯುಯುಧಾನನ ಮತ್ತು ಮಹಾತ್ಮರಾದ ದ್ರೋಣರ ಆ ಮಹಾಯುದ್ಧವನ್ನು ವೀಕ್ಷಿಸುತ್ತಿದ್ದರು. ಮಾನವರು ಮಾತ್ರವೇ ಅಲ್ಲ; ದ್ರೋಣ- ಯುಯುಧಾನರ ಪರಮಾದ್ಭುತವಾಗಿದ್ದ ಆ ಯುದ್ಧವನ್ನು ವಿಮಾನಗಳ ಮೇಲಿದ್ದ ಬ್ರಹ್ಮನೂ, ಸೋಮಪ್ರಮುಖರಾಗಿದ್ದ ದೇವತೆಗಳೂ, ಸಿದ್ಧ-ಚಾರಣರೂ, ವಿದ್ಯಾಧರರೂ, ದೊಡ್ಡ-ದೊಡ್ಡ ನಾಗರುಗಳೂ ಕುತೂಹಲಾವಿಷ್ಟರಾಗಿ ನೋಡುತ್ತಿದ್ದರು. ಆ ಮಹಾಯುದ್ಧಪ್ರೇಕ್ಷಕರು ಪುರುಷಸಿಂಹರಾದ ದ್ರೋಣ-ಸಾತ್ಯಕಿಯರ ವಿಚಿತ್ರರೂಪವಾದ ಗಮನ-ಪ್ರತ್ಯಾಗಮನ, ಅಸ್ತ್ರಪ್ರಹಾರ-ಪ್ರತ್ಯಸ್ತ್ರಗಳ ನಿವಾರಣೆ ಇವೇ ಮುಂತಾದ ವಿಧ-ವಿಧವಾದ ಚಿತ್ರ-ವಿಚಿತ್ರವಾದ ಯುದ್ಧಪ್ರಕ್ರಿಯೆಗಳಿಂದ ಬಹಳವಾಗಿ ವಿಸ್ಮಿತರಾದರು. ಮಹಾಬಲರಾದ ದ್ರೋಣ-ಸಾತ್ಯಕಿಯರು ಹಸ್ತಲಾಘವವನ್ನು (ಬಾಣಬಿಡುವುದರಲ್ಲಿ ತಮ್ಮ ಕೈಚಳಕವನ್ನು) ಪ್ರದರ್ಶಿಸುತ್ತಾ ಒಬ್ಬರು ಮತ್ತೊಬ್ಬರನ್ನು ಗಾಯಗೊಳಿ ಸುತ್ತಿದ್ದರು. ಅನಂತರ ದಾಶಾರ್ಹನು ದ್ವೈರಥಯುದ್ಧದಲ್ಲಿ, ಮಹಾದ್ಯುತಿ ಮಂತರಾದ ದ್ರೋಣರ ಬಾಣಗಳನ್ನು ಕತ್ತರಿಸಿ ಮರುಕ್ಷಣದಲ್ಲಿಯೇ ಸುದೃಢವಾದ ಹಲವು ಬಾಣಗಳಿಂದ ದ್ರೋಣರ ಧನುಸ್ಸನ್ನೂ ಕತ್ತರಿಸಿದನು. ನಿಮೇಷಾಂತರಮಾತ್ರದಲ್ಲಿಯೇ (ಕಣ್ಣುರೆಪ್ಪೆ ಹೊಡೆಯುವಷ್ಟರಲ್ಲಿ) ಭಾರದ್ವಾಜರು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಶಿಂಜಿನಿಯನ್ನು ಬಿಗಿದು ಸಜ್ಜುಗೊಳಿಸಿದರು. ಅದನ್ನೂ ಸಹ ಅಷ್ಟೇ ವೇಗದಲ್ಲಿ ಸಾತ್ಯಕಿಯು ಕತ್ತರಿಸಿಬಿಟ್ಟನು. ಪುನಃ ದ್ರೋಣರು ತ್ವರೆಯಿಂದ ಮತ್ತೊಂದು ನೂತನವಾದ ಧನುಸ್ಸನ್ನು ತೆಗೆದುಕೊಂಡರು. ಅದನ್ನೂ ಸಾತ್ಯಕಿಯು ಕತ್ತರಿಸಿಬಿಟ್ಟನು. ಪುನಃ ದ್ರೋಣರು ಹೊಸ-ಹೊಸ ಧನುಸ್ಸುಗಳನ್ನು ಸಜ್ಜುಗೊಳಿಸುತ್ತಿದ್ದಂತೆಲ್ಲಾ ಸಾತ್ಯಕಿಯು ಆ ಧನುಸ್ಸುಗಳನ್ನೂ ಕತ್ತರಿಸುತ್ತಲೇ ಇದ್ದನು. ಈ ರೀತಿಯಲ್ಲಿ ದೃಢಧನ್ವನಾದ ಸಾತ್ಯಕಿಯು ದ್ರೋಣರ ಒಂದು ನೂರು ಧನುಸ್ಸುಗಳನ್ನು

ಕತ್ತರಿಸಿದನು. ಆದರೆ ದ್ರೋಣರು ಧನುಸ್ಸುಗಳನ್ನು ಸಜ್ಜುಗೊಳಿಸುತ್ತಿದ್ದುದು ಮತ್ತು ಸಾತ್ಯಕಿಯು ಆ ಧನುಸ್ಸುಗಳನ್ನು ಕತ್ತರಿಸುತ್ತಿದ್ದುದು ಈ ಕ್ರಿಯೆಗಳಲ್ಲಿ ಯಾವ ಅಂತರವೂ ಪ್ರೇಕ್ಷಕರಿಗೆ ಕಾಣುತ್ತಲೇ ಇರಲಿಲ್ಲ. (ಕತ್ತರಿಸಿ ಬಿದ್ದಿದ್ದ ಧನುಸ್ಸುಗಳ ರಾಶಿಯನ್ನು ಮಾತ್ರವೇ ಪ್ರೇಕ್ಷಕರು ಅಚ್ಚರಿಯಿಂದ ನೋಡುತ್ತಿದ್ದರು.) ಅನಂತರ ದ್ರೋಣರು ಯುಯುಧಾನನ ಅತಿಮಾನುಷ ವಾದ ಕರ್ಮವನ್ನು ನೋಡಿ ಮನಸ್ಸಿನಲ್ಲಿಯೇ ಹೀಗೆ ಚಿಂತಿಸಿದರು:

**ಏತದಸ್ತ್ರಬಲಂ ರಾಮೇ ಕಾರ್ತವೀರ್ಯೇ ಧನಂಜಯೇ।**
**ಭೀಷ್ಮೇ ಚ ಪುರುಷವ್ಯಾಘ್ರೇ ಯದಿದಂ ಸಾತ್ವತಾಂ ವರೇ ॥೪೧॥**

'ಸಾತ್ವತಕುಲಾವತಂಸನಾದ ಈ ಸಾತ್ಯಕಿಯಲ್ಲಿರುವ ಅಮೋಘವಾದ ಅಸ್ತ್ರಬಲವನ್ನು ಪರಶುರಾಮನಲ್ಲಿ, ಕಾರ್ತವೀರ್ಯನಲ್ಲಿ, ಧನಂಜಯನಲ್ಲಿ ಮತ್ತು ಭೀಷ್ಮನಲ್ಲಿ ಮಾತ್ರವೇ ನಾನು ಕಂಡಿದ್ದೇನೆ'–ಹೀಗೆಂಬುದಾಗಿ ದ್ರೋಣರು ಚಿಂತಿಸಿ ಸಾತ್ಯಕಿಯ ಪರಾಕ್ರಮವನ್ನು ಮನಸ್ಸಿನಲ್ಲೇ ಶ್ಲಾಘಿಸಿದರು. ಇಂದ್ರನ ಹಸ್ತಲಾಘವಕ್ಕೆ ಸದೃಶವಾದ ಸಾತ್ಯಕಿಯ ಹಸ್ತಲಾಘವವನ್ನೂ ಮತ್ತು ಪರಾಕ್ರಮವನ್ನೂ ನೋಡಿ ದ್ವಿಜಶ್ರೇಷ್ಠರಾದ, ಅಸ್ತ್ರವಿದರಲ್ಲಿ ಅಗ್ರಗಣ್ಯರಾದ ದ್ರೋಣರೂ–ಇಂದ್ರಸಹಿತರಾದ ದೇವತೆಗಳೂ ಸಂತೋಷಪಟ್ಟರು. ಬಾಣಗಳನ್ನು ಬಿಡುತ್ತಾ ಶೀಘ್ರವಾಗಿ ಸಂಚರಿಸುತ್ತಿದ್ದ ಯುಯುಧಾನನ ಹಸ್ತಲಾಘವವನ್ನು ದೇವತೆಗಳಾಗಲೀ, ಗಂಧರ್ವರಾಗಲೀ, ಸಿದ್ಧ-ಚಾರಣ ರಾಗಲೀ ಆ ಮೊದಲು ಕಂಡಿರಲೇ ಇಲ್ಲ. ಅವರೆಲ್ಲರೂ ಅಂತಹ ಕೈಚಳಕವು ದ್ರೋಣರಿಗೆ ಮಾತ್ರವೇ ಇರುವುದೆಂದು ಅದುವರೆಗೂ ಭಾವಿಸಿದ್ದರು.

ಅಸ್ತ್ರವಿದರಲ್ಲಿ ಶ್ರೇಷ್ಠರಾದ, ಕ್ಷತ್ರಿಯಮರ್ದನರಾದ ದ್ರೋಣರು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಸಾತ್ಯಕಿಯೊಡನೆ ಯುದ್ಧಮಾಡಲು ಉಪಕ್ರಮಿಸಿದರು. ಸಾತ್ಯಕಿಯು ಪುನಃ ತನ್ನ ಅಸ್ತ್ರಗಳ ಮಾಯೆಯಿಂದ ಆಚಾರ್ಯರು ಬಿಟ್ಟ ಅಸ್ತ್ರಗಳೆಲ್ಲವನ್ನೂ ನಿರಸನಗೊಳಿಸಿ ನಿಶಿತವಾದ ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಅವನ ಆ ಕಾರ್ಯವು ನಮಗೆ ಪರಮಾದ್ಭುತವಾಗಿ ಕಂಡಿತು. ಸಾತ್ಯಕಿಯ ಅತಿಮಾನುಷವಾದ, ಅಸದೃಶವಾದ ಮತ್ತು ಯುಕ್ತಿಯುಕ್ತವಾದ ಬಾಣಪ್ರಹಾರಕರ್ಮವನ್ನು ನೋಡಿ ರಣಕೌಶಲವನ್ನು ಚೆನ್ನಾಗಿ ತಿಳಿದಿದ್ದ ನಿನ್ನ ಕಡೆಯ ಯೋಧಶ್ರೇಷ್ಠರು

ಸಾತ್ಯಕಿಯನ್ನು ಬಹಳವಾಗಿ ಪ್ರಶಂಸಿಸಿದರು. ಆಚಾರ್ಯದ್ರೋಣರು ಯಾವ ಯಾವ ಅಸ್ತ್ರಗಳನ್ನು ಬಿಡುತ್ತಿದ್ದರೋ ಅದೇ ಅಸ್ತ್ರಗಳನ್ನೇ ಸಾತ್ಯಕಿಯೂ ಬಿಡುತ್ತಿದ್ದನು. ಶತ್ರುತಾಪನರಾದ ಆಚಾರ್ಯರೂ ಸಹ ಯಾವ ವಿಧವಾದ ಗಾಬರಿಯೂ ಇಲ್ಲದೇ ಸಾತ್ಯಕಿಯೊಡನೆ ಯುದ್ಧಮಾಡುತ್ತಿದ್ದರು.

ಮಹಾರಾಜ! ಧನುರ್ವೇದಪಾರಂಗತರಾದ ದ್ರೋಣರು ಬಹಳ ಕ್ರುದ್ಧರಾಗಿ ಯುಯುಧಾನನ ವಧೆಗಾಗಿಯೇ ಒಂದು ದಿವ್ಯಾಸ್ತ್ರವನ್ನು ಹೊರತೆಗೆದರು. ಆಚಾರ್ಯರು ಮಹಾಘೋರವಾದ, ಶತ್ರುಹಂತಕವಾದ ಆಗ್ನೇಯಾಸ್ತ್ರವನ್ನು ಪ್ರಕಟಿಸಿದುದನ್ನು ಕಂಡು ಮಹಾಧನುಷ್ಮಂತನಾದ ಸಾತ್ಯಕಿಯು ದಿವ್ಯವಾದ ವಾರುಣಾಸ್ತ್ರವನ್ನು ಪ್ರಕಟಿಸಿದನು. ಆ ಇಬ್ಬರು ಮಹಾರಥರೂ ದಿವ್ಯಾಸ್ತ್ರಗಳನ್ನು ಧರಿಸಿರುವುದನ್ನು ನೋಡಿ ಸೈನ್ಯಸಮೂಹದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಆ ಸಮಯದಲ್ಲಿ ಆಕಾಶಗಾಮಿಗಳಾದ ಪ್ರಾಣಿಗಳಾವುವೂ ಆಕಾಶದಲ್ಲಿ ಸಂಚರಿಸುತ್ತಿರಲಿಲ್ಲ.

ದ್ರೋಣ-ಸಾತ್ಯಕಿಯರ ಆಗ್ನೇಯ-ವಾರುಣಾಸ್ತ್ರಗಳು ಅವರು ಸಂಧಾನಿಸಿದ್ದ ಬಾಣಗಳಲ್ಲಿ ಸಮಾಹಿತವಾಗಿರಲಾಗಿ, ಆ ಇಬ್ಬರಲ್ಲಿ ಯಾರೊಬ್ಬರೂ ಪರಾಭೂತರಾಗದಿರಲಾಗಿ, ಸೂರ್ಯನು ಪಶ್ಚಿಮ ಸಮುದ್ರದ ಕಡೆಗೆ ಇಳಿದನು. (ದ್ರೋಣರು ಬಿಟ್ಟ ಆಗ್ನೇಯಾಸ್ತ್ರವು ಸಾತ್ಯಕಿಯು ಬಿಟ್ಟ ವಾರುಣಾಸ್ತ್ರದಿಂದ ಉಪಶಮನಹೊಂದಿತು. ಆದುದರಿಂದ ಇಬ್ಬರಲ್ಲಿ ಯಾರೊಬ್ಬರೂ ಪರಾಜಿತರಾಗಲಿಲ್ಲ.) ಅನಂತರ ಯುಧಿಷ್ಠಿರರಾಜನೂ, ಪಾಂಡುಪುತ್ರನಾದ ಭೀಮಸೇನನೂ, ನಕುಲ-ಸಹದೇವರೂ ಸಾತ್ಯಕಿಯನ್ನು ಎಲ್ಲ ಕಡೆಗಳಿಂದಲೂ ಸಂರಕ್ಷಿಸಲು ಮುಂದೆ ಬಂದರು. ಧೃಷ್ಟದ್ಯುಮ್ನನೇ ಮೊದಲಾದ ವೀರರೊಡನೆ ವಿರಾಟ, ಕೇಕಯ ರಾಜಕುಮಾರರು, ಮತ್ಸ್ಯರು, ಶಾಲ್ವದೇಶದ ಸೈನಿಕರು ಇವರೆಲ್ಲರೂ ತ್ವರೆಯಿಂದ ದ್ರೋಣರನ್ನು ಆಕ್ರಮಿಸಿದರು.

ಇತ್ತಲಾಗಿ ಶತ್ರುಗಳಿಂದ ಆಕ್ರಮಿತರಾಗಿದ್ದ ದ್ರೋಣರನ್ನು ರಕ್ಷಿಸಲು ದುಃಶಾಸನಪುರಃಸರರಾದ ಸಾವಿರಾರು ರಾಜಪುತ್ರರು ದ್ರೋಣರ ಸಮೀಪಕ್ಕೆ ಬಂದರು. ಅನಂತರ ನಿನ್ನ ಕಡೆಯವರಿಗೂ ಮತ್ತು ಪಾಂಡವರ ಕಡೆಯವರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು.

ರಣಾಂಗಣವು ಬಾಣಗಳ ಸಮೂಹಗಳಿಂದಲೂ ಮತ್ತು ಧೂಳಿನಿಂದಲೂ ಆಚ್ಛಾದಿತವಾಯಿತು. ಆ ಸಮಯದಲ್ಲಿ ಎಲ್ಲರೂ ಕಷ್ಟಕ್ಕೊಳಗಾದಂತೆ ಕಾಣುತ್ತಿದ್ದರು. ಸೈನಿಕರ ಮೂಲಕವಾಗಿ ಉದ್ಭೂತವಾದ ಧೂಳಿನಿಂದ ಆಗ ಎಲ್ಲಿ ಏನು ನಡೆಯುತ್ತಿದೆ? ಎಂಬುದೊಂದೂ ತಿಳಿಯುತ್ತಲೇ ಇರಲಿಲ್ಲ. ಅದರಿಂದಾಗಿ ಯುದ್ಧಮರ್ಯಾದೆಯನ್ನೇ ಮೀರಿದ ಕಾಳಗವು ಪ್ರಾರಂಭ ವಾಯಿತು."

೯೮ನೆಯ ಅಧ್ಯಾಯವು ಮುಗಿಯಿತು.

೯೯ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಅರ್ಜುನನು ವೇಗವಾಗಿ ಕೌರವರ ವ್ಯೂಹವನ್ನು ಪ್ರವೇಶಿಸಿದುದು: ವಿಂದಾನುವಿಂದರ ವಧೆ: ಅದ್ಭುತವಾದ ಜಲಾಶಯದ ನಿರ್ಮಾಣ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಸೂರ್ಯನು ಅಸ್ತಾಚಲದ ಕಡೆಗೆ ವಾಲಿದ್ದನು. ರಣರಂಗದಲ್ಲಿ ಉದ್ಭೂತವಾಗಿದ್ದ ಧೂಳಿನಿಂದಲೂ ಸೂರ್ಯನು ಸಂವೃತನಾಗಿದ್ದುದರಿಂದ ಅವನ ರಶ್ಮಿಗಳು ಮಸುಕಾಗಿ ಕಾಣುತ್ತಿದ್ದುವು. ರಣಾಂಗಣದಲ್ಲಿ ಕೆಲವು ಸೈನಿಕರು ಯುದ್ಧವನ್ನು ನೋಡುತ್ತಾ ನಿಂತಿದ್ದರು. ಕೆಲವರು ಯುದ್ಧದಲ್ಲಿ ತೊಡಗಿದ್ದರು. ಪ್ರಹಾರವನ್ನು ತಡೆದುಕೊಳ್ಳಲಾರದೇ ರಣರಂಗವನ್ನು ಬಿಟ್ಟುಹೋಗಿದ್ದ ಅನೇಕ ಸೈನಿಕರು ಪುನಃ ಹಿಂದಿರುಗುತ್ತಿದ್ದರು. ಮತ್ತೆ ಕೆಲವರು ಎದುರಾಳಿಯನ್ನು ಪರಾಜಯಗೊಳಿಸಿ ಓಡಿಸುತ್ತಿದ್ದರು. ಈ ರೀತಿಯಲ್ಲಿ ಆ ದಿವಸವು ಅರಿವಿಲ್ಲದಂತೆಯೇ ನಿಧಾನವಾಗಿ ಕಳೆದು ಹೋಗುತ್ತಿದ್ದಿತು. ವಿಜಯೇಚ್ಛುಗಳಾದ ಸೈನಿಕರು ಪರಸ್ಪರವಾಗಿ ಯುದ್ಧದಲ್ಲಿ ತೊಡಗಿರಲಾಗಿ, ಅರ್ಜುನ-ಕೃಷ್ಣರು ಸೈಂಧವನನ್ನೇ ಅರಸಿಕೊಂಡು ಹೊರಟರು. ಕುಂತಿಯ ಮಗನಾದ ಅರ್ಜುನನು ತನ್ನ ನಿಶಿತವಾದ ಬಾಣಗಳಿಂದ ತನ್ನ ರಥವು ಹೋಗಲು ಸಾಧ್ಯವಾಗುವಂತೆ ಒಂದು ಹಾದಿಯನ್ನೇ ನಿರ್ಮಿಸಿದನು. ಆ ಮಾರ್ಗದ ಮೂಲಕವಾಗಿಯೇ ಜನಾರ್ದನನು ಮುನ್ನಡೆಯುತ್ತಿದ್ದನು. ರಥವು ಹೋಗುತ್ತಿದ್ದ ಹಾದಿಯನ್ನು ಸುಗಮಮಾಡುವ ಸಲುವಾಗಿ ಮಹಾತ್ಮನಾದ ಅರ್ಜುನನು ಆ ಹಾದಿ

ಯಲ್ಲಿರುತ್ತಿದ್ದ ನಿನ್ನ ಸೈನಿಕರನ್ನು ವಿಧ್ವಂಸನಮಾಡುತ್ತಾ, ತನ್ನ ಕುದುರೆಗಳನ್ನು ಮುನ್ನುಗ್ಗಿಸಿಕೊಂಡು ಮುಂದೆ ಮುಂದೆ ಹೋಗುತ್ತಿದ್ದನು.



ದಶಾರ್ಹಕುಲಾವತಂಸನಾದ, ಪರಾಕ್ರಮಿಯಾದ ಶ್ರೀಕೃಷ್ಣನು ಉತ್ತಮ-ಮಧ್ಯಮಾಧಮಗಳೆಂಬ ಮೂರು ವಿಧವಾದ ಮಂಡಲಗಳನ್ನು ತೋರಿಸುತ್ತಾ ರಥನಿಯಂತ್ರಣದಲ್ಲಿ ತನಗಿದ್ದ ಪಾಂಡಿತ್ಯವನ್ನು ಪ್ರದರ್ಶಿಸುತ್ತಿದ್ದನು.

ಮಹಾತ್ಮನಾದ ಅರ್ಜುನನ ಬಾಣಗಳ ಸ್ವರೂಪವನ್ನು ಹೇಳುತ್ತೇನೆ ಕೇಳು; ಧೃತರಾಷ್ಟ್ರ!

ಅವನ ಬಾಣಗಳ ಮೇಲೆ ಅರ್ಜುನ ಎಂಬ ಹೆಸರು ಅಂಕಿತವಾಗಿದ್ದಿತು. ಅವುಗಳು *ಪೀತ (ಹೊಂಬಣ್ಣ) ವರ್ಣವಾಗಿದ್ದುವು. ಎಣ್ಣೆಯನ್ನು ಚೆನ್ನಾಗಿ

---

*ಪೀತ :- ಹೊಂಬಣ್ಣದುವುಗಳು ಎಂದು ಸಾಮಾನ್ಯವಾಗಿ ಅರ್ಥವಾಗುತ್ತದೆ. ಆದರೆ ಎಲ್ಲ ಬಾಣಗಳೂ ಹೊಂಬಣ್ಣವಾಗಿಯೇ ಇರಲು ಸಾಧ್ಯವಿಲ್ಲ. ಲೋಹದಿಂದ ಮತ್ತು ಬಿದಿರಿನಿಂದ ಮಾಡಲ್ಪಟ್ಟ ಬಾಣಗಳ ಉಲ್ಲೇಖವು ಈ ಪ್ರಕರಣದಲ್ಲಿಯೇ ಇದೆ. ಚಿನ್ನದ ರೆಕ್ಕೆಗಳಿದ್ದುವು ಎಂಬ ವರ್ಣನೆಯಿರುವುದರಿಂದ ಹೊಂಬಣ್ಣವೆಂಬುದು ಹೊಂದಿಕೊಳ್ಳುತ್ತದೆ. ಆದರೆ ಪೀತಾಃ ಎಂಬುದಕ್ಕೆ 'ಪಾನಮಾಡಲ್ಪಟ್ಟ' ಎಂದು

ಕುಡಿದಿದ್ದುವು. ಕಾಲಾಗ್ನಿಸದೃಶವಾಗಿದ್ದುವು. ನರಗಳಿಂದ ಬಂಧಿಸಲ್ಪಟ್ಟಿದ್ದುವು. ಸುಂದರವಾದ ರೆಕ್ಕೆಗಳನ್ನು ಹೊಂದಿದ್ದುವು. ದಪ್ಪವಾಗಿದ್ದುವು. ಬಹಳ ದೂರದವರೆಗೆ ಹೋಗುತ್ತಿದ್ದುವು. ಬಿದಿರಿನಿಂದಲೂ ಮತ್ತು ಲೋಹ ದಿಂದಲೂ ಮಾಡಲ್ಪಟ್ಟಿದ್ದುವು. ಉಗ್ರವಾಗಿದ್ದುವು. ನಾನಾಪ್ರಕಾರವಾಗಿ ಶತ್ರುಗಳನ್ನು ಸಂಹರಿಸುತ್ತಿದ್ದುವು. ಆ ಬಾಣಗಳೂ ಸಹ ಪಕ್ಷಿಗಳೊಡನೆ ಪ್ರಾಣಿಗಳ ರಕ್ತವನ್ನು ಹೀರುತ್ತಿದ್ದುವು. ಇಂತಹ ದಿವ್ಯವಾದ ಬಾಣಗಳನ್ನು ಅರ್ಜುನನು ಹೊಂದಿದ್ದನು.

**ರಥಸ್ಥಿತೋಽಗ್ರತಃ ಕ್ರೋಶಂ ಯಾನಸ್ಯತ್ಯರ್ಜುನಃ ಶರಾನ್ ।**
**ರಥೇ ಕ್ರೋಶಮತಿಕ್ರಾನ್ತೇ ತಸ್ಯ ತೇ ಘ್ನನ್ತಿ ಶಾತ್ರವಾನ್ ॥೯॥**

(ಅರ್ಜುನನ ರಥದ ವೇಗವೆಷ್ಟಿತ್ತೆಂಬುದನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ.)

ಮಹಾರಾಜ! ರಥದಲ್ಲಿ ಕುಳಿತು ಅರ್ಜುನನು * ಒಂದು ಕ್ರೋಶದಷ್ಟು ದೂರದವರೆಗೂ ಬಾಣಗಳನ್ನು ಬಿಡುತ್ತಿದ್ದನು. ಅರ್ಜುನನ ರಥವು ಒಂದು ಕ್ರೋಶದಷ್ಟು ದೂರವನ್ನು ಅತಿಕ್ರಮಿಸಿ ಹೋದನಂತರ ಅರ್ಜುನನ ಬಾಣವು ಶತ್ರುವನ್ನು ಸಂಹರಿಸುತ್ತಿದ್ದಿತು. ಅರ್ಥಾತ್ ಬಾಣಗಳ ವೇಗಕ್ಕಿಂತಲೂ ರಥದ ವೇಗವೇ ಅಧಿಕವಾಗಿದ್ದಿತು. ಆ ಸಮಯದಲ್ಲಿ ಶ್ರೀಕೃಷ್ಣನು ಹೆಚ್ಚು ಭಾರವನ್ನು ಹೊರಲು ಸಮರ್ಥವಾಗಿದ್ದ, ಗರುಡ ಮತ್ತು ಮಾರುತರ ವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಅಶ್ವಗಳನ್ನು ನಿಯಂತ್ರಿಸುತ್ತಾ ಸಮಸ್ತಜಗತ್ತನ್ನೂ ಆಶ್ಚರ್ಯಚಕಿತ ವನ್ನಾಗಿ ಮಾಡುತ್ತಾ ಗಮಿಸಿದನು. ಅರ್ಜುನನ ರಥದಷ್ಟು ವೇಗವಾಗಿ ಸೂರ್ಯನ ರಥವಾಗಲೀ, ಇಂದ್ರನ ರಥವಾಗಲೀ, ರುದ್ರನ ರಥವಾಗಲೀ,

---

ಮತ್ತೊಂದು ಅರ್ಥವೂ ಇದೆ. ನೀರು ಕುಡಿದಿದ್ದು ಅಥವಾ ಎಣ್ಣೆಯನ್ನು ಕುಡಿದಿದ್ದು. ನೀರು ಕುಡಿಯುವುದು ಎಂದರೆ ಪ್ರಯೋಗಕ್ಕೆ ಮೊದಲು ನೀರಿನಲ್ಲಿ ಅದ್ದುವುದು. ಎಣ್ಣೆಯಲ್ಲಾಗಲೀ ನೀರಿನಲ್ಲಾಗಲೀ ಬಾಣಗಳನ್ನು ಅದ್ದಿ ಪ್ರಯೋಗಿಸಿದರೆ ಶರೀರದೊಳಕ್ಕೆ ಬಾಣಗಳು ಆಳವಾಗಿ ನಾಟಿಕೊಳ್ಳುತ್ತವೆ. ಆದುದರಿಂದ ಪೀತಾಃ ಎಂಬುದಕ್ಕೆ 'ನೀರನ್ನು ಅಥವಾ ಎಣ್ಣೆಯನ್ನು ಕುಡಿದಿರುವ' – ಎಂಬ ಅರ್ಥವೂ ಸಮಂಜಸವಾಗಿಯೇ ಕಾಣುತ್ತದೆ.

*ಕ್ರೋಶ :- ೩ ಮೈಲಿಗಳಷ್ಟು ದೂರ.

ಕುಬೇರನ ರಥವಾಗಲೀ ಹೋಗುತ್ತಿರಲಿಲ್ಲ. ಮನಸ್ಸಿನಲ್ಲಿ ಇಚ್ಛಿಸಿದಷ್ಟು ಶೀಘ್ರವಾಗಿ ಹೋಗುವ (ಮನೋವೇಗದಿಂದ ಹೋಗುವ) ಅರ್ಜುನನ ರಥಕ್ಕೆ ಅನುರೂಪವಾದ ಮತ್ತೊಂದು ರಥವು ಹಿಂದೆಯೂ ಯಾರಲ್ಲಿಯೂ ಇರಲಿಲ್ಲ.

ಮಹಾರಾಜ! ಶತ್ರುವೀರಹಂತಕನಾದ ಕೇಶವನು ರಣಾಂಗಣದಲ್ಲಿ ಕೌರವಸೇನಾವ್ಯೂಹವನ್ನು ಪ್ರವೇಶಿಸಿ ಸೈನ್ಯದ ಮಧ್ಯಭಾಗಕ್ಕೆ ರಥವನ್ನೊಯ್ಯಲು ಕುದುರೆಗಳನ್ನು ಚಪ್ಪರಿಸಿದನು. ಕೌರವರ ರಥಗಳ ಸಮೂಹದ ಮಧ್ಯಭಾಗವನ್ನು ಪ್ರವೇಶಿಸಿದ ಅರ್ಜುನನ ಶ್ರೇಷ್ಠವಾದ ಆ ಕುದುರೆಗಳು ಹಸಿವಿನಿಂದಲೂ ಬಾಯಾರಿಕೆಯಿಂದಲೂ ಬಳಲಿಬೆಂಡಾಗಿ ಬಹಳ ಕಷ್ಟದಿಂದ ರಥದ ಭಾರವನ್ನು ವಹಿಸಿ ನಿಂತಿದ್ದುವು. ಯುದ್ಧಕುಶಲರಾದ ಅನೇಕ ಯೋಧರ ಬಾಣಗಳಿಂದ ಅನೇಕಬಾರಿ ಆ ಕುದುರೆಗಳು ಕ್ಷತ-ವಿಕ್ಷತ ವಾಗಿದ್ದುವು. ಶ್ರೀಕೃಷ್ಣನ ಚೋದನೆಯಂತೆ ಉತ್ತಮ-ಮಧ್ಯಮಾಧಮಗಳೆಂಬ ಮಂಡಲಗಳ ಕ್ರಮದಲ್ಲಿಯೇ ಸುತ್ತುತ್ತಾ ಸಂಚರಿಸುತ್ತಿದ್ದುವು. (ಈ ಕಾರಣದಿಂದ ಅವುಗಳಿಗೆ ಬಹಳ ಆಯಾಸವಾಗಿದ್ದಿತು.) ಅದೂ ಅಲ್ಲದೇ ಅರ್ಜುನನ ಕುದುರೆಗಳು ರಣಾಂಗಣದಲ್ಲಿ ಪರ್ವತಾಕಾರವಾಗಿ ಸತ್ತುಬಿದ್ದಿದ್ದ ಕುದುರೆ-ಆನೆ-ರಥ ಮತ್ತು ಪದಾತಿಗಳ ಮೇಲೆ ಸಾವಿರಾರು ಸಲ ನೆಗೆದುಕೊಂಡೇ ಓಡಾಡುತ್ತಿದ್ದುವು. ಈ ಕಾರಣದಿಂದಲೂ ಅವುಗಳು ಬಹಳವಾಗಿ ಬಳಲಿದ್ದುವು.

ಅದೇ ಸಮಯದಲ್ಲಿಯೇ ಬಳಲಿದ ವಾಹನಗಳಿಂದ ಕೂಡಿದ್ದ ಅರ್ಜುನನನ್ನು ಅವಂತಿದೇಶದ ಸಹೋದರರಾದ ವಿಂದಾನುವಿಂದರು ಸೈನ್ಯಸಮೇತರಾಗಿ ಆಕ್ರಮಿಸಿದರು. ಸಂತೋಷಯುಕ್ತರಾಗಿದ್ದ ಅವರು ಅರ್ಜುನನನ್ನು ಅರುವತ್ತು ನಾಲ್ಕು ಬಾಣಗಳಿಂದಲೂ, ಜನಾರ್ದನನನ್ನು ಎಪ್ಪತ್ತು ಬಾಣಗಳಿಂದಲೂ, ಅರ್ಜುನನ ಕುದುರೆಗಳನ್ನು ನೂರು ಬಾಣಗಳಿಂದಲೂ ಪ್ರಹರಿಸಿದರು. ಮರ್ಮಜ್ಞನಾದ ಅರ್ಜುನನು ಆ ಇಬ್ಬರು ಸಹೋದರರನ್ನೂ ಮರ್ಮಸ್ಥಳಗಳನ್ನು ಭೇದಿಸುವ ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ಪ್ರಹರಿಸಿದನು. ಅದರಿಂದ ಮಹಾಕೋಪಿಷ್ಠರಾದ ಅವಂತೀಸಹೋದರರು ಬಾಣಗಳ ಸಮೂಹದಿಂದ ಕೇಶವಸಹಿತನಾದ

ಅರ್ಜುನನನ್ನು ಮುಚ್ಚಿ ಸಿಂಹನಾದಗಳನ್ನೂ ಮಾಡಿದರು. ಅದಕ್ಕೆ ಪ್ರತಿಯಾಗಿ ಶ್ವೇತವಾಹನನು ವಿಂದಾನುವಿಂದರ ಚಿತ್ರಯುಕ್ತವಾದ ಧನುಸ್ಸುಗಳನ್ನು ಭಲ್ಲಗಳಿಂದ ಕತ್ತರಿಸಿ, ಮರುಕ್ಷಣದಲ್ಲಿಯೇ ಚಿನ್ನದಂತೆ ಪ್ರಕಾಶಮಾನವಾಗಿದ್ದ ಅವರ ಧ್ವಜಗಳನ್ನೂ ಕತ್ತರಿಸಿದನು. ಅರ್ಜುನನ ಆ ಕ್ರಿಯೆಯಿಂದ ಮತ್ತಷ್ಟು ಕೋಪಗೊಂಡ ಅವಂತೀರಾಜಕುಮಾರರು ಬೇರೆಯ ಧನುಸ್ಸುಗಳನ್ನು ತೆಗೆದುಕೊಂಡು ನಿಶಿತವಾದ ಬಾಣಗಳಿಂದ ಅರ್ಜುನನನ್ನು ಬಹಳವಾಗಿ ಗಾಯಗೊಳಿಸಿದರು. ಅದರಿಂದ ಪರಮಕ್ರುದ್ಧನಾದ ಅರ್ಜುನನು ಎರಡು ಬಾಣಗಳಿಂದ ಆ ಇಬ್ಬರ ಧನುಸ್ಸುಗಳನ್ನೂ ಪುನಃ ಕತ್ತರಿಸಿದನು. ಅಲ್ಲದೇ ಅರ್ಜುನನು ಮಸೆಗಲ್ಲಿನಿಂದ ಚೂಪಾಗಿಮಾಡಿದ್ದ, ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಇತರ ಅನೇಕ ಬಾಣಗಳಿಂದ ವಿಂದಾನುವಿಂದರ ಕುದುರೆಗಳನ್ನೂ, ಸೂತರನ್ನೂ, ಪಾರ್ಶ್ವರಕ್ಷಕರನ್ನೂ ಮತ್ತು ಅವರ ಅನುಯಾಯಿಗಳನ್ನೂ ಸಂಹರಿಸಿದನು. ಅನಂತರ ರಾಜಕುಮಾರರಲ್ಲಿ ಜ್ಯೇಷ್ಠನಾದ ವಿಂದನ ತಲೆಯನ್ನು ಕ್ಷುರಪ್ರದ ಮೂಲಕವಾಗಿ ಶರೀರದಿಂದ ಬೇರ್ಪಡಿಸಿದನು. ಚಂಡಮಾರುತದಿಂದ ಬುಡಮೇಲಾಗಿ ಬಿದ್ದ ವೃಕ್ಷದಂತೆ ವಿಂದನು ಅರ್ಜುನನ ಬಾಣದಿಂದ ಹತನಾಗಿ ಭೂಮಿಯ ಮೇಲೆ ಬಿದ್ದನು.

ಮಹಾರಾಜ! ಅರ್ಜುನನ ಬಾಣಗಳಿಂದ ವಿಂದನು ಹತನಾದುದನ್ನು ಕಂಡು ಪ್ರತಾಪವಂತನಾದ, ಅವನ ತಮ್ಮನಾದ ಅನುವಿಂದನು ಕುದುರೆಗಳಿಂದ ವಿಹೀನವಾಗಿದ್ದ ರಥವನ್ನು ಬಿಟ್ಟು ಕೆಳಗಿಳಿದು ಗದೆಯನ್ನು ಹಿಡಿದು ಅಣ್ಣನ ವಧೆಯನ್ನೇ ಸ್ಮರಿಸುತ್ತಾ ರೋಷಾವೇಷದಿಂದ ಅರ್ಜುನನ ಕಡೆಗೆ ನುಗ್ಗಿದನು. ರಥಿಗಳಲ್ಲಿ ಶ್ರೇಷ್ಠನಾದ, ಮಹಾರಥನಾದ, ಕ್ರುದ್ಧನಾಗಿದ್ದ ಅನುವಿಂದನು ಗದೆಯನ್ನು ಹಿಡಿದು ನಾಟ್ಯವಾಡುತ್ತಿರುವನೋ ಎಂಬಂತೆ ವರಸೆ-ವರಸೆಯಾಗಿ ಗದೆಯನ್ನು ತಿರುಗಿಸುತ್ತಾ ಮುಂದೆ ಬಂದು ಮಾಧವನ ನೆತ್ತಿಯ ಮೇಲೆ ಪ್ರಹರಿಸಿದನು. ಆದರೆ ಮೈನಾಕಪರ್ವತವನ್ನು ಕಂಪನಗೊಳಿಸಲು ಸಾಧ್ಯವಾಗದಂತೆ–ಅನುವಿಂದನ ಗದಾಪ್ರಹಾರವು ಶ್ರೀಕೃಷ್ಣನನ್ನು ಕಂಪನಗೊಳಿಸಲು ಸಮರ್ಥವಾಗಲಿಲ್ಲ. ಒಡನೆಯೇ ಅರ್ಜುನನು ಆರು ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಒಂದು ಬಾಣದಿಂದ ಅನುವಿಂದನ ಕುತ್ತಿಗೆಯನ್ನೂ, ಎರಡು ಬಾಣಗಳಿಂದ ಎರಡು ಪಾದಗಳನ್ನೂ,

ಮತ್ತೆರಡು ಬಾಣಗಳಿಂದ ಭುಜಗಳನ್ನೂ ಉಳಿದೊಂದು ಬಾಣದಿಂದ ಅವನ ಶಿರಸ್ಸನ್ನೂ ಕತ್ತರಿಸಿಬಿಟ್ಟನು.

ಈ ರೀತಿಯಲ್ಲಿ ಅನುವಿಂದನು ಛಿನ್ನ-ಭಿನ್ನನಾಗಿ ಪರ್ವತದ ಸಮೂಹವು ಕೆಳಕ್ಕೆ ಬೀಳುವಂತೆ–ಭೂಮಿಯ ಮೇಲೆ ಬಿದ್ದನು. ತಮ್ಮ ಇಬ್ಬರು ನಾಯಕರೂ ಹತರಾದುದನ್ನು ಕಂಡು ಅವರ ಅನುಯಾಯಿಗಳಾದ ಸೈನಿಕರು ಪರಮಕ್ರುದ್ಧರಾಗಿ ಅರ್ಜುನನ ಮೇಲೆ ನೂರಾರು ಬಾಣಗಳನ್ನು ಸುರಿಸುತ್ತಾ ಅವನನ್ನು ಆಕ್ರಮಿಸಿದರು. ಅವರೆಲ್ಲರನ್ನೂ ಅರ್ಜುನನು ಬಹಳ ಬೇಗ ಬಾಣಗಳಿಂದ ಸಂಹರಿಸಿ–ಶಿಶಿರರ್ತುವಿನಲ್ಲಿ ಅರಣ್ಯವನ್ನು ಸಂಪೂರ್ಣವಾಗಿ ದಹಿಸಿದನಂತರ ಪ್ರಜ್ವಲಿಸುವ ಯಜ್ಞೇಶ್ವರನಂತೆ–ಪ್ರಕಾಶಿಸಿದನು. ವಿಂದಾನುವಿಂದರ ಸೈನ್ಯವನ್ನು ಅರ್ಜುನನು ಬಹಳ ಕಷ್ಟದಿಂದ ಅತಿಕ್ರಮಿಸಿ (ಪರಾಜಯಗೊಳಿಸಿ) ಮೋಡದ ಆವರಣವನ್ನು ಭೇದಿಸಿಕೊಂಡು ಉದಯಿಸಿದ ಸೂರ್ಯನಂತೆಯೇ ಪ್ರಕಾಶಿಸಿದನು. ಮಹಾವೀರರೆನಿಸಿಕೊಂಡಿದ್ದ ವಿಂದಾನುವಿಂದರನ್ನೂ ಸಂಹರಿಸಿದ ಪಾರ್ಥನನ್ನು ನೋಡಿ ಕುರುಯೋಧರು ಬಹಳವಾಗಿ ಭಯಗೊಂಡರು. ಆದರೆ ಅರ್ಜುನನು ಶ್ರಾಂತನಾಗಿರುವನೆಂಬುದನ್ನು ತಿಳಿದು ಪ್ರಹೃಷ್ಟರಾಗಿ ಪಾರ್ಥನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಅರ್ಜುನನು ಬಳಲಿರುವನೆಂಬುದನ್ನು ತಿಳಿದುಕೊಂಡರಲ್ಲದೇ ಸೈಂಧವನು ಇನ್ನೂ ಬಹುದೂರದಲ್ಲಿದ್ದಾನೆಂಬುದನ್ನೂ ಕೌರವಸೈನಿಕರು ಗಮನಿಸಿ ಸಿಂಹನಾದಗಳನ್ನು ಮಾಡುತ್ತಾ ಅರ್ಜುನನನ್ನು ಸುತ್ತುಗಟ್ಟಿದರು. ಪುರುಷರ್ಷಭನಾದ ಪಾರ್ಥನು, ಕೌರವಸೈನಿಕರು ಕುಪಿತರಾಗಿ ತನ್ನ ಮೇಲೆ ಬೀಳುತ್ತಿರುವುದನ್ನು ಕಂಡು ನಸುನಗುತ್ತಾ ಶ್ರೀಕೃಷ್ಣನೊಡನೆ ಮೆಲ್ಲನೆ ಹೇಳಿದನು:

“ಮಾಧವ! ನನ್ನ ಈ ಕುದುರೆಗಳು ಶತ್ರುಗಳು ಬಿಟ್ಟ ಬಾಣಗಳಿಂದ ಬಹಳವಾಗಿ ಗಾಯಗೊಂಡಿವೆ ಮತ್ತು ಬಹಳವಾಗಿ ದಣಿದಿವೆ. ಸೈಂಧವನಿನ್ನೂ ಬಹಳ ದೂರದಲ್ಲಿಯೇ ಇದ್ದಾನೆ. ಈ ಸಮಯದಲ್ಲಿ ಮೊದಲು ಮಾಡಬೇಕಾದ ಕಾರ್ಯವು ಯಾವುದು? ಅನಂತರ ಮಾಡಬೇಕಾದ ಕಾರ್ಯವು ಯಾವುದು? ಯಾವ ಕಾರ್ಯವನ್ನು ಮೊದಲು ಮಾಡುವುದು ನಿನಗೆ ಉಚಿತವಾಗಿ ಕಾಣುತ್ತದೆ? ಹೇಳು, ಕೃಷ್ಣ!

ಮಾಧವ! ನೀನು ಪ್ರಾಜ್ಞತಮನಾಗಿರುವೆ. ಆದುದರಿಂದ ಈ ವಿಷಯದಲ್ಲಿ ಯಥೋಚಿತವಾದ ಸಲಹೆಯನ್ನು ನೀಡು. ನಿನ್ನನ್ನೇ ನಾಯಕನನ್ನಾಗಿಟ್ಟುಕೊಂಡು ಪಾಂಡವರು ಶತ್ರುಗಳನ್ನು ಜಯಿಸಬೇಕೆಂದಿದ್ದಾರೆ. ಮಾಧವ! ನನ್ನ ಅಭಿಪ್ರಾಯದಲ್ಲಿ ಈ ಸಮಯದಲ್ಲಿ ನಾವು ಮೊದಲು ಮಾಡಬೇಕಾಗಿರುವ ಕಾರ್ಯವು ಯಾವುದೆಂಬುದನ್ನು ಹೇಳುತ್ತೇನೆ; ದಯಮಾಡಿ ಕೇಳು. ಕುದುರೆಗಳನ್ನು ಬಿಚ್ಚಿ ಅವುಗಳು ಸುಖವಾಗಿರುವಂತೆ ಮಾಡಲು ಮೊದಲು ಅವುಗಳ ಶರೀರಗಳಲ್ಲಿ ಚುಚ್ಚಿಕೊಂಡಿರುವ ಬಾಣಗಳನ್ನು ತೆಗೆದುಹಾಕು."

ಮಹಾರಾಜ! ಪಾರ್ಥನು ಹೀಗೆಂದು ಹೇಳಲಾಗಿ ಕೇಶವನು ಪ್ರತ್ಯುತ್ತರಿಸಿದನು:

"ಪಾರ್ಥ! ನೀನು ಹೇಳಿದುದೇ ನನ್ನ ಅಭಿಪ್ರಾಯವೂ ಆಗಿದೆ."

" ಹಾಗಾದರೆ ಕೃಷ್ಣ! ನನ್ನನ್ನು ಆಕ್ರಮಿಸಿರುವ ಈ ಎಲ್ಲ ಸೈನಿಕರನ್ನೂ ನಾನು ತಡೆದು ನಿಲ್ಲಿಸುತ್ತೇನೆ. ಈ ಸಮಯದಲ್ಲಿ ನೀನು ಯಾವ ಕಾರ್ಯವನ್ನು ಮಾಡಿದರೆ ಉಚಿತವಾಗಿ ಕಾಣುವುದೋ ಆ ಕಾರ್ಯವನ್ನು ಮಾಡು."

ಮಹಾರಾಜ! ಹೀಗೆಂದು ಹೇಳಿ ಧನಂಜಯನು ಸ್ವಲ್ಪವಾದರೂ ಸಂಭ್ರಾಂತನಾಗದೇ ರಥದ ಆಸನದಿಂದ ಕೆಳಗಿಳಿದು ಗಾಂಡೀವಧನುಸ್ಸನ್ನು ಹಿಡಿದು ಪರ್ವತದಂತೆ ಅಚಲವಾಗಿ ನಿಂತನು. ವಿಜಯಾಕಾಂಕ್ಷಿಗಳಾಗಿದ್ದ ಕ್ಷತ್ರಿಯಯೋಧರು ಪಾರ್ಥನನ್ನು ಪರಾಜಯಗೊಳಿಸಲು ಅದೇ ಸುಸಮಯವೆಂದು ಭಾವಿಸಿದವರಾಗಿ ಸಿಂಹನಾದಗಳನ್ನು ಮಾಡುತ್ತಾ ನೆಲದ ಮೇಲೆ ನಿಂತಿದ್ದ ಅವನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಅಶ್ವ-ರಥ-ಸಾರಥಿಗಳಲ್ಲಿ ಯಾವುದೊಂದೂ ಇಲ್ಲದೇ ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡು ಏಕಾಕಿಯಾಗಿ ನಿಂತಿದ್ದ ಪಾರ್ಥನನ್ನು ದೊಡ್ಡದಾದ ರಥಸಮೂಹದೊಡನೆ ಕೌರವರಥಿಕರು ಧನುಸ್ಸುಗಳನ್ನು ಟೇಂಕರಿಸುತ್ತಾ ಸಾವಿರಾರು ಬಾಣಗಳನ್ನು ಏಕಕಾಲದಲ್ಲಿ ಬಿಡುತ್ತಾ ಆಕ್ರಮಿಸಿದರು. ಮೇಘಗಳು ಸೂರ್ಯನನ್ನು ಮುಚ್ಚಿಬಿಡುವಂತೆ–ನಿನ್ನ ಕಡೆಯ ಕ್ರುದ್ಧರಾದ ಕ್ಷತ್ರಿಯಯೋಧರು ಪಾರ್ಥನನ್ನು ಬಾಣಗಳಿಂದ ಮುಚ್ಚುತ್ತಾ ಚಿತ್ರ-

ವಿಚಿತ್ರವಾದ ಶಸ್ತ್ರಗಳನ್ನು ಪ್ರದರ್ಶಿಸತೊಡಗಿದರು. ಮದಿಸಿದ ಆನೆಗಳು ಸಿಂಹದ ಮೇಲೆ ಹಲ್ಲೆಮಾಡುವಂತೆ-ಶ್ರೇಷ್ಠರಥಿಗಳಾದ ಕ್ಷತ್ರಿಯರು ನರಶ್ರೇಷ್ಠನಾದ ಕ್ಷತ್ರಿಯರ್ಷಭನಾದ ಅರ್ಜುನನನ್ನು ರಭಸದಿಂದ ಆಕ್ರಮಿಸಿದರು. ಆಗ ನಾವು ಪಾರ್ಥನ ಭುಜಗಳಲ್ಲಿದ್ದ ಮಹಾಬಲವನ್ನೂ ಕಂಡುಕೊಂಡೆವು. ಕ್ರುದ್ಧನಾದ ಪಾರ್ಥನು ತನ್ನನ್ನು ಆಕ್ರಮಿಸಿದ್ದ ಬಹುಸಂಖ್ಯಾತವಾದ ಸೈನ್ಯವನ್ನೂ ತನ್ನ ಭುಜಬಲದಿಂದಲೇ ತಡೆದು ನಿಲ್ಲಿಸಿದನು. ಎಲ್ಲ ಕಡೆಗಳಿಂದಲೂ



ಬರುತ್ತಿದ್ದ ಅಸ್ತ್ರಗಳನ್ನು ಅಸ್ತ್ರಪ್ರಹಾರಗಳಿಂದಲೇ ನಿವಾರಣೆಮಾಡುತ್ತಾ, ಬಹುಸಂಖ್ಯಾತವಾದ ಬಾಣಗಳಿಂದ ಬಹಳಬೇಗ ತನ್ನನ್ನು ಆಕ್ರಮಿಸಿದ್ದ ಶತ್ರುಸೈನಿಕರನ್ನು ಮುಚ್ಚಿಬಿಟ್ಟನು. ಅಂತರಿಕ್ಷದಲ್ಲಿ ಬಹುಸಂಖ್ಯಾತವಾದ ಬಾಣಗಳ ಪರಸ್ಪರಸಂಘರ್ಷದಿಂದಾಗಿ ಜ್ವಾಲೆಗಳಿಂದ ಯುಕ್ತವಾಗಿದ್ದ ಅಗ್ನಿಯು ಆವಿರ್ಭವಿಸಿತು. ರಕ್ತದಿಂದ ತೋಯ್ದುಹೋಗಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ಮಹಾಧನುಷ್ಮಂತರಿಂದಲೂ, ಅರ್ಜುನನ ಶತ್ರುನಾಶಕ

ವಾದ ಬಾಣಗಳಿಂದ ಛಿನ್ನ-ಭಿನ್ನವಾಗಿ ಅರಚಿಕೊಳ್ಳುತ್ತಿದ್ದ ಆನೆ-ಕುದುರೆ ಗಳಿಂದಲೂ, ಯುದ್ಧದಲ್ಲಿ ವಿಜಯಗಳಿಸುವ ಅಭಿಲಾಷೆಯಿಂದ ಆವೇಶ ಗೊಂಡು ಒಂದೇ ಸ್ಥಳದಲ್ಲಿ ಸೇರಿಕೊಂಡಿದ್ದ ಕ್ರುದ್ಧರಾದ ಮತ್ತು ವೀರರಾದ ಶತ್ರುಗಳಿಂದಲೂ ನಿಬಿಡವಾಗಿದ್ದ ಆ ಸ್ಥಳಗಳಲ್ಲಿ ವಾತಾವರಣವು ಬಹಳ ಬಿಸಿಯಾಗಿರುವಂತೆ ಕಾಣುತ್ತಿದ್ದಿತು.

ಆ ಸಮಯದಲ್ಲಿ ಅಸಂಖ್ಯವಾದ, ಅಪಾರವಾದ, ದುರ್ಲಂಘ್ಯವಾದ, ಅಕ್ಷೋಭ್ಯವಾದ ರಣಸಾಗರವನ್ನು, ಸಮುದ್ರತೀರಕ್ಕೆ ಸಮಾನನಾಗಿದ್ದ ಪಾರ್ಥನು ಬಾಣಗಳಿಂದ ತಡೆದು ನಿಲ್ಲಿಸಿದನು. ಆ ರಣಸಾಗರದಲ್ಲಿ ಯೋಧರ ಬಾಣಗಳೇ ತೆರೆಗಳಂತಿದ್ದುವು. ಧ್ವಜಗಳು ಸುಳಿಗಳಂತಿದ್ದುವು. ಆನೆಗಳೇ ಮೊಸಳೆಗಳಂತಿದ್ದುವು. ಪದಾತಿಗಳು ರಣಸಾಗರದ ಮೀನಿನ ಸಮೂಹಗಳಂತಿದ್ದುವು. ಶಂಖಗಳ ಮತ್ತು ನಗಾರಿಗಳ ಧ್ವನಿಯೇ ಗಂಭೀರ ಗರ್ಜನೆಯಾಗಿದ್ದಿತು. ರಥಗಳು ದೊಡ್ಡ ದೊಡ್ಡ ಅಗಾಧವಾದ ಅಲೆ ಗಳಂತಿದ್ದುವು. ಸೈನಿಕರು ಧರಿಸಿದ್ದ ಶಿರಸ್ತ್ರಾಣಗಳು ರಣಸಾಗರದ ಆಮೆ ಗಳಂತಿದ್ದುವು. ಛತ್ರ ಮತ್ತು ಪತಾಕೆಗಳೇ ಸಮುದ್ರದ ನೊರೆಯ ಪಂಕ್ತಿಗಳಂತಿದ್ದುವು. ಆನೆಗಳ ಶರೀರಗಳೇ ದೊಡ್ಡ ದೊಡ್ಡ ಬಂಡೆ ಗಳಂತಿದ್ದುವು. ವೇಲಾರೂಪನಾದ ಅರ್ಜುನನು ಇಂತಹ ರಣಸಾಗರವನ್ನು ತಡೆದು ನಿಲ್ಲಿಸಿದನು."

ಈ ವಿವರಣೆಯನ್ನು ಕೇಳಿದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

**ಅರ್ಜುನೇ ಧರಣೀಂ ಪ್ರಾಪ್ತೇ ಹಯಹಸ್ತೇ ಚ ಕೇಶವೇ।**
**ಏತದನ್ತರಮಾಸಾದ್ಯ ಕಥಂ ಪಾರ್ಥೋ ನ ಘಾತಿತಃ ॥೫೪॥**

"ಸಂಜಯ! ನೀನು ಹೇಳುತ್ತಿರುವುದನ್ನು ಕೇಳಿ ನನಗೆ ಬಹಳ ಅಚ್ಚರಿಯುಂಟಾಗಿದೆ. ಅರ್ಜುನನು ರಥದಿಂದಿಳಿದು ನೆಲದ ಮೇಲೆಯೇ ನಿಂತಿದ್ದನು. ಕೇಶವನು ರಥದ ಕುದುರೆಗಳನ್ನು (ಕುದುರೆಗಳ ಕಡಿವಾಣಗಳನ್ನು) ಹಿಡಿದುಕೊಂಡು ರಥದ ಮೇಲೆಯೇ ಇದ್ದನು. (ಶ್ರೀಕೃಷ್ಣನು ಅರ್ಜುನನಿಗೆ ಯಾವ ಸಹಾಯವನ್ನೂ ನೀಡುವಂತಿರಲಿಲ್ಲ.) ಅಂತಹ ಕ್ಲಿಷ್ಟಪರಿಸ್ಥಿತಿ

ಯಲ್ಲಿದ್ದ ಪಾರ್ಥನನ್ನು ಸರಿಯಾದ ಅವಕಾಶವು ಸಿಕ್ಕಿರುವಾಗ ನನ್ನ ಸೈನಿಕರು ಸಂಹರಿಸಲಿಲ್ಲವೇಕೆ?"

"ಮಹಾರಾಜ! ಆ ಸಮಯದಲ್ಲಿ ಪಾರ್ಥನು ನೆಲದ ಮೇಲೆಯೇ ನಿಂತಿದ್ದು ತನ್ನನ್ನು ಆಕ್ರಮಿಸಿದ ರಥಸ್ಥರಾದ ಎಲ್ಲ ರಾಜರನ್ನೂ–ವೇದವಿರುದ್ಧವಾದ ಮಾತುಗಳನ್ನು ಪ್ರಮಾಣಭೂತವಾದ ವೇದವಾಕ್ಯವು ನಿರೋಧಿಸುವಂತೆ–ನಿರೋಧಿಸಿದನು. ಪಾರ್ಥನು ಭೂಮಿಯ ಮೇಲೆಯೇ ನಿಂತಿದ್ದರೂ ಅವನೊಬ್ಬನೇ ರಥಸ್ಥರಾಗಿದ್ದ ಎಲ್ಲ ರಾಜರನ್ನೂ–ಲೋಭವು ಇತರ ಎಲ್ಲ ಸದ್ಗುಣಗಳನ್ನೂ ತಟಸ್ಥಗೊಳಿಸುವಂತೆ– ತಟಸ್ಥಗೊಳಿಸಿದನು. ಅನಂತರ ಸ್ವಲ್ಪವಾದರೂ ಗಾಬರಿಗೊಳ್ಳದ ಮಹಾಬಾಹುವಾದ ಜನಾರ್ದನನು ತನಗೆ ಅತ್ಯಂತಪ್ರಿಯನಾದ ಪುರುಷಸತ್ತಮನಾದ ಪಾರ್ಥನನ್ನು ಕುರಿತು ಈ ಮಾತನ್ನು ಹೇಳಿದನು:

"ಅರ್ಜುನ! ಕದಡಿದ ನೀರಿದೆ. ಸ್ನಾನಮಾಡಿಸಬಹುದು. ಆದರೆ ಕುದುರೆಗಳು ಕುಡಿಯಲು ಯೋಗ್ಯವಾದ ನೀರನ್ನು ಅಪೇಕ್ಷಿಸುತ್ತಿವೆ. ಸ್ನಾನವನ್ನಲ್ಲ."

**ಇದಮಸ್ತೀತ್ಯಸಂಭ್ರಾನ್ತೋ ಬ್ರುವನ್ನಸ್ತ್ರೇಣ ಮೇದಿನೀಮ್।**
**ಅಭಿಹತ್ಯಾರ್ಜುನಶ್ಚಕ್ರೇ ವಾಜಿಪಾನಂ ಸರಃ ಶುಭಮ್ ।।೫೯।।**

"ಇದೋ ಇಲ್ಲೇ ಜಲವಿದೆ ಕೃಷ್ಣ!"-ಎಂದು ಹೇಳುತ್ತಾ ಅರ್ಜುನನು ಅಸಂಭ್ರಾಂತನಾಗಿ ಒಂದು ಅಸ್ತ್ರವನ್ನು ತೆಗೆದು ಧನುಸ್ಸಿನಲ್ಲಿ ಯೋಜಿಸಿ ಸುದೀರ್ಘವಾಗಿ ಸೆಳೆದು ಭೂಮಿಯನ್ನು ಭೇದಿಸಿ, ಕುದುರೆಗಳು ನೀರನ್ನು ಕುಡಿಯಲು ಯೋಗ್ಯವಾದ ಶುಭಜಲದಿಂದ ಕೂಡಿದ ಒಂದು ಸರೋವರವನ್ನೇ ನಿರ್ಮಿಸಿದನು. ಆ ಕೊಳವು ಹಂಸ-ಕಾರಂಡವಪಕ್ಷಿಗಳಿಂದ ಸಮೃದ್ಧವಾಗಿದ್ದಿತು. ಆ ಸರೋವರದ ಮೇಲೆ ಚಕ್ರವಾಕಪಕ್ಷಿಗಳು ಹಾರಾಡುತ್ತಿದ್ದು ಸರೋವರದ ಶೋಭೆಯನ್ನು ಹೆಚ್ಚಿಸುತ್ತಿದ್ದುವು. ಅರಳಿದ ಕಮಲಗಳಿಂದ ಆ ಸರೋವರವು ಸಂಪನ್ನವಾಗಿದ್ದಿತು. ಬಹಳ ವಿಸ್ತಾರವಾಗಿದ್ದ ಮತ್ತು ಆಳವಾಗಿದ್ದ ಆ ಸರೋವರವು ಶುದ್ಧವಾದ ಮತ್ತು ಶಾಂತವಾದ ಶುಭಜಲದಿಂದ ತುಂಬಿದ್ದಿತು. ಆಮೆ ಮತ್ತು ಮೀನುಗಳಿಂದ ಆ ಸರೋವರವು ವ್ಯಾಪ್ತವಾಗಿದ್ದಿತು. ಆ ಸರೋವರವು ಅನೇಕ ಋಷಿಗಳಿಂದ ಸೇವಿಸಲ್ಪಡುತ್ತಿದ್ದಿತು. ಕ್ಷಣಮಾತ್ರದಲ್ಲಿ ಅರ್ಜುನನ ಬಾಣಗಳಿಂದಲೇ

ನಿರ್ಮಿತವಾದ ಸುಂದರವಾದ ಆ ಸರೋವರವನ್ನು ಸಂದರ್ಶಿಸುವ ಸಲುವಾಗಿಯೇ ನಾರದರು ಅಲ್ಲಿಗೆ ಆಗಮಿಸಿದರು.

**ಶರವಂಶಂ ಶರಸ್ಥೂಣಂ ಶರಾಚ್ಛಾದನಮದ್ಭುತಮ್ ।**
**ಶರವೇಶ್ಮಾಕರೋತ್ಪಾರ್ಥಸ್ತ್ವಷ್ಟೇವಾದ್ಭುತಕರ್ಮಕೃತ್ ॥೬೨॥**

ಅದ್ಭುತವಾದ ಕರ್ಮಗಳನ್ನು ಮಾಡಲು ಸಮರ್ಥನಾದ ಅರ್ಜುನನು ವಿಶ್ವಕರ್ಮನಂತೆ ಬಾಣಗಳಿಂದಲೇ ಗಳುಗಳನ್ನೂ, ಬಾಣಗಳಿಂದಲೇ ಕಂಬಗಳನ್ನೂ ಮತ್ತು ಬಾಣಗಳಿಂದಲೇ ಮೇಲುಹೊದಿಕೆಯನ್ನೂ ಮಾಡಿ



ಒಂದು ಶರಗೃಹವನ್ನೇ ನಿರ್ಮಿಸಿಬಿಟ್ಟನು. ಮಹಾತ್ಮನಾದ ಪಾರ್ಥನು ಈ ರೀತಿಯಲ್ಲಿ ಶರಗೃಹವನ್ನು ನಿರ್ಮಿಸಿದುದನ್ನು ಕಂಡು ಶ್ರೀಕೃಷ್ಣನು ನಸುನಗುತ್ತಾ 'ಭಲೇ ಅರ್ಜುನ! ಭಲೇ'–ಎಂದು ತನ್ನ ಮಿತ್ರನನ್ನು ಮುಕ್ತಕಂಠದಿಂದ ಪ್ರಶಂಸೆಮಾಡಿದನು."

ಲ೯೯ನೆಯ ಅಧ್ಯಾಯವು ಮುಗಿಯಿತು.

## ಶ್ರೀಕೃಷ್ಣನು ಕುದುರೆಗಳನ್ನು ಉಪಚರಿಸಿದುದು: ನೀರುಕುಡಿದು ಆಹಾರವನ್ನು ತಿಂದು ನವಚೇತನವನ್ನು ಪಡೆದುಕೊಂಡ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಅರ್ಜುನನು ಸೈಂಧವನಿದ್ದೆಡೆಗೆ ತೆರಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಮಹಾತ್ಮನಾದ ಅರ್ಜುನನು ಸುಂದರವಾದ ಸರೋವರವನ್ನು ನಿರ್ಮಿಸಿ ಶತ್ರುಸೈನ್ಯವು ಮುಂದೆ ಬರದಂತೆ ತಡೆದು ನಿಲ್ಲಿಸಿದನು. ಬಾಣಗಳಿಂದಲೇ ಒಂದು ಮನೆಯನ್ನೂ ನಿರ್ಮಿಸಿದನು. ಅನಂತರ ಮಹಾದ್ಯುತಿಮಂತನಾದ ಶ್ರೀಕೃಷ್ಣನು ತಾನೂ ರಥದಿಂದ ಕೆಳಗಿಳಿದು ಹದ್ದಿನ ರೆಕ್ಕೆಗಳುಳ್ಳ ಬಾಣಗಳಿಂದ ಗಾಯಗೊಂಡಿದ್ದ ಕುದುರೆಗಳನ್ನು ರಥದಿಂದ ಬಿಚ್ಚಿದನು. ಹಿಂದೆ ಯಾವಾಗಲೂ ಕಾಣದಿದ್ದ ಅಪೂರ್ವವಾದ ಆ ದೃಶ್ಯವನ್ನು ನೋಡಿ ಸಿದ್ಧ-ಚಾರಣರ ಮತ್ತು ಸೈನಿಕರ 'ಸಾಧು; ಭಲೇ! ಸಾಧು' ಎಂಬ ಶಬ್ದಗಳು ಎಲ್ಲ ಕಡೆಗಳಿಂದಲೂ ಗಟ್ಟಿಯಾಗಿಯೇ ಕೇಳಿಬರುತ್ತಿದ್ದುವು. ಪದಾತಿಯಾಗಿಯೇ ಯುದ್ಧಮಾಡುತ್ತಿದ್ದ ಅರ್ಜುನನನ್ನು ತಡೆಯಲು ಒಟ್ಟಾಗಿ ಸೇರಿಬಂದಿದ್ದ ಮಹಾರಥರಿಗೂ ಸಾಧ್ಯವಾಗಲಿಲ್ಲ. ಅದೂ ನಮಗೆ ಪರಮಾದ್ಭುತವಾಗಿ ಕಂಡಿತು. ರಥಗಳ ಸಮೂಹಗಳೂ, ಅಸಂಖ್ಯಾತವಾದ ಆನೆ-ಕುದುರೆಗಳ ಸೈನ್ಯಗಳೂ ತನ್ನ ಮೇಲೆ ಬೀಳಲು ಬರುತ್ತಿದ್ದರೂ ಅರ್ಜುನನು ಕಿಂಚಿತ್ತಾದರೂ ಗಾಬರಿಗೊಳ್ಳಲಿಲ್ಲ. ಅರ್ಜುನನ ಆ ಧೈರ್ಯ-ಸಾಹಸಗಳು ಎಲ್ಲ ವೀರಪುರುಷರನ್ನೂ ಅತಿಕ್ರಮಿಸಿದ್ದುವು. ಎಲ್ಲ ರಾಜರೂ ಒಟ್ಟಾಗಿ ಸೇರಿ ಬಾಣಗಳ ಸಮೂಹವನ್ನೇ ಪಾಂಡವನ ಮೇಲೆ ಸುರಿಸುತ್ತಿದ್ದರು. ಆದರೆ ಅದರಿಂದ ಶತ್ರುವೀರಹಂತಕನಾದ, ಧರ್ಮಾತ್ಮನಾದ ವಾಸವಿಯು ಸ್ವಲ್ಪವಾದರೂ ವ್ಯಥಿತನಾಗಲಿಲ್ಲ. ವೀರ್ಯವಂತನಾದ ಪಾರ್ಥನು, ಕೌರವಯೋಧರು ಬಿಡುತ್ತಿದ್ದ ಬಾಣಗಳ ಸಮೂಹಗಳನ್ನೂ, ಗದೆಗಳನ್ನೂ, ಪ್ರಾಸಗಳನ್ನೂ ಸಮುದ್ರವು ನೂರಾರು ನದಿಗಳನ್ನು ಅಡಗಿಸಿಕೊಳ್ಳುವಂತೆ ಅಡಗಿಸಿಕೊಂಡನು. (ನಿರಸನಗೊಳಿಸಿದನು.) ತನಗಿದ್ದ ಬಾಹುಗಳ ಬಲದಿಂದಲೂ ಮತ್ತು ಅಸ್ತ್ರಗಳ ವೇಗದಿಂದಲೂ ಎಲ್ಲ ಪಾರ್ಥಿವೇಶ್ವರರ ಉತ್ತಮೋತ್ತಮವಾದ ಬಾಣಗಳನ್ನೂ ನಾಶಗೊಳಿಸಿದನು.

(ನಿರರ್ಥಕವನ್ನಾಗಿ ಮಾಡಿದನು.) ಮಹಾರಾಜ! ವಾಸುದೇವನ ಮತ್ತು ಅರ್ಜುನನ ಆ ಅದ್ಭುತಪರಾಕ್ರಮವನ್ನು ಕೌರವರೂ ಕೂಡ ಬಹಳವಾಗಿ ಪ್ರಶಂಸಿಸತೊಡಗಿದರು.

**ಕಿಮದ್ಭುತತಮಂ ಲೋಕೇ ಭವಿತಾಪ್ಯಥವಾ ಹ್ಯಭೂತ್।**
**ಯದಶ್ವಾನ್ಪಾರ್ಥಗೋವಿನ್ದೌ ಮೋಚಯಾಮಾಸತೂ ರಣೇ ॥೧೦॥**

"ಯುದ್ಧದ ಮಧ್ಯದಲ್ಲಿ ಪಾರ್ಥ-ಗೋವಿಂದರು ತಮ್ಮ ರಥದ ಕುದುರೆಗಳನ್ನು ಬಿಚ್ಚಿದರು. ಇದಕ್ಕಿಂತಲೂ ಪರಮಾದ್ಭುತವಾದುದು ಯಾವುದಿದೆ? ಇಂತಹ ಅದ್ಭುತವು ಹಿಂದೆ ನಡೆದುದೂ ಇಲ್ಲ; ಮುಂದೆ ನಡೆಯುವುದೂ ಇಲ್ಲ."

ನರೋತ್ತಮರಾದ, ತಮ್ಮ ಶೌರ್ಯ-ಪರಾಕ್ರಮಗಳ ವಿಷಯದಲ್ಲಿ ಸಂಪೂರ್ಣವಾದ ವಿಶ್ವಾಸವನ್ನು ಹೊಂದಿದ್ದ ಕೃಷ್ಣಾರ್ಜುನರು ರಣರಂಗದಲ್ಲಿ ಅತ್ಯುಗ್ರವಾದ ತೇಜಸ್ಸನ್ನು ಪ್ರದರ್ಶಿಸುತ್ತಾ ಅತಿಯಾದ ಭಯವನ್ನುಂಟು ಮಾಡಿದರು. ರಣಾಂಗಣದಲ್ಲಿ ಅರ್ಜುನನಿಂದ ನಿರ್ಮಿತವಾಗಿದ್ದ ಆ ಶರಗೃಹದಲ್ಲಿ ಶ್ರೀಕೃಷ್ಣನು ನಸುನಗುತ್ತಾ–ಗೋಪಿಕಾಸ್ತ್ರೀಯರ ಮಧ್ಯದಲ್ಲಿ ಯಾವ ವಿಧವಾದ ಯೋಚನೆಗಳೂ ಇಲ್ಲದೇ ಆನಂದವಾಗಿ ಇರುತ್ತಿದ್ದಂತೆ–ಇದ್ದುಬಿಟ್ಟನು. (ಅವನಿಗೆ ಶತ್ರುಗಳ ಭಯವೆಂಬುದು ಕಿಂಚಿತ್ತಾದರೂ ಇರಲಿಲ್ಲ. ಸದಾಕಾಲದಲ್ಲಿಯೂ ನಗು-ನಗುತ್ತಲೇ ಇರುತ್ತಿದ್ದನು.) ಮಹಾರಾಜ! ಕಮಲೇಕ್ಷಣನಾದ ಶ್ರೀಕೃಷ್ಣನು ನಿನ್ನ ಕಡೆಯ ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಸ್ವಲ್ಪವಾದರೂ ಉದ್ವೇಗಗೊಳ್ಳದೇ ಕುದುರೆಗಳನ್ನು ಅಡ್ಡಾಡಿಸುತ್ತಿದ್ದನು. ಕುದುರೆಗಳ ಚಿಕಿತ್ಸೆಯಲ್ಲಿ ಮಹಾಕುಶಲನಾದ ಶ್ರೀಕೃಷ್ಣನು ಅವುಗಳ ಪರಿಶ್ರಮ, ಬಳಲಿಕೆ, ವಮನ, ಕಂಪನಗಳನ್ನೂ ಮತ್ತು ವ್ರಣಗಳ ವೇದನೆಯನ್ನೂ ಸಂಪೂರ್ಣವಾಗಿ ಹೋಗಲಾಡಿಸಿದನು.

ಶ್ರೀಕೃಷ್ಣನು ಕುದುರೆಗಳಿಗೆ ಚುಚ್ಚಿಕೊಂಡಿದ್ದ ಬಾಣಗಳನ್ನು ಎರಡು ಕೈಗಳಿಂದಲೂ ಉಪಾಯವಾಗಿ ಹೊರತೆಗೆದು ಮೈತೊಳೆದು *ಅವುಗಳನ್ನು

---

*ಉಪಾವರ್ತ್ಯ ಎಂದು ಮೂಲದಲ್ಲಿದೆ. ಉಪಾವರ್ತನವೆಂದರೆ:- ದಣಿವಾರಿಸಿಕೊಳ್ಳಲು ನೆಲದ ಮೇಲೆ ಹೊರಳಾಡುವುದು. ದಣಿವಾರಿಸಿಕೊಳ್ಳಲು ಕುದುರೆಗಳು ನೆಲದ ಮೇಲೆ ಹೊರಳಾಡುವುದು ಪ್ರಸಿದ್ಧವಾಗಿದೆ.

ನೆಲದ ಮೇಲೆ ಹೊರಳಾಡಿಸಿ ಅವುಗಳಿಗೆ ನೀರುಕುಡಿಸಿದನು. ನೀರನ್ನು ಕುಡಿದು ಸ್ನಾನಮಾಡಿ ಹುಲ್ಲನ್ನೂ ಹುರುಳಿಯನ್ನೂ ತಿಂದು ಶ್ರಮವನ್ನು ಪರಿಹರಿಸಿಕೊಂಡ ಕುದುರೆಗಳನ್ನು ಪ್ರಸನ್ನನಾದ ಶ್ರೀಕೃಷ್ಣನು ಶ್ರೇಷ್ಠವಾದ ಅರ್ಜುನನ ರಥಕ್ಕೆ ಕಟ್ಟಿದನು. ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ,



ಮಹಾತೇಜಸ್ವಿಯಾದ ಶೌರಿಯು ಅರ್ಜುನನೊಡನೆ ರಥದಲ್ಲಿ ಕುಳಿತು ಸೈಂಧವನನ್ನು ಅರಸಿಕೊಂಡು ವೇಗವಾಗಿ ಹೊರಟನು. ನೀರು ಕುಡಿದು ದಣಿವಾರಿಸಿಕೊಂಡ ಕುದುರೆಗಳಿಂದ ಯುಕ್ತವಾದ, ರಥಿಗಳಲ್ಲಿ ಶ್ರೇಷ್ಠನಾದ ಅರ್ಜುನನ ರಥವನ್ನು ರಣಾಂಗಣದಲ್ಲಿ ನೋಡಿದ ಕುರುಬಲಶ್ರೇಷ್ಠರು ಪುನಃ ನಿರುತ್ಸಾಹಿಗಳಾದರು. ವಿಷದ ಹಲ್ಲನ್ನು ಮುರಿದ ಸರ್ಪಗಳಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದ ಯೋಧರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿ

ದ್ದರು: ‘ಧಿಗಹೋ ಧಿಕ್ ಗತಃ ಪಾರ್ಥಃ ಕೃಷ್ಣಶ್ಚ’“ನಮಗೆ ಧಿಕ್ಕಾರವಿರಲಿ. ನಮ್ಮ ಪರಾಕ್ರಮಕ್ಕೂ ಧಿಕ್ಕಾರವಿರಲಿ. ರಥವನ್ನು ಸಜ್ಜುಗೊಳಿಸಿಕೊಂಡು ಪಾರ್ಥ-ಕೃಷ್ಣರು ಪುನಃ ಜಯದ್ರಥನನ್ನು ಹುಡುಕಿಕೊಂಡು ಹೊರಟೇ ಹೋದರು.”

ಮಹಾರಾಜ! ರಣರಂಗದ ಸುತ್ತಲೂ ಇದ್ದ ನಿನ್ನ ಸೈನಿಕರು ರೋಮಾಂಚಕರವಾದ ಶ್ರೀಕೃಷ್ಣಾರ್ಜುನರ ಸಾಹಸದ ಕಾರ್ಯವನ್ನು ಕಂಡು “ಬೇಗ ಹೊರಡಿರಿ! ಕೃಷ್ಣಾರ್ಜುನರನ್ನು ಹಿಂಬಾಲಿಸಿರಿ! ಏನೇ ಆದರೂ ಸೈಂಧವನ ಸಮೀಪಕ್ಕೆ ಹೋಗಲು ಅರ್ಜುನನನ್ನು ಬಿಡಬಾರದು”–ಎಂಬುದಾಗಿ ಕೂಗಿಕೊಳ್ಳುತ್ತಿದ್ದರು. ನಾವೆಲ್ಲರೂ ಕೂಗಿಕೊಳ್ಳುತ್ತಿದ್ದರೂ ಮತ್ತು ಅವರನ್ನು ತಡೆದು ನಿಲ್ಲಿಸಲು ಪ್ರಯತ್ನಿಸುತ್ತಿದ್ದರೂ–ಶತ್ರುತಾಪಕರಾದ, ಕವಚಧಾರಿಗಳಾದ ಕೃಷ್ಣಾರ್ಜುನರು ನಮ್ಮೊಡನೆ ಯುದ್ಧದಲ್ಲಿ ತೊಡಗದೇ ಎಲ್ಲ ಕ್ಷತ್ರಿಯರೂ ನೋಡುತ್ತಿದ್ದಂತೆಯೇ ಎಲ್ಲ ರಾಜರಿಗೂ ತಮ್ಮ ಆತ್ಮಬಲವನ್ನು ಪ್ರದರ್ಶಿಸುತ್ತಾ, ನಮ್ಮ ಅಪಾರಸೈನ್ಯವನ್ನೂ ಮಕ್ಕಳ ಆಟದ ಸಾಮಾನುಗಳಂತೆ ತಿರಸ್ಕರಿಸಿ ಒಂದೇ ರಥದಲ್ಲಿ ಕುಳಿತು ಸೈಂಧವನಿದ್ದ ಕಡೆಗೆ ಹೊರಟೇ ಹೋದರು.

ಕೃಷ್ಣಾರ್ಜುನರು ಹೋಗುತ್ತಿರುವುದನ್ನು ಮತ್ತೆ ಕೆಲವು ಸೈನಿಕರು ನೋಡಿ ತಮ್ಮ ಒಡನಾಡಿಗಳನ್ನು ಕೂಗಿ ಹೇಳಿದರು:

“ಕುರುಕುಲಾವತಂಸರೇ! ರಥಯುಕ್ತನಾದ ದಾಶಾರ್ಹನು ನಮ್ಮ ಕಡೆಯ ಎಲ್ಲ ಧನುರ್ಧಾರಿಗಳೂ ನೋಡುತ್ತಿರುವಂತೆಯೇ ನಮ್ಮೆಲ್ಲರನ್ನೂ ಯುದ್ಧದಲ್ಲಿ ನಿಷ್ಪ್ರಯೋಜಕರನ್ನಾಗಿ ಮಾಡಿ ಜಯದ್ರಥನ ಬಳಿಗೆ ಹೋಗುತ್ತಿದ್ದಾನೆ. ಆದುದರಿಂದ ಕೃಷ್ಣಾರ್ಜುನರ ವಧೆಗಾಗಿ ತ್ವರೆಮಾಡಿರಿ.”

ಹಿಂದೆ ಯಾವಾಗಲೂ ನೋಡದೇ ಇದ್ದ ಕೃಷ್ಣಾರ್ಜುನರ ಮಹಾದ್ಭುತವಾದ ಸಾಹಸಕರ್ಮವನ್ನು ನೋಡಿ ನಮ್ಮ ಕಡೆಯ ಕೆಲವು ರಾಜರು ಪಿಸುಮಾತಿನಲ್ಲಿ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು:

“ಒಬ್ಬನೇ ಒಬ್ಬ ದುರ್ಯೋಧನನ ಕಾರಣದಿಂದಾಗಿ ಧೃತರಾಷ್ಟ್ರ ರಾಜನೂ ಅವನ ಸಂಪೂರ್ಣಸೈನಿಕರೂ ಮಹಾವಿಪತ್ತಿಗೆ ಒಳಗಾಗಿದ್ದಾರೆ.

ಎಲ್ಲ ಕ್ಷತ್ರಿಯರೂ ಮತ್ತು ಅಖಂಡವಾದ ಪೃಥ್ವಿಯೂ (ಪೃಥ್ವಿಯ ಜನರೂ) ವಿನಾಶದ ಹಾದಿಯಲ್ಲಿದ್ದಾರೆ. ಈ ವಿಷಯವನ್ನು ಧೃತರಾಷ್ಟ್ರರಾಜನು ತಿಳಿದವನಾಗಿಲ್ಲ."

ಮಹಾರಾಜ! ಮತ್ತೊಂದು ಕಡೆಯಲ್ಲಿ ಇನ್ನೂ ಕೆಲವು ಕ್ಷತ್ರಿಯರು ಹೀಗೆ ಮಾತನಾಡಿಕೊಳ್ಳುತ್ತಿದ್ದರು:

"ಯೋಗ್ಯವಾದ ಉಪಾಯವನ್ನು ತಿಳಿಯದೇ ಇರುವ, ವ್ಯರ್ಥವಾದ ಕಣ್ಣುಗಳನ್ನು ಹೊಂದಿರುವ (ಕಣ್ಣುಗಳಿದ್ದರೂ ಕುರುಡನಾಗಿರುವ) ಧೃತರಾಷ್ಟ್ರನ ಮಗನಾದ ದುರ್ಯೋಧನನು ಜಯದ್ರಥನನ್ನಂತೂ ರಕ್ಷಿಸಿಕೊಳ್ಳಲಾರನು. ಯಮನ ಮನೆಗೆ ಹೋದನಂತರ ಮಾಡಬೇಕಾಗಿರುವ ಔರ್ಧ್ವ ದೈಹಿಕಕರ್ಮಗಳಿಗಾಗಿ (ಅಪರಕ್ರಿಯೆಗಳಿಗಾಗಿ) ಸಿದ್ಧತೆಯನ್ನು ಮಾಡಲಿ."

ಇವೇ ಮುಂತಾಗಿ ಅನೇಕ ಕೌರವಯೋಧರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ಸೂರ್ಯದೇವನು ಅಸ್ತದ ಕಡೆಗೆ ವಾಲುತ್ತಿರಲಾಗಿ, ನೀರನ್ನು ಕುಡಿದು ದಣಿವಾರಿಸಿಕೊಂಡ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತಿದ್ದ ಪಾರ್ಥನು ಸೈಂಧವನ ಬಳಿಗೆ ಬಹಳ ಶೀಘ್ರಗತಿಯಿಂದ ಹೋಗುತ್ತಿದ್ದನು. ಕೋಪಗೊಂಡ ಯಮನೋಪಾದಿಯಲ್ಲಿ ಮುನ್ನುಗ್ಗಿ ಹೋಗುತ್ತಿದ್ದ, ಮಹಾಬಾಹುವಾದ, ಶಸ್ತ್ರವೇತ್ತರಲ್ಲಿ ಶ್ರೇಷ್ಠನಾದ ಅರ್ಜುನನನ್ನು ತಡೆಯಲು ನಿನ್ನ ಸೈನಿಕರು ಅಸಮರ್ಥರಾದರು. ಸಿಂಹವು ಮೃಗಗಳ ಗುಂಪನ್ನು ಮಥಿಸಿಬಿಡುವಂತೆ–ಶತ್ರುತಾಪನನಾದ ಪಾಂಡವನು ಸೈಂಧವನನ್ನು ಸಂಹರಿಸುವ ಸಲುವಾಗಿ ನಿನ್ನ ಸೈನ್ಯವನ್ನು ತರುಬಿದನು. ಅಳಿದುಳಿದವರು ಓಡಿಹೋದರು. ಸೈನ್ಯಗಳ ಮಧ್ಯದಲ್ಲಿ ರಥವನ್ನು ನುಗ್ಗಿಸಿಕೊಂಡು ಹೋಗುತ್ತಿದ್ದ ಶ್ರೀಕೃಷ್ಣನು ಕುದುರೆಗಳನ್ನು ಚಪ್ಪರಿಸುತ್ತಾ ಮತ್ತಷ್ಟು ವೇಗವಾಗಿ ಹೋಗುವಂತೆ ಮಾಡಿದನು. ಬೆಳ್ಳಕ್ಕಿಗಳಿಗೆ ಸಮಾನವಾದ ಬಿಳಿಯ ಬಣ್ಣದಿಂದ ಕೂಡಿದ್ದ ಪಾಂಚಜನ್ಯವನ್ನೂ ಶ್ರೀಕೃಷ್ಣನು ಗಟ್ಟಿಯಾಗಿ ಊದಿದನು.

**ಕೌನ್ತೇಯೇನಾಗ್ರತಃ ಸೃಷ್ಟಾ ನ್ಯಪತನ್ಪೃಷ್ಠತಃ ಶರಾಃ।**
**ತೂರ್ಣಾತ್ತೂರ್ಣತರಂ ಹ್ಯಶ್ವಾಃ ಪ್ರಾವಹನ್ವಾತರಂಹಸಃ ॥೩೩॥**

ಕೌಂತೇಯನು ಮುಂದೆ ಬಿಟ್ಟ ಬಾಣಗಳೆಲ್ಲವೂ ಅವನ ಹಿಂದೆ ಬೀಳುತ್ತಿದ್ದುವು. ಅದಕ್ಕೆ ಕಾರಣವೇನೆಂದರೆ: ಬಾಣಗಳ ವೇಗಕ್ಕಿಂತಲೂ ಮಿಗಿಲಾದ ವೇಗದಿಂದ, ವಾಯುವೇಗಗತಿಯುಳ್ಳ ಕುದುರೆಗಳು ನದಿ ಗಳೋಪಾದಿಯಲ್ಲಿ ಪ್ರವಹಿಸುತ್ತಿದ್ದುವು. (ನದಿಗಳ ಪ್ರವಾಹಸಮಯದಲ್ಲಿ ಅದರೊಳಗಿರುವ ಬಂಡೆಗಳು ಯಾವ ವಿಧವಾದ ಅಡ್ಡಿಯನ್ನೂ ಉಂಟು ಮಾಡದಂತೆ ಅರ್ಜುನನ ಕುದುರೆಗಳು ಪ್ರವಾಹರೂಪದಲ್ಲಿ ರಭಸದಿಂದ ಹೋಗುತ್ತಿದ್ದಾಗ ಭೂಮಿಯ ಮೇಲಿದ್ದ ಹಳ್ಳ-ತಿಟ್ಟುಗಳಾಗಲೀ, ಸತ್ತ ಸೈನ್ಯಗಳ ಶರೀರಗಳಾಗಲೀ ಯಾವ ವಿಧವಾದ ಅಡ್ಡಿಯನ್ನೂ ಉಂಟು ಮಾಡುತ್ತಿರಲಿಲ್ಲ.) ಆ ಸಮಯದಲ್ಲಿ ಕ್ರುದ್ಧರಾಗಿದ್ದ ಅನೇಕಕ್ಷತ್ರಿಯರಾಜರು, ಜಯದ್ರಥನ ವಧೆಯನ್ನು ಮಾಡಬೇಕೆಂದು ಅಪೇಕ್ಷಿಸಿ ಬಹಳ ವೇಗವಾಗಿ ಹೋಗುತ್ತಿದ್ದ ಅರ್ಜುನನನ್ನು ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಕೌರವಸೈನಿಕರ ಆ ಆಕ್ರಮಣದಿಂದಾಗಿ ಅರ್ಜುನನ ಗಮನವು ಸ್ವಲ್ಪ ಕುಂಠಿತವಾಯಿತು. ಅದೇ ಸಮಯದಲ್ಲಿ ದುರ್ಯೋಧನನು ಅರ್ಜುನ ನೊಡನೆ ಯುದ್ಧಮಾಡುವ ಸಲುವಾಗಿ ಅವಸರದಿಂದ ಅವನನ್ನು ಹಿಂಬಾಲಿಸಿದನು. ಗಾಳಿಯಲ್ಲಿ ಟಪ-ಟಪನೆ ಹಾರಾಡುತ್ತಿದ್ದ ಪತಾಕೆಯನ್ನೂ, ಮೇಘದಂತೆಯೇ ಶಬ್ದಮಾಡುತ್ತಿದ್ದ ರಥವನ್ನೂ ಮತ್ತು ಘೋರರೂಪವಾಗಿದ್ದ ಕಪಿಧ್ವಜವನ್ನೂ ಕಂಡು ಕೌರವರ ಕಡೆಯ ರಥಿಗಳೆಲ್ಲರೂ ವಿಷಣ್ಣರಾದರು. ಸರ್ವತ್ರ ಸಮುದ್ಭೂತವಾದ ಧೂಳಿನಿಂದ ಸೂರ್ಯನೂ ಅಂತರ್ಹಿತ ನಾಗಲಾಗಿ ಯುದ್ಧದಲ್ಲಿ ಅರ್ಜುನನ ಬಾಣಗಳಿಂದ ಪ್ರಹೃತರಾದ ಕೌರವಯೋಧರಿಗೆ ಕೃಷ್ಣಾರ್ಜುನರನ್ನು ಕಣ್ಣೆತ್ತಿ ನೋಡಲೂ ಸಾಧ್ಯವಾಗಲಿಲ್ಲ."

೧೦೦ನೆಯ ಅಧ್ಯಾಯವು ಮುಗಿಯಿತು.

೧೦೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕೃಷ್ಣಾರ್ಜುನರು ಮುಂದೆ ಹೋದುದನ್ನು ನೋಡಿ ಕೌರವ ಸೈನಿಕರು ನಿರಾಶೆಗೊಂಡುದು: ದುರ್ಯೋಧನನು ಅರ್ಜುನನೊಡನೆ ಯುದ್ಧಮಾಡಲು ಹೋದುದು

ಸಂಜಯನು ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ತಮ್ಮನ್ನು ಅತಿಕ್ರಮಿಸಿ ಮುಂದಕ್ಕೆ ಹೊರಟುಹೋದ ವಾಸುದೇವ-ಧನಂಜಯರನ್ನು ನೋಡಿ ಭಯದಿಂದ ನಿನ್ನ ಸೈನಿಕರ ಅಸ್ಥಿಬಲವು ಸಡಿಲವಾದಂತಾಯಿತು. ಕೆಚ್ಚು ಕರಗಿದಂತಾಯಿತು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ತಮ್ಮ ಸ್ಥಿತಿಯನ್ನು ಅರಿತುಕೊಂಡು ಲಜ್ಜಿತರಾದ, ಮಹಾತ್ಮರಾದ ಸೈನಿಕರು ಧೈರ್ಯದಿಂದಲೂ, ಸಾಹಸದಿಂದಲೂ ಪ್ರಚೋದಿತರಾಗಿ, ಯುದ್ಧಮಾಡುವುದರಲ್ಲಿಯೇ ಸ್ಥಿರಚಿತ್ತರಾಗಿ, ರೋಷಪೂರ್ವಕವಾಗಿ ಧನಂಜಯನನ್ನು ಪುನಃ ಎದುರಿಸಿದರು. ರೋಷಾವೇಶದಿಂದ ಕೂಡಿದವರಾಗಿ ನಿನ್ನ ಸೈನಿಕರು ಪಾಂಡವನೊಡನೆ ಯುದ್ಧಮಾಡಲು ತೊಡಗಿದರು. ಸಮುದ್ರಕ್ಕೆ ಸೇರಿದ ನದಿಗಳು ಹಿಂದಿರುಗದಿರುವ ರೀತಿಯಲ್ಲಿ ನಿನ್ನ ಸೈನಿಕರೂ ಯುದ್ಧದಿಂದ ಇದುವರೆಗೂ ಹಿಂದಿರುಗಲೇ ಇಲ್ಲ. (ಎಲ್ಲರೂ ಅರ್ಜುನನ ಬಾಣಗಳಿಂದ ಹತರಾಗಿ ವೀರಸ್ವರ್ಗವನ್ನು ಸೇರಿದರು.)

ಅಸಂತರಾದ (ಅಸತ್ಪುರುಷರಾದ, ಕ್ಷತ್ರಿಯಧರ್ಮವನ್ನು ಪರಿಪಾಲಿಸದ) ಕೆಲವರು–ನಾಸ್ತಿಕರಾದವರು ವೇದಧರ್ಮದಿಂದ ಹಿಂದಿರುಗುವಂತೆ ಅರ್ಜುನನೊಡನೆ ಮಾಡುತ್ತಿದ್ದ ಯುದ್ಧದಿಂದ ಹಿಂದಿರುಗುತ್ತಿದ್ದರು. ಅಂತಹವರು ಅವಸಾನಾನಂತರದಲ್ಲಿ ಕ್ಷತ್ರಿಯರಿಗೆ ವಿರುದ್ಧವೆನಿಸಿದ ಧರ್ಮಾಚರಣೆಯಿಂದಾಗಿ ನರಕದಲ್ಲಿ ಬಿದ್ದು ಪಾಪದ ಫಲವನ್ನು ಅನುಭವಿಸುತ್ತಾರೆ.

ಮಹಾರಾಜ! ಈ ರೀತಿಯಲ್ಲಿ ಪುರುಷರ್ಷಭರಾದ ಕೃಷ್ಣಾರ್ಜುನರು ಹಲವಾರು ಸೈನಿಕರನ್ನು ಕೊಂದು, ಹಲವಾರು ಸೈನಿಕರನ್ನು ರಣರಂಗಕ್ಕೆ ಬೆನ್ನು ತಿರುಗಿಸಿಕೊಂಡು ಓಡಿಹೋಗುವಂತೆ ಮಾಡಿ, ಕೌರವರ ರಥಸೈನ್ಯವನ್ನು ಅತಿಕ್ರಮಿಸಿ, ಅದರಿಂದ ವಿಮುಕ್ತರಾಗಿ ಮುಂದೆ ಹೋಗಿ–ರಾಹುವಿನ ಮುಖದಿಂದ ವಿಮುಕ್ತರಾದ ಚಂದ್ರ-ಸೂರ್ಯರಂತೆಯೇ ಪ್ರಕಾಶಿಸಿದರು. ಬಲೆಯೊಳಗೆ ಸಿಕ್ಕಿಬಿದ್ದ ಮೀನುಗಳು ಬಲೆಯನ್ನು ಕಚ್ಚಿ ಅದರಿಂದ ತಪ್ಪಿಸಿಕೊಂಡು ಹೋಗುವಂತೆ–ಕೌರವಸೈನ್ಯವೆಂಬ ಮಹಾಜಾಲವನ್ನು ಛಿದ್ರ-ವಿಚ್ಛಿದ್ರವಾಗಿ ಮಾಡಿ ಹೊರಬಂದ ಕೃಷ್ಣಾರ್ಜುನರು ಬಳಲಿಕೆಯು ತೀರಿದವರಂತೆ ಪ್ರಕಾಶಿಸಿದರು.

ಶಸ್ತ್ರಾಸ್ತ್ರಗಳಿಂದ ಸಮೃದ್ಧವಾಗಿದ್ದ, ದ್ರೋಣಾಚಾರ್ಯರ ದುರ್ಭೇದ್ಯ

ವಾದ ಸೈನ್ಯಸಮೂಹದಿಂದ ಹೊರಬಂದ ಮಹಾತ್ಮರಾದ ಕೃಷ್ಣಾರ್ಜುನರು ಪ್ರಳಯಕಾಲದಲ್ಲಿ ಹುಟ್ಟುವ ಕಾಲಸೂರ್ಯರಂತೆಯೇ–ಪ್ರಕಾಶಿಸಿದರು. ಶತ್ರುಸಂತಾಪಕರಾದ, ಮಹಾತ್ಮರಾದ ಕೃಷ್ಣಾರ್ಜುನರಿಬ್ಬರೂ–ಅಗ್ನಿಯಂತೆ ದಹಿಸುವ ಸ್ವಭಾವವುಳ್ಳ ಮೊಸಳೆಯ ಬಾಯಿಂದ ತಪ್ಪಿಸಿಕೊಂಡು ಬಂದ ಎರಡು ಮೀನುಗಳಂತೆ–ಅಸ್ತ್ರಗಳ ಪ್ರಹಾರದಿಂದಲೂ ಶಸ್ತ್ರಗಳ ಸಂಕಟ ದಿಂದಲೂ ವಿಮುಕ್ತರಾಗಿ ಹೊರಬಂದು ಬಹಳವಾಗಿ ಪ್ರಕಾಶಿಸಿದರು. ಎರಡು ಮೊಸಳೆಗಳು ಸಮುದ್ರವನ್ನೇ ಅಲ್ಲೋಲ-ಕಲ್ಲೋಲಗೊಳಿಸುವಂತೆ–ಕೃಷ್ಣಾರ್ಜುನರು ಕೌರವಸೇನಾಸಮುದ್ರವನ್ನು ಅಲ್ಲೋಲ-ಕಲ್ಲೋಲ ಗೊಳಿಸಿದರು. ಕೃಷ್ಣಾರ್ಜುನರು ದ್ರೋಣರ ಸೈನ್ಯದ ಮಧ್ಯದಲ್ಲಿರುತ್ತಿರಲಾಗಿ ನಿನ್ನ ಕಡೆಯ ಸೈನಿಕರೂ ಮತ್ತು ನಿನ್ನ ಮಕ್ಕಳೂ– 'ಈ ಪಾರ್ಥ-ಕೃಷ್ಣರು ನಿಶ್ಚಯವಾಗಿಯೂ ದ್ರೋಣರನ್ನು ಅತಿಕ್ರಮಿಸಿ ಹೋಗಲಾರರು'–ಎಂಬುದಾಗಿ ನಿಶ್ಚಯಿಸಿದ್ದರು. ಆದರೆ ಮಹಾದ್ಯುತಿಮಂತರಾದ ಅರ್ಜುನ-ಕೃಷ್ಣರು ದ್ರೋಣಾನೀಕವನ್ನೂ ಅತಿಕ್ರಮಿಸಿ ಹೋದುದನ್ನು ಕಂಡು ಸಿಂಧುರಾಜನು ಬದುಕುತ್ತಾನೆಂಬ ಆಶೆಯನ್ನೇ ಸಂಪೂರ್ಣವಾಗಿ ಬಿಟ್ಟು ಬಿಟ್ಟರು. 'ದ್ರೋಣರಿಂದಲೂ ಮತ್ತು ಕೃತವರ್ಮನಿಂದಲೂ ಕೃಷ್ಣಾರ್ಜುನರು ತಪ್ಪಿಸಿಕೊಂಡು ಹೋಗಲಾರರು'–ಎಂಬ ಭರವಸೆಯು ಇದ್ದುದರಿಂದಲೇ ಜಯದ್ರಥನು ಜೀವಿಸಿಯೇ ಜೀವಿಸುವನೆಂಬ ಮಹತ್ತರವಾದ ಆಶೆಯು ನಮ್ಮೆಲ್ಲರಿಗೂ ಇದ್ದಿತು. ಮಹಾರಾಜ! ಈ ನಮ್ಮ ಮಹತ್ತಾದ ಆಶೆಯನ್ನು ಶತ್ರುತಾಪಕರಾದ ಕೃಷ್ಣಾರ್ಜುನರು ನಿಷ್ಫಲವನ್ನಾಗಿ ಮಾಡುತ್ತಾ ದ್ರೋಣಾನೀಕ ವನ್ನೂ ಮತ್ತು ದುಸ್ತರವಾಗಿದ್ದ ಕೃತವರ್ಮನ ಸೈನ್ಯವನ್ನೂ ದಾಟಿಯೇ ಬಿಟ್ಟರು. ಪ್ರಜ್ವಲಿಸುವ ಅಗ್ನಿಗಳೋಪಾದಿಯಲ್ಲಿ ದ್ರೋಣಾನೀಕವನ್ನೂ ಅತಿಕ್ರಮಿಸಿ ಮುಂದೆ ಹೋದ ಪಾರ್ಥ-ಕೃಷ್ಣರನ್ನು ನೋಡಿದನಂತರ ನಿರಾಶರಾದ ಕೌರವಮಹಾರಥರು ಸಿಂಧುರಾಜನ ಜೀವಿತದ ವಿಷಯವನ್ನೇ ಪುನಃ ಪ್ರಸ್ತಾಪಿಸಲಿಲ್ಲ. ಇತರರಿಗೆ ಭಯವರ್ಧಕರಾಗಿದ್ದ, ಸ್ವಯಂ ಭಯರಹಿತ ರಾಗಿದ್ದ ಕೃಷ್ಣ-ಧನಂಜಯರು ಜಯದ್ರಥನ ವಧೆಯ ವಿಷಯವನ್ನು ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು:

"ಮಹಾರಥರಾದ ಧೃತರಾಷ್ಟ್ರನ ಪಕ್ಷದ ಆರು ಮಹಾರಥರು ಜಯ

ದ್ರಥನನ್ನು ತಮ್ಮ ಮಧ್ಯದಲ್ಲಿಟ್ಟುಕೊಂಡು ಸಂರಕ್ಷಿಸುತ್ತಿದ್ದರೂ ಸೈಂಧವನೇ ನಾದರೂ ನಮ್ಮ ಕಣ್ಣಿಗೆ ಬಿದ್ದನೆಂದರೆ ಅವನು ನಮ್ಮಿಂದ ಖಂಡಿತವಾಗಿಯೂ ತಪ್ಪಿಸಿಕೊಳ್ಳಲಾರನು. ದೇವತೆಗಳೊಡನೆ ಇಂದ್ರನೇ ಅವನ ರಕ್ಷಣೆಗೆ ಬಂದರೂ ಜಯದ್ರಥನನ್ನು ನಾವು ವಧಿಸಿಯೇ ತೀರುವೆವು.'

ಸಿಂಧುರಾಜನನ್ನು ನೋಡುವ ಅಪೇಕ್ಷೆಯಿಂದ ಅವನನ್ನು ಹುಡುಕುತ್ತಾ ಮಹಾಬಾಹುಗಳಾದ ಕೃಷ್ಣಾರ್ಜುನರು ಹೀಗೆ ಪರಸ್ಪರವಾಗಿ ಮಾತನಾಡಿ ಕೊಳ್ಳುತ್ತಿದ್ದಾಗ ನಿನ್ನ ಮಕ್ಕಳು ಬಹಳವಾಗಿ ಕೋಲಾಹಲಶಬ್ದವನ್ನು ಮಾಡತೊಡಗಿದರು. ಬಾಯಾರಿಕೆಯಿಂದ ಕೂಡಿದ ಎರಡು ಸಲಗಗಳು ವಿಶಾಲವಾದ ಮರುಭೂಮಿಯನ್ನು ದಾಟಿ ನೀರುಕುಡಿದು ಸಮಾಧಾನಗೊಳ್ಳುವಂತೆ ಅರಿಂದಮರಾದ ಕೃಷ್ಣಾರ್ಜುನರು ವಿಶಾಲವಾದ ಕೌರವಸೈನ್ಯವನ್ನು ದಾಟಿ ಸಮಾಧಾನಹೊಂದಿದರು.

ವ್ಯಾಘ್ರ-ಸಿಂಹ-ಗಜಾದಿಗಳಿಂದ ವ್ಯಾಪ್ತವಾಗಿರುವ ಪರ್ವತಗಳನ್ನು ದಾಟಿದ ಇಬ್ಬರು ವರ್ತಕರಂತೆ, ಜರಾ-ಮರಣಗಳನ್ನು ದಾಟಿದ ಬ್ರಹ್ಮಜ್ಞಾನಿಗಳಂತೆ–ವಿಶಾಲವಾದ ಕೌರವಸೈನ್ಯವನ್ನು ದಾಟಿದ ಕೃಷ್ಣಾರ್ಜುನರು ಆನಂದಭರಿತರಾಗಿದ್ದರು. ಆಗಿನ ಕೃಷ್ಣಾರ್ಜುನರ ಮುಖದ ಕಾಂತಿಯು ಮರಳುಭೂಮಿಯನ್ನು ದಾಟಿ ನೀರು ಕುಡಿದ ಆನೆಯಂತಿರುವುದೆಂದೂ, ದುಷ್ಟಮೃಗಗಳಿಂದ ವ್ಯಾಪ್ತವಾದ ಪರ್ವತಗಳನ್ನು ದಾಟಿದ ವರ್ತಕ ರಂತಿರುವುದೆಂದೂ ಜರಾ-ಮೃತ್ಯುಗಳನ್ನು ದಾಟಿದ ಬ್ರಹ್ಮಜ್ಞಾನಿ ಗಳಂತಿರುವುದೆಂದೂ ನಿನ್ನ ಸೈನಿಕರೂ ಭಾವಿಸಿದರು. ವಿಷಸರ್ಪಕ್ಕೆ ಸಮಾನರಾಗಿದ್ದ ಮತ್ತು ಪ್ರಜ್ವಲಿಸುವ ಯಜ್ಞೇಶ್ವರನಿಗೆ ಸದೃಶರಾಗಿದ್ದ, ದ್ರೋಣರಿಂದಲೂ ಮತ್ತು ಇತರ ರಾಜರಿಂದಲೂ ಮುಕ್ತರಾಗಿ ಹೊರಬಂದ, ಇಬ್ಬರು ಸೂರ್ಯರಂತೆಯೇ ಬೆಳಗುತ್ತಿದ್ದ ಕೃಷ್ಣಾರ್ಜುನರನ್ನು ನೋಡಿ ನಿನ್ನ ಕಡೆಯ ಸೈನಿಕರು ಎಲ್ಲ ಕಡೆಗಳಿಂದಲೂ ಕೂಗಿಕೊಳ್ಳುತ್ತಿದ್ದರು. ಸಮುದ್ರಕ್ಕೆ ಸಮಾನವಾಗಿದ್ದ ದ್ರೋಣರ ವಿಶಾಲಸೈನ್ಯವನ್ನೂ ದಾಟಿ ಹೊರಗೆ ಬಂದ ಅರಿಂದಮರಾದ ಕೃಷ್ಣಾರ್ಜುನರು ಮಹಾಸಾಗರವನ್ನು ದಾಟಿಬಂದವನಿಗೆ ಉಂಟಾಗುವ ಸಂತೋಷವನ್ನೇ ಪಡೆದವರಂತೆ ಕಾಣುತ್ತಿದ್ದರು. ದ್ರೋಣ ರಿಂದಲೂ-ಕೃತವರ್ಮನಿಂದಲೂ ರಕ್ಷಿತವಾಗಿದ್ದ ದೊಡ್ಡ ಅಸ್ತ್ರಧಾರಿ

ಸಮೂಹಗಳಿಂದ ಪಾರಾಗಿ ಹೊರಬಂದ ಪಾರ್ಥ-ಕೃಷ್ಣರು ಇಂದ್ರಾಗ್ನಿಗಳಂತೆಯೇ ಅತ್ಯಂತ ತೇಜಸ್ವಿಗಳಾಗಿ ಕಾಣುತ್ತಿದ್ದರು. ದ್ರೋಣಾಚಾರ್ಯರು ಬಿಟ್ಟ ಮೊನಚಾದ ಬಾಣಗಳಿಂದ ಕೃಷ್ಣಾರ್ಜುನರು ಬಹಳವಾಗಿ ಗಾಯಗೊಂಡಿದ್ದರು. ಆ ಗಾಯಗಳಿಂದ ರಕ್ತವು ಸ್ರವಿಸುತ್ತಿದ್ದಿತು. ಆ ಸಮಯದಲ್ಲಿ ಅವರು ಬೆಟ್ಟದಕಣಿಗಿಲೇ ಮರಗಳಿಂದ ಯುಕ್ತವಾದ ಪರ್ವತಗಳಂತೆಯೇ ಕಾಣುತ್ತಿದ್ದರು. ಕ್ಷತ್ರಿಯಶ್ರೇಷ್ಠರೇ ನೀರಿನ ರೂಪದಲ್ಲಿದ್ದ ದ್ರೋಣರ ಸೇನಾಸಮುದ್ರದಲ್ಲಿ ದ್ರೋಣರೇ ಮೊಸಳೆಯ ರೂಪದಲ್ಲಿದ್ದರು. ಶಕ್ತ್ಯಾಯುಧಗಳೇ ಸರ್ಪಗಳ ರೂಪದಲ್ಲಿದ್ದುವು. ಲೋಹಮಯವಾದ ಬಾಣಗಳೇ ಉಗ್ರವಾದ ಮೊಸಳೆಗಳಂತಿದ್ದುವು. ಇಂತಹ ಅಪಾರವಾದ ಸಮುದ್ರವನ್ನು ದಾಟಿ ಸಂಕಟದಿಂದ ಮುಕ್ತರಾದ ಕೃಷ್ಣಾರ್ಜುನರು ಬಹಳವಾಗಿ ಪ್ರಕಾಶಿಸಿದರು. ದ್ರೋಣಾಸ್ತ್ರರೂಪವಾದ ಮೇಘದಲ್ಲಿ ಅವರ ಧನುಸ್ಸಿನ ಘೋಷವೆಂಬುದೇ ಗುಡುಗಿನ ರೂಪದಲ್ಲಿದ್ದಿತು. ಅವರಲ್ಲಿದ್ದ ಗದೆ ಮತ್ತು ಕತ್ತಿಗಳು ಮೇಘದಲ್ಲಿನ ಮಿಂಚುಗಳ ರೂಪದಲ್ಲಿದ್ದುವು. ಇಂತಹ ದ್ರೋಣಾಸ್ತ್ರಮೇಘದಿಂದ ವಿಮುಕ್ತರಾದ ಕೃಷ್ಣಾರ್ಜುನರು ರಾಹುವಿನಿಂದ (ಕತ್ತಲೆಯಿಂದ) ಮುಕ್ತರಾದ ಸೂರ್ಯ-ಚಂದ್ರರಂತೆಯೇ ಪ್ರಕಾಶಿಸಿದರು. ಗ್ರೀಷ್ಮರ್ತುವಿನನಂತರ ಪೂರ್ಣಪ್ರವಾಹದಿಂದ ಹರಿಯುವ, ದೊಡ್ಡ ದೊಡ್ಡ ಮೊಸಳೆಗಳಿಂದ ಸಮೃದ್ಧವಾಗಿರುವ, *ಸಿಂಧೂನದಿಯೇ ಆರನೆಯದಾಗಿರುವ, ಸಮುದ್ರಗಾಮಿಗಳಾದ ನದಿಗಳನ್ನು ಕೇವಲ ಬಾಹುಗಳಿಂದಲೇ ಈಜಿಕೊಂಡು ದಾಟಿದವರಂತೆ–ಕೌರವಮಹಾಸೈನ್ಯವನ್ನು ದಾಟಿ ಹೊರಬಂದ ಕೃಷ್ಣಾರ್ಜುನರು ಪ್ರಕಾಶಿಸಿದರು. ಈ ರೀತಿಯಲ್ಲಿ ದ್ರೋಣಾಚಾರ್ಯರ ಅಸ್ತ್ರಬಲವನ್ನು ಕಡೆಗಾಣಿಸಿ ಹೊರಬಂದುದಕ್ಕಾಗಿ ಲೋಕವಿಖ್ಯಾತರಾಗಿದ್ದ ಕೃಷ್ಣಾರ್ಜುನರನ್ನು ಪ್ರಶಸ್ತರಾದ (ಶ್ರೇಷ್ಠರಾದ), ಧನುಷ್ಮಂತರೆಂದೂ ಸರ್ವಪ್ರಾಣಿಗಳೂ ಭಾವಿಸಿದುವು. ನೀರನ್ನು ಕುಡಿಯಲು ಸರೋವರಕ್ಕೆ ಬರುವ ರುರು (ಸಾರಂಗ) ಮೃಗವನ್ನು ಹಿಡಿಯಲು ಎರಡು ವ್ಯಾಘ್ರಗಳು

---

*ಉಳಿದ ಐದು ನದಿಗಳು: ಇಳಾವತೀ (ರಾವಿ), ವಿಪಾಶಾ (ಬೀಯಾಸ್), ವಿತಸ್ತಾ (ಝೀಲಮ್), ಶತದ್ರೂ (ಸಟ್ಲೇಜ್), ಚಂದ್ರಭಾಗಾ (ಚೀನಾಬ್) ಈ ಐದು ನದಿಗಳೂ ಪಂಜಾಬಿನಲ್ಲಿ ಹರಿಯುತ್ತವೆ. ಈ ಐದು ನದಿಗಳು ಹರಿಯುವ ಪ್ರದೇಶವಾದುದರಿಂದಲೇ ಅದಕ್ಕೆ ಪಂಜಾಬ್ (ಪಂಚ=ಐದು ಅಪ್=ನೀರಿನಿಂದ ಕೂಡಿದುದು) ಎಂದು ಹೆಸರಾಗಿದೆ.

ಕಾದುನಿಂತಿರುವಂತೆ–ಜಯದ್ರಥನು ತಮ್ಮ ಸಮೀಪಗತನಾದುದನ್ನು ನೋಡಿ ಕೃಷ್ಣಾರ್ಜುನರು ಅವನನ್ನು ಸಂಹರಿಸುವ ಅಪೇಕ್ಷೆಯಿಂದ ಅಲ್ಲಿಯೇ ತಮ್ಮ ರಥವನ್ನು ನಿಲ್ಲಿಸಿದರು. ಆ ಸಮಯದಲ್ಲಿ ಅವರ ಮುಖಗಳ ಕಾಂತಿಯನ್ನು ವೀಕ್ಷಿಸಿದ ನಿನ್ನ ಕಡೆಯ ಯೋಧರು ಜಯದ್ರಥನನ್ನು ಕೊಂದನಂತರ ಹೊಂದುವ ಪ್ರಸನ್ನಮುಖಭಾವವನ್ನು ಆಗಲೇ ಅವರು ತಾಳಿದ್ದಾರೆಂದು ಭಾವಿಸಿದರು. ಲೋಹಿತಾಕ್ಷರಾದ, ಮಹಾಬಾಹುಗಳಾದ ಪರಸ್ಪರ ಸಮ್ಮಿಳಿತ ರಾಗಿದ್ದ ಕೃಷ್ಣ-ಪಾಂಡವರು ಸಿಂಧುರಾಜನನ್ನು ನೋಡಿ ಪರಮಹೃಷ್ಟರಾಗಿ ಬಾರಿ-ಬಾರಿಗೂ ಸಿಂಹನಾದಗಳನ್ನೂ ಮಾಡುತ್ತಿದ್ದರು. ಕಡಿವಾಣಗಳನ್ನು ಹಿಡಿದಿದ್ದ ಶ್ರೀಕೃಷ್ಣನ ಮತ್ತು ಗಾಂಡೀವಧನುಸ್ಸನ್ನು ಹಿಡಿದಿದ್ದ ಅರ್ಜುನನ ಮುಖಾರವಿಂದಗಳಲ್ಲಿ ಆಗ ಸಮುದ್ಭೂತವಾಗಿದ್ದ ಕಾಂತಿಯು ಸೂರ್ಯಾಗ್ನಿ ಗಳ ಕಾಂತಿಗೆ ಸಮಾನವಾಗಿದ್ದಿತು. ದ್ರೋಣರ ಸೇನಾಸಮುದ್ರದಿಂದ ವಿಮುಕ್ತರಾಗಿ ಹೊರಬಂದ ಕೃಷ್ಣಾರ್ಜುನರಿಗೆ ತಮ್ಮ ಸಮೀಪದಲ್ಲಿಯೇ ಸೈಂಧವನಿರುವುದನ್ನು ನೋಡಿ ಗಿಡಗಪಕ್ಷಿಗಳಿಗೆ ಮಾಂಸವನ್ನು ನೋಡುವುದ ರಿಂದುಂಟಾಗುವಷ್ಟು ಸಂತೋಷವುಂಟಾಯಿತು. ತಮ್ಮ ಸಮೀಪದಲ್ಲಿಯೇ ಸೈಂಧವನಿದ್ದುದನ್ನು ನೋಡಿ ಕ್ರುದ್ಧರಾಗಿದ್ದ ಕೃಷ್ಣಾರ್ಜುನರು– ಗಿಡಗಪಕ್ಷಿಗಳು ಮಾಂಸದ ತುಂಡಿನ ಮೇಲೆ ಎಗರಿಬೀಳುವಂತೆ–ಜಯದ್ರಥನ ಮೇಲೆ ಒಡನೆಯೇ ಎರಗಿಬಿದ್ದರು. ದ್ರೋಣಾನೀಕವನ್ನು ಅತಿಕ್ರಮಿಸಿ ಸಿಂಧುರಾಜನ ಸಮೀಪಕ್ಕೆ ಬಂದ ಹೃಷೀಕೇಶ-ಧನಂಜಯರನ್ನು ನೋಡಿ ನಿನ್ನ ಮಗನಾದ ದುರ್ಯೋಧನನು ಸೈಂಧವನ ರಕ್ಷಣೆಯ ಸಲುವಾಗಿ ಪರಾಕ್ರಮವನ್ನು ತೋರಿಸಲು ಉಪಕ್ರಮಿಸಿದನು. ಹಯಸಂಸ್ಕಾರದಲ್ಲಿ (ಅಶ್ವಶಿಕ್ಷಣದಲ್ಲಿ) ನಿಪುಣನಾಗಿದ್ದ, ದ್ರೋಣರಿಂದ ಕಟ್ಟಲ್ಪಟ್ಟ ಕವಚವುಳ್ಳವನಾಗಿದ್ದ ನಿನ್ನ ಮಗನು ರಥೈಕಸಹಾಯನಾಗಿ ಕೃಷ್ಣಾರ್ಜುನರಿದ್ದೆಡೆಗೆ ಧಾವಿಸಿದನು. ಮಹಾರಾಜ! ದುರ್ಯೋಧನನು ಮಹಾಧನುಷ್ಮಂತರಾದ ಕೃಷ್ಣ-ಪಾರ್ಥರನ್ನೂ ಅತಿಕ್ರಮಿಸಿ ಮುಂದೆಹೋಗಿ ಪುಂಡರೀಕಾಕ್ಷನಿಗೆ ಎದುರಾಗಿ ನಿಂತನು. ಧನಂಜಯನನ್ನು ಅತಿಕ್ರಮಿಸಿ ಮುಂದೆಹೋಗಿ ಅವನನ್ನು ಎದುರಿಸಿ ದುರ್ಯೋಧನನು ಯುದ್ಧ ಸನ್ನದ್ಧನಾಗಲಾಗಿ ನಿನ್ನ ಸೈನಿಕರೆಲ್ಲರೂ ಪರಮಹೃಷ್ಟರಾಗಿ ರಣವಾದ್ಯಗಳನ್ನು

ಬಾರಿಸಿದರು. ದುರ್ಯೋಧನನು ಕೃಷ್ಣಾರ್ಜುನರನ್ನು ಎದುರಿಸಿ ಯುದ್ಧಮಾಡಲು ಸಿದ್ಧನಾದುದನ್ನು ನೋಡಿ ಶಂಖನಾದಗಳಿಂದ ಮಿಶ್ರವಾದ ಸಿಂಹನಾದಗಳಾದುವು. ಸಿಂಧುರಾಜನ ರಕ್ಷಣೆಯಲ್ಲಿ ನಿರತರಾಗಿದ್ದ, ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ವಿರಾಜಿಸುತ್ತಿದ್ದ ಮಹಾರಥರು ನಿನ್ನ ಮಗನು ಯುದ್ಧದಲ್ಲಿ ಭಾಗವಹಿಸುತ್ತಿರುವುದನ್ನು ಕಂಡು ಸಂತೋಷಭರಿತರಾದರು. ಅನುಚರರಿಂದ ಸಹಿತನಾದ ದುರ್ಯೋಧನನು ತಮ್ಮನ್ನು ಅತಿಕ್ರಮಿಸಿ ಮುಂದೆಬಂದು ಯುದ್ಧಸನ್ನದ್ಧನಾಗಿ ನಿಂತುದನ್ನು ಕಂಡು ಶ್ರೀಕೃಷ್ಣನು ಅರ್ಜುನನೊಡನೆ ಸಮಯೋಚಿತವಾದ ಮಾತುಗಳನ್ನು ಹೇಳತೊಡಗಿದನು."

೧೦೧ನೆಯ ಅಧ್ಯಾಯವು ಮುಗಿಯಿತು.

೧೦೨ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಅರ್ಜುನನನ್ನು ಪ್ರಶಂಸಾಪೂರ್ವಕವಾಗಿ ಪ್ರೋತ್ಸಾಹಿಸಿದುದು: ಅರ್ಜುನ-ದುರ್ಯೋಧನರು ಎದುರಾಗಿ ನಿಂತು ಯುದ್ಧಕ್ಕೆ ಅನುವಾದುದು: ಕೌರವಸೈನಿಕರ ಭಯ: ದುರ್ಯೋಧನನು ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಿದುದು

ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳುತ್ತಾನೆ:

"ನಮ್ಮನ್ನು ಅತಿಕ್ರಮಿಸಿ ನಮ್ಮ ಮುಂದೆ ಬಂದು ನಿಂತಿರುವ ಈ ದುರ್ಯೋಧನನನ್ನು ನೋಡು, ಧನಂಜಯ! ಇವನನ್ನು ನಾನು ಅತ್ಯದ್ಭುತಪರಾಕ್ರಮಿಯೆಂದೇ ಭಾವಿಸಿದ್ದೇನೆ. ಇವನಿಗೆ ಸದೃಶರಾದ ರಥಿಗಳು ಮತ್ತಾರೂ ಇರಲಾರರು. ಧೃತರಾಷ್ಟ್ರನ ಮಗನಾದ ದುರ್ಯೋಧನನು ಬಹಳ ದೂರದವರೆಗೂ ಬಾಣಗಳನ್ನು ಬಿಡಲು ಸಮರ್ಥನಾದವನು; ಮಹಾ ಧನುಷ್ಮಂತನು; ಅಸ್ತ್ರವಿದ್ಯಾಕುಶಲನು; ಯುದ್ಧೋನ್ಮತ್ತನು; ಸುದೃಢವಾದ ಅಸ್ತ್ರಗಳನ್ನು ಹೊಂದಿರುವವನು; ಚಿತ್ರ-ವಿಚಿತ್ರರೀತಿಯಲ್ಲಿ ಯುದ್ಧಮಾಡ ತಕ್ಕವನು; ಅತ್ಯಂತಬಲಿಷ್ಠನು; ಇವನು ಬಹಳ ಸುಖದಲ್ಲಿಯೇ ಬೆಳೆದವನು; ಎಲ್ಲರ ಗೌರವಕ್ಕೂ ಪಾತ್ರನಾಗಿರತಕ್ಕವನು; ಮಹಾರಥನು; ಅದೃಷ್ಟವಂತನು. ಆದರೆ ಇವನು ತನ್ನ ಬಂಧುಗಳನ್ನು ನಿರಂತರವೂ ದ್ವೇಷಿಸುತ್ತಲೇ ಇರುವನು. ಇವನೊಡನೆ ಯುದ್ಧಮಾಡಲು ಇದು ನಿನಗೆ ಸುಸಮಯವಾಗಿದೆಯೆಂದೇ

ನಾನು ಭಾವಿಸುತ್ತೇನೆ. ನಿನ್ನ ಜಯಕ್ಕಾಗಲೀ ಅಥವಾ ಪರಾಜಯಕ್ಕಾಗಲೀ ಈಗ ಇವನೊಡನೆ ನೀನು ರಣದ್ಯೂತವನ್ನು ಆಡಬೇಕಾಗಿದೆ. ಬಹಳ ಕಾಲದಿಂದ ಹೃದಯದಲ್ಲಿ ಅಡಗಿಸಿಟ್ಟುಕೊಂಡಿರುವ ಕ್ರೋಧವಿಷವನ್ನು ಇವನ ಮೇಲೆ ಈಗ ವಮನಮಾಡು. (ಕಕ್ಕಿಬಿಡು.) ಈ ಮಹಾರಥನೇ ಪಾಂಡವರ ಎಲ್ಲ ಅನರ್ಥಗಳಿಗೂ ಮೂಲಕಾರಣನಾಗಿದ್ದಾನೆ. ನಿನ್ನ ಬಾಣಗಳಿಗೆ ಲಕ್ಷ್ಯನಾಗಲು ಈಗ ಇವನೇ ನಿನ್ನ ಹತ್ತಿರಕ್ಕೆ ಬಂದಿದ್ದಾನೆ. ಇಂದು ನಿನ್ನ ಮನಸ್ಸಿನ ಸಂಕಲ್ಪವು ಫಲಿಸುವುದನ್ನು ಗಮನಿಸಿ ಕಾರ್ಯಮಾಡು. ಅಖಂಡ ಸಾಮ್ರಾಜ್ಯವನ್ನೇ ಪಡೆದುಕೊಳ್ಳಬೇಕೆಂಬ ಅಭಿಲಾಷೆಯಿರುವ ಈ ರಾಜನು ನಿನ್ನೊಡನೆ ಹೇಗೆ ಯುದ್ಧಮಾಡುವನು? *ಅದೃಷ್ಟವಶಾತ್ ಇಂದಿವನು ನಿನ್ನ ಬಾಣಗಳಿಗೆ ಲಕ್ಷ್ಯನಾಗಿ ಬಂದುಬಿಟ್ಟಿದ್ದಾನೆ. ಇವನಿಲ್ಲಿಯೇ ಪ್ರಾಣ ತೊರೆಯುವ ರೀತಿಯಲ್ಲಿ ಇವನೊಡನೆ ನೀನು ಯುದ್ಧಮಾಡಬೇಕಾಗಿದೆ. ಪುರುಷರ್ಷಭನೇ! ಐಶ್ವರ್ಯಮದದಿಂದ ಇವನು ಮಹಾಮೂರ್ಖನಾಗಿ ಬಿಟ್ಟಿದ್ದಾನೆ. ಇವನು ಯಾವಾಗಲೂ ಕಷ್ಟವೆಂಬುದನ್ನು ಕಂಡವನೇ ಅಲ್ಲ. ಯುದ್ಧದಲ್ಲಿ ನಿನಗಿರುವ ಪರಾಕ್ರಮದ ಪರಿಮಿತಿಯನ್ನೂ ಇವನು ತಿಳಿದವನಾಗಿಲ್ಲ. ಸುರಾಸುರಮನುಷ್ಯರಿಂದ ಕೂಡಿರುವ ಮೂರು ಲೋಕಗಳೂ ನಿನ್ನೊಡನೆ ಯುದ್ಧಮಾಡಲು ಮತ್ತು ನಿನ್ನನ್ನು ಯುದ್ಧದಲ್ಲಿ ಜಯಿಸಲು ಸಮರ್ಥವಾಗಿಲ್ಲ. ಹೀಗಿರುವಾಗ ಒಬ್ಬನೇ ಒಬ್ಬ ದುರ್ಯೋಧನನು ನಿನ್ನನ್ನು ಹೇಗೆ ತಾನೇ ಜಯಿಸುವನು?

ಪಾರ್ಥ! ಅದೃಷ್ಟವಶಾತ್ ಈ ದುರ್ಯೋಧನನಿಂದು ನಿನ್ನ ಸಮೀಪಕ್ಕೇ ಬಂದಿರುತ್ತಾನೆ. ಮಹಾಬಾಹುವೇ! ಪುರಂದರನು ವೃತ್ರನನ್ನು ಸಂಹರಿಸಿ ದಂತೆ–ನೀನು ಇವನನ್ನು ಸಂಹರಿಸು. ಅನಘನೇ! (ಪಾಪರಹಿತನೇ!) ಇವನು ಯಾವಾಗಲೂ ನಿನಗೆ ಅನರ್ಥವನ್ನುಂಟುಮಾಡುವುದಕ್ಕಾಗಿಯೇ ತನ್ನ ಪರಾ ಕ್ರಮವೆಲ್ಲವನ್ನೂ ಬಳಸುತ್ತಿದ್ದಾನೆ. ದ್ಯೂತದಲ್ಲಿ ಕೇವಲ ವಂಚನೆಯಿಂದಲೇ

---

*ರಾಜನಾದವನು ವೀರಶ್ರೇಷ್ಠರೊಡನೆ ಜಯಾಪಜಯಗಳನ್ನು ನಿರ್ಧರಿಸುವ ಯುದ್ಧದಲ್ಲಿ ತೊಡಗಬಾರದು. ಅಪಾರಸೈನ್ಯವಿದ್ದಾಗ್ಯೂ ರಾಜನಾದವನು ಪರಾಜಿತ ನಾದರೆ ಅಥವಾ ಮರಣಹೊಂದಿದರೆ ಆ ಪಕ್ಷವೇ ಪರಾಜಯಹೊಂದಿದಂತಾಗುವುದು. ಹೀಗಿರುವಾಗ ರಾಜ್ಯಾಭಿಲಾಷಿಯಾದ ದುರ್ಯೋಧನನು ತನಗೆ ಮಾರಕವಾದ ಯುದ್ಧದಲ್ಲಿ ಏಕೆ ತೊಡಗಿದನೆಂಬುದು ಶ್ರೀಕೃಷ್ಣನ ಜಿಜ್ಞಾಸೆ.

ಇವನು ಧರ್ಮರಾಜನನ್ನು ವಂಚಿಸಿದನು. ನೀವು ಇವನ ವಿಷಯದಲ್ಲಿ ಯಾವಾಗಲೂ ತಪ್ಪುಮಾಡಿದವರೇ ಅಲ್ಲ. ಆದರೂ ಸಹ ಪಾಪಬುದ್ಧಿಯಾದ ನಿಷ್ಕರುಣಿಯಾದ ಈ ದುರ್ಯೋಧನನು ನಿಮ್ಮ ವಿಷಯದಲ್ಲಿ ಅತ್ಯಂತ ಕ್ರೂರವಾದ ಅನೇಕವಾದ ದುರ್ವ್ಯವಹಾರಗಳನ್ನು ಮಾಡಿರುತ್ತಾನೆ. ಹೀಗೆ ಅನಾರ್ಯನಾದ, ಕ್ರುದ್ಧನಾದ, ಸ್ವೇಚ್ಛಾಚಾರಿಯಾದ ದುಷ್ಟಪುರುಷನನ್ನು ನೀನು ಯುದ್ಧದಲ್ಲಿ ಶ್ರೇಷ್ಠವಾದ ಬುದ್ಧಿಯನ್ನು ಆಶ್ರಯಿಸಿ (ಯುದ್ಧಮಾಡಲು ನಿಶ್ಚಯಿಸಿ), ವಿಚಾರಮಾಡಲು ಹೋಗದೇ ಸಂಹರಿಸು. ದುಷ್ಟನಾದ ದುರ್ಯೋಧನನು ಮೋಸದಿಂದ ನಿಮ್ಮ ರಾಜ್ಯವನ್ನು ಅಪಹರಿಸಿದುದು, ಇವನಿಂದಲೇ ನೀವು ವನವಾಸದ ಕಷ್ಟವನ್ನು ಅನುಭವಿಸಬೇಕಾಗಿಬಂದುದು, ತುಂಬಿದ ಸಭೆಯಲ್ಲಿ ದ್ರೌಪದಿಯು ಅನುಭವಿಸಿದ ಕ್ಲೇಶ–ಇವುಗಳೆಲ್ಲವನ್ನೂ ಸ್ಮರಿಸಿ ನೀನು ನಿನ್ನ ಪರಾಕ್ರಮವನ್ನು ತೋರಿಸು. ಸೌಭಾಗ್ಯವಶಾತ್ ದುರ್ಯೋಧನನು ನಿನ್ನ ಬಾಣಗಳು ಹೋಗುವ ಪರಿಸರದಲ್ಲಿಯೇ ಬಂದು ನಿಂತಿದ್ದಾನೆ. ಇದಕ್ಕಿಂತಲೂ ಹೆಚ್ಚಿನ ಭಾಗ್ಯವೆಂದರೆ ಇವನು ನೀನು ಹೊರಟಿರುವ ಕಾರ್ಯಕ್ಕೆ ಪ್ರತಿಘಾತವನ್ನುಂಟುಮಾಡುವ ಸಲುವಾಗಿ ನಿನ್ನ ಅಗ್ರಭಾಗದಲ್ಲಿಯೇ ನಿಂತು ಯುದ್ಧಮಾಡಲು ಪ್ರಯತ್ನಿಸುತ್ತಿದ್ದಾನೆ. ಅದೃಷ್ಟವಶಾತ್ ಇವನು ನಿನ್ನೊಡನೆ ಯುದ್ಧಮಾಡುವುದು ಕರ್ತವ್ಯವೆಂದು ತಿಳಿದವನಾಗಿದ್ದಾನೆ. ನೀನು ಇಚ್ಛಿಸದೆಯೇ ಇದ್ದರೂ ನಿನ್ನ ಎಲ್ಲ ಕಾಮನೆಗಳೂ ಪೂರ್ಣವಾಗುವ ಸಮಯವು ತಾನೇತಾನಾಗಿ ಒದಗಿಬಂದಿದೆ. ಇದು ನಿಶ್ಚಯವಾಗಿಯೂ ಅದೃಷ್ಟವೇ ಸರಿ. ಪಾರ್ಥ! ದೇವಾಸುರರ ಯುದ್ಧದಲ್ಲಿ ಇಂದ್ರನು ಜಂಭಾಸುರನನ್ನು ಸಂಹರಿಸಿದಂತೆ ಧೃತರಾಷ್ಟ್ರನ ಮಗನಾದ ಕುಲಾಧಮನಾದ ದುರ್ಯೋಧನನನ್ನು ಇಂದು ನೀನು ಯುದ್ಧದಲ್ಲಿ ಸಂಹರಿಸು. ಇವನನ್ನು ವಧಿಸಿದನಂತರ ಅನಾಥವಾಗುವ ಇವನ ಸೈನ್ಯವನ್ನೂ ಸಂಹರಿಸು. ದುರಾತ್ಮರೆಲ್ಲರಿಗೂ ಮೂಲಭೂತನಾಗಿರುವ ಇವನನ್ನು ಕ್ಷತ-ವಿಕ್ಷತನನ್ನಾಗಿ ಮಾಡು. ಕತ್ತರಿಸಿಹಾಕು. ಹೀಗೆ ವೈರವೆಂಬ ಮಹಾಯಜ್ಞದ ಅವಭೃಥಸ್ನಾನವನ್ನು ನೀನು ಮಾಡಬಹುದಾಗಿದೆ."

ಮಹಾರಾಜ! ಶ್ರೀಕೃಷ್ಣನು ಈ ಮಾತುಗಳಿಂದ ಅರ್ಜುನನನ್ನು ಪ್ರೋತ್ಸಾಹಿಸಿದನಂತರ ಪಾರ್ಥನು ಹಾಗೆಯೇ ಆಗಲೆಂದು ಹೇಳಿ ಮುಂದುವರಿದು ಈ ಮಾತುಗಳನ್ನು ಹೇಳಿದನು:

(೧೭೭)—೧೬

“ಕೃಷ್ಣ! ನೀನು ಹೇಳಿದುದು ಸಕಾಲಿಕವಾಗಿದೆ. ಇದು ನಾನು ಎಲ್ಲಕ್ಕಿಂತಲೂ ಮೊದಲು ಮಾಡಬೇಕಾದ ಮುಖ್ಯಕರ್ತವ್ಯವಾಗಿದೆ. ಉಳಿದೆಲ್ಲ ಕಾರ್ಯಗಳನ್ನೂ ಬದಿಗೊತ್ತಿ ಸುಯೋಧನನಿರುವ ಕಡೆಗೇ ನೀನೀಗ ರಥವನ್ನು ನಡೆಸು. ಯಾವನು ಬಹಳಕಾಲದವರೆಗೆ ನಮ್ಮ ರಾಜ್ಯವನ್ನು ಯಾವ ವಿಧವಾದ ಉಪದ್ರವಗಳೂ ಇಲ್ಲದೇ ಉಪಭೋಗಿಸಿದನೋ ಅವನ ತಲೆಯನ್ನು ಯುದ್ಧದಲ್ಲಿ ನನ್ನ ಸಂಪೂರ್ಣಪರಾಕ್ರಮವನ್ನೂ ಯೋಜಿಸಿ ಕತ್ತರಿಸಿ ಬಿಡಬಲ್ಲೆನೇ? ಕ್ಲೇಶಪಡಲು ಅನರ್ಹಳಾದ ದ್ರೌಪದಿಯ ತಲೆಗೂದಲನ್ನು ಹಿಡಿದೆಳೆದು ತುಂಬಿದ ಸಭೆಯಲ್ಲಿ ಅವಳಿಗೆ ಮಾಡಿದ ಅವಮಾನಕ್ಕೆ ಪ್ರತೀಕಾರವನ್ನು ನಾನೀಗ ಮಾಡಬಲ್ಲೆನೇ? (ಹಾಗೆ ಮಾಡಲು ಈಗಲಾದರೂ ನನಗೆ ಅವಕಾಶ ಸಿಕ್ಕುವುದೇ?)”

ಮಹಾರಾಜ! ಕೃಷ್ಣಾರ್ಜುನರು ಹೀಗೆ ಮಾತನಾಡಿಕೊಳ್ಳುತ್ತಾ ಹೃಷ್ಟರಾಗಿ ಶ್ರೇಷ್ಠವಾದ ಬಿಳಿಯ ಕುದುರೆಗಳನ್ನು–ದುರ್ಯೋಧನನನ್ನೇ ತಮ್ಮ ಲಕ್ಷ್ಯವನ್ನಾಗಿ ಮಾಡಿಕೊಳ್ಳಲು–ಅವನಿದ್ದ ಕಡೆಗೇ ದೌಡಾಯಿಸಿದರು.

ಭರತರ್ಷಭನೇ! ನಿನ್ನ ಮಗನು ಕೃಷ್ಣಾರ್ಜುನರನ್ನು ಸಮೀಪಿಸಿದ್ದರೂ–ಮಹಾರಥರನ್ನು ನೋಡಿ ಭಯಪಡಬೇಕಾಗಿದ್ದ ಆ ಸಮಯದಲ್ಲಿ ಸ್ವಲ್ಪವಾದರೂ ಭಯಪಡಲಿಲ್ಲ. ತನ್ನ ಎದುರಿಗೇ ಬಂದ ಕೃಷ್ಣಾರ್ಜುನರನ್ನು ತಡೆದು ನಿಲ್ಲಿಸಿದ ನಿನ್ನ ಮಗನಾದ ದುರ್ಯೋಧನನ ಸಾಹಸವನ್ನು ಕಂಡು ನಿನ್ನ ಪಕ್ಷದ ಕ್ಷತ್ರಿಯಯೋಧರೆಲ್ಲರೂ ಆತನನ್ನು ಬಹಳವಾಗಿ ಪ್ರಶಂಸಿಸಿದರು. ರಾಜನು ಪಾರ್ಥನೊಡನೆ ಯುದ್ಧದಲ್ಲಿ ತೊಡಗಿರುವುದನ್ನು ಕಂಡು ನಿನ್ನ ಕಡೆಯ ಎಲ್ಲ ಸೈನಿಕರೂ ಗಟ್ಟಿಯಾಗಿ ಸಿಂಹನಾದಗಳನ್ನು ಮಾಡಿದರು. ಸೈನ್ಯದ ಜನರೆಲ್ಲರೂ ಭಯಂಕರವಾದ ಕೋಲಾಹಲವನ್ನುಂಟುಮಾಡುತ್ತಿದ್ದ ಆ ಸಮಯದಲ್ಲಿ ನಿನ್ನ ಮಗನು ಎದುರಾಳಿಯಾದ ಅರ್ಜುನನನ್ನು ತಿರಸ್ಕರಿಸಿ ಅವನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದನು. ಎದುರಾಳಿಯಾದ, ಧನುಷ್ಮಂತನಾದ, ನಿನ್ನ ಮಗನಿಂದ ನಿರೋಧಿಸಲ್ಪಟ್ಟ, ಪರಂತಪನಾದ ಅರ್ಜುನನು ನಿನ್ನ ಮಗನ ಮೇಲೆ ಬಹಳವಾಗಿ ಕೋಪಗೊಂಡನು. ಒಬ್ಬರು ಮತ್ತೊಬ್ಬರ ಮೇಲೆ ಬಹಳವಾಗಿ ಕೋಪಗೊಂಡಿದ್ದ ದುರ್ಯೋಧನ-ಧನಂಜಯರು ಎದುರುಬದುರಾಗಿ ನಿಂತಿರುವುದನ್ನು ಭಯಂಕರರೂಪರಾದ

ರಾಜರು ಸುತ್ತಲೂ ನಿಂತು ನೋಡುತ್ತಿದ್ದರು. ಕುಪಿತನಾಗಿದ್ದ ಪಾರ್ಥನನ್ನೂ ಮತ್ತು ವಾಸುದೇವನನ್ನೂ ನೋಡಿ ಅವರೊಡನೆ ಯುದ್ಧಮಾಡಲು ಇಚ್ಛಿಸಿದ ನಿನ್ನ ಮಗನು ಗಹ-ಗಹಿಸಿ ನಗುತ್ತಲೇ ಯುದ್ಧಕ್ಕೆ ಆಹ್ವಾನಿಸಿದನು. ದುರ್ಯೋಧನನ ಯುದ್ಧದ ಆಹ್ವಾನವನ್ನು ಕೇಳಿ ಪಾಂಡವ-ಕೃಷ್ಣರು ಆನಂದಭರಿತರಾಗಿ ಸಿಂಹನಾದಮಾಡಿದರು ಮತ್ತು ತಮ್ಮ ಶ್ರೇಷ್ಠವಾದ ಶಂಖಗಳನ್ನೂ ಊದಿದರು. ಕೃಷ್ಣಾರ್ಜುನರು ಪರಮಹೃಷ್ಟರಾಗಿರುವುದನ್ನು ಕಂಡು ಎಲ್ಲ ಕೌರವಸೈನಿಕರೂ ನಿನ್ನ ಮಗನು ಜೀವದಿಂದುಳಿಯುವ ವಿಷಯದಲ್ಲಿಯೇ ನಿರಾಶೆಯನ್ನು ಹೊಂದಿದರು. ಇತರ ಕುರುಯೋಧರೂ ಸಹ ಶೋಕಾವಿಷ್ಟರಾದರು. ಅವರೆಲ್ಲರೂ ನಿನ್ನ ಮಗನು ಸಮರಾಗ್ನಿಯಲ್ಲಿ ಹುತನಾಗಿ ಹೋದನೆಂದೇ ಭಾವಿಸಿದರು. ಅತ್ಯಂತಪ್ರಹೃಷ್ಟರಾಗಿದ್ದ ಕೃಷ್ಣ-ಪಾಂಡವರನ್ನು ನೋಡಿ ನಿನ್ನ ಯೋಧರೆಲ್ಲರೂ ಭಯಗೊಂಡು–'ಹತೋ ರಾಜಾ ಹತೋ ರಾಜಾ ನಮ್ಮ ರಾಜನು ಸತ್ತು ಹೋದನು! ನಮ್ಮ ರಾಜನು ಸತ್ತು ಹೋದನು!'–ಎಂದೇ ಕೂಗಿಕೊಳ್ಳಲಾರಂಭಿಸಿದರು. ಸೈನಿಕರು ಮಾಡುತ್ತಿದ್ದ ಕೋಲಾಹಲಧ್ವನಿಯನ್ನು ಕೇಳಿದ ದುರ್ಯೋಧನನು– "ನಿಮ್ಮ ಭಯವು ದೂರವಾಗಲಿ. ನಾನು ಈ ಇಬ್ಬರು ಕೃಷ್ಣರನ್ನೂ ಮೃತ್ಯುವಿನೆಡೆಗೆ ಕಳುಹಿಸುತ್ತೇನೆ"–ಎಂದು ಹೇಳಿದನು. ಜಯಾಪೇಕ್ಷಿಯಾದ ರಾಜನು ಸೈನಿಕರಿಗೆ ಹೀಗೆ ಹೇಳಿ ಕುಂತೀಪುತ್ರನನ್ನು ಸಂಬೋಧಿಸಿ ಕ್ರೋಧಪೂರ್ವಕವಾಗಿ ಈ ಮಾತುಗಳನ್ನು ಹೇಳಿದನು: "ಪಾರ್ಥ! ನೀನು ಪಾಂಡುವಿಗೆ ಹುಟ್ಟಿದ ಮಗನೇ ಆಗಿದ್ದ ಪಕ್ಷದಲ್ಲಿ ನೀನು ಕಲಿತಿರುವ ದಿವ್ಯಾಸ್ತ್ರಗಳನ್ನೂ, ಲೌಕಿಕಾಸ್ತ್ರಗಳನ್ನೂ ಬಹಳ ಶೀಘ್ರವಾಗಿ ನನ್ನಲ್ಲಿ ಪ್ರದರ್ಶಿಸು. ನಿನ್ನಲ್ಲಿ ಯಾವ ಬಲವಿದೆಯೋ, ಪರಾಕ್ರಮವಿದೆಯೋ ಅದನ್ನು ನೀನು ತೀವ್ರವಾಗಿ ನನ್ನಲ್ಲಿ ತೋರಿಸು. ಕೇಶವನಲ್ಲಿ ಎಷ್ಟು ಪರಾಕ್ರಮವಿದೆಯೋ ಆ ಪರಾಕ್ರಮವನ್ನು ಅವನೂ ತೋರಿಸಲಿ. ನಿನ್ನ ಪೌರುಷವೆಷ್ಟಿದೆಯೆಂಬುದನ್ನು ನಾವೂ ಈಗ ನೋಡುತ್ತೇವೆ. ಶ್ರೇಷ್ಠರಿಂದಲೂ ಶ್ಲಾಘಿಸಲ್ಪಟ್ಟ, ನಮ್ಮ ಪರೋಕ್ಷದಲ್ಲಿ ನೀನು ಮಾಡಿದ ಅನೇಕ ಸಾಹಸಕರ್ಮಗಳ ವಿಷಯವಾಗಿ ಜನರು ಹೇಳುತ್ತಿರುತ್ತಾರೆ. ಅಂತಹ ಸಾಹಸಕಾರ್ಯಗಳನ್ನು ಈಗ ನನ್ನ ಮುಂದೆಯೂ ಪ್ರದರ್ಶಿಸು; ನೋಡುತ್ತೇನೆ."

೧೦೨ನೆಯ ಅಧ್ಯಾಯವು ಮುಗಿಯಿತು.

## ದುರ್ಯೋಧನಾರ್ಜುನರ ಯುದ್ಧ: ದುರ್ಯೋಧನನ ಪರಾಜಯ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ನಿನ್ನ ಮಗನಾದ ದುರ್ಯೋಧನನು ಅರ್ಜುನನೊಡನೆ ಹೀಗೆ ಹೇಳಿ ಮರ್ಮಸ್ಥಾನಗಳನ್ನೂ ಭೇದಿಸಿಕೊಂಡು ಹೋಗುವ ಮೂರು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿ, ಅನಂತರ ಮಹಾವೇಗಯುಕ್ತವಾದ ನಾಲ್ಕು ಬಾಣಗಳಿಂದ ಅರ್ಜುನನ ನಾಲ್ಕು ಕುದುರೆಗಳನ್ನೂ ಪ್ರಹರಿಸಿದನು. ಬಳಿಕ ವಾಸುದೇವನನ್ನು ಹತ್ತು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿ, ಅವನು ಹಿಡಿದಿದ್ದ ಚಾವಟಿಯನ್ನೂ ಸಹ ಭಲ್ಲದಿಂದ ಕತ್ತರಿಸಿ ಕೆಳಕ್ಕೆ ಬೀಳಿಸಿದನು. ಅದಕ್ಕೆ ಪ್ರತಿಯಾಗಿ ಸ್ಥಿರಚಿತ್ತನಾದ ಅರ್ಜುನನೂ ದುರ್ಯೋಧನನನ್ನು ವಿಚಿತ್ರವಾದ ರೆಕ್ಕೆಗಳಿದ್ದ, ಮಸೆಗಲ್ಲಿನಿಂದ ಚೂಪಾಗಿ ಮಾಡಿದ್ದ ಹದಿನಾಲ್ಕು ಬಾಣಗಳಿಂದ ಪ್ರಹರಿಸಿದನು. ಆದರೆ ಆ ಬಾಣಗಳು ದುರ್ಯೋಧನನ ಕವಚಕ್ಕೆ ತಗುಲಿ ಜಾರಿ ಕೆಳಕ್ಕೆ ಬಿದ್ದುವು. ತಾನು ಪ್ರಯೋಗಿಸಿದ ಹದಿನಾಲ್ಕು ಬಾಣಗಳೂ ನಿಷ್ಫಲವಾದುದನ್ನು ನೋಡಿ ಅರ್ಜುನನು ನಿಶಿತವಾದ ಹದಿನಾಲ್ಕು ಬಾಣಗಳನ್ನು ದುರ್ಯೋಧನನ ಮೇಲೆ ಪುನಃ ಪ್ರಹರಿಸಿದನು. ಅವುಗಳೂ ಸಹ ದುರ್ಯೋಧನನು ತೊಟ್ಟಿದ್ದ ಕವಚದಿಂದ ಪುಟಿದು ಬಿದ್ದುವು. ಅರ್ಜುನನು ಬಿಟ್ಟ ಇಪ್ಪತ್ತೆಂಟು ಬಾಣಗಳೂ ದುರ್ಯೋಧನನ ಮೇಲೆ ಯಾವವಿಧವಾದ ಪರಿಣಾಮವನ್ನೂ ಉಂಟು ಮಾಡದೇ ನಿಷ್ಫಲವಾದುದನ್ನು ನೋಡಿ ಶತ್ರುವೀರಹಂತಕನಾದ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು:

"ಪಾರ್ಥ! ನಾನು ಹಿಂದೆಂದೂ ಕಾಣದಿದ್ದ ವಿಚಿತ್ರದೃಶ್ಯವನ್ನು ಇಂದು ಕಾಣುತ್ತಿದ್ದೇನೆ. ಬಂಡೆಗಳು ಚಲಿಸಿದರೆ ಎಷ್ಟು ಅಚ್ಚರಿಯಾಗುವುದೋ ಅಂತಹುದೇ ಅಚ್ಚರಿಯನ್ನು ನಾನೀಗ ಪ್ರತ್ಯಕ್ಷವಾಗಿ ಕಾಣುತ್ತಿದ್ದೇನೆ. ನೀನು ಮಹಾರಥನಾದ ದುರ್ಯೋಧನನ ಮೇಲೆ ಬಿಡುತ್ತಿರುವ ಬಾಣಗಳು ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡದೇ ನಿರರ್ಥಕವಾಗಿವೆ. ಅರ್ಜುನ! ನಿನ್ನ ಗಾಂಡೀವಧನುಸ್ಸಿನ ಶಕ್ತಿಯು ಹಿಂದಿನಂತೆಯೇ ದೃಢವಾಗಿರುವುದೇ? ಅಥವಾ ಕುಗ್ಗಿರುವುದೇ? ನಿನ್ನ ಮುಷ್ಟಿಯು ಹಿಂದಿ

ನಂತೆಯೇ ದೃಢವಾಗಿರುವುದೇ? ನಿನ್ನ ಭುಜಗಳ ಬಲವೂ ಹಿಂದಿನಂತೆಯೇ ಇರುವುದೇ? ನಿನ್ನ ಮತ್ತು ನಿನ್ನ ಶತ್ರುವಿನ ಕಟ್ಟಕಡೆಯ ಸಮಾಗಮಕಾಲವು ಬಂದಿಲ್ಲ ತಾನೇ? ನನ್ನ ಪ್ರಶ್ನೆಗಳಿಗೆ ನೀನು ಯಥಾವತ್ತಾಗಿ ಉತ್ತರಿಸು. ಅರ್ಜುನ! ಯುದ್ಧದಲ್ಲಿ ದುರ್ಯೋಧನನ ರಥದ ಸಮೀಪಕ್ಕೆ ಹೋದ ನಿನ್ನ ತೀಕ್ಷ್ಣವಾದ ಬಾಣಗಳು ವ್ಯರ್ಥವಾಗಿ ಕೆಳಕ್ಕೆ ಬೀಳುತ್ತಿರುವುದನ್ನು ಕಂಡು ನನಗೆ ಅತ್ಯಂತ ವಿಸ್ಮಯವಾಗಿದೆ. ನಿನ್ನ ಬಾಣಗಳೆಂದರೆ ಸಾಮಾನ್ಯವಾದುವುಗಳಲ್ಲ. ವಜ್ರ ಮತ್ತು ಸಿಡಿಲುಗಳಿಗೆ ಸಮಾನವೂ, ಮಹಾಘೋರವೂ ಆಗಿವೆ. ಶತ್ರುವಿನ ಶರೀರವನ್ನು ಭೇದಿಸತಕ್ಕುವುಗಳು. ಅಂತಹ ಬಾಣಗಳು ದುರ್ಯೋಧನನ ವಿಷಯದಲ್ಲಿ ನಿರರ್ಥಕವಾಗಿವೆ. ಇದೆಂತಹ ಅಚ್ಚರಿ?"

"ನಿಜ ಕೃಷ್ಣ! ನೀನು ಹೇಳುತ್ತಿರುವುದನ್ನು ನಾನೂ ಗಮನಿಸಿದ್ದೇನೆ. ಇದಕ್ಕೆ ಕಾರಣವು ಹೀಗಿರಬಹುದು:

**ದ್ರೋಣೇನೈಷಾ ಮತಿಃ ಕೃಷ್ಣ ಧಾರ್ತರಾಷ್ಟ್ರೇ ನಿವೇಶಿತಾ।**
**ಅಭೇದ್ಯಾ ಹಿ ಮಮಾಸ್ತ್ರಾಣಾಮೇಷಾ ಕವಚಧಾರಣಾ ॥೧೧॥**

ದುರ್ಯೋಧನನಿಗೆ ದ್ರೋಣಾಚಾರ್ಯರು ಈ ಅಭೇದ್ಯವಾದ ಕವಚವನ್ನು ಮಂತ್ರಪೂರ್ವಕವಾಗಿ ತೊಡಿಸಿ ಅದರಲ್ಲಿ ಈ ಪರಮಾದ್ಭುತವಾದ ಶಕ್ತಿಯನ್ನು ತುಂಬಿದ್ದಾರೆ. ಆಚಾರ್ಯರು ಮಾಡಿರುವ ಕವಚಧಾರಣೆಯು ನನ್ನ ಅಸ್ತ್ರಗಳಿಗೆ ಅಭೇದ್ಯವಾಗಿದೆ. (ಕವಚವನ್ನು ಭೇದಿಸಿ ಒಳಕ್ಕೆ ಹೋಗುವ ಸಾಮರ್ಥ್ಯವು ನನ್ನ ಬಾಣಗಳಿಗಿರುವುದಿಲ್ಲ.)

**ಅಸ್ಮಿನ್ನನ್ತರ್ಹಿತಂ ಕೃಷ್ಣ ತ್ರೈಲೋಕ್ಯಮಪಿ ವರ್ಮಣಿ।**
**ಏಕೋ ದ್ರೋಣೋ ಹಿ ವೇದೈತದಹಂ ತಸ್ಮಾಚ್ಚ ಸತ್ತಮಾತ್॥೧೨॥**

ಕೃಷ್ಣ! ಈ ಕವಚದಲ್ಲಿ ಮೂರು ಲೋಕಗಳ ಶಕ್ತಿಯೂ ನಿಗೂಢವಾಗಿದೆ. ಆಚಾರ್ಯದ್ರೋಣರೊಬ್ಬರಿಗೆ ಮಾತ್ರವೇ ಈ ಕವಚಬಂಧನದ ವಿದ್ಯೆಯು ತಿಳಿದಿದೆ. ಸದ್ಗುರುಗಳಾದ ಅವರ ಅನುಗ್ರಹದಿಂದ ನಾನೂ ಈ ಪ್ರಕ್ರಿಯೆಯನ್ನು ತಿಳಿದಿರುತ್ತೇನೆ.

**ನ ಶಕ್ಯಮೇತತ್ಕವಚಂ ಬಾಣೈರ್ಭೇತ್ತುಂ ಕಥಂಚನ ।**
**ಅಪಿ ವಜ್ರೇಣ ಗೋವಿನ್ದ ಸ್ವಯಂ ಮಘವತಾ ಯುಧಿ ॥೧೩॥**

ಗೋವಿಂದ! ಬಾಣಗಳಿಂದ ಈ ಕವಚವನ್ನು ಭೇದಿಸಲು ಯಾವುದೇ ಪ್ರಯತ್ನದಿಂದಲೂ ಸಾಧ್ಯವಾಗುವುದಿಲ್ಲ. ಬಾಣಗಳ ಮಾತು ಅಂತಿರಲಿ; ಯುದ್ಧದಲ್ಲಿ ಸ್ವಯಂ ಇಂದ್ರನೇ ವಜ್ರಾಯುಧದಿಂದಲೂ ಈ ಕವಚವನ್ನು ಕತ್ತರಿಸಲಾರನು.

ಕೃಷ್ಣ! ಆದರೆ ನಿನಗೂ ಈ ವಿಷಯವು ತಿಳಿಯದೇ ಇಲ್ಲ.

**ಜಾನಂಸ್ತ್ವಮಪಿ ವೈ ಕೃಷ್ಣ ಮಾಂ ವಿಮೋಹಯಸೇ ಕಥಮ್ ।**
**ಯದ್ವೃತ್ತಂ ತ್ರಿಷು ಲೋಕೇಷು ಯಚ್ಚ ಕೇಶವ ವರ್ತತೇ ॥೧೪॥**

**ತಥಾ ಭವಿಷ್ಯದ್ಯಚ್ಚೈವ ತತ್ಸರ್ವಂ ವಿದಿತಂ ತವ ।**
**ನತ್ವಿದಂ ವೇದ ವೈ ಕಶ್ಚಿದ್ಯಥಾ ತ್ವಂ ಮಧುಸೂದನ ॥೧೫॥**

ನೀನೇ ಎಲ್ಲ ವಿಷಯಗಳನ್ನೂ ತಿಳಿದಿದ್ದರೂ ನನ್ನನ್ನೇಕೆ ವಿಮೋಹಗೊಳಿಸುತ್ತಿರುವೆ? ಮಾಧವ! ಮೂರು ಲೋಕಗಳಲ್ಲಿಯೂ ಹಿಂದೆ ಏನು ನಡೆಯಿತೋ, ಈಗ ಏನು ನಡೆಯುತ್ತಿರುವುದೋ ಮತ್ತು ಮುಂದೆ ಏನು ನಡೆಯುವುದೋ ಆ ಎಲ್ಲ ವಿಷಯಗಳೂ ನಿನಗೆ ಸಂಪೂರ್ಣವಾಗಿ ತಿಳಿದೇ ಇವೆ. ಈ ಕವಚಬಂಧನದ ವಿಷಯದಲ್ಲಿಯೂ ಸಹ ಇದರ ವಿಷಯವಾಗಿ ನಿನಗೆ ಎಷ್ಟು ತಿಳಿದಿರುವುದೋ ಅಷ್ಟು ವಿಷಯಗಳು ಬೇರೆ ಯಾರಿಗೂ ತಿಳಿದಿರುವುದಿಲ್ಲ.

ಕೃಷ್ಣ! ದ್ರೋಣಾಚಾರ್ಯರು ವಿಧಿಪೂರ್ವಕವಾಗಿ ಬಂಧಿಸಿರುವ ಈ ಕವಚವನ್ನು ಧಾರಣೆಮಾಡಿಕೊಂಡು ದುರ್ಯೋಧನನು ಸ್ವಲ್ಪವಾದರೂ ಭಯವೇ ಇಲ್ಲದವನಂತೆ ನನ್ನೊಡನೆ ಯುದ್ಧಕ್ಕೆ ನಿಂತಿದ್ದಾನೆ. ಆದರೆ:

**ಯತ್ತ್ವತ್ರ ವಿಹಿತಂ ಕಾರ್ಯಂ ನೈಷ ತದ್ವೇತ್ತಿ ಮಾಧವ ।**
**ಸ್ತ್ರೀವದೇಷ ಬಿಭರ್ತ್ಯೇತಾಂ ಯುಕ್ತಾಂ ಕವಚಧಾರಣಾಮ್ ॥೧೬॥**

ಈ ಕವಚವನ್ನು ಧಾರಣೆಮಾಡಿಕೊಂಡಿರುವ ದುರ್ಯೋಧನನಿಗೆ ವಿಹಿತವಾದ ಕರ್ತವ್ಯವನ್ನು ಮಾಡಬೇಕೆಂಬುದರ ಬಗೆಗೆ ಅರಿವೇ ಇಲ್ಲವಾಗಿದೆ. ಸ್ತ್ರೀಯರು ಯಾವ ರೀತಿಯಲ್ಲಿ ಇತರರಿಂದ ಅಲಂಕಾರ ಮಾಡಿಸಿಕೊಳ್ಳುತ್ತಾರೆಯೋ–ಅದೇ ರೀತಿಯಲ್ಲಿ ಇವನೂ ಸಹ ಬೇರೆಯವರು ತೊಡಿಸಿದ ಕವಚವನ್ನು ಧರಿಸಿದ್ದಾನೆ.

ಪಶ್ಯ ಬಾಹ್ವೋಶ್ಚ ಮೇ ವೀರ್ಯಂ ಧನುಷಶ್ಚ ಜನಾರ್ದನ।
ಪರಾಜಯಿಷ್ಯೇ ಕೌರವ್ಯಂ ಕವಚೇನಾಪಿ ರಕ್ಷಿತಮ್ ॥೧೮॥

ಜನಾರ್ದನ! ಈಗ ನನ್ನ ಬಾಹುಗಳ ವೀರ್ಯವನ್ನೂ ಮತ್ತು ಗಾಂಡೀವಧನುಸ್ಸಿನ ಮಹಾಶಕ್ತಿಯನ್ನೂ ನೋಡು. ಅಭೇದ್ಯವಾದ ಕವಚದಿಂದ ರಕ್ಷಿತನಾಗಿದ್ದರೂ ಈ ಕೌರವ್ಯನನ್ನು ನಾನು ಖಂಡಿತವಾಗಿಯೂ ಪರಾಜಯಗೊಳಿಸುತ್ತೇನೆ.

ಕೃಷ್ಣ! ದೇವೇಶನಾದ ಬ್ರಹ್ಮನು ಭಾಸ್ವರವಾದ ಈ ಕವಚವನ್ನು ಅಂಗಿರಸನಿಗೆ ಕೊಟ್ಟನು. ಅಂಗಿರಸನಿಂದ ಬೃಹಸ್ಪತಿಯು ಪಡೆದುಕೊಂಡನು. ಬೃಹಸ್ಪತಿಯಿಂದ ಈ ಕವಚವು ಪುರಂದರನಿಗೆ ಬಂದಿತು. ದೇವರಾಜನಾದ ಇಂದ್ರನು ವಿಧಿ ಮತ್ತು ರಹಸ್ಯಗಳಿಂದ ಸಹಿತವಾಗಿ ಇದೇ ಕವಚವನ್ನೇ ನನಗೆ ದಯಪಾಲಿಸಿದನು. ಇಂದು ದುರ್ಯೋಧನನು ತೊಟ್ಟುಕೊಂಡಿರುವ ಕವಚವು ದೈವನಿರ್ಮಿತವಾಗಿರಲಿ ಅಥವಾ ಬ್ರಹ್ಮನೇ ಸ್ವಯಂ ನಿರ್ಮಿಸಿದ್ದಾಗಿರಲಿ-ನನ್ನ ಬಾಣಗಳ ಮೂಲಕವಾಗಿ ಮರಣಹೊಂದಲಿರುವ ಈ ದುರ್ಬುದ್ಧಿಯಾದ ದುರ್ಯೋಧನನನ್ನು ಈ ಕವಚವು ಖಂಡಿತವಾಗಿಯೂ ರಕ್ಷಣೆಮಾಡುವುದಿಲ್ಲ."

ಮಹಾರಾಜ! ಹೀಗೆ ಶ್ರೀಕೃಷ್ಣನೊಡನೆ ಹೇಳಿದ ಮಾನನೀಯನಾದ ಪಾರ್ಥನು ಕಠೋರವಾದ ಆವರಣವನ್ನೂ ಭೇದಿಸಲು ಸಮರ್ಥವಾದ ಮಾನವಾಸ್ತ್ರವನ್ನು ತನ್ನ ಬಾಣಗಳಲ್ಲಿ ಅಭಿಮಂತ್ರಿಸಿ ಧನುಸ್ಸಿನಲ್ಲಿ ಆರೋಪಿಸಿದನು. ಶಿಂಜಿನೀಸಹಿತವಾದ ಬಾಣಗಳನ್ನು ಕಿವಿಯ ತುದಿಯವರೆಗೂ ಸೆಳೆದು ಬಾಣಗಳು ಧನುಸ್ಸಿನ ಮಧ್ಯಭಾಗಕ್ಕೆ ಬಂದಿದ್ದಾಗ (ಬಾಣಗಳು ಧನುಸ್ಸಿನಿಂದ ಚ್ಯುತವಾಗಬೇಕಾದ ಆ ಸಮಯದಲ್ಲಿ), ದ್ರೋಣರ ಮಗನಾದ ಅಶ್ವತ್ಥಾಮನು ಸಕಲವಿಧವಾದ ಅಸ್ತ್ರಗಳನ್ನೂ ವಿನಾಶಗೊಳಿಸುವ ತನ್ನ ಅಸ್ತ್ರದಿಂದ ಅದನ್ನು ಕತ್ತರಿಸಿದನು. ಬ್ರಹ್ಮವಾದಿಯಾದ ಅಶ್ವತ್ಥಾಮನು ತಾನು ಅನುಸಂಧಾನ ಮಾಡಿದ್ದ ಮಾನವಾಸ್ತ್ರವನ್ನು ಬಹಳದೂರದಿಂದಲೇ ಕತ್ತರಿಸಿದುದನ್ನು ಕಂಡು ವಿಸ್ಮಿತನಾದ ಶ್ವೇತವಾಹನನು ಶ್ರೀಕೃಷ್ಣನೊಡನೆ ಹೇಳಿದನು:

ನೈತದಸ್ತ್ರಂ ಮಯಾ ಶಕ್ಯಂ ದ್ವಿಃ ಪ್ರಯೋಕ್ತುಂ ಜನಾರ್ದನ।
ಅಸ್ತ್ರಂ ಮಾಮೇವ ಹನ್ಯಾದ್ಧಿ ಹನ್ಯಾಚ್ಚಾಪಿ ಬಲಂ ಮಮ ॥೨೪॥

"ಜನಾರ್ದನ! ನಾನು ಈ ಮಾನವಾಸ್ತ್ರವನ್ನು ಎರಡನೆಯ ಬಾರಿಗೆ ಪ್ರಯೋಗಿಸಲಾರೆನು. ಏಕೆಂದರೆ: ಹಾಗೇನಾದರೂ ಪ್ರಯೋಗಿಸಿದ್ದೇ ಆದರೆ ಈ ಮಹಾಸ್ತ್ರವು ನನ್ನನ್ನೇ ಕೊಲ್ಲಬಹುದು; ನನ್ನ ಸೈನ್ಯವನ್ನೂ ಸಂಹರಿಸಬಹುದು."

ಅರ್ಜುನನು ಶ್ರೀಕೃಷ್ಣನೊಡನೆ ಹೀಗೆ ಹೇಳುತ್ತಿದ್ದಾಗ ದುರ್ಯೋಧನನು ಸರ್ಪೋಪಮಗಳಾಗಿದ್ದ ಒಂಬತ್ತು-ಒಂಬತ್ತು ಬಾಣಗಳಿಂದ ಇಬ್ಬರು ಕೃಷ್ಣರನ್ನೂ ಪ್ರಹರಿಸಿದನು. ಪುನಃ ದುರ್ಯೋಧನನು ಕೃಷ್ಣಾರ್ಜುನರ ಮೇಲೆ ಅಪಾರವಾದ ಬಾಣಗಳ ಮಳೆಯನ್ನೇ ಸುರಿಸಿದನು. ಅದನ್ನು ನೋಡಿ ಆನಂದಭರಿತರಾದ ನಿನ್ನ ಕಡೆಯ ಸೈನಿಕರು ರಣವಾದ್ಯಗಳನ್ನು ಬಾರಿಸುತ್ತಾ ಸಿಂಹನಾದಗಳನ್ನು ಮಾಡಿದರು.

ದುರ್ಯೋಧನನ ಆ ಕ್ರಿಯೆಯಿಂದ ಪರಮಕ್ರುದ್ಧನಾದ ಪಾರ್ಥನು ಕಟವಾಯಿಯನ್ನು ನಾಲಿಗೆಯಿಂದ ನೆಕ್ಕಿಕೊಳ್ಳುತ್ತಿದ್ದನು. ಎಷ್ಟೇ ಸೂಕ್ಷ್ಮವಾಗಿ ಪರಿಶೀಲಿಸಿದರೂ ದುರ್ಯೋಧನನ ಶರೀರದ ಅಂಗಾಂಗಗಳಲ್ಲಿ ಕವಚದಿಂದ ರಕ್ಷಿತವಾಗದೇ ಇದ್ದ ಭಾಗವು ಕಾಣಲೇ ಇಲ್ಲ. ಒಡನೆಯೇ ಅರ್ಜುನನು ಸುಮುಕ್ತವಾದ ಅಂತಕೋಪಮವಾದ ನಿಶಿತವಾದ ಬಾಣಗಳಿಂದ ದುರ್ಯೋಧನನ ನಾಲ್ಕು ಕುದುರೆಗಳನ್ನೂ, ಇಬ್ಬರು ಪಾರ್ಶ್ವರಕ್ಷಕರನ್ನೂ ಸಂಹರಿಸಿದನು. ಅನಂತರ ದುರ್ಯೋಧನನ ಕೈಯಲ್ಲಿದ್ದ ಧನುಸ್ಸನ್ನೂ ಮತ್ತು ಕೈಚೀಲಗಳನ್ನೂ ಕತ್ತರಿಸಿ ಅವನ ರಥವನ್ನೂ ಚೂರು-ಚೂರುಗಳನ್ನಾಗಿ ಮಾಡಲು ಪ್ರಾರಂಭಿಸಿದನು. ಅರ್ಜುನನು ದುರ್ಯೋಧನನನ್ನು ಕ್ಷಣಮಾತ್ರ ದಲ್ಲಿ ರಥಹೀನನನ್ನಾಗಿ ಮಾಡಿದುದೇ ಅಲ್ಲದೇ ತೀಕ್ಷ್ಣವಾಗಿದ್ದ ಎರಡು ಬಾಣಗಳಿಂದ ಕೈಚೀಲಗಳಿಂದ ವಿಮುಕ್ತವಾಗಿದ್ದ (ಕವಚದ ರಕ್ಷಣೆಯೂ ಇಲ್ಲದೇ ಇದ್ದ) ಎರಡೂ ಕೈಗಳ ತಳಭಾಗಗಳನ್ನು (ಅಂಗೈಗಳನ್ನು) ಪ್ರಹರಿಸಿ ದನು. ಅನೇಕ ವಿಧವಾದ ಉಪಾಯಗಳನ್ನು ತಿಳಿದಿದ್ದ ಅರ್ಜುನನು ಈ ರೀತಿಯಲ್ಲಿ ದುರ್ಯೋಧನನ ಕೈಯುಗುರುಗಳಿಗೂ ಮಾಂಸಖಂಡಕ್ಕೂ ಮಧ್ಯದಲ್ಲಿ ಬಾಣಗಳನ್ನು ಪ್ರಯೋಗಿಸಿ ಬಹಳ ವೇದನೆಯಾಗುವಂತೆ ಮಾಡಿದನು. ದುರ್ಯೋಧನನು ಬಾಣಗಳ ವೇದನೆಯಿಂದ ವ್ಯಾಕುಲ ಗೊಂಡು ರಣಾಂಗಣದಿಂದ ಪಲಾಯನಮಾಡಿದನು. ದುರ್ಯೋ ಧನನು ಧನಂಜಯನ ಬಾಣಗಳಿಂದ ಪೀಡಿತನಾಗಿ ಆಪತ್ತಿನಲ್ಲಿ ಸಿಕ್ಕಿಹಾಕಿ

ಕೊಂಡಿರುವುದನ್ನು ಕಂಡು ಅವನನ್ನು ರಕ್ಷಿಸುವ ಸಲುವಾಗಿ ಮಹಾ ಧನುಷ್ಮಂತರಾದ ನಿನ್ನ ಕಡೆಯ ಯೋಧರು ಧಾವಿಸಿ ಬಂದರು. ಅನೇಕಸಾವಿರ ರಥಗಳಿಂದಲೂ, ಸಜ್ಜಾಗಿದ್ದ ಆನೆಗಳಿಂದಲೂ, ಕುದುರೆಗಳಿಂದಲೂ ಮತ್ತು ಕುಪಿತರಾಗಿದ್ದ ಪದಾತಿಗಳ ಸಮೂಹಗಳಿಂದಲೂ ಕೂಡಿಕೊಂಡು ನಿನ್ನ ಕಡೆಯ ಮಹಾರಥರು ಧನಂಜಯನನ್ನು ಆಕ್ರಮಿಸಿದರು. ಅಪಾರವಾದ ಜನಸಮೂಹದಿಂದಲೂ ಮತ್ತು ಅಸ್ತ್ರವೃಷ್ಟಿಯಿಂದಲೂ ಅರ್ಜುನ-ಗೋವಿಂದರಾಗಲೀ ರಥವಾಗಲೀ ಯಾರಿಗೂ ಕಾಣಿಸುತ್ತಲೇ ಇರಲಿಲ್ಲ. ಅನಂತರ ಅರ್ಜುನನು ತನ್ನ ಅಸ್ತ್ರಬಲದಿಂದ ಶತ್ರುಗಳನ್ನು ಸಂಹರಿಸಲು ಉಪಕ್ರಮಿಸಿದನು. ಆ ಸಮಯದಲ್ಲಿ ನೂರಾರು ರಥ-ಗಜಗಳು ಕತ್ತರಿಸಲ್ಪಟ್ಟ ಅಂಗಗಳುಳ್ಳವುಗಳಾಗಿ ಭೂಮಿಯ ಮೇಲೆ ಬಿದ್ದುವು. ಹತಶೇಷರಾದ ಕೌರವಸೈನಿಕರು ರಥಶ್ರೇಷ್ಠನಾದ ಅರ್ಜುನನನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದರು. ಜಯದ್ರಥನು ಒಂದು ಕ್ರೋಶದಷ್ಟು ಅಂತರದಲ್ಲಿದ್ದಾಗ ಅರ್ಜುನನ ರಥವು ಅಪಾರವಾದ ಕೌರವರ ಸೈನ್ಯದಿಂದ ಸುತ್ತುವರಿಯಲ್ಪಟ್ಟು ಸ್ತಬ್ಧವಾಗಿ ನಿಂತುಬಿಟ್ಟಿತು. ಆ ಸಮಯದಲ್ಲಿ ವೃಷ್ಣಿವೀರನಾದ ಶ್ರೀಕೃಷ್ಣನು ಬಹಳ ಅವಸರದಿಂದ ಅರ್ಜುನನಿಗೆ ಹೇಳಿದನು: "ಅರ್ಜುನ! ನೀನು ಧನುಸ್ಸನ್ನು ಗಟ್ಟಿಯಾಗಿ ಟೇಂಕರಿಸು. ನಾನು ಶಂಖವನ್ನು ಊದುತ್ತೇನೆ."

ಶ್ರೀಕೃಷ್ಣನ ಮಾತನ್ನು ಕೇಳಿ ಅರ್ಜುನನು ಗಾಂಡೀವಧನುಸ್ಸನ್ನು ಟೇಂಕರಿಸಿ, ಶಿಂಜಿನಿಯನ್ನು ಬಲವಾಗಿ ಸೆಳೆದು ಅಂಗೈಯಿನ ಚಟ-ಚಟಾಶಬ್ದದೊಡನೆ ಬಾಣಗಳ ಮಳೆಯನ್ನೇ ಸುರಿಸುತ್ತಾ ಶತ್ರುಗಳನ್ನು ಸಂಹರಿಸತೊಡಗಿದನು. ಶ್ರೀಕೃಷ್ಣನು ಪಾಂಚಜನ್ಯಶಂಖವನ್ನು ತಾರಸ್ವರದಲ್ಲಿ (ಉಚ್ಚಸ್ವರದಲ್ಲಿ) ಊದಿದನು. ಆ ಸಮಯದಲ್ಲಿ ಶ್ರೀಕೃಷ್ಣನ ರೆಪ್ಪೆಯ ಕೂದಲಿನ ತುದಿಗಳು ಧೂಳಿನಿಂದ ಧೂಸರಿತವಾದುವು. ಅವನ ಮುಖವು ಬೆವರಿಟ್ಟಿತು. ಶ್ರೀಕೃಷ್ಣನು ಮಾಡಿದ ಶಂಖದ ಧ್ವನಿಯಿಂದಲೂ, ಅರ್ಜುನನು ಮಾಡಿದ ಧನುಸ್ಸಿನ ಟೇಂಕಾರಶಬ್ದದಿಂದಲೂ ದುರ್ಬಲರಾದ ಮತ್ತು ಸಬಲರಾದ ಜನರೆಲ್ಲರೂ ಉದ್ವಿಗ್ನರಾಗಿ ಭೂಮಿಯ ಮೇಲೆ ಬಿದ್ದರು. ಆ ಸಮಯದಲ್ಲಿ ಆಕ್ರಮಣಕಾರರಿಂದ ವಿಮುಕ್ತವಾದ ಕೃಷ್ಣಾರ್ಜುನರ ರಥವು ವಾಯುವಿನಿಂದ ಸಂಚಾಲಿತವಾದ ಮೋಡದಂತೆಯೇ ಪ್ರಕಾಶಿಸಿತು. ಜಯದ್ರಥನ ರಕ್ಷಕರೂ ಮತ್ತು ಅನುಚರರೂ ಆ ಮಹಾನಾದವನ್ನು ಕೇಳಿ

ಕ್ಷೋಭೆಗೊಂಡರು. (ಉದ್ವಿಗ್ನರಾದರು.) ಸೈಂಧವನ ರಕ್ಷಣೆಯಲ್ಲಿ ನಿಯುಕ್ತರಾಗಿದ್ದ ರಕ್ಷಕರು ಮಹಾಧನುಷ್ಮಂತನಾದ ಪಾರ್ಥನು ತಮ್ಮ ಸಮೀಪಕ್ಕೆ ಬರುತ್ತಿರುವುದನ್ನು ಕಂಡು, ಭೂಮಿಯನ್ನೇ ಕಂಪನಗೊಳಿಸುತ್ತಾ ಗಟ್ಟಿಯಾಗಿ ಗರ್ಜನೆಮಾಡಿದರು. ಮಹಾತ್ಮರಾದ ಆ ವೀರರು ಶಂಖಗಳ ಧ್ವನಿಗಳಿಂದ ಮಿಶ್ರವಾದ ಬಾಣಗಳ ಭಯಂಕರಶಬ್ದವನ್ನೂ ಮತ್ತು ಸಿಂಹನಾದ ಗಳನ್ನೂ ಮಾಡಿದರು. (ಜಯದ್ರಥನನ್ನು ರಕ್ಷಿಸುತ್ತಿದ್ದ ಆ ವೀರರು ಶಂಖಗಳನ್ನು ಊದಿದರು. ಸಿಂಹನಾದಮಾಡುತ್ತಾ ಬಾಣಗಳನ್ನೂ ಬಿಡತೊಡಗಿದರು). ನಿನ್ನ ಕಡೆಯ ಸೈನಿಕರ ಮಧ್ಯದಲ್ಲಿ ಸಮುದ್ಭೂತವಾದ ಘೋರವಾದ ಆ ನಿನಾದ ವನ್ನು ಕೇಳಿ ವಾಸುದೇವ-ಧನಂಜಯರು ಶ್ರೇಷ್ಠಶಂಖಗಳಾದ ಪಾಂಚಜನ್ಯ-ದೇವದತ್ತಗಳನ್ನು ಗಟ್ಟಿಯಾಗಿ ಊದಿದರು. ಕೃಷ್ಣಾರ್ಜುನರ ಆ ಶಂಖ ನಿನಾದಗಳಿಂದ ಹುಟ್ಟಿದ ಮಹಾಧ್ವನಿಯು ಪರ್ವತಗಳಿಂದಲೂ, ಸಮುದ್ರ ಗಳಿಂದಲೂ, ಪಾತಾಳದಿಂದಲೂ ಕೂಡಿರುವ ಈ ಭೂಮಿಯನ್ನೇ ತುಂಬಿಬಿಟ್ಟಿತು. ಆ ಮಹಾಶಬ್ದವು ದಿಕ್ಕುಗಳನ್ನೂ ವ್ಯಾಪಿಸಿ ಅಲ್ಲಿಂದಲೂ ಪ್ರತಿಧ್ವನಿತವಾಗಿ ಪುನಃ ಪಾಂಡವ-ಕೌರವಯೋಧರ ಮಧ್ಯದಲ್ಲಿ ಕೇಳಿಸಿತು. ಸೈಂಧವನ ರಕ್ಷಣೆಯಲ್ಲಿದ್ದ ನಿನ್ನ ರಥಿಗಳೂ ಮತ್ತು ಮಹಾರಥರೂ ಕೃಷ್ಣ-ಧನಂಜಯರನ್ನು ನೋಡಿ ಉದ್ವೇಗಗೊಂಡು ತ್ವರೆಯಿಂದ ಅವರನ್ನು ಎದುರಿಸಲು ಸಜ್ಜಾಗಿ ನಿಂತರು. ಕವಚಗಳನ್ನು ಧರಿಸಿದ್ದ ಮಹಾಭಾಗರಾದ ಕೃಷ್ಣಾರ್ಜುನರನ್ನು ನೋಡಿ ನಿನ್ನ ಕಡೆಯ ಸೈನಿಕರು ಪರಮಕ್ರುದ್ಧರಾಗಿ ಅವರ ಕಡೆಗೆ ಧಾವಿಸಿದರು. ಹೆದರಿ ಓಡಿಹೋಗದೇ ಕೃಷ್ಣಾರ್ಜುನರೊಡನೆ ಯುದ್ಧ ಮಾಡಲು ತ್ವರೆಯಿಂದ ನಿನ್ನ ಸೈನಿಕರು ಹೋದುದು ನಮಗೆ ಪರಮಾದ್ಭುತವಾಗಿ ಕಂಡಿತು."

೧೦೩ನೆಯ ಅಧ್ಯಾಯವು ಮುಗಿಯಿತು.

೧೦೪ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕೌರವಮಹಾರಥರೊಡನೆ ಅರ್ಜುನನ ಭೀಕರಯುದ್ಧ

ಸಂಜಯನು ಧೃತರಾಷ್ಟ್ರನಿಗೆ ಯುದ್ಧದ ವರ್ಣನೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ನಿನ್ನ ಕಡೆಯ ಯೋಧರು ವೃಷ್ಣಿ ಮತ್ತು ಅಂಧಕ ವಂಶಗಳಲ್ಲಿ ಶ್ರೇಷ್ಠಪುರುಷನಾದ ಶ್ರೀಕೃಷ್ಣನನ್ನೂ ಮತ್ತು ಅರ್ಜುನನನ್ನೂ ನೋಡಿ ಅವರನ್ನು ಸಂಹರಿಸುವ ಆಶೆಯಿಂದ ಬಹಳ ಬೇಗ ಅವರ ಸಮೀಪಕ್ಕೆ ಹೋದರು. ಅದೇ ರೀತಿಯಲ್ಲಿ ಅರ್ಜುನನೂ ಸಹ ಶತ್ರುಗಳನ್ನು ಸಂಹರಿಸಲು ಉದ್ಯುಕ್ತನಾದನು. ಕೌರವಸೈನಿಕರು ವ್ಯಾಘ್ರದ ಚರ್ಮದಿಂದ ಆಚ್ಛಾದಿತ ವಾಗಿದ್ದ, ಸುವರ್ಣದಿಂದ ಚಿತ್ರಿತವಾಗಿದ್ದ, ಗಂಭೀರವಾದ ನಿನಾದವನ್ನುಂಟು ಮಾಡುತ್ತಿದ್ದ, ಪ್ರಜ್ವಲಿಸುವ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವಿಶಾಲವಾದ ರಥಗಳಿಂದ ಎಲ್ಲ ದಿಕ್ಕುಗಳನ್ನೂ ಬೆಳಗುತ್ತಿದ್ದರು. ದಿಟ್ಟಿಸಿ ನೋಡಲೂ ಸಾಧ್ಯವಾಗದಿದ್ದ, ಚಿನ್ನದ ರೆಕ್ಕೆಗಳನ್ನು ಹೊಂದಿದ್ದ ಬಾಣ ಗಳಿಂದಲೂ, ಕೋಪಗೊಂಡ ಕುದುರೆಗಳು ಧ್ವನಿಮಾಡುವಂತೆ ಅಸಾಧಾರಣ ವಾದ ಟೇಂಕಾರಶಬ್ದಗಳನ್ನು ಮಾಡುತ್ತಿದ್ದ ಧನುಸ್ಸುಗಳಿಂದಲೂ ಕೂಡಿದ ನಿನ್ನ ಸೈನಿಕರು ಎಲ್ಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಿದ್ದರು. ಭೂರಿಶ್ರವಸ, ಶಲ, ಕರ್ಣ, ವೃಷಸೇನ, ಜಯದ್ರಥ, ಕೃಪರು, ಮದ್ರರಾಜನಾದ ಶಲ್ಯ, ರಥಿಗಳಲ್ಲಿ ಶ್ರೇಷ್ಠನಾದ ಅಶ್ವತ್ಥಾಮಾ–ಈ ಎಂಟು ಮಂದಿ ಮಹಾರಥರು ಆಕಾಶವನ್ನೇ ನುಂಗುತ್ತಿವೆಯೋ ಎಂಬಂತೆ ಕಾಣುತ್ತಿದ್ದ ಕುದುರೆಗಳಿಂದ ಒಯ್ಯಲ್ಪಡುತ್ತಿದ್ದ, ವ್ಯಾಘ್ರಚರ್ಮಗಳಿಂದ ಆಚ್ಛಾದಿತವಾದ, ಸುವರ್ಣಮಯವಾದ, ಚಂದ್ರನ ಚಿಹ್ನೆಯಿಂದ ವಿಭೂಷಿತವಾಗಿದ್ದ ರಥಗಳಿಂದ ಹತ್ತು ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಿದ್ದರು. ಕ್ರುದ್ಧರಾಗಿದ್ದ, ಕವಚಗಳನ್ನು ಧರಿಸಿದ್ದ ನಿನ್ನ ಕಡೆಯ ವೀರಯೋಧರು ಮೇಘಕ್ಕೆ ಸಮಾನವಾಗಿ ಗಡ-ಗಡಾ ಶಬ್ದಮಾಡುತ್ತಿದ್ದ ರಥಗಳಿಂದಲೂ, ನಿಶಿತವಾದ ಬಾಣಗಳಿಂದಲೂ ಪಾರ್ಥನನ್ನು ಹತ್ತು ದಿಕ್ಕುಗಳಿಂದಲೂ (ಎಲ್ಲ ಕಡೆಗಳಿಂದಲೂ) ಮುಚ್ಚಿಬಿಟ್ಟರು. ಕುಲೂತಕದೇಶದ ವಿಚಿತ್ರವಾದ ಮತ್ತು ಶೀಘ್ರಗಾಮಿಗಳಾದ ಕುದುರೆಗಳು ಕೌರವಮಹಾ ರಥರನ್ನು (ಮಹಾರಥರ ರಥಗಳನ್ನು) ಹೊತ್ತು, ಹತ್ತು ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ಬಹಳವಾಗಿ ಶೋಭಿಸುತ್ತಿದ್ದುವು. ನಾನಾದೇಶಗಳಲ್ಲಿ

---

[೧] ಆಜಾನೇಯ ಕುದುರೆಯ ಲಕ್ಷಣ : **ಗುಡಗನ್ಧಾಃ ಕಾಯೇ ಯೇ ಸುಶ್ಲಕ್ಷ್ಣಾಃ ಕಾನ್ತಿತೋ ಜಿತಕ್ರೋಧಾಃ। ಸಾರಯುತಾ ಜಿತೇನ್ದ್ರಿಯಾಃ ಕ್ಷುತ್ತೃಡಾಹಿತಂ ಚಾಪಿ**

ಹುಟ್ಟಿದ ಶೀಘ್ರಗಾಮಿಗಳಾದ ಆಜಾನೇಯ[1] ಪರ್ವತೀಯ[2] ನದೀಜ[3] ಮತ್ತು ಸಿಂಧುದೇಶದ ಶ್ರೇಷ್ಠವಾದ ಕುದುರೆಗಳುಳ್ಳ ರಥಗಳಲ್ಲಿ ಕುಳಿತು ಕುರುಯೋಧಶ್ರೇಷ್ಠರು ನಿನ್ನ ಮಗನನ್ನು ರಕ್ಷಿಸುವ ಇಚ್ಛೆಯಿಂದ ಧನಂಜಯನ ರಥವನ್ನು ಬಹಳ ಶೀಘ್ರವಾಗಿ ನಾಲ್ಕು ಕಡೆಗಳಿಂದಲೂ ಆಕ್ರಮಿಸಿದರು. ಪುರುಷಶ್ರೇಷ್ಠರಾದ ಕೌರವಯೋಧರು ದೊಡ್ಡ-ದೊಡ್ಡ ಶಂಖಗಳನ್ನು ಹಿಡಿದು ಕೊಂಡು ಗಟ್ಟಿಯಾಗಿ ಊದುತ್ತಾ ಅಂತರಿಕ್ಷವನ್ನೂ ಮತ್ತು ಸಮುದ್ರಗಳಿಂದ ಕೂಡಿದ ಭೂಮಿಯನ್ನೂ ಆ ಧ್ವನಿಯಿಂದ ಮುಚ್ಚಿಬಿಟ್ಟರು. ಅದೇ ರೀತಿಯಲ್ಲಿ ಸರ್ವದೇವತೆಗಳಿಗೂ ಶ್ರೇಷ್ಠರಾದ ವಾಸುದೇವ-ಧನಂಜಯರು ಎಲ್ಲ ಶಂಖಗಳಿಗೂ ಶ್ರೇಷ್ಠವಾದ ತಮ್ಮ ಶಂಖಗಳನ್ನು ಗಟ್ಟಿಯಾಗಿ ಊದಿದರು. ದೇವದತ್ತವೆಂಬ ಶಂಖವನ್ನು ಕೌಂತೇಯನೂ ಪಾಂಚಜನ್ಯವೆಂಬ ಶಂಖವನ್ನು ವಾಸುದೇವನೂ ಊದಿದರು. ಧನಂಜಯನಿಂದ ಊದಲ್ಪಟ್ಟ ದೇವದತ್ತ ಶಂಖದ ಶಬ್ದವು ಪೃಥಿವಿಯನ್ನೂ, ಅಂತರಿಕ್ಷವನ್ನೂ, ನಾಲ್ಕು ದಿಕ್ಕುಗಳನ್ನೂ ವ್ಯಾಪಿಸಿತು. ಅದೇ ರೀತಿಯಲ್ಲಿ ವಾಸುದೇವನಿಂದ ಊದಲ್ಪಟ್ಟ ಪಾಂಚಜನ್ಯದ ಶಬ್ದವೂ ಸಹ ಎಲ್ಲ ಶಬ್ದಗಳನ್ನೂ ಅತಿಕ್ರಮಿಸಿ ದಿಗಂತದವರೆಗೂ ವ್ಯಾಪಿಸಿತು.

---

**ನೋ ದುಃಖಮ್॥ಜಾನನ್ತ್ಯಾಜಾನೇಯಾ ನಿರ್ದಿಷ್ಟಾ ವಾಜಿನೋ ಧೀರೈಃ॥** ಇವುಗಳ ಶರೀರದಿಂದ ಬೆಲ್ಲದ ವಾಸನೆಯು ಬರುತ್ತದೆ. ಶರೀರವು ಬಹಳ ನುಣುಪಾಗಿಯೂ, ಹೊಳೆಯುತ್ತಲೂ ಇದ್ದು ಕಾಂತಿಯುಕ್ತವಾಗಿರುತ್ತದೆ. ಇವುಗಳಿಗೆ ಕೋಪವು ಬರುವುದಿಲ್ಲ. ಬಹಳ ಬಲಿಷ್ಠವಾಗಿರುತ್ತವೆ. ಹೆಣ್ಣುಕುದುರೆಯೊಡನೆ ಸೇರುವುದಿಲ್ಲ. ಹಸಿವು-ಬಾಯಾರಿಕೆಗಳನ್ನು ತಡೆದುಕೊಳ್ಳುತ್ತವೆ. ಕಷ್ಟವನ್ನು ಸಹಿಸಿಕೊಳ್ಳುತ್ತವೆ. ಇಂತಹ ಲಕ್ಷಣವುಳ್ಳ ಕುದುರೆಯನ್ನು ವಿದ್ವಾಂಸರು 'ಆಜಾನೇಯಃ' ಎಂದು ಕರೆಯುತ್ತಾರೆ.

೨. ಪರ್ವತೀಯ ಕುದುರೆಯ ಲಕ್ಷಣ: **ವಾಹಾಸ್ತು ಪರ್ವತೀಯಾ ಬಲಾನ್ವಿತಾಃ ಸ್ನಿಗ್ಧಕೇಶಾಶ್ಚ ವೃತ್ತಖುರಾ ದೃಢಪಾದಾ ಮಹಾಜವಾಸ್ತೇ ಅತಿ ವಿಖ್ಯಾತಾಃ ॥** ಇವುಗಳು ಬಹಳ ಬಲಿಷ್ಠವಾಗಿರುತ್ತವೆ. ಇವುಗಳ ಕೂದಲು ನುಣುಪಾಗಿರುತ್ತದೆ. ಗೊರಸುಗಳು ಗುಂಡಾಗಿರುತ್ತವೆ. ಇವು ಕಾಲುಗಳನ್ನು ಬಹಳ ದೃಢವಾಗಿಡುತ್ತವೆ. ಬಹಳ ವೇಗವಾಗಿ ಹೋಗುತ್ತವೆ.

೩.ನದೀಜ ಕುದುರೆಗಳ ಲಕ್ಷಣ: **ಅಶ್ವಾಃ ಸಕರ್ಣಿಕಾರಾಃ ಕ್ವಚನ ನದೀತೀರಜಾಃ ಸಮುದ್ದಿಷ್ಟಾಃ। ಪೂರ್ವಾರ್ಧೇಷೂದಗ್ರಾಃ ಪಶ್ಚಾರ್ಧೇಷ್ವಾನತಾಃ ಕಿಂಚಿತ್॥** ಕೆಲವು ನದಿಗಳ ದಡದಲ್ಲಿ ಹುಟ್ಟಿದ ಕರವೀರಪುಷ್ಪದ ಬಣ್ಣವಿರುವ ಕುದುರೆಗಳಿಗೆ ನದೀಜ ಕುದುರೆಗಳೆಂದು ಹೆಸರು. ಇವುಗಳು ಮುಂಭಾಗದಲ್ಲಿ ಎತ್ತರವಾಗಿಯೂ ಹಿಂಭಾಗದಲ್ಲಿ ಸ್ವಲ್ಪ ಬಗ್ಗಿಯೂ ಇರುತ್ತವೆ.

ಮಹಾರಾಜ! ಹೀಗೆ ಆ ರಣಾಂಗಣದಲ್ಲಿ ಭೀರುಗಳಿಗೆ ತ್ರಾಸದಾಯಕವಾದ, ಶೂರರಿಗೆ ಹರ್ಷವರ್ಧಕವಾದ ಭಯಂಕರವಾದ ನಿನಾದವಾಗುತ್ತಿದ್ದಿತು. ಭೇರೀ, ಜರ್ಝರ, ನಗಾರಿ, ಮೃದಂಗ-ಇವೇ ಮೊದಲಾದ ರಣವಾದ್ಯಗಳನ್ನು ಅನೇಕರೀತಿಯಲ್ಲಿ ವಾದ್ಯಗಾರರು ಬಾರಿಸುತ್ತಿದ್ದರು. ಆ ಸಮಯದಲ್ಲಿ ದುರ್ಯೋಧನನ ಹಿತೈಷಿಗಳಾದ, ವಿಖ್ಯಾತರಾದ ಮಹಾರಥರು ಕೃಷ್ಣಾರ್ಜುನರು ಮಾಡಿದ ಶಂಖಗಳ ಧ್ವನಿಯನ್ನು ಸಹಿಸಿಕೊಳ್ಳಲಾರದೆ ಕೋಪಗೊಂಡರು. ನಾನಾದೇಶಗಳಿಂದ ಬಂದಿದ್ದ, ತಮ್ಮ-ತಮ್ಮ ಸೈನ್ಯಗಳನ್ನು ಚೆನ್ನಾಗಿ ರಕ್ಷಿಸಿಕೊಂಡಿದ್ದ, ಮಹಾಧನುಷ್ಮಂತರಾದ ಮಹೀಪಾಲರು ಅಸಹನೆಯಿಂದ ಕೂಡಿದವರಾಗಿ ಕೇಶವಾರ್ಜುನರು ಮಾಡಿದುದಕ್ಕೆ ಪ್ರತಿಮಾಡುವ ಇಚ್ಛೆಯಿಂದ ತಮ್ಮಲ್ಲಿದ್ದ ದೊಡ್ಡ-ದೊಡ್ಡ ಶಂಖಗಳನ್ನು ಹಿಡಿದುಕೊಂಡು ಗಟ್ಟಿಯಾಗಿ ಊದಿದರು. ನಿನ್ನ ಎಲ್ಲ ಸೈನಿಕರೂ ಪಕ್ಷ-ಪ್ರತಿಪಕ್ಷದವರು ಮಾಡಿದ ಶಂಖಗಳ ಭಯಂಕರಧ್ವನಿಯನ್ನು ಕೇಳಿ ಅಸ್ವಸ್ಥರಾಗಿರುವಂತೆ ಕಂಡುಬಂದರು. ಗಜಾಶ್ವ-ರಥ-ಪದಾತಿಸೈನಿಕರು ಉದ್ವಿಗ್ನರಾದರು. ಶೂರರು ಮಾಡಿದ ಶಂಖಗಳ ಧ್ವನಿಯಿಂದಾಗಿ ಆಕಾಶವೇ ಒಡೆದುಹೋದಂತೆ ಕಾಣುತ್ತಿದ್ದಿತು. ಎರಡು ಗಾಳಿಗಳ ಸಂಘರ್ಷದಿಂದ ಉಂಟಾದ *ನಿರ್ಘಾತಶಬ್ದದಂತೆ ಕೇಳುತ್ತಿದ್ದ ಶಂಖದ ಧ್ವನಿಯಿಂದಾಗಿ ಎಲ್ಲರೂ ಉದ್ವಿಗ್ನರಾದರು.

ಪ್ರಳಯಕಾಲದಲ್ಲಾಗುವ ಮಹಾಶಬ್ದದಂತೆ ಮಹಾಶಂಖಗಳ ಆ ಭಯಂಕರಧ್ವನಿಯು ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿತು ಮತ್ತು ನಿನ್ನ ಸೈನ್ಯವನ್ನೂ ಭಯಪಡಿಸಿತು. ಅನಂತರ ದುರ್ಯೋಧನನೂ ಮತ್ತು ಭೂರಿಶ್ರವಸನೇ ಮೊದಲಾದ ಎಂಟು ಮಂದಿ ಮಹಾರಥರೂ ಜಯದ್ರಥನ ರಕ್ಷಣಾರ್ಥವಾಗಿ ಅರ್ಜುನನನ್ನು ಆಕ್ರಮಿಸಿದರು. ದ್ರೋಣಪುತ್ರನಾದ ಅಶ್ವತ್ಥಾಮನು ಎಪ್ಪತ್ತು ಮೂರು ಬಾಣಗಳಿಂದ ವಾಸುದೇವನನ್ನೂ, ಮೂರು

---

*ನಿರ್ಘಾತಃ: ವಾಯುವಿನಿಂದ ಹೊಡೆಯಲ್ಪಟ್ಟ ವಾಯುವು ಆಕಾಶದಿಂದ ಭೂಮಿಯ ಮೇಲೆ ಅಪ್ಪಳಿಸುವುದರಿಂದ ಉಂಟಾಗುವ ಪ್ರಚಂಡಶಬ್ದ. **ವಾಯುನಾಭಿಹತೇ ವಾಯೌ ಗಗನಾಚ್ಚ ಪತತ್ಯಧಃ। ಪ್ರಚಣ್ಡಘೋರನಿರ್ಘೋಷೋ ನಿರ್ಘಾತ ಇತಿ ಕಥ್ಯತೇ ॥**

ಭಲ್ಲಗಳಿಂದ ಅರ್ಜುನನನ್ನೂ, ಐದು ಬಾಣಗಳಿಂದ ಧ್ವಜವನ್ನೂ ಮತ್ತು ಕುದುರೆಗಳನ್ನೂ ಪ್ರಹರಿಸಿದನು. ಅಶ್ವತ್ಥಾಮನು ಶ್ರೀಕೃಷ್ಣನನ್ನು ಗಾಯ ಗೊಳಿಸಿದುದನ್ನು ಕಂಡು ಅತ್ಯಂತಕ್ರುದ್ಧನಾದ ಮತ್ತು ವೀರ್ಯವಂತನಾದ ಅರ್ಜುನನು ಆಚಾರ್ಯಪುತ್ರನನ್ನು ಆರು ನೂರು ಬಾಣಗಳಿಂದ ಪ್ರಹರಿಸಿ ದನು. ಅನಂತರ ಕರ್ಣನನ್ನು ಹತ್ತು ಬಾಣಗಳಿಂದಲೂ, ವೃಷಸೇನನನ್ನು ಮೂರು ಬಾಣಗಳಿಂದಲೂ ಪ್ರಹರಿಸಿ, ಶಲ್ಯನ ಬಾಣಸಹಿತವಾದ ಧನುಸ್ಸನ್ನು ಮುಷ್ಟಿಯ ಪ್ರದೇಶದಲ್ಲಿ ಕತ್ತರಿಸಿದನು. ಮರುಕ್ಷಣದಲ್ಲಿಯೇ ಶಲ್ಯನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಅರ್ಜುನನನ್ನು ಬಾಣಗಳಿಂದ ಪ್ರಹರಿಸಿದನು. ಭೂರಿಶ್ರವಸನೂ ಸಹ ಮಸೆಗಲ್ಲಿನಿಂದ ನಿಶಿತವಾಗಿ ಮಾಡಿದ್ದ, ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಮೂರು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಕರ್ಣನು–ಮೂವತ್ತೆರಡು ಬಾಣಗಳಿಂದಲೂ, ವೃಷಸೇನನು–ಏಳುಬಾಣಗಳಿಂದಲೂ, ಜಯದ್ರಥನು–ಎಪ್ಪತ್ತುಮೂರು ಬಾಣಗಳಿಂದಲೂ, ಕೃಪರು–ಹತ್ತು ಬಾಣಗಳಿಂದಲೂ, ಮದ್ರೇಶ್ವರನಾದ ಶಲ್ಯನು–ಹತ್ತು ಬಾಣಗಳಿಂದಲೂ ಫಾಲ್ಗುನನನ್ನು ಪ್ರಹರಿಸಿದರು. ಅನಂತರ ಅಶ್ವತ್ಥಾಮನು ಅರುವತ್ತು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿ, ವಾಸುದೇವನನ್ನು ಇಪ್ಪತ್ತು ಬಾಣಗಳಿಂದಲೂ, ಪುನಃ ಪಾರ್ಥನನ್ನು ಐದು ಬಾಣಗಳಿಂದಲೂ ಪ್ರಹರಿಸಿದನು. ನರವ್ಯಾಘ್ರನಾದ, ಕೃಷ್ಣಸಾರಥಿಯಾದ, ಶ್ವೇತಾಶ್ವನಾದ ಅರ್ಜುನನು ಗಹ-ಗಹಿಸಿ ನಗುತ್ತಾ ಹಸ್ತಲಾಘವವನ್ನು ಪ್ರದರ್ಶಿಸುತ್ತಾ ಒಂಬತ್ತು ಮಂದಿ ಮಹಾರಥರನ್ನೂ ಬಾಣಗಳಿಂದ ಪ್ರಹರಿಸಿ ದನು. ಕರ್ಣನನ್ನು ಹನ್ನೆರಡು ಬಾಣಗಳಿಂದಲೂ, ವೃಷಸೇನನನ್ನು-ಮೂರು ಬಾಣಗಳಿಂದಲೂ ಪ್ರಹರಿಸಿ ಹಿಂದಿನಂತೆಯೇ ಶಲ್ಯನ ಬಾಣಸಹಿತವಾದ ಧನುಸ್ಸನ್ನು ಮುಷ್ಟಿಪ್ರದೇಶದಲ್ಲಿ ಕತ್ತರಿಸಿದನು. ಸೋಮದತ್ತಿಯನ್ನು ಮೂರು ಬಾಣಗಳಿಂದಲೂ, ಶಲ್ಯನನ್ನು–ಹತ್ತು ಬಾಣಗಳಿಂದಲೂ, ಅಶ್ವತ್ಥಾಮನನ್ನು ನಿಶಿತವಾದ ಅಗ್ನಿಯ ಜ್ವಾಲೆಗೆ ಸಮಾನವಾದ ಎಂಟು ಬಾಣಗಳಿಂದಲೂ ಪ್ರಹರಿಸಿದನು. ಗೌತಮರನ್ನು–ಇಪ್ಪತ್ತೈದು ಬಾಣಗಳಿಂದಲೂ, ಜಯದ್ರಥ ನನ್ನು–ನೂರು ಬಾಣಗಳಿಂದಲೂ, ಪುನಃ ಅಶ್ವತ್ಥಾಮನನ್ನು–ಎಪ್ಪತ್ತುಮೂರು ಬಾಣಗಳಿಂದಲೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಕ್ರುದ್ಧನಾದ ಭೂರಿ

ಶ್ರವಸನು ಶ್ರೀಹರಿಯು ಹಿಡಿದಿದ್ದ ಚಾವಟಿಯನ್ನೇ ಕತ್ತರಿಸಿಬಿಟ್ಟನು. ಅನಂತರ ಅರ್ಜುನನನ್ನು ಎಪ್ಪತ್ತು ಮೂರು ಬಾಣಗಳಿಂದ ಪ್ರಹರಿಸಿದನು. ಬಳಿಕ ಅತ್ಯಂತಕ್ರುದ್ಧನಾದ ಅರ್ಜುನನು ತೀಕ್ಷ್ಣವಾದ ನೂರಾರು ಬಾಣಗಳಿಂದ ಶತ್ರುಗಳನ್ನು ಪ್ರಹರಿಸಿ ಚಂಡಮಾರುತವು ಮೋಡಗಳನ್ನು ಚೆಲ್ಲಾಪಿಲ್ಲಿ ಯಾಗಿಸುವಂತೆ ಬಹಳ ಬೇಗ ಅವರೆಲ್ಲರನ್ನೂ ಕ್ಷತ-ವಿಕ್ಷತರನ್ನಾಗಿ ಮಾಡಿದನು."

೧೦೪ನೆಯ ಅಧ್ಯಾಯವು ಮುಗಿಯಿತು.

೧೦೫ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಅರ್ಜುನನ ಮತ್ತು ಮಹಾರಥರ ಧ್ವಜಗಳ ವರ್ಣನೆ: ಒಂಬತ್ತು ಮಹಾರಥರೊಡನೆ ಏಕಾಕಿಯಾದ ಅರ್ಜುನನ ಯುದ್ಧ

ಧೃತರಾಷ್ಟ್ರನು ಸಂಜಯನನ್ನು ಕೇಳುತ್ತಾನೆ:

"ಸಂಜಯ! ವಿಶೇಷಕಾಂತಿಯಿಂದ ಪ್ರಕಾಶಿಸುತ್ತಿದ್ದ, ನಾನಾವಿಧವಾದ ಚಿಹ್ನೆಗಳುಳ್ಳ ನನ್ನ ಕಡೆಯ ಯೋಧರ ಮತ್ತು ಪಾಂಡವರ ಕಡೆಯ ಯೋಧರ ಧ್ವಜಗಳನ್ನು ವರ್ಣಿಸು."

"ಹಾಗೆಯೇ ಆಗಲಿ, ಮಹಾರಾಜ! ಆ ಮಹಾತ್ಮರ ಬಹುವಿಧವಾದ ಆಕಾರಗಳಿಂದ ಕೂಡಿರುವ ಧ್ವಜಗಳನ್ನೂ, ಅವುಗಳ ರೂಪ, ಬಣ್ಣ, ಹೆಸರು ಇವುಗಳೊಡನೆ ವರ್ಣನೆಮಾಡುತ್ತೇನೆ; ಕೇಳುವವನಾಗು. ಆ ರಥಮುಖ್ಯರ ರಥಗಳಲ್ಲಿ, ಪ್ರಜ್ವಲಿಸುವ ಅಗ್ನಿಗಳೋಪಾದಿಯಲ್ಲಿ, ನಾನಾವಿಧವಾದ ಧ್ವಜಗಳು ಕಾಣಿಸುತ್ತಿದ್ದುವು. ಸುವರ್ಣಮಯವಾದ ಮೇರುಪರ್ವತದ ಶೃಂಗಗಳೋಪಾದಿಯಲ್ಲಿ ಆ ಮಹಾತ್ಮರ ಧ್ವಜಗಳು ಸುವರ್ಣಮಯ ವಾಗಿಯೂ, ಸುವರ್ಣಾಭರಣಗಳಿಂದ ಸಮಲಂಕೃತಗಳಾಗಿಯೂ, ಸುವರ್ಣದ ಮಾಲೆಗಳಿಂದ ಭೂಷಿತವಾಗಿಯೂ ಇದ್ದುವು. ವಿಶೇಷವಾದ ಶೋಭೆಯಿಂದ ಕೂಡಿದ್ದ, ಅನೇಕವರ್ಣಗಳಿಂದ ಕೂಡಿದ್ದ ವಿಧ-ವಿಧವಾದ ಆ ಧ್ವಜಗಳು ಅವುಗಳ ಸುತ್ತಲೂ ಇದ್ದ ನಾನಾವರ್ಣಗಳ ಪತಾಕೆಗಳಿಂದ ಆವೃತವಾದುವುಗಳಾಗಿ ಬಹಳವಾಗಿ ಪ್ರಕಾಶಿಸುತ್ತಿದ್ದುವು. (ಧ್ವಜದ ಸುತ್ತಲೂ ಹಲವು ಬಣ್ಣಗಳ ಅನೇಕ ಪತಾಕೆಗಳಿರುತ್ತಿದ್ದುವು.) ಆ ಪತಾಕೆಗಳು

ಗಾಳಿಯಿಂದ ಪಟ-ಪಟನೆ ಹಾರಾಡುತ್ತಿದ್ದು ರಂಗಮಧ್ಯದಲ್ಲಿ ನೃತ್ಯಮಾಡುವ ವಿಲಾಸಿನಿಯರಂತೆಯೇ ಕಾಣುತ್ತಿದ್ದುವು. ಇಂದ್ರಾಯುಧಕ್ಕೆ (ಕಾಮನ ಬಿಲ್ಲಿಗೆ) ಸಮಾನವಾದ ಕಾಂತಿಯಿಂದ ಕೂಡಿದ್ದ ಪತಾಕೆಗಳು ಹಾರಾಡುತ್ತಿದ್ದು ರಥಿಗಳ ಮಹಾರಥಗಳನ್ನು ಶೋಭಾಯಮಾನಗೊಳಿಸುತ್ತಿದ್ದುವು.

**ಸಿಂಹಲಾಙ್ಗೂಲಮುಗ್ರಾಸ್ಯಂ ಧ್ವಜಂ ವಾನರಲಕ್ಷಣಮ್।**
**ಧನಂಜಯಸ್ಯ ಸಂಗ್ರಾಮೇ ಪ್ರತ್ಯದೃಶ್ಯತ ಭೈರವಮ್ ॥೮॥**

ಸಿಂಹದ ಪುಚ್ಛವನ್ನು ಹೊಂದಿದ್ದ, ಉಗ್ರವಾದ ಮುಖವನ್ನು ಹೊಂದಿದ್ದ ಕಪಿಯ ಚಿಹ್ನೆಯಿದ್ದ ಭಯಂಕರವಾದ ಧ್ವಜವು ಅರ್ಜುನನ ರಥದ ಮೇಲೆ ಯುದ್ಧಸಮಯದಲ್ಲಿ ಕಾಣಿಸುತ್ತಿದ್ದಿತು. ವಾನರಶ್ರೇಷ್ಠನಾದ ಹನುಮಂತನಿದ್ದ ಅರ್ಜುನನ ಆ ಧ್ವಜವು ಸುತ್ತಲೂ ಹಲವು ಬಣ್ಣಗಳ ಪತಾಕೆಗಳಿಂದ ಸಮಲಂಕೃತವಾಗಿ ನಿನ್ನ ಸೈನ್ಯವನ್ನು ಭಯಪಡಿಸುತ್ತಿದ್ದಿತು.

**ತಥೈವ ಸಿಂಹಲಾಙ್ಗೂಲಂ ದ್ರೋಣಪುತ್ರಸ್ಯ ಭಾರತ।**
**ಧ್ವಜಾಗ್ರಂ ಸಮಪಶ್ಯಾಮ ಬಾಲಸೂರ್ಯಸಮಪ್ರಭಮ್ ॥೧೦॥**

ಅದೇ ರೀತಿಯಲ್ಲಿ ಸಿಂಹಪುಚ್ಛದ ಚಿಹ್ನೆಯನ್ನು ಹೊಂದಿದ್ದ, ಬಾಲಸೂರ್ಯನಂತೆ ಪ್ರಕಾಶಮಾನವಾಗಿದ್ದ ದ್ರೋಣಪುತ್ರನಾದ ಅಶ್ವತ್ಥಾಮನ ಧ್ವಜಾಗ್ರವನ್ನು ನಾವು ಆ ಸಮರಾಂಗಣದಲ್ಲಿ ನೋಡಿದೆವು.

ಇಂದ್ರಧ್ವಜದ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಸುವರ್ಣಮಯವಾಗಿದ್ದ, ಗಾಳಿಯಿಂದ ಪಟ-ಪಟನೆ ಹಾರಾಡುತ್ತಿದ್ದ, ಕೌರವೇಂದ್ರರಿಗೆ ಆನಂದವನ್ನುಂಟುಮಾಡುತ್ತಿದ್ದ ಅಶ್ವತ್ಥಾಮನ ಆ ಧ್ವಜವು ಹೆಚ್ಚು ಎತ್ತರದಲ್ಲಿದ್ದಿತು.

**ಹಸ್ತಿಕಕ್ಷ್ಯಾ ಪುನರ್ಹೈಮೀ ಬಭೂವಾಧಿರಥೇರ್ಧ್ವಜಃ ।**
**ಆಹವೇ ಖಂ ಮಹಾರಾಜ ದದೃಶೇ ಪೂರಯನ್ನಿವ ॥೧೨॥**

ಅಧಿರಥನ ಮಗನಾದ ಕರ್ಣನ ಧ್ವಜವು ಆನೆಯ ಹಗ್ಗದ ಚಿಹ್ನೆಯಿಂದ ಕೂಡಿದ್ದು ಸುವರ್ಣಮಯವಾಗಿದ್ದಿತು. ಯುದ್ಧಸಮಯದಲ್ಲಿ ಕರ್ಣನ ಆ ಧ್ವಜವು ತನ್ನ ಕಾಂತಿಯಿಂದ ಆಕಾಶವನ್ನೇ ತುಂಬುತ್ತಿರುವಂತೆ ಕಾಣುತ್ತಿದ್ದಿತು.

ಕರ್ಣನ ಧ್ವಜವು ಸುವರ್ಣಮಯವಾಗಿದ್ದಿತು. ಮಾಲೆಯಿಂದ ಅಲಂಕೃತವಾಗಿದ್ದಿತು. ಗಾಳಿಯಿಂದ ಪಟ-ಪಟನೆ ಹಾರಾಡುತ್ತಿದ್ದ ಆ ಧ್ವಜವು ರಥದ ಮೇಲ್ಭಾಗದಲ್ಲಿ ನೃತ್ಯಮಾಡುತ್ತಿರುವಂತೆಯೇ ಕಾಣುತ್ತಿದ್ದಿತು.

**ಆಚಾರ್ಯಸ್ಯ ತು ಪಾಣ್ಡೂನಾಂ ಬ್ರಾಹ್ಮಣಸ್ಯ ತಪಸ್ವಿನಃ।**
**ಗೋವೃಷೋ ಗೌತಮಸ್ಯಾಸೀತ್ಕೃಪಸ್ಯ ಸುಪರಿಷ್ಕೃತಃ ॥೧೪॥**

ಪಾಂಡವರ ಆಚಾರ್ಯರಾದ, ಬ್ರಾಹ್ಮಣಶ್ರೇಷ್ಠರಾದ, ತಪಸ್ವಿಗಳಾದ, ಗೌತಮಗೋತ್ರೋದ್ಭವರಾದ ಕೃಪರ ರಥದಲ್ಲಿ ವೃಷಭದ ಚಿಹ್ನೆಯಿಂದ ಸಮಲಂಕೃತವಾದ ಧ್ವಜವಿದ್ದಿತು. ತ್ರಿಪುರನಾಶಕನಾದ ಮಹಾದೇವನ ರಥವು ವೃಷಭದ ಚಿಹ್ನೆಯಿದ್ದ ಧ್ವಜದಿಂದ ವಿರಾಜಿಸುತ್ತಿದ್ದಂತೆ-ಬಸವನ ಚಿಹ್ನೆಯಿದ್ದ ಧ್ವಜದಿಂದ ಕೃಪರ ಮಹಾರಥವೂ ಪ್ರಕಾಶಿಸುತ್ತಿದ್ದಿತು.

**ಮಯೂರೋ ವೃಷಸೇನಸ್ಯ ಕಾಞ್ಚನೋ ಮಣಿರತ್ನವಾನ್।**
**ವ್ಯಾಹರಿಷ್ಯನ್ನಿವಾತಿಷ್ಠತ್ಸೇನಾಗ್ರಮುಪಶೋಭಯನ್ ॥೧೬॥**

ವೃಷಸೇನನ ಧ್ವಜವು ಸುವರ್ಣಮಯವಾಗಿಯೂ, ಮಣಿ ಮತ್ತು ರತ್ನಗಳಿಂದ ಸಮಲಂಕೃತವಾಗಿಯೂ ಇದ್ದು ಮಯೂರ (ನವಿಲು) ಪಕ್ಷಿಯ ಚಿಹ್ನೆಯಿಂದ ಕೂಡಿದ್ದಿತು. ಸೇನೆಯ ಅಗ್ರಭಾಗವನ್ನೇ ತನ್ನ ಕಾಂತಿಯಿಂದ ಶೋಭಾಯಮಾನವನ್ನಾಗಿ ಮಾಡುತ್ತಿದ್ದ ಆ ಧ್ವಜವು ತನ್ನ ಅಂದವನ್ನು ತಾನೇ ಹೇಳಿಕೊಳ್ಳುತ್ತಿದೆಯೋ ಎಂಬಂತೆ ವೃಷಸೇನನ ರಥದಲ್ಲಿ ಉಪಸ್ಥಿತ ವಾಗಿದ್ದಿತು. ಸ್ಕಂದನ ರಥವು ಯಾವರೀತಿಯಲ್ಲಿ ಮಯೂರಧ್ವಜದಿಂದ ಪ್ರಕಾಶಮಾನವಾಗಿ ಕಾಣುತ್ತಿದ್ದಿತೋ-ಅದೇ ರೀತಿಯಲ್ಲಿ ಮಹಾತ್ಮನಾದ ವೃಷಸೇನನ ರಥವೂ ಮಯೂರಧ್ವಜದಿಂದ ಪ್ರಕಾಶಮಾನವಾಗಿ ಕಾಣಿಸುತ್ತಿದ್ದಿತು.

**ಮದ್ರರಾಜಸ್ಯ ಶಲ್ಯಸ್ಯ ಧ್ವಜಾಗ್ರೇಽಗ್ನಿಶಿಖಾಮಿವ।**
**ಸೌವರ್ಣೀಂ ಪ್ರತಿಪಶ್ಯಾಮ ಸೀತಾಮಪ್ರತಿಮಾಂ ಶುಭಾಮ್ ॥೧೯॥**

ಮದ್ರರಾಜನಾದ ಶಲ್ಯನ ಧ್ವಜಾಗ್ರದಲ್ಲಿ ಅಗ್ನಿಜ್ವಾಲೆಯಂತಿದ್ದ ಸುವರ್ಣಮಯವಾದ, ಅಪ್ರತಿಮವಾದ ಶೋಭೆಯಿಂದ ಕೂಡಿದ್ದ ನೇಗಿ

ಲಿನ ಚಿಹ್ನೆಯಿದ್ದುದನ್ನು ನಾವು ನೋಡಿದೆವು. ಧ್ವಜದಲ್ಲಿದ್ದ ಸುವರ್ಣಮಯವಾದ ನೇಗಿಲಿನ ಸಾಲಿನ ಚಿಹ್ನೆಯು ಬೀಜಗಳ ಮೊಳಕೆಗಳಿಂದ ಕೂಡಿದ ನೇಗಿಲಿನ ಸಾಲಿನಂತೆ ಶೋಭಿಸಿತು.

**ವರಾಹಃ ಸಿನ್ಧುರಾಜಸ್ಯ ರಾಜತೋಽಭಿವಿರಾಜತೇ।**
**ಧ್ವಜಾಗ್ರೇಽಲೋಹಿತಾರ್ಕಾಭೋ ಹೇಮಜಾಲಪರಿಷ್ಕೃತಃ ॥೨೦॥**

ಸಿಂಧುರಾಜನ ಧ್ವಜಾಗ್ರದಲ್ಲಿ ಬೆಳಗ್ಗೆ ಪ್ರಜ್ವಲಿಸುವ ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ, ಸುವರ್ಣದ ಬಲೆಯಿಂದ ಸಮಲಂಕೃತವಾಗಿದ್ದ, ಬೆಳ್ಳಿಯ ಕಾಡುಹಂದಿಯ ಚಿಹ್ನೆಯು ವಿರಾಜಿಸುತ್ತಿದ್ದಿತು. ಹಿಂದೆ ನಡೆದ ದೇವಾಸುರರ ಸಂಗ್ರಾಮದಲ್ಲಿ ಪೂಷನು (ಸೂರ್ಯನು) ವರಾಹಧ್ವಜದಿಂದ ಹೇಗೆ ಶೋಭಿಸುತ್ತಿದ್ದನೋ–ಅದೇ ರೀತಿಯಲ್ಲಿ ಜಯದ್ರಥನು ಬೆಳ್ಳಿಯ ವರಾಹಚಿಹ್ನೆಯಿದ್ದ ಧ್ವಜದಿಂದ ಪ್ರಕಾಶಿಸುತ್ತಿದ್ದನು.

**ಸೌಮದತ್ತೇಃ ಪುನರ್ಯೂಪೋ ಯಜ್ಞಶೀಲಸ್ಯ ಧೀಮತಃ ।**
**ಧ್ವಜಃ ಸೂರ್ಯ ಇವಾಭಾತಿ ಸೋಮಶ್ಚಾತ್ರ ಪ್ರದೃಶ್ಯತೇ ॥೨೧॥**

ಯಜ್ಞಶೀಲನಾದ, ಧೀಮಂತನಾದ ಭೂರಿಶ್ರವಸನ ಧ್ವಜದಲ್ಲಿ ಯೂಪಸ್ತಂಭದ ಚಿಹ್ನೆಯಿದ್ದಿತು. ಸೂರ್ಯನಿಗೆ ಸಮಾನವಾಗಿ ಪ್ರಕಾಶಿಸುತ್ತಿದ್ದ ಆ ಧ್ವಜದಲ್ಲಿ ಚಂದ್ರನ ಚಿಹ್ನೆಯೂ ಸಹ ಕಾಣುತ್ತಿದ್ದಿತು. ಶ್ರೇಷ್ಠವಾದ ಯಜ್ಞವೆಂದು ಪರಿಗಣಿತವಾಗಿರುವ ರಾಜಸೂಯಯಾಗದಲ್ಲಿ ಎತ್ತರವಾದ ಯೂಪಸ್ತಂಭವು ಶೋಭಾಯಮಾನವಾಗಿ ಕಾಣುವಂತೆ–ಸುವರ್ಣಮಯವಾದ ಯೂಪದ ಚಿಹ್ನೆಯು ಭೂರಿಶ್ರವಸನ ಧ್ವಜದಲ್ಲಿ ಪ್ರಕಾಶಿಸುತ್ತಿದ್ದಿತು.

**ಶಲಸ್ಯ ತು ಮಹಾರಾಜ ರಾಜತೋ ದ್ವಿರದೋ ಮಹಾನ್।**
**ಕೇತುಃ ಕಾಞ್ಚನಚಿತ್ರಾಙ್ಗೈರ್ಮಯೂರೈರುಪಶೋಭಿತಃ।**
**ಸ ಕೇತುಃ ಶೋಭಯಾಮಾಸ ಸೈನ್ಯಂ ತೇ ಭರತರ್ಷಭ ॥೨೫॥**

ಮಹಾರಾಜ! ಶಲನ ಧ್ವಜದಲ್ಲಿ ರಜತಮಯವಾದ ಆನೆಯ ಚಿಹ್ನೆಯಿದ್ದಿತು. ಆ ಧ್ವಜವು ಸುವರ್ಣದಿಂದ ಚಿತ್ರಿತವಾದ ಅಂಗಗಳುಳ್ಳ

ನವಿಲುಗಳಿಂದಲೂ ಪರಿಶೋಭಿಸುತ್ತಿದ್ದಿತು. ಶಲನ ಆ ಧ್ವಜವು ನಿನ್ನ ಸೈನ್ಯವನ್ನೇ ಶೋಭಾಯಮಾನವನ್ನಾಗಿ ಮಾಡಿತು.

**ಯಥಾ ಶ್ವೇತೋ ಮಹಾನಾಗೋ ದೇವರಾಜಚಮೂಂ ತಥಾ।**
**ನಾಗೋ ಮಣಿಮಯೋ ರಾಜ್ಞೋ ಧ್ವಜಃ ಕನಕಸಂವೃತಃ ॥೨೬॥**

ಶ್ವೇತವರ್ಣದ ಐರಾವತವು ಇಂದ್ರನ ಸೈನ್ಯವನ್ನು ಕಾಂತಿಯುಕ್ತವನ್ನಾಗಿ ಮಾಡುವಂತೆ–ಮಣಿಮಯವಾದ, ಸುವರ್ಣಾಭರಣಗಳಿಂದ ಭೂಷಿತವಾದ ಆನೆಯ ಚಿಹ್ನೆಯಿದ್ದ ದುರ್ಯೋಧನರಾಜನ ಧ್ವಜವು ನಿನ್ನ ಸೈನ್ಯವನ್ನು ಕಾಂತಿಯುಕ್ತವನ್ನಾಗಿ ಮಾಡಿತು.

ನೂರಾರು ಚಿಕ್ಕ-ಚಿಕ್ಕ ಗಂಟೆಗಳ ಕಿಲ-ಕಿಲನಿನಾದಗಳಿಂದ ಕೂಡಿದ್ದ ದುರ್ಯೋಧನನ ಚಿತ್ರಧ್ವಜವು ಅವನ ಶ್ರೇಷ್ಠವಾದ ರಥದಲ್ಲಿ ಶೋಭಾಯಮಾನವಾಗಿ ಕಾಣುತ್ತಿದ್ದಿತು. ಕುರುಶ್ರೇಷ್ಠನಾದ ನಿನ್ನ ಮಗನು ಯುದ್ಧದ ಸಮಯದಲ್ಲಿ ಆ ಮಹಾಧ್ವಜದಿಂದ ಕೂಡಿ ಬಹಳವಾಗಿ ಪ್ರಕಾಶಿಸಿದನು. ಆ ಒಂಬತ್ತು ಧ್ವಜಗಳೂ ನಿನ್ನ ಸೈನ್ಯಮಧ್ಯದಲ್ಲಿ ಎದ್ದು ಕಾಣುತ್ತಿದ್ದುವು. ಪ್ರಳಯಕಾಲದ ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಆ ಶ್ರೇಷ್ಠಧ್ವಜಗಳು ನಿನ್ನ ವಿಶಾಲಸೈನ್ಯವೆಲ್ಲವನ್ನೂ ತಮ್ಮ ಕಾಂತಿಯಿಂದಲೇ ಪ್ರಕಾಶಗೊಳಿಸುತ್ತಿದ್ದುವು. ಹತ್ತನೆಯದೇ ಮಹಾಕಪಿಯ ಚಿಹ್ನೆಯಿಂದ ಕೂಡಿದ್ದ ಅರ್ಜುನನ ಧ್ವಜವಾಗಿದ್ದಿತು. ಹಿಮವಂತನು ಅಗ್ನಿಯ ಸಾನ್ನಿಧ್ಯದಿಂದ ಜಾಜ್ವಲ್ಯಮಾನನಾಗಿ ಪ್ರಕಾಶಿಸುವಂತೆ ಅರ್ಜುನನು ಕಪಿಧ್ವಜದ ಸಾನ್ನಿಧ್ಯದಿಂದ ಜಾಜ್ವಲ್ಯಮಾನನಾಗಿ ಪ್ರಕಾಶಿಸುತ್ತಿದ್ದನು. ಅನಂತರ ಶತ್ರುತಾಪಕರಾದ ನಿನ್ನ ಕಡೆಯ ಮಹಾರಥರು ಅರ್ಜುನನನ್ನು ಸಂಹರಿಸುವ ಸಲುವಾಗಿ ಚಿತ್ರಿತವಾಗಿದ್ದ, ಶುಭ್ರವಾಗಿದ್ದ, ದೊಡ್ಡದಾಗಿದ್ದ ಧನುಸ್ಸುಗಳನ್ನು ಕೈಗೆತ್ತಿಕೊಂಡರು.

ಮಹಾರಾಜ! ಹಿಂದೆ ನೀನು ಮಾಡಿದ ದುರಾಲೋಚನೆಯ ಫಲವಾಗಿ ಶತ್ರುವಿನಾಶಕನಾದ, ದಿವ್ಯವಾದ ಕರ್ಮಗಳನ್ನು ಮಾಡುವ ಪಾರ್ಥನು ಗಾಂಡೀವಧನುಸ್ಸನ್ನು ಟೇಂಕರಿಸಿದನು. ನೀನು ಮಾಡಿದ ಅಪರಾಧದ ಕಾರಣದಿಂದಾಗಿ ನಾನಾದಿಕ್ಕುಗಳಿಂದ ಆಹ್ವಾನಿತರಾಗಿದ್ದ ರಥ-ಗಜಾಶ್ವ-ಪದಾತಿಸೈನ್ಯಗಳಿಂದ ಕೂಡಿದ್ದ ಅನೇಕರಾಜರು ಯುದ್ಧದಲ್ಲಿ ಹತರಾದರು. ಆ

ಸಮಯದಲ್ಲಿ ಒಬ್ಬರು ಮತ್ತೊಬ್ಬರನ್ನು ಲಕ್ಷ್ಯಮಾಡಿಕೊಂಡು ಗರ್ಜನೆ ಮಾಡುತ್ತಿದ್ದ ದುರ್ಯೋಧನಪ್ರಮುಖರಾದ ಮಹಾರಥರಿಗೂ ಪಾಂಡವರ್ಷಭನಾದ ಅರ್ಜುನನಿಗೂ ಪರಸ್ಪರವಾಗಿ ಆಘಾತ-ಪ್ರತ್ಯಾಘಾತಗಳು ಆಗತೊಡಗಿದುವು. ಕೃಷ್ಣಸಾರಥಿಯಾದ ಪಾರ್ಥನೊಬ್ಬನೇ ಬಹುಸಂಖ್ಯಾತರಾದ ದುರ್ಯೋಧನಪ್ರಮುಖರಾದ ಮಹಾರಥರೊಡನೆ ಭಯರಹಿತನಾಗಿ ಯುದ್ಧದಲ್ಲಿ ತೊಡಗಿ ತನ್ನ ಪರಮಾದ್ಭುತವಾದ ಪರಾಕ್ರಮವನ್ನು ತೋರಿಸಿದನು. ತನ್ನ ಎದುರಾಗಿ ನಿಂತು ಯುದ್ಧಮಾಡುತ್ತಿದ್ದ ಕೌರವಮಹಾರಥರನ್ನು ಜಯಿಸುವ ಇಚ್ಛೆಯಿಂದಲೂ, ಜಯದ್ರಥನನ್ನು ಸಂಹರಿಸುವ ಇಚ್ಛೆಯಿಂದಲೂ ಗಾಂಡೀವಧನುಸ್ಸನ್ನು ಬಾರಿ-ಬಾರಿಗೂ ಸೆಳೆದುಬಿಡುತ್ತಿದ್ದ, ನರವ್ಯಾಘ್ರನಾದ, ಮಹಾಬಾಹುವಾದ ಅರ್ಜುನನು ಬಹಳವಾಗಿ ಪ್ರಕಾಶಿಸಿದನು. ಶತ್ರುತಾಪನನಾದ ನರಸಿಂಹನಾದ ಅರ್ಜುನನು ಸಾವಿರಾರು ಬಾರಿ ಬಿಟ್ಟ ಅಪಾರವಾದ ಬಾಣಗಳಿಂದ ನಿನ್ನ ಕಡೆಯ ಯೋಧರನ್ನು ಅದೃಶ್ಯರನ್ನಾಗಿಯೇ ಮಾಡಿದನು. ಅನಂತರ ನರವ್ಯಾಘ್ರರಾದ ಆ ಎಲ್ಲ ಮಹಾರಥರೂ ಒಟ್ಟಾಗಿ ಎಲ್ಲ ಕಡೆಗಳಿಂದಲೂ ಪುಂಖಾನುಪುಂಖವಾಗಿ ಬಿಟ್ಟ ಬಾಣಗಳ ಸಮೂಹಗಳಿಂದ ಪಾರ್ಥನನ್ನೂ ಸಹ ಕಣ್ಣಿಗೆ ಕಾಣಿಸದಂತೆ ಮಾಡಿದರು. ಕುರುಶ್ರೇಷ್ಠನಾದ ಅರ್ಜುನನು ನರಶ್ರೇಷ್ಠರಾದ ಕುರುಮಹಾರಥರಿಂದ ಆವೃತನಾಗಿರಲಾಗಿ, ಆ ಸೈನ್ಯದ ಮಧ್ಯದಲ್ಲಿ ದೊಡ್ಡದಾದ ಕೋಲಾಹಲ ಶಬ್ದವೆದ್ದಿತು."

ಌ೦೫ನೆಯ ಅಧ್ಯಾಯವು ಮುಗಿಯಿತು.

೧೦೬ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣರಿಗೂ–ಪಾಂಡವಯೋಧರಿಗೂ ನಡೆದ ದ್ವಂದ್ವಯುದ್ಧದ ವರ್ಣನೆ: ಯುಧಿಷ್ಠಿರನು ದ್ರೋಣಾಚಾರ್ಯರೊಡನೆ ಯುದ್ಧ ಮಾಡುತ್ತಿದ್ದಾಗ ರಥಭಂಗವಾಗಲು ಪಲಾಯನಮಾಡಿದುದು

ರಣಾಂಗಣದ ಮತ್ತೊಂದು ವಿಭಾಗದಲ್ಲಿ ಏನು ನಡೆಯುತ್ತಿತ್ತೆಂಬುದನ್ನು ತಿಳಿದುಕೊಳ್ಳುವ ಅಪೇಕ್ಷೆಯಿಂದ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಅರ್ಜುನನು ಸೈಂಧವನ ಸಮೀಪಕ್ಕೆ ಹೊರಟುಹೋದುದು

ಸರಿಯಷ್ಟೆ. ಇತ್ತಲಾಗಿ ದ್ರೋಣರಿಂದ ಸುತ್ತುಗಟ್ಟಲ್ಪಟ್ಟಿದ್ದ ಪಾಂಚಾಲರು ಕುರುಗಳೊಡನೆ ಏನು ಮಾಡುತ್ತಿದ್ದರು?"

"ಮಹಾರಾಜ! ಅಪರಾಹ್ಣವಾಗುತ್ತಲೇ ರೋಮಾಂಚಕರವಾದ ಆ ಸಂಗ್ರಾಮದಲ್ಲಿ ದ್ರೋಣರನ್ನೇ ಪಣವನ್ನಾಗಿಟ್ಟು ಪಾಂಚಾಲರೂ ಮತ್ತು ಕೌರವರೂ ಯುದ್ಧದ್ಯೂತವನ್ನು ಪ್ರಾರಂಭಿಸಿದರು. ಹೃಷ್ಟವಾದ ಮನಸ್ಸಿನಿಂದ ಕೂಡಿದ್ದ ಪಾಂಚಾಲರು ದ್ರೋಣರನ್ನು ಸಂಹರಿಸುವ ಇಚ್ಛೆಯಿಂದ ಗರ್ಜನೆಮಾಡುತ್ತಾ ಬಾಣಗಳ ವೃಷ್ಟಿಯನ್ನೇ ಶತ್ರುಸೈನ್ಯದ ಮೇಲೆ ಸುರಿಸು ತ್ತಿದ್ದರು. ಅನಂತರ ಪಾಂಚಾಲರಿಗೂ ಮತ್ತು ಕೌರವರಿಗೂ ದೇವತೆಗಳಿಗೂ ಮತ್ತು ಅಸುರರಿಗೂ ನಡೆದ ಘೋರಯುದ್ಧಕ್ಕೆ ಸದೃಶವಾದ ಅತಿ ಭಯಂಕರವಾದ ಮತ್ತು ಪರಮಾದ್ಭುತವಾದ ಯುದ್ಧವು ಪ್ರಾರಂಭವಾಯಿತು.

ಎಲ್ಲ ಪಾಂಚಾಲರೂ ಪಾಂಡವರೊಡನೆ ಕೂಡಿಕೊಂಡು ದ್ರೋಣರ ರಥದ ಬಳಿಗೆ ಬಂದು ಅವರ ಮಹಾಸೈನ್ಯವನ್ನು ಭೇದಿಸುವ ಇಚ್ಛೆಯಿಂದ ಮಹಾಸ್ತ್ರಗಳನ್ನು ಪ್ರದರ್ಶಿಸಲು ಉಪಕ್ರಮಿಸಿದರು. ಪಾಂಚಾಲರಥಿಕರು ರಥಗಳ ಮೇಲೆ ಕುಳಿತು ಮಂಡಲಕ್ರಮದಲ್ಲಿ ಮಧ್ಯಮವೇಗವನ್ನು ಆಶ್ರಯಿಸಿದವರಾಗಿ ಭೂಮಿಯನ್ನೇ ನಡುಗಿಸುತ್ತಾ ದ್ರೋಣರ ರಥದ ಸಮೀಪಕ್ಕೆ ಹೋದರು. ಕೇಕಯರ ಮಹಾರಥನಾದ ಬೃಹತ್ಕ್ಷತ್ರನು ಮಹೇಂದ್ರನ ವಜ್ರಾಯುಧಕ್ಕೆ ಸಮಾನವಾಗಿದ್ದ ನಿಶಿತವಾದ ಬಾಣಗಳನ್ನು ಸುರಿಸುತ್ತಾ ದ್ರೋಣರನ್ನು ಆಕ್ರಮಿಸಿದನು. ಆ ಸಮಯದಲ್ಲಿ ಮಹಾ ಯಶೋವಂತನಾದ ಕ್ಷೇಮಧೂರ್ತಿಯು ನೂರಾರು ಸಾವಿರಾರು ಸಂಖ್ಯೆಯಲ್ಲಿ ನಿಶಿತವಾದ ಬಾಣಗಳನ್ನು ಬಿಡುತ್ತಾ ಬೃಹತ್ಕ್ಷತ್ರನನ್ನು ಎದುರಿಸಿದನು. ಅತ್ಯಂತಬಲಿಷ್ಠನೆಂದು ಪ್ರಸಿದ್ಧನಾದ ಚೇದಿಗಳ ರಾಜನಾದ ಧೃಷ್ಟಕೇತುವು– ಮಹೇಂದ್ರನು ಶಂಬರಾಸುರನನ್ನು ಆಕ್ರಮಿಸಿದಂತೆ ಅತಿತ್ವರೆಯಿಂದ ದ್ರೋಣರನ್ನು ಆಕ್ರಮಿಸಿದನು. ಬಾಯ್ದೆರೆದ ಅಂತಕನೋಪಾದಿಯಲ್ಲಿ–ತ್ವರೆ ಯಿಂದ ದ್ರೋಣರ ಮೇಲೆ ಬೀಳಲು ಬರುತ್ತಿದ್ದ ಧೃಷ್ಟಕೇತುವನ್ನು ಮಹಾಧನುಷ್ಮಂತನಾದ ವೀರಧನ್ವನು ಬಹಳ ಶೀಘ್ರವಾಗಿ ತಡೆದು ನಿಲ್ಲಿಸಿದನು. ಯುದ್ಧದಲ್ಲಿ ಜಯಗಳಿಸುವ ಇಚ್ಛೆಯಿಂದ ಸೈನ್ಯಸಮೇತನಾಗಿ

ನಿಂತಿದ್ದ ಯುಧಿಷ್ಠಿರಮಹಾರಾಜನನ್ನು ವೀರ್ಯವಂತರಾದ ದ್ರೋಣರು ಎದುರಿಸಿದರು. ಯುದ್ಧಕುಶಲನಾದ, ಪರಾಕ್ರಮಿಯಾದ, ದ್ರೋಣರ ಮೇಲೆ ಬೀಳಲು ಬರುತ್ತಿದ್ದ ನಕುಲನನ್ನು–ಪರಾಕ್ರಮಿಯಾದ ನಿನ್ನ ಮಗನಾದ ವಿಕರ್ಣನು ಎದುರಿಸಿದನು. ಅದೇ ರೀತಿಯಲ್ಲಿ ದ್ರೋಣರನ್ನು ಎದುರಿಸಲು ಬರುತ್ತಿದ್ದ ಸಹದೇವನನ್ನು–ಶತ್ರುಕರ್ಷಣನಾದ ದುರ್ಮುಖನು ಶೀಘ್ರಗಾಮಿಗಳಾದ ಅನೇಕಸಹಸ್ರ ಬಾಣಗಳಿಂದ ಮುಚ್ಚಿಬಿಟ್ಟನು. ವ್ಯಾಘ್ರದತ್ತನು ಸುನಿಶಿತವಾದ ಮತ್ತು ತೀಕ್ಷ್ಣವಾದ ಬಾಣಗಳಿಂದ ಶತ್ರುಸೈನ್ಯವನ್ನು ಬಾರಿ-ಬಾರಿಗೂ ನಡುಗಿಸುತ್ತಾ, ನರವ್ಯಾಘ್ರನಾದ ಸಾತ್ಯಕಿಯನ್ನು ನಿರೋಧಿಸಿದನು. ಬಹಳವಾಗಿ ಕೋಪಗೊಂಡಿದ್ದ, ರಥಿಶ್ರೇಷ್ಠರಾದ, ನರವ್ಯಾಘ್ರರಾದ, ಶ್ರೇಷ್ಠವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದ ದ್ರೌಪದಿಯ ಮಕ್ಕಳನ್ನು–ಸೋಮದತ್ತನ ಮಗನಾದ ಶಲನು ಎದುರಿಸಿದನು. ದ್ರೋಣರ ಸಮೀಪಕ್ಕೆ ರಭಸದಿಂದ ಬರುತ್ತಿದ್ದ ಕ್ರುದ್ಧನಾಗಿದ್ದ ಭೀಮಸೇನನನ್ನು–ಭಯಂಕರರೂಪನಾದ, ಭಯಾನಕನಾದ, ಮಹಾರಥನಾದ, ಋಷ್ಯಶೃಂಗನ ಮಗನಾದ ಅಲಂಬುಷನು ಎದುರಿಸಿದನು. ಆ ಇಬ್ಬರು ನರ-ರಾಕ್ಷಸರಿಗೂ ಹಿಂದೆ ರಾಮ-ರಾವಣರಿಗೆ ನಡೆದಿದ್ದಂತೆಯೇ ಘೋರವಾದ ಯುದ್ಧವು ಪ್ರಾರಂಭವಾಯಿತು.

ದ್ರೋಣರನ್ನು ಎದುರಿಸಿದ್ದ ಭರತಶ್ರೇಷ್ಠನಾದ ಯುಧಿಷ್ಠಿರನು ಬಗ್ಗಿದ ಗಿಣ್ಣುಗಳಿಂದ ಕೂಡಿದ್ದ ತೊಂಬತ್ತು ಬಾಣಗಳಿಂದ ದ್ರೋಣರ ಎಲ್ಲ ಮರ್ಮಸ್ಥಳಗಳಲ್ಲಿಯೂ ಪ್ರಹರಿಸಿದನು. ಯಶೋವಂತನಾದ ಕೌಂತೇಯನ ಬಾಣಪ್ರಹಾರದಿಂದ ಬಹಳ ಕುಪಿತರಾದ ದ್ರೋಣರು, ಇಪ್ಪತ್ತೈದು ಬಾಣಗಳಿಂದ ಯುಧಿಷ್ಠಿರನ ವಕ್ಷಃಸ್ಥಳದಲ್ಲಿ ಪ್ರಹರಿಸಿದರು. ಪುನಃ ಅಶ್ವ-ಸೂತ-ಧ್ವಜಯುಕ್ತನಾಗಿದ್ದ ಯುಧಿಷ್ಠಿರನನ್ನು ಎಲ್ಲ ಧನುಷ್ಮಂತರೂ ನೋಡುತ್ತಿದ್ದಂತೆಯೇ ಇಪ್ಪತ್ತು ಬಾಣಗಳಿಂದ ಪ್ರಹರಿಸಿದರು. ದ್ರೋಣರಿಂದ ವಿಮುಕ್ತವಾದ ಆ ಎಲ್ಲ ಬಾಣಗಳನ್ನೂ ಧರ್ಮಾತ್ಮನಾದ ಯುಧಿಷ್ಠಿರನು ತನ್ನ ಹಸ್ತಲಾಘವವನ್ನು ಪ್ರದರ್ಶಿಸುತ್ತಾ (ಬಾಣಗಳ ವೃಷ್ಟಿಯಿಂದ) ನಿರಸನಗೊಳಿಸಿದನು. ಅನಂತರ ಧನುಷ್ಮಂತರಾದ ದ್ರೋಣರು ಅತ್ಯಂತಕ್ರುದ್ಧರಾಗಿ ಮಹಾತ್ಮನಾದ ಧರ್ಮರಾಜನ ಧನುಸ್ಸನ್ನು ತುಂಡುಮಾಡಿದರು. ಧನುಸ್ಸಿನಿಂದ

ವಿಹೀನನಾಗಿದ್ದ ಯುಧಿಷ್ಠಿರನನ್ನು ಅತ್ಯಂತತ್ವರೆಯಿಂದ ಮಹಾರಥರಾದ ದ್ರೋಣರು ಅನೇಕಸಹಸ್ರಬಾಣಗಳಿಂದ ಮುಚ್ಚಿದರು. ಭಾರದ್ವಾಜರು ಬಿಟ್ಟ ಬಾಣಗಳಿಂದ ಮುಚ್ಚಿಹೋಗಿದ್ದ ಯುಧಿಷ್ಠಿರನು ಅದೃಶ್ಯನಾದುದನ್ನು ಕಂಡು ಎಲ್ಲ ಪ್ರಾಣಿಗಳೂ ಧರ್ಮಜನು ಹತನಾದನೆಂದೇ ಭಾವಿಸಿದುವು. ಮತ್ತೆ ಕೆಲವರು ಯುಧಿಷ್ಠಿರನು ಪರಾಜಿತನಾಗಿ ಪಲಾಯನಮಾಡಿದನೆಂದೇ ಭಾವಿಸಿದರು. ಮತ್ತೆ ಕೆಲವರು ಮಹಾತ್ಮನಾದ ಬ್ರಾಹ್ಮಣನಿಂದ ಯುಧಿಷ್ಠಿರನು ಹತನಾದನೆಂದೇ ಭಾವಿಸಿದರು. ಈ ರೀತಿಯಲ್ಲಿ ಬಹಳ ಸಂಕಟಕ್ಕೆ ಸಿಕ್ಕಿದ ಧರ್ಮಾತ್ಮನಾದ ಯುಧಿಷ್ಠಿರನು ದ್ರೋಣರ ಬಾಣಗಳಿಂದ ಛಿನ್ನವಾಗಿದ್ದ ಧನುಸ್ಸನ್ನು ವಿಸರ್ಜಿಸಿ ದಿವ್ಯವಾದ ಮತ್ತು ಅತ್ಯಂತವೇಗಯುಕ್ತವಾದ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡನು. ಅನಂತರ ವೀರನಾದ ಯುಧಿಷ್ಠಿರನು ದ್ರೋಣರು ಪ್ರಯೋಗಿಸಿದ್ದ ಸಾವಿರಾರು ಬಾಣಗಳನ್ನೂ ಚೂರು-ಚೂರುಗಳಾಗಿ ಕತ್ತರಿಸಿಬಿಟ್ಟನು. ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಕೋಪದಿಂದ ಕೆಂಗಣ್ಣನಾಗಿದ್ದ ಯುಧಿಷ್ಠಿರನು ದ್ರೋಣರು ಬಿಟ್ಟಿದ್ದ ಬಾಣಗಳೆಲ್ಲವನ್ನೂ ಕತ್ತರಿಸಿ ಪರ್ವತಗಳನ್ನು ಸೀಳಲು ಸಮರ್ಥವಾದ, ಸುವರ್ಣಮಯವಾದ ದಂಡದಿಂದ ಕೂಡಿದ್ದ, ಮಹಾಘೋರವಾಗಿಯೂ-ಭಯಾವಹವಾಗಿಯೂ ಇದ್ದ, ಎಂಟು ಘಂಟೆಗಳಿಂದ ಕೂಡಿದ್ದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡನು. ಹೃಷ್ಟನಾದ ಮತ್ತು ಬಲಿಷ್ಠನಾದ ಯುಧಿಷ್ಠಿರನು ಆ ಶಕ್ತ್ಯಾಯುಧವನ್ನು ದ್ರೋಣರ ಮೇಲೆ ರಭಸದಿಂದ ಪ್ರಯೋಗಿಸಿ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಅವನ ಆ ಸಿಂಹನಾದವು ಎಷ್ಟು ಗಟ್ಟಿಯಾಗಿತ್ತೆಂದರೆ: ಸಿಂಹನಾದದಿಂದಲೇ ಯುಧಿಷ್ಠಿರನು ಸರ್ವಪ್ರಾಣಿಗಳನ್ನೂ ಭಯಗೊಳಿಸಲು ಯತ್ನಿಸುತ್ತಿರುವನೋ–ಎಂಬಂತಿದ್ದಿತು. ರಣರಂಗದಲ್ಲಿ ಧರ್ಮರಾಜನು ದ್ರೋಣರನ್ನು ಪ್ರಹರಿಸಲು ಶಕ್ತ್ಯಾಯುಧವನ್ನು ಎತ್ತಿದುದನ್ನು ಕಂಡು ಎಲ್ಲ ಪ್ರಾಣಿಗಳೂ ಒಡನೆಯೇ–'ದ್ರೋಣಾಯ ಸ್ವಸ್ತಿ' 'ದ್ರೋಣರಿಗೆ ಮಂಗಳವಾಗಲಿ'- ಎಂದು ಮಂಗಳಾಶಾಸನಗಳನ್ನು ಮಾಡಿದುವು. ಯುಧಿಷ್ಠಿರರಾಜನ ಭುಜಗಳಿಂದ ವಿನಿರ್ಮುಕ್ತವಾದ ಆ ಶಕ್ತ್ಯಾಯುಧವು ಪೊರೆಬಿಟ್ಟ ಹಾವಿನಂತೆಯೇ ಪ್ರಕಾಶಮಾನವಾಗಿದ್ದಿತು. ಆಕಾಶವನ್ನೂ, ದಿಕ್ಕುಗಳನ್ನೂ ಮತ್ತು

ಉಪದಿಕ್ಕುಗಳನ್ನೂ ತನ್ನ ಕಾಂತಿಯಿಂದಲೇ ಬೆಳಗುತ್ತಿದ್ದಿತು. ಪ್ರದೀಪ್ತವಾದ ಮುಖದಿಂದ ಕೂಡಿರುವ ಸರ್ಪದಂತೆಯೇ ಬಹಳ ಶೀಘ್ರವಾಗಿ ಆ ಶಕ್ತ್ಯಾಯುಧವು ದ್ರೋಣರ ಸಮೀಪಕ್ಕೆ ಬಂದಿತು. ಅಸ್ತ್ರವಿದರಲ್ಲಿ ಶ್ರೇಷ್ಠರಾದ ದ್ರೋಣರು ತಮ್ಮ ಮೇಲೆ ಬೀಳಲಿದ್ದ ಶಕ್ತ್ಯಾಯುಧವನ್ನು ಕಂಡು ಒಡನೆಯೇ ಬ್ರಹ್ಮಾಸ್ತ್ರವನ್ನು ಪ್ರಕಟಿಸಿದರು. ದ್ರೋಣರು ಅಭಿಮಂತ್ರಿಸಿ ಬಿಟ್ಟ ಆ ಬ್ರಹ್ಮಾಸ್ತ್ರವು ಭಯಂಕರವಾಗಿ ಕಾಣುತ್ತಿದ್ದ, ಯುಧಿಷ್ಠಿರನು ಬಿಟ್ಟ ಶಕ್ತ್ಯಾಯುಧವನ್ನು ಕ್ಷಣಮಾತ್ರದಲ್ಲಿ ಭಸ್ಮೀಭೂತವನ್ನಾಗಿ ಮಾಡಿ, ಯಶೋವಂತನಾದ



ಯುಧಿಷ್ಠಿರನ ರಥದ ಕಡೆಗೆ ರಭಸದಿಂದ ಹೋಯಿತು. ಆ ಸಮಯದಲ್ಲಿ ಮಹಾಪ್ರಾಜ್ಞನಾದ ಯುಧಿಷ್ಠಿರನು ದ್ರೋಣರು ಬಿಟ್ಟಿದ್ದ ಬ್ರಹ್ಮಾಸ್ತ್ರವನ್ನು ಬ್ರಹ್ಮಾಸ್ತ್ರಪ್ರಯೋಗದಿಂದಲೇ ಉಪಶಮನಗೊಳಿಸಿದನು. ಇಷ್ಟು ಮಾತ್ರ ವಲ್ಲದೇ ಬಗ್ಗಿದ ಗಿಣ್ಣುಗಳಿದ್ದ ಐದು ಬಾಣಗಳಿಂದ ದ್ರೋಣರನ್ನೂ ಪ್ರಹರಿಸಿದನಲ್ಲದೇ ಸುತೀಕ್ಷ್ಣವಾದ ಕ್ಷುರಪ್ರದಿಂದ ಅವರ ಮಹಾಧನುಸ್ಸನ್ನೂ ಕತ್ತರಿಸಿದನು. ಕ್ಷತ್ರಿಯಮರ್ದನರಾದ ದ್ರೋಣರು ಧರ್ಮರಾಜನು ಕತ್ತರಿಸಿದ ಧನುಸ್ಸನ್ನು ಪರಿತ್ಯಜಿಸಿ. ಧರ್ಮಪುತ್ರನ ಮೇಲೆ ಗದೆಯನ್ನು ರಭಸದಿಂದ

ಎಸೆದರು. ಬಹಳ ವೇಗದಿಂದ ತನ್ನ ಕಡೆಗೆ ಬರುತ್ತಿದ್ದ ದ್ರೋಣಪ್ರಮುಕ್ತವಾದ ಗದೆಯನ್ನು ನೋಡಿ ಕ್ರುದ್ಧನಾದ ಯುಧಿಷ್ಠಿರನು ತಾನೂ ಒಂದು ಗದೆಯನ್ನೇ ಕೈಗೆತ್ತಿಕೊಂಡು ರಭಸದಿಂದ ಪ್ರಯೋಗಿಸಿದನು. ದ್ರೋಣ-ಯುಧಿಷ್ಠಿರರಿಂದ ಪ್ರಮುಕ್ತವಾದ ಎರಡು ಗದೆಗಳೂ ಮಧ್ಯದಲ್ಲಿ ಸಂಧಿಸಿ ಪರಸ್ಪರವಾಗಿ ಅಗ್ನಿಯನ್ನು ಉತ್ಪಾದಿಸಿ ಭೂಮಿಯ ಮೇಲೆ ಬಿದ್ದುವು.

ಮಹಾರಾಜ! ಅನಂತರ ದ್ರೋಣರು ಪರಮಕ್ರುದ್ಧರಾಗಿ ನಿಶಿತವಾದ ಮತ್ತು ಉತ್ತಮವಾದ ನಾಲ್ಕು ಬಾಣಗಳಿಂದ ಧರ್ಮರಾಜನ ಕುದುರೆಗಳನ್ನು ಸಂಹರಿಸಿದರು. ಪುನಃ ದ್ರೋಣರು ಒಂದು ಭಲ್ಲದಿಂದ ಯುಧಿಷ್ಠಿರನ ಧನುಸ್ಸನ್ನು ಕತ್ತರಿಸಿದರು. ಮತ್ತೊಂದು ಬಾಣದಿಂದ ಇಂದ್ರಧ್ವಜೋಪಮ ವಾಗಿದ್ದ ಅವನ ಧ್ವಜವನ್ನು ಕತ್ತರಿಸಿ, ಪುನಃ ಮೂರು ಬಾಣಗಳಿಂದ ಯುಧಿಷ್ಠಿರನನ್ನೂ ಗಾಯಗೊಳಿಸಿದರು. ಯುಧಿಷ್ಠಿರನು ಸತ್ತುಹೋದ ಕುದುರೆಗಳಿದ್ದ ರಥದಿಂದ ಕೆಳಕ್ಕೆ ಧುಮುಕಿ ಎರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು ನಿರಾಯುಧನಾಗಿ ನಿಂತುಬಿಟ್ಟನು. ಯುಧಿಷ್ಠಿರನು ರಥಹೀನನಾಗಿದ್ದುದನ್ನೂ, ಅದರಲ್ಲಿಯೂ ವಿಶೇಷವಾಗಿ ಆಯುಧರಹಿತ ನಾಗಿದ್ದುದನ್ನೂ ಕಂಡು ದ್ರೋಣರು ಶತ್ರುಗಳನ್ನೂ ಮತ್ತು ಸರ್ವಸೈನ್ಯಗಳನ್ನೂ ವಿಮೋಹಗೊಳಿಸಿದರು. ಲಘುಹಸ್ತರಾದ ಮತ್ತು ದೃಢವ್ರತರಾದ ದ್ರೋಣರು ತೀಕ್ಷ್ಣವಾದ ಬಾಣಗಳ ಸಮೂಹವನ್ನೇ ಪುಂಖಾನುಪುಂಖವಾಗಿ ಬಿಡುತ್ತಾ– ಉದ್ರಿಕ್ತವಾದ ಸಿಂಹವು ಮೃಗವನ್ನು ಹಿಡಿಯಲು ನುಗ್ಗುವಂತೆ– ಯುಧಿಷ್ಠಿರನಿದ್ದೆಡೆಗೆ ತ್ವರೆಯಿಂದ ಧಾವಿಸಿದರು. ಶತ್ರುಘಾತಿಗಳಾದ ದ್ರೋಣರು ಯುಧಿಷ್ಠಿರನನ್ನು ಹಿಡಿಯಲು ತ್ವರೆಯಿಂದ ಮುನ್ನುಗ್ಗುತ್ತಿರುವುದನ್ನು ನೋಡಿ ಪಾಂಡವರ ಸಮೂಹದಲ್ಲಿ ಹಾಹಾಕಾರವೆದ್ದಿತು. "ಹತೋ ರಾಜಾ ಹತೋ ರಾಜಾ"– "ರಾಜನು ಹತನಾಗಿ ಹೋದನು! ಭಾರದ್ವಾಜರು ಧರ್ಮಜನನ್ನು ಸಂಹಾರಮಾಡಿಬಿಟ್ಟರು!"–ಹೀಗೆಂಬ ಮಹಾದಾರುಣವಾದ ಶಬ್ದವು ಪಾಂಡವರ ಸೈನ್ಯಗಳ ಮಧ್ಯದಲ್ಲಿ ಸತತವಾಗಿ ಕೇಳಿಬರುತ್ತಿದ್ದಿತು.

ಮರುಕ್ಷಣದಲ್ಲಿಯೇ ಧರ್ಮಪುತ್ರನು ತ್ವರೆಯಿಂದ ಹತ್ತಿರದಲ್ಲಿಯೇ ಇದ್ದ ಸಹದೇವನ ರಥಕ್ಕೆ ಹತ್ತಿ, ವೇಗವಾಗಿ ಹೋಗುವ ಕುದುರೆಗಳ ಮೂಲಕವಾಗಿ ರಣಾಂಗಣವನ್ನೇ ಬಿಟ್ಟು ಹೊರಟುಹೋದನು.

೧೦೬ನೆಯ ಅಧ್ಯಾಯವು ಮುಗಿಯಿತು.

೧೦೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಕೌರವಸೈನ್ಯದಲ್ಲಿದ್ದ ಕ್ಷೇಮಧೂರ್ತಿ, ವೀರಧನ್ವಾ, ನಿರಮಿತ್ರ ಮತ್ತು ವ್ಯಾಘ್ರದತ್ತರ ವಧೆ: ದುರ್ಮುಖ ಮತ್ತು ವಿಕರ್ಣರ ಪರಾಜಯ

ಸಂಜಯನು ದ್ವಂದ್ವಯುದ್ಧದ ವರ್ಣನೆಯನ್ನು ಮುಂದುವರಿಸಿ ಹೇಳುತ್ತಾನೆ:

ಮಹಾರಾಜ! ಕೇಕಯರಾಜನಾದ ಬೃಹತ್ಕ್ಷತ್ರನು ದ್ರೋಣರ ಬಳಿಗೆ ಬರುತ್ತಿರುವುದನ್ನು ಕಂಡು ಅವನನ್ನು ತಡೆಯುವ ಸಲುವಾಗಿ ಕ್ಷೇಮಧೂರ್ತಿಯು ಬೃಹತ್ಕ್ಷತ್ರನ ವಕ್ಷಃಸ್ಥಳವನ್ನು ಮೂರು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಬೃಹತ್ಕ್ಷತ್ರನೂ ದ್ರೋಣಾನೀಕವನ್ನು ಭಗ್ನಗೊಳಿಸುವ ಇಚ್ಛೆಯಿಂದ ಬಗ್ಗಿದ ಗಿಣ್ಣುಗಳಿದ್ದ ತೊಂಬತ್ತು ಬಾಣಗಳಿಂದ ಕ್ಷೇಮಧೂರ್ತಿಯನ್ನು ಬಹಳ ಬೇಗ ಪ್ರಹರಿಸಿದನು. ಅದರಿಂದ ಸಂಕ್ರುದ್ಧನಾದ ಕ್ಷೇಮಧೂರ್ತಿಯೂ ಮಹಾತ್ಮನಾದ ಕೇಕಯರಾಜನ ಧನುಸ್ಸನ್ನು ನಿಶಿತವಾದ, ಎಣ್ಣೆಯನ್ನು ಕುಡಿದಿದ್ದ ಭಲ್ಲದಿಂದ ಕತ್ತರಿಸಿದನು. ಪುನಃ ಕ್ಷೇಮಧೂರ್ತಿಯು ಸರ್ವಧನುಷ್ಮಂತರಿಗೂ ಶ್ರೇಷ್ಠನಾದ, ಧನುಸ್ಸಿನಿಂದ ವಿಹೀನನಾಗಿದ್ದ ಬೃಹತ್ಕತ್ರನನ್ನು ಬಗ್ಗಿದ ಗಿಣ್ಣೆನಿಂದ ಕೂಡಿದ್ದ ಒಂದು ಬಾಣದಿಂದ ಬಹಳ ಬೇಗ ಗಾಯಗೊಳಿಸಿದನು.

ಬೃಹತ್ಕ್ಷತ್ರನು ನಗು-ನಗುತ್ತಲೇ ಮತ್ತೊಂದು ಧನುಸ್ಸನ್ನು ತೆಗೆದು ಕೊಂಡು ಮಹಾರಥನಾದ ಕ್ಷೇಮಧೂರ್ತಿಯನ್ನು ಕುದುರೆಗಳಿಂದಲೂ, ಸೂತನಿಂದಲೂ, ಕಡೆಯದಾಗಿ ರಥದಿಂದಲೂ ವಿಹೀನನನ್ನಾಗಿ ಮಾಡಿದನು. ನಿಶಿತವಾಗಿದ್ದ ಮತ್ತು ಎಣ್ಣೆಯನ್ನು ಕುಡಿದಿದ್ದ ಮತ್ತೊಂದು ಭಲ್ಲದಿಂದ ಜಾಜ್ವಲ್ಯಮಾನವಾದ ಕರ್ಣಕುಂಡಲಗಳಿದ್ದ ಕ್ಷೇಮಧೂರ್ತಿಯ ಶಿರಸ್ಸನ್ನು ಅವನ ಶರೀರದಿಂದ ಬೇರ್ಪಡಿಸಿದನು. ಹೀಗೆ ಕತ್ತರಿಸಲ್ಪಟ್ಟ, ಗುಂಗುರುಕೂದಲುಗಳಿಂದ ಕೂಡಿದ್ದ, ಕಿರೀಟಯುಕ್ತವಾಗಿದ್ದ, ಭೂಮಿಯ

ಮೇಲೆ ಬಿದ್ದಿದ್ದ ಕ್ಷೇಮಧೂರ್ತಿಯ ತಲೆಯು ಆಕಾಶದಿಂದ ಕೆಳಕ್ಕೆ ಬಿದ್ದ ತಾರೆಯಂತೆಯೇ-ಪ್ರಕಾಶಿಸಿತು. ಮಹಾರಥನಾದ ಬೃಹತ್ಕ್ಷತ್ರನು ಕ್ಷೇಮ ಧೂರ್ತಿಯನ್ನು ಕೊಂದು ಪರಮಹೃಷ್ಟನಾಗಿ ಯುಧಿಷ್ಠಿರನ ಹಿತಸಾಧನೆಯ ಕಾರಣದಿಂದ ನಿನ್ನ ಸೈನ್ಯವನ್ನು ಆಕ್ರಮಿಸಿದನು. ಪರಾಕ್ರಮಿಯಾದ, ಮಹಾ ಧನುಷ್ಮಂತನಾದ, ದ್ರೋಣರ ಮೇಲೆ ಬೀಳಲು ಬರುತ್ತಿದ್ದ ಧೃಷ್ಟಕೇತುವನ್ನು ವೀರಧನ್ವನು ದ್ರೋಣರ ಹಿತಾರ್ಥವಾಗಿ ತಡೆದು ನಿಲ್ಲಿಸಿದನು. ಬಾಣಗಳೇ ಕೋರೆದಾಡೆಗಳಾಗಿ ಉಳ್ಳ, ವೇಗಶಾಲಿಗಳಾದ ಆ ಇಬ್ಬರು ಧೃಷ್ಟಕೇತು-ವೀರಧನ್ವರು ಅನೇಕಸಾವಿರ ಬಾಣಗಳಿಂದ ಪರಸ್ಪರವಾಗಿ ಸಂಘರ್ಷಿಸಿದರು. ಮಹಾರಣ್ಯದಲ್ಲಿ ಮದದಿಂದ ಕೊಬ್ಬಿರುವ ಎರಡು ಸಲಗಗಳಂತೆ-ನರಶಾರ್ದೂಲರಾದ ಆ ಇಬ್ಬರು ಮಹಾವೀರರು ಪರಸ್ಪರವಾಗಿ ಯುದ್ಧ ಮಾಡುತ್ತಿದ್ದರು. ಪರ್ವತದ ಗುಹೆಯ ಸಮೀಪಕ್ಕೆ ಹೋಗಿ ಎರಡು ಹುಲಿಗಳು ರೋಷಾವೇಶದಿಂದ ಕಚ್ಚಾಡುವಂತೆ-ಕ್ರುದ್ಧರಾಗಿದ್ದ, ಮಹಾವೀರ್ಯವಂತ ರಾಗಿದ್ದ ಧೃಷ್ಟಕೇತು-ವೀರಧನ್ವರು ಒಬ್ಬರು ಮತ್ತೊಬ್ಬರನ್ನು ಜಯಿಸಬೇಕೆಂಬ ಆಕಾಂಕ್ಷೆಯಿಂದ ಸುಘೋರವಾಗಿ ಯುದ್ಧಮಾಡುತ್ತಿದ್ದರು. ಅವರಿಬ್ಬರ ಆ ಮಹಾಯುದ್ಧವು ಭಯಂಕರವೂ-ಪ್ರೇಕ್ಷಣೀಯವೂ ಆಗಿದ್ದಿತು. ಸಿದ್ಧ-ಚಾರಣ ಸಂಘಗಳಿಗೂ ಆ ಯುದ್ಧವು ವಿಸ್ಮಯಕಾರಕವೂ, ಅದ್ಭುತದರ್ಶನವೂ ಆಗಿದ್ದಿತು. ವೀರಧನ್ವನು ಪರಮಕ್ರುದ್ಧನಾಗಿ ನಗುತ್ತಿರುವ ಮುಖಭಾವವನ್ನು ತೋರ್ಪಡಿಸುತ್ತಾ, ಧೃಷ್ಟಕೇತುವಿನ ಧನುಸ್ಸನ್ನು ಭಲ್ಲದಿಂದ ಎರಡಾಗಿ ಕತ್ತರಿಸಿದನು. ಮಹಾರಥನಾದ ಚೇದಿರಾಜನು ವೀರಧನ್ವನು ಕತ್ತರಿಸಿದ ಧನುಸ್ಸನ್ನು ವಿಸರ್ಜಿಸಿ ಸುವರ್ಣಮಯವಾದ ದಂಡದಿಂದ ಕೂಡಿದ್ದ, ಲೋಹಮಯವಾಗಿದ್ದ, ದೊಡ್ಡದಾದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡನು. ಮಹಾವೀರ್ಯಯುಕ್ತವಾಗಿದ್ದ ಆ ಶಕ್ತ್ಯಾಯುಧವನ್ನು ಎರಡು ತೋಳು ಗಳಿಂದಲೂ ಮೇಲಕ್ಕೆತ್ತಿ ಪ್ರಯತ್ನಪೂರ್ವಕವಾಗಿ (ಬಲಪೂರ್ವಕವಾಗಿ) ವೀರಧನ್ವನ ರಥದ ಕಡೆಗೆ ರಭಸದಿಂದ ಎಸೆದನು. ವೀರಘಾತಿಯಾದ ಆ ಶಕ್ತ್ಯಾಯುಧದ ಪ್ರಹಾರದಿಂದ ಬಹಳವಾಗಿ ಗಾಯಗೊಂಡ ವೀರಧನ್ವನು ಭಿನ್ನಹೃದಯನಾಗಿ ರಥದಿಂದ ಭೂಮಿಯ ಮೇಲೆ ಬಿದ್ದನು. ವೀರನಾದ ತ್ರೈಗರ್ತಮಹಾರಥನು ಧೃಷ್ಟಕೇತುವಿನಿಂದ ಹತನಾಗಲಾಗಿ, ಪಾಂಡವಸೈನಿಕರು

ನಿನ್ನ ಸೈನ್ಯವನ್ನು ಎಲ್ಲ ಕಡೆಗಳಲ್ಲಿಯೂ ಮರ್ದಿಸತೊಡಗಿದರು. ಮತ್ತೊಂದು ವಿಭಾಗದಲ್ಲಿ ನಿನ್ನ ಮಗನಾದ ದುರ್ಮುಖನು ಸಹದೇವನ ಮೇಲೆ ಅರುವತ್ತು ಬಾಣಗಳನ್ನು ಪ್ರಯೋಗಿಸಿ ಪಾಂಡುಪುತ್ರನನ್ನು ಹೆದರಿಸುತ್ತಾ ಗಟ್ಟಿಯಾಗಿ ಗರ್ಜನೆಮಾಡಿದನು. ಭ್ರಾತೃವಾದ ಸಹದೇವನು ಪರಮಕ್ರುದ್ಧನಾಗಿ ತನ್ನನ್ನು ಬಾಣಗಳಿಂದ ಗಾಯಗೊಳಿಸಿದ ದುರ್ಮುಖನನ್ನು ನಗು-ನಗುತ್ತಲೇ ನಿಶಿತವಾದ ಬಾಣಗಳಿಂದ ಪ್ರಹರಿಸಿದನು. ದುರ್ಮುಖನು ಮಹಾಬಲನಾದ, ವಿವೇಕಶಾಲಿಯಾದ ಸಹದೇವನ ಆ ವೇಗವನ್ನು ನೋಡಿ ಅವನನ್ನು ಒಂಬತ್ತು ಬಾಣಗಳಿಂದ ಪ್ರಹರಿಸಿದನು.

ಅದಕ್ಕೆ ಪ್ರತಿಯಾಗಿ ಮಹಾಬಲನಾದ ಸಹದೇವನು ದುರ್ಮುಖನ ಧ್ವಜವನ್ನು ಭಲ್ಲದಿಂದ ಕತ್ತರಿಸಿ, ಪುನಃ ನಿಶಿತವಾದ ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಅನಂತರ ನಿಶಿತವಾಗಿದ್ದ ಮತ್ತು ಎಣ್ಣೆಯನ್ನು ಕುಡಿದಿದ್ದ ಮತ್ತೊಂದು ಭಲ್ಲದಿಂದ ಪ್ರಜ್ವಲಿಸುವ ಕರ್ಣಕುಂಡಲಗಳಿಂದ ಯುಕ್ತವಾಗಿದ್ದ ಸಾರಥಿಯ ತಲೆಯನ್ನು ಶರೀರದಿಂದ ಬೇರ್ಪಡಿಸಿದನು. ಪುನಃ ಸಹದೇವನು ತೀಕ್ಷ್ಣವಾದ ಕ್ಷುರಪ್ರದಿಂದ ದುರ್ಮುಖನ ಮಹಾಧನುಸ್ಸನ್ನು ಕತ್ತರಿಸಿ, ಐದು ಬಾಣಗಳಿಂದ ಅವನನ್ನೇ ಪ್ರಹರಿಸಿದನು. ದುರ್ಮುಖನು ಸತ್ತುಹೋಗಿದ್ದ ಕುದುರೆಗಳಿದ್ದ ರಥವನ್ನು ಪರಿತ್ಯಜಿಸಿ ಭಾರವಾದ ಮನಸ್ಸಿನಿಂದ ನಿರಮಿತ್ರನ ರಥವನ್ನು ಹತ್ತಿಕುಳಿತನು. ಶತ್ರುವೀರಹಂತಕನಾದ ಸಹದೇವನು ಪರಮಕ್ರುದ್ಧನಾಗಿ ಸೈನ್ಯದ ಮಧ್ಯದಲ್ಲಿದ್ದ ನಿರಮಿತ್ರನನ್ನು ಭಲ್ಲದಿಂದ ಪ್ರಹರಿಸಿದನು. ತ್ರಿಗರ್ತರಾಜನ ಮಗನಾದ ನಿರಮಿತ್ರನು ನಿನ್ನ ಸೈನಿಕರನ್ನು ವ್ಯಥೆಗೀಡುಮಾಡುತ್ತಾ ರಥದ ಆಸನದಿಂದ ಕೆಳಕ್ಕೆ ಬಿದ್ದು ಅಸುನೀಗಿದನು. ದಶರಥನ ಮಗನಾದ ಶ್ರೀರಾಮನು ಮಹಾಬಲನಾದ ಖರನನ್ನು ಸಂಹರಿಸಿ ಜಾಜ್ವಲ್ಯಮಾನನಾಗಿ ಪ್ರಕಾಶಿಸಿ ದಂತೆ–ಮಹಾಬಾಹುವಾದ ಸಹದೇವನೂ ನಿರಮಿತ್ರನನ್ನು ಸಂಹರಿಸಿ ಪ್ರಕಾಶಿಸಿದನು. ಮಹಾರಥನಾದ, ರಾಜಪುತ್ರನಾದ ನಿರಮಿತ್ರನು ಹತನಾದು ದನ್ನು ಕಂಡು ತ್ರಿಗರ್ತರ ಸೈನ್ಯದಲ್ಲಿ ಹಾಹಾಕಾರವುಂಟಾಯಿತು. ಪಾಂಡವ ಚತುರ್ಥನಾದ ನಕುಲನು ವಿಶಾಲಾಕ್ಷನಾದ ನಿನ್ನ ಮಗನಾದ ವಿಕರ್ಣನನ್ನು ಮುಹೂರ್ತಮಾತ್ರದಲ್ಲಿ ಜಯಿಸಿದನು. ಅದು ನಮಗೆ ಪರಮಾದ್ಭುತವಾಗಿ

ಕಂಡಿತು. ಮತ್ತೊಂದು ವಿಭಾಗದಲ್ಲಿ ವ್ಯಾಘ್ರಪಾದನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಅಶ್ವ-ಸೂತ-ಧ್ವಜಸಹಿತನಾದ ಸಾತ್ಯಕಿಯನ್ನು ಅದೃಶ್ಯನನ್ನಾಗಿ ಮಾಡಿಬಿಟ್ಟನು. ಸಿದ್ಧಹಸ್ತನಾದ ಪುರುಷನೋಪಾದಿಯಲ್ಲಿ ಶೂರನಾದ ಸಾತ್ಯಕಿಯು ಹಸ್ತಲಾಘವದಿಂದ ವ್ಯಾಘ್ರದತ್ತನು ಬಿಟ್ಟ ಬಾಣಗಳೆಲ್ಲವನ್ನೂ ಪ್ರತಿಬಾಣಗಳಿಂದ ನಿರಸನಗೊಳಿಸಿ, ಬಳಿಕ ಅಶ್ವ-ಸೂತ-ಧ್ವಜಸಹಿತನಾದ ವ್ಯಾಘ್ರದತ್ತನನ್ನು ನಿಶಿತವಾದ ಬಾಣಗಳಿಂದ ಸಂಹರಿಸಿ ಕೆಳಗುರುಳಿಸಿದನು. ಮಾಗಧರಾಜಕುಮಾರನಾದ ವ್ಯಾಘ್ರದತ್ತನು ಸಾತ್ಯಕಿಯಿಂದ ಹತನಾಗಲಾಗಿ, ಎಲ್ಲ ಮಾಗಧಸೈನಿಕರೂ ಪ್ರಯತ್ನಪೂರ್ವಕವಾಗಿ ನಾಲ್ಕು ಕಡೆಗಳಿಂದಲೂ ಸಾತ್ಯಕಿಯನ್ನು ಆಕ್ರಮಿಸಿದರು. ಶೂರ-ವೀರರಾದ ಮಾಗಧಸೈನಿಕರು ಅನೇಕವಿಧವಾದ ಬಾಣಗಳನ್ನೂ, ಸಾವಿರಾರು ತೋಮರಗಳನ್ನೂ, ಭಿಂದಿಪಾಲಗಳನ್ನೂ, ಪ್ರಾಸಗಳನ್ನೂ, ಮುದ್ಗರಗಳನ್ನೂ, ಮುಸಲಾಯುಧಗಳನ್ನೂ ಸಾತ್ಯಕಿಯ ಮೇಲೆ ರಭಸದಿಂದ ಪ್ರಯೋಗಿಸುತ್ತಾ ಯುದ್ಧದುರ್ಮದನಾದ ಅವನೊಡನೆ ಯುದ್ಧದಲ್ಲಿ ತೊಡಗಿದರು. ಬಲಿಷ್ಠನಾದ, ಯುದ್ಧದುರ್ಮದನಾದ, ಪುರುಷರ್ಷಭನಾದ ಸಾತ್ಯಕಿಯು ಹೆಚ್ಚು ಕಷ್ಟವಿಲ್ಲದೇ ನಗು-ನಗುತ್ತಲೇ ಮಾಗಧಸೈನಿಕರನ್ನು ಪರಾಜಯಗೊಳಿಸಿದನು. ಅಳಿದುಳಿದ ಮಾಗಧಸೈನಿಕರು ದಿಕ್ಕು-ದಿಕ್ಕುಗಳಿಗೂ ಪಲಾಯನಮಾಡುತ್ತಿರುವುದನ್ನು ನೋಡಿ ನಿನ್ನ ಬಲವು ಧೃತಿಗೆಟ್ಟಿತು. ಯುಯುಧಾನನ ಬಾಣಗಳಿಂದಲೂ ಪೀಡಿಸಲ್ಪಟ್ಟು ಭಗ್ನವಾಗಿ ಹೋಯಿತು. ಮಧುವಂಶೀಯರಲ್ಲಿ ಶ್ರೇಷ್ಠನಾದ ಮಹಾಯಶೋವಂತನಾದ ಸಾತ್ಯಕಿಯು ಈ ರೀತಿಯಲ್ಲಿ ನಿನ್ನ ಸೈನ್ಯವನ್ನು ನಾಶಗೊಳಿಸಿ ತನ್ನ ಶ್ರೇಷ್ಠವಾದ ಧನುಸ್ಸನ್ನು ಕಂಪನಗೊಳಿಸುತ್ತಾ (ಟೇಂಕರಿಸುತ್ತಾ) ರಣಾಂಗಣದಲ್ಲಿ ಬಹಳವಾಗಿ ಪ್ರಕಾಶಿಸಿದನು. ಮಹಾತ್ಮನಾದ, ದೀರ್ಘಬಾಹುವಾದ ಸಾತ್ಯಕಿಯಿಂದ ಭಗ್ನಗೊಳಿಸಲ್ಪಟ್ಟ ಮತ್ತು ಭಯಗೊಳಿಸಲ್ಪಟ್ಟ ನಿನ್ನ ಸೈನ್ಯವು ಪುನಃ ಅವನೊಡನೆ ಯುದ್ಧಮಾಡಲು ಹೋಗಲಿಲ್ಲ. ಅನಂತರ ಕ್ರುದ್ಧರಾದ ದ್ರೋಣರು ತಮ್ಮ ಕಣ್ಣುಗಳನ್ನು ಸಾತ್ಯಕಿಯ ಕಡೆಗೆ ಹೊರಳಿಸಿ ಸತ್ಯಕರ್ಮನಾದ ಸಾತ್ಯಕಿಯೊಡನೆ ಯುದ್ಧಮಾಡಲು ತಾವೇ ತೆರಳಿದರು.

೧೦೭ನೆಯ ಅಧ್ಯಾಯವು ಮುಗಿಯಿತು.

# ದ್ರೌಪದಿಯ ಮಕ್ಕಳಿಂದ ಶಲನ ವಧೆ: ಭೀಮಸೇನನು ಅಲಂಬುಷನನ್ನು ಪರಾಜಯಗೊಳಿಸಿದುದು

ಸಂಜಯನು ದ್ವಂದ್ವಯುದ್ಧದ ವರ್ಣನೆಯನ್ನು ಮುಂದುವರಿಸುತ್ತಾನೆ:

ಮಹಾರಾಜ! ದ್ರೌಪದಿಯ ಮಕ್ಕಳೂ ಮತ್ತು ಶಲನೂ ಯುದ್ಧದಲ್ಲಿ ತೊಡಗಿದ್ದ ವಿಷಯವನ್ನು ಹಿಂದೆಯೇ ಹೇಳಿದ್ದೆನು. ಮಹಾಯಶೋವಂತನಾದ ಶಲನು ಮಹಾಧನುಷ್ಮಂತರಾದ ದ್ರೌಪದಿಯ ಐವರು ಮಕ್ಕಳನ್ನೂ ಐದೈದು ಬಾಣಗಳಿಂದ ಪ್ರಹರಿಸಿ, ಪುನಃ ಏಳೇಳು ಬಾಣಗಳಿಂದ ಗಾಯಗೊಳಿಸಿದನು. ಭಯಂಕರನಾದ ಶಲನಿಂದ ಬಹಳವಾಗಿ ಪೀಡಿತರಾದ ದ್ರೌಪದೇಯರು ಸ್ವಲ್ಪ ಹೊತ್ತಿನವರೆಗೆ ಏನು ಮಾಡಬೇಕೆಂಬುದೇ ತಿಳಿಯದೇ ವಿಮೂಢರಾಗಿಯೇ ಇದ್ದರು. ಸ್ವಲ್ಪ ಚೇತರಿಸಿಕೊಂಡು ಶಲನೊಡನೆ ಯುದ್ಧವನ್ನು ಮುಂದುವರಿಸಿದರು. ನಕುಲನ ಮಗನಾದ, ಶತ್ರುಕರ್ಶನನಾದ ಶತಾನೀಕನು ನರರ್ಷಭನಾದ ಶಲನನ್ನು ಎರಡು ಬಾಣಗಳಿಂದ ಪ್ರಹರಿಸಿ ಹೃಷ್ಟನಾಗಿ ಸಿಂಹನಾದವನ್ನು ಮಾಡಿದನು. ಅನಂತರ ಇತರ ನಾಲ್ವರು ದ್ರೌಪದಿಯ ಮಕ್ಕಳು ನೇರವಾಗಿ ಹೋಗುವ ಮೂರು-ಮೂರು ಬಾಣಗಳಿಂದ ಅಸಹನಶೀಲನಾದ ಶಲನನ್ನು ಪ್ರಯತ್ನಪೂರ್ವಕವಾಗಿ ಪ್ರಹರಿಸಿದರು. ಮಹಾಯಶೋವಂತನಾದ ಶಲನೂ ಸಹ ಅವರೈವರ ಮೇಲೂ ಐದು ಬಾಣಗಳನ್ನು ಪ್ರಯೋಗಿಸಿ, ಒಂದೊಂದು ಬಾಣದಿಂದ ಪ್ರತಿಯೊಬ್ಬರನ್ನೂ ಅವರ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಮಹಾತ್ಮನಾದ ಶಲನಿಂದ ಪ್ರಹೃತರಾದ ಆ ಐವರು ದ್ರೌಪದೇಯರೂ ಶಲನನ್ನು ಸುತ್ತುವರಿದು ನಿಂತು ಅನೇಕಬಾಣಗಳಿಂದ ಬಹಳವಾಗಿ ಗಾಯಗೊಳಿಸಿದರು. ಅರ್ಜುನನ ಮಗನಾದ ಶ್ರುತಕೀರ್ತಿಯು ಬಹಳ ಕ್ರುದ್ಧನಾಗಿ ನಿಶಿತವಾದ ಬಾಣಗಳಿಂದ ಶಲನ ನಾಲ್ಕು ಕುದುರೆಗಳನ್ನೂ ಯಮನ ಪಟ್ಟಣಕ್ಕೆ ಕಳುಹಿಸಿಕೊಟ್ಟನು. ಭೀಮಸೇನನ ಮಗನಾದ ಸುತಸೋಮನು ಮಹಾತ್ಮನಾದ ಶಲನ ಧನುಸ್ಸನ್ನು ಕತ್ತರಿಸಿ ಗಟ್ಟಿಯಾಗಿ ಗರ್ಜನೆಮಾಡಿ, ಪುನಃ ಅವನನ್ನು ಅನೇಕ ಬಾಣಗಳಿಂದ ಗಾಯಗೊಳಿಸಿದನು. ಯುಧಿಷ್ಠಿರನ ಮಗನಾದ ಪ್ರತಿವಿಂಧ್ಯನು ಶಲನ ಧ್ವಜವನ್ನು ಕತ್ತರಿಸಿ ಕೆಳಕ್ಕೆ ಬೀಳಿಸಿದನು. ನಕುಲನ ಮಗನಾದ ಶತಾನೀಕನು

ಶಲನ ಸಾರಥಿಯನ್ನು ಸಂಹರಿಸಿ, ಸಾರಥಿಯ ಆಸನದಿಂದ ಕೆಳಕ್ಕೆ ಬೀಳಿಸಿದನು. ಸಹದೇವನ ಮಗನಾದ ಶ್ರುತಸೇನನು ತನ್ನ ಭ್ರಾತೃಗಳು ಶಲನನ್ನು ಪರಾಙ್ಮುಖಗೊಳಿಸಿದ್ದಾರೆಂಬುದನ್ನು ತಿಳಿದು ಕ್ಷುರಪ್ರದಿಂದ ಮಹಾತ್ಮನಾದ ಶಲನ ತಲೆಯನ್ನೇ ಕತ್ತರಿಸಿಬಿಟ್ಟನು. ಚಿನ್ನದ ಆಭರಣಗಳಿಂದ ಸಮಲಂಕೃತವಾಗಿದ್ದ ಶಲನ ಆ ಶಿರಸ್ಸು ಬಾಲಸೂರ್ಯನಿಗೆ ಸಮಾನವಾದ ಪ್ರಭೆಯಿಂದ ಕೂಡಿ ಆ ಯುದ್ಧಭೂಮಿಯನ್ನು ಪ್ರಕಾಶಗೊಳಿಸುತ್ತಾ ಭೂಮಿಯಲ್ಲಿ ಬಿದ್ದಿತು. ಮಹಾತ್ಮನಾದ ಶಲನ ತಲೆಯು ಶ್ರುತಸೇನನಿಂದ ಕತ್ತರಿಸಲ್ಪಟ್ಟುದನ್ನು ಕಂಡು ಬಹಳವಾಗಿ ಭಯಗೊಂಡ ನಿನ್ನ ಕಡೆಯ ಸೈನಿಕರು ದಿಕ್ಕಾಪಾಲಾಗಿ ಓಡಿಹೋದರು.

ಮತ್ತೊಂದು ವಿಭಾಗದಲ್ಲಿ ಕ್ರುದ್ಧನಾದ ಅಲಂಬುಷರಾಕ್ಷಸನು ಮಹಾಬಲಿಷ್ಠನಾದ ಭೀಮಸೇನನನ್ನು–ರಾವಣನ ಮಗನಾದ ಇಂದ್ರಜಿತುವು ಲಕ್ಷ್ಮಣನನ್ನು ಎದುರಿಸಿ ಯುದ್ಧಮಾಡಿದಂತೆ–ಎದುರಿಸಿ ಯುದ್ಧಮಾಡಿದನು. ಆ ಇಬ್ಬರು ನರ-ರಾಕ್ಷಸರು ಯುದ್ಧದಲ್ಲಿ ತೊಡಗಿರುವುದನ್ನು ಕಂಡು ಸರ್ವಪ್ರಾಣಿಗಳಿಗೂ ವಿಸ್ಮಯವೂ, ಮಹಾಹರ್ಷವೂ ಉಂಟಾಯಿತು. ರಾಕ್ಷಸೇಂದ್ರನಾದ ಅಸಹನಶೀಲನಾದ, ಋಷ್ಯಶೃಂಗನ ಮಗನಾದ ಅಲಂಬುಷನನ್ನು ಭೀಮಸೇನನು ನಿಶಿತವಾದ ಒಂಬತ್ತು ಬಾಣಗಳಿಂದ ನಗು-ನಗುತ್ತಲೇ ಪ್ರಹರಿಸಿದನು. ಭೀಮಸೇನನ ಬಾಣಗಳಿಂದ ಪ್ರಹೃತನಾದ ರಾಕ್ಷಸನು ಭಯಂಕರವಾಗಿ ಗರ್ಜನೆಮಾಡುತ್ತಾ ಭೀಮನನ್ನೂ ಅವನ ಅನುಯಾಯಿಗಳನ್ನೂ ಎದುರಿಸಲು ಮುಂದೆ ನುಗ್ಗಿದನು.

ಅಲಂಬುಷನು ಭೀಮಸೇನನನ್ನು ಬಗ್ಗಿದ ಗಿಣ್ಣುಗಳಿದ್ದ ಐದು ಬಾಣಗಳಿಂದ ಪ್ರಹರಿಸಿ, ಭೀಮನ ಅನುಯಾಯಿಗಳಾಗಿ ಬಂದಿದ್ದ ಮುನ್ನೂರು ಮಂದಿ ರಥಿಕರನ್ನೂ ಬಹಳ ಬೇಗ ಸಂಹರಿಸಿದನು. ಪುನಃ ಅಲಂಬುಷನು ಭೀಮನಿಗೆ ಸಹಾಯಕರಾಗಿ ಬಂದಿದ್ದ ನಾಲ್ಕುನೂರು ರಥಿಕರನ್ನೂ ಸಂಹರಿಸಿ ಭೀಮನನ್ನು ನಿಶಿತವಾದ ಬಾಣದಿಂದ ಪ್ರಹರಿಸಿದನು. ರಾಕ್ಷಸನ ಬಾಣದಿಂದ ಬಹಳವಾಗಿ ಗಾಯಗೊಂಡು ಮಹಾಬಲನಾದ ಭೀಮಸೇನನು ರಥದಲ್ಲಿದ್ದ ಆಸನದ ಮಗ್ಗುಲಿನಲ್ಲಿ ಮೂರ್ಛಿತನಾಗಿ ಬಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಮೂರ್ಛೆಯಿಂದ ಎಚ್ಚೆತ್ತು, ಚೇತರಿಸಿಕೊಂಡು ಕ್ರೋಧ

ಮೂರ್ಛಿತನಾದ ಮಾರುತಿಯು, ಘೋರವಾದ ಮಹಾಶಕ್ತಿಯನ್ನು ಭರಿಸುವ, ಉತ್ತಮೋತ್ತಮವಾದ ತನ್ನ ಧನುಸ್ಸನ್ನು ಸುದೀರ್ಘವಾಗಿ ಸೆಳೆದು, ತೀಕ್ಷ್ಣವಾದ ಬಾಣಗಳಿಂದ ಅಲಂಬುಷನನ್ನು ಶರೀರಾದ್ಯಂತವಾಗಿ ಪ್ರಹರಿಸಿದನು. ನೀಲನಾದ, ಅಂಜನದ ರಾಶಿಯಂತೆ ಮೈಬಣ್ಣವನ್ನು ಹೊಂದಿದ್ದ ಆ ರಾಕ್ಷಸನು ಭೀಮನ ಬಾಣಗಳಿಂದ ಪ್ರಹೃತನಾಗಿ ಅಂಗಾಂಗಗಳಲ್ಲಿಯೂ ರಕ್ತವನ್ನು ಸುರಿಸುತ್ತಾ ಅರಳಿದ ಹೂಗಳಿಂದ ಕೂಡಿದ ಮುತ್ತುಗದ ಮರದಂತೆಯೇ ಪ್ರಕಾಶಿಸಿದನು. ಭೀಮನ ಧನುಸ್ಸಿನಿಂದ ಚ್ಯುತವಾದ ಬಾಣಗಳಿಂದ ಬಹಳವಾಗಿ ಗಾಯಗೊಂಡ ಅಲಂಬುಷನು ಹಿಂದೆ ಮಹಾತ್ಮನಾದ ಭೀಮಸೇನನಿಂದಲೇ ತನ್ನ ಅಣ್ಣನಾದ ಬಕಾಸುರನ ವಧೆಯಾದುದನ್ನು ಸ್ಮರಿಸಿ ದೊಡ್ಡದಾದ ಮತ್ತು ಮಹಾಘೋರವಾದ ರೂಪವನ್ನು ಧರಿಸಿ ಭೀಮನೊಡನೆ ಹೇಳಿದನು:

"ಎಲೈ ಪಾರ್ಥ! ಈಗ ನನ್ನೊಡನೆ ಯುದ್ಧಕ್ಕೆ ನಿಲ್ಲು. ನನ್ನ ಪರಾಕ್ರಮವನ್ನಾದರೂ ನೋಡು. ಮಹಾದುರ್ಮತಿಯೇ! ನನ್ನ ಅಣ್ಣನಾದ ಬಕನು ಮಹಾಬಲಿಷ್ಠನು. ರಾಕ್ಷಸಶ್ರೇಷ್ಠನು. ನನ್ನ ಪರೋಕ್ಷದಲ್ಲಿ ನೀನು ಅವನನ್ನು ಸಂಹರಿಸಿದೆ. (ನಾನೇ ಅಲ್ಲಿದ್ದಿದ್ದರೆ ಅವನನ್ನು ಮುಟ್ಟಲು ಕೂಡ ನಿನಗೆ ಸಾಧ್ಯವಾಗುತ್ತಿರಲಿಲ್ಲ.)"

ಮಹಾರಾಜ! ಅಲಂಬುಷನು ಹೀಗೆ ಭೀಮನಿಗೆ ಹೇಳಿ ಅಂತರ್ಹಿತನಾದನು. ಅಂತರ್ಹಿತನಾಗಿದ್ದುಕೊಂಡೇ ಭೀಮಸೇನನ ಮೇಲೆ ಬಾಣಗಳ ಮಳೆಯನ್ನೇ ಕರೆದು ಅವನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ರಾಕ್ಷಸನು ಅದೃಶ್ಯನಾಗಿಯೇ ಬಾಣಗಳ ಮಳೆಗರೆಯುತ್ತಿರಲಾಗಿ, ಭೀಮಸೇನನು ಬಗ್ಗಿದ ಗಿಣ್ಣುಗಳಿದ್ದ ಬಾಣಗಳ ಸಮೂಹದಿಂದ ಆಕಾಶವನ್ನೇ ಮುಚ್ಚಿಬಿಟ್ಟನು. ಯದ್ಯಪಿ ಅಲಂಬುಷನು ಅದೃಶ್ಯನಾಗಿದ್ದರೂ ಭೀಮನು ಬಿಟ್ಟ ಬಾಣಗಳು ಅವನಿಗೆ ತಗುಲಿ ಬಹಳ ಗಾಯಗೊಂಡವನಾಗಿ ನಿಮೇಷ ಮಾತ್ರದಲ್ಲಿ ಪುನಃ ತನ್ನ ರಥದಲ್ಲಿಯೇ ಕುಳಿತುಕೊಂಡನು. ಮತ್ತೊಮ್ಮೆ ಭೂಮಿಯ ಮೇಲೆ ನಿಂತನು. ಕ್ಷುದ್ರನಾದ ಆ ರಾಕ್ಷಸನು ಮತ್ತೊಂದು ಕ್ಷಣದಲ್ಲಿ ಪುನಃ ಆಕಾಶಕ್ಕೆ ಹಾರಿದನು. ಅನೇಕವಿಧವಾದ ರೂಪಗಳನ್ನು ಧರಿಸುತ್ತಿದ್ದನು. ಒಮ್ಮೆ ಅಣುರೂಪನಾಗುತ್ತಿದ್ದನು. ಮತ್ತೊಮ್ಮೆ ಬೃಹದಾಕಾರವನ್ನು ತಾಳುತ್ತಿದ್ದನು. ಪುನಃ ಅತ್ಯಂತಸ್ಥೂಲವಾದ ಶರೀರವುಳ್ಳವನಾಗಿ ಕಾಣಿಸಿಕೊಳ್ಳುತ್ತಿದ್ದನು.

ಮತ್ತೊಮ್ಮೆ ಮೇಘದಂತೆ ಗಟ್ಟಿಯಾಗಿ ಗರ್ಜಿಸುತ್ತಿದ್ದನು. ಹೀಗೆ ಅಲಂಬುಷನು ಭೀಮಸೇನನೊಡನೆ ಯುದ್ಧಮಾಡುತ್ತಾ ರಣಾಂಗಣದಲ್ಲಿ ಸಂಚರಿಸುತ್ತಿದ್ದನು. ನಾನಾಸ್ಥಳಗಳಲ್ಲಿ ನಿಂತು ನಾನಾವಿಧವಾದ ಮಾತುಗಳನ್ನಾಡುತ್ತಿದ್ದನು. ಅವನ ಮಾಯೆಯಿಂದಾಗಿ ಆಕಾಶದಿಂದ ಸಾವಿರಾರು ಬಾಣಗಳು ಧಾರಾಕಾರವಾಗಿ ಭೀಮಸೇನನ ಮೇಲೆ ಬೀಳುತ್ತಿದ್ದುವು. ಬಾಣಗಳು ಮಾತ್ರವೇ ಅಲ್ಲ; ಶಕ್ತ್ಯಾಯುಧಗಳು, ಕಣಪಗಳು, ಪ್ರಾಸಗಳು ಶೂಲ-ಪಟ್ಟಿಶ-ತೋಮರಗಳು, ಶತಘ್ನಿಗಳು, ಪರಿಘಾಯುಧಗಳು, ಭಿಂದಿಪಾಲಗಳು, ಗಂಡುಗೊಡಲಿಗಳು, ಬಂಡೆಗಳು, ಕತ್ತಿಗಳು, ಲೋಹದ ಚೆಂಡುಗಳು, ಋಷ್ಟಿಗಳು, ವಜ್ರಾಯುಧಗಳು–ಇವೇ ಮುಂತಾದ ಆಯುಧಗಳ ಸುದಾರುಣವಾದ ವೃಷ್ಟಿಯೂ ಆಯಿತು.

ಅಲಂಬುಷರಾಕ್ಷಸನ ಮಾಯೆಯಿಂದ ವಿಸೃಷ್ಟವಾದ ಆಯುಧಗಳ ವೃಷ್ಟಿಯು ಭೀಮನ ಅನೇಕಸೈನಿಕರನ್ನು ರಣಾಂಗಣದಲ್ಲಿ ಸಂಹರಿಸಿತು. ರಾಕ್ಷಸನಾದ ಅಲಂಬುಷನು ಪಾಂಡವಸೈನ್ಯದಲ್ಲಿದ್ದ ಹಲವು ಆನೆಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ಸಂಹರಿಸಿದನು. ಅವನ ಬಾಣಗಳಿಂದ ಪೀಡಿತರಾದ ಅನೇಕರಥಿಕರು ರಥಗಳಿಂದ ಕೆಳಕ್ಕೆ ಬಿದ್ದು ಅಸುನೀಗಿದರು. ರಣಾಂಗಣದಲ್ಲಿ ಆ ರಾಕ್ಷಸನು ಘೋರವಾದ ಒಂದು ಮಹಾನದಿಯನ್ನೇ ಸೃಷ್ಟಿಸಿದನು. ಪಾಂಡವಯೋಧರ ರಕ್ತವೇ ಆ ಘೋರನದಿಯ ನೀರಾಗಿದ್ದಿತು. ರಥಗಳೇ ಸುಳಿಗಳಂತಿದ್ದುವು. ಆ ನದಿಯು ಆನೆಗಳೆಂಬ ಮೊಸಳೆಗಳಿಂದ ತುಂಬಿದ್ದಿತು. ಶ್ವೇತಚ್ಛತ್ರಗಳು ಆ ನದಿಯಲ್ಲಿ ಹಂಸಗಳಂತೆ ಪರಿಶೋಭಿಸುತ್ತಿದ್ದುವು. ಆ ನದಿಯು ಕೆಸರಿನಿಂದ ಕೂಡಿದ್ದಿತು. ಯೋಧರ ತೋಳುಗಳೆಂಬ ಹಾವುಗಳಿಂದ ಆ ನದಿಯು ಸಮೃದ್ಧವಾಗಿದ್ದಿತು. ರಾಕ್ಷಸಗಣಗಳು ಆ ಘೋರನದಿಯನ್ನು ಸಂಸೇವಿಸುತ್ತಿದ್ದುವು. ಈ ಘೋರ ನದಿಯು ಚೇದಿ-ಪಾಂಚಾಲ-ಸೃಂಜಯಯೋಧರನ್ನು ತಂಡ-ತಂಡವಾಗಿ ಒಯ್ಯುತ್ತಿದ್ದಿತು. ಇಂತಹ ಘೋರವಾದ ನದಿಯನ್ನು ಅಲಂಬುಷನು ಸೃಷ್ಟಿಸಿದನು. ಸ್ವಲ್ಪವೂ ಭಯಗೊಳ್ಳದವನಂತೆ ಸಮರಾಂಗಣದಲ್ಲಿ ಸಂಚರಿಸುತ್ತಿದ್ದ ಅಲಂಬುಷನನ್ನೂ ಮತ್ತು ಅವನ ಪರಾಕ್ರಮವನ್ನೂ ಬಹಳ

ಉದ್ವಿಗ್ನರಾಗಿ ಪಾಂಡವರು ನೋಡುತ್ತಿದ್ದರು. ಅಲಂಬುಷನು ಮಾಡುತ್ತಿದ್ದ ಪಾಂಡವಸೇನೆಯ ವಿಧ್ವಂಸನಕೃತ್ಯವನ್ನು ಕಂಡು ನಿನ್ನ ಕಡೆಯವರಿಗೆ ಅಮಿತ ವಾದ ಆನಂದವುಂಟಾಯಿತು. ರೋಮಾಂಚಕರವಾದ, ಉಗ್ರವಾದ ರಣ ವಾದ್ಯಗಳು ಮೊಳಗಿದುವು. ಆನೆಯು ಚಪ್ಪಾಳೆಯ ಶಬ್ದವನ್ನು ಸಹಿಸಿಕೊಳ್ಳ ದಂತೆ ನಿನ್ನ ಸೈನ್ಯದಲ್ಲಾಗುತ್ತಿದ್ದ ಸುಘೋರವಾದ ರಣವಾದ್ಯಗಳ ಶಬ್ದವನ್ನು ಭೀಮಸೇನನು ಸಹಿಸಿಕೊಳ್ಳಲಿಲ್ಲ. ವಾಯುಕುಮಾರನಾದ ಭೀಮಸೇನನು ದಹಿಸುತ್ತಿರುವ ಅಗ್ನಿಯೋಪಾದಿಯಲ್ಲಿ ಕ್ರೋಧಾಭಿಭೂತನಾಗಿ, ರಕ್ತಲೋಚನ ನಾಗಿ ತ್ವಾಷ್ಟ್ರವೆಂಬ ಅಸ್ತ್ರವನ್ನು ಪ್ರಕಟಿಸಿದನು. ಆ ಸಮಯದಲ್ಲಿ ತ್ವಷ್ಟನೇ ತನ್ನ ಅಸ್ತ್ರವನ್ನು ಪ್ರಕಟಿಸುತ್ತಿರುವನೋ ಎಂಬಂತೆ-ಭೀಮಸೇನನು ಕಾಣಿಸುತ್ತಿದ್ದನು. ಆ ಮಹಾಸ್ತ್ರದ ಪ್ರಭಾವದಿಂದಾಗಿ ಸಾವಿರಾರು ಬಾಣಗಳು ಸುತ್ತಲೂ ಹರಡಿಕೊಂಡುವು. ಆ ಬಾಣಗಳಿಂದ ಪ್ರಹೃತರಾದ ನಿನ್ನ ಸೈನಿಕರು ದಿಕ್ಕಾಪಾಲಾಗಿ ಓಡಿಹೋದರು. ಭೀಮಸೇನನಿಂದ ಪ್ರೇರಿತವಾದ ಆ ಮಹಾಸ್ತ್ರವು ರಣರಂಗದಲ್ಲಿ ರಾಕ್ಷಸನ ಮಹಾಮಾಯೆಯನ್ನು ಸಂಪೂರ್ಣವಾಗಿ ವಿನಾಶಮಾಡಿ ರಾಕ್ಷಸನನ್ನೂ ಬಹಳವಾಗಿ ಪೀಡಿಸಿತು. ಭೀಮಸೇನನಿಂದ ಬಹಳವಾಗಿ ಪೀಡಿತನಾದ ಅಲಂಬುಷರಾಕ್ಷಸನು ಭೀಮನನ್ನು ಬಿಟ್ಟು ಆತ್ಮ ರಕ್ಷಣೆಯ ಸಲುವಾಗಿ ದ್ರೋಣರ ಸೈನ್ಯದ ಕಡೆಗೆ ಓಡಿಹೋದನು. ಮಹಾತ್ಮ ನಾದ ಭೀಮಸೇನನು ರಾಕ್ಷಸೇಂದ್ರನಾದ ಅಲಂಬುಷನನ್ನು ಪರಾಜಯ ಗೊಳಿಸಲಾಗಿ, ಪಾಂಡವರು ಎಲ್ಲ ದಿಕ್ಕುಗಳನ್ನೂ ತಮ್ಮ ಸಿಂಹನಾದಗಳಿಂದ ಪ್ರತಿಧ್ವನಿಸುವಂತೆ ಮಾಡಿದರು. ಪ್ರಹ್ರಾದನನ್ನು ಯುದ್ಧದಲ್ಲಿ ಜಯಿಸಿದನಂತರ ದೇವತೆಗಳು ಇಂದ್ರನನ್ನು ಅನೇಕಪ್ರಕಾರವಾದ ಪ್ರಶಂಸೆಗಳಿಂದ ಗೌರವಿಸಿ ದಂತೆ–ಸಂಹೃಷ್ಟರಾದ ಪಾಂಡವರು ಅಲಂಬುಷನನ್ನು ಪರಾಜಯಗೊಳಿಸಿದ ಮಹಾಬಲನಾದ ಮಾರುತಿಯನ್ನು ನಾನಾಪ್ರಕಾರವಾದ ಪ್ರಶಂಸೆಗಳಿಂದ ಗೌರವಿಸಿದರು."

೧೦೮ನೆಯ ಅಧ್ಯಾಯವು ಮುಗಿಯಿತು.

೧೧೮ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಘಟೋತ್ಕಚನು ಅಲಂಬುಷನನ್ನು ಸಂಹರಿಸಿದುದು: ಪಾಂಡವಸೇನೆಯಲ್ಲಿ ಹರ್ಷಧ್ವನಿ

ಸಂಜಯನು ಅಲಂಬುಷನ ವಿಷಯವನ್ನೇ ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಸ್ವಲ್ಪವೂ ಭಯಪಡದವನಂತೆ ಯುದ್ಧದಲ್ಲಿ ಸಂಚರಿಸುತ್ತಿದ್ದ ಅಲಂಬುಷನನ್ನು ಹಿಡಿಂಬೆಯ ಮಗನಾದ ಘಟೋತ್ಕಚನು ಎದುರಿಸಿದನು ಮತ್ತು ನಿಶಿತವಾದ ಬಾಣಗಳಿಂದ ಗಾಢವಾಗಿ ಪ್ರಹರಿಸಿದನು. ವಿವಿಧವಾದ ಮಾಯೆಗಳನ್ನು ಪ್ರದರ್ಶಿಸುತ್ತಿದ್ದ ಆ ರಾಕ್ಷಸಸಿಂಹರ ನಡುವೆ ಶಕ್ರ-ಶಂಬರರಿಗೆ ಹಿಂದೆ ನಡೆದ ಯುದ್ಧದಂತೆ-ಅತಿಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಅತ್ಯಂತಕ್ರುದ್ಧನಾದ ಅಲಂಬುಷನು ಘಟೋತ್ಕಚನನ್ನು ಪ್ರಹರಿಸಿದನು. ರಾಕ್ಷಸಾಗ್ರಣಿಗಳಾದ ಮತ್ತು ರಾಕ್ಷಸ ಮುಖ್ಯರಾದ ಅವರಿಬ್ಬರಲ್ಲಿ ಹಿಂದೆ ರಾಮ-ರಾವಣರಿಗೆ ನಡೆದಂತೆ ಅತ್ಯಂತ ಭಯಾನಕವೂ ಘೋರವೂ ಆದ ಯುದ್ಧವು ನಡೆಯಿತು. ಘಟೋತ್ಕಚನು ಇಪ್ಪತ್ತು ನಾರಾಚಗಳಿಂದ ಅಲಂಬುಷನ ವಕ್ಷಃಸ್ಥಳವನ್ನು ಪ್ರಹರಿಸಿ ಸಿಂಹನಾದವನ್ನು ಮಾಡಿದನು. ಅದೇ ರೀತಿಯಲ್ಲಿ ಅಲಂಬುಷನೂ ಯುದ್ಧದುರ್ಮದನಾದ ಘಟೋತ್ಕಚನನ್ನು ಹಲವು ಬಾರಿ ಬಾಣಗಳಿಂದ ಪ್ರಹರಿಸಿ ಪರಮಹೃಷ್ಟನಾಗಿ ಸಿಂಹನಾದಮಾಡುತ್ತಾ ಆ ಮಹಾಧ್ವನಿಯಿಂದ ಅಂತರಿಕ್ಷವನ್ನೇ ತುಂಬಿದನು. ರಾಕ್ಷಸೇಂದ್ರರಾದ, ಮಹಾಬಲರಾದ, ಬಹಳವಾಗಿ ಕೋಪಗೊಂಡಿದ್ದ ಅಲಂಬುಷ-ಘಟೋತ್ಕಚರು ಅನೇಕವಿಧ ವಾದ ಮಾಯೆಗಳಿಂದ ಒಬ್ಬರು ಮತ್ತೊಬ್ಬರೊಡನೆ ಸ್ಪರ್ಧಿಸುತ್ತಾ (ಯಾರಿಗೆ ಯಾರೂ ಕಡಿಮೆ ಇಲ್ಲದಂತೆ) ಯುದ್ಧಮಾಡುತ್ತಿದ್ದರು. ಆ ರಾಕ್ಷಸರಿಬ್ಬರೂ ನೂರಾರು ವಿಧವಾದ ಮಾಯೆಗಳನ್ನು ಸೃಷ್ಟಿಸುತ್ತಿದ್ದರು. ಘಟೋತ್ಕಚನು ಮಾಯೆಯಿಂದ ಅಲಂಬುಷನನ್ನು ವಿಮೋಹಗೊಳಿಸುತ್ತಿದ್ದನು. ಅಂತೆಯೇ ಅಲಂಬುಷನೂ ತನ್ನ ಮಾಯಾಜಾಲದಿಂದ ಘಟೋತ್ಕಚನನ್ನು ವಿಮೋಹ ಗೊಳಿಸುತ್ತಿದ್ದನು. ಮಾಯಾಯುದ್ಧದಲ್ಲಿ ಪರಮಕುಶಲರಾಗಿದ್ದ ಇಬ್ಬರೂ ಮಾಯಾಯುದ್ಧವನ್ನೇ ಮುಂದುವರಿಸಿದರು. ಘಟೋತ್ಕಚನು ಯುದ್ಧಸಮಯ

ದಲ್ಲಿ ಯಾವ ಯಾವ ಮಾಯೆಗಳನ್ನು ಪ್ರದರ್ಶಿಸುತ್ತಿದ್ದನೋ (ಮಾಯೆಯಿಂದ ಅಲಂಬುಷನನ್ನು ಪೀಡಿಸುತ್ತಿದ್ದನೋ) ಅದೇ ಮಾಯಾವಿದ್ಯೆಯಿಂದಲೇ ಅಲಂಬುಷನೂ ಹೈಡಿಂಬನು ಮಾಡಿದುದನ್ನು ನಿರಸನಗೊಳಿಸುತ್ತಿದ್ದನು. (ಘಟೋತ್ಕಚನು ಅಗ್ನಿಯ ವರ್ಷವನ್ನು ಸುರಿಸಿದರೆ ಅಲಂಬುಷನು ಅದರ ಮೇಲೆ ನೀರಿನ ಮಳೆಗರೆಯುವುದು; ಘಟೋತ್ಕಚನು ಮಾಯೆಯ ಮೂಲಕವಾಗಿ ನಿರ್ಮಿಸಿದ ಆನೆಗಳನ್ನು ಅಲಂಬುಷನ ಮೇಲೆ ಬೀಳಲು ಬಿಟ್ಟರೆ ಅಲಂಬುಷನು ಸಿಂಹಗಳನ್ನು ಸೃಷ್ಟಿಸಿ ಆನೆಗಳನ್ನು ನಿಗ್ರಹಿಸುವಂತೆ ಮಾಡುವುದು-ಇವೇ ಮುಂತಾಗಿ ಮಾಯೆಗೆ ಪ್ರತಿಯಾದ ಮಾಯೆಯನ್ನು ನಿರ್ಮಿಸಿ ಎದುರಾಳಿಯ ಮಾಯೆಯನ್ನು ನಿರಸನಗೊಳಿಸುವುದು). ಮಾಯಾ ಯುದ್ಧವಿಶಾರದನಾಗಿದ್ದ, ಮಾಯೆಯ ಮೂಲಕವಾಗಿ ಹೈಡಿಂಬನೊಡನೆ ಘೋರವಾದ ರೀತಿಯಲ್ಲಿ ಯುದ್ಧಮಾಡುತ್ತಿದ್ದ ಅಲಂಬುಷನನ್ನು ನೋಡಿ ಪಾಂಡವರು ಬಹಳವಾಗಿ ಕೋಪಗೊಂಡರು. ಅಲಂಬುಷನ ಘೋರವಾದ ಮಾಯಾಯುದ್ಧವನ್ನು ನೋಡಿ ಬಹಳ ಉದ್ವಿಗ್ನರಾದ ಭೀಮಸೇನನೇ ಮೊದಲಾದ ಶ್ರೇಷ್ಠಯೋಧರು ಪರಮಕ್ರುದ್ಧರಾಗಿ ರಥಗಳಲ್ಲಿ ಕುಳಿತು ಎಲ್ಲ ಕಡೆಗಳಿಂದಲೂ ಅಲಂಬುಷನನ್ನು ಆಕ್ರಮಿಸಿದರು.

ಸುತ್ತಲೂ ಪಂಜುಗಳನ್ನು ಹಿಡಿದು ಆನೆಯನ್ನು ಒಂದೆಡೆಯಲ್ಲಿ ಸೇರಿಸಿಕೊಳ್ಳುವಂತೆ–ಪಾಂಡವರು ರಥಗಳ ಸಮೂಹದಿಂದ ಅಲಂಬುಷ ನನ್ನು ಸುತ್ತುವರಿದು ಮಧ್ಯದಲ್ಲಿ ಸೇರಿಸಿಕೊಂಡು ಎಲ್ಲ ಕಡೆಗಳಿಂದಲೂ ಬಾಣಗಳಿಂದ ಮುಚ್ಚಿಬಿಟ್ಟರು. ಪಾಂಡವರಥಿಕರ ಆ ಅಸ್ತ್ರವೇಗವನ್ನು ಮಾಯಾಸ್ತ್ರಗಳಿಂದ ನಿವಾರಿಸಿಕೊಂಡ ಅಲಂಬುಷನು–ಕಾಡುಗಿಚ್ಚಿನಿಂದ ಆನೆಯು ತಪ್ಪಿಸಿಕೊಳ್ಳುವಂತೆ–ರಥಗಳ ಮಧ್ಯದಿಂದ ತಪ್ಪಿಸಿಕೊಂಡು ಹೊರಬಂದನು. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಮತ್ತು ಭಯಂಕರಧ್ವನಿಯಿಂದ ಕೂಡಿದ್ದ ಧನುಸ್ಸನ್ನು ಟೇಂಕರಿಸುತ್ತಿದ್ದ ಅಲಂಬುಷನು ಭೀಮಸೇನನನ್ನು–ಇಪ್ಪತ್ತೈದು ಬಾಣಗಳಿಂದಲೂ, ಘಟೋತ್ಕಚನನ್ನು–ಐದು ಬಾಣಗಳಿಂದಲೂ ಪ್ರಹರಿಸಿದನು. ಅಲಂಬುಷರಾಕ್ಷಸನು ಯುಧಿಷ್ಠಿರ ನನ್ನು–ಮೂರು ಬಾಣಗಳಿಂದಲೂ, ಸಹದೇವನನ್ನು–ಏಳು ಬಾಣ ಗಳಿಂದಲೂ, ನಕುಲನನ್ನು–ಎಪ್ಪತ್ತುಮೂರು ಬಾಣಗಳಿಂದಲೂ,

ದ್ರೌಪದಿಯ ಐವರು ಮಕ್ಕಳನ್ನು–ಐದೈದು ಬಾಣಗಳಿಂದಲೂ ಪ್ರಹರಿಸಿ ಘೋರವಾಗಿ ಗರ್ಜನೆಮಾಡಿದನು. ಅದಕ್ಕೆ ಪ್ರತಿಯಾಗಿ ಭೀಮಸೇನನು–ರಾಕ್ಷಸನನ್ನು ಒಂಬತ್ತು ಬಾಣಗಳಿಂದಲೂ, ಸಹದೇವನು–ಐದು ಬಾಣಗಳಿಂದಲೂ, ಯುಧಿಷ್ಠಿರನು–ನೂರು ಬಾಣಗಳಿಂದಲೂ, ನಕುಲನು–ಅರುವತ್ತು ನಾಲ್ಕು ಬಾಣಗಳಿಂದಲೂ, ದ್ರೌಪದಿಯ ಮಕ್ಕಳು–ಮೂರು ಮೂರು ಬಾಣಗಳಿಂದಲೂ ಪ್ರಹರಿಸಿದರು. ಮಹಾಬಲನಾದ ಹೈಡಿಂಬನು ಅಲಂಬುಷನನ್ನು ಐವತ್ತು ಬಾಣಗಳಿಂದ ಪ್ರಹರಿಸಿ ಪುನಃ ಎಪ್ಪತ್ತು ಬಾಣಗಳಿಂದ ಬಲವಾಗಿ ಗಾಯಗೊಳಿಸಿ ಸಿಂಹನಾದಮಾಡಿದನು.

ಮಹಾರಾಜ! ಹೈಡಿಂಬನ ಆ ಘೋರಗರ್ಜನೆಯಿಂದಾಗಿ ಪರ್ವತ, ವನ, ವೃಕ್ಷ ಮತ್ತು ಜಲಾಶಯಗಳಿಂದ ಕೂಡಿದ ಈ ಭೂಮಿಯೇ ನಡುಗಿತು. ಸುತ್ತಲೂ ಇದ್ದ ಮಹಾಧನುಷ್ಮಂತರಾದ ಮಹಾರಥರಿಂದ ಬಹಳವಾಗಿ ಗಾಯಗೊಂಡ ಅಲಂಬುಷನು ತನ್ನ ಎದುರಾಳಿಗಳೆಲ್ಲರನ್ನೂ ಐದೈದು ಬಾಣಗಳಿಂದ ಪ್ರಹರಿಸಿದನು. ಅದರಿಂದ ಬಹಳ ಕೋಪಗೊಂಡ ಘಟೋತ್ಕಚನು ಕ್ರುದ್ಧನಾಗಿದ್ದ ಅಲಂಬುಷನನ್ನು ಏಳು ಬಾಣಗಳಿಂದ ಪ್ರಹರಿಸಿದನು. ಮಹಾಬಲಿಷ್ಠನಾದ ಘಟೋತ್ಕಚನ ಬಾಣಗಳಿಂದ ಬಹಳವಾಗಿ ಗಾಯಗೊಂಡ ರಾಕ್ಷಸೇಂದ್ರನಾದ, ಮಹಾಬಲನಾದ ಅಲಂಬುಷನು ಚಿನ್ನದ ಮೂಲಭಾಗಗಳಿದ್ದ ಮತ್ತು ಮಸೆಗಲ್ಲಿನಿಂದ ಚೂಪಾಗಿ ಮಾಡಲ್ಪಟ್ಟಿದ್ದ ಅನೇಕಬಾಣಗಳನ್ನು ಹೈಡಿಂಬನ ಮೇಲೆ ಪ್ರಯೋಗಿಸಿದನು. ಕೋಪಗೊಂಡ ಮಹಾಬಲಿಷ್ಠವಾದ ಸರ್ಪಗಳು ಯಾವ ರೀತಿಯಲ್ಲಿ ಪರ್ವತಶಿಖರಗಳಲ್ಲಿ ಸೇರಿಕೊಳ್ಳುತ್ತವೆಯೋ–ಅದೇ ರೀತಿಯಲ್ಲಿ ಅಲಂಬುಷನು ಬಿಟ್ಟ ಬಗ್ಗಿದ ಗಿಣ್ಣುಗಳಿದ್ದ ಬಾಣಗಳು ಘಟೋತ್ಕಚನ ಶರೀರದೊಳಕ್ಕೆ ಸೇರಿಕೊಂಡುವು. ಅನಂತರ ಪಾಂಡವರೂ ಮತ್ತು ಹಿಡಿಂಬೆಯ ಮಗನಾದ ಘಟೋತ್ಕಚನೂ ಅಲಂಬುಷನ ಸಾಹಸಕಾರ್ಯವನ್ನು ನೋಡಿ ಉದ್ವಿಗ್ನರಾಗಿ ಎಲ್ಲ ಕಡೆಗಳಿಂದಲೂ ನಿಶಿತವಾದ ಬಾಣಗಳನ್ನು ಅವನ ಮೇಲೆ ಸುರಿಸಿದರು. ವಿಜಯದಿಂದ ಉಲ್ಲಾಸಗೊಳ್ಳುವ ಪಾಂಡವರಿಂದ ಪ್ರಹೃತನಾದ, ಮರ್ತ್ಯಧರ್ಮವನ್ನು ಹೊಂದಿದ್ದ (ಸಾವು ಸಮೀಪಿಸಿದ) ಅಲಂಬುಷ ರಾಕ್ಷಸನಿಗೆ ಆ ಸಮಯದಲ್ಲಿ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ.

ಸಮರಕುಶಲನಾದ, ಮಹಾಬಲಿಷ್ಠನಾದ ಘಟೋತ್ಕಚನು ಅಲಂಬುಷನ ಆಗಿನ ದುರವಸ್ಥೆಯನ್ನು ಗಮನಿಸಿ ಅವನನ್ನು ಸಂಹರಿಸಲು ನಿಶ್ಚಯಿಸಿದನು. ಕ್ರುದ್ಧನಾದ ಹೈಡಿಂಬನು–ದಗ್ಧವಾದ ಪರ್ವತದ ಶಿಖರಕ್ಕೆ ಸಮಾನವಾದ ಕಾಂತಿಯಿಂದ ಕೂಡಿದ್ದ ಮತ್ತು ಛಿನ್ನ-ಭಿನ್ನವಾದ ಇದ್ದಲಿನ ರಾಶಿಯಂತೆಯೇ ಕಾಣುತ್ತಿದ್ದ ಅಲಂಬುಷನ ರಥದ ಸಮೀಪಕ್ಕೆ ಬಹಳ ವೇಗದಿಂದ ಹಾರಿದನು. ಹೀಗೆ ಘಟೋತ್ಕಚನು ತನ್ನ ರಥದಿಂದ ಅಲಂಬುಷನ ರಥಕ್ಕೆ ಹಾರಿ ಅವನನ್ನು



ಹಿಡಿದುಕೊಂಡನು. ಅನಂತರ ಗರುಡನು ಸರ್ಪವನ್ನು ಎತ್ತಿಕೊಂಡು ಹೋಗುವಂತೆ–ಅಲಂಬುಷನನ್ನು ತನ್ನೆರಡು ಬಾಹುಗಳಿಂದಲೂ ಮೇಲಕ್ಕೆತ್ತಿ ತಿರುಗಿಸುತ್ತಾ ಪುನಃ ಕೆಳಕ್ಕೆ ಕುಕ್ಕಿದನು. ಹೀಗೆ ಹಲವು ಬಾರಿ ಮಾಡಿ ನೀರಿನಿಂದ ತುಂಬಿರುವ ಮಣ್ಣಿನ ಮಡಿಕೆಯನ್ನು ಕಲ್ಲಿನ ಮೇಲೆ ಕುಕ್ಕಿ ಚೂರು-ಚೂರು ಮಾಡುವಂತೆ–ಘಟೋತ್ಕಚನು ಅಲಂಬುಷನನ್ನು ಭೂಮಿಯ ಮೇಲೆ ಹಾಕಿ

ಜಜ್ಜಿಬಿಟ್ಟನು. ಬಲದಿಂದಲೂ ಹಸ್ತಲಾಘವದಿಂದಲೂ ಸಂಪನ್ನನಾದ, ಅದ್ಭುತವಾದ ಪರಾಕ್ರಮದಿಂದಲೂ ಸಂಪನ್ನನಾಗಿದ್ದ, ಕ್ರುದ್ಧನಾಗಿದ್ದ ಭೈಮಸೇನಿಯು ನಿನ್ನ ಎಲ್ಲ ಸೈನಿಕರನ್ನೂ ಬಹಳವಾಗಿ ಬೆದರಿಸಿದನು. ವೀರನಾದ ಘಟೋತ್ಕಚನಿಂದ ಹತನಾದ *ಶಾಲಕಟಂಕಟನ ಮಗನಾದ ಅಲಂಬುಷನ ಅಂಗಾಂಗಗಳೆಲ್ಲವೂ ಊದಿಕೊಂಡಿದ್ದುವು. ಶರೀರದ ಮೂಳೆ ಗಳೆಲ್ಲವೂ ಚೂರ್ಣೀಕೃತವಾಗಿದ್ದುವು. ಆ ಸ್ಥಿತಿಯಲ್ಲಿ ಅವನು ಬಹಳ ಭಯಂಕರನಾಗಿ ಕಾಣುತ್ತಿದ್ದನು. ಅಲಂಬುಷರಾಕ್ಷಸನು ಹತನಾಗಲಾಗಿ, ಸಂತುಷ್ಟಚಿತ್ತರಾದ ಪಾಂಡವರು ಸಿಂಹನಾದಗಳನ್ನು ಮಾಡಿದರು. ಜಯ ಘೋಷಗಳನ್ನು ಮಾಡಿದರು ಮತ್ತು ಸಂತೋಷಾಧಿಕ್ಯದಿಂದ ತಮ್ಮ ಅಂಗವಸ್ತ್ರಗಳನ್ನೇ ಮೇಲಕ್ಕೆ ಹಾರಿಸಿದರು. ಮಹಾಬಲಿಷ್ಠನಾದ, ರಾಕ್ಷಸೇಂದ್ರ ನಾದ ಅಲಂಬುಷನು ಸೀಳಿಹೋಗಿರುವ ಪರ್ವತದಂತೆ ಅಂಗಾಂಗ ಗಳಲ್ಲಿಯೂ ಗಾಯಗೊಂಡು ರಣಾಂಗಣದಲ್ಲಿ ಸತ್ತುಬಿದ್ದಿರುವುದನ್ನು ನಿನ್ನ ಸೈನಿಕರು ಕಂಡು ಹಾಹಾಕಾರಮಾಡಿದರು. ಭೂಮಿಯ ಮೇಲೆ ಸ್ವೇಚ್ಛೆಯಿಂದ ಬಿದ್ದ ಅಂಗಾರಕನಂತೆಯೇ ಕಾಣುತ್ತಿದ್ದ ಅಲಂಬುಷರಾಕ್ಷಸನನ್ನು ಕುತೂಹಲಾ ವಿಷ್ಟರಾದ ಪ್ರೇಕ್ಷಕರು ನೋಡಿದರು. ಇಂದ್ರನು ಬಲಾಸುರನನ್ನು ಸಂಹಾರ ಮಾಡಿದಂತೆ–ಘಟೋತ್ಕಚನು ಬಲಿಷ್ಠರಲ್ಲಿ ಶ್ರೇಷ್ಠನಾದ ಅಲಂಬುಷ ರಾಕ್ಷಸ ನನ್ನು ಸಂಹರಿಸಿ ಗಟ್ಟಿಯಾಗಿ ಗರ್ಜನೆಮಾಡಿದನು. ಪಕ್ವವಾದ ಅಲಂಬುಷದ

---

*__ಶಾಲಕಟಂಕಟಃ__ : ಶಾಲಕಟಂಕಟ ಎಂಬುವವನ ಮಗ ಅಲಂಬುಷ ಎಂದು ಗೋರಖಪುರದ ಗೀತಾಪ್ರೆಸ್ಸಿನವರು ಅರ್ಥಮಾಡಿರುತ್ತಾರೆ. ಅಲಂಬುಷನಿಗೆ ಆರ್ಷ್ಯಶೃಂಗೀ (ಋಷ್ಯಶೃಂಗನ ಮಗ) ಎಂದು ಹಿಂದೆ ಹಲವು ಬಾರಿ ಬಂದಿದೆ. ಶಾಲಕಟಂಕಟನ ಮಗನ ಹೆಸರೂ ಶಾಲಕಟಂಕಟ ಎಂದು ಹೇಗಾಗುತ್ತದೆಯೋ ತಿಳಿಯದು. ಏಕೆಂದರೆ ಶಾಲಕಟಂಕಟನ ಪುತ್ರ ಎಂಬುದಕ್ಕೆ ಇಲ್ಲಿ ನಿರ್ವಚನವಿಲ್ಲ. ಆದರೆ ಹಿಂದಿಯ ವ್ಯಾಖ್ಯಾನದಲ್ಲಿ '*ಶಾಲಕಟಂಕಟಾಕೆ ಪುತ್ರ*' ಎಂದು ಹೇಳಿದ್ದಾರೆ. ಆದರೆ ಇವರೇ ಮಾಡಿರುವ ಮಹಾಭಾರತದ ನಾಮಾನುಕ್ರಮಣಿಕೆಯಲ್ಲಿ '*ಇಸಕಾ ದೂಸರಾ ನಾಮ್ ಶಾಲಕಟಂಕಟ ಥಾ*'-ಅಲಂಬುಷನ ಮತ್ತೊಂದು ಹೆಸರು ಶಾಲಕಟಂಕಟ ಎಂಬುದಾ ಗಿದ್ದಿತು'-ಎಂದು ತಿಳಿಸಿದ್ದಾರೆ. ಶಾಲಕಟಂಕಟ ಎಂಬ ಪದದ ನಿರೂಪಣೆಯಲ್ಲಿಯೂ '*ರಾಕ್ಷಸ ಅಲಂಬುಷಕಾ ನಾಮಾನ್ತರ್* ಅಲಂಬುಷ ರಾಕ್ಷಸನ ಮತ್ತೊಂದು ಹೆಸರು' ಎಂದೇ ಹೇಳಿದ್ದಾರೆ. ಇಲ್ಲಿಮಾತ್ರ ಅವನ ಮಗ ಎಂದು ಅರ್ಥಮಾಡಿರುವುದಕ್ಕೆ ಕಾರಣ ತಿಳಿಯದು. ಆಂಗ್ಲ ವ್ಯಾಖ್ಯಾನಕಾರರು 'resembled a tall sala uprooted and broken by the wind' ಅರ್ಥಾತ್ ಕಟಂಕಟ ಎಂಬುದಕ್ಕೆ ಬುಡಮೇಲಾದುದು ಮತ್ತು ಗಾಳಿಯಿಂದ ಭಗ್ನವಾದುದು ಎಂದು ಅರ್ಥಮಾಡಿರುತ್ತಾರೆ.

(ಮಂಗರವಳಿ) ಹಣ್ಣನ್ನು ಹಿಚುಕುವಂತೆ ಶತ್ರುವಾದ ಅಲಂಬುಷರಾಕ್ಷಸನನ್ನು ಹಿಚುಕಿ ಸಂಹರಿಸಿದ ಘಟೋತ್ಕಚನು ಆನಂದತುಂದಿಲನಾದನು. ದುಷ್ಕರವಾದ ಸಾಹಸಕರ್ಮವನ್ನು ಮಾಡಿದ ಘಟೋತ್ಕಚನನ್ನು ಅವನ ಪಿತೃಗಳೂ ಮತ್ತು ಬಾಂಧವರೂ ಅಭಿನಂದಿಸಿದರು. ಅನಂತರ ಪಾಂಡವರ ಪಕ್ಷದಲ್ಲಿ ಶಂಖನಿನಾದಗಳಿಂದ ಕೂಡಿದ ನಾನಾವಿಧವಾದ ಬಾಣಗಳ 'ಸೊಯ್-ಸೊಯ್' ಶಬ್ದವೂ ಸಮುದ್ಭೂತವಾಯಿತು. ಆ ನಿನಾದವನ್ನು ಕೇಳಿ ಪಾಂಡವರು ಬಹಳವಾಗಿ ಸಂತೋಷಿಸಿದರು. ಅವರು ಆನಂದತುಂದಿಲರಾಗಿ ಮಾಡುತ್ತಿದ್ದ ಮಹಾನಿನಾದವು ಜಗತ್ತಿನಲ್ಲಿ ಬಹಳ ದೂರದವರೆಗೂ ಕೇಳಿಸಿತು."

೧೦೯ನೆಯ ಅಧ್ಯಾಯವು ಮುಗಿಯಿತು.

೧೧೦ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣ-ಸಾತ್ಯಕಿಯರ ಯುದ್ಧ : ಯುಧಿಷ್ಠಿರನು ಸಾತ್ಯಕಿಯನ್ನು ಪ್ರಶಂಸಿಸಿದುದು ಮತ್ತು ಅರ್ಜುನನ ಸಹಾಯಕ್ಕೆ ಹೋಗುವಂತೆ ಹೇಳಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ:

"ಸಂಜಯ! ಸಾತ್ಯಕಿಯು ದ್ರೋಣರನ್ನು ತಡೆದುದು ಹೇಗೆ?—ಈ ವಿಷಯವನ್ನು ಕೇಳಲು ನನಗೆ ಕುತೂಹಲವುಂಟಾಗಿದೆ. ಈ ವಿಷಯವನ್ನು ನನಗೆ ಯಥಾವತ್ತಾಗಿ ಹೇಳು."

"ಮಹಾಪ್ರಾಜ್ಞನೇ! ಯುಯುಧಾನಪುರಃಸರರಾದ ಪಾಂಡವರಿಗೂ

---

'ಗಾಳಿಯಿಂದ ಬುಡಮೇಲಾದ ಮತ್ತು ಭಗ್ನವಾದ ಶಾಲವೃಕ್ಷದಂತೆ ಅಲಂಬುಷನು ಪ್ರಕಾಶಿಸಿದನು.' 'ಇವ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಕಟಂಕಟ ಎಂಬ ಪದಕ್ಕೆ ನಿಘಂಟುಕಾರರು ಈ ಅರ್ಥವನ್ನು ಹೇಳಿಲ್ಲ. ಅಗ್ನಿ, ಶಿವ, ಅಗ್ನಿಯಿಂದ ಹುಟ್ಟಿದ ಚಿನ್ನ, ಚಿತ್ರಮೂಲದ ಗಿಡ, ಗಣಪತಿ-ಎಂಬ ಅರ್ಥಗಳನ್ನು ಕೊಟ್ಟಿರುತ್ತಾರೆ. **ಕಟಂ ಕಟತಿ ಜ್ವಾಲಯಾ ಅವೃಣೋತಿ** ಎಂಬ ವ್ಯುತ್ಪತ್ತಿಯನ್ನೂ ಕೊಟ್ಟಿದ್ದಾರೆ. ಪಾಠಾಂತರದಲ್ಲಿ **ಸಾಲಕಟಂಕಟಃ** ಎಂದಿದೆ. ಸಾಲ ಎಂದರೆ ವೃಕ್ಷಸಾಲ ಎಂದರೆ ಮತ್ತೀಮರ ಎಂದಾಗುತ್ತದೆ. ಸಾಲಕಟಂಕಟ ಎಂದರೆ ಮತ್ತೀಮರದ ಬೆಂಕಿ ಅಥವಾ ಬೆಂಕಿ ಬಿದ್ದ ಮತ್ತೀಮರ ಎಂದಾಗುತ್ತದೆ. ಬೆಂಕಿ ಬಿದ್ದ ಸಾಲವೃಕ್ಷದಂತೆ ಎಂದು ಅರ್ಥಮಾಡಬಹುದಾಗಿದೆ.

ದ್ರೋಣರಿಗೂ ನಡೆದ ರೋಮಾಂಚಕಾರಕವಾದ ಸಂಗ್ರಾಮದ ವರ್ಣನೆಯನ್ನು ಕೇಳು. ಸತ್ಯವಿಕ್ರಮನಾದ ಸಾತ್ಯಕಿಯು ಕೌರವಸೇನೆಯನ್ನು ಸತತವಾಗಿ ಪೀಡಿಸುತ್ತಿರುವುದನ್ನು ನೋಡಿ ದ್ರೋಣರೇ ಸಾತ್ಯಕಿಯನ್ನು ಎದುರಿಸಿ ಯುದ್ಧಮಾಡಲು ಹೋದರು. ತನ್ನ ಮೇಲೆ ಬೀಳಲು ಮಹಾರಥರಾದ ದ್ರೋಣರು ಬಹಳ ರಭಸದಿಂದ ಆಗಮಿಸುತ್ತಿರುವುದನ್ನು ನೋಡಿ ಸಾತ್ಯಕಿಯು ಕ್ಷುದ್ರಕಗಳೆಂಬ ಇಪ್ಪತ್ತೈದು ಬಾಣಗಳಿಂದ ಅವರನ್ನು ಪ್ರಹರಿಸಿದನು. ಪರಾಕ್ರಮಿಗಳಾದ ದ್ರೋಣರೂ ಸಹ ಏಕಾಗ್ರಚಿತ್ತರಾಗಿ ಚಿನ್ನದ ಮೂಲಭಾಗಗಳಿದ್ದ ನಿಶಿತವಾದ ಐದು ಬಾಣಗಳಿಂದ ಯುಯುಧಾನನನ್ನು ಪ್ರಹರಿಸಿದರು. ಶತ್ರುವಿನ ಮಾಂಸವನ್ನೇ ಭೋಜನಮಾಡುವ, ದ್ರೋಣರಿಂದ ಪ್ರಮುಕ್ತವಾದ ಆ ಐದು ಬಾಣಗಳೂ ಸಾತ್ಯಕಿಯ ಕವಚವನ್ನು ಗಾಢವಾಗಿ ಭೇದಿಸಿಕೊಂಡು ಬುಸುಗುಟ್ಟುವ ಸರ್ಪಗಳಂತೆ–ಭೂಮಿಯನ್ನು ಹೊಕ್ಕುವು. ಅಂಕುಶದಿಂದ ಪ್ರಹೃತವಾದ ಆನೆಯಂತೆ–ದ್ರೋಣರ ಬಾಣಗಳಿಂದ ಪ್ರಹೃತನಾದ ಸಾತ್ಯಕಿಯು ಅತಿಕ್ರುದ್ಧನಾಗಿ ಅಗ್ನಿಸದೃಶವಾದ ಐವತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಯುಯುಧಾನನಿಂದ ಪ್ರಹೃತರಾದ ದ್ರೋಣರು ಪಾಂಡವರ ವಿಜಯಕ್ಕಾಗಿ ಸತತವಾಗಿ ಪ್ರಯತ್ನಮಾಡುತ್ತಿದ್ದ ಸಾತ್ಯಕಿಯನ್ನು ಅನೇಕಬಾಣಗಳಿಂದ ಶೀಘ್ರವಾಗಿ ಪ್ರಹರಿಸಿದರು. ಮಹಾಬಲರಾದ, ಮಹಾಧನುಷ್ಮಂತರಾದ, ಕ್ರುದ್ಧರಾದ ದ್ರೋಣರು ಬಗ್ಗಿದ ಗಿಣ್ಣುಳ್ಳ ಬಾಣದಿಂದ ಪುನಃ ಸಾತ್ವತನನ್ನು ಪ್ರಹರಿಸಿ ಬಹಳವಾಗಿ ಪೀಡಿಸಿದರು. ದ್ರೋಣರ ಬಾಣದಿಂದ ಬಹಳವಾಗಿ ಗಾಯಗೊಂಡ ಸಾತ್ಯಕಿಯು ಸ್ವಲ್ಪ ಹೊತ್ತಿನವರೆಗೆ ಕಿಂಕರ್ತವ್ಯತಾಮೂಢನಾಗಿ ಕುಳಿತುಬಿಟ್ಟನು. ನಿಶಿತವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುತ್ತಿದ್ದ ದ್ರೋಣರನ್ನು ನೋಡಿ ಯುಯುಧಾನನು ವಿಷಣ್ಣವದನನಾದನು. ಏನು ಮಾಡಬೇಕೆಂಬುದೇ ತಿಳಿಯದೇ ರಥದಲ್ಲಿ ಖಿನ್ನನಾಗಿ ಕುಳಿತಿದ್ದ ಸಾತ್ಯಕಿಯನ್ನು ಕಂಡು ನಿನ್ನ ಮಕ್ಕಳೂ ಮತ್ತು ಸೈನಿಕರೂ ಪ್ರಸನ್ನಚಿತ್ತರಾಗಿ ಸಿಂಹನಾದಗಳನ್ನು ಮಾಡಿದರು. ಶತ್ರುಪಕ್ಷದವರು ಪದೇ-ಪದೇ ಮಾಡುತ್ತಿದ್ದ ಸಿಂಹನಾದಗಳನ್ನು ಕೇಳಿ, ದ್ರೋಣರಿಂದ ಸಾತ್ಯಕಿಯು ಪೀಡಿತನಾಗುತ್ತಿರುವುದನ್ನೂ ನೋಡಿ ಯುಧಿಷ್ಠಿರರಾಜನು ತನ್ನ ಎಲ್ಲ ಸೈನಿಕರನ್ನೂ ಸಂಬೋಧಿಸಿ ಹೇಳಿದನು:

"ವೀರಯೋಧರೇ! ಸತ್ಯವಿಕ್ರಮನಾದ, ವೀರನಾದ, ವೃಷ್ಣಿಶ್ರೇಷ್ಠನಾದ ಸಾತ್ಯಕಿಯನ್ನು ಶೂರರಾದ ದ್ರೋಣರು–ರಾಹುವು ಸೂರ್ಯನನ್ನು ನುಂಗುವಂತೆ-ಬಾಣಗಳಿಂದ ನುಂಗಿಹಾಕುತ್ತಿದ್ದಾರೆ. ಅವನ ರಕ್ಷಣೆಗಾಗಿ ಸಾತ್ಯಕಿಯು ಇರುವೆಡೆಗೇ ನೀವೆಲ್ಲರೂ ಈಗಲೇ ಧಾವಿಸಿರಿ."

ಸೈನಿಕರನ್ನು ಕುರಿತು ಹೀಗೆ ಹೇಳಿದನಂತರ ಜನಾಧಿಪನಾದ ಯುಧಿಷ್ಠಿರನು ಸೇನಾಪತಿಯಾದ ಧೃಷ್ಟದ್ಯುಮ್ನನಿಗೆ ಹೇಳಿದನು:

"ಪಾರ್ಷತ! ಏಕಿಲ್ಲಿ ನಿಂತಿರುವೆ? ದ್ರೋಣರಿಂದ ನಮಗೆ ಮಹಾ ಭಯವು ಸಮುಪಸ್ಥಿತವಾಗಿರುವುದನ್ನು ನೀನು ಕಾಣುತ್ತಿಲ್ಲವೇ? ಅವರ ಬಳಿಗೆ ನೀನೂ ಶೀಘ್ರವಾಗಿ ಹೋಗು. ಬಾಲಕನೊಬ್ಬನು ದಾರದಿಂದ ಬದ್ಧವಾದ ಪಕ್ಷಿಯೊಡನೆ ಆಟವಾಡುವಂತೆ–ಮಹಾಧನುಷ್ಮಂತರಾದ ದ್ರೋಣರು ಸಾತ್ಯಕಿಯೊಡನೆ ಯುದ್ಧದಲ್ಲಿ ಆಟವಾಡುತ್ತಿದ್ದಾರೆ. (ಅವನು ತಪ್ಪಿಸಿಕೊಂಡು ಹೋಗುವುದಕ್ಕೂ ಸಹ ಅವಕಾಶವನ್ನು ಕೊಡುತ್ತಿಲ್ಲ.) ಭೀಮಸೇನ ಪುರಃಸರರಾದ ಎಲ್ಲ ಸೈನಿಕರೂ ನಿನ್ನೊಡನೆ ಯುಯುಧಾನನ ರಥದ ಬಳಿಗೆ ಹೋಗಲಿ. ಧೃಷ್ಟದ್ಯುಮ್ನ! ಸಸೈನ್ಯನಾಗಿ ನಾನೂ ಸಹ ನಿನ್ನ ಹಿಂದೆಯೇ ಬರುತ್ತೇನೆ. ಯಮನ ದವಡೆಯೊಳಗೆ ಸಿಕ್ಕಿರುವ ಸಾತ್ಯಕಿಯನ್ನು ಈ ಕೂಡಲೇ ವಿಮೋಚಿಸು."

ಮಹಾರಾಜ! ಯುಧಿಷ್ಠಿರನು ಸೇನಾಪತಿಗೆ ಹೀಗೆ ಹೇಳಿ ಯುಯುಧಾನನನ್ನು ರಕ್ಷಿಸುವ ಸಲುವಾಗಿ ಎಲ್ಲ ಸೈನ್ಯದೊಡನೆ ದ್ರೋಣರನ್ನು ಆಕ್ರಮಿಸಿದನು. ಮಹಾರಾಜ! ನಿನಗೆ ಮಂಗಳವಾಗಲಿ. ದ್ರೋಣರೊಬ್ಬ ರೊಡನೆಯೇ ಯುದ್ಧಮಾಡಲು ಬಂದಿದ್ದ ಪಾಂಡವ-ಸೃಂಜಯರ ಸೈನ್ಯದ ಮಧ್ಯದಲ್ಲಿ ದೊಡ್ಡ ಕೋಲಾಹಲವುಂಟಾಯಿತು. ನರವ್ಯಾಘ್ರರಾದ ಆ ಎಲ್ಲ ಯೋಧರೂ ಒಟ್ಟಾಗಿ ಸೇರಿ ಮಹಾರಥರಾದ ದ್ರೋಣರನ್ನು ರಣಹದ್ದಿನ ಮತ್ತು ನವಿಲಿನ ರೆಕ್ಕೆಗಳಿಂದ ಕೂಡಿದ್ದ, ತೀಕ್ಷ್ಣವಾದ ಬಾಣಗಳಿಂದ ಅಭಿವರ್ಷಿಸಿದರು. ಗೃಹಸ್ಥನಾದವನು ಯಾವ ರೀತಿಯಲ್ಲಿ ಮನೆಗೆ ಬಂದ ಅತಿಥಿಗಳನ್ನು ಅರ್ಘ್ಯ-ಪಾದ್ಯಾದಿಗಳಿಂದಲೂ ಆಸನಗಳಿಂದಲೂ ಸತ್ಕರಿಸು ತ್ತಾನೆಯೋ–ಅದೇ ರೀತಿಯಲ್ಲಿ ದ್ರೋಣರು ನಗುತ್ತಲೇ ತಮ್ಮ ಸಮೀಪಕ್ಕೆ ಆಗಮಿಸಿದ್ದ ರಾಜರನ್ನು ತಾವೇ ಸ್ವಾಗತಿಸಿದರು. ಆತಿಥೇಯನ ಮನೆಗೆ ಹೋದ ಅತಿಥಿಗಳು ಯಥೋಚಿತವಾದ ಸತ್ಕಾರಗಳಿಂದ ತೃಪ್ತಿಹೊಂದುವಂತೆ-

ಧನುಷ್ಮಂತರಾದ ಆ ರಾಜರೂ ಭಾರದ್ವಾಜರ ಬಾಣಗಳಿಂದ ತೃಪ್ತಿಹೊಂದಿದರು. ನೆತ್ತಿಯ ಮೇಲಿರುವ ಸೂರ್ಯನನ್ನು ನೋಡಲು ಸಾಧ್ಯವಾಗದಂತೆ–ಮಹಾಪರಾಕ್ರಮಿಗಳಾದ ದ್ರೋಣರನ್ನು ಕಣ್ಣೆತ್ತಿ ನೋಡಲು ಕೂಡ ಯಾರಿಗೂ ಸಾಧ್ಯವಾಗಲಿಲ್ಲ. ಉಷ್ಣವಾದ ಕಿರಣಗಳಿಂದ ಸೂರ್ಯನು ಪ್ರಪಂಚವನ್ನು ಸಂತಾಪಗೊಳಿಸುವಂತೆ–ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಆ ಎಲ್ಲ ಮಹಾಧನುಷ್ಮಂತರನ್ನೂ ಬಾಣಗಳ ಸಮೂಹಗಳಿಂದ ಪರಿತಾಪಗೊಳಿಸಿದರು. ಕೆಸರಿನಲ್ಲಿ ಹೂತುಹೋದ ಕಾಲುಗಳುಳ್ಳ ಆನೆಗಳಂತೆ ದ್ರೋಣರ ಕೈಯಲ್ಲಿ ಸಿಕ್ಕಿಹಾಕಿಕೊಂಡು ಪರಿತಪಿಸುತ್ತಿದ್ದ ಪಾಂಡವ-ಸೃಂಜಯರು ಅಂತಹ ದುಃಸ್ಥಿತಿಯಲ್ಲಿ ತಮ್ಮ ರಕ್ಷಕರನ್ನೇ ಕಾಣದೇ ಹೋದರು. ಯಾವ ರೀತಿಯಲ್ಲಿ ಸೂರ್ಯನ ತೀಕ್ಷ್ಣವಾದ ಕಿರಣಗಳು ಸರ್ವತ್ರ ವ್ಯಾಪ್ತವಾಗಿ ಪ್ರಾಣಿಗಳನ್ನು ಪರಿತಾಪಗೊಳಿಸುತ್ತವೆಯೋ ಅದೇ ರೀತಿಯಲ್ಲಿ ದ್ರೋಣರ ಬಾಣಗಳೂ ಸಹ ಸರ್ವತ್ರ ವ್ಯಾಪ್ತವಾಗಿ ಶತ್ರುಯೋಧರನ್ನು ಪರಿತಾಪಗೊಳಿಸುತ್ತಿದ್ದುದು ಕಂಡು ಬರುತ್ತಿದ್ದಿತು. ದ್ರೋಣರಿಗೂ, ಪಾಂಚಾಲ-ಪಾಂಡವ-ಸೃಂಜಯರಿಗೂ ನಡುವೆ ನಡೆಯುತ್ತಿದ್ದ ಆ ಮಹಾಯುದ್ಧದಲ್ಲಿ ದ್ರೋಣರು ಸುವಿಖ್ಯಾತರಾದ, ಧೃಷ್ಟದ್ಯುಮ್ನನಿಗೆ ಬಹಳ ಪ್ರಿಯರಾಗಿದ್ದ ಇಪ್ಪತ್ತೈದು ಮಹಾರಥರನ್ನು ಸಂಹರಿಸಿದರು. ಪಾಂಡವರ ಸೈನ್ಯದಲ್ಲಿಯೂ, ಪಾಂಚಾಲರ ಸೈನ್ಯದಲ್ಲಿಯೂ ಶೂರರಾದ ದ್ರೋಣರು ನುಗ್ಗಿಹೋಗಿ ಶ್ರೇಷ್ಠರಾದ ಯೋಧರನ್ನು ಸಂಹರಿಸುತ್ತಿದ್ದುದನ್ನು ಎಲ್ಲರೂ ನೋಡುತ್ತಿದ್ದರು. ನೂರು ಕೇಕಯಯೋಧರನ್ನೂ ಸಂಹರಿಸಿ ಉಳಿದವರನ್ನು ದಿಕ್ಕಾಪಾಲಾಗಿ ಓಡಿಸಿ, ಬಾಯ್ದೆರೆದು ನಿಂತಿರುವ ಅಂತಕನಂತೆಯೇ ಪಾಂಡವರ ಸೈನ್ಯದ ಮುಂದೆ ದ್ರೋಣರು ನಿಂತಿದ್ದರು. ಮಹಾಬಾಹುಗಳಾದ ದ್ರೋಣರು ಪಾಂಚಾಲ-ಸೃಂಜಯ-ಮತ್ಸ್ಯ-ಕೇಕಯಯೋಧರನ್ನು ನೂರಾರು ಸಾವಿರಾರು ಸಂಖ್ಯೆಯಲ್ಲಿ ಪರಾಜಯಗೊಳಿಸಿದರು. ಅರಣ್ಯದಲ್ಲಿ ಕಾಡುಗಿಚ್ಚಿನಿಂದ ವ್ಯಾಪ್ತರಾದ ವನವಾಸಿಗಳಂತೆ–ದ್ರೋಣರ ಬಾಣಗಳಿಂದ ಪ್ರಹೃತರಾದ ಯೋಧರ ಆಕ್ರಂದನಶಬ್ದವು ಎಲ್ಲೆಲ್ಲಿಯೂ ಕೇಳಿಬರುತ್ತಿದ್ದಿತು. "ಪಾಂಡವರೂ ಮತ್ತು ಪಾಂಚಾಲರೂ ಸೈನ್ಯಸಮೇತರಾಗಿ ಪಲಾಯನಮಾಡುತ್ತಿದ್ದಾರೆ"–ಎಂಬುದಾಗಿ ಯುದ್ಧವನ್ನು ಅವಲೋಕಿಸುತ್ತಿದ್ದ ದೇವತೆಗಳೂ, ಗಂಧರ್ವರೂ ಮತ್ತು ಪಿತೃದೇವತೆಗಳೂ ಆಡಿಕೊಳ್ಳುತ್ತಿದ್ದರು. ಈ ರೀತಿಯಲ್ಲಿ ಸೋಮಕರೇ ಮೊದಲಾದ ಯೋಧ

ರನ್ನು ಅವ್ಯಾಹತವಾಗಿ ಸಂಹರಿಸುತ್ತಿದ್ದ ದ್ರೋಣರನ್ನು ಎದುರಿಸಲು ಯಾರೂ ಮುಂದೆ ಹೋಗಲಿಲ್ಲ. ಆ ಸಮಯದಲ್ಲಿ ಅವರನ್ನು ಆಯುಧಗಳಿಂದ ಪ್ರಹರಿಸಲೂ ಯಾರೂ ಉತ್ಸುಕರಾಗಿರಲಿಲ್ಲ. ವೀರಶ್ರೇಷ್ಠರ ವಿನಾಶಕವಾದ ಮಹಾಭಯಂಕರವಾದ ಯುದ್ಧವು ಈ ರೀತಿಯಲ್ಲಿ ನಡೆಯುತ್ತಿರಲಾಗಿ, ಯುಧಿಷ್ಠಿರನು ಪಾಂಚಜನ್ಯಶಂಖದ ಮಹಾಧ್ವನಿಯನ್ನು ಕೇಳಿದನು. ಪುನಃ ಆಲಿಸಿ ಕೇಳಿದನು. ವಾಸುದೇವನಿಂದ ಪ್ರಪೂರಿತವಾದ ಪಾಂಚಜನ್ಯ ಮಹಾಶಂಖವು ಮಾತ್ರವೇ ಧ್ವನಿಮಾಡುತ್ತಿದ್ದಿತು. ಅದರ ಜೊತೆಗೆ ಸೈಂಧವನನ್ನು ರಕ್ಷಿಸುತ್ತಿದ್ದ ಧಾರ್ತರಾಷ್ಟ್ರವೀರರು ಅರ್ಜುನನ ರಥದ ಕಡೆಗೆ ನುಗ್ಗುತ್ತಾ ಗರ್ಜನೆಮಾಡುತ್ತಾ ಯುದ್ಧದಲ್ಲಿ ತೊಡಗಿದರು. ಕೌರವರ ವೀರಗರ್ಜನೆಗಳಲ್ಲಿ ಮತ್ತು ಶ್ರೀಕೃಷ್ಣನ ಪಾಂಚಜನ್ಯದ ಮಹಾಧ್ವನಿಯಲ್ಲಿ ಅರ್ಜುನನ ಗಾಂಡೀವದ ಟೇಂಕಾರಧ್ವನಿಯು ಉಡುಗಿಹೋಗಿದ್ದು ಅದು ಸ್ವಲ್ಪ ವಾದರೂ ಕೇಳಿಸುತ್ತಲೇ ಇರಲಿಲ್ಲ. ಯುಧಿಷ್ಠಿರರಾಜನು ಅಷ್ಟರಿಂದಲೇ ಮನಸ್ಸಿನಲ್ಲಿ ಕಳವಳಗೊಂಡು ಚಿಂತಿಸತೊಡಗಿದನು."ನಿಶ್ಚಯವಾಗಿಯೂ ಪಾರ್ಥನು ಮಂಗಳದ ಹಾದಿಯನ್ನು ಬಿಟ್ಟಿರುವಂತೆ (ಪಾರ್ಥನಿಗೆ ಅಮಂ ಗಳವು ಒದಗಿರಬಹುದೆಂದು) ತೋರುತ್ತಿದೆ. ಸಾಮಾನ್ಯವಾಗಿ ಯಾವಾಗಲೂ ದೇವದತ್ತ-ಪಾಂಚಜನ್ಯಗಳೆರಡೂ ಸೇರಿಯೇ ಧ್ವನಿಮಾಡುತ್ತಿದ್ದುವು. ಆದರೆ ಈಗ ಶಂಖಗಳಿಗೆಲ್ಲಾ ರಾಜನಂತಿರುವ ಪಾಂಚಜನ್ಯವೊಂದೇ ಧ್ವನಿಮಾಡು ತ್ತಿದೆ. ಕೌರವರೂ ಸಹ ಮಹಾಹೃಷ್ಟರಾಗಿರುವರೋ ಎಂಬಂತೆ ಬಾರಿ-ಬಾರಿಗೂ ಆನಂದಸೂಚಕವಾದ ಸಿಂಹನಾದಗಳನ್ನೇ ಮಾಡುತ್ತಿದ್ದಾರೆ."

ಮಹಾರಾಜ! ಇವೇ ಮುಂತಾಗಿ ಚಿಂತಿಸಿದ ಅಜಾತಶತ್ರುವಾದ ಯುಧಿಷ್ಠಿರನು ಮನಸ್ಸಿನಲ್ಲಿ ಬಹಳ ವ್ಯಾಕುಲಗೊಂಡನು. ಒಡನೆಯೇ ಸಾತ್ಯಕಿಯನ್ನು ಹತ್ತಿರಕ್ಕೆ ಕರೆದು ಅವನೊಡನೆ ಮಾತನಾಡಿದನು. ಯುಧಿಷ್ಠಿರನು ಜಯದ್ರಥನ ಸಂಹಾರಕಾರ್ಯವು ನಿರ್ವಿಘ್ನವಾಗಿ ನಡೆಯ ಬೇಕೆಂದು ಆಶಿಸಿದ್ದನು. ಆದರೆ ಆಗ ಪಾರ್ಥನ ಧನುಸ್ಸಿನ ಟೇಂಕಾರವಾಗಲೀ, ದೇವದತ್ತಶಂಖದ ಧ್ವನಿಯಾಗಲೀ ಕೇಳಿಬರುತ್ತಲೇ ಇರಲಿಲ್ಲ. ಅದರಿಂದ ಯುಧಿಷ್ಠಿರನು ಬಾರಿ-ಬಾರಿಗೂ ವಿಮೋಹಗೊಳ್ಳುತ್ತಾ ಕಂಬನಿಗರೆಯುತ್ತಾ ಗದ್ಗದ ಧ್ವನಿಯಿಂದ ಶಿನಿಪುಂಗವನಾದ ಶೈನೇಯನೊಡನೆ ಹೇಳಿದನು:

"ಸಾತ್ಯಕೇ! ಪೂರ್ವಕಾಲದಲ್ಲಿ ಸಾಧುಪುರುಷರು-ಮಿತ್ರನೊಬ್ಬನು ಆಪತ್ತಿನಲ್ಲಿರುವಾಗ ಏನು ಮಾಡಬೇಕೆಂಬುದರ ಬಗೆಗೆ ಶಾಶ್ವತವಾದ ಧರ್ಮಮಾರ್ಗವನ್ನು ಸೂಚಿಸಿದ್ದಾರೆ. ಅದನ್ನು ಕಾರ್ಯಗತ ಮಾಡಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಶಿನಿಪುಂಗವನೇ! ನಾನು ಎಷ್ಟೇ ಬಗೆಯಾಗಿ ಯೋಚಿಸಿದರೂ ನಮ್ಮಲ್ಲಿರುವ ಅನೇಕಸಹಸ್ರಯೋಧರಲ್ಲಿ ನಿನಗಿಂತಲೂ ಸುಹೃತ್ತಮನಾದ ಮತ್ತೊಬ್ಬನನ್ನು ನಾನು ಕಂಡಿಲ್ಲ. ಯಾವನು ಯಾವಾಗಲೂ ಪ್ರಸನ್ನಮನಸ್ಕನಾಗಿದ್ದು ನಿತ್ಯನಿರಂತರವಾಗಿ ಅನುಸರಿಸಿಕೊಂಡಿರುತ್ತಾನೆಯೋ ಅಂತಹವನನ್ನು ಮಾತ್ರವೇ ಸಂಕಟಸಮಯದಲ್ಲಿ ಕಾರ್ಯಕ್ಕೆ ನಿಯೋಜಿಸ ಬೇಕೆಂಬುದು ನನ್ನ ಅಭಿಮತವಾಗಿದೆ. ಯಾವ ರೀತಿಯಲ್ಲಿ ಕೇಶವನು ಪಾಂಡವರಿಗೆ ನಿತ್ಯಾಶ್ರಯನಾಗಿದ್ದಾನೆಯೋ–ಅದೇ ರೀತಿಯಲ್ಲಿ ಕೃಷ್ಣತುಲ್ಯ ಪರಾಕ್ರಮನಾದ ನೀನೂ ಸಹ ಪಾಂಡವರಿಗೆ ಆಶ್ರಯನಾಗಿರುವೆ. ಆದುದ ರಿಂದ ನಾನೀಗ ನಿನ್ನ ಮೇಲೆ ಭಾರವೊಂದನ್ನು ಹೊರಿಸಲಿದ್ದೇನೆ. ಅದನ್ನು ವಹಿಸಲೂ ನೀನು ಅರ್ಹನಾಗಿರುವೆ. ಸದಾಕಾಲದಲ್ಲಿಯೂ ನಾನು ನಿನ್ನ ವಿಷಯದಲ್ಲಿ ತಾಳಿರುವ ಈ ಸದಭಿಪ್ರಾಯವನ್ನು ನೀನು ಖಂಡಿತವಾಗಿಯೂ ವ್ಯರ್ಥಮಾಡಬಾರದು. ನರರ್ಷಭನೇ! ಅರ್ಜುನನು ನಿನಗೆ ಸಹೋದರ ನಂತಿದ್ದಾನೆ. ಅವನು ನಿನ್ನ ಆಪ್ತಮಿತ್ರನು; ಮಿಗಿಲಾಗಿ ನಿನಗೆ ಧನುರ್ವಿದ್ಯೆ ಯನ್ನು ಉಪದೇಶಿಸಿದ ಗುರುವು. ಅಂತಹ ಅರ್ಜುನನ ಕಷ್ಟದಲ್ಲಿ ನೀನು ಅವನ ಸಹಾಯಾರ್ಥವಾಗಿ ಪ್ರಯತ್ನಮಾಡು. ನೀನು ಸತ್ಯವ್ರತನಾಗಿರುವೆ. ಶೂರನಾಗಿರುವೆ. ಮಿತ್ರರಿಗೆ ಅಭಯದಾಯಕನಾಗಿರುವೆ. ನೀನು ನಿನ್ನ ಕರ್ಮಗಳಿಂದ ಲೋಕದಲ್ಲಿ 'ಸತ್ಯವಾಕ್' ಎಂದು ಪ್ರಸಿದ್ಧಿಯನ್ನು ಪಡೆದಿರುವೆ. ಶೈನೇಯ! ಮಿತ್ರರ ಸಲುವಾಗಿ ಯಾವನು ಯುದ್ಧಮಾಡುತ್ತಾ ತನ್ನ ದೇಹವನ್ನು ತ್ಯಜಿಸುತ್ತಾನೆಯೋ ಅವನೂ ಮತ್ತು ಅಖಂಡಪೃಥ್ವಿಯನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಡುವವನೂ–ಧರ್ಮದ ದೃಷ್ಟಿಯಲ್ಲಿ ಸಮಾನರೆನಿಸುತ್ತಾರೆ. ಧರ್ಮಾತ್ಮನೇ! ಅನೇಕರಾಜರು ಬ್ರಾಹ್ಮಣರಿಗೆ ವಿಧಿಪೂರ್ವಕವಾಗಿ ಈ ಅಖಂಡಭೂಮಿಯನ್ನೇ ದಾನಮಾಡಿ ಸ್ವರ್ಗಲೋಕಕ್ಕೆ ಹೋಗಿರುವರೆಂಬ ವಿಷಯವನ್ನು ನಾವೂ ಕೇಳಿದ್ದೇವೆ. ಅದೇ ರೀತಿಯಲ್ಲಿ ಕಷ್ಟಸಮಯದಲ್ಲಿ

ಮಿತ್ರನಿಗೆ ಸಹಾಯಮಾಡುವ ನಿನಗೂ ಸಹ ಪೃಥ್ವಿಯನ್ನು ದಾನಮಾಡಿದ ಫಲವು ಅಥವಾ ಅದಕ್ಕೂ ಮಿಗಿಲಾದ ಫಲವೇ ಲಭ್ಯವಾಗುತ್ತದೆ. ಆದುದರಿಂದ ಅರ್ಜುನನ ಸಹಾಯಾರ್ಥವಾಗಿ ಹೋಗುವಂತೆ ನಾನು ನಿನ್ನನ್ನು ಬದ್ಧಾಂಜಲಿಯಾಗಿ ಕೇಳಿಕೊಳ್ಳುತ್ತೇನೆ. ಸಾತ್ಯಕಿಯೇ! ಮಿತ್ರರಾದ ನಮಗೆ ಸರ್ವದಾ ಅಭಯನೀಡುತ್ತಿರುವ ಮಿತ್ರನೆಂದರೆ ಶ್ರೀಕೃಷ್ಣನೊಬ್ಬನೇ ಆಗಿದ್ದನು. ಅವನು ನಮಗಾಗಿ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಕಾರ್ಯಮಾಡುತ್ತಿದ್ದಾನೆ. ಈಗ ನೀನು ಎರಡನೆಯವನಾಗಿರುವೆ. ಯುದ್ಧದಲ್ಲಿ ವಿಜಯವನ್ನೇ ಆಶಿಸಿ ಸತತವಾಗಿ ಪ್ರಯತ್ನಮಾಡುತ್ತಿರುವ ಮಹಾಪರಾಕ್ರಮಶಾಲಿಯಾದ ಅರ್ಜುನ ನಿಗೆ ಅವನಂತೆಯೇ ಶೂರರಾದವರು ಸಹಾಯಮಾಡಬೇಕಾಗಿದೆಯೇ ಹೊರತು ಸಾಧಾರಣಮನುಷ್ಯರು ಅವನಿಗೆ ಸಹಾಯಮಾಡಲಾರರು. ಮಾಧವ! ಇಂತಹ ಬಹುಘೋರವಾದ ಯುದ್ಧವು ನಡೆಯುತ್ತಿರುವಾಗ ಅರ್ಜುನನಿಗೆ ಸಹಾಯಮಾಡುವವರು ಮತ್ತು ಅವನನ್ನು ಸಂರಕ್ಷಿಸುವವರು ನಿನ್ನೊಬ್ಬನನ್ನು ಬಿಟ್ಟು ಬೇರೆ ಯಾರೂ ಇರುವುದಿಲ್ಲ. ಅರ್ಜುನನು ಇದುವರೆಗೆ ನೀನು ಮಾಡಿರುವ ನೂರಾರು ಸಾಹಸಕಾರ್ಯಗಳನ್ನು ನನ್ನೊಡನೆ ಶ್ಲಾಘನೆಮಾಡಿ ಹೇಳುತ್ತಿದ್ದು ನನಗೆ ಅತ್ಯಾನಂದವನ್ನುಂಟುಮಾಡುತ್ತಿದ್ದನು. ಒಮ್ಮೆ ಹೇಳಿ ಸುಮ್ಮನಾಗುತ್ತಿರಲಿಲ್ಲ. ಪುನಃ ಪುನಃ ಹೇಳುತ್ತಾ ನನ್ನ ಹರ್ಷವನ್ನು ವೃದ್ಧಿಪಡಿಸುತ್ತಿದ್ದನು.

**ಲಘುಹಸ್ತಶ್ಚಿತ್ರಯೋಧೀ ತಥಾ ಲಘುಪರಾಕ್ರಮಃ।**
**ಪ್ರಾಜ್ಞಃ ಸರ್ವಾಸ್ತ್ರವಿಚ್ಛೂರೋ ಮುಹ್ಯತೇ ನ ಚ ಸಂಯುಗೇ ॥೫೬॥**

"ಸಾತ್ಯಕಿಯು ಲಘುಹಸ್ತನು. (ಬಾಣಬಿಡುವುದರಲ್ಲಿ ಕೈಚಳಕವಿರ ತಕ್ಕವನು) ವಿಚಿತ್ರರೀತಿಯಲ್ಲಿ ಯುದ್ಧಮಾಡತಕ್ಕವನು. ಬಹಳ ಶೀಘ್ರವಾಗಿ ತನ್ನ ಪರಾಕ್ರಮವನ್ನು ಶತ್ರುಗಳಿಗೆ ಮನದಟ್ಟುಮಾಡತಕ್ಕವನು. ಪ್ರಾಜ್ಞನು. ಎಲ್ಲ ಅಸ್ತ್ರಗಳನ್ನೂ ತಿಳಿದಿರತಕ್ಕವನು. ಮಹಾಶೂರನು. ಯುದ್ಧಸಮಯದಲ್ಲಿ ಯಾವುದೇ ಕಾರಣದಿಂದಲೂ ವಿಮೋಹಗೊಳ್ಳುವವನಲ್ಲ. (ವ್ಯಗ್ರನಾಗತಕ್ಕವ ನಲ್ಲ.) ದೊಡ್ಡದಾದ ಹೆಗಲುಗಳುಳ್ಳವನು. ವಿಶಾಲವಕ್ಷನು. ನೀಳವಾದ ಭುಜಗಳುಳ್ಳವನು. ದೊಡ್ಡದಾದ ದವಡೆಗಳುಳ್ಳವನು. ಮಹಾಬಲನು.

ಮಹಾವೀರ್ಯನು. ಮಹಾರಥನು. ಮಹಾತ್ಮನು. ಅವನು ನನ್ನ ಶಿಷ್ಯನೂ ಆಗಿದ್ದಾನೆ. ಸಖನೂ ಆಗಿದ್ದಾನೆ. ನಾನು ಅವನಿಗೆ ಪ್ರಿಯನಾಗಿದ್ದೇನೆ. ಅವನೂ ನನಗೆ ಪ್ರಿಯನಾಗಿದ್ದಾನೆ. ಯುಯುಧಾನನು ನನಗೆ ಸಹಾಯಕನಾಗಿ ಬಂದು ಕೌರವರನ್ನೂ ಧ್ವಂಸಮಾಡುತ್ತಾನೆ. ರಾಜೇಂದ್ರ! ಕೇಶವ, ಬಲರಾಮ, ಅನಿರುದ್ಧ, ಮಹಾರಥನಾದ ಪ್ರದ್ಯುಮ್ನ, ಗದ, ಸಾರಣ ಸಾಂಬ-ಇವರೆಲ್ಲರೂ ವೃಷ್ಣಿಸೈನಿಕರ ಸಮೇತವಾಗಿ ಮುಂದೆ ನಡೆಯಲಿರುವ ಶ್ರೇಷ್ಠವಾದ ಯುದ್ಧದ ಸಮಯದಲ್ಲಿ ನಮ್ಮ ಸಹಾಯಾರ್ಥವಾಗಿ ಸರ್ವಸಿದ್ಧತೆಗಳನ್ನೂ ಮಾಡಿ ಕೊಂಡು ಬಂದರೂ–ನಾನು ಸತ್ಯವಿಕ್ರಮನಾದ, ನರವ್ಯಾಘ್ರನಾದ ಸಾತ್ಯಕಿಯನ್ನೇ ನನ್ನ ಸಹಾಯಕ್ಕಾಗಿ ಆರಿಸಿಕೊಳ್ಳುತ್ತೇನೆ. ನನ್ನ ಅಭಿಪ್ರಾಯದಲ್ಲಿ ಅವನಿಗೆ ಸಮಾನರಾದ ಯೋಧರು ಮತ್ತಾರೂ ಇರುವುದಿಲ್ಲ."

ಈ ರೀತಿಯಾಗಿ ಅರ್ಜುನನು ದ್ವೈತವನದಲ್ಲಿ ನಾವಿದ್ದಾಗ ಶ್ರೇಷ್ಠರಾದ ಪುರುಷರ ಸಭೆಯಲ್ಲಿ ನಿನ್ನ ಯಥಾರ್ಥವಾದ ಗುಣಗಳನ್ನು ವರ್ಣನೆಮಾಡುತ್ತಾ ನಿನ್ನ ಪರೋಕ್ಷದಲ್ಲಿ ನಾನೀಗ ಹೇಳಿದ ಮಾತುಗಳನ್ನೇ ಯಥಾವತ್ತಾಗಿ ಹೇಳಿದನು. ಅರ್ಜುನನಿಗೆ, ನನಗೆ, ಭೀಮನಿಗೆ ಮತ್ತು ನಕುಲ-ಸಹದೇವರಿಗೆ ನಿನ್ನ ವಿಷಯದಲ್ಲಿ ಯಾವ ಸದಭಿಪ್ರಾಯವಿರುವುದೋ ಅದನ್ನು ಸುಳ್ಳುಮಾಡುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ. ನಾನು ತೀರ್ಥಗಳ ಯಾತ್ರೆಯನ್ನು ಮಾಡುತ್ತಾ ದ್ವಾರವತಿಗೆ ಹೋದಾಗ ಅಲ್ಲಿಯೂ ಸಹ ಅರ್ಜುನನಲ್ಲಿರುವ ಅಸಾಧಾರಣವಾದ ನಿನ್ನ ಭಕ್ತಿಯನ್ನು ಪ್ರತ್ಯಕ್ಷವಾಗಿಯೇ ಕಂಡೆನು. ಈಗ ಒದಗಿರುವ ವಿನಾಶಕಾರಿಯಾದ ಸಂಕಟದಲ್ಲಿ ಸಿಕ್ಕಿಹಾಕಿ ಕೊಂಡಿರುವ ನಮ್ಮನ್ನು ನೀನು ಯಾವ ರೀತಿಯಲ್ಲಿ ಸೇವೆಮಾಡುತ್ತಿರುವೆಯೋ ಮತ್ತು ನೀನು ನಮಗೆ ಯಾವ ರೀತಿಯಲ್ಲಿ ಸಹಾಯಮಾಡುತ್ತಿರುವೆಯೋ– ಹಾಗೆ ಸೇವೆಮಾಡುವವರನ್ನಾಗಲೀ, ಸಹಾಯಮಾಡುವವರನ್ನಾಗಲೀ ನಾನು ಕಂಡಿಲ್ಲ. ನಿನ್ನಲ್ಲಿರುವ ಸೌಹಾರ್ದವನ್ನು ನಾನು ಬೇರೆಯವರಲ್ಲಿ ಕಂಡಿಲ್ಲ. ಮಹಾಬಾಹುವೇ! ಮಹಾಧನುಷ್ಮಂತನೇ! ಮಾಧವ! ನಮ್ಮ ಮೇಲಿನ ಅನುಕಂಪದಿಂದ ನೀನು ಹುಟ್ಟಿರುವ ಸದ್ವಂಶಕ್ಕೆ ಅನುರೂಪವಾದ–ಅರ್ಜುನ ನಲ್ಲಿ ನೀನಿಟ್ಟಿರುವ ಭಕ್ತಿಭಾವಕ್ಕೂ, ಗುರುಭಾವಕ್ಕೂ, ಮೈತ್ರಿಗೂ, ಸೌಹಾರ್ದಕ್ಕೂ ಅನುರೂಪವಾದ–ನಿನ್ನ ಪರಾಕ್ರಮಕ್ಕೂ, ಸತ್ಕುಲಪ್ರಸೂ ತಿಗೂ, ಸತ್ಯನಿಷ್ಠೆಗೂ ಅನುರೂಪವಾದ ಕರ್ಮವನ್ನೇ ಮಾಡು. ದುರ್ಯೋಧ

ನನು ದ್ರೋಣರಿಂದ ಕವಚಬಂಧನಮಾಡಿಸಿಕೊಂಡು ಪಾರ್ಥನನ್ನು ಎದುರಿಸಲು ಶೀಘ್ರಗತಿಯಲ್ಲಿ ಹೋಗಿರುವನು. ಅನೇಕ ಕೌರವಮಹಾ ರಥರೂ ಸಹ ಈ ಮೊದಲೇ ದುರ್ಯೋಧನನನ್ನು ಅನುಸರಿಸಿ ಪಾರ್ಥ ನೊಡನೆ ಯುದ್ಧಮಾಡಲು ಹೋಗಿದ್ದಾರೆ. ಅರ್ಜುನನು ಇರುವ ಕಡೆಯಲ್ಲಿ ಗಟ್ಟಿಯಾದ ಸಿಂಹನಾದಗಳೂ ಕೇಳಿಬರುತ್ತಿವೆ. ಆದುದರಿಂದ ಮಾನದನೇ! (ಮರ್ಯಾದೆಯನ್ನು ಉಳಿಸುವವನೇ!) ಬಹಳ ಬೇಗ ನೀನಲ್ಲಿಗೆ ಹೋಗುವುದು ಯುಕ್ತವಾಗಿದೆ. ಒಂದು ವೇಳೆ ದ್ರೋಣರೇನಾದರೂ ನಿನ್ನನ್ನು ಹಿಂಬಾಲಿಸಿ ಬಂದರೆ ಭೀಮಸೇನನೂ ನಾವೂ ಮತ್ತು ನಮ್ಮ ಸೈನಿಕರೂ ಸೇರಿ ನಿನ್ನ ಬೆನ್ನಟ್ಟಿ ಬರದಂತೆ ಅವರನ್ನು ತಡೆಯುತ್ತೇವೆ. ಶೈನೇಯ! ಅಲ್ಲಿ ನೋಡು. ಆ ಯುದ್ಧಸ್ಥಳದಲ್ಲಿ ಸೈನಿಕರು ಓಡಿಹೋಗುತ್ತಿದ್ದಾರೆ. ಆ ರಣಕ್ಷೇತ್ರದಲ್ಲಿ ದೊಡ್ಡಗದ್ದಲವೇ ಆಗುತ್ತಿದೆ. ಜಯದ್ರಥನ ಸುತ್ತಲೂ ಗೋಡೆಕಟ್ಟಿನಿಂತಿರುವ ಕೌರವರ ಸೈನ್ಯವೂ ಭಗ್ನವಾದಂತೆ ಕಾಣುತ್ತಿದೆ. ಚಂಡಮಾರುತದ ವೇಗದಿಂದಾಗಿ ಪರ್ವದಿವಸಗಳಲ್ಲಿ ಸಮುದ್ರವು ಅಲ್ಲೋಲಕಲ್ಲೋಲ ವಾಗುವಂತೆ–ಸವ್ಯಸಾಚಿಯಿಂದ ದುರ್ಯೋಧನನ ಸೈನ್ಯವು ಅಲ್ಲೋಲ-ಕಲ್ಲೋಲವಾಗಿಬಿಟ್ಟಿದೆ. ಅತ್ತಲಿತ್ತ ರಭಸದಿಂದ ಓಡಾಡುತ್ತಿರುವ ರಥಗಳಿಂದಲೂ, ಪದಾತಿಗಳಿಂದಲೂ ಮತ್ತು ಕುದುರೆಗಳಿಂದಲೂ ಸಮುದ್ಭೂತವಾದ ಧೂಳಿನಿಂದ ಮುಚ್ಚಿಹೋಗಿ ಆ ಮಹಾಸೇನೆಯು ಮುಂದುಗಾಣದೇ ಅಲ್ಲಲ್ಲೇ ಸುತ್ತುತ್ತಿದೆ.

ಶತ್ರುವೀರಹಂತಕನಾದ ಅರ್ಜುನನು ನಖರಗಳಿಂದಲೂ (ಹುಲಿಯುಗುರು), ಪ್ರಾಸಗಳಿಂದಲೂ ಯುದ್ಧಮಾಡುವ, ಅತ್ಯಧಿಕಸಂಖ್ಯೆ ಯಲ್ಲಿ ಏಕತ್ರ ಸಂಘಟಿತರಾಗಿರುವ ಸಿಂಧು-ಸೌವೀರದೇಶದ ಶೂರರಾದ ಸೈನಿಕರಿಂದ ಆವರಿಸಲ್ಪಟ್ಟಿದ್ದಾನೆ. ಆ ಮಹಾಸೈನ್ಯವನ್ನು ನಿರಸನಗೊಳಿಸದೇ ಸೈಂಧವನನ್ನು ಜಯಿಸುವ ಸಾಧ್ಯತೆಯೇ ಇಲ್ಲ. ಆ ಸೈನಿಕರಾದರೋ ಸೈಂಧವನ ಸಲುವಾಗಿ ತಮ್ಮ ಪ್ರಾಣಗಳನ್ನೇ ಒತ್ತೆಯಿಟ್ಟು ಅವನ ರಕ್ಷಣೆಯನ್ನು ಮಾಡುತ್ತಿದ್ದಾರೆ. ಶೈನೇಯ! ಬಾಣಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಧ್ವಜಗಳ ಪಂಕ್ತಿಗಳಿಂದಲೂ, ಸುಶೋಭಿತವಾಗಿರುವ, ಕುದುರೆಗಳಿಂದಲೂ ಮತ್ತು ಆನೆಗಳಿಂದಲೂ ಸಮೃದ್ಧವಾಗಿರುವ ಸುದುರ್ಜಯವಾದ ಈ ಕೌರವರ ಸೈನ್ಯವನ್ನಾದರೂ ನೋಡು. ಸಾತ್ಯಕಿಯೇ! ನಗಾರಿಗಳ ಶಬ್ದವಾಗುತ್ತಿರುವುದನ್ನು

ಕೇಳು. ಎಲ್ಲ ಕಡೆಗಳಿಂದಲೂ ಅವ್ಯಾಹತವಾಗಿ ಕೇಳಿಬರುತ್ತಿರುವ ಶಂಖಗಳ ಧ್ವನಿಯನ್ನೂ, ವೀರರ ಸಿಂಹನಾದಗಳ ಶಬ್ದಗಳನ್ನೂ ಮತ್ತು ರಥಚಕ್ರಗಳ ಗಡ-ಗಡಾ ಶಬ್ದಗಳನ್ನೂ ಕೇಳು. ಆನೆಗಳ ಘೀಂಕಾರಶಬ್ದವನ್ನೂ, ಸಾವಿರಾರು ಕಾಲಾಳುಗಳು ಕೂಗಿಕೊಳ್ಳುತ್ತಿರುವ ಶಬ್ದವನ್ನೂ, ಭೂಮಿಯನ್ನೇ ನಡುಗಿಸುತ್ತಾ ಓಡಿಹೋಗುತ್ತಿರುವ ಶಬ್ದವನ್ನೂ, ಭೂಮಿಯನ್ನೇ ನಡುಗಿಸುತ್ತಾ ಓಡಿಹೋಗುತ್ತಿರುವ ಕುದುರೆಸವಾರರ ಶಬ್ದವನ್ನೂ ಕೇಳು. ಮಾಧವ! ಮುಂಭಾಗದಲ್ಲಿ ದುರ್ಜಯನಾದ ಸೈಂಧವನ ಸೈನ್ಯವಿದೆ. ಹಿಂಭಾಗದಲ್ಲಿ ಅಜೇಯರಾದ ದ್ರೋಣರ ಸೈನ್ಯವಿದೆ. ಈ ಮಧ್ಯದಲ್ಲಿ ಅರ್ಜುನನೊಬ್ಬನೇ ನಿಂತು ಯುದ್ಧ ಮಾಡುತ್ತಿದ್ದಾನೆ.

**ಬಹುತ್ವಾದ್ಧಿ ನರವ್ಯಾಘ್ರ ದೇವೇನ್ದ್ರಮಪಿ ಪೀಡಯೇತ್ ॥೭೯॥**

'ಸೇನಾಬಾಹುಳ್ಯವು ಮಹೇಂದ್ರನನ್ನಾದರೂ ಪೀಡಿಸಬಹುದು'- ಎಂಬುದು ನನ್ನ ಅಭಿಪ್ರಾಯವಾಗಿದೆ. ಕೊನೆಯೆಂಬುದೇ ಇಲ್ಲದ ಸೇನಾ ಸಮೂಹದಲ್ಲಿ ಮುಳುಗಿರುವ ಅರ್ಜುನನು ಪ್ರಾಣಗಳನ್ನೇ ಪರಿತ್ಯಜಿಸ ಬಹುದು. ಅಂತಹವನೇ ಹತನಾಗಿ ಹೋದಮೇಲೆ ಅವನನ್ನೇ ಆಶ್ರಯಿಸಿರುವ ನನ್ನಂತಹವನು ಜೀವಿಸಿರುವುದಾದರೂ ಹೇಗೆ ಸಾಧ್ಯ? ನೀನಿನ್ನೂ ಜೀವಿಸಿರು ವಾಗಲೇ ನಾನು ನಿಶ್ಚಯವಾಗಿಯೂ ಮಹಾಸಂಕಟದಲ್ಲಿ ಸಿಕ್ಕಿಬಿದ್ದಿದ್ದೇನೆ.

ಶೈನೇಯ! ಗುಡಾಕೇಶನು ಶ್ಯಾಮಲವರ್ಣನು; ಇನ್ನೂ ಯುವಕನು; ಸುಂದರನು; ಅಸ್ತ್ರವಿದ್ಯೆಯಲ್ಲಿ ವಿಶೇಷವಾದ ಪ್ರಾವೀಣ್ಯವಿರತಕ್ಕವನು; ವಿಚಿತ್ರ ರೀತಿಯಲ್ಲಿ ಯುದ್ಧಮಾಡುವುದನ್ನು ತಿಳಿದಿರತಕ್ಕವನು. ಮಹಾಬಾಹುವಾದ ಅರ್ಜುನನು ಇಂದು ಸೂರ್ಯೋದಯದ ಸಮಯದಲ್ಲಿ ಭಾರತೀಸೇನೆಯನ್ನು ಪ್ರವೇಶಿಸಿದನು. ದಿವಸದ ಬಹುಭಾಗವು ಈಗಾಗಲೇ ಕಳೆದುಹೋಗಿದೆ. ಈ ವೇಳೆಗೆ ಅರ್ಜುನನು ಬದುಕಿರುವನೋ–ಇಲ್ಲವೋ ಎಂಬ ವಿಷಯವೂ ನನಗೆ ತಿಳಿದುಬಂದಿಲ್ಲ. ಕೌರವರ ಆ ಸೈನ್ಯವಾದರೋ ಸಾಗರೋಪಮವಾಗಿ ಬಹಳ ದೊಡ್ಡದಾಗಿದೆ. ಯುದ್ಧದಲ್ಲಿ ದೇವತೆಗಳಿಂದಲೂ ಎದುರಿಸಲಾಗದ ಅಪಾರ ವಾದ ಕೌರವಸೇನೆಯನ್ನು ಮಹಾಬಾಹುವಾದ ಅರ್ಜುನನೊಬ್ಬನೇ ಏಕಾಕಿಯಾಗಿ ಪ್ರವೇಶಿಸಿದ್ದಾನೆ. ನನಗೀಗ ಯುದ್ಧಮಾಡಬೇಕೆನ್ನುವ ಆಸಕ್ತಿಯೇ

ಹೊರಟುಹೋಗಿದೆ. ದ್ರೋಣರು ಬಹಳ ರಭಸದಿಂದ ಯುದ್ಧಮಾಡುತ್ತಾ ನನ್ನ ಸೈನಿಕರನ್ನು ಬಹಳವಾಗಿ ಪೀಡಿಸುತ್ತಿದ್ದಾರೆ. ಈ ಬ್ರಾಹ್ಮಣರು ರಣಾಂಗಣದ ಸುತ್ತಲೂ ವೇಗವಾಗಿ ಸಂಚರಿಸುತ್ತಾ ನಮ್ಮ ಸೈನ್ಯವನ್ನು ಹೇಗೆ ಬಗ್ಗುಬಡಿಯುತ್ತಿದ್ದಾರೆಂಬುದನ್ನು ನೀನೇ ಪ್ರತ್ಯಕ್ಷವಾಗಿ ಕಾಣುತ್ತಿರುವೆ. (ಆದುದರಿಂದ ನೀನು ಇಲ್ಲಿಯೇ ಇರಬೇಕಾದುದೂ ಅನಿವಾರ್ಯವಾಗಿಯೇ ಕಾಣುತ್ತದೆ.) ಹೀಗೆ ಎರಡು ಮುಖ್ಯಕಾರ್ಯಗಳು ಒದಗಿ ಬಂದಿರುವಾಗ ಯಾವ ಕಾರ್ಯವನ್ನು ಮಾಡುವುದು ಸಾಧು-ಎಂದು ನಿರ್ಧರಿಸುವುದರಲ್ಲಿ ನೀನೇ ವಿಚಕ್ಷಣನಾಗಿರುವೆ. ನನಗಂತೂ ಈಗ ಡೋಲಾಯಮಾನವಾದ ಮನಃಸ್ಥಿತಿಯೇ ಉಂಟಾಗಿದೆ. ಎಲ್ಲಕ್ಕಿಂತಲೂ ಹೆಚ್ಚಾದ ಪ್ರಯೋಜನವುಳ್ಳ ಮತ್ತು ಶೀಘ್ರವಾಗಿ ಮುಗಿಯುವ ಕಾರ್ಯವನ್ನು ಈಗ ನೀನು ಮಾಡುವುದು ಯೋಗ್ಯವಾಗಿ ಕಾಣುತ್ತದೆ. ಈಗ ಸನ್ನಿಹಿತವಾಗಿರುವ ಎಲ್ಲ ಕಾರ್ಯ ಗಳಲ್ಲಿಯೂ ಅತಿಮಹತ್ತರವಾದ ಕಾರ್ಯವೆಂದರೆ ಅರ್ಜುನನ ರಕ್ಷಣೆ. ಈ ಸಮಯದಲ್ಲಿ ಅರ್ಜುನನನ್ನು ಸಂರಕ್ಷಿಸುವುದೇ ನಮ್ಮ ಮಹಾಕರ್ತವ್ಯವೆಂದು ನಾನು ಅಭಿಪ್ರಾಯಪಡುತ್ತೇನೆ. ಶ್ರೀಕೃಷ್ಣನ ವಿಷಯದಲ್ಲಿ ನಾನಷ್ಟಾಗಿ ಶೋಕಪಡುತ್ತಿಲ್ಲ. ಏಕೆಂದರೆ: ಅವನೇ ವಿಶ್ವರಕ್ಷಕ. ಜಗತ್ತಿಗೆಲ್ಲಾ ಒಡೆಯ. ಪುರುಷವ್ಯಾಘ್ರನಾದ ಶ್ರೀಕೃಷ್ಣನು ಮೂರು ಲೋಕಗಳೇ ಒಟ್ಟಾಗಿ ಸೇರಿ ತನ್ನನ್ನೆದುರಿಸಿ ಯುದ್ಧಮಾಡಲು ನಿಂತರೂ ಜಯಿಸಲು ಸಮರ್ಥನಾಗಿರ ತಕ್ಕವನು. ಇದು ಸತ್ಯವಾದ ಮಾತು. ಅಂತಹ ಮಾತನ್ನೇ ನಿನ್ನೊಡನೆ ಹೇಳುತ್ತಿದ್ದೇನೆ. ಮೂರು ಲೋಕಗಳನ್ನೇ ಜಯಿಸುವವನಿಗೆ ಅತ್ಯಂತ ದುರ್ಬಲವಾದ ಈ ಕೌರವರ ಸೈನ್ಯವು ಎಷ್ಟರದು? (ಇಚ್ಛಾಮಾತ್ರದಿಂದಲೇ ಶ್ರೀಕೃಷ್ಣನು ಕೌರವರ ಸೈನ್ಯವನ್ನು ನಾಶಮಾಡಬಲ್ಲನು. ಮೇಲಾಗಿ ಶ್ರೀಕೃಷ್ಣನು ಈಗ ಯಾರೊಡನೆಯೂ ಯುದ್ಧಮಾಡುತ್ತಿಲ್ಲ. ಆದುದರಿಂದ ಅವನ ವಿಷಯವಾಗಿ ನಾನು ಶೋಕಿಸುವುದಿಲ್ಲ. ಅರ್ಜುನನ ವಿಷಯವು ಹಾಗಲ್ಲ.) ವಾರ್ಷ್ಣೇಯ! ನಮ್ಮ ಅರ್ಜುನನು ಯುದ್ಧದಲ್ಲಿ ಅನೇಕರನ್ನು ಏಕಕಾಲದಲ್ಲಿ ಎದುರಿಸಬೇಕಾಗಿದೆ. ಅನೇಕ ಯೋಧರು ಅವನನ್ನು ಶರಪ್ರಹಾರಗಳಿಂದ ಪೀಡಿಸುತ್ತಿದ್ದಾರೆ. ಹೀಗೆಯೇ ಅವನು ಸತತವಾಗಿ ಶತ್ರುಗಳಿಂದ ಪೀಡಿತನಾಗುತ್ತಿದ್ದರೆ ಯುದ್ಧದಲ್ಲಿ ಪ್ರಾಣಗಳನ್ನೇ ತ್ಯಜಿಸಬಹುದು. ಈ ವಿಷಯವನ್ನು ಮನಸ್ಸಿಗೆ ತಂದುಕೊಂಡು ನಾನು ಬಹಳವಾಗಿ ವ್ಯಥೆಪಡುತ್ತಿದ್ದೇನೆ.

**ತಸ್ಯ ತ್ವಂ ಪದವೀಂ ಗಚ್ಛ ಗಚ್ಛೇಯುಸ್ತ್ವಾದೃಶಾ ಯಥಾ।**
**ತಾದೃಶಸ್ಯೇದೃಶೇ ಕಾಲೇ ಮಾದೃಶೇನಾಭಿನೋದಿತಃ ॥೯೧॥**

ಅಂತಹ ಮಹಾಪರಾಕ್ರಮಿಯಾದ ಅರ್ಜುನನಿಗೆ ಒದಗಿರುವ ಇಂತಹ ಕಷ್ಟದೆಸೆಯಲ್ಲಿ ನನ್ನಂತಹವನ ಪ್ರಚೋದನೆಯಿಂದಾಗಿ ನಿನ್ನಂತಹ ಪ್ರಿಯಸಖರು ಯಾವ ಕಾರ್ಯವನ್ನು ಮಾಡುತ್ತಾರೆಯೋ–ಅಂತಹ ಕಾರ್ಯವನ್ನೇ ನೀನೀಗ ಮಾಡು. ಅರ್ಜುನನ ದಾರಿಯನ್ನು ಅನುಸರಿಸಿ ಹೋಗು. (ನೀನು ನಿನ್ನ ಪ್ರಿಯಸಖನ ರಕ್ಷಣೆಗಾಗಿ ಈಗಲೇ ಹೊರಡು.)

ಸಾತ್ವತನೇ! ವೃಷ್ಣಿವೀರರಲ್ಲಿ ಇಬ್ಬರೇ ಇಬ್ಬರು ಅತಿರಥರಿದ್ದಾರೆಂದು ಕೇಳಿದ್ದೇನೆ. ಅವರಲ್ಲಿ ಮಹಾಬಾಹುವಾದ ಪ್ರದ್ಯುಮ್ನನೊಬ್ಬನು-ಎರಡನೆಯವನು ವಿಖ್ಯಾತನಾದ ನೀನೇ ಆಗಿರುವೆ. ಅಸ್ತ್ರವಿದ್ಯೆಯಲ್ಲಿ ನೀನು ಶ್ರೀಮನ್ನಾರಾಯಣನಿಗೆ ಸಮಾನನಾಗಿರುವೆ. ಬಲದಲ್ಲಿ ಸಂಕರ್ಷಣನಿಗೆ ಸಮಾನನು. ಪರಾಕ್ರಮದಲ್ಲಿ ನೀನು ಧನಂಜಯನಿಗೆ ಸಮಾನನಾಗಿರುವೆ. ಭೀಷ್ಮ-ದ್ರೋಣರಿಬ್ಬರನ್ನು ಬಿಟ್ಟರೆ ಸಕಲವಿಧವಾದ ಯುದ್ಧಗಳಲ್ಲಿಯೂ ವಿಶಾರದನಾಗಿರತಕ್ಕವನು ಪುರುಷವ್ಯಾಘ್ರನಾದ ನೀನೊಬ್ಬನೇ–ಎಂದು ಲೋಕದಲ್ಲಿ ಸತ್ಪುರುಷರು ಹೇಳುತ್ತಾರೆ. ಮಾಧವ! ಸಾತ್ಯಕಿಗೆ ಅಸಾಧ್ಯವೆನಿಸಿದ ಕಾರ್ಯವೇ ಇಲ್ಲವೆಂದು ಲೋಕದಲ್ಲಿ ಎಲ್ಲರೂ ಹೇಳುತ್ತಾರೆ. ಈ ಸದ್ಭಾವನೆಯು ಲೋಕದ ಜನರೆಲ್ಲರಿಗೂ ಇದೆ. ನನಗೂ ಇದೆ. ಪಾರ್ಥನಿಗೂ ಇದೆ. ಮಹಾಬಲನೇ! ಆದುದರಿಂದ ನಾನು ಈ ಹಿಂದೆ ಏನೆಂದು ಹೇಳಿದೆನೋ ಅದರಂತೆಯೇ ಮಾಡು. ನನ್ನ ಮಾತಿಗೆ ವಿರೋಧವಾದ ರೀತಿಯಲ್ಲಿ ಕಾರ್ಯಮಾಡುವುದು ನಿನಗೆ ಉಚಿತವೆನಿಸುವುದಿಲ್ಲ. ಪ್ರಿಯವಾದ ಪ್ರಾಣಗಳ ಮೇಲಿನ ವ್ಯಾಮೋಹವನ್ನು ಸಂಪೂರ್ಣವಾಗಿ ತೊರೆದು ಸ್ವಲ್ಪವಾದರೂ ಭಯವೇ ಇಲ್ಲದವನಂತೆ ನೀನು ರಣಾಂಗಣದಲ್ಲಿ ಸಂಚರಿಸು. ಶೈನೇಯ! ದಶಾರ್ಹಕುಲದ ವೀರರೆಂದಿಗೂ ಯುದ್ಧದ ಸಮಯದಲ್ಲಿ ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳಲು ಆಸಕ್ತರಾಗಿರತಕ್ಕವರಲ್ಲ. ಯುದ್ಧಮಾಡದೆಯೇ ಇರುವುದು; ರಣಾಂಗಣದಲ್ಲಿ ಸ್ಥಿರವಾಗಿ ನಿಲ್ಲದೇ ಇರುವುದು; ರಣರಂಗವನ್ನು ಬಿಟ್ಟೋಡುವುದು–ಇವು ಹೇಡಿಗಳ ಮತ್ತು ದುಷ್ಟಪುರುಷರ ಮಾರ್ಗವಾಗಿದೆ. ಆದರೆ ಈ ಮಾರ್ಗವು ದಶಾರ್ಹಕುಲ ವೀರರಿಂದ ಸೇವಿಸಲ್ಪಡುತಕ್ಕುದಲ್ಲ. ಅವರೆಂದಿಗೂ ಇಂತಹ ಕುತ್ಸಿತವಾದ

ಮಾರ್ಗವನ್ನು ಹಿಡಿದು ಹೋಗತಕ್ಕವರಲ್ಲ. ಮಗು! ಶಿನಿಪುಂಗವ! ನಿನಗೆ ಅರ್ಜುನನು ಗುರುವಾಗಿದ್ದಾನೆ. ನಿನಗೂ ಮತ್ತು ಧೀಮಂತನಾದ ಪಾರ್ಥನಿಗೂ ವಾಸುದೇವನು ಗುರುವಾಗಿದ್ದಾನೆ. ಈ ಎರಡು ಕಾರಣಗಳಿಂದ ನಾನು ನಿನ್ನನ್ನೇ ಈ ಕಾರ್ಯಮಾಡಲು ನಿರ್ದೇಶಿಸುತ್ತಿದ್ದೇನೆ. ನನ್ನ ಮಾತನ್ನು ಯಾವುದೇ ಕಾರಣದಿಂದಲೂ ಅನಾದರಣೆ ಮಾಡಬೇಡ. ಏಕೆಂದರೆ : ನಾನು ನಿನ್ನ ಗುರುವಿಗೂ ಗುರುವಾಗಿದ್ದೇನೆ. ನೀನು ಅರ್ಜುನನ ಸಹಾಯಕ್ಕೆ ಹೋಗಬೇಕೆಂಬುದು ಶ್ರೀಕೃಷ್ಣನ ಅಭಿಮತವೂ ಆಗಿದೆ; ನನ್ನ ಅಭಿಮತವೂ ಆಗಿದೆ; ಎಲ್ಲಕ್ಕಿಂತಲೂ ಮಿಗಿಲಾಗಿ ಅರ್ಜುನನ ಅಭಿಮತವೂ ಇದೇ ಆಗಿದೆ. ನಿನ್ನೊಡನೆ ನಾನು ಸತ್ಯವಾದ ಈ ಮಾತನ್ನು ಹೇಳಿದ್ದೇನೆ. ಆದುದರಿಂದ ಧನಂಜಯನೆಲ್ಲಿರುವನೋ ಅಲ್ಲಿಗೆ ನೀನೀಗಲೇ ಹೋಗು. ಸತ್ಯಪರಾಕ್ರಮನೇ! ನೀನು ನನ್ನ ಈ ಮಾತನ್ನು ಗೌರವಿಸಿ ದುರ್ಮತಿಯಾದ ದುರ್ಯೋಧನನ ಸೇನೆಯನ್ನು ಈಗಲೇ ಪ್ರವೇಶಿಸು. ಸಾತ್ವತ! ಸೇನೆಯೊಳಗೆ ಪ್ರವೇಶಿಸಿ ಯಥಾಯೋಗ್ಯವಾಗಿ ಎಲ್ಲ ಮಹಾರಥರೊಡನೆಯೂ ಯುದ್ಧದಲ್ಲಿ ತೊಡಗಿ ನಿನಗೆ ಅನುರೂಪವಾದ ಪರಾಕ್ರಮವನ್ನು ಪ್ರದರ್ಶಿಸು."

೧೧೦ನೆಯ ಅಧ್ಯಾಯವು ಮುಗಿಯಿತು.

೧೧೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿ-ಯುಧಿಷ್ಠಿರರ ಸಂಭಾಷಣೆ

ಸಂಜಯನು ಸಾತ್ಯಕಿ-ಯುಧಿಷ್ಠಿರರ ಸಂಭಾಷಣೆಯನ್ನು ಮುಂದುವರಿಸಿ ಹೇಳುತ್ತಾನೆ :

"ಮಹಾರಾಜ! ಪ್ರೀತಿಯುಕ್ತವಾದ, ಮನೋಜ್ಞವಾದ, ಮಧುರಾಕ್ಷರ ಯುಕ್ತವಾದ, ಕಾಲೋಚಿತವಾದ, ವಿಚಿತ್ರವಾದ (ಅದ್ಭುತವಾದ), ನ್ಯಾಯಸಮ್ಮತವಾದ ಧರ್ಮರಾಜನ ಮಾತುಗಳನ್ನು ಕೇಳಿ ಶಿನಿಶ್ರೇಷ್ಠನಾದ ಸಾತ್ಯಕಿಯು ಪ್ರತ್ಯುತ್ತರಿಸಿದನು:

"ಅಚ್ಯುತನೇ! (ಯಾವಾಗಲೂ ಧರ್ಮಮಾರ್ಗದಿಂದ ಚ್ಯುತನಾಗದವನೇ!) ನೀನು ಹೇಳಿದ ಎಲ್ಲ ಮಾತುಗಳನ್ನೂ ನಾನು ಗಮನವಿಟ್ಟು ಕೇಳಿದೆನು.

ಅರ್ಜುನನಿಗೋಸ್ಕರವಾಗಿ ನೀನು ಹೇಳಿದ ಮಾತುಗಳು ನ್ಯಾಯಯುಕ್ತ ವಾಗಿವೆ; ಅದ್ಭುತವಾಗಿವೆ ಮತ್ತು ಯಶಸ್ಸನ್ನು ಉಂಟುಮಾಡತಕ್ಕುವುಗಳೂ ಆಗಿವೆ. ರಾಜೇಂದ್ರ! ಇಂತಹ ಸಮಯದಲ್ಲಿ ನನ್ನಂತಹ ಪ್ರಿಯನಾದವನನ್ನು ಮತ್ತು ಸಮ್ಮತನಾದವನನ್ನು ನೋಡಿ ಯಾವ ಮಾತನ್ನು ಹೇಳಬೇಕೋ-ಅದೇ ಮಾತನ್ನೇ ನೀನೂ ನನ್ನೊಡನೆ ಆಡಿರುವೆ. ನೀನು ಪಾರ್ಥನನ್ನು ಕಂಡಾಗ ಯಾವ ಮಾತನ್ನು ಹೇಳುತ್ತಿದ್ದೆಯೋ ಮತ್ತು ಎಂತಹ ಮಹತ್ತ್ವಪೂರ್ಣವಾದ ಹೊಣೆಗಾರಿಕೆಯನ್ನು ಅವನಿಗೆ ವಹಿಸಿಕೊಡುತ್ತಿದ್ದೆಯೋ ಅದೇ ರೀತಿಯಲ್ಲಿ ನನ್ನೊಡನೆಯೂ ನೀನು ಮಾತನಾಡಬಹುದಾಗಿದೆ ಮತ್ತು ನಿನಗೆ ಸೂಕ್ತ ತೋರಿದ ರೀತಿಯಲ್ಲಿ ಯಾವ ಹೊಣೆಗಾರಿಕೆಯನ್ನಾದರೂ ನನಗೆ ವಹಿಸಬಹುದಾಗಿದೆ. ನನಗೆ ಧನಂಜಯನ ಹಿತಸಾಧನೆಯು ಮುಖ್ಯವೇ ಹೊರತು-ನನ್ನ ಪ್ರಾಣಗಳ ರಕ್ಷಣೆಯು ಯಾವುದೇ ಕಾರಣದಿಂದಲೂ ಮುಖ್ಯವಲ್ಲ. ನಿನ್ನಿಂದ ಆಜ್ಞಪ್ತನಾದ ನಾನು ಯುದ್ಧದಲ್ಲಿ ಯಾವ ಕಾರ್ಯವನ್ನು ತಾನೇ ಮಾಡದೇ ಇದ್ದೇನು? ನಿನ್ನಿಂದ ಆಜ್ಞಪ್ತನಾದರೆ ನಾನು ದೇವಾಸುರ-ಮಾನವರಿಂದ ಕೂಡಿದ ಮೂರು ಲೋಕಗಳನ್ನೇ ಎದುರಿಸಿ ಯುದ್ಧಮಾಡುತ್ತೇನೆ. ಹೀಗಿರುವಾಗ ಸುದುರ್ಬಲರಾದ ಈ ಕೌರವರೊಡನೆ ಯುದ್ಧಮಾಡುವುದರಲ್ಲಿ ವಿಶೇಷವೇನಿದೆ? ಇಂದು ನಾನು ರಣಾಂಗಣದಲ್ಲಿ ನಾಲ್ಕು ದಿಕ್ಕುಗಳಿಗೂ ನುಗ್ಗಿ ಸುಯೋಧನನ ಸೈನ್ಯದೊಡನೆ ಯುದ್ಧಮಾಡುತ್ತೇನೆ ಮತ್ತು ಅವರನ್ನು ಜಯಿಸುತ್ತೇನೆ. ಸತ್ಯವಾದ ಈ ಮಾತನ್ನು ನಿನ್ನೊಡನೆ ಹೇಳುತ್ತಿದ್ದೇನೆ. ಮಹಾರಾಜ! ಕಾರ್ಯಚತುರನಾದ ನಾನು ಕುಶಲಿಯಾದ ಧನಂಜಯನನ್ನು ಸೇರಿ ಜಯದ್ರಥನು ಹತನಾದನಂತರವೇ ನಿನ್ನ ಸಮೀಪಕ್ಕೆ ಬರುತ್ತೇನೆ. ಆದರೆ, ನರೇಶ್ವರ! ಇಂದು ಪ್ರಾತಃಕಾಲ ಯುದ್ಧಕ್ಕೆ ಹೊರಡುವ ಮೊದಲು ವಾಸುದೇವನು ಹೇಳಿದ ಮಾತುಗಳನ್ನೂ ಮತ್ತು ಮೇಧಾವಿಯಾದ ಅರ್ಜುನನು ಹೇಳಿದ ಮಾತುಗಳನ್ನೂ ನಿನ್ನೊಡನೆ ವಿಜ್ಞಾಪಿಸಿಕೊಳ್ಳುವುದು ನನ್ನ ಮುಖ್ಯವಾದ ಮತ್ತು ಮೊದಲನೆಯ ಕರ್ತವ್ಯವಾಗಿದೆ. ಅರ್ಜುನನು ಎಲ್ಲ ಸೈನ್ಯಗಳ ಮಧ್ಯಭಾಗದಲ್ಲಿ ವಾಸುದೇವನೂ ಕೇಳುತ್ತಿದ್ದಂತೆಯೇ ನಾನು ಮುಂದೆ ಹೇಳಲಿರುವ ಮಾತುಗಳನ್ನು ಅನೇಕ ಬಾರಿ ಹೇಳಿದನು ಮತ್ತು ಆ ದೃಢವಾದ ಮಾತುಗಳಿಂದಲೇ ಅವನು ನನ್ನನ್ನು ಬಂಧಿಸಿಯೂ ಬಿಟ್ಟಿದ್ದಾನೆ.

**ಅದ್ಯ ಮಾಧವ ರಾಜಾನಮಪ್ರಮತ್ತೋಽನುಪಾಲಯ ।**
**ಆರ್ಯಾಂ ಯುದ್ಧೇ ಮತಿಂ ಕೃತ್ವಾ ಯಾವದ್ಧನ್ಮಿ ಜಯದ್ರಥಮ್॥**

"ಮಾಧವ! ನಾನು ಜಯದ್ರಥನನ್ನು ಸಂಹರಿಸಿ ಹಿಂದಿರುಗಿ ಬರುವವರೆಗೂ ಯುದ್ಧದಲ್ಲಿ ನೀನು ಶ್ರೇಷ್ಠವಾದ ಬುದ್ಧಿಯನ್ನು ಆಶ್ರಯಿಸಿ (ಬುದ್ಧಿವಂತಿಕೆಯಿಂದ) ಅಪ್ರಮತ್ತನಾಗಿ ರಾಜನನ್ನು ರಕ್ಷಿಸುತ್ತಿರು.

**ತ್ವಯಿ ಚಾಹಂ ಮಹಾಬಾಹೋ ಪ್ರದ್ಯುಮ್ನೇ ವಾ ಮಹಾರಥೇ ।**
**ನೃಪಂ ನಿಕ್ಷಿಪ್ಯ ಗಚ್ಛೇಯಂ ನಿರಪೇಕ್ಷೋ ಜಯದ್ರಥಮ್ ॥೧೨॥**

ಮಹಾಬಾಹುವೇ! ನಿನ್ನಲ್ಲಿ ಅಥವಾ ಮಹಾಬಾಹುವಾದ ಪ್ರದ್ಯುಮ್ನನಲ್ಲಿ ರಾಜನನ್ನು ನಾನು ನ್ಯಾಸರೂಪದಲ್ಲಿಟ್ಟು ನಿರಪೇಕ್ಷನಾಗಿ (ನಿಶ್ಚಿಂತನಾಗಿ) ಜಯದ್ರಥನ ಬಳಿಗೆ ಹೋಗಬಲ್ಲೆನು.

**ಜಾನೀಷೇ ಹಿ ರಣೇ ದ್ರೋಣಂ ರಭಸಂ ಶ್ರೇಷ್ಠಸಮ್ಮತಮ್।**
**ಪ್ರತಿಜ್ಞಾ ಚಾಪಿ ತೇ ನಿತ್ಯಂ ಶ್ರುತಾ ದ್ರೋಣಸ್ಯ ಮಾಧವ ॥೧೩॥**

ಮಾಧವ! ಶ್ರೇಷ್ಠಸಮ್ಮತರಾದ (ಶ್ರೇಷ್ಠರಿಂದ ಸಮ್ಮಾನ್ಯರಾದ) ದ್ರೋಣರು ಯುದ್ಧದಲ್ಲಿ ಎಷ್ಟು ರಭಸಯುಕ್ತರಾಗಿ ಯುದ್ಧಮಾಡುವ ರೆಂಬುದನ್ನು ನೀನೂ ತಿಳಿದವನಾಗಿರುವೆ. ದ್ರೋಣರು ನಿತ್ಯವೂ (ಧರ್ಮರಾಜನ ಜೀವಗ್ರಾಹಕ್ಕಾಗಿ) ಮಾಡುತ್ತಿರುವ ಪ್ರತಿಜ್ಞೆಯನ್ನೂ ನೀನು ಕೇಳಿಯೇ ಇರುವೆ.

ದ್ರೋಣರು ಧರ್ಮರಾಜನನ್ನು ಬಂದಿಯನ್ನಾಗಿ ಮಾಡಲು ಬಹಳ ಆಸಕ್ತರಾಗಿದ್ದಾರೆ. ಮೇಲಾಗಿ ಯುದ್ಧದಲ್ಲಿ ಯುಧಿಷ್ಠಿರನನ್ನು ನಿಗ್ರಹಿಸಲು ಅವರು ಸಮರ್ಥರೂ ಆಗಿದ್ದಾರೆ. ಇಂತಹ ಸಂದರ್ಭದಲ್ಲಿ ನರೋತ್ತಮನಾದ ಧರ್ಮರಾಜನನ್ನು ನಿನ್ನ ರಕ್ಷಣೆಗೊಪ್ಪಿಸಿ ನಾನೀಗ ಸೈಂಧವನನ್ನು ಸಂಹಾರಮಾಡಲು ಹೋಗುತ್ತಿದ್ದೇನೆ. ದ್ರೋಣರೇನಾದರೂ ಯುಧಿಷ್ಠಿರನನ್ನು ಬಲಾತ್ಕಾರದಿಂದ ಹಿಡಿಯದಿದ್ದರೆ ನಾನು ಯುದ್ಧದಲ್ಲಿ ಜಯದ್ರಥನನ್ನು ಸಂಹರಿಸಿ ಸಾಧ್ಯವಾದಷ್ಟು ಬೇಗ ಬಂದುಬಿಡುತ್ತೇನೆ.

**ನಿಗೃಹೀತೇ ನರಶ್ರೇಷ್ಠೇ ಭಾರದ್ವಾಜೇನ ಮಾಧವ।**
**ಸೈನ್ಧವಸ್ಯ ವಧೋ ನ ಸ್ಯಾನ್ಮಮಾಪ್ರೀತಿಸ್ತಥಾ ಭವೇತ್ ॥೧೭॥**

ನಾನು ಸೈಂಧವನನ್ನು ನನ್ನ ಪ್ರತಿಜ್ಞಾನುಸಾರವಾಗಿ ಸಂಹರಿಸಬೇಕಾದರೆ ಯುಧಿಷ್ಠಿರನು ಇಲ್ಲಿ ಸುರಕ್ಷಿತನಾಗಿ ಇರಲೇಬೇಕು. ಮಾಧವ! ಒಂದು ವೇಳೆ ಭಾರದ್ವಾಜರೇನಾದರೂ ನರಶ್ರೇಷ್ಠನಾದ ಯುಧಿಷ್ಠಿರನನ್ನು ಜೀವಸಹಿತವಾಗಿ ಬಂಧಿಸಿದ್ದೇ ಆದರೆ ನಾನಲ್ಲಿ ನಿಲ್ಲುವುದಕ್ಕೂ ಸಾಧ್ಯವಾಗುವುದಿಲ್ಲ. ಅದರಿಂದ ಸೈಂಧವನ ವಧೆಯೂ ಆಗುವುದಿಲ್ಲ. ಪ್ರತಿಜ್ಞೆಯು ಪೂರ್ಣವಾಗದೇ ಇದ್ದುದಕ್ಕಾಗಿ ನನಗೆ ಅತೀವದುಃಖವೂ ಪ್ರಾಪ್ತವಾಗುತ್ತದೆ. ಸತ್ಯವಾದಿಯಾದ, ನರಶ್ರೇಷ್ಠನಾದ ಯುಧಿಷ್ಠಿರನೇನಾದರೂ ಕೌರವರಿಗೆ ಬಂದಿಯಾದ ಪಕ್ಷದಲ್ಲಿ ದುರ್ಯೋಧನನ ದುಷ್ಟಯೋಜನೆಯಂತೆ ನಾವು ಪುನಃ ಕಾಡಿಗೇ ಹೋಗಬೇಕಾಗುತ್ತದೆ. ಇದು ಸ್ಪಷ್ಟವಾಗಿಯೇ ಇದೆ. ಕ್ರುದ್ಧರಾದ ದ್ರೋಣರು ಯುಧಿಷ್ಠಿರನನ್ನು ಸೆರೆಹಿಡಿದುಬಿಟ್ಟರೆ ನನ್ನ ವಿಜಯವೂ ಸಹ ವ್ಯರ್ಥವೇ ಆಗುತ್ತದೆ. (ಯುಧಿಷ್ಠಿರನನ್ನು ಹಿಡಿದಮೇಲೆ ನಾನು ಸೈಂಧವನನ್ನು ಸಂಹಾರಮಾಡಿ ಬಂದರೂ ಅದರಿಂದ ಪ್ರಯೋಜನವೇನೂ ಆಗುವುದಿಲ್ಲ.) ಮಹಾಬಾಹುವಾದ ಮಾಧವನೇ! ಆದುದರಿಂದ ನನ್ನ ಪ್ರೀತಿಗಾಗಿ, ನಮ್ಮಗಳ ಜಯಾರ್ಥವಾಗಿ, ಯಶಸ್ಸಿನ ವೃದ್ಧಿಗಾಗಿ ಯುದ್ಧಸಮಯದಲ್ಲಿ ನೀನು ಯುಧಿಷ್ಠಿರರಾಜನನ್ನು ರಕ್ಷಣೆಮಾಡು."

ಧರ್ಮರಾಜ! ಭಾರದ್ವಾಜರ ಭಯವು ನಿತ್ಯವೂ ಇದ್ದೇ ಇರುವುದೆಂದು ಭಾವಿಸಿರುವ ಅರ್ಜುನನು ನನ್ನೊಡನೆ ಹೀಗೆ ಹೇಳಿ ನಿನ್ನನ್ನು ನ್ಯಾಸಭೂತವಾಗಿ ನನ್ನಲ್ಲಿರಿಸಿದ್ದಾನೆ. (ನಿನ್ನ ರಕ್ಷಣೆಯ ಸಂಪೂರ್ಣಭಾರವನ್ನೂ ನನಗೆ ವಹಿಸಿ ಹೋಗಿದ್ದಾನೆ.) ದ್ರೋಣರು ಯುದ್ಧಮಾಡುವುದನ್ನೂ ನಾನು ಅನುದಿನವೂ ನೋಡುತ್ತಲೇ ಇದ್ದೇನೆ. ರುಕ್ಮಿಣಿಯ ಮಗನಾದ ಪ್ರದ್ಯುಮ್ನನ ಹೊರತಾಗಿ ಮತ್ತಾರೂ ದ್ರೋಣರನ್ನು ಎದುರಿಸಿನಿಂತು ಯುದ್ಧಮಾಡಲಾರರು. ಅರ್ಜುನನು ನನ್ನನ್ನೂ ಸಹ ಧೀಮಂತರಾದ ದ್ರೋಣರನ್ನು ಎದುರಿಸಿನಿಂತು ಯುದ್ಧಮಾಡಲು ಸಮರ್ಥನೆಂದೇ ಭಾವಿಸಿದ್ದಾನೆ. ಆದುದರಿಂದ ನಾನು ನನಗೆ ಆಚಾರ್ಯನಾದ ಅರ್ಜುನನ ಅಭಿಪ್ರಾಯವನ್ನಾಗಲೀ, ಅವನ ಮಾತನ್ನಾಗಲೀ ಹಿಂದಕ್ಕೆ ಹಾಕಲು (ತೆಗೆದುಹಾಕಲು) ಉತ್ಸಾಹಿತನಾಗಿಲ್ಲ. ಈ ಕಾರಣ ದಿಂದಲೇ ನಿನ್ನನ್ನು ಪರಿತ್ಯಜಿಸಿ ಹೋಗುವುದೂ ನನಗೆ ಇಷ್ಟವಿಲ್ಲ. ದ್ರೋಣರು ಅಭೇದ್ಯವಾದ ಕವಚದಿಂದ ಸುರಕ್ಷಿತರಾಗಿದ್ದಾರೆ. ಮೇಲಾಗಿ ಅವರು

ಲಘುಹಸ್ತರು. (ಅಸಾಧಾರಣವಾದ ಕೈಚಳಕವುಳ್ಳವರು.) ಅವರು ನಿನ್ನನ್ನು ಬಂಧಿಸಿ–ಶಿಶುವು ದಾರಕಟ್ಟಿದ ಪಕ್ಷಿಯೊಡನೆ ಆಟವಾಡುವಂತೆ–ಆಟ ವಾಡಿಯಾರು. ಒಂದು ವೇಳೆ ಕೃಷ್ಣನ ಮಗನಾದ ಮಕರಧ್ವಜನಾದ ಪ್ರದ್ಯುಮ್ನನೇನಾದರೂ ಇಲ್ಲಿ ಇದ್ದಿದ್ದರೆ ನಿನ್ನ ರಕ್ಷಣೆಯ ಭಾರವನ್ನು ಅವನಿಗೆ ಒಪ್ಪಿಸಿಬಿಡುತ್ತಿದ್ದೆನು. ಅರ್ಜುನನು ನಿನ್ನನ್ನು ರಕ್ಷಿಸುತ್ತಿದ್ದಂತೆಯೇ ಪ್ರದ್ಯುಮ್ನನೂ ರಕ್ಷಿಸುತ್ತಿದ್ದನು. ನಾನೆಷ್ಟು ಹೇಳಿದರೂ ಅರ್ಜುನನು ಇರುವ ಕಡೆಗೆ ನಾನು ಹೋಗಬೇಕೆಂಬುದೇ ನಿನ್ನ ಖಚಿತವಾದ ಅಭಿಪ್ರಾಯವಾದರೆ ನಿನ್ನ ರಕ್ಷಣೆಯ ವ್ಯವಸ್ಥೆಯನ್ನು ಮೊದಲು ಏರ್ಪಡಿಸು. ನಾನು ಅಲ್ಲಿಗೆ ಹೊರಟು ಹೋದನಂತರ ದ್ರೋಣರನ್ನು ಎದುರಿಸಿ ನಿನ್ನ ರಕ್ಷಣೆಯನ್ನು ಯಾರು ಮಾಡುತ್ತಾರೆಂಬುದನ್ನು ಹೇಳು. ನಿನ್ನ ರಕ್ಷಣೆಯ ವ್ಯವಸ್ಥೆಯಾದನಂತರ ನಾನು ಪಾರ್ಥನಲ್ಲಿಗೆ ಹೋಗುತ್ತೇನೆ. ಮತ್ತೊಂದು ವಿಷಯವನ್ನೂ ನಿನಗೆ ಹೇಳಬಯಸುತ್ತೇನೆ ಮಹಾರಾಜ! ಅರ್ಜುನನ ವಿಷಯದಲ್ಲಿ ನೀನು ಸ್ವಲ್ಪವಾದರೂ ಭಯಪಡುವ ಕಾರಣವಿಲ್ಲ. ಮಹಾಬಾಹುವಾದ ಅರ್ಜುನನು ಯಾವುದೇ ಕಾರಣದಿಂದಲೂ, ಯಾವುದೇ ಕಾಲದಲ್ಲಿಯೂ ಒಂದು ಹೊಣೆಗಾರಿಕೆಯನ್ನು ವಹಿಸಿಕೊಂಡನಂತರ ವಿಜಯಿಯಾಗಿ ಹಿಂದಿರುಗುವನೇ ಹೊರತು ವಿನಾಶಹೊಂದುವುದಿಲ್ಲ. ಸೌವೀರಯೋಧರೇ ಆಗಲೀ, ಸಿಂಧು-ಪೌರವಯೋಧರೇ ಆಗಲೀ, ದಕ್ಷಿಣೋತ್ತರ ದೇಶಗಳ ಯೋಧರೇ ಆಗಲೀ, ಸಮರ್ಥರಥಿಕರೆಂದು ಪ್ರಖ್ಯಾತರಾಗಿರುವ ಕರ್ಣ ಪ್ರಮುಖರಾದ ಮಹಾರಥರೇ ಆಗಲೀ ಕ್ರುದ್ಧನಾದ ಅರ್ಜುನನ ಹದಿನಾರನೆಯ ಒಂದಂಶಕ್ಕೂ ಸರಿದೂಗಲಾರರು. ಸುರಾಸುರ-ಮಾನವ ರಿಂದಲೂ, ರಾಕ್ಷಸಗಣಗಳಿಂದಲೂ, ಕಿನ್ನರ-ಮಹೋರಗರಿಂದಲೂ ಕೂಡಿರುವ ಸ್ಥಾವರ-ಜಂಗಮಯುಕ್ತವಾದ ಈ ಭೂಮಂಡಲವೇ ಒಟ್ಟಾಗಿ ಸೇರಿಬಂದರೂ ಯುದ್ಧದಲ್ಲಿ ಪಾರ್ಥನನ್ನು ಎದುರಿಸಿ ನಿಲ್ಲಲಾರದು. ಈ ವಿಷಯವನ್ನು ನೀನು ಮನಗಂಡು ಧನಂಜಯನ ವಿಷಯದಲ್ಲಿ ನಿನಗಿರುವ ಭಯವನ್ನು ದೂರೀಕರಿಸು.

**ಯತ್ರ ವೀರೌ ಮಹೇಷ್ವಾಸೌ ಕೃಷ್ಣೌ ಸತ್ಯಪರಾಕ್ರಮೌ।**
**ನ ತತ್ರ ಕರ್ಮಣೋ ವ್ಯಾಪತ್ಕಥಂಚಿದಪಿ ವಿದ್ಯತೇ ॥೩೨॥**

ಎಲ್ಲಿ ಮಹಾಧನುಷ್ಮಂತರಾದ, ಸತ್ಯಪರಾಕ್ರಮರಾದ, ವೀರರಾದ ಕೃಷ್ಣರಿರುತ್ತಾರೆಯೋ-ಅಲ್ಲಿ ಯಾವುದೇ ಕಾರಣದಿಂದಲೂ ಉದ್ದೇಶಿಸಿದ ಕಾರ್ಯಕ್ಕೆ ವ್ಯಾಘಾತವುಂಟಾಗುವುದಿಲ್ಲ.

**ದೈವಂ ಕೃತಾಸ್ತ್ರತಾಂ ಯೋಗಮಮರ್ಷಮಪಿ ಚಾಹವೇ ।**
**ಕೃತಜ್ಞತಾಂ ದಯಾಂ ಚೈವ ಭ್ರಾತುಸ್ತ್ವಮನುಚಿನ್ತಯ ॥೩೩॥**

ಮಹಾರಾಜ! ನಿನ್ನ ತಮ್ಮನಲ್ಲಿರುವ ದೈವೀಶಕ್ತಿ, ಅಸ್ತ್ರವಿದ್ಯೆಯಲ್ಲಿ ಅವನಿಗಿರುವ ನೈಪುಣ್ಯ, ಯುದ್ಧದ ಸಂದರ್ಭದಲ್ಲಿ ಅವನು ಯೋಜಿಸುವ ಉಪಾಯ, ಯುದ್ಧಮಾಡುವ ಸಮಯದಲ್ಲಿ ಅವನಿಗೆ ತಾನೇ ತಾನಾಗಿ ಸಮುದ್ಭೂತವಾಗುವ ಕೋಪ, ಕೃತಜ್ಞತೆ, ದಯೆ-ಇವುಗಳೆಲ್ಲವನ್ನು ಜ್ಞಾಪಿಸಿಕೊ. ಇಂತಹ ಅನುಪಮವಾದ ಗುಣಗಳುಳ್ಳವನು ಯಾವುದೇ ಕಾರಣದಿಂದಲೂ ಪರಾಜಿತನಾಗುವುದಿಲ್ಲವೆಂಬ ಅರಿವು ನಿನಗೇ ಉಂಟಾಗುತ್ತದೆ. ನನ್ನ ಆಚಾರ್ಯನಾದ ಅರ್ಜುನನ ಆಜ್ಞೆಯಂತೆ ಈಗ ನಾನು ನಿನಗೆ ಸಹಾಯಕನಾಗಿರುತ್ತೇನೆ. ನಿನ್ನ ಆಜ್ಞೆಯಂತೆ ನಾನೂ ಅರ್ಜುನನ ಸಮೀಪಕ್ಕೆ ಹೊರಟುಹೋದನಂತರ ದ್ರೋಣರು ವಿಚಿತ್ರಾಸ್ತ್ರಗಳನ್ನು ಪ್ರಯೋಗಿಸುವುದರ ಪರಿಣಾಮವನ್ನೂ ಗಾಢವಾಗಿ ಸಮಾಲೋಚಿಸು. ತಾವು ಮಾಡಿರುವ ಪ್ರತಿಜ್ಞೆಯನ್ನು ಸತ್ಯಪ್ರತಿಜ್ಞೆಯನ್ನಾಗಿಸುವ ಸಲುವಾಗಿ ಆಚಾರ್ಯರು ನಿನ್ನನ್ನು ಬಂಧಿಸಲು ಬಹಳವಾಗಿ ಇಷ್ಟಪಡುತ್ತಿದ್ದಾರೆ. ಯುಧಿಷ್ಠಿರ! ಈ ಕಾರಣದಿಂದ ಆತ್ಮರಕ್ಷಣೆಯ ವ್ಯವಸ್ಥೆಯನ್ನು ಮಾಡು. ನಾನು ಹೊರಟುಹೋದನಂತರ ಯಾರು ನಿನ್ನ ರಕ್ಷಕರಾಗಿರುತ್ತಾರೆ? ಯಾರ ಮೇಲೆ ವಿಶ್ವಾಸವನ್ನಿಟ್ಟು ನಿನ್ನ ರಕ್ಷಣೆಯ ಭಾರವನ್ನು ಅವರಿಗೊಪ್ಪಿಸಿ ಅರ್ಜುನನ ಬಳಿಗೆ ಹೋಗಲಿ? ಆದರೆ ಮಹಾರಾಜ! ಈ ವಿಷಯವನ್ನೂ ನಿನಗೆ ನಾನು ಸ್ಪಷ್ಟವಾಗಿ ಮತ್ತು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಮಹಾಸಮರವು ನಡೆಯುತ್ತಿರುವ ಈ ಸಮಯದಲ್ಲಿ ನಿನ್ನ ರಕ್ಷಣೆಯ ಭಾರವನ್ನು ಸಮರ್ಥನಾದವನಿಗೊಪ್ಪಿಸದೇ ನಾನು ಖಂಡಿತವಾಗಿಯೂ ಎಲ್ಲಿಗೂ ಹೋಗುವುದಿಲ್ಲ. ಬುದ್ಧಿವಂತರಲ್ಲಿ ಶ್ರೇಷ್ಠನಾದವನೇ! ನಾನು ಈಗ ಹೇಳಿರುವ ವಿಷಯಗಳೆಲ್ಲವನ್ನೂ ನಿನ್ನ ಬುದ್ಧಿಯಲ್ಲಿ ಹಲವಾರು ಬಾರಿ ಚರ್ಚಿಸು. ಯಾವುದು ಶ್ರೇಯಸ್ಕರವೆಂಬುದನ್ನು ನಿನ್ನ ಹದಮಾಡಿದ ಬುದ್ಧಿಯ

ಮೂಲಕವಾಗಿ ನಿಶ್ಚಯಿಸು. ಅನಂತರ ನಾನು ಏನು ಮಾಡಬೇಕೆಂಬುದರ ಬಗೆಗೆ ನನಗೆ ಆಜ್ಞೆಯನ್ನು ನೀಡು."

"ಮಾಧವ! ಮಹಾಬಾಹುವೇ! ನೀನು ಹೇಳಿದಂತೆಯೇ ಈಗಿನ ಪರಿಸ್ಥಿತಿಯಿರುವುದೇನೋ ನಿಶ್ಚಯ. ಶ್ವೇತಾಶ್ವರಾದ ದ್ರೋಣರ ವಿಷಯದಲ್ಲಿ ನೀನೆಷ್ಟೇ ನನಗೆ ಧೈರ್ಯ ಹೇಳಿದರೂ ಅವರ ಸಂಬಂಧವಾಗಿ ನನ್ನ ಮನಸ್ಸಿನಲ್ಲಿ ಹುಟ್ಟಿರುವ ಆತಂಕವು ಮಾತ್ರ ದೂರವಾಗುತ್ತಿಲ್ಲ. ಅವರ ವಿಷಯದಲ್ಲಿ ನಾನು ನಿಶ್ಚಿಂತನಾಗಿ ಕುಳಿತಿರಲು ಸಾಧ್ಯವಾಗುತ್ತಿಲ್ಲ. ನನ್ನ ರಕ್ಷಣೆಗೆ ನಾನೇ ಸಾಕಷ್ಟು ಪ್ರಯತ್ನಪಡುತ್ತೇನೆ. ನನ್ನಿಂದ ಅನುಜ್ಞಾತನಾದ ನೀನು ಈಗಲೇ ಧನಂಜಯನಿರುವ ಕಡೆಗೆ ಹೊರಟುಹೋಗು.

ನನ್ನ ಆತ್ಮಸಂರಕ್ಷಣೆ ಮತ್ತು ಸಹಾಯಕನಾಗಿ ನೀನು ಅರ್ಜುನನ ಸಮೀಪಕ್ಕೆ ಹೋಗುವುದು–ಈ ಎರಡನ್ನೂ ನಾನು ನನ್ನ ಬುದ್ಧಿಯಿಂದ ಸಂಪೂರ್ಣವಾಗಿ ವಿಮರ್ಶಿಸಿದ್ದೇನೆ. ನೀನು ಅರ್ಜುನನ ಸಹಾಯಕ್ಕೆ ಹೋಗುವುದೇ ನನಗೆ ಈ ಸಮಯದಲ್ಲಿ ಉಚಿತವಾಗಿ ತೋರುತ್ತಿದೆ. ಆದುದರಿಂದ ಅರ್ಜುನನೆಲ್ಲಿರುವನೋ ಅಲ್ಲಿಗೆ ಹೋಗಲು ಸಿದ್ಧತೆಯನ್ನು ಮಾಡಿಕೊ. ಮಹಾಬಲನಾದ ಭೀಮಸೇನನೇ ನನ್ನ ರಕ್ಷಣೆಯನ್ನು ಮಾಡು ತ್ತಾನೆ. ಸೋದರರಿಂದೊಡಗೂಡಿದ ಧೃಷ್ಟದ್ಯುಮ್ನ, ಮಹಾಬಲಿಷ್ಠರಾದ ಅನೇಕಭೂಪಾಲರು, ದ್ರೌಪದಿಯ ಐವರು ಮಕ್ಕಳು–ಇವರೆಲ್ಲರೂ ನನ್ನನ್ನು ಸಂರಕ್ಷಿಸುತ್ತಾರೆ. ಇದರಲ್ಲಿ ಸಂಶಯವೇ ಇಲ್ಲ. ಐವರು ಕೇಕಯ ಸಹೋದರರು, ಘಟೋತ್ಕಚರಾಕ್ಷಸ, ವಿರಾಟ, ದ್ರುಪದ, ಮಹಾರಥನಾದ ಶಿಖಂಡೀ, ನಮ್ಮ ಸೋದರಮಾವನಾದ ಧೃಷ್ಟಕೇತು, ಬಲಿಷ್ಠನಾದ ಕುಂತಿಭೋಜ, ನಕುಲ-ಸಹದೇವರು, ಪಾಂಚಾಲ-ಸೃಂಜಯಯೋಧರು–ಇವರೆಲ್ಲರೂ ಏಕಾಗ್ರಚಿತ್ತರಾಗಿದ್ದುಕೊಂಡು ಅಪ್ರಮತ್ತರಾಗಿ ನನ್ನನ್ನು ಸಂರಕ್ಷಿಸುತ್ತಾರೆ. ಆದುದರಿಂದ ನನ್ನ ರಕ್ಷಣೆಯ ವಿಷಯದಲ್ಲಿ ನೀನು ಸಂಶಯಪಡುವ ಕಾರಣವಿಲ್ಲ. ಆತಂಕಪಡಬೇಕಾದ ಕಾರಣವೂ ಇಲ್ಲ. ಸೈನ್ಯಸಮೇತರಾದ ದ್ರೋಣರಾಗಲೀ, ಕೃತವರ್ಮನಾಗಲೀ–ಈ ಮಹಾರಥ

ರಿಂದ ಸಂರಕ್ಷಿಸಲ್ಪಡುತ್ತಿರುವ ನನ್ನ ಸಮೀಪಕ್ಕೆ ಬರಲೂ ಕೂಡ ಶಕ್ತರಲ್ಲ. ಹೀಗಿರುವಾಗ, ನನ್ನನ್ನು ಪರಾಜಯಗೊಳಿಸಲು ಅವರಿಂದ ಹೇಗೆ ತಾನೇ ಸಾಧ್ಯವಾದೀತು? ಸಮುದ್ರದ ರಭಸವನ್ನು ತೀರಪ್ರದೇಶವೇ ತಡೆದು ನಿಲ್ಲಿಸುವಂತೆ-ಕ್ರುದ್ಧರಾದ ದ್ರೋಣರನ್ನು ಶತ್ರುತಾಪಕನಾದ ಧೃಷ್ಟದ್ಯುಮ್ನನೇ ತನ್ನ ಪರಾಕ್ರಮದಿಂದ ತಡೆದು ನಿಲ್ಲಿಸುತ್ತಾನೆ. ಪರವೀರಹಂತಕನಾದ ಧೃಷ್ಟದ್ಯುಮ್ನನು ರಣಾಂಗಣದ ಯಾವ ಭಾಗದಲ್ಲಿರುತ್ತಾನೆಯೋ–ಅಲ್ಲಿ ನಮ್ಮ ಬಲಿಷ್ಠವಾದ ಸೈನ್ಯವನ್ನು ದ್ರೋಣರು ಎಷ್ಟೇ ಪ್ರಯತ್ನದಿಂದಲೂ ಅತಿಕ್ರಮಿಸಲಾರರು. ಸಾತ್ಯಕೇ! ಧೃಷ್ಟದ್ಯುಮ್ನನು ದ್ರೋಣರನ್ನು ವಿನಾಶ ಮಾಡಲೆಂದೇ ಯಜ್ಞೇಶ್ವರನಿಂದ ಜನ್ಮಪಡೆದಿರುವನು. ಯಜ್ಞೇಶ್ವರನಿಂದ ಹೊರಬರುವಾಗಲೇ ಇವನು ಕವಚ-ಬಾಣ-ಖಡ್ಗ-ಧನುಸ್ಸುಗಳನ್ನೂ ಧರಿಸಿದ್ದನು. ಶ್ರೇಷ್ಠವಾದ ಆಭರಣಗಳಿಂದ ಸಮಲಂಕೃತನಾಗಿದ್ದನು. ನನ್ನ ರಕ್ಷಣೆಯ ವಿಷಯದಲ್ಲಿ ಪೂರ್ಣವಿಶ್ವಾಸವನ್ನಿಟ್ಟುಕೊಂಡು ಹೋಗು. 'ನಾನಿಲ್ಲದಿದ್ದರೆ ಯುಧಿಷ್ಠಿರನ ರಕ್ಷಣೆಯು ಆಗುವುದೋ–ಇಲ್ಲವೋ' ಎಂದು ಭ್ರಾಂತನಾಗಬೇಡ. ಕ್ರುದ್ಧರಾದ ದ್ರೋಣರನ್ನು ಯುದ್ಧದಲ್ಲಿ ಧೃಷ್ಟದ್ಯುಮ್ನನು ಖಂಡಿತವಾಗಿಯೂ ತಡೆದು ನಿಲ್ಲಿಸುತ್ತಾನೆ. ಆದುದರಿಂದ ನೀನು ಈಗಲೇ ಅರ್ಜುನನಿರುವೆಡೆಗೆ ಹೋಗಿಬಾ."

೧೧೧ನೆಯ ಅಧ್ಯಾಯವು ಮುಗಿಯಿತು.

೧೧೨ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಅರ್ಜುನನ ಬಳಿಗೆ ಹೋಗಲು ಸಿದ್ಧತೆಯನ್ನು ಮಾಡಿಕೊಂಡುದು: ಯುಧಿಷ್ಠಿರನು ಸಮ್ಮಾನಪೂರ್ವಕವಾಗಿ ಸಾತ್ಯಕಿಯನ್ನು ಬೀಳ್ಕೊಟ್ಟುದು: ಸಾತ್ಯಕಿಯು ಸ್ವಲ್ಪದೂರ ತನ್ನ ಜೊತೆಯಲ್ಲಿ ಬಂದ ಭೀಮಸೇನನಿಗೆ ಯುಧಿಷ್ಠಿರನ ರಕ್ಷಣೆಯ ವಿಷಯವಾಗಿ ಪುನಃ ಹೇಳಿದುದು

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ:

“ಮಹಾರಾಜ! ಯುಧಿಷ್ಠಿರನ ಒತ್ತಾಯದಿಂದಾಗಿ ಸಾತ್ಯಕಿಯ ಮನಸ್ಸಿನಲ್ಲಿ ನಾನಾವಿಧವಾದ ಯೋಚನೆಗಳು ಹುಟ್ಟಿಕೊಂಡುವು. ಪಾರ್ಥನು ಹೇಳಿದ್ದ ಮಾತನ್ನು ಉಲ್ಲಂಘಿಸಿ ಧರ್ಮರಾಜನನ್ನು ಪರಿತ್ಯಜಿಸಿ ಹೋದು ದಾದರೆ ಅರ್ಜುನನು ಕೋಪಿಸಿಕೊಳ್ಳಬಹುದೆಂದು ಸಾತ್ಯಕಿಯು ಭಯ ಪಟ್ಟನು. ಲೋಕದ ಜನರಿಂದ ತನಗೆ ಅಪವಾದವುಂಟಾಗುವುದೆಂದೂ ಅವನು ಭಾವಿಸಿದನು. ಯದ್ಯಪಿ ಸಾತ್ಯಕಿಯು ಯುಧಿಷ್ಠಿರನ ಒತ್ತಾಯ ದಿಂದಲೇ ಅರ್ಜುನನ ಸಮೀಪಕ್ಕೆ ಹೋಗುತ್ತಿದ್ದರೂ-ನೋಡಿದವರು ಸಾತ್ಯಕಿಯು ಹೆದರಿ ಓಡಿಹೋದನು-ಎಂದು ಹೇಳುವರೆಂಬ ಭಯವೂ ಸಾತ್ಯಕಿಯ ಮನಸ್ಸಿನಲ್ಲುಂಟಾಯಿತು. ಯುದ್ಧದುರ್ಮದನಾದ, ಪುರು ಷರ್ಷಭನಾದ ಸಾತ್ಯಕಿಯು ಹೀಗೆ ಅನೇಕ ಪ್ರಕಾರವಾಗಿ ಚಿಂತಿಸಿ ಕಡೆಗೊಂದು ನಿಶ್ಚಯಕ್ಕೆ ಬಂದವನಾಗಿ ಧರ್ಮರಾಜನೊಡನೆ ಈ ಮಾತನ್ನು ಹೇಳಿದನು:

“ಯುಧಿಷ್ಠಿರಮಹಾರಾಜ! ನಿನ್ನ ರಕ್ಷಣೆಯ ವ್ಯವಸ್ಥೆಯು ಆಗಿರುವುದೆಂದು ನೀನು ಭಾವಿಸುವೆಯಾದರೆ ನಿನಗೆ ಮಂಗಳವಾಗಲಿ. ನಾನು ನಿನ್ನ ಮಾತನ್ನೇ ನಡೆಸಿಕೊಡುತ್ತೇನೆ. ಅರ್ಜುನನನ್ನೇ ಅನುಸರಿಸಿ ಹೋಗುತ್ತೇನೆ. ಈ ಮೂರು ಲೋಕಗಳಲ್ಲಿ ನನಗೆ ಅರ್ಜುನನಿಗಿಂತಲೂ ಪ್ರಿಯತರನಾದವನು ಬೇರೊಬ್ಬನಿಲ್ಲ. ಈ ಮಾತು ಸತ್ಯ. ಅದನ್ನೇ ನಿನಗೆ ಹೇಳುತ್ತಿದ್ದೇನೆ. ಮಾಧವ! ನಿನ್ನ ಸಂದೇಶಾನುಸಾರವಾಗಿ ನಾನು ಪಾರ್ಥನಿರುವ ಸ್ಥಳಕ್ಕೇ ಹೋಗುತ್ತೇನೆ. ನಿನ್ನ ವಿಷಯದಲ್ಲಿಯೂ ಸಹ ನಾನು ‘ನನ್ನ ಕರ್ತವ್ಯವನ್ನು ಪರಿಪಾಲಿಸಲಿಲ್ಲ’-ಎಂದು ಯಾವುದೇ ಕಾರಣದಿಂದಲೂ ಆಗಕೂಡದು. ನರಶ್ರೇಷ್ಠನೇ! ನನ್ನ ಗುರುವಾದ ಅರ್ಜುನನ ಮಾತು ನನಗೆ ಎಷ್ಟು ಮಹತ್ತ್ವಪೂರ್ಣವಾದುದೋ-ಅದೇ ರೀತಿಯಲ್ಲಿ ನಿನ್ನ ಮಾತೂ ಇನ್ನೂ ಹೆಚ್ಚು ಮಹತ್ತ್ವಪೂರ್ಣವಾದುದು. (ಅವನ ಮಾತನ್ನು ಗೌರವಿಸು ತ್ತೇನೆ. ಗುರುವಿಗೂ ಗುರುವಾಗಿರುವ ನಿನ್ನ ಮಾತನ್ನು ಅವನ ಮಾತಿಗಿಂತಲೂ ವಿಶೇಷವಾಗಿಯೇ ಗೌರವಿಸುತ್ತೇನೆ.) ಸೋದರರಿಗೆ ಸಮಾನರಾಗಿರುವ ಕೃಷ್ಣ-ಪಾಂಡವರು ನಿನಗೆ ಪ್ರಿಯವಾದ ಕಾರ್ಯವನ್ನು ಮಾಡಿಕೊಡುವುದರಲ್ಲಿ ನಿರತರಾಗಿದ್ದಾರೆ. ಅವರಿಬ್ಬರಿಗೂ ಪ್ರಿಯವಾದ ಕಾರ್ಯವನ್ನು ಸಾಧನೆ ಮಾಡಿಕೊಡುವುದರಲ್ಲಿ ನಾನು ಸರ್ವದಾ ಸಿದ್ಧನಾಗಿರುವೆನೆಂದು ನೀನು

ಭಾವಿಸು. ನರಪುಂಗವನೇ! ನಿನ್ನ ಆಜ್ಞೆಯನ್ನು ಶಿರಸಾವಹಿಸಿ ಅರ್ಜುನನ ಸಲುವಾಗಿ ದುರ್ಭೇದ್ಯವಾದ ಈ ಕುರುಸೇನೆಯನ್ನೂ ಭೇದಿಸಿಕೊಂಡು ಅರ್ಜುನನ ಬಳಿಗೆ ಹೋಗುತ್ತೇನೆ. ದೊಡ್ಡದಾದ ಮೀನು ಸಮುದ್ರದಲ್ಲಿ ನುಸುಳುವಂತೆ–ಕ್ರುದ್ಧನಾದ ನಾನು ದ್ರೋಣರ ಸೈನ್ಯವನ್ನು ಪ್ರವೇಶಿಸಿ ಎದುರಾಗಿ ಸಿಕ್ಕುವ ಕೌರವಯೋಧರನ್ನು ಧ್ವಂಸಮಾಡುತ್ತಾ, ಜಯದ್ರಥನಿರುವ ಸ್ಥಳಕ್ಕೂ ಹೋಗುತ್ತೇನೆ. ಪಾಂಡುನಂದನನಾದ ಅರ್ಜುನನಿಗೆ ಭಯಪಟ್ಟು ಶ್ರೇಷ್ಠಮಹಾರಥರಾದ ಅಶ್ವತ್ಥಾಮಾ, ಕರ್ಣ, ಕೃಪಾಚಾರ್ಯರು-ಇವರೇ ಮೊದಲಾದವರಿಂದ ರಕ್ಷಿಸಲ್ಪಡುತ್ತಾ ಸೈನ್ಯವನ್ನು ಆಶ್ರಯಿಸಿ ನಿಂತಿರುವ ಜಯದ್ರಥನು ಇರುವ ಸ್ಥಳಕ್ಕೆ ಹೋಗುತ್ತೇನೆ. ಜಯದ್ರಥನ ಸಂಹಾರಕ್ಕೆ ಪ್ರಯತ್ನಿಸುತ್ತಿರುವ ಅರ್ಜುನನು ನಿಂತಿರುವ ಸ್ಥಳವು ಇಲ್ಲಿಗೆ ಮೂರು ಯೋಜನಗಳಷ್ಟು ದೂರವಿರುವುದೆಂದು ಭಾವಿಸಿದ್ದೇನೆ.

ಅರ್ಜುನನು ಮೂರು ಯೋಜನಗಳಷ್ಟು ದೂರದಲ್ಲಿದ್ದರೂ ಸೈಂಧವನ ವಧೆಯಾಗುವ ಮೊದಲೇ ನಾನು ಕೆಚ್ಚೆದೆಯಿಂದ ಕೂಡಿದವನಾಗಿ ಅರ್ಜುನನಿರುವ ಸ್ಥಳಕ್ಕೆ ಹೋಗಿಯೇ ಹೋಗುತ್ತೇನೆ.

**ಅನಾದಿಷ್ಟಸ್ತು ಗುರುಣಾ ಕೋ ನು ಯುಧ್ಯೇತ ಮಾನವಃ।**
**ಆದಿಷ್ಟಸ್ತು ಯಥಾ ರಾಜನ್ಕೋ ನ ಯುಧ್ಯೇತ ಮಾದೃಶಃ ॥೧೪॥**

ಗುರುವಿನಿಂದ ಆದೇಶವನ್ನು ಪಡೆಯದಿದ್ದರೆ ಯಾವ ಮನುಷ್ಯನು ತಾನೇ ಯುದ್ಧಮಾಡುತ್ತಾನೆ? ಗುರುವಿನ ಆದೇಶವನ್ನು ಪಡೆದನಂತರ ನನ್ನಂತಹ ಯಾವನು ತಾನೇ ಯುದ್ಧಮಾಡದೇ ಇರುತ್ತಾನೆ? (ಗುರುವಾದ ಅರ್ಜುನನ ಆದೇಶವಿಲ್ಲದೇ ಇದ್ದುದರಿಂದ ನಾನು ಅಲ್ಲಿಗೆ ಯುದ್ಧಕ್ಕೆ ಹೋಗಲಿಲ್ಲ. ಗುರುವಿಗೂ ಗುರುವಾದ ನೀನು ನಿರ್ದೇಶಿಸುತ್ತಿರುವುದರಿಂದ ಅಲ್ಲಿಗೆ ನಾನು ಯುದ್ಧಕ್ಕೆ ಹೋಗುತ್ತೇನೆ.) ನಾನು ಎಲ್ಲಿಗೆ ಹೋಗಬೇಕಾಗಿರುವುದೋ ಆ ಸ್ಥಳವು ಎಂತಹುದೆಂಬುದನ್ನೂ ನಾನು ತಿಳಿದುಕೊಂಡಿರುತ್ತೇನೆ. ಆ ಸ್ಥಳವು ಹಲಾಯುಧ, ಶಕ್ತ್ಯಾಯುಧ, ಗದೆ, ಪ್ರಾಸ, ಗುರಾಣಿ, ಕತ್ತಿ, ಋಷ್ಟಿ, ತೋಮರ–ಇವೇ ಮೊದಲಾದ ಆಯುಧಗಳಿಂದಲೂ, ಶ್ರೇಷ್ಠವಾದ ಬಾಣಗಳಿಂದಲೂ, ಅಸ್ತ್ರಗಳಿಂದಲೂ, ಧನುಸ್ಸುಗಳಿಂದಲೂ

ತುಂಬಿಹೋಗಿದೆ. ಸಮುದ್ರಪ್ರಾಯವಾಗಿರುವ ಆ ಸೇನಾಸಮುದ್ರವನ್ನು ನಾನು ನನ್ನ ಪರಾಕ್ರಮದಿಂದ ಅಲ್ಲೋಲ-ಕಲ್ಲೋಲಗೊಳಿಸುತ್ತೇನೆ.

ಯುಧಿಷ್ಠಿರ! ನೀನು ಸಾವಿರಾರು ಆನೆಗಳಿಂದ ಕೂಡಿರುವ ಯಾವ ಗಜಾನೀಕವನ್ನು ನೋಡುತ್ತಿರುವೆಯೋ ಅದು ಪಶ್ಚಿಮದಿಕ್ಕಿನ ಅಂಜನದಿಗ್ಗಜದ ಕುಲಕ್ಕೆ ಸೇರಿದ ಆನೆಗಳ ಸೈನ್ಯ. ಆದುದರಿಂದಲೇ ಅವುಗಳಿಗೆ ಅಂಜನಕಗಳೆಂದು ಹೆಸರು. ಮಹಾಬಲಿಷ್ಠವಾದ ಆ ಆನೆಗಳ ಮೇಲೆ ಪ್ರಹಾರಕುಶಲರಾದ ಯುದ್ಧದಲ್ಲಿ ನಿಪುಣರಾದ ಅನೇಕ ಮ್ಲೇಚ್ಛಯೋಧರು ಕುಳಿತಿದ್ದಾರೆ. ಮೇಘಸದೃಶವಾಗಿರುವ, ಮೇಘಗಳು ನೀರನ್ನು ಸುರಿಸು ವಂತೆಯೇ-ಮದೋದಕವನ್ನು ಸುರಿಸುತ್ತಿರುವ ಆ ಆನೆಗಳನ್ನು ಗಜಯೋಧರು ಯುದ್ಧಕ್ಕೆ ಪ್ರಚೋದಿಸಿದರೆ ಅವು ಯುದ್ಧದಿಂದ ಹಿಂದಿರುಗದೇ ಶತ್ರುಗಳ ಸೈನ್ಯವನ್ನು ಧ್ವಂಸಮಾಡುತ್ತಲೇ ಇರುತ್ತವೆ. ಅವುಗಳ ವಿಧ್ವಂಸನಕ್ರಿಯೆಯು ನಿಲ್ಲಬೇಕಾದರೆ ಅವುಗಳ ಸಂಹಾರವಾಗಬೇಕೇ ಹೊರತು ಪರಾಜಯ ಗೊಂಡು ಅವುಗಳು ಯಾವುದೇ ಕಾರಣದಿಂದಲೂ ಯುದ್ಧದಿಂದ ಹಿಮ್ಮೆಟ್ಟುವುದಿಲ್ಲ.

ಮಹಾರಾಜ! ಅತ್ತ ಕಡೆ ಸಾವಿರಾರು ರಥಿಗಳನ್ನೂ ನೋಡುತ್ತಿ ರುವೆಯಲ್ಲವೇ? ಅವರು ರುಕ್ಮರಥರೆಂಬ ಹೆಸರಿನ ಮಹಾರಥರಾದ ರಾಜಪುತ್ರರಾಗಿದ್ದಾರೆ. ಅವರೆಲ್ಲರೂ ರಥಸಂಚಾಲನೆಯಲ್ಲಿಯೂ, ಅಸ್ತ್ರ ಪ್ರಯೋಗದಲ್ಲಿಯೂ ಮತ್ತು ಗಜಸಂಚಾಲನೆಯಲ್ಲಿಯೂ ಮಹಾನಿಪುಣ ರಾಗಿರುತ್ತಾರೆ. ಧನುರ್ವೇದದಲ್ಲಿ ಪಾರಂಗತರಾಗಿದ್ದಾರೆ. ಮುಷ್ಟಿಯುದ್ಧ ಕೋವಿದರು. ಗದಾಯುದ್ಧದಲ್ಲಿ ವಿಶೇಷವಾದ ಪಾಂಡಿತ್ಯವುಳ್ಳವರು. ಮಲ್ಲಯುದ್ಧದಲ್ಲಿಯೂ ಮಹಾನಿಪುಣರು. ಖಡ್ಗಯುದ್ಧದಲ್ಲಿಯೂ ಅವರಿಗೆ ಹೆಚ್ಚಿನ ಪರಿಶ್ರಮವಿದೆ. ಕತ್ತಿ-ಗುರಾಣಿಗಳನ್ನೂ ಹಿಡಿದು ಅವರು ರಣಾಂಗಣದ ಸುತ್ತಲೂ ಮಂಡಲಕ್ರಮದಲ್ಲಿ ತಿರುಗಿ ಶತ್ರುಗಳನ್ನು ಸಂಹಾರಮಾಡಲು ಸಮರ್ಥರಾಗಿದ್ದಾರೆ. ಅವರೆಲ್ಲರೂ ಮಹಾಶೂರರು. ಅಸ್ತ್ರ-ಶಸ್ತ್ರವಿದ್ಯೆಯಲ್ಲಿ ಸಂಪನ್ನರು. ಪರಸ್ಪರ ಸ್ಪರ್ಧೆಯಿಂದ ಶತ್ರುಗಳನ್ನು ಸಂಹಾರಮಾಡುತ್ತಾರೆ. ಅವರು ದೈನಂದಿನಯುದ್ಧದಲ್ಲಿ ತಮ್ಮ ಎದುರಾಳಿಗಳನ್ನು ಜಯಿಸುವ

ಇಚ್ಛೆಯಿಂದಲೇ ಯುದ್ಧಮಾಡುತ್ತಿರುತ್ತಾರೆ. ಕರ್ಣನಿಂದ ನಿರ್ದೇಶಿತರಾದ ಅವರು ಯಾವಾಗಲೂ ದುಃಶಾಸನನನ್ನು ಹಿಂಬಾಲಿಸಿಯೇ ಇರುತ್ತಾರೆ. ವಾಸುದೇವನೂ ಕೂಡ ವಿಖ್ಯಾತರಾದ ಆ ರಥಿಗಳನ್ನು ಪ್ರಶಂಸೆಮಾಡುತ್ತಲೇ ಇರುತ್ತಾನೆ. ಕರ್ಣನ ಆಜ್ಞಾನುವರ್ತಿಗಳಾಗಿರುವ ಅವರು ಅವನಿಗೆ ಯಾವಾಗಲೂ ಪ್ರಿಯವಾದ ಕಾರ್ಯಗಳನ್ನೇ ಮಾಡಲು ಆಸಕ್ತರಾಗಿರುತ್ತಾರೆ.

ಕರ್ಣನ ಮಾತಿನಿಂದಲೇ ಅವರು ಅರ್ಜುನನ ಸಮೀಪದಿಂದ ಇಲ್ಲಿಗೆ ಬಂದಿದ್ದಾರೆ. ಸುದೃಢವಾದ ಕವಚಗಳನ್ನೂ ಮತ್ತು ಧನುಸ್ಸುಗಳನ್ನೂ ಹೊಂದಿರುವ ಅವರು ಯುದ್ಧದಿಂದ ಬಳಲಿಯೂ ಇಲ್ಲ; ಪೀಡಿತರಾಗಿಯೂ ಇಲ್ಲ. ನಿಶ್ಚಯವಾಗಿಯೂ ಅವರು ದುರ್ಯೋಧನನ ಆಜ್ಞಾನುಸಾರವಾಗಿ ನನ್ನೊಡನೆ ಯುದ್ಧಮಾಡಲೆಂದೇ ಬಂದಿದ್ದಾರೆ. ಯುದ್ಧದಲ್ಲಿ ಅವರನ್ನು ಮೊದಲು ಧ್ವಂಸಮಾಡಿ ಅನಂತರ ನಿನಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಸವ್ಯಸಾಚಿಯಿರುವ ಸ್ಥಳಕ್ಕೆ ಹೋಗುತ್ತೇನೆ.

ಮಹಾರಾಜ! ಅತ್ತ ಕಡೆ ಕವಚಗಳಿಂದ ಆಚ್ಛಾದಿತವಾಗಿರುವ ಕಿರಾತ ಸೈನಿಕರಿಂದ ಅಧಿಷ್ಠಿತವಾಗಿರುವ (ಕಿರಾತಸೈನಿಕರನ್ನು ಹೊತ್ತಿರುವ) ಏಳು ನೂರು ಆನೆಗಳನ್ನು ನೀನು ನೋಡುತ್ತಿರುವೆಯಲ್ಲವೇ? ಅರ್ಜುನನು ದಂಡಯಾತ್ರೆಗೆ ಹೋಗಿದ್ದ ಸಮಯದಲ್ಲಿ ಕಿರಾತರಾಜನು ತನ್ನ ಪ್ರಾಣವುಳಿಸಿಕೊಳ್ಳುವ ಇಚ್ಛೆಯಿಂದ ಅರ್ಜುನನೊಡನೆ ಸಂಧಾನ ಮಾಡಿಕೊಂಡು ಸುವರ್ಣಾಭರಣಗಳಿಂದಲೂ, ರತ್ನಗಂಬಳಿಗಳಿಂದಲೂ ಸಮಲಂಕೃತವಾದ ಆ ಏಳುನೂರು ಆನೆಗಳನ್ನೂ ನಿನ್ನ ಸೇವೆಗಾಗಿ ಅರ್ಜುನನೊಡನೆ ಕಳುಹಿಸಿದ್ದನು. ಕಾಲದ ವಿಪರ್ಯಾಸವನ್ನಾದರೂ ನೋಡು, ಯುಧಿಷ್ಠಿರ! ಯಾವ ಗಜಸೈನಿಕರು ಹಿಂದೆ ನಿನ್ನ ಸೇವೆಯಲ್ಲಿ ದೃಢವಾದ ನಿಷ್ಠೆಯಿಂದಿದ್ದರೋ-ಅವರೇ ಈಗ ನಿನ್ನೊಡನೆ ಯುದ್ಧಮಾಡಲು ಬಂದಿದ್ದಾರೆ. ಯುದ್ಧದುರ್ಮದರಾದ ಕಿರಾತರೇ ಆ ಆನೆಗಳನ್ನು ನಿಯಂತ್ರಿಸುವ ಮಾವಟಿಗರೂ ಆಗಿದ್ದಾರೆ. ಗಜಶಿಕ್ಷೆಯನ್ನು ತಿಳಿದವರೂ ಆಗಿದ್ದಾರೆ. ಅವರೆಲ್ಲರೂ ಅಗ್ನಿಸಂಭೂತರು. ಅವರೆಲ್ಲರನ್ನೂ ಹಿಂದೆ ಸವ್ಯಸಾಚಿಯೇ ಪರಾಜಯಗೊಳಿಸಿದ್ದನು. ಈಗ ದುರ್ಯೋಧನನ ವಶ ದಲ್ಲಿರುವ ಮತ್ತು ಅವನ ಆಜ್ಞಾಧಾರಕರಾಗಿರುವ ಅವರು ನನ್ನೊಡನೆ

ಯುದ್ಧಮಾಡಲೆಂದೇ ಸಜ್ಜಾಗಿ ನಿಂತಿದ್ದಾರೆ. ಯುದ್ಧದುರ್ಮದರಾದ ಕಿರಾತರನ್ನು ಯುದ್ಧದಲ್ಲಿ ನಿಶಿತವಾದ ಬಾಣಗಳಿಂದ ಸಂಹರಿಸಿ ಅನಂತರ ಸೈಂಧವನನ್ನು ವಧಿಸಲು ಸತತವಾಗಿ ಪ್ರಯತ್ನಿಸುತ್ತಿರುವ ಪಾರ್ಥನ ಬಳಿಗೆ ಹೋಗುತ್ತೇನೆ.

ಯುಧಿಷ್ಠಿರ! ಕಿರಾತರ ಗಜಸೈನ್ಯದ ಸ್ವಲ್ಪದೂರದಲ್ಲಿ ಮತ್ತೊಂದು ಗಜಾನೀಕವನ್ನು ನೋಡುತ್ತಿರುವೆಯಲ್ಲವೇ! ಆ ಮಹಾಗಜಗಳು *ಅಂಜನವೆಂಬ ದಿಗ್ಗಜದ ವಂಶದಲ್ಲಿ ಹುಟ್ಟಿದುವುಗಳು. ಕಠಿಣ ಸ್ವಭಾವದುವುಗಳು. ಯುದ್ಧಪ್ರಕ್ರಿಯೆಗಳಲ್ಲಿ ಒಳ್ಳೆಯ ಶಿಕ್ಷಣವನ್ನು ಹೊಂದಿರತಕ್ಕುವುಗಳು. ಅವುಗಳು ಮುಖಗಳಿಂದಲೂ, ಗಂಡಸ್ಥಳಗಳಿಂದಲೂ ಮದೋದಕವನ್ನು ಯಥೇಚ್ಛವಾಗಿ ಸುರಿಸುತ್ತಿವೆ. ಸುವರ್ಣಮಯವಾದ ಕವಚಗಳಿಂದ ಆ ಎಲ್ಲ ಆನೆಗಳೂ ಅಲಂಕರಿಸಲ್ಪಟ್ಟಿವೆ. ಯುದ್ಧದಲ್ಲಿ ಐರಾವತಕ್ಕೆ ಸಮಾನವಾಗಿರತಕ್ಕ ಆ ಆನೆಗಳು ಲಕ್ಷ್ಯವನ್ನು ಭೇದಿಸುವುದರಲ್ಲಿ ನೈಪುಣ್ಯವನ್ನು ಹೊಂದಿರುತ್ತವೆ. ಉತ್ತರ ಪರ್ವತದಿಂದ (ಹಿಮಾಚಲಪ್ರದೇಶದಿಂದ) ಬಂದಿರುವ ಆ ಆನೆಗಳ ಮೇಲೆ ಕ್ರೂರಿಗಳಾದ ದಸ್ಯುಗಳು (ದರೋಡೆಕಾರರು) ಕುಳಿತಿದ್ದಾರೆ. ಆ ದಸ್ಯುಗಳು ಬಹಳ ಕ್ರೂರಿಗಳು. ಒಳ್ಳೆಯ ಯೋಧರು. ಅವರು ಕಪ್ಪಾದ ಮತ್ತು ಲೋಹಮಯವಾದ ಕವಚಗಳನ್ನು ಧರಿಸಿರುತ್ತಾರೆ. ಅವುಗಳಲ್ಲಿ ಕೆಲವರು ಗೋವುಗಳಿಂದ ಜನಿಸಿದ್ದಾರೆ. ಮತ್ತೆ ಕೆಲವರು ಕೋತಿಗಳಿಂದ ಹುಟ್ಟಿದ್ದಾರೆ. ಇನ್ನೂ ಕೆಲವರು ನಾನಾವಿಧವಾದ ಪ್ರಾಣಿಗಳಿಂದ ಜನ್ಮತಾಳಿದ್ದಾರೆ. ಅವರಲ್ಲಿ ಮನುಷ್ಯಯೋನಿಗಳಲ್ಲಿ ಹುಟ್ಟಿದವರೂ ಇದ್ದಾರೆ. ಈ ರಣರಂಗದಲ್ಲಿ ಏಕತ್ರ ಮಿಳಿತವಾಗಿರುವ, ಹಿಮವತ್ಪರ್ವತದ ದುರ್ಗಮವಾದ ಪ್ರದೇಶಗಳಲ್ಲಿ ವಾಸಮಾಡುವ, ಪಾಪಾಚಾರಿಗಳಾದ ಮ್ಲೇಚ್ಛರ ಸೈನ್ಯವು ಹೊಗೆಯ ಬಣ್ಣದಂತೆ ಕಪ್ಪಾಗಿ ಕಾಣಿಸುತ್ತಿದೆ. ಕಾಲಚೋದಿತನಾದ ದುರ್ಯೋಧನನು

---

* ಅಂಜನಕುಲದಲ್ಲಿ ಹುಟ್ಟಿದ ಆನೆಗಳ ಲಕ್ಷಣವು ಹೀಗಿರುತ್ತದೆ: **ಸ್ನಿಗ್ಧನೀಲಾಮ್ಬುದಪ್ರಖ್ಯಾ ಬಲಿನೋ ವಿಪುಲೈಃ ಕರೈಃ। ಸುವಿಭಕ್ತಮಹಾಶೀರ್ಷಾ ಕರಿಣ್ಯೋಽಞ್ಜನ-ವಂಶಜಾಃ॥** ದಟ್ಟವಾದ ನೀಲಮೇಘದ ಬಣ್ಣವನ್ನು ಹೊಂದಿರುತ್ತವೆ. ಬಲಿಷ್ಠವಾಗಿರುತ್ತವೆ. ಸೊಂಡಿಲುಗಳು ವಿಶಾಲವಾಗಿರುತ್ತವೆ. ಬಹಳ ದೊಡ್ಡದಾದ ತಲೆಯಿದ್ದು ಎರಡು ಭಾಗಗಳೂ ಸುವಿಭಕ್ತವಾಗಿರುತ್ತವೆ. ಈ ಲಕ್ಷಣವುಳ್ಳ ಆನೆಗಳನ್ನು ಅಂಜನದಿಗ್ಗಜದ ಕುಲದಲ್ಲಿ ಹುಟ್ಟಿದ ಆನೆಗಳೆಂದು ಹೇಳುತ್ತಾರೆ.

ಸಮಗ್ರವಾದ ಮ್ಲೇಚ್ಛರಾಜರ ಸಮೂಹವನ್ನೂ, ಕೃಪರನ್ನೂ, ಭೂರಿ ಶ್ರವಸನನ್ನೂ, ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರನ್ನೂ, ಜಯದ್ರಥನನ್ನೂ ಮತ್ತು ಕರ್ಣನನ್ನೂ ಸಹಾಯಕರನ್ನಾಗಿ ಪಡೆದು ಪಾಂಡವರನ್ನು ಅವಮಾನಗೊಳಿಸಿದನು. (ಸಂಧಿಗೆ ಒಪ್ಪಲಿಲ್ಲ). ಇಷ್ಟರಿಂದಲೇ ಅವನು ಕೃತಾರ್ಥನಾದಂತೆಯೂ ಭಾವಿಸಿಬಿಟ್ಟಿದ್ದಾನೆ. ಕೌಂತೇಯ! ಅವರೆಲ್ಲರೂ ಇಂದು ನನ್ನ ಬಾಣಗಳಿಗೆ ಲಕ್ಷ್ಯರಾಗಿದ್ದಾರೆ. ಯದ್ಯಪಿ ಅವರು ಮನೋವೇಗಕ್ಕೆ ಸಮಾನವಾದ ವೇಗವುಳ್ಳವರಾಗಿದ್ದರೂ ನನ್ನಿಂದ ತಪ್ಪಿಸಿಕೊಂಡು ಹೋಗಲಾರರು. ಇತರರ ಪರಾಕ್ರಮವನ್ನೇ ಅವಲಂಬಿಸಿ ಜೀವಿಸಿರುವ ದುರ್ಯೋಧನನಿಂದ ಅನುದಿನವೂ ಸತ್ಕೃತರಾಗುತ್ತಿರುವ ಅವರೆಲ್ಲರೂ ನನ್ನ ಬಾಣಗಳ ಸಮೂಹದಿಂದ ಪೀಡಿತರಾಗಿ ವಿನಾಶಹೊಂದುತ್ತಾರೆ.

ಯುಧಿಷ್ಠಿರ ! ರಥದಮೇಲೆ ಸುವರ್ಣಮಯವಾದ ಧ್ವಜಗಳನ್ನು ಹಾರಿಸಿಕೊಂಡಿರುವ ರಥಿಗಳು ಅಲ್ಲಿ ಕಾಣುತ್ತಿದ್ದಾರಲ್ಲವೇ? ಇವರು ಕಾಂಬೋಜದೇಶದ ದುರ್ವಾಣರೆಂಬ ಹೆಸರಿನ ರಥಿಕರು. ಇವರ ಹೆಸರನ್ನು ನೀನು ಕೇಳಿರುವೆಯಲ್ಲವೇ? ಇವರೆಲ್ಲರೂ ಮಹಾಶೂರರು. ವಿದ್ಯಾ ಸಂಪನ್ನರು. ಧನುರ್ವೇದದಲ್ಲಿ ಪರಿಣತರು. ಪರಸ್ಪರಹಿತೈಷಿಗಳಾದ ಇವರು ಬಹಳ ಸಂಘಟಿತರಾಗಿದ್ದಾರೆ. ಬಹಳ ಕ್ರುದ್ಧರಾಗಿರುವ ದುರ್ಯೋಧನನ ಹಲವಾರು ಅಕ್ಷೌಹಿಣೀಸೈನಿಕರು ಕುರುಯೋಧರಿಂದ ರಕ್ಷಿಸಲ್ಪಡುತ್ತಿದ್ದು ನನಗಾಗಿಯೇ ಕಾದುನಿಂತಿದ್ದಾರೆ. ಅಪ್ರಮತ್ತರಾಗಿರುವ ಇವರು ನನ್ನ ಮೇಲೆ ಆಕ್ರಮಣನಡೆಸಲು ಸಿದ್ಧರಾಗಿದ್ದಾರೆ. ಆದರೆ ನಾನು ಇವರೆಲ್ಲರನ್ನೂ– ಹುಲ್ಲುಮೆದೆಯನ್ನು ಅಗ್ನಿಯು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ– ಧ್ವಂಸಮಾಡಿಬಿಡುತ್ತೇನೆ. ಆದುದರಿಂದ ರಥಕಲ್ಪಕರು (ರಥವನ್ನು ಸಜ್ಜುಗೊಳಿಸುವವರು) ಎಲ್ಲ ಬತ್ತಳಿಕೆಗಳನ್ನೂ ಮತ್ತು ಯುದ್ಧೋಪಯೋಗಿ ಗಳಾದ ಇತರ ಸಾಮಗ್ರಿಗಳನ್ನೂ ಯಥಾವತ್ತಾಗಿ (ಯಾವ ರೀತಿಯಲ್ಲಿ ಇಡಬೇಕೋ ಆ ರೀತಿಯಲ್ಲಿ ) ರಥದಲ್ಲಿ ಅಳವಡಿಸಲಿ. ಈ ಮಹಾಯುದ್ಧ ಕ್ಕಾಗಿ ಆಚಾರ್ಯರು ಉಪದೇಶಿಸಿರುವ ರೀತಿಯಲ್ಲಿ ನಾನಾವಿಧವಾದ ಆಯುಧಗಳನ್ನು ತೆಗೆದುಕೊಂಡು ಹೋಗಬೇಕು. ಯುದ್ಧಸಾಮಗ್ರಿ ಗಳನ್ನೂ ಸಹ ಹಿಂದೆ ತೆಗೆದುಕೊಂಡು ಹೋಗುತ್ತಿದ್ದುದಕ್ಕಿಂತಲೂ ಒಂದಕ್ಕೆ ಐದುಪಟ್ಟು ಹೆಚ್ಚಾಗಿಯೇ ತೆಗೆದುಕೊಂಡು ಹೋಗಬೇಕು. ನಾನಾವಿಧ

ವಾದ ಶಸ್ತ್ರಗಳ ಸಮುದಾಯದಿಂದ ಸಂಪನ್ನರಾಗಿರುವ, ಅನೇಕವಿಧವಾದ ಆಯುಧಗಳಿಂದ ಯುದ್ಧಮಾಡಲು ಕುಶಲರಾದ, ವಿಷಸರ್ಪೋಪಮರಾದ, ಕ್ರೂರಿಗಳಾದ ಕಾಂಬೋಜರೊಡನೆ ಯುದ್ಧಮಾಡಲು ಈಗ ನಾನು ಹೋಗುತ್ತೇನೆ. ರಾಜನಾದ ದುರ್ಯೋಧನನ ಲಾಲನೆ-ಪಾಲನೆಗಳಿಗೆ ಒಳಪಟ್ಟಿರುವ, ಆ ಕಾರಣದಿಂದಲೇ ದುರ್ಯೋಧನನಿಗೆ ಅತ್ಯಂತ ಹಿತೈಷಿಗಳಾಗಿರುವ, ಪ್ರಹಾರಕುಶಲರಾದ, ವಿಷಸದೃಶರಾದ ಕಿರಾತರೊಡನೆ ನಾನಿಂದು ಯುದ್ಧಮಾಡುತ್ತೇನೆ. ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿರುವ, ಅಗ್ನಿಸದೃಶರಾದ, ಪ್ರಜ್ವಲಿಸುವ ಅಗ್ನಿಗಳಂತೆಯೇ ಇರುವ, ಸಾಮಾನ್ಯರಿಂದ ಎದುರಿಸಲು ಅಸಾಧ್ಯರಾದ ಶಕರೊಡನೆಯೂ ನಾನಿಂದು ಯುದ್ಧದಲ್ಲಿ ತೊಡಗುತ್ತೇನೆ. ಇದೇರೀತಿಯಲ್ಲಿ ಇನ್ನೂ ವಿವಿಧದೇಶಗಳಿಂದ ಬಂದಿರುವ, ಕಾಲಸದೃಶರಾದ, ದುರಾಸದರಾದ, ಬಹುಸಂಖ್ಯಾತರಾದ, ಯುದ್ಧದುರ್ಮದರಾದ ಇತರ ಯೋಧರೊಡನೆಯೂ ಯುದ್ಧಮಾಡುತ್ತೇನೆ. ಅವರೊಡನೆ ನಾನು ಮಾಡುವ ಯುದ್ಧದಲ್ಲಿ ಕುದುರೆಗಳ ಪಾತ್ರವು ಬಹಳ ಮುಖ್ಯವಾದುದು. ಆದುದರಿಂದ ಸಂಪೂರ್ಣವಾಗಿ ವಿಶ್ರಾಂತಿಯನ್ನು ಪಡೆದಿರುವ, ಶುಭಲಕ್ಷಣಗಳಿಂದ ಕೂಡಿರುವ, ನೆಲದಮೇಲೆ ಹೊರಳಾಡಿ ದಣಿವಾರಿಸಿಕೊಂಡಿರುವ, ನೀರುಕುಡಿದಿರುವ ಕುದುರೆಗಳನ್ನು ಸಾರಥಿಯು ನನ್ನ ರಥಕ್ಕೆ ಕಟ್ಟಲಿ"

ಮಹಾರಾಜ ! ಸಾತ್ಯಕಿಯು ಹೇಳಿದಂತೆ ಯುಧಿಷ್ಠಿರನು ಎಲ್ಲ ಬತ್ತಳಿಕೆಗಳನ್ನೂ, ಎಲ್ಲ ಯುದ್ಧಸಾಮಗ್ರಿಗಳನ್ನೂ, ವಿಧ-ವಿಧವಾದ ಶಸ್ತ್ರ ಗಳನ್ನೂ ಸಾತ್ಯಕಿಯ ರಥದಲ್ಲಿಡಿಸಿದನು. ಅನಂತರ ಸೇವಕರು ಎಲ್ಲ ಪ್ರಕಾರಗಳಿಂದಲೂ ಉತ್ತಮವಾದ ಶಿಕ್ಷಣವನ್ನು ಪಡೆದಿದ್ದ ನಾಲ್ಕು ಕುದುರೆಗಳಿಗೂ, ದ್ರಾಕ್ಷಾರಸದಂತೆ ಮದವನ್ನುಂಟುಮಾಡತಕ್ಕ ಮಧುರವಾದ ಪಾನೀಯವನ್ನು ಕುಡಿಸಿ ದಣಿವಾರಲು ಅವುಗಳನ್ನು ನೆಲದ ಮೇಲೆ ಹೊರಳಾಡಲು ಬಿಟ್ಟರು. ಅನಂತರ ಸ್ನಾನಮಾಡಿಸಿ ಹುಲ್ಲನ್ನು ಜಗಿಯಲು ಬಿಟ್ಟರು. ಬಳಿಕ ಅವುಗಳನ್ನು ಜೀನು ಮುಂತಾದುವುಗಳಿಂದ ಅಲಂಕರಿಸಿದರು. ಅವುಗಳ ಶರೀರಗಳಲ್ಲಿ ಚುಚ್ಚಿಕೊಂಡಿದ್ದ ಬಾಣಗಳನ್ನು ಆ ಮೊದಲೇ ವಿಶಲ್ಯಕಾರರು ತೆಗೆದುಹಾಕಿದ್ದರು. ಸುವರ್ಣದ ಬಣ್ಣದಂತೆ ಹೊಂಬಣ್ಣವಾಗಿದ್ದ, ಸುಶಿಕ್ಷಿತವಾಗಿದ್ದ, ಶೀಘ್ರಗಾಮಿಗಳಾಗಿದ್ದ, ಹೃಷ್ಟವಾದ

ಮನಸ್ಸಿನಿಂದ ಕೂಡಿದ್ದ, ಸ್ಥಿರವಾದ ಬುದ್ಧಿಯಿಂದ ಕೂಡಿದ್ದ, ವಿಧಿವತ್ತಾಗಿ ಸಜ್ಜುಗೊಳಿಸಿದ್ದ, ಸುವರ್ಣಮಾಲೆಗಳನ್ನು ಧರಿಸಿದ್ದ ಆ ನಾಲ್ಕು ಕುದುರೆಗಳನ್ನೂ ಸಾರಥಿಯು ವಿಧಿಪೂರ್ವಕವಾಗಿ ಸಾತ್ಯಕಿಯ ರಥಕ್ಕೆ ಕಟ್ಟಿದನು. ಆ ಮಹಾರಥವು ಸುವರ್ಣಮಯವಾದ ಕೇಸರಗಳನ್ನೇ ಮಾಲೆಯಾಗಿ ಧರಿಸಿದ್ದ ಸಿಂಹದ ಚಿಹ್ನೆಯುಳ್ಳ ಧ್ವಜದಿಂದ ಕೂಡಿದ್ದಿತು. ಆ ರಥವು ಸುವರ್ಣ ದಿಂದಲೂ, ಹವಳಗಳಿಂದಲೂ ಮತ್ತು ಮುತ್ತುಗಳಿಂದಲೂ ಚಿತ್ರಿತವಾಗಿದ್ದ ಪತಾಕೆಗಳಿಂದ ಶೋಭಿಸುತ್ತಿದ್ದಿತು. ಬಿಳಿಯ ಮೋಡಗಳಂತೆ ಪ್ರಕಾಶಮಾನ ವಾಗಿದ್ದ ಪತಾಕೆಗಳಿಂದ ಆ ರಥವು ಸಮಲಂಕೃತವಾಗಿದ್ದಿತು. ರಥದ ಮೇಲ್ಭಾಗದಲ್ಲಿ ಸುವರ್ಣಮಯವಾದ ದಂಡವಿದ್ದ ಶ್ವೇತಚ್ಛತ್ರವಿದ್ದಿತು. ಬಹುಸಂಖ್ಯಾತವಾದ ಶಸ್ತ್ರಗಳನ್ನೂ, ಯುದ್ಧಸಾಮಗ್ರಿಗಳನ್ನೂ ರಥಕ್ಕೆ ತುಂಬಿದ್ದರು. ಇಂತಹ ರಥಕ್ಕೆ ಸುವರ್ಣಾಭರಣಗಳಿಂದ ಸಮಲಂಕೃತವಾದ ಕುದುರೆಗಳನ್ನು ಸಾರಥಿಯು ಕಟ್ಟಿದನು. ಶ್ರೀಕೃಷ್ಣನ ಸಾರಥಿಯಾದ ದಾರುಕನ ಚಿಕ್ಕತಮ್ಮನು ಸಾತ್ಯಕಿಗೆ ಸಾರಥಿಯಾಗಿದ್ದನು. ರಥವನ್ನು ಸಜ್ಜುಗೊಳಿಸಿದ ನಂತರ–ಇಂದ್ರನ ಸಾರಥಿಯಾದ ಮಾತಲಿಯು ಇಂದ್ರನಿಗೆ ನಿವೇದಿಸುವಂತೆ –ದಾರಕಾನುಜನು ರಥವು ಸಿದ್ಧವಾಗಿರುವ ವಿಷಯವನ್ನು ಸಾತ್ಯಕಿಗೆ ನಿವೇದಿಸಿದನು. ಅನಂತರ ಸಾತ್ಯಕಿಯು ಸ್ನಾನಮಾಡಿ ಶುಚಿಯಾಗಿ, ಕಂಕಣಧಾರಣಮಹೋತ್ಸವವನ್ನು ಮುಗಿಸಿ, ಸ್ನಾತಕರಾದ ಸಹಸ್ರಬ್ರಾಹ್ಮಣರಿಗೆ ಸುವರ್ಣನಾಣ್ಯಗಳನ್ನು ದಾನವಾಗಿ ಕೊಟ್ಟನು. ಶ್ರೀಮಂತರಲ್ಲಿ ಶ್ರೇಷ್ಠನಾದ, ಮಧುಪರ್ಕಾರ್ಹನಾದ ಸಾತ್ಯಕಿಯು ಬ್ರಾಹ್ಮಣರ ಆಶೀರ್ವಾದಮಂತ್ರ ಗಳಿಂದ ರಕ್ಷಣೆಯನ್ನು ಪಡೆದವನಾಗಿ *ಕೈಲಾತಕವೆಂಬ ಮಧುವನ್ನು ಕುಡಿದು ಕೆಂಪಾದ ಕಣ್ಣುಗಳಿಂದ ಪ್ರಕಾಶಿಸಿದನು. ಮಧುಪಾನದಿಂದ ಮತ್ತನಾಗಿದ್ದ ಅವನ ಕಣ್ಣುಗಳು ತಿರುಗುತ್ತಿದ್ದುವು. ಯುದ್ಧಕ್ಕೆ ಹೊರಡುವಾಗ ವೀರರು

---

**ಕೈಲಾತಕಮಧು:** 'ಮಧುಪರ್ಕಾರ್ಹನಾದ ಸಾತ್ಯಕಿಯು ಕೈಲಾತಕವೆಂಬ ಮಧುವನ್ನು ಕುಡಿದನು'–ಎಂದು ಇಲ್ಲಿ ಸ್ಪಷ್ಟವಾಗಿದೆ. ಮಧುಪರ್ಕದ ಸಂಬಂಧದಲ್ಲಿ ಗೋವನ್ನು ತಂದುದಾಗಲೀ–ಅದರ ಹನನ ಪ್ರಕರಣವಾಗಲೀ ಇಲ್ಲಿ ಬರುವುದಿಲ್ಲ. ಕೈಲಾತಕ ಮತ್ತು ಕೈಲಾವತ -ಎಂಬ ಎರಡು ಪಾಠಗಳಿವೆ. ಈ ಪದಗಳ ಅರ್ಥವಾಗಲೀ ಇವುಗಳಿಗೆ ಮೂಲಪದವಾದ ಕಿಲಾತ ಅಥವಾ ಕಿಲಾವತ ಪದವಾಗಲೀ ನಿಘಂಟುವಿ

ಸ್ಪರ್ಶಿಸಬೇಕಾದ ಕಂಚಿನಪಾತ್ರೆಯನ್ನು ಮುಟ್ಟಿದನು. ಮಹಾಹರ್ಷಯುಕ್ತನಾಗಿ ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಇಮ್ಮಡಿಯಾದ ತೇಜಸ್ಸಿನಿಂದ ಕೂಡಿದ್ದ ರಥಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯು ತೊಡೆಯಮೇಲೆ ಬಾಣಸಹಿತವಾದ ಧನುಸ್ಸನ್ನಿಟ್ಟುಕೊಂಡು ಕುಳಿತನು. ಬ್ರಾಹ್ಮಣರು ಅವನ ವಿಜಯಕ್ಕಾಗಿ ಸ್ವಸ್ತಿವಾಚನ ಮಾಡಿದರು. ಅನಂತರ ಕವಚವನ್ನು ಧರಿಸಿ ಬತ್ತದ ಅರಳಿನಿಂದಲೂ, ಗಂಧಗಳಿಂದಲೂ ಮತ್ತು ಮಾಲಿಕೆಗಳಿಂದಲೂ ಅಲಂಕಾರಮಾಡಿಕೊಂಡನು. ಕನ್ಯೆಯರು ಅವನಿಗೆ ಆರತಿಯನ್ನು ಬೆಳಗಿ ಅಭಿನಂದಿಸಿದರು.

ಅನಂತರ ಸಾತ್ಯಕಿಯು ಯುಧಿಷ್ಠಿರನ ಚರಣಾರವಿಂದಗಳಲ್ಲಿ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತನು. ಯುಧಿಷ್ಠಿರನು ಸಾತ್ಯಕಿಯನ್ನು ಆಲಿಂಗಿಸಿಕೊಂಡು ಅವನ ನೆತ್ತಿಯನ್ನು ಆಘ್ರಾಣಿಸಿ ಆಶೀರ್ವದಿಸಿದನು. ಬಳಿಕ ಸಾತ್ಯಕಿಯು ತನ್ನ ದಿವ್ಯವಾದ ರಥವನ್ನು ಹತ್ತಿದನು. ಒಡನೆಯೇ ಹೃಷ್ಟವಾಗಿಯೂ ಪುಷ್ಟವಾಗಿಯೂ ಇದ್ದ, ವಾಯುವೇಗಕ್ಕೆ ಸಮಾನವಾಗಿ ವೇಗಶಾಲಿಗಳಾಗಿದ್ದ, ಜಯಿಸಲು ದುಃಸಾಧ್ಯವಾಗಿದ್ದ, ಸಿಂಧುದೇಶದ ಆ ಕುದುರೆಗಳು ಅತ್ಯಂತ ಸಂತೋಷದಿಂದ ಕೂಡಿದುವುಗಳಾಗಿ ವಿಜಯಶಾಲಿಯಾದ ರಥವನ್ನು ಒಯ್ದುವು. ಅದೇ ರೀತಿಯಲ್ಲಿ ಯುಧಿಷ್ಠಿರನಿಂದ ಸಮ್ಮಾನಿತನಾದ ಭೀಮಸೇನನೂ ಸಹ ಯುಧಿಷ್ಠಿರನಿಗೆ ನಮಸ್ಕರಿಸಿ ಸಾತ್ಯಕಿಯೊಡನೆ ಹೊರಟನು. ಅರಿಂದಮರಾದ ಸಾತ್ಯಕಿ-ಭೀಮಸೇನರು ಕೌರವಸೈನ್ಯವನ್ನು ಪ್ರವೇಶಿಸುತ್ತಿರುವುದನ್ನು ಕಂಡು ದ್ರೋಣಪುರಃಸರರಾದ ನಿನ್ನ ಸೈನಿಕರು ಸಂಘಟಿತರಾಗಿ ಯುದ್ಧಕ್ಕೆ ಸಜ್ಜಾಗಿ ನಿಂತರು. ಭೀಮಸೇನನೂ ಯುದ್ಧಸನ್ನದ್ಧನಾಗಿ ತನ್ನನ್ನೇ ಅನುಸರಿಸಿ ಬರುತ್ತಿರುವುದನ್ನು ಕಂಡು ವೀರನಾದ ಸಾತ್ಯಕಿಯು ಭೀಮಸೇನನನ್ನು ಅಭಿನಂದಿಸಿ ಅವನೊಡನೆ ಹರ್ಷಕರವಾದ ಈ ಮಾತುಗಳನ್ನು ಹೇಳಿದನು:

"ಭೀಮಸೇನ! ನೀನು ಧರ್ಮರಾಜನನ್ನು ಸಂರಕ್ಷಿಸು. ಈ ಸಮಯದಲ್ಲಿ ಇದೇ ನಿನ್ನ ಅತಿಮುಖ್ಯವಾದ ಕಾರ್ಯವಾಗಿದೆ. ಕಾಲಪಕ್ವವಾಗಿರುವ

---

ನಲ್ಲಿಲ್ಲ. ಕಿಲಾಲ ಎಂಬ ಪದವಿದೆ. ಕಿಲಾಲ ಎಂದರೆ ಹೆಪ್ಪುಗಟ್ಟಿ ಗಟ್ಟಿಯಾದ ಹಾಲು. (ಹಾಲುಖೋವ) ಇದರ ಸಂಬಂಧವಾದುದು ಕೈಲಾತಕ ಮಧುವಾಗಬಹುದು.ಇದು ಹಸುವಿನ ಸಂಬಂಧವಾದುದರಿಂದ ಮಧುಪರ್ಕ ಎಂದರೆ ಹಸುವಿನ ಸಂಬಂಧವಾದ ಮಧು ಎಂಬ ಅರ್ಥವೂ ಹೊಂದಿಕೊಳ್ಳುತ್ತದೆ.

(ಕಾಲಪರವಶವಾಗಿರುವ) ಈ ಸೈನ್ಯವನ್ನು ನಾನು ಭೇದಿಸಿಕೊಂಡು ವ್ಯೂಹದೊಳಕ್ಕೆ ಪ್ರವೇಶಿಸುತ್ತೇನೆ. ಈ ಸಮಯದಲ್ಲಿ ಮತ್ತು ಮುಂದೆಯೂ ಸಹ ನೀನು ಧರ್ಮರಾಜನನ್ನು ಸಂರಕ್ಷಿಸಿಕೊಂಡಿರುವುದು ಅತ್ಯಂತ ಶ್ರೇಯಸ್ಕರವಾಗಿದೆ. ನನ್ನ ಬಲವೆಷ್ಟೆಂಬುದನ್ನು ನೀನೂ ತಿಳಿದವನಾಗಿರುವೆ. ನಿನ್ನ ಪರಾಕ್ರಮವೆಷ್ಟೆಂಬುದನ್ನು ನಾನೂ ತಿಳಿದಿರುತ್ತೇನೆ. ನನಗೆ ಪ್ರಿಯವನ್ನು ಮಾಡುವ ಇಚ್ಛೆಯು ನಿನಗಿರುವುದಾದರೆ ಈ ಕೂಡಲೇ ಹಿಂದಿರುಗಿ ಹೋಗು. ಯುಧಿಷ್ಠಿರನನ್ನು ರಕ್ಷಿಸಿಕೊಂಡಿರು."

ಸಾತ್ಯಕಿಯು ಹೀಗೆಂದು ಹೇಳಿದೊಡನೆಯೇ ಅವನ ಮಾತನ್ನು ಗೌರವಿಸುತ್ತಾ ಭೀಮಸೇನನು ಸಾತ್ಯಕಿಗೆ ಹೇಳಿದನು:

"ಶೈನೇಯ! ಪುರುಷಶ್ರೇಷ್ಠನೇ! ಕಾರ್ಯಸಿದ್ಧಿಗಾಗಿ ನೀನು ಹೋಗು. ನಿನ್ನ ಮಾತಿನಂತೆಯೇ ನಾನು ರಾಜನ ರಕ್ಷಣೆಯನ್ನು ಮಾಡುತ್ತೇನೆ."

ಭೀಮಸೇನನು ಹೀಗೆ ಹೇಳಿದುದನ್ನು ಕೇಳಿ ಪರಮಹೃಷ್ಟನಾದ ಸಾತ್ಯಕಿಯು ಹೇಳಿದನು: "ಬೇಗಹೋಗು, ಭೀಮಸೇನ! ನಿಶ್ಚಯವಾಗಿಯೂ ಬೇಗಹೋಗು. ನನಗೆ ವಿಜಯವು ಖಂಡಿತವಾಗಿಯೂ ಲಭಿಸುತ್ತದೆ. ನನ್ನಲ್ಲಿರುವ ಗುಣಗಳಿಂದ ನನ್ನಲ್ಲಿಯೇ ಅನುರಕ್ತನಾಗಿರುವ ನೀನು ನಾನು ಹೇಳಿದಂತೆ ಮಾಡಲು ಒಪ್ಪಿಕೊಂಡಿರುವೆ. ನನಗೆ ಕಾಣಿಸುತ್ತಿರುವ ಶುಭಶಕುನಗಳೂ ಸಹ ನನಗೆ ವಿಜಯವಾಗುವುದೆಂಬುದನ್ನು ಸೂಚಿಸುತ್ತಿವೆ. ಮಹಾತ್ಮನಾದ ಅರ್ಜುನನು ಪಾಪಿಷ್ಠನಾದ ಸೈಂಧವನನ್ನು ಸಂಹರಿಸಿದನಂತರ ಧರ್ಮಾತ್ಮನಾದ ಯುಧಿಷ್ಠಿರಮಹಾರಾಜನನ್ನು ನಾನು ಆಲಿಂಗನಮಾಡಿ ಕೊಳ್ಳುತ್ತೇನೆ."

ಮಹಾರಾಜ! ಯಶೋವಂತನಾದ ಸಾತ್ಯಕಿಯು ಭೀಮಸೇನನಿಗೆ ಹೀಗೆ ಹೇಳಿ ಅವನನ್ನು ಅಲ್ಲಿಯೇ ಬಿಟ್ಟು–ವ್ಯಾಘ್ರವು ಮೃಗಗಳ ಸಮೂಹವನ್ನು ಕರಾಳದೃಷ್ಟಿಯಿಂದ ನೋಡುವಂತೆ–ನಿನ್ನ ಸೈನ್ಯವನ್ನು ದುರುಗುಟ್ಟಿಕೊಂಡು ನೋಡಿದನು. ಸಾತ್ಯಕಿಯು ನಿನ್ನ ಸೈನ್ಯದೊಳಕ್ಕೆ ಪ್ರವೇಶಿಸಲು ಸಿದ್ಧ ನಾಗಿರುವುದನ್ನು ನೋಡಿದೊಡನೆಯೇ ನಿನ್ನ ಸೈನ್ಯವು ಭ್ರಾಂತಿಗೊಂಡು ಬಹಳವಾಗಿ ಕಂಪಿಸಿತು. ಧರ್ಮರಾಜನ ಆಜ್ಞಾನುಸಾರವಾಗಿ ಅರ್ಜುನನನ್ನು

ನೋಡುವ ಇಚ್ಛೆಯಿಂದ ಸಾತ್ಯಕಿಯು ನಿನ್ನ ಸೈನ್ಯದ ಕಡೆಗೆ ರಭಸದಿಂದ ನುಗ್ಗಿದನು."

೧೧೨ನೆಯ ಅಧ್ಯಾಯವು ಮುಗಿಯಿತು.

೧೧೩ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ದ್ರೋಣ-ಕೃತವರ್ಮರೊಡನೆ ಸಾತ್ಯಕಿಯ ಯುದ್ಧ: ಸಾತ್ಯಕಿಯು ಕಾಂಬೋಜಸೇನೆಯನ್ನು ಸಮೀಪಿಸಿದುದು

ಸಂಜಯನು ಮುಂದುವರಿದು ಹೇಳುತ್ತಾನೆ:

"ಮಹಾರಾಜ! ಯುಯುಧಾನನು ಯುದ್ಧಮಾಡುವ ಇಚ್ಛೆಯಿಂದ ನಿನ್ನ ಸೈನ್ಯದ ಸಮೀಪಕ್ಕೆ ಹೋಗಲಾಗಿ ಧರ್ಮರಾಜನು ತನ್ನ ಸೈನಿಕರಿಂದ ಪರಿವೃತನಾಗಿ ದ್ರೋಣರ ರಥದ ಸಮೀಪಕ್ಕೆ ಹೋಗುವ ಇಚ್ಛೆಯಿಂದ ಯುಯುಧಾನನನ್ನು ಹಿಂಬಾಲಿಸಿಯೇ ಹೋದನು. ಅನಂತರ ಪಾಂಚಾಲ ರಾಜನ ಮಗನಾದ ಸಮರದುರ್ಮದನಾದ ಧೃಷ್ಟದ್ಯುಮ್ನನೂ ಮತ್ತು ವಸುದಾನರಾಜನೂ ಪಾಂಡವರ ಸೈನಿಕರನ್ನು ಕೂಗಿ ಹೇಳಿದರು: **"ಆಗಚ್ಛತ!** ಬೇಗ ಬನ್ನಿರಿ! **ಪ್ರಹರತ!** ಶತ್ರುಸೈನಿಕರನ್ನು ಪ್ರಹರಿಸಿರಿ! **ದ್ರುತಂ ವಿಪರಿಧಾವತ!** ಬಹಳ ಬೇಗ ನಡೆಯಿರಿ! ಯುದ್ಧೋನ್ಮತ್ತನಾದ ಸಾತ್ಯಕಿಯು ಅನಾಯಾಸವಾಗಿ ಅರ್ಜುನನ ಸಮೀಪಕ್ಕೆ ಹೋಗುವಂತೆ ಮಾಡಿರಿ. ಕೌರವರ ಕಡೆಯ ಅನೇಕಮಹಾರಥರು ಸಾತ್ಯಕಿಯನ್ನು ಪರಾಜಯಗೊಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದಾರೆ."

ಹೀಗೆ ಹೇಳುತ್ತಾ ಎಲ್ಲ ಪಾಂಡವಮಹಾರಥರೂ ಬಹಳ ವೇಗದಿಂದ ಅಲ್ಲಿಗೆ ಆಗಮಿಸಿದರು. ಅವರನ್ನು ಜಯಿಸುವ ಅಭಿಲಾಷೆಯಿಂದ ನಾವು ಅವರ ಮೇಲೆ ದಾಳಿನಡೆಸಲು ಉಪಕ್ರಮಿಸಿದೆವು. ಆಗ ಸಾತ್ಯಕಿಯ ರಥದ ಸಮೀಪದಲ್ಲಿ ದೊಡ್ಡ ಕೋಲಾಹಲವುಂಟಾಯಿತು. ನಾಲ್ಕು ಕಡೆಗಳಿಂದಲೂ ಸಾತ್ವತನ ಮೇಲೆ ನುಗ್ಗಿಬಂದ ನಿನ್ನ ಸೇನಾಸಮೂಹವು ಸಾತ್ವತನ ಬಾಣಗಳಿಂದ ಪೀಡಿಸಲ್ಪಟ್ಟು ನೂರಾರು ಭಾಗಗಳಾಗಿ ಒಡೆದುಹೋಯಿತು. ಈ ರೀತಿಯಲ್ಲಿ ನಮ್ಮ ಸೈನ್ಯವು ಅನೇಕ ವಿಭಾಗಗಳಾಗಿ ದಿಕ್ಕುಗೆಟ್ಟು ಓಡಿಹೋಗಲಾಗಿ, ಶಿನಿಯ ಪೌತ್ರನಾದ, ಮಹಾರಥನಾದ ಸಾತ್ಯಕಿಯು–

ಸೇನೆಯ ಅಗ್ರಭಾಗದಲ್ಲಿ ನಿಂತಿದ್ದ, ಮಹಾಧನುಷ್ಮಂತರಾದ, ವೀರರಾದ ಏಳು ಮಂದಿ ಮಹಾಯೋಧರನ್ನೂ ಧ್ವಂಸಮಾಡಿದನು. ಅನಂತರ ಸಾತ್ಯಕಿಯು ಬೆಂಕಿಗೆ ಸಮಾನವಾದ ತನ್ನ ಬಾಣಗಳಿಂದ ನಾನಾದೇಶಗಳ ವೀರರಾದ ಇತರ ರಾಜರನ್ನೂ ಯಮನ ಮನೆಗೆ ಕಳುಹಿಸಿಕೊಟ್ಟನು. ಸಾತ್ಯಕಿಯು ಒಂದೇ ಬಾಣದಿಂದ ನೂರು ಮಂದಿ ಯೋಧರನ್ನೂ ಸಂಹರಿಸುತ್ತಿದ್ದನು; ನೂರು ಬಾಣಗಳಿಂದ ಒಬ್ಬನನ್ನೂ ಸಂಹರಿಸುತ್ತಿದ್ದನು. ಗಜಾರೋಹಿಗಳನ್ನೂ, ಆನೆಗಳನ್ನೂ, ಅಶ್ವಾರೋಹಿಗಳನ್ನೂ, ಕುದುರೆಗಳನ್ನೂ, ಕುದುರೆಗಳಿಂದಲೂ, ಸೂತರಿಂದಲೂ ಸಹಿತರಾದ ರಥಿಗಳನ್ನೂ–ಪಶುಪತಿಯು ಪಶುಗಳನ್ನು ಸಂಹರಿಸುವಂತೆ, ಸಂಹರಿಸುತ್ತಿದ್ದನು. ಬಾಣಗಳ ಧಾರೆಯನ್ನೇ ಅವ್ಯಾಹತ ವಾಗಿ ಸುರಿಸುತ್ತಿದ್ದ, ಅದ್ಭುತಕರ್ಮನಾದ ಸಾತ್ಯಕಿಯನ್ನು ಎದುರಿಸಿ ಯುದ್ಧ ಮಾಡಲು ನಿನ್ನ ಕಡೆಯ ಸೈನಿಕರಲ್ಲಿ ಯಾರೊಬ್ಬರೂ ಹೋಗಲಿಲ್ಲ. ದೀರ್ಘಬಾಹುವಾದ ಸಾತ್ಯಕಿಯಿಂದ ಥಳಿಸಲ್ಪಟ್ಟು, ತೊಡೆದುಹಾಕಲ್ಪಟ್ಟ ನಿನ್ನ ಕಡೆಯ ವೀರರು ಸಾತ್ಯಕಿಯನ್ನು ಮಾನವಾತೀತನೆಂದು ಭಾವಿಸಿ, ಭಯ ಗೊಂಡವರಾಗಿ ರಣರಂಗವನ್ನು ತ್ಯಜಿಸಿ ಪಲಾಯನಮಾಡಿದರು. ಸಾತ್ಯಕಿಯ ಮಹಾತೇಜಸ್ಸಿನಿಂದ ವಿಮೋಹಿತರಾದ ನಿನ್ನ ಕಡೆಯ ಯೋಧರು ಅಲ್ಲಿ ಅನೇಕ ಸಾತ್ಯಕಿಗಳಿದ್ದಾರೆಂದು ಭ್ರಮಿಸಿದರು. ವಿಧ್ವಂಸಿತವಾಗಿದ್ದ ರಥಗಳಿಂದಲೂ, ರಥದಲ್ಲಿನ ಆಸನಗಳಿಂದಲೂ, ವಿಧ್ವಂಸಿತವಾಗಿದ್ದ ಚಕ್ರಗಳಿಂದಲೂ, ಕೆಳಕ್ಕೆ ಬಿದ್ದುಹೋಗಿದ್ದ ಚಿತ್ರಿತವಾದ ಧ್ವಜಗಳಿಂದಲೂ, ರಥದ ತೋಳುಮರ ಗಳಿಂದಲೂ, ಪತಾಕೆಗಳಿಂದಲೂ, ಸುವರ್ಣಮಯವಾದ ಕಿರೀಟ ಗಳಿಂದಲೂ, ಚಂದನದಿಂದ ಲೇಪನಮಾಡಲ್ಪಟ್ಟ ಮತ್ತು ಅಂಗದಗಳಿಂದ ಯುಕ್ತವಾದ ತೋಳುಗಳಿಂದಲೂ, ಆನೆಯ ಸೊಂಡಿಲುಗಳಂತಿದ್ದ ಮತ್ತು ಸರ್ಪಗಳ ಹೆಡೆಗಳಂತಿದ್ದ ಯೋಧರ ತೊಡೆಗಳಿಂದಲೂ ರಣಾಂಗಣವು ಮುಚ್ಚಿಹೋಗಿದ್ದಿತು. ಎತ್ತಿನ ಕಣ್ಣುಗಳಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿದ್ದ, ಮನೋಹರವಾದ ಕುಂಡಲಗಳಿಂದ ಯುಕ್ತವಾದ, ಚಂದ್ರ ಸದೃಶವಾದ ಮುಖಗಳಿಂದಲೂ ರಣಭೂಮಿಯು ಶೋಭಿಸುತ್ತಿದ್ದಿತು. ಸಾತ್ಯಕಿಯ ಬಾಣಗಳಿಂದ ಬಹಳವಾಗಿ ಗಾಯಗೊಂಡು ಪರ್ವತೋಪಮ ವಾಗಿ ಬಿದ್ದಿದ್ದ ಆನೆಗಳಿಂದ ಸಮಾಕ್ರಾಂತವಾಗಿದ್ದ ಆ ರಣಾಂಗಣವು–ಚದುರಿ

ಬಿದ್ದಿರುವ ಪರ್ವತಗಳಿಂದ ಕೂಡಿದ ಭೂಮಿಯಂತೆಯೇ–ಶೋಭಾಯ ಮಾನವಾಗಿ ಕಾಣುತ್ತಿದ್ದಿತು. ಸುವರ್ಣಮಯವಾದ ಕಡಿವಾಣಗಳಿಂದ ಕೂಡಿದ್ದ, ಮುತ್ತಿನ ಬಲೆಯಿಂದ ಸಮಲಂಕೃತವಾಗಿದ್ದ, ಎದೆಯ ಮೇಲಿನ ವಿಚಿತ್ರವಾದ ಆಚ್ಛಾದನವಸ್ತ್ರಗಳಿಂದ ಕೂಡಿದ್ದ ನಮ್ಮ ಪಕ್ಷದ ಕುದುರೆಗಳು– ದೀರ್ಘಬಾಹುವಾದ ಸಾತ್ಯಕಿಯಿಂದ ವಿಧ್ವಂಸಿತವಾಗಿ ಪ್ರಾಣಗಳನ್ನು ತೊರೆದು ಭೂಮಿಯಲ್ಲಿ ಬಿದ್ದು ಬಹಳ ಶೋಭಾಯಮಾನವಾಗಿ ಕಾಣುತ್ತಿದ್ದುವು. ಈ ರೀತಿಯಲ್ಲಿ ಸಾತ್ವತನು ನಾನಾವಿಧವಾದ ನಿನ್ನ ಸೈನ್ಯಗಳನ್ನು ಸಂಹಾರ ಮಾಡುತ್ತಾ, ಅಳಿದುಳಿದ ಸೈನಿಕರನ್ನೂ ಪಲಾಯಿತರನ್ನಾಗಿ ಮಾಡುತ್ತಾ, ನಿನ್ನ ಸೈನ್ಯದೊಳಕ್ಕೆ ನುಗ್ಗಿದನು. ಧನಂಜಯನು ಯಾವ ಮಾರ್ಗದಿಂದ ಸೈಂಧವನ ಬಳಿಗೆ ಹೋಗಿದ್ದನೋ–ಅದೇ ಮಾರ್ಗದಿಂದಲೇ ಸಾತ್ಯಕಿಯೂ ಹೋಗಲು ಇಚ್ಛಿಸಿದನು. ಆದರೆ ಅಷ್ಟರೊಳಗಾಗಿ ದ್ರೋಣರು ಅವನನ್ನು ತಡೆದರು. ಪರಮಕ್ರುದ್ಧನಾಗಿದ್ದ ಸತ್ಯಕನ ಮಗನಾದ ಯುಯುಧಾನನು ಭಾರದ್ವಾಜರಿಂದ ತಡೆಯಲ್ಪಟ್ಟರೂ ಹಿಂದಕ್ಕೆ ಸರಿಯದೇ ದ್ರೋಣರ ಮುಂದೆ ದೃಢವಾಗಿ ನಿಂತುಕೊಂಡನು. ಮಹಾರಥನಾದ ಯುಯುಧಾನನು ಮುಂದೆ ಹೋಗುವುದನ್ನು ತಡೆದ ದ್ರೋಣರು ಮರ್ಮಭೇದಿಗಳಾದ, ನಿಶಿತವಾದ ಐದು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದರು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯೂ ರಣಹದ್ದಿನ, ನವಿಲಿನ ಮತ್ತು ಸುವರ್ಣಮಯವಾದ ರೆಕ್ಕೆಗಳಿಂದ ಕೂಡಿದ್ದ, ಶಿಲೆಯಿಂದ ಹರಿತಮಾಡಲ್ಪಟ್ಟಿದ್ದ ಏಳು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದ್ರೋಣರು ಆರು ಬಾಣಗಳಿಂದ ಸಾರಥಿಯಿಂದಲೂ–ಕುದುರೆಗಳಿಂದಲೂ ಸಹಿತನಾದ ಸಾತ್ಯಕಿಯನ್ನು ಪ್ರಹರಿಸಿದರು. ಮಹಾರಥನಾದ ಯುಯುಧಾನನು ದ್ರೋಣರ ಆ ಸಾಹಸಕಾರ್ಯವನ್ನು ಸಹಿಸಿಕೊಳ್ಳಲಿಲ್ಲ. ಸಾತ್ಯಕಿಯೊಮ್ಮೆ ಸಿಂಹನಾದವನ್ನು ಮಾಡಿ ಹತ್ತು, ಆರು ಮತ್ತು ಎಂಟು ಬಾಣಗಳಿಂದ ದ್ರೋಣರನ್ನು ಗಾಯ ಗೊಳಿಸಿದನು. ಪುನಃ ಯುಯುಧಾನನು ದ್ರೋಣರನ್ನು ಹತ್ತು ಬಾಣಗಳಿಂದ ಪ್ರಹರಿಸಿ ಒಂದು ಬಾಣದಿಂದ ಸಾರಥಿಯನ್ನೂ, ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ, ಒಂದು ಬಾಣದಿಂದ ಧ್ವಜವನ್ನೂ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ದ್ರೋಣರು ತ್ವರೆಯಿಂದ ಅಶ್ವ-ಸಾರಥಿ-ರಥ-ಧ್ವಜಸಹಿತನಾದ

ಸಾತ್ಯಕಿಯನ್ನು ವೇಗವಾಗಿ ಹೋಗುವ ಮಿಡತೆಗಳ ಸಮೂಹಗಳಂತಿದ್ದ ಬಾಣಗಳಿಂದ ಮುಚ್ಚಿದರು. ಅದೇ ರೀತಿಯಲ್ಲಿ ಯುಯುಧಾನನೂ ಸಹ ಸ್ವಲ್ಪವಾದರೂ ಭ್ರಾಂತನಾಗದೇ ಅನೇಕಬಾಣಗಳಿಂದ ದ್ರೋಣರನ್ನು ಮುಚ್ಚಿದನು. ಅದನ್ನು ಗಮನಿಸಿದ ದ್ರೋಣರು ಸಾತ್ಯಕಿಯೊಡನೆ ಹೇಳಿದರು:

**ತವಾಚಾರ್ಯೋ ರಣಂ ಹಿತ್ವಾ ಗತಃ ಕಾಪುರುಷೋ ಯಥಾ।**
**ಯುಧ್ಯಮಾನಂ ಚ ಮಾಂ ಹಿತ್ವಾ ಪ್ರದಕ್ಷಿಣಮವರ್ತತ ॥೩೦॥**
**ತ್ವಂ ಹಿ ಮೇ ಯುಧ್ಯತೋ ನಾದ್ಯ ಜೀವನ್ಮೋಕ್ಷ್ಯಸಿ ಮಾಧವ।**
**ಯದಿ ಮಾಂ ತ್ವಂ ರಣೇ ಹಿತ್ವಾ ನ ಯಾಸ್ಯಾಚಾರ್ಯವದ್ದ್ರುತಮ್॥**

"ಯುಯುಧಾನ! ನಿನ್ನ ಆಚಾರ್ಯನಾದ ಅರ್ಜುನನು ಹೇಡಿಯಂತೆ ರಣರಂಗವನ್ನು ಬಿಟ್ಟು ಹೊರಟುಹೋದನು. ಅವನೊಡನೆ ಯುದ್ಧಮಾಡುತ್ತಿದ್ದ ನನ್ನನ್ನು ಬಿಟ್ಟು ಪ್ರದಕ್ಷಿಣಾಕಾರವಾಗಿ ನನ್ನನ್ನು ಸುತ್ತಿಕೊಂಡು ಹೊರಟುಹೋದನು. ನೀನೇನಾದರೂ ನಿನ್ನ ಆಚಾರ್ಯನಂತೆಯೇ ನನ್ನನ್ನು ಬಿಟ್ಟು ಓಡಿಹೋಗದೆ ನನ್ನೊಡನೆಯೇ ಯುದ್ಧವನ್ನು ಮುಂದುವರಿಸಿದ್ದೇ ಆದರೆ ನನ್ನಿಂದ ಬಿಡಿಸಿಕೊಂಡು ಜೀವಸಹಿತವಾಗಿ ಹೋಗಲಾರೆ."

(ದ್ರೋಣರ ಆ ಮಾತಿನಿಂದ ಸಾತ್ಯಕಿಗೆ ಸೂಚನೆಯೊಂದು ಸಿಕ್ಕಿದಂತಾಯಿತು. ಅದನ್ನು ಗ್ರಹಿಸಿ ಸಾತ್ಯಕಿಯು ದ್ರೋಣರನ್ನು ಕುರಿತು ಹೇಳಿದನು.)

**ಧನಂಜಯಸ್ಯ ಪದವೀಂ ಧರ್ಮರಾಜಸ್ಯ ಶಾಸನಾತ್ ।**
**ಗಚ್ಛಾಮಿ ಸ್ವಸ್ತಿ ತೇ ಬ್ರಹ್ಮನ್ನ ಮೇ ಕಾಲಾತ್ಯಯೋ ಭವೇತ್ ॥೩೨॥**
**ಆಚಾರ್ಯಾನುಗತೋ ಮಾರ್ಗಃ ಶಿಷ್ಯೈರನ್ವಾಸ್ಯತೇ ಸದಾ ।**
**ತಸ್ಮಾದೇವ ವ್ರಜಾಮ್ಯಾಶು ಯಥಾ ಮೇ ಸ ಗುರುರ್ಗತಃ ॥೩೩॥**

"ಬ್ರಾಹ್ಮಣೋತ್ತಮರೇ! ನಿಮಗೆ ಮಂಗಳವಾಗಲಿ. ಕಾಲವು ಅತಿ ಕ್ರಮಿಸಿ ಹೋಗುವುದರೊಳಗಾಗಿ ಧರ್ಮರಾಜನ ಆಜ್ಞೆಯಂತೆ ನಾನು ಅರ್ಜುನನಿರುವೆಡೆಗೇ ಹೋಗಬೇಕಾಗಿದೆ. ಆಚಾರ್ಯರು ತೋರಿಸಿಕೊಟ್ಟ ಮಾರ್ಗವನ್ನೇ ಶಿಷ್ಯರಾದವರೂ ಸದಾಕಾಲದಲ್ಲಿಯೂ ಅನುಸರಿಸುತ್ತಾರೆ. ಆದುದರಿಂದಲೇ ನನ್ನ ಆಚಾರ್ಯನು ಯಾವ ರೀತಿಯಲ್ಲಿ (ನಿಮ್ಮನ್ನು ತ್ಯಜಿಸಿ)

ಹೊರಟುಹೋದನೋ ಅದೇ ರೀತಿಯಲ್ಲಿ ನಾನೂ ಬಹಳ ಬೇಗ ಹೊರಟುಹೋಗುತ್ತೇನೆ."

ಮಹಾರಾಜ! ಶೈನೇಯನು ಆಚಾರ್ಯರಿಗೆ ಹೀಗೆ ಹೇಳಿ ಆಚಾರ್ಯರನ್ನು ಅಲ್ಲಿಯೇ ಬಿಟ್ಟು ಶೀಘ್ರವಾಗಿ ಅಲ್ಲಿಂದ ಹೊರಟುಹೋದನು. ಹೋಗುತ್ತಿರುವಾಗ ಸೂತನೊಡನೆ ಹೇಳಿದನು :

"ಸೂತ! ನನ್ನನ್ನು ತಡೆದು ನಿಲ್ಲಿಸಲು ದ್ರೋಣರು ಸರ್ವಪ್ರಯತ್ನವನ್ನೂ ಮಾಡುತ್ತಾರೆ. ಅವರಿಗೆ ನಾವು ಪುನಃ ಸಿಕ್ಕಿಹಾಕಿಕೊಳ್ಳದ ರೀತಿಯಲ್ಲಿ ನೀನು ಕುದುರೆಗಳನ್ನು ದೌಡಾಯಿಸು. ಮುಂದಿನ ಕಾರ್ಯಕ್ರಮದ ವಿಷಯವಾಗಿ ನಾನು ಹೇಳಲಿರುವ ಇನ್ನೂ ಕೆಲವು ಮಾತುಗಳನ್ನು ಕೇಳು: ಇಲ್ಲಿಗೆ ಅನತಿ ದೂರದಲ್ಲಿಯೇ ಅತ್ಯಂತತೇಜಸ್ಸಿನಿಂದ ಯುಕ್ತವಾಗಿರುವ ಅವಂತೀದೇಶದ ಸೈನ್ಯವು ಕಾಣಿಸುತ್ತದೆ. ಅದಾದನಂತರ ದಾಕ್ಷಿಣಾತ್ಯರ ಅಗಾಧವಾದ ಸೇನಾಬಲವಿದೆ. ಅಲ್ಲಿಂದ ಮುಂದೆ ಬಾಹ್ಲೀಕರ ವಿಶಾಲವಾದ ಸೇನೆಯಿದೆ. ಬಾಹ್ಲೀಕಸೈನ್ಯಕ್ಕೆ ಅತಿ ಸಮೀಪದಲ್ಲಿಯೇ ಕರ್ಣನಿಗೆ ಸೇರಿದ ವಿಶಾಲವಾದ ಸೈನ್ಯವಿದೆ. ಆ ಎಲ್ಲ ಸೈನ್ಯಗಳೂ ಒಂದಕ್ಕೊಂದು ಭಿನ್ನವಾದ ರೀತಿಗಳಲ್ಲಿವೆ. ಆ ಸೈನ್ಯಗಳೆಲ್ಲವೂ ಒಂದನ್ನು ಮತ್ತೊಂದು ಅವಲಂಬಿಸಿಕೊಂಡಿರುವುದರಿಂದ ತಾವಿರುವ ಸ್ಥಳವನ್ನು ಬಿಟ್ಟು ಅವುಗಳು ಮುಂದೆ ಬರುವುದಿಲ್ಲ. ನೀನು ಆ ಸೈನ್ಯಗಳ ಮಧ್ಯಭಾಗಕ್ಕೆ ಹೋಗಿ ಪ್ರಸನ್ನಮನಸ್ಕನಾಗಿ (ಗಾಬರಿಗೊಳ್ಳದೇ) ಕುದುರೆಗಳನ್ನು ದೌಡಾಯಿಸು. ಸಾರಥಿಯೇ! ಮಧ್ಯಮವೇಗವನ್ನಾಶ್ರಯಿಸಿ ನಾನಾವಿಧವಾದ ಅಸ್ತ್ರ-ಶಸ್ತ್ರಗಳನ್ನು ಹಿಡಿದು ಯುದ್ಧೋದ್ಯತರಾಗಿರುವ ಬಾಹ್ಲೀಕರೆಲ್ಲಿರುವರೋ ಅಲ್ಲಿಗೇ ನನ್ನನ್ನು ಒಯ್ದುಬಿಡು. ಅಲ್ಲಿಯೇ ಸೂತಪುತ್ರನಾದ ಕರ್ಣನನ್ನು ಮುಂದೆಮಾಡಿಕೊಂಡು ಅನೇಕಮಂದಿ ದಾಕ್ಷಿಣಾತ್ಯಯೋಧರಿದ್ದಾರೆ. ಅವರ ಸಮೀಪದಲ್ಲಿಯೇ ನಾನಾದೇಶಗಳಿಂದ ಬಂದು ಸೇರಿರುವ ಪದಾತಿಸೈನಿಕರಿಂದಲೂ, ಗಜಾಶ್ವ-ರಥಸೈನಿಕರಿಂದಲೂ ಸಮೃದ್ಧವಾದ ಒಂದು ಸೇನಾಸಮೂಹವು ಕಾಣುತ್ತಿದೆಯಲ್ಲವೇ? ಅಲ್ಲಿಗೂ ನೀನು ಹೋಗಬೇಕಾಗಿದೆ."

ಮಹಾರಾಜ! ಸಾತ್ಯಕಿಯು ಸಾರಥಿಯನ್ನು ಕುರಿತು ಹೀಗೆ ಹೇಳಿ ದ್ರೋಣರನ್ನು ಪರಿತ್ಯಜಿಸಿ ಮಧ್ಯದಲ್ಲಿದ್ದ ಅನೇಕಸೇನಾಸಮೂಹಗಳನ್ನು ದಾಟಿಕೊಂಡು ಕರ್ಣನ ಅತಿಭಯಂಕರವಾದ ಸೈನ್ಯವಿದ್ದೆಡೆಗೆ ಹೋದನು.

ಕ್ರುದ್ಧರಾದ ದ್ರೋಣರು ತಮ್ಮನ್ನು ಅತಿಕ್ರಮಿಸಿ ಮುಂದೆಹೋದ, ಯುದ್ಧದಲ್ಲಿ ಹಿಮ್ಮೆಟ್ಟದ, ಮಹಾಭಾಗನಾದ ಯುಯುಧಾನನನ್ನು-ಅಪಾರವಾದ ಬಾಣಗಳನ್ನು ಸುರಿಸುತ್ತಾ-ಸ್ವಲ್ಪದೂರದವರೆಗೆ ಅಟ್ಟಿಸಿಕೊಂಡೇ ಹೋದರು.



ಸಾತ್ಯಕಿಯು ಕರ್ಣನ ವಿಶಾಲವಾದ ಸೈನ್ಯವನ್ನೂ ತನ್ನ ನಿಶಿತವಾದ ಬಾಣಗಳಿಂದ ಗಾಯಗೊಳಿಸಿ, ಎಲ್ಲರನ್ನೂ ಭ್ರಾಂತರನ್ನಾಗಿಮಾಡಿ ಅನಂತರ ಬಹಳ ದೊಡ್ಡದಾಗಿದ್ದ ಕೌರವಸೈನ್ಯವನ್ನೂ ಪ್ರವೇಶಿಸಿದನು. ಸಾತ್ಯಕಿಯು ಕೌರವರ ಸೈನ್ಯವನ್ನು ಪ್ರವೇಶಿಸುತ್ತಲೇ ಅವನ ಬಾಣಗಳ ಪ್ರಹಾರವನ್ನು ತಾಳಲಾರದೇ ಸೈನಿಕರು ಪಲಾಯನಮಾಡತೊಡಗಿದರು. ಆ ಸಮಯದಲ್ಲಿ ಕೃತವರ್ಮನು ಪರಮಕ್ರುದ್ಧನಾಗಿ ಸಾತ್ಯಕಿಯನ್ನು ತಡೆದು ನಿಲ್ಲಿಸಿದನು. ತನ್ನನ್ನು ಎದುರಿಸಲು ಬಂದ ಕೃತವರ್ಮನನ್ನು ವೀರ್ಯವಂತನಾದ ಸಾತ್ಯಕಿಯು ಆರು

ಬಾಣಗಳಿಂದ ಬಹಳ ಶೀಘ್ರವಾಗಿ ಪ್ರಹರಿಸಿ, ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನೂ ಪ್ರಹರಿಸಿದನು. ಪುನಃ ಸಾತ್ಯಕಿಯು ಬಗ್ಗಿದ ಗಿಣ್ಣುಗಳಿದ್ದ, ವೇಗವಾಗಿ ಹೋಗುವ ಹದಿನಾರು ಬಾಣಗಳಿಂದ ಕೃತವರ್ಮನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಬಹಳ ತೀಕ್ಷ್ಣವಾದ ರೀತಿಯಲ್ಲಿ ಹರಿತವಾಗಿ ಮಾಡಲ್ಪಟ್ಟಿದ್ದ ಸಾತ್ಯಕಿಯ ಬಾಣಗಳಿಂದ ಪ್ರಹೃತನಾದ ಕೃತವರ್ಮನು ಸಹನೆಯನ್ನು ಕಳೆದುಕೊಂಡನು. ಒಡನೆಯೇ ಕೃತವರ್ಮನು ವಕ್ರಗತಿಯಿಂದ ಹೋಗುವ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ವತ್ಸದಂತವೆಂಬ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಕರ್ಣಪರ್ಯಂತವಾಗಿ ಸೆಳೆದು ಸಾತ್ಯಕಿಯ ವಕ್ಷಸ್ಥಳದಲ್ಲಿ ಪ್ರಹರಿಸಿದನು. ಮೂಲಭಾಗದಲ್ಲಿ ರೆಕ್ಕೆಯಿದ್ದ ಆ ವತ್ಸದಂತವೆಂಬ ಬಾಣವು ಸಾತ್ಯಕಿಯ ಕವಚವನ್ನು ಸೀಳಿ, ಅನಂತರ ಅವನ ದೇಹವನ್ನು ಭೇದಿಸಿಕೊಂಡು ರಕ್ತದಲ್ಲಿ ನೆನೆದು ಹೊರಬಂದು ಭೂಮಿಯನ್ನು ಹೊಕ್ಕಿತು. ಶ್ರೇಷ್ಠವಾದ ಅಸ್ತ್ರಗಳನ್ನು ಬಲ್ಲವನಾದ ಕೃತವರ್ಮನು ಅನೇಕಬಾಣಗಳಿಂದ ಯುಕ್ತವಾದ ಸಾತ್ಯಕಿಯ ಧನುಸ್ಸನ್ನೂ ಕತ್ತರಿಸಿಬಿಟ್ಟನು. ಅನಂತರ ಕ್ರುದ್ಧನಾದ ಕೃತವರ್ಮನು ತೀಕ್ಷ್ಣವಾದ ಹತ್ತು ಬಾಣಗಳಿಂದ ಸತ್ಯವಿಕ್ರಮನಾದ ಸಾತ್ಯಕಿಯ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಧನುಸ್ಸು ಛಿನ್ನವಾಗಿ ಹೋದನಂತರ ಶಕ್ತಿಮಂತರಲ್ಲಿ ಶ್ರೇಷ್ಠನಾದ ಸಾತ್ಯಕಿಯು ಶಕ್ತ್ಯಾಯುಧದಿಂದ ಕೃತವರ್ಮನ ಬಲತೋಳಿಗೆ ಪ್ರಹರಿಸಿದನು. ಅನಂತರ ಮತ್ತೊಂದು ಸುದೃಢವಾದ ಧನುಸ್ಸನ್ನು ಕೈಗೆತ್ತಿಕೊಂಡು ಬಾಣಗಳನ್ನು ಅನುಸಂಧಾನಮಾಡಿ ಸುದೀರ್ಘವಾಗಿ ಸೆಳೆದು ನೂರಾರು-ಸಾವಿರಾರು ಬಾಣಗಳನ್ನು ಬಹಳ ಶೀಘ್ರವಾಗಿ ಕೃತವರ್ಮನ ಮೇಲೆ ಸುರಿಸಿದನು. ರಥಯುಕ್ತನಾಗಿದ್ದ ಕೃತವರ್ಮನನ್ನು ಬಾಣಗಳ ವರ್ಷದಿಂದ ಸುತ್ತಲೂ ಮುಚ್ಚಿಬಿಟ್ಟನು. ಈ ರೀತಿಯಲ್ಲಿ ಸಾತ್ಯಕಿಯು ಹಾರ್ದಿಕ್ಯನನ್ನು ಬಾಣಗಳಿಂದಲೇ ಮುಚ್ಚಿ ಅನಂತರ ಒಂದು ಭಲ್ಲದಿಂದ ಕೃತವರ್ಮನ ಸಾರಥಿಯ ಶಿರಸ್ಸನ್ನು ಕತ್ತರಿಸಿದನು. ಹಾರ್ದಿಕ್ಯನ ಸಾರಥಿಯು ಹತನಾಗಿ ಮಹಾರಥದಿಂದ ಕೆಳಕ್ಕೆ ಬಿದ್ದುಹೋದನು. ಅನಂತರ ನಿಯಂತೃವಿಲ್ಲದಿದ್ದ

ಹಾರ್ದಿಕ್ಯನ ರಥದ ಕುದುರೆಗಳು ಬಹಳ ಬೇಗ ಓಡಿಹೋದುವು. ಆದರೆ ಅದರಿಂದ ಹಾರ್ದಿಕ್ಯನು ಸ್ವಲ್ಪವೂ ಗಾಬರಿಗೊಳ್ಳದೇ ಕುದುರೆಗಳ ಕಡಿವಾಣಗಳನ್ನೂ ತಾನೇ ಹಿಡಿದು ಅವುಗಳನ್ನು ಹತೋಟಿಗೆ ತೆಗೆದುಕೊಂಡು ಧನುಷ್ಪಾಣಿಯಾಗಿ ರಥದಲ್ಲಿ ಕುಳಿತನು. ಹಾರ್ದಿಕ್ಯನ ಆ ಸಾಹಸವನ್ನು ನೋಡಿ ಸೈನಿಕರೆಲ್ಲರೂ ಅವನನ್ನು ಶ್ಲಾಘಿಸಿದರು. ಕೃತವರ್ಮನು ಸ್ವಲ್ಪಹೊತ್ತಿನಲ್ಲಿಯೇ ಸಮಾಧಾನವನ್ನು ಹೊಂದಿದವನಾಗಿ ತನ್ನ ಉತ್ತಮಾಶ್ವಗಳನ್ನು ಮುಂದೆ ಹೋಗುವಂತೆ ಚಪ್ಪರಿಸಿದನು. ಆ ಸಮಯದಲ್ಲವನು ಭಯರಹಿತನಾಗಿದ್ದು ಶತ್ರುಗಳ ಮನಸ್ಸಿನಲ್ಲಿ ಮಹಾಭಯವನ್ನುಂಟುಮಾಡುತ್ತಿದ್ದನು. ಈ ಮಧ್ಯದಲ್ಲಿ ಸಿಕ್ಕಿದ ಅವಕಾಶವನ್ನು ಉಪಯೋಗಿಸಿಕೊಂಡು ಸಾತ್ಯಕಿಯು ಕೃತವರ್ಮನ ಸೇನಾವಿಭಾಗವನ್ನು ಬಿಟ್ಟು ಮುಂದಕ್ಕೆ ಹೊರಟುಹೋದನು. ಯುದ್ಧಕ್ಕೆ ಹಿಂದಿರುಗಿದ ಕೃತವರ್ಮನು ಭೀಮಸೇನನನ್ನು ಆಕ್ರಮಿಸಿದನು. ಭೋಜನ (ಕೃತವರ್ಮನ) ಸೈನ್ಯಸಮೂಹದಿಂದ ಹೊರಬಂದ ಸಾತ್ಯಕಿಯು ಬಹಳ ಶೀಘ್ರವಾಗಿ ಕಾಂಬೋಜರ ವಿಶಾಲವಾದ ಸೈನ್ಯದ ಸಮೀಪಕ್ಕೆ ಹೋದನು. ಅಲ್ಲವನು ಶೂರರಾದ ಅನೇಕ ಮಹಾರಥರಿಂದ ತಡೆಯಲ್ಪಟ್ಟನು. ಆದರೂ ಸಹ ಸತ್ಯವಿಕ್ರಮನಾದ ಸಾತ್ಯಕಿಯು ಸ್ವಲ್ಪವೂ ವಿಚಲಿತನಾಗಲಿಲ್ಲ.

ಇತ್ತಲಾಗಿ ದ್ರೋಣರು ದಿಕ್ಕಾಪಾಲಾಗಿ ಹೋಗಿದ್ದ ಸೈನ್ಯವೆಲ್ಲವನ್ನೂ ಪುನಃ ಸಂಘಟಿಸಿ ಅದರ ರಕ್ಷಣೆಯ ಭಾರವನ್ನು ಕೃತವರ್ಮನಿಗೆ ವಹಿಸಿಕೊಟ್ಟು ಯುಯುಧಾನನೊಡನೆ ಯುದ್ಧಮಾಡುವ ಇಚ್ಛೆಯಿಂದ ಅವನನ್ನು ಹಿಂಬಾಲಿಸಿ ಹೋದರು. ದ್ರೋಣರು ಯುಯುಧಾನನನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಪಾಂಡವರ ಸೈನ್ಯದ ದೊಡ್ಡ-ದೊಡ್ಡ (ವಿಖ್ಯಾತರಾದ) ಯೋಧರು ಪರಮಹೃಷ್ಟರಾಗಿ ದ್ರೋಣರನ್ನು ತಡೆದು ನಿಲ್ಲಿಸಲು ಪ್ರಯತ್ನಿಸಿದರು. ಆದರೆ ರಥಿಗಳಲ್ಲಿ ಶ್ರೇಷ್ಠನಾದ ಹಾರ್ದಿಕ್ಯನ ರಥದ ಸಮೀಪಕ್ಕೆ ಹೋದ ಭೀಮಸೇನಪುರಃಸರರಾದ ಪಾಂಚಾಲರು ಉತ್ಸಾಹರಹಿತರಾದರು. ವೀರನಾದ ಕೃತವರ್ಮನು ಅವರೆಲ್ಲರನ್ನೂ ತನ್ನ ಪರಾಕ್ರಮದಿಂದ ತಡೆದುಬಿಟ್ಟನು. ಆದರೂ ಸಹ ಪಾಂಡವಸೈನಿಕರು ದ್ರೋಣರನ್ನು ಹಿಂಬಾಲಿಸಲು ಸತತವಾಗಿ ಪ್ರಯತ್ನಿಸುತ್ತಲೇ ಇದ್ದರು. ಕೃತವರ್ಮನು ತನ್ನ ತೀಕ್ಷ್ಣವಾದ ಬಾಣಗಳ ಪ್ರಹಾರದಿಂದ ಪಾಂಡವ

ಯೋಧರನ್ನು ದುರ್ಬಲರನ್ನಾಗಿಯೂ, ಪ್ರಜ್ಞಾಹೀನರನ್ನಾಗಿಯೂ ಮಾಡಿಬಿಟ್ಟನು. ಅವರ ಸುತ್ತಲೂ ಬಾಣಗಳನ್ನು ಧಾರಾಕಾರವಾಗಿ ಸುರಿಸಿ ಪಾಂಚಾಲಯೋಧರ ವಾಹನಗಳನ್ನೂ (ಗಜಾಶ್ವಗಳನ್ನೂ) ವ್ಯಾಕುಲಗೊಳಿಸಿದನು. ಈ ರೀತಿಯಲ್ಲಿ ಕೃತವರ್ಮನಿಂದ ತಡೆಯಲ್ಪಟ್ಟರೂ ಪಾಂಡವಯೋಧರು ಮಹಾಯಶಸ್ಸನ್ನು ಪಡೆದುಕೊಳ್ಳಬೇಕೆಂಬ ಅಭಿಲಾಷೆಯಿಂದಲೂ, ಕೃತವರ್ಮನ ಸೈನ್ಯದೊಡನೆ ಯುದ್ಧಮಾಡಬೇಕೆಂಬ ಇಚ್ಛೆಯಿಂದಲೂ ಯುದ್ಧದಿಂದ ಹಿಮ್ಮೆಟ್ಟದೇ ಶ್ರೇಷ್ಠಪುರುಷರಂತೆ ಸ್ಥಿರವಾಗಿಯೇ ರಣಾಂಗಣದಲ್ಲಿ ನಿಂತಿದ್ದರು."

೧೧೩ನೆಯ ಅಧ್ಯಾಯವು ಮುಗಿಯಿತು.

೧೧೪ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ವಿಷಾದ : ಸಂಜಯನು ಧೃತರಾಷ್ಟ್ರನ ಮೇಲೆ ದೋಷಾರೋಪಣೆ ಮಾಡಿದುದು : ಕೃತವರ್ಮನು ಭೀಮಸೇನನೊಡನೆಯೂ-ಶಿಖಂಡಿಯೊಡನೆಯೂ ಯುದ್ಧಮಾಡಿದುದು : ಪಾಂಡವರ ಪರಾಜಯ

ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ :

"ಸಂಜಯ! ನೀನು ವಿವರಿಸಿರುವ ರೀತಿಯಲ್ಲಿಯೇ ನನ್ನ ಸೈನ್ಯವು ಶೌರ್ಯಾದಿ ಅನೇಕ ಗುಣಗಳಿಂದ ಕೂಡಿದುದಾಗಿದೆ. ಸೂಕ್ಷ್ಮವಾದ ಪರೀಕ್ಷೆಗಳಿಂದ ಆರಿಸಿ ಸಂಘಟಿಸಿದ ಸೈನ್ಯವಾಗಿದೆ. ಶಾಸ್ತ್ರೀಯವಿಧಿಗೆ ಅನುಸಾರವಾಗಿ ವ್ಯೂಹಗಳನ್ನೂ ರಚಿಸಲಾಗುತ್ತಿದೆ. ಹೀಗೆ ಅನೇಕಗುಣಗಳಿಂದ ನಮ್ಮ ಸೈನ್ಯವು ಸಂಪನ್ನವಾಗಿದೆ.

ನಾವು ಯಾವಾಗಲೂ ನಮ್ಮ ಸೈನಿಕರನ್ನು ಪಾರಿತೋಷಿಕಗಳಿಂದಲೂ, ಆದರ-ಸತ್ಕಾರಗಳಿಂದಲೂ, ಯಥಾಯೋಗ್ಯವಾದ ಮಾಸಾಶನಗಳಿಂದಲೂ ಪೂಜಿಸುತ್ತಲೇ ಇದ್ದೇವೆ. ಸೈನಿಕರೂ ಸಹ ನಮ್ಮ ವಿಷಯದಲ್ಲಿ ಅನುರಕ್ತರಾಗಿಯೇ ಇದ್ದಾರೆ. ನಮ್ಮ ಸೈನಿಕರು ಯುದ್ಧದ ಕಲೆಯಲ್ಲಿ ಪ್ರೌಢರಾಗಿದ್ದಾರೆ. ಮೇಲಾಗಿ ನಮ್ಮ ಸೈನ್ಯವು ಅದ್ಭುತಾಕಾರವಾಗಿದೆ. (ಅಸಂಖ್ಯಾತವಾಗಿದೆ.)

ಹಿಂದೆ ಅವರ ಧೈರ್ಯ-ಶೌರ್ಯ-ಪರಾಕ್ರಮಗಳನ್ನು ನೋಡಿಯೇ ನಾವು ಅವರನ್ನು ಸೈನ್ಯಕ್ಕೆ ತೆಗೆದುಕೊಂಡಿರುತ್ತೇವೆ. ನಮ್ಮ ಸೈನ್ಯದಲ್ಲಿ ಅತಿ ವೃದ್ಧರಾದವರೂ ಇಲ್ಲ. ಕಿರಿವಯಸ್ಸಿನವರೂ ಇಲ್ಲ. ಅತ್ಯಂತಕೃಶರಾದವರೂ ಇಲ್ಲ. ಸ್ಥೂಲಕಾಯರೂ ಇಲ್ಲ. ನಮ್ಮ ಸೈನಿಕರ ಶರೀರಗಳು ಲಘುವಾಗಿವೆ. ದುಂಡಾಗಿವೆ. ಎತ್ತರವಾಗಿವೆ. ಎಲ್ಲರೂ ನಡುಪ್ರಾಯದವರಾಗಿದ್ದಾರೆ. ಅವರ ಅಂಗಾಂಗಗಳೂ ಸಾರವತ್ತಾಗಿವೆ. (ಬಲಿಷ್ಠವಾಗಿವೆ). ಸೈನಿಕರೆಲ್ಲರೂ ನೀರೋಗದೃಢಕಾಯರಾಗಿದ್ದಾರೆ. ಅವರ ಶರೀರಗಳು ಕವಚಗಳಿಂದ ಸಂರಕ್ಷಿತವಾಗಿವೆ. ಅವರಲ್ಲಿ ಶಸ್ತ್ರಾಸ್ತ್ರಗಳೂ ಮತ್ತು ಯುದ್ಧಸಾಮಗ್ರಿಗಳೂ ಅಪಾರವಾಗಿವೆ. ಅನೇಕಪ್ರಕಾರವಾದ ಶಸ್ತ್ರಗ್ರಹಣವಿದ್ಯೆಗಳಲ್ಲಿ ಅವರು ಪ್ರವೀಣರಾಗಿದ್ದಾರೆ. ವಾಹನಗಳನ್ನು ಹತ್ತುವುದರಲ್ಲಿ; ವಾಹನಗಳಿಂದ ಇಳಿಯುವುದರಲ್ಲಿ; ಅಲ್ಲಿಂದಿಲ್ಲಿಗೆ ಸುತ್ತಾಡುವುದರಲ್ಲಿ; ನೆಗೆದಾಡಿಕೊಂಡು ಹೋಗುವುದರಲ್ಲಿ; ಶತ್ರುವನ್ನು ಚೆನ್ನಾಗಿ ಪ್ರಹರಿಸುವುದರಲ್ಲಿ; ಶತ್ರುವಿನ ಸುಳುವನ್ನರಿತು ಯುದ್ಧಕ್ಕೆ ಹೋಗುವುದರಲ್ಲಿ ಮತ್ತು ಸಮಯಬಂದಾಗ ಯುದ್ಧದಿಂದ ತಪ್ಪಿಸಿಕೊಂಡು ಹೋಗುವುದರಲ್ಲಿ–ನನ್ನ ಸೈನ್ಯವು ಕುಶಲವಾಗಿದೆ. ನಮ್ಮ ಕಡೆಯ ಯುದ್ಧಪರಿಣತರು ಆನೆಗಳ ಮೇಲೂ, ಕುದುರೆಗಳ ಮೇಲೂ ಮತ್ತು ರಥಗಳ ಮೇಲೂ ಕುಳಿತು ಯುದ್ಧ ಮಾಡುವುದರಲ್ಲಿ ಅನೇಕಬಾರಿ ಪರೀಕ್ಷಿಸಲ್ಪಟ್ಟಿದ್ದಾರೆ. ಎಲ್ಲ ವಿಧಗಳಿಂದಲೂ ಪರೀಕ್ಷಿಸಿಯೇ ನಮ್ಮ ಸೈನಿಕರಿಗೆ ಯಥಾನುರೂಪವಾದ ವೇತನಗಳನ್ನು ಕೊಡಲಾಗುತ್ತಿದೆ.

**ನ ಗೋಷ್ಠ್ಯಾ ನೋಪಕಾರೇಣ ನ ಸಮ್ಬನ್ಧನಿಮಿತ್ತತಃ।**
**ನಾನಾಹೂತಂ ನಾಪ್ಯಭೃತಂ ಮಮ ಸೈನ್ಯಂ ಬಭೂವ ಹ ॥೭॥**

ಒಂದು ಪಂಗಡಕ್ಕೆ ಸೇರಿದವರೆಂಬ ಕಾರಣದಿಂದಲೇ ಈ ಸೈನಿಕರನ್ನು ಆರಿಸಿಕೊಂಡಿರುವುದಿಲ್ಲ. ಉಪಕಾರಮಾಡಿದ್ದಾರೆಂಬ ಕಾರಣದಿಂದ ಪ್ರತ್ಯುಪ ಕಾರಾರ್ಥವಾಗಿ ಅವರಿಗೆ ಸೈನ್ಯದಲ್ಲಿ ಸ್ಥಾನಗಳನ್ನು ಕಲ್ಪಿಸಿಕೊಟ್ಟಿರುವುದಿಲ್ಲ. ನಮ್ಮ ಸಂಬಂಧಿಗಳೆಂಬ ಕಾರಣದಿಂದಲೂ ಸ್ಥಾನಗಳನ್ನು ಹಂಚಿಕೊಡಲಾಗಿಲ್ಲ.

ನಮ್ಮ ಆಹ್ವಾನವಿಲ್ಲದೇ, ಯಾರೂ ಇಲ್ಲಿಗೆ ಬಂದು ಸೇರಿಕೊಂಡಿಲ್ಲ. ಯಾರೂ ಉಚಿತವಾಗಿ ಕೆಲಸವನ್ನು ಮಾಡುತ್ತಿಲ್ಲ. ಅರ್ಹತೆಯನ್ನು ಪರೀಕ್ಷಿಸಿಯೇ ಎಲ್ಲರನ್ನೂ ಆರಿಸಲಾಗಿದೆ. (ಯೋಗ್ಯತೆಗೆ ತಕ್ಕುದಾದ ವೇತನಗಳನ್ನೂ ಕೊಡಲಾಗುತ್ತಿದೆ).

**ಕುಲೀನಾರ್ಯಜನೋಪೇತಂ ತುಷ್ಟಪುಷ್ಟಮನುದ್ಧತಮ್ ।**
**ಕೃತಮಾನೋಪಚಾರಂ ಚ ಯಶಸ್ವಿ ಚ ಮನಸ್ವಿ ಚ ॥೮॥**

ನಮ್ಮ ಸೈನ್ಯವು ಸತ್ಕುಲಪ್ರಸೂತರಿಂದಲೂ ಶ್ರೇಷ್ಠಪುರುಷರಿಂದಲೂ ಕೂಡಿದ್ದಾಗಿದೆ. ಹೃಷ್ಟವೂ ಪುಷ್ಟವೂ ಆಗಿದೆ. ನಮ್ಮ ಸೈನಿಕರಿಗೆ ಉದ್ಧಟತನವಿಲ್ಲ. ಅವರು ವಿನಯಶೀಲರಾಗಿದ್ದಾರೆ. ಅವರೆಲ್ಲರನ್ನೂ ನಾವು ಮೊದಲಿನಿಂದಲೂ ಗೌರವಿಸಿ ಉಪಚರಿಸುತ್ತಿದ್ದೇವೆ. ಅವರೆಲ್ಲರೂ ಯಶೋವಂತರೂ ವಿದ್ಯಾವಂತರೂ ಆಗಿದ್ದಾರೆ. ಪುಣ್ಯಕರ್ಮಿಗಳೂ, ನರಶ್ರೇಷ್ಠರೂ ಮತ್ತು ಲೋಕಪಾಲೋಪಮರೂ ಆದ ನಮ್ಮ ಮಂತ್ರಿಗಳಿಂದಲೂ ಇತರ ಅನೇಕ ಮುಖ್ಯಾಧಿಕಾರಿಗಳಿಂದಲೂ ನಮ್ಮ ಸೈನಿಕರು ಪಾಲಿತರಾಗಿದ್ದಾರೆ. ನಮಗೆ ಪ್ರಿಯವನ್ನುಂಟುಮಾಡುವ ಇಚ್ಛೆಯುಳ್ಳ ಅನೇಕರಾಜರು ತಮ್ಮ ಅನುಚರರಿಂದಲೂ ಮತ್ತು ಸೈನ್ಯಗಳಿಂದಲೂ ಕೂಡಿದವರಾಗಿ ಸ್ವೇಚ್ಛೆ ಯಿಂದಲೇ ನಮ್ಮ ಪಕ್ಷಕ್ಕೆ ಬಂದು ಸೇರಿದ್ದಾರೆ. ಅವರೂ ಸಹ ನಮ್ಮ ಅಪಾರವಾದ ಸೈನ್ಯವನ್ನು ರಕ್ಷಿಸುತ್ತಿದ್ದಾರೆ.

ನಾಲ್ಕು ದಿಕ್ಕುಗಳಿಂದಲೂ ಬಂದು ಸೇರುವ ನದಿಗಳಿಂದ ಸಮುದ್ರವು ಪೂರ್ಣವಾಗುವಂತೆ-ನಮ್ಮ ಸೇನಾಸಮುದ್ರವು ಭೂವಲಯದ ಸಮಸ್ತದೇಶ ಗಳಿಂದಲೂ ಬಂದು ಸೇರಿಕೊಂಡಿರುವ ಸೈನಿಕರಿಂದ ಪರಿಪೂರ್ಣವಾಗಿದೆ. ರೆಕ್ಕೆಗಳಿಲ್ಲದಿದ್ದರೂ ಪಕ್ಷಿಗಳಿಗೆ ಸಮಾನವಾದ ವೇಗದಿಂದ ಕೂಡಿರುವ ರಥಗಳಿಂದಲೂ ಮತ್ತು ಕುದುರೆಗಳಿಂದಲೂ ನಮ್ಮ ಸೈನ್ಯವು ಸಮೃದ್ಧವಾಗಿದೆ. ಗಂಡಸ್ಥಳಗಳಿಂದ ಮದೋದಕವನ್ನು ಸುರಿಸುತ್ತಿರುವ ಬಹುಸಂಖ್ಯಾತವಾದ ಆನೆಗಳಿಂದಲೂ ಸಮೃದ್ಧವಾಗಿರುವ ನನ್ನ ಮಹಾಸೈನ್ಯವೂ ಶತ್ರುಗಳಿಂದ ವಿನಾಶಹೊಂದಿತೆಂದರೆ ಇದು ಕೇವಲ ಅದೃಷ್ಟವಲ್ಲದೇ ಮತ್ತೇನು?

ಸಂಜಯ! ನನ್ನ ಸೈನ್ಯವು ಭಯಂಕರವಾದ ಮಹಾಸಮುದ್ರಕ್ಕೆ ಸಮಾನ

ವಾಗಿದೆ. ಬಹುಸಂಖ್ಯಾತರಾದ ಸೈನಿಕರೇ ಸೈನ್ಯಸಮುದ್ರದ ಇಂಗಿಹೋಗದ ಜಲಪ್ರಾಯರಾಗಿದ್ದಾರೆ. ಆನೆ, ಕುದುರೆ ಮೊದಲಾದ ವಾಹನಗಳು ಸೇನಾಸಮುದ್ರದ ಅಲೆಗಳ ಮಾಲೆಗಳಂತಿವೆ. ಭಿಂದಿಪಾಲ, ಖಡ್ಗ, ಗದೆ, ಶಕ್ತ್ಯಾಯುಧ, ಬಾಣ, ಪ್ರಾಸ-ಇವುಗಳೇ ಅದರ ಮೀನುಗಳಂತಿವೆ. ಧ್ವಜಗಳು ಮತ್ತು ಆಭರಣಗಳೇ ಸಮುದ್ರದ ತಳಭಾಗದಲ್ಲಿರುವ ಮುತ್ತು-ರತ್ನಗಳಾಗಿವೆ. ಓಡುತ್ತಿರುವ ಗಜ-ತುರಗಾದಿ ವಾಹನಗಳಿಂದ ಸಮುದ್ಭೂತವಾದ ವಾಯುವಿನ ವೇಗದಿಂದ ಸೇನಾಸಮುದ್ರವು ಅಲ್ಲೋಲ-ಕಲ್ಲೋಲವಾಗಿದೆ. ದ್ರೋಣರು ಸೇನಾಸಮುದ್ರದ ಆಳವಾದ ಪಾತಾಳದಂತಿದ್ದಾರೆ. ಕೃತವರ್ಮನು ಅದರ ಮಡುವಿನಂತಿದ್ದಾನೆ. ಜಲಸಂಧನು ಸೇನಾಸಮುದ್ರದ ಮೊಸಳೆಯಂತಿದ್ದಾನೆ. ಕರ್ಣರೂಪಿಯಾದ ಚಂದ್ರನಿಂದ ನಮ್ಮ ಸೇನಾ ಸಮುದ್ರವು ಮೇಲಕ್ಕೆ ಉಕ್ಕಿಬರುತ್ತದೆ.

ಸಂಜಯ! ಇಂತಹ ನನ್ನ ಸೇನಾಸಮುದ್ರವನ್ನು ಭೇದಿಸಿಕೊಂಡು ಪಾಂಡವಶ್ರೇಷ್ಠನಾದ ಸವ್ಯಸಾಚಿಯು ಶೀಘ್ರಗತಿಯಲ್ಲಿ ಮುನ್ನುಗ್ಗಿ ಹೋಗ ಲಾಗಿ, ರಥೈಕಸಹಾಯನಾದ, ಮಹಾರಥನಾದ ಸಾತ್ವತವಂಶೀಯನಾದ ಯುಯುಧಾನನು ನನ್ನ ಸೈನ್ಯವನ್ನು ಪ್ರವೇಶಿಸಲಾಗಿ, ನನ್ನ ಸೈನ್ಯದಲ್ಲಿ ಸ್ವಲ್ಪವಾದರೂ ಶೇಷವು ಉಳಿಯುವುದೆಂಬ ಆಶೆಯೇ ನನಗಿಲ್ಲವಾಗಿದೆ.

ಅತ್ಯಂತ ವೇಗಶಾಲಿಗಳಾದ, ಎಲ್ಲರನ್ನೂ ಅತಿಕ್ರಮಿಸಿ ಮುಂದೆ ಹೋಗು ತ್ತಿರುವ ಅರ್ಜುನ-ಯುಯುಧಾನರನ್ನೂ, ಗಾಂಡೀವದಿಂದ ಚ್ಯುತವಾಗುವ ಬಾಣಗಳ ಸೀಮೆಯೊಳಗಿರುವ ಸಿಂಧುರಾಜನಾದ ಜಯದ್ರಥನನ್ನೂ ನೋಡಿ ಕಾಲಚೋದಿತರಾದ ನನ್ನ ಮಕ್ಕಳು ಸರ್ವವಿನಾಶವನ್ನು ತಪ್ಪಿಸುವ ಸಲುವಾಗಿ ಯಾವ ಕಾರ್ಯವನ್ನು ಕೈಗೊಂಡರು? ಮೃತ್ಯುವು ಹೊರತಾಗಿ ಬೇರೆಯ ಮಾರ್ಗವೇ ಇಲ್ಲದಿದ್ದ ಕಾಲದಲ್ಲಿ ಅವರು ಯಾವರೀತಿಯಲ್ಲಿ ಪರಿಸ್ಥಿತಿಯನ್ನು ಎದುರಿಸಿದರು? ಯುದ್ಧಭೂಮಿಯಲ್ಲಿ ಒಂದೇ ಕಡೆಯಲ್ಲಿ ಸೇರಿದ್ದ ಕೌರವ ರೆಲ್ಲರನ್ನೂ ಮೃತ್ಯುವೇ ನುಂಗಿಬಿಟ್ಟಿರಬಹುದೆಂದು ನಾನು ಭಾವಿಸುತ್ತೇನೆ. ಅವರ ಪರಾಕ್ರಮವೂ ಸಹ ಹಿಂದಿದ್ದಂತೆ ಈಗಲೂ ಇರುವುದೆಂದು ನನ್ನ ಮನಸ್ಸಿಗೆ ಗೋಚರವಾಗುತ್ತಿಲ್ಲ. ಏಕೆಂದರೆ: ಕೃಷ್ಣ-ಪಾಂಡವರು ಅಕ್ಷತರಾಗಿಯೇ (ಒಂದು

ಪೆಟ್ಟೂ ಬೀಳದೆಯೇ) ನನ್ನ ಸೈನ್ಯವನ್ನು ಪ್ರವೇಶಿಸಿದರು. ಸೈನ್ಯದೊಳಗೆ ನುಗ್ಗಿಬಂದ ಅವರನ್ನು ತಡೆದು ನಿಲ್ಲಿಸಲೂ ಕೂಡ ನಮ್ಮ ಕಡೆಯಲ್ಲಿ ಯಾರೂ ಇರಲಿಲ್ಲ.

ಅನೇಕ ಯೋಧರೂ ಮತ್ತು ಅನೇಕ ಮಹಾರಥರೂ ಯಥಾವಿಧಿಯಾದ ಪರೀಕ್ಷಾನಂತರವೇ ನಮ್ಮ ಸೈನ್ಯದಲ್ಲಿ ಸೇರಿಕೊಂಡಿದ್ದರು. (ಪರೀಕ್ಷೆಮಾಡದೇ ಯಾರನ್ನೂ ನಮ್ಮ ಸೈನ್ಯದಲ್ಲಿ ಸೇರಿಸಿಕೊಂಡಿರಲಿಲ್ಲ.) ಅವರೆಲ್ಲರೂ ಯಥಾಯೋಗ್ಯವಾದ ವೇತನಗಳನ್ನು ಪಡೆದುಕೊಳ್ಳುತ್ತಿದ್ದಾರೆ. ವೇತನದ ಅಪೇಕ್ಷೆಯಿಲ್ಲದವರನ್ನು ಪ್ರಿಯವಾದ ಮಾತುಗಳಿಂದಲೂ, ಯಥಾಯೋಗ್ಯವಾದ ಸತ್ಕಾರಗಳಿಂದಲೂ ಗೌರವಿಸುತ್ತಿರಲಾಗಿದೆ. ನನ್ನ ಸೈನ್ಯದಲ್ಲಿ ಯಥಾಯೋಗ್ಯವಾದ ಸತ್ಕಾರವನ್ನು ಪಡೆದುಕೊಳ್ಳದೇ ಇರತಕ್ಕವರು ಯಾರೂ ಇಲ್ಲ. ಅವರು ಮಾಡುವ ಕಾರ್ಯಗಳಿಗೆ ಅನುರೂಪವಾದ ಭತ್ಯ ಮತ್ತು ವೇತನಗಳನ್ನು ಎಲ್ಲರೂ ಪಡೆದುಕೊಳ್ಳುತ್ತಿದ್ದಾರೆ. ನನ್ನ ಸೈನ್ಯದಲ್ಲಿ ಅವನ ಕಾರ್ಯಕ್ಕೆ ಸಮನಲ್ಲದ ಕಡಿಮೆ ವೇತನವನ್ನು ಪಡೆಯುವ ಮತ್ತು ವೇತನವೇ ಇಲ್ಲದ ಒಬ್ಬ ಯೋಧನೂ ಇರಲಿಲ್ಲ. ನಾನೂ ನನ್ನ ಮಕ್ಕಳೂ, ಜ್ಞಾತಿಗಳೂ ಮತ್ತು ಬಾಂಧವರೂ ದಾನ, ಗೌರವ, ಆಸನಾದಿಗಳನ್ನು ಕೊಟ್ಟು ನಮ್ಮ ಸೈನಿಕರನ್ನು ಯಥಾಶಕ್ತಿ ಸತ್ಕರಿಸಿದ್ದೇವೆ. ಇಂತಹವರೂ ಸಹ ಯುದ್ಧದಲ್ಲಿ ಅರ್ಜುನನಿಂದ ಪರಾಜಯವನ್ನೇ ಹೊಂದಿದರು. ಈಗ ರಥೈಕಸಹಾಯನಾದ ಸಾತ್ಯಕಿಯೂ ಅವರ ಮೇಲೆ ಅವ್ಯಾಹತವಾಗಿ ದಾಳಿಯನ್ನು ನಡೆಸುತ್ತಿದ್ದಾನೆ. ಅದಕ್ಕೆ ಅದೃಷ್ಟವೇ ಕಾರಣವಲ್ಲದೇ ಮತ್ತಾವ ಕಾರಣವಿದೆ?

**ರಕ್ಷ್ಯತೇ ಯಶ್ಚ ಸಂಗ್ರಾಮೇ ಯೇ ಚ ಸಂಜಯ ರಕ್ಷಿಣಃ ।**
**ಏಕಃ ಸಾಧಾರಣಃ ಪನ್ಥಾ ರಕ್ಷ್ಯಸ್ಯ ಸಹ ರಕ್ಷಿಭಿಃ ॥೨೭॥**

ಸಂಜಯ! ಸಂಗ್ರಾಮದಲ್ಲಿ ಯಾರು ರಕ್ಷಿಸಲ್ಪಡುವರೋ ಮತ್ತು ಯಾರು ರಕ್ಷಿಸುವರೋ–ಅವರಿಗೆ ಬೇರೆ-ಬೇರೆ ಮಾರ್ಗಗಳೇನೂ ಇರುವುದಿಲ್ಲ. (ಯಾವಾಗಲೂ ರಕ್ಷಕರು ರಕ್ಷಣೀಯಪುರುಷರನ್ನು ಉಳಿಸುವ ಸಲುವಾಗಿ ಮುನ್ನುಗ್ಗಿ ಪ್ರಾಣಾರ್ಪಣೆಮಾಡುತ್ತಾರೆ. ಆದುದರಿಂದ ರಕ್ಷಕನದು ಯಾವಾಗಲೂ ಪ್ರಾಣಾರ್ಪಣೆಯ ಮಾರ್ಗ; ರಕ್ಷಣೀಯಪುರುಷನದು

ವಿಜಯದ ಮಾರ್ಗ.) ಆದರೆ ಈಗ ನಡೆಯುತ್ತಿರುವ ಸಂಗ್ರಾಮದಲ್ಲಿ ರಕ್ಷ್ಯರಿಗೂ-ರಕ್ಷಕರಿಗೂ ವಿಭಿನ್ನಮಾರ್ಗಗಳಿಲ್ಲ. ರಕ್ಷಕರೊಡನೆ ರಕ್ಷಣೀಯರೂ ಒಂದೇ ರೀತಿಯಾದ ಸಾಧಾರಣಮಾರ್ಗವನ್ನೇ ಹಿಡಿದು ಹೋಗುತ್ತಾರೆ. (ಇಬ್ಬರ ವಧೆಯೂ ಏಕಪ್ರಕಾರವಾಗಿ ಆಗುತ್ತಿದೆ.)

ಸಮರಾಂಗಣದಲ್ಲಿ ಅರ್ಜುನನು ಸೈಂಧವನಿಗೆ ಎದುರಾಗಿ ನಿಂತಿರುವುದನ್ನು ಕಂಡು ಮಹಾಮೂಢನಾದ ನನ್ನ ಮಗನು ಸೈಂಧವನ ರಕ್ಷಣೆಗಾಗಿ ಯಾವ ಕಾರ್ಯವನ್ನು ಕೈಗೊಂಡನು? ಸ್ವಲ್ಪವಾದರೂ ಭಯ ಗೊಳ್ಳದವನಂತೆ ನಮ್ಮ ಸೈನ್ಯದೊಳಕ್ಕೆ ನುಗ್ಗಿ ಬರುತ್ತಿದ್ದ ಸಾತ್ಯಕಿಯನ್ನು ಸಮರಾಂಗಣದಲ್ಲಿ ನೋಡಿದ ದುರ್ಯೋಧನನು ಆ ಸಮಯದಲ್ಲಿ ಯಾವ ಕಾರ್ಯವನ್ನು ಮಾಡುವುದು ಉಚಿತವೆಂದು ಭಾವಿಸಿದನು? ನನ್ನ ಸೈನಿಕರು ಬಿಡುತ್ತಿದ್ದ ಎಲ್ಲ ಶಸ್ತ್ರಗಳನ್ನೂ ಅತಿಕ್ರಮಿಸಿ ವ್ಯೂಹವನ್ನು ಪ್ರವೇಶಿಸಿದ ರಥಿಶ್ರೇಷ್ಠರಾದ ಅರ್ಜುನ ಮತ್ತು ಸಾತ್ಯಕಿಯರನ್ನು ನೋಡಿ ನನ್ನ ಸೈನಿಕರು ಯಾವ ಬುದ್ಧಿಯನ್ನು ಹೊಂದಿದರು? (ಅವರೊಡನೆ ಯುದ್ಧಮಾಡಲು ನಿಶ್ಚಯಿಸಿದರೋ ಅಥವಾ ಪಲಾಯನಮಾಡಲು ನಿಶ್ಚಯಿಸಿದರೋ?)

ಅರ್ಜುನನ ಸಲುವಾಗಿ ರಥದಲ್ಲಿ ಕುಳಿತಿದ್ದ ದಶಾರ್ಹಕುಲತಿಲಕನಾದ ಶ್ರೀಕೃಷ್ಣನನ್ನೂ ಮತ್ತು ಶಿನಿಪ್ರವೀರನಾದ ಸಾತ್ಯಕಿಯನ್ನೂ ನೋಡಿದ ನನ್ನ ಮಕ್ಕಳು ಹತಾಶರಾಗಿ ದುಃಖಿಸುತ್ತಿದ್ದಾರೆಂದು ನಾನು ಭಾವಿಸುತ್ತೇನೆ. ಅರ್ಜುನ-ಸಾತ್ವತರು ಕೌರವರ ಮಹಾಸೈನ್ಯವನ್ನು ಅತಿಕ್ರಮಿಸಿ ಸೈಂಧವನ ಸಮೀಪಕ್ಕೆ ಬಂದುದನ್ನೂ ಮತ್ತು ಪಲಾಯನಮಾಡುತ್ತಿರುವ ಕುರುಸೇನೆ ಯನ್ನೂ ನೋಡಿ ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಶತ್ರುಗಳನ್ನು ಜಯಿಸುವುದರಲ್ಲಿ ನಿರುತ್ಸಾಹಿಗಳಾಗಿ ಪಲಾಯನಮಾಡುವುದ ರಲ್ಲಿಯೇ ವಿಶೇಷವಾದ ಉತ್ಸಾಹವುಳ್ಳವರಾಗಿ ರಥದಲ್ಲಿ ಓಡಿಹೋಗುತ್ತಿದ್ದ ರಥಿಕರನ್ನು ಕಂಡು ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಅರ್ಜುನ-ಸಾತ್ಯಕಿಯರು ರಥಗಳ ಆಸನಗಳನ್ನು ಶೂನ್ಯವನ್ನಾಗಿ ಮಾಡುತ್ತಿರು ವುದನ್ನೂ ಅನೇಕ ಯೋಧರು ಅರ್ಜುನ-ಸಾತ್ಯಕಿಯರ ಬಾಣಪ್ರಹಾರಗಳಿಂದ ಹತರಾಗುತ್ತಿರುವುದನ್ನೂ ಕಂಡು ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿ

ಸುತ್ತೇನೆ. ಗಜಾಶ್ವ-ರಥಗಳಿಂದ ವಿಹೀನರಾಗಿ ಉದ್ವಿಗ್ನರಾಗಿ ಓಡಿ ಹೋಗುತ್ತಿರುವ ಸಾವಿರಾರು ಮಂದಿ ವೀರಯೋಧರನ್ನು ನೋಡಿ ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ವೀರನಾದ ಅರ್ಜುನನ ನಿಶಿತವಾದ ಬಾಣಗಳಿಂದ ಪ್ರಹೃತವಾದ ಮಹಾಗಜಗಳು ಓಡಿಹೋಗು ತ್ತಿರುವುದನ್ನೂ, ಅಸುನೀಗಿ ಕೆಳಗೆ ಬಿದ್ದಿರುವುದನ್ನೂ ಮತ್ತು ಬೀಳುತ್ತಿರುವು ದನ್ನೂ ನೋಡಿ ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಮಹಾರಥರಾದ ಸಾತ್ಯಕಿ ಮತ್ತು ಅರ್ಜುನರು ಕುದುರೆಗಳನ್ನು ಸವಾರರಿಂದ ರಹಿತವನ್ನಾಗಿಯೂ, ರಥಿಕರನ್ನು ರಥಹೀನರನ್ನಾಗಿಯೂ ಮಾಡಿದುದನ್ನು ಕಂಡು ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಪ್ರಹಾರಕುಶಲ ರಾದ ಸಾತ್ಯಕಿ ಮತ್ತು ಅರ್ಜುನರು ಕುದುರೆಗಳ ಸಮೂಹಗಳನ್ನೇ ಸಂಹರಿಸುತ್ತಿರುವುದನ್ನೂ, ಅವರ ಬಾಣಗಳಿಂದ ಗಾಯಗೊಂಡ ಸಾವಿರಾರು ಕುದುರೆಗಳು ದಿಕ್ಕುಗಾಣದೇ ಅಲ್ಲಿಂದಿಲ್ಲಿಗೆ-ಇಲ್ಲಿಂದಲ್ಲಿಗೆ ಓಡುತ್ತಿರುವುದನ್ನೂ ಕಂಡು ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಪದಾತಿಸೈನ್ಯ ಸಮೂಹಗಳು ಅರ್ಜುನ-ಸಾತ್ಯಕಿಯರ ಅನವರತವಾದ ಬಾಣಗಳ ಪ್ರಹಾರಗಳಿಂದ ಗಾಯಗೊಂಡು ರಣಾಂಗಣದ ಸುತ್ತಲೂ ಆರ್ತನಾದಗಳನ್ನು ಮಾಡುತ್ತಾ ಓಡಾಡುತ್ತಿರುವುದನ್ನು ಕಂಡು ವಿಜಯದಲ್ಲಿ ನಿರಾಶೆಹೊಂದಿದ ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಅಪರಾಜಿತರಾದ, ವೀರರಾದ, ಯುದ್ಧದುರ್ಮದರಾದ ಅರ್ಜುನ- ಶೈನೇಯರಿಬ್ಬರೂ ದುರಾಸದ ವಾದ ದ್ರೋಣರ ವಾಹಿನಿಯನ್ನು ಕ್ಷಣಮಾತ್ರದಲ್ಲಿ ಅತಿಕ್ರಮಿಸಿ ಬಂದುದನ್ನು ಕಂಡು ನನ್ನ ಮಕ್ಕಳು ದುಃಖಿಸುತ್ತಿದ್ದಾರೆಂದು ನಾನು ಭಾವಿಸುತ್ತೇನೆ. ತಾತ, ಸಂಜಯ! ಕ್ಷಾತ್ರಧರ್ಮದಿಂದ ಯಾವಾಗಲೂ ಚ್ಯುತರಾಗದೇ ಇರತಕ್ಕ ಕೃಷ್ಣ-ಧನಂಜಯರು ಸಾತ್ವತನೊಡನೆ ನನ್ನ ಸೈನ್ಯವನ್ನು ಪ್ರವೇಶಿಸಿದರೆಂಬ ವಾರ್ತೆಯನ್ನು ಕೇಳಿ ನಾನು ಮಹಾಮೂಢನಾಗಿಬಿಟ್ಟಿದ್ದೇನೆ. (ಬುದ್ಧಿಗೆಟ್ಟವ ನಾಗಿದ್ದೇನೆ.) ಶಿನಿಪ್ರವೀರನಾದ, ಮಹಾರಥನಾದ ಸಾತ್ಯಕಿಯು ಕೃತ ವರ್ಮನ ಸೈನ್ಯವನ್ನು ಅತಿಕ್ರಮಿಸಿ ಕುರುಸೈನ್ಯದೊಳಗೆ ಪ್ರವೇಶಿದನಂತರ ಕೌರವರೇನು ಮಾಡಿದರು? ದ್ರೋಣರು ಯುದ್ಧದಲ್ಲಿ ಪಾಂಡವರನ್ನು

ನಿಗ್ರಹಿಸಿದನಂತರ ಮುಂದೆ ಆ ವಿಭಾಗದಲ್ಲಿ ಯುದ್ಧವು ಹೇಗೆ ನಡೆಯಿತು?– ಈ ಎಲ್ಲ ವಿಷಯಗಳನ್ನೂ ನನಗೆ ಹೇಳು, ಸಂಜಯ!

ದ್ರೋಣರು ಮಹಾಬಲಿಷ್ಠರು; ವೀರಶ್ರೇಷ್ಠರು; ಅಸ್ತ್ರವಿದ್ಯೆಯಲ್ಲಿ ಮಹಾನಿಪುಣರು; ಯುದ್ಧೋನ್ಮತ್ತರು. ಇಂತಹ ಮಹಾಧನುಷ್ಮಂತರಾದ ದ್ರೋಣರನ್ನು ಅವರ ಬದ್ಧವೈರಿಗಳಾದ, ಧನಂಜಯನ ಹಿತೈಷಿಗಳಾದ, ಪಾಂಚಾಲರು ಯಾವ ರೀತಿಯಲ್ಲಿ ಪ್ರತಿರೋಧಿಸಿದರು? ಮಹಾರಥನಾದ ಅಶ್ವತ್ಥಾಮನೂ ಸಹ ಪಾಂಚಾಲರ ಬದ್ಧವೈರಿಯಾಗಿದ್ದಾನೆ. (ದ್ರೋಣರನ್ನು ಪಾಂಚಾಲರು ಆಕ್ರಮಿಸಿದಾಗ ಅಶ್ವತ್ಥಾಮನೇನು ಮಾಡಿದನು?) ಸಿಂಧುರಾಜನಾದ ಜಯದ್ರಥನ ವಧೆಗಾಗಿ ಅರ್ಜುನನೇನು ಮಾಡಿದನು? ಸಂಜಯ! ಈ ಎಲ್ಲ ವಿಷಯಗಳನ್ನೂ ನನಗೆ ಯಥಾವತ್ತಾಗಿ ಹೇಳು. ವಿಷಯನಿರೂಪಣೆಯಲ್ಲಿ ನೀನು ಬಹಳ ಕುಶಲನಾಗಿರುವೆ."

"ಭರತರ್ಷಭನೇ! ಈ ಎಲ್ಲ ವ್ಯಸನಗಳೂ ನಿನ್ನ ಅಪರಾಧದಿಂದಲೇ ಪ್ರಾಪ್ತವಾಗಿವೆ. ಸ್ವಾಪರಾಧದಿಂದ ಪ್ರಾಪ್ತವಾಗಿರುವ ಫಲವನ್ನು ಹೊಂದಿ ಈಗ ಸಾಮಾನ್ಯಮನುಷ್ಯನಂತೆ ಶೋಕಿಸುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ. ಹಿಂದೆ ಪ್ರಾಜ್ಞರಾದ ವಿದುರನೇ ಮೊದಲಾದ ಸುಹೃದರು ಪಾಂಡವರ ರಾಜ್ಯಾಪಹರಣಮಾಡಬೇಡವೆಂದು ನಿನಗೆ ಸಲಹೆನೀಡಿದರು. ಆದರೆ ಆಗ ನೀನು ಅವರ ಮಾತನ್ನು ಕೇಳಲಿಲ್ಲ. ಹಿತವನ್ನು ಅಪೇಕ್ಷಿಸುವ ಸ್ನೇಹಿತರ ಮಾತನ್ನು ಯಾವನು ಕೇಳುವುದಿಲ್ಲವೋ ಅವನು ಮಹಾವ್ಯಸನವನ್ನು ಹೊಂದಿ ನೀನು ದುಃಖಿಸುತ್ತಿರುವಂತೆಯೇ ದುಃಖಿಸುತ್ತಾನೆ. ದಶಾರ್ಹಕುಲತಿಲಕನಾದ ಶ್ರೀಕೃಷ್ಣನೇ ನಿನ್ನ ಸಮೀಪಕ್ಕೆ ಶಾಂತಿಯನ್ನು ಯಾಚಿಸಿ ಬಂದಿದ್ದನು. ಮಹಾಯಶೋವಂತನಾದ ಶ್ರೀಕೃಷ್ಣನು ತನ್ನ ಅಭಿಲಾಷೆಯನ್ನು ನಿನ್ನಿಂದ ಪೂರ್ಣಮಾಡಿಕೊಳ್ಳಲಿಲ್ಲ. (ಭಗವಂತನಾದ ಶ್ರೀಕೃಷ್ಣನಿಗೂ ನೀನು ನಕಾರವನ್ನೇ ಹೇಳಿಬಿಟ್ಟೆ.) ಸಕಲಲೋಕಗಳ ತತ್ತ್ವವನ್ನೂ ತಿಳಿದಿರುವ, ಸರ್ವಲೋಕೇಶ್ವರನಾದ, ಪ್ರಭುವಾದ ವಾಸುದೇವನು–ನೀನು ಗುಣಹೀನ ನೆಂಬುದನ್ನೂ, ನಿನ್ನ ಮಕ್ಕಳ ವಿಷಯದಲ್ಲಿ ಪಕ್ಷಪಾತವಿರತಕ್ಕವನೆಂಬುದನ್ನೂ, ಧರ್ಮದ ವಿಷಯದಲ್ಲಿ ಸಂಶಯವಿರತಕ್ಕವನೆಂಬುದನ್ನೂ, ಪಾಂಡವರ ವಿಷಯದಲ್ಲಿ ಮಾತ್ಸರ್ಯದಿಂದ ಮತ್ತು ಕುಟಿಲಾಭಿಪ್ರಾಯದಿಂದ ಇರತಕ್ಕವ

ನೆಂಬುದನ್ನೂ, ಆರ್ತರಂತೆ ವ್ಯರ್ಥವಾಗಿ (ತೋರಿಕೆಗಾಗಿ) ಪ್ರಲಾಪ ಮಾಡುತ್ತಿರುವೆಯೆಂಬುದನ್ನೂ ತಿಳಿದೇ ಕುರು-ಪಾಂಡವರ ನಡುವೆ ಮಹಾಯುದ್ಧದ ಯೋಜನೆಯನ್ನು ಸಿದ್ಧಗೊಳಿಸಿದನು. ಮಾನದ! ಸ್ವಾಪರಾಧ ದಿಂದ (ಆ ಮಹಾಪರಾಧದ ಫಲವಾಗಿ) ನಿನ್ನ ಸಮಕ್ಷದಲ್ಲಿಯೇ ಅಸಾಧಾರಣ ವಾದ ಜನಸಂಹಾರವು ನಡೆಯುತ್ತಿದೆ. ಈ ದೋಷವನ್ನು ದುರ್ಯೋಧನನ ಮೇಲೆ ಹೊರೆಸುವುದು ನಿನಗೆ ಉಚಿತವಲ್ಲ. ಭಾರತನೇ! ನೀನು ಆದಿಯಲ್ಲಾಗಲೀ, ಮಧ್ಯದಲ್ಲಾಗಲೀ, ಅಂತ್ಯದಲ್ಲಾಗಲೀ–ಸುಕೃತವನ್ನು (ಒಳ್ಳೆಯದನ್ನು ) ಮಾಡಿರುವುದು ಕಾಣುವುದಿಲ್ಲ. ಆದುದರಿಂದ ಪರಾಜಯಕ್ಕೆ ಮೂಲಕಾರಣನು ನೀನೇ ಆಗಿರುವೆ. ಆದುದರಿಂದ ಮನಸ್ಸಿನಲ್ಲಿ ಸ್ಥಿರತೆಯನ್ನು ಹೊಂದಿ, ಲೋಕದ ನಿರ್ಧಾರವನ್ನು ತಿಳಿದುಕೊಂಡು (ಪಾಪಕ್ಕೆ ತಕ್ಕುದಾದ ಪ್ರಾಯಶ್ಚಿತ್ತವೆಂಬುದನ್ನು ಮನಗಂಡು) ದೇವಾಸುರರ ಯುದ್ಧಕ್ಕೆ ಸಮಾನವಾದ ಕೌರವ-ಪಾಂಡವರ ಭಯಂಕರಯುದ್ಧವು ಯಾವ ರೀತಿಯಲ್ಲಿ ನಡೆಯಿ ತೆಂಬುದನ್ನು ಕೇಳು. ಸತ್ಯವಿಕ್ರಮನಾದ ಶೈನೇಯನು ನಿನ್ನ ಸೈನ್ಯವ್ಯೂಹವನ್ನು ಪ್ರವೇಶಿಸಿದನಂತರ ಭೀಮಸೇನಪ್ರಮುಖರಾದ ಪಾರ್ಥರು ನಿನ್ನ ವಿಶಾಲವಾದ ಸೈನ್ಯದಮೇಲೆ ಆಕ್ರಮಣಮಾಡಿದರು. ಅತಿತ್ವರೆಯಿಂದ ಮೇಲೆ ಬೀಳಲು ಬರುತ್ತಿದ್ದ, ಪರಮಕ್ರುದ್ಧರಾಗಿದ್ದ, ಸೇನಾಸಮೇತರಾಗಿದ್ದ ಪಾಂಡವ ರನ್ನು ಮಹಾರಥನಾದ ಕೃತವರ್ಮನು ಏಕಾಕಿಯಾಗಿ ಎದುರಿಸಿದನು. ಉಕ್ಕಿಬರುತ್ತಿರುವ ಸಮುದ್ರವನ್ನು ತೀರಪ್ರದೇಶವು ತಡೆದುನಿಲ್ಲಿಸುವಂತೆ– ಪಾಂಡವರ ಅಪಾರವಾದ ಸೈನ್ಯವನ್ನೂ ಹಾರ್ದಿಕ್ಯನೊಬ್ಬನೇ ತಡೆದು ನಿಲ್ಲಿಸಿದನು. ಪಾರ್ಥರೆಲ್ಲರೂ ಸಂಘಟಿತರಾಗಿ ದಾಳಿಮಾಡಿದರೂ ಸಹ ಆ ಸಮಯದಲ್ಲಿ ಅವರು ಒಬ್ಬನೇ ಒಬ್ಬ ಹಾರ್ದಿಕ್ಯನನ್ನು ಅತಿಕ್ರಮಿಸಿ ಹೋಗಲು ಸಾಧ್ಯವಾಗಲಿಲ್ಲ. ಆಗಲೇ ನಾವು ಕೃತವರ್ಮನ ಪರಮಾದ್ಭುತವಾದ ಪರಾಕ್ರಮವನ್ನು ಕಂಡೆವು. ಅನಂತರ ಮಹಾಬಾಹುವಾದ ಭೀಮಸೇನನು ಶೀಘ್ರವಾಗಿ ಹೋಗುವ ಮೂರು ಬಾಣಗಳಿಂದ ಕೃತವರ್ಮನನ್ನು ಪ್ರಹರಿಸಿ, ಸರ್ವಪಾಂಡವರನ್ನೂ ಹರ್ಷಗೊಳಿಸುತ್ತಾ ಶಂಖವನ್ನು ಗಟ್ಟಿಯಾಗಿ ಊದಿ ದನು. ಬಳಿಕ ಸಹದೇವನು–ಇಪ್ಪತ್ತುಬಾಣಗಳಿಂದಲೂ, ಧರ್ಮರಾಜನು– ಐದು ಬಾಣಗಳಿಂದಲೂ, ನಕುಲನು–ನೂರುಬಾಣಗಳಿಂದಲೂ, ಹಾರ್ದಿಕ್ಯ ನನ್ನು ಪ್ರಹರಿಸಿದರು. ಐವರು ದ್ರೌಪದಿಯ ಮಕ್ಕಳು–ಎಪ್ಪತ್ತು ಮೂರು ಬಾಣಗಳಿಂದಲೂ, ಘಟೋತ್ಕಚನು–ಏಳು ಬಾಣಗಳಿಂದಲೂ, ಧೃಷ್ಟ

ದ್ಯುಮ್ನನು ಮೂರುಬಾಣಗಳಿಂದಲೂ ಕೃತವರ್ಮನನ್ನು ಅವ್ಯಾಹತವಾಗಿ ಪ್ರಹರಿಸಿದರು. ವಿರಾಟ-ದ್ರುಪದ-ಧೃಷ್ಟದ್ಯುಮ್ನರು ಐದೈದು ಬಾಣಗಳಿಂದ ಹಾರ್ದಿಕ್ಯನನ್ನು ಪ್ರಹರಿಸಿದರು. ಶಿಖಂಡಿಯು ಶೀಘ್ರವಾಗಿ ಹೋಗುವ ಐದು ಬಾಣಗಳಿಂದ ಕೃತವರ್ಮನನ್ನು ಪ್ರಹರಿಸಿ ನಗು-ನಗುತ್ತಾ ಪುನಃ ಇಪ್ಪತ್ತು ಬಾಣಗಳಿಂದ ಪ್ರಹರಿಸಿದನು. ಅನಂತರ ಕೃತವರ್ಮನು ಆ ಎಲ್ಲ ಮಹಾರಥರನ್ನೂ ಐದೈದು ಬಾಣಗಳಿಂದ ಪ್ರಹರಿಸಿ, ಭೀಮಸೇನನನ್ನು ಏಳು ಬಾಣಗಳಿಂದ ಪ್ರಹರಿಸಿದನು. ಅನಂತರ ಭೀಮಸೇನನ ಧನುಸ್ಸನ್ನೂ ಮತ್ತು ಧ್ವಜವನ್ನೂ ಕತ್ತರಿಸಿ ಕೆಳಗುರುಳಿಸಿದನು. ಮಹಾರಥನಾದ ಕ್ರುದ್ಧನಾದ ಕೃತವರ್ಮನು ಪುನಃ ಬಹಳ ತ್ವರೆಯಿಂದ ಧನುಸ್ಸಿನಿಂದ ವಿಹೀನನಾಗಿದ್ದ ಭೀಮಸೇನನನ್ನು ನಿಶಿತವಾದ ಇಪ್ಪತ್ತು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಹಾರ್ದಿಕ್ಯನ ಶ್ರೇಷ್ಠವಾದ ಬಾಣಗಳಿಂದ ಅತಿಶಯವಾಗಿ ಗಾಯಗೊಂಡ ರಥದ ಮಧ್ಯಭಾಗದಲ್ಲಿದ್ದ ಭೀಮಸೇನನು ಭೂಕಂಪವಾದಾಗ ಪರ್ವತವೂ ನಡುಗುವಂತೆ ನಡುಗಿದನು. ಈ ರೀತಿಯಲ್ಲಿ ಕ್ಲೇಶಗೊಂಡು ವಿಚೇತನನಾದ ಭೀಮಸೇನನನ್ನು ಕಂಡು ಕ್ರುದ್ಧರಾದ ಧರ್ಮರಾಜನೇ ಮೊದಲಾದ ಮಹಾರಥರು ತೀಕ್ಷ್ಣವಾದ ಬಾಣಗಳನ್ನು ಅನುಸ್ಯೂತವಾಗಿ ಪ್ರಯೋಗಿಸುತ್ತಾ ಕೃತವರ್ಮನನ್ನು ಬಹಳವಾಗಿ ಪೀಡಿಸಿದರು. ಬಳಿಕ ಮಾರುತಿಯ (ಭೀಮಸೇನನ) ರಕ್ಷಣಾರ್ಥವಾಗಿ ಪಾಂಡವರ ಕಡೆಯ ಯೋಧರು ಪರಮಹೃಷ್ಟರಾಗಿ ಕೃತವರ್ಮನನ್ನು ರಥಗಳ ಮಧ್ಯದಲ್ಲಿ ಸೇರಿಸಿ ಕೊಂಡು ಬಾಣಗಳಿಂದ ಅವನೊಬ್ಬನನ್ನೇ ಲಕ್ಷಿಸಿ ಪ್ರಯೋಗಿಸತೊಡಗಿದರು. ಮಹಾಬಲನಾದ ಭೀಮಸೇನನು ಪುನಃ ಪ್ರಜ್ಞೆಯನ್ನು ಹೊಂದಿ ಸುವರ್ಣಮಯವಾದ ದಂಡದಿಂದ ಕೂಡಿದ್ದ, ಲೋಹಮಯವಾಗಿದ್ದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡು ತನ್ನ ರಥದಿಂದ ಕೃತವರ್ಮನ ರಥದ ಕಡೆಗೆ ರಭಸದಿಂದೆಸೆದನು. ಪೊರೆಯನ್ನು ಬಿಟ್ಟ ಹಾವಿನಂತೆಯೇ ಇದ್ದ, ಭೀಮನ ಭುಜದಿಂದ ನಿರ್ಮುಕ್ತವಾದ, ಸುದಾರುಣವಾದ ಆ ಶಕ್ತ್ಯಾಯುಧವು ಪ್ರಜ್ವಲಿಸುತ್ತಾ ಕೃತವರ್ಮನ ಸಮೀಪಕ್ಕೆ ಬಂದಿತು. ಪ್ರಳಯಕಾಲದ ಅಗ್ನಿಗೆ ಸಮಾನವಾದ ಪ್ರಭೆಯನ್ನು ಹೊಂದಿದ್ದ, ತನ್ನ ಮೇಲೆ ಬೀಳುವುದರಲ್ಲಿದ್ದ ಆ ಶಕ್ತ್ಯಾಯುಧವನ್ನು ಕೃತವರ್ಮನು ಎರಡು ಬಾಣಗಳಿಂದ ಎರಡು ಭಾಗಗಳಾಗಿ ಕತ್ತರಿಸಿಬಿಟ್ಟನು. ಕೃತವರ್ಮನಿಂದ ಕತ್ತರಿಸಲ್ಪಟ್ಟ ಸುವರ್ಣ

ಭೂಷಿತವಾದ ಆ ಶಕ್ತ್ಯಾಯುಧವು ಆಕಾಶದಿಂದ ಚ್ಯುತವಾಗುವ ದೊಡ್ಡ ಉಲ್ಕೆಯೋಪಾದಿಯಲ್ಲಿ ನಾಲ್ಕುದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ಭೂಮಿಯಮೇಲೆ ಬಿದ್ದಿತು.

ತಾನು ಬಿಟ್ಟ ಶಕ್ತ್ಯಾಯುಧವು ವಿನಾಶವಾದುದನ್ನು ಕಂಡು ಭೀಮಸೇನನು ಬಹಳವಾಗಿ ಕೋಪಗೊಂಡನು. ಕ್ರುದ್ಧನಾದ ಭೀಮಸೇನನು ವೇಗಯುಕ್ತವಾಗಿಯೂ ಮಹಾಶಬ್ದವುಳ್ಳದ್ದಾಗಿಯೂ ಇದ್ದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಪುನಃ ಹಾರ್ದಿಕ್ಯನನ್ನು ಎದುರಿಸಿದನು. ಮಹಾರಾಜ! ನಿನ್ನ ದುರ್ಮಂತ್ರಿತ್ವದ ಫಲದಿಂದಾಗಿ ಭೀಮಬಲನಾದ ವೃಕೋದರನು ಐದು ಬಾಣಗಳಿಂದ ಕೃತವರ್ಮನ ವಕ್ಷಃಸ್ಥಳದಲ್ಲಿ ಪ್ರಹರಿಸಿ ದನು. ಭೀಮಸೇನನ ಬಾಣಗಳಿಂದ ಸರ್ವಾಂಗಗಳಲ್ಲಿಯೂ ಕ್ಷತ-ವಿಕ್ಷತನಾದ ಕೃತವರ್ಮನು ವಿಕಸಿತವಾದ ರಕ್ತಾಶೋಕವೃಕ್ಷದಂತೆಯೇ ರಣಾಂಗಣದಲ್ಲಿ ಪ್ರಕಾಶಿಸಿದನು. ಕ್ರುದ್ಧನಾದ ಮಹಾಧನುಷ್ಮಂತನಾದ ಕೃತವರ್ಮನು ನಗುತ್ತಿರು ವನೋ ಎಂಬಂತೆ ತೋರ್ಪಡಿಸಿಕೊಳ್ಳುತ್ತಾ ಮೂರುಬಾಣಗಳಿಂದ ಭೀಮ ಸೇನನನ್ನು ದೃಢವಾಗಿ ಪ್ರಹರಿಸಿ ತನ್ನನ್ನು ಪರಾಜಯಗೊಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದ ಎಲ್ಲ ಪಾಂಡವಯೋಧರನ್ನೂ ಮೂರು-ಮೂರು ಬಾಣಗಳಿಂದ ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಯುಧಿಷ್ಠಿರಪ್ರಮುಖರಾದ ಮಹಾರಥರು ಒಬ್ಬೊಬ್ಬರೂ ಏಳೇಳು ಬಾಣಗಳಿಂದ ಕೃತವರ್ಮನನ್ನು ಪ್ರಹರಿಸಿದರು. ಅನಂತರ ಕ್ರುದ್ಧನಾದ ಕೃತವರ್ಮನು ಗಹಗಹಿಸಿ ನಗುತ್ತಾ ಕ್ಷುರಪ್ರವೆಂಬ ಬಾಣದಿಂದ ಶಿಖಂಡಿಯ ಧನುಸ್ಸನ್ನು ಕತ್ತರಿಸಿದನು. ತನ್ನ ಧನುಸ್ಸು ಭಿನ್ನವಾಗಿ ಹೋಗಲಾಗಿ ಕ್ರುದ್ಧನಾದ ಶಿಖಂಡಿಯು ಬಹಳ ಬೇಗ ಕತ್ತಿಯನ್ನೂ ಮತ್ತು ಥಳ-ಥಳಿಸುತ್ತಿದ್ದ ಗುರಾಣಿಯನ್ನೂ ಕೈಗೆತ್ತಿಕೊಂಡನು. ಸುವರ್ಣಭೂಷಿತವಾದ, ವಿಶಾಲವಾದ ಗುರಾಣಿಯನ್ನು ತಿರುಗಿಸುತ್ತಾ ಕತ್ತಿಯನ್ನು ಕೃತವರ್ಮನ ರಥದ ಕಡೆಗೆ ರಭಸದಿಂದೆಸೆದನು. ಶಿಖಂಡಿಯು ಪ್ರಹರಿಸಿದ ಆ ಮಹಾಖಡ್ಗವು ರಭಸದಿಂದ ಹೋಗಿ ಕೃತವರ್ಮನ ಬಾಣ ಯುಕ್ತವಾಗಿದ್ದ ಧನುಸ್ಸನ್ನು ಕತ್ತರಿಸಿ ಆಕಾಶದಿಂದ ಬಿದ್ದ ನಕ್ಷತ್ರದೋಪಾದಿಯಲ್ಲಿ ಭೂಮಿಯಮೇಲೆ ಬಿದ್ದಿತು. ಅದೇ ಸಮಯದಲ್ಲಿ ಬೇರೆಯ ಧನುಸ್ಸನ್ನು ತೆಗೆದುಕೊಳ್ಳಲು ಅವಸರ ಪಡುತ್ತಿದ್ದ ಕೃತವರ್ಮನನ್ನು ಪಾಂಡವರ ಕಡೆಯ ಮಹಾರಥರು ಬಾಣಗಳಿಂದ ಬಹಳ ಗಾಢವಾಗಿ ಪ್ರಹರಿಸಿದರು.

ಭರತಶ್ರೇಷ್ಠನೇ! ಶತ್ರುವೀರಹಂತಕನಾದ ಕೃತವರ್ಮನು ಕತ್ತಿಯಿಂದ ಛಿನ್ನ-ಭಿನ್ನವಾದ ತನ್ನ ಧನುಸ್ಸನ್ನು ಪರಿತ್ಯಜಿಸಿ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನೇರವಾಗಿ ಹೋಗುವ ಮೂರು-ಮೂರು ಬಾಣಗಳಿಂದ ಪಾಂಡವಮಹಾರಥರೆಲ್ಲರನ್ನೂ ಪ್ರಹರಿಸಿದನು. ಅನಂತರ ಶಿಖಂಡಿಯನ್ನೂ ಸಹ ಮೊದಲು ಮೂರು ಬಾಣಗಳಿಂದಲೂ ಅನಂತರ ಐದು ಬಾಣ ಗಳಿಂದಲೂ ಪ್ರಹರಿಸಿದನು. ಮಹಾಯಶೋವಂತನಾದ ಶಿಖಂಡಿಯೂ ಸಹ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಆಮೆಯ ಉಗುರಿನಂತೆ ಬಹಳ ತೀಕ್ಷ್ಣವಾಗಿದ್ದ ಮತ್ತು ಶೀಘ್ರಗಾಮಿಗಳಾದ ಬಾಣಗಳಿಂದ ಹೃದೀಕನ ಮಗನಾದ ಹಾರ್ದಿಕ್ಯನನ್ನು ಪ್ರಹರಿಸಿದನು. ಅದರಿಂದ ಪರಮಕ್ರುದ್ಧನಾದ, ಶೂರನಾದ ಕೃತವರ್ಮನು ಮಹಾತ್ಮನಾದ ಭೀಷ್ಮನ ಮರಣಕ್ಕೆ ಕಾರಣನಾದ, ಮಹಾರಥನಾದ ಶಿಖಂಡಿಯ ರಥದಕಡೆಗೆ ತನ್ನ ಬಲವನ್ನು ಪ್ರದರ್ಶಿಸುತ್ತಾ–ಸಿಂಹವು ಆನೆಯಬಳಿಗೆ ಧಾವಿಸುವಂತೆ–ಧಾವಿಸಿದನು. ದಿಗ್ಗಜಗಳಿಗೆ ಸಮಾನರಾಗಿದ್ದ, ಅಗ್ನಿಗಳಂತಿದ್ದ, ಅರಿಂದಮರಾದ ಕೃತವರ್ಮ-ಶಿಖಂಡಿಗಳು ಬಾಣಗಳ ಸಮೂಹಗಳಿಂದ ಪರಸ್ಪರವಾಗಿ ಸಂಘರ್ಷಿಸಿದರು. ಶ್ರೇಷ್ಠವಾದ ತಮ್ಮೆರಡು ಧನುಸ್ಸುಗಳನ್ನು ಟೇಂಕರಿಸುತ್ತಾ ಬಾಣಗಳನ್ನು ಆ ಧನುಸ್ಸುಗಳಲ್ಲಿ ಸಂಧಾನಿಸುತ್ತಾ ಇಬ್ಬರು ಸೂರ್ಯರು ತಮ್ಮ-ತಮ್ಮ ಕಿರಣಗಳನ್ನು ಪ್ರಸರಿಸುವಂತೆ–ನೂರಾರು ಬಾಣಗಳನ್ನು ಒಬ್ಬರು ಮತ್ತೊಬ್ಬರ ಮೇಲೆ ಸುರಿಸುತ್ತಿದ್ದರು. ಮಹಾರಥರಾದ ಶಿಖಂಡೀ-ಕೃತವರ್ಮರು ತೀಕ್ಷ್ಣವಾದ ಬಾಣಗಳಿಂದ ಪರಸ್ಪರವಾಗಿ ಸಂತಾಪಗೊಳಿಸುತ್ತಾ ಪ್ರಳಯಕಾಲದ ಇಬ್ಬರು ಸೂರ್ಯರೋಪಾದಿಯಲ್ಲಿ ಪ್ರಕಾಶಿಸಿದರು.

ಕೃತವರ್ಮನು ಮಹಾರಥನಾದ ಶಿಖಂಡಿಯನ್ನು ಎಪ್ಪತ್ತು ಮೂರು ಬಾಣಗಳಿಂದ ಪ್ರಹರಿಸಿ ಪುನಃ ಅವನನ್ನು ಏಳು ಬಾಣಗಳಿಂದ ಪ್ರಹರಿಸಿದನು. ಅದರಿಂದ ವಿಪರೀತವಾಗಿ ಗಾಯಗೊಂಡ ಶಿಖಂಡಿಯು ವ್ಯಥಿತನಾಗಿ ಆಸನದ ಪಕ್ಕಕ್ಕೆ ಜರುಗಿ ಕುಳಿತನು. ಮರುಕ್ಷಣದಲ್ಲಿಯೇ ಧನುರ್ಬಾಣಗಳು ಅವನ ಕೈಗಳಿಂದ ಜಾರಿಬಿದ್ದುವು. ಶಿಖಂಡಿಯು ಮೂರ್ಛಾಕ್ರಾಂತನಾದನು. ಪುರುಷರ್ಷಭನೇ! ನಿನ್ನ ಕಡೆಯ ಯೋಧರು ಶಿಖಂಡಿಯು ವಿಷಣ್ಣ ನಾದುದನ್ನು (ಮೂರ್ಛಿತನಾದುದನ್ನು) ಕಂಡು ಹಾರ್ದಿಕ್ಯನನ್ನು ಬಹಳವಾಗಿ

ಪ್ರಶಂಸಿಸಿದರು. ಆನಂದಸೂಚಕವಾಗಿ ತಮ್ಮ ಅಂಗವಸ್ತ್ರಗಳನ್ನು ಮೇಲಕ್ಕೆ ಹಾರಿಸಿದರು. ಮಹಾರಥನಾದ ಶಿಖಂಡಿಯು ಹಾರ್ದಿಕ್ಯನ ಬಾಣಗಳಿಂದ ಪೀಡಿಸಲ್ಪಟ್ಟು ಮೂರ್ಛಿತನಾದುದನ್ನು ಕಂಡು ಅವನ ಸಾರಥಿಯು ತ್ವರೆಯಿಂದ ರಥವನ್ನು ರಣಾಂಗಣದಿಂದ ಬಹಳ ದೂರಕ್ಕೆ ಒಯ್ದುಬಿಟ್ಟನು. ರಥದ ಪೀಠದ ಸಮೀಪದಲ್ಲಿ ಮೂರ್ಛಿತನಾಗಿ ಕುಳಿತಿದ್ದ ಶಿಖಂಡಿಯನ್ನು ನೋಡಿ ಯುಧಿಷ್ಠಿರಪ್ರಮುಖರಾದ ಪಾರ್ಥರು ತಮ್ಮ ರಥಗಳಿಂದ ಕೃತವರ್ಮನನ್ನು ಸುತ್ತುವರಿದರು. ಮಹಾರಥನಾದ ಕೃತವರ್ಮನು ಆಗ ಪುನಃ ತನ್ನ ಅದ್ಭುತವಾದ ಮಹಾಸಾಹಸವನ್ನು ತೋರಿಸಿದನು. ಒಬ್ಬನೇ ಒಬ್ಬ ಹಾರ್ದಿಕ್ಯನು ಅನುಯಾಯಿಗಳ ಸಮೇತರಾಗಿದ್ದ ಪಾಂಡವರೆಲ್ಲರನ್ನೂ ತಡೆದು ನಿಲ್ಲಿಸಿದನು. ಮಹಾರಥನಾದ ಕೃತವರ್ಮನು ಮಹಾವೀರ್ಯರಾದ ಪಾರ್ಥರನ್ನು ಜಯಿಸಿ, ಅನಂತರ ಚೇದಿ, ಪಾಂಚಾಲ, ಸೃಂಜಯ, ಕೇಕಯ ಯೋಧರನ್ನೂ ಸಂಪೂರ್ಣವಾಗಿ ಜಯಿಸಿದನು. ಸತತವಾಗಿ ಹಾರ್ದಿಕ್ಯನಿಂದ ಜಯಿಸಲ್ಪಡುತ್ತಿದ್ದ ಪಾಂಡವಸೈನಿಕರು ರಣಾಂಗಣದ ಸುತ್ತಲೂ ಇಲ್ಲಿಂದಲ್ಲಿಗೆ–ಅಲ್ಲಿಂದಿಲ್ಲಿಗೆ ದಿಕ್ಕುಕಾಣದೇ ಓಡಾಡುತ್ತಿದ್ದರು. ಆದರೆ ರಣಾಂಗಣದಲ್ಲಿಯೇ ಇದ್ದು ಅವನೊಡನೆ ಯುದ್ಧಮಾಡುವ ಧೈರ್ಯಮಾಡಲಿಲ್ಲ. ಹಾರ್ದಿಕ್ಯನು ಭೀಮಸೇನಪುರಃಸರರಾದ ಪಾಂಡುವಿನ ಮಕ್ಕಳನ್ನು ಯುದ್ಧದಲ್ಲಿ ಗೆದ್ದು ಧೂಮರಹಿತನಾದ ಯಜ್ಞೇಶ್ವರನಂತೆ–ರಣಾಂಗಣದಲ್ಲಿ ಪ್ರಕಾಶಿಸಿದನು. ಹಾರ್ದಿಕ್ಯನು ತನ್ನ ಬಾಣಗಳ ಪ್ರಹಾರದಿಂದ ಪಾಂಡವರ ಕಡೆಯ ಮಹಾರಥರನ್ನು ಪಲಾಯನಮಾಡುವಂತೆ ಮಾಡಿದನು. ಹಾರ್ದಿಕ್ಯನ ಬಾಣಗಳ ವೃಷ್ಟಿಯಿಂದ ಸಂಪೀಡಿತರಾದ ಪಾಂಡವರು ಯುದ್ಧದಿಂದ ವಿಮುಖರಾದರು.”

೧೧೪ನೆಯ ಅಧ್ಯಾಯವು ಮುಗಿಯಿತು.

೧೧೫ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಕೃತವರ್ಮನನ್ನು ಪರಾಜಯಗೊಳಿಸಿದುದು: ತ್ರಿಗರ್ತರ ಗಜಸೇನೆಯ ಸಂಹಾರ ಮತ್ತು ಜಲಸಂಧನ ವಧೆ

ಸಂಜಯನು ಮುಂದುವರಿದು ಹೇಳುತ್ತಾನೆ:

“ಮಹಾರಾಜ! ನೀನು ಯಾವುದನ್ನು ಪ್ರಶ್ನಿಸಿದೆಯೋ ಅದನ್ನೇ ವಿವರಿಸಿ

ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು. ಮಹಾತ್ಮನಾದ ಹಾರ್ದಿಕ್ಯನು ತನ್ನ ಬಾಣಗಳ ಪ್ರಹಾರದಿಂದ ಪಾಂಡವರ ಸೈನ್ಯವನ್ನು ಪಲಾಯನ ಮಾಡಿಸುತ್ತಿರಲಾಗಿ, ಪಾಂಡವರೆಲ್ಲರೂ ಲಜ್ಜೆಯಿಂದ ತಲೆತಗ್ಗಿಸಿದರು. ನಿನ್ನ ಕಡೆಯವರೆಲ್ಲರೂ ಪ್ರಹೃಷ್ಟರಾದರು. ಅಗಾಧವಾದ ಸಮುದ್ರದಲ್ಲಿ ಆಶ್ರಯವನ್ನು ಪಡೆಯಲು ಇಚ್ಛಿಸಿದ್ದ ಪಾಂಡವರಿಗೆ ಆ ಸಮಯದಲ್ಲಿ ಯಾರು ದ್ವೀಪಪ್ರಾಯರಾದರೆಂಬ ಪ್ರಶ್ನೆಯು ನಿನ್ನ ಮನಸ್ಸಿನಲ್ಲಿರಬಹುದಲ್ಲವೇ?

ನಿನ್ನ ಕಡೆಯವರು ಮಾಡಿದ ಭಯಂಕರವಾದ ಜಯಘೋಷವನ್ನು ಕೇಳಿಸಿಕೊಂಡ ಶೈನೇಯನು ಬಹಳ ತ್ವರೆಯಿಂದ ಕೃತವರ್ಮನ ಬಳಿಗೆ ಧಾವಿಸಿದನು. ಕ್ರೋಧದಿಂದಲೂ, ಅಸಹನೆಯಿಂದಲೂ ಕೂಡಿದ್ದ ಶೈನೇಯನು ಸಾರಥಿಯನ್ನು ಕುರಿತು ಹೇಳಿದನು: "ಸೂತ! ನನ್ನ ಶ್ರೇಷ್ಠವಾದ ರಥವನ್ನು ಕೃತವರ್ಮನ ಸಮ್ಮುಖದಲ್ಲಿ ನಿಲ್ಲಿಸು. ಅದೋ ನೋಡು! ಕೋಪಾಭಿಭೂತನಾಗಿರುವ ಹಾರ್ದಿಕ್ಯನು ಪಾಂಡವರ ಸೈನ್ಯದಲ್ಲಿ ರಕ್ತದ ಕೋಡಿಯನ್ನೇ ಹರಿಸುತ್ತಿದ್ದಾನೆ. ಇವನನ್ನು ಜಯಿಸಿದನಂತರ ನಾನು ಅರ್ಜುನನ ಬಳಿಗೆ ಹೋಗುತ್ತೇನೆ." ಸಾತ್ಯಕಿಯು ಹೀಗೆ ಹೇಳಿದನಂತರ ಸೂತನು ನಿಮೇಷಾಂತರದಲ್ಲಿ ರಥವನ್ನು ಕೃತವರ್ಮನ ಸಮೀಪಕ್ಕೊಯ್ದನು. ಹೃದಿಕಪುತ್ರನಾದ, ಕ್ರುದ್ಧನಾದ ಕೃತವರ್ಮನು ಶೈನೇಯನನ್ನು ನಿಶಿತವಾದ ಬಾಣಗಳಿಂದ ಮುಚ್ಚಿಬಿಟ್ಟನು. ಅದರಿಂದಾಗಿ ಅತ್ಯಂತಕ್ರುದ್ಧನಾದ ಸಾತ್ಯಕಿಯು ಭಲ್ಲವನ್ನು ಬಹಳಬೇಗ ಕೃತವರ್ಮನ ಮೇಲೆ ಪ್ರಯೋಗಿಸಿದನು. ಪುನಃ ನಾಲ್ಕು ಬಾಣಗಳನ್ನು ಪ್ರಯೋಗಿಸಿದನು. ಆ ನಾಲ್ಕು ಬಾಣಗಳೂ ಕೃತವರ್ಮನ ಕುದುರೆಗಳನ್ನು ಸಂಹರಿಸಿದುವು. ಸಾತ್ಯಕಿಯು ಮತ್ತೊಂದು ಭಲ್ಲದಿಂದ ಕೃತವರ್ಮನ ಧನುಸ್ಸನ್ನು ಕತ್ತರಿಸಿದನು. ಅನಂತರ ನಿಶಿತವಾದ ಬಾಣಗಳಿಂದ ಕೃತವರ್ಮನ ಪೃಷ್ಠರಕ್ಷಕರನ್ನೂ ಸಾರಥಿಯನ್ನೂ ಸಂಹರಿಸಿ ದನು. ಸತ್ಯವಿಕ್ರಮನಾದ ಸಾತ್ಯಕಿಯು ಈ ರೀತಿಯಲ್ಲಿ ಹಾರ್ದಿಕ್ಯನನ್ನು ರಥ ಹೀನನನ್ನಾಗಿ ಮಾಡಿ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ದ್ರೋಣರ ಸೈನ್ಯ ವನ್ನು ಸಂಹರಿಸಲು ಉಪಕ್ರಮಿಸಿದನು. ಶೈನೇಯನ ಬಾಣಗಳಿಂದ ಪೀಡಿತ ವಾದ ದ್ರೋಣರ ಸೈನ್ಯವು ಸಂಪೂರ್ಣವಾಗಿ ಭಗ್ನವಾಯಿತು. ಅನಂತರ

ಸತ್ಯವಿಕ್ರಮನಾದ ಸಾತ್ಯಕಿಯು ಬಹಳ ಅವಸರದಿಂದ ಮುಂದೆಹೋದನು. ಮಹಾರಾಜ! ಮಹಾಪರಾಕ್ರಮಿಯಾದ ಸಾತ್ಯಕಿಯು ದ್ರೋಣರ ಸೇನಾ ಸಮುದ್ರವನ್ನು ದಾಟಿದನಂತರ ನಿನ್ನ ಸೈನ್ಯದಲ್ಲಿ ಮಾಡಿದ ವಿಧ್ವಂಸನ ಕ್ರಿಯೆಯನ್ನು ವರ್ಣಿಸಿ ಹೇಳುವೆನು; ಕೇಳು! ಯುದ್ಧಭೂಮಿಯಲ್ಲಿ ಕೃತವರ್ಮ ನನ್ನು ಜಯಿಸಿ ದ್ರೋಣರ ಸೇನಾಸಮುದ್ರವನ್ನು ದಾಟಿಬಂದನಂತರ ಪರಮಹೃಷ್ಟನಾದ ಶೂರನಾದ ಶೈನೇಯನು ಸ್ವಲ್ಪವಾದರೂ ಗಾಬರಿಗೊಳ್ಳದೇ ಸಾರಥಿಯನ್ನು ಕುರಿತು "ಸೂತ! ಸ್ವಲ್ಪ ನಿಧಾನವಾಗಿಯೇ ಹೋಗು"–ಎಂದು ಹೇಳಿದನು.

ರಥಾಶ್ವ-ಗಜಸೈನಿಕರಿಂದಲೂ, ಪದಾತಿಗಳಿಂದಲೂ ತುಂಬಿಹೋಗಿದ್ದ ನಿನ್ನ ಸೈನ್ಯವನ್ನು ಸಾತ್ಯಕಿಯು ನೋಡಿ ಪುನಃ ಸಾರಥಿಯೊಡನೆ ಹೇಳಿದನು:

"ಸೂತ! ದ್ರೋಣರ ಸೈನ್ಯದ ಎಡಭಾಗದಲ್ಲಿ ಮೇಘಗಳ ಸಮೂಹದೋಪಾದಿಯಲ್ಲಿ ಯಾವ ದೊಡ್ಡ ಗಜಾನೀಕವು ಕಾಣಿಸುತ್ತಿದೆಯೋ ಆ ಗಜಾನೀಕಕ್ಕೆ ರುಕ್ಮರಥನು ಅಗ್ರಭಾಗದಲ್ಲಿದ್ದಾನೆ. ಆ ಗಜಸೈನಿಕರು ಬಹು ಸಂಖ್ಯೆಯಲ್ಲಿದ್ದಾರೆ. ಅವರು ಎದುರಿಸಲು ಅಸಾಧ್ಯರಾದವರು. ದುರ್ಯೋಧನನಿಂದ ಆಜ್ಞಪ್ತರಾಗಿರುವ ಅವರು ಪ್ರಾಣಗಳನ್ನೇ ಒತ್ತೆಯಿಟ್ಟು ನನ್ನೊಡನೆ ಯುದ್ಧಮಾಡಲು ಸಿದ್ಧರಾಗಿ ನಿಂತಿದ್ದಾರೆ. ಸುವಿಖ್ಯಾತರಾದ ತ್ರಿಗರ್ತರಾಜಪುತ್ರರು ಮಹಾರಥರು. ಮಹಾಧನುಷ್ಮಂತರು. ಅತ್ಯಂತ ಪರಾಕ್ರಮದಿಂದ ಹೋರಾಡತಕ್ಕವರು. ಸುವರ್ಣಮಯವಾದ ಧ್ವಜಗಳನ್ನು ಹೊಂದಿರತಕ್ಕವರು. ಅವರೆಲ್ಲರೂ ನನ್ನನ್ನೇ ಎದುರಿಸಿ ಯುದ್ಧಮಾಡಲು ಸಜ್ಜಾಗಿ ನಿಂತಿದ್ದಾರೆ. ಅಲ್ಲಿಗೇ ನನ್ನನ್ನು ಕರೆದುಕೊಂಡು ಹೋಗು. ಅಲ್ಲಿಗೆ ಹೋಗುವಂತೆ ಕುದುರೆಗಳನ್ನು ಚಪ್ಪರಿಸು. ಭಾರದ್ವಾಜರು ನೋಡುತ್ತಿದ್ದಂತೆಯೇ ನಾನು ತ್ರಿಗರ್ತರೊಡನೆ ಯುದ್ಧಮಾಡುತ್ತೇನೆ."

ಸಾತ್ಯಕಿಯ ಅಭಿಪ್ರಾಯಾನುಸಾರವಾಗಿಯೇ ನಡೆಯುತ್ತಿದ್ದ ಸಾರಥಿಯು ಪ್ರಕಾಶಮಾನವಾದ ಪತಾಕೆಯಿಂದ ಕೂಡಿದ್ದ-ಸೂರ್ಯನಿಗೆ ಸಮಾನವಾದ ವರ್ಣದಿಂದ ಯುಕ್ತವಾಗಿದ್ದ ರಥದ ಮೂಲಕವಾಗಿ ಮೆಲ್ಲ-ಮೆಲ್ಲನೆ ತ್ರಿಗರ್ತರ ಗಜಸೈನ್ಯದ ಸಮೀಪಕ್ಕೆ ಹೋದನು. ಸಾರಥಿಯ ವಶಾನುವರ್ತಿಗಳಾಗಿದ್ದ,

ನೆಗೆ-ನೆಗೆದುಕೊಂಡು ಹೋಗುತ್ತಿದ್ದ, ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ, ಮಲ್ಲೆಹೂವು, ಚಂದ್ರ ಮತ್ತು ಬೆಳ್ಳಿಗಳ ಕಾಂತಿಯನ್ನು ಹೊಂದಿದ್ದ ಕುದುರೆಗಳು ಯುಯುಧಾನನನ್ನು ತ್ರಿಗರ್ತರ ಸೈನ್ಯದ ಸಮೀಪಕ್ಕೆ ಒಯ್ದುವು. ಶೀಘ್ರವಾಗಿ ಲಕ್ಷ್ಯವನ್ನು ಭೇದಿಸುವ ಸಾಮರ್ಥ್ಯದಿಂದ ಕೂಡಿದ್ದ ಶೂರರಾದ ತ್ರಿಗರ್ತಯೋಧರು ಶಂಖದಂತೆ ಶ್ವೇತವರ್ಣದಿಂದ ಕೂಡಿದ್ದ ಶ್ರೇಷ್ಠವಾದ ಕುದುರೆಗಳ ಮೂಲಕವಾಗಿ ತಮ್ಮನ್ನು ಆಕ್ರಮಿಸಲು ಬರುತ್ತಿದ್ದ ಸಾತ್ಯಕಿಯನ್ನು ನಾನಾವಿಧವಾದ ಮತ್ತು ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸುತ್ತಾ ನಾಲ್ಕು ದಿಕ್ಕುಗಳಿಂದಲೂ ಆನೆಗಳ ಸೈನ್ಯದ ಮೂಲಕವಾಗಿ ಅವನನ್ನು ಸುತ್ತುಗಟ್ಟಿದರು. ವರ್ಷಾಕಾಲದಲ್ಲಿ ಮಹಾಮೇಘವು ಜಲವರ್ಷ ದಿಂದ ಪರ್ವತಗಳನ್ನು ಮುಚ್ಚಿಬಿಡುವಂತೆ-ಸಾತ್ಯಕಿಯು ನಿಶಿತವಾದ ಬಾಣ ಗಳಿಂದ ತ್ರಿಗರ್ತರ ಗಜಸೈನ್ಯವನ್ನು ಮುಚ್ಚಿ ಅವರೊಡನೆ ಯುದ್ಧಮಾಡಲು ತೊಡಗಿದನು. ಶಿನಿವೀರನಾದ ಸಾತ್ಯಕಿಯಿಂದ ಬಿಡಲ್ಪಡುತ್ತಿದ್ದ, ವಜ್ರಾಯುಧಕ್ಕೂ ಮತ್ತು ಸಿಡಿಲಿಗೂ ಸಮಾನವಾದ ಶಕ್ತಿಯಿಂದ ಕೂಡಿದ್ದ ಬಾಣಗಳಿಂದ ಪ್ರಹೃತವಾದ ಆನೆಗಳು ಬಹಳವಾಗಿ ಗಾಯಗೊಂಡು ಯುದ್ಧವನ್ನು ಬಿಟ್ಟು ಪಲಾಯನಮಾಡತೊಡಗಿದುವು. ಸಾತ್ಯಕಿಯು ಬಿಡುತ್ತಿದ್ದ ಬಾಣಗಳ ಪ್ರಹಾರದಿಂದಾಗಿ ಕತ್ತರಿಸಿಹೋಗಿದ್ದ ದಂತಗಳಿಂದಲೂ, ರಕ್ತಸಿಕ್ತವಾಗಿದ್ದ ಅಂಗಾಂಗಗಳಿಂದಲೂ, ಭಿನ್ನವಾಗಿ ಹೋದ ತಲೆಗಳಿಂದಲೂ ಮತ್ತು ಗಂಡಸ್ಥಳಗಳಿಂದಲೂ, ಸೀಳಿಹೋದ ಕಿವಿ-ಮುಖ-ಸೊಂಡಿಲು ಗಳಿಂದಲೂ, ಸತ್ತುಹೋಗಿದ್ದ ಮಾವಟಿಗರಿಂದಲೂ, ಬಿದ್ದುಹೋಗಿದ್ದ ಪತಾಕೆ ಗಳಿಂದಲೂ, ಛಿನ್ನವಾದ ಮರ್ಮಸ್ಥಳಗಳಿಂದಲೂ, ಭಿನ್ನವಾದ ಘಂಟೆ ಗಳಿಂದಲೂ, ಕತ್ತರಿಸಿಹಾಕಲ್ಪಟ್ಟಿದ್ದ ಮಹಾಧ್ವಜಗಳಿಂದಲೂ, ಹತ ಯೋಧ ರಿಂದಲೂ, ಜಾರಿಹೋದ ರತ್ನಗಂಬಳಿಗಳಿಂದಲೂ ಕೂಡಿದ್ದ ಆ ಆನೆಗಳು ಎಲ್ಲ ದಿಕ್ಕುಗಳಲ್ಲಿಯೂ ಪ್ರಕಾಶಿಸಿದುವು. ಗುಡುಗಿನ ಶಬ್ದದೋಪಾದಿಯಲ್ಲಿ ಆ ಆನೆಗಳು ವಿಧ-ವಿಧವಾಗಿ ಕೂಗಿಕೊಳ್ಳುತ್ತಾ ಶಬ್ದಮಾಡುತ್ತಿದ್ದುವು. ಸಾತ್ಯಕಿಯು ಅವ್ಯಾಹತವಾಗಿ ಬಿಡುತ್ತಿದ್ದ ನಾರಾಚ, ವತ್ಸದಂತ, ಭಲ್ಲ, ಅಂಜಲಿಕ, ಕ್ಷುರಪ್ರ, ಅರ್ಧಚಂದ್ರ–ಇವೇ ಮೊದಲಾದ ಆಯುಧಗಳಿಂದ ಬಹಳವಾಗಿ ಗಾಯಗೊಂಡ ತ್ರಿಗರ್ತರಾಜನ ಆನೆಗಳು ಆರ್ತಧ್ವನಿಮಾಡುತ್ತಾ, ಅಂಗಾಂಗಗಳಿಂದ ರಕ್ತವನ್ನು ಸುರಿಸುತ್ತಾ, ಮೂತ್ರವನ್ನೂ-ಪುರೀಷವನ್ನೂ ಉತ್ಸರ್ಜಿಸುತ್ತಾ ರಣಾಂಗಣದ ಸುತ್ತಲೂ ತಿರುಗುತ್ತಿದ್ದುವು.

ಆ ಆನೆಗಳಲ್ಲಿ ಕೆಲವು ಗರ-ಗರನೆ ಸುತ್ತುತ್ತಿದ್ದುವು. ಕೆಲವು ತೂರಾಡುತ್ತಿದ್ದುವು. ಕೆಲವು ಆನೆಗಳು ಅಸುನೀಗಿ ಕೆಳಗೆ ಬಿದ್ದಿದ್ದುವು. ಮತ್ತೆ ಕೆಲವು ಗಾಯಗೊಂಡು ಬಹಳವಾಗಿ ಬಳಲಿದ್ದುವು. ಈ ರೀತಿಯಲ್ಲಿ ತ್ರಿಗರ್ತರ ಗಜಸೈನ್ಯವು ಅಗ್ನಿ-ಸೂರ್ಯರಿಗೆ ಸಮಾನನಾದ ಯುಯುಧಾನನ ಬಾಣ ಗಳಿಂದ ಗಾಯಗೊಂಡು ದಿಕ್ಕಾಪಾಲಾಗಿ ಓಡಿಹೋಯಿತು. ಈ ರೀತಿಯಲ್ಲಿ ತ್ರಿಗರ್ತರ ಗಜಸೈನ್ಯವು ಭಗ್ನವಾಗಲಾಗಿ, ಮಹಾಬಲನಾದ ಜಲಸಂಧನು ತನ್ನ



ಆನೆಯನ್ನು ರಜತಾಶ್ವನಾದ ಸಾತ್ಯಕಿಯ ರಥದ ಸಮೀಪಕ್ಕೆ ದೌಡಾಯಿಸಿದನು. ಜಲಸಂಧನು ಸುವರ್ಣಮಯವಾದ ಕವಚವನ್ನು ಧರಿಸಿದ್ದನು. ಶೂರ ನಾಗಿದ್ದನು. ಸುವರ್ಣಮಯವಾದ ಭುಜಕೀರ್ತಿಗಳನ್ನು ಧರಿಸಿದ್ದನು. ಕರ್ಣಕುಂಡಲಗಳನ್ನೂ–ಕಿರೀಟವನ್ನೂ ಧರಿಸಿದ್ದನು. ಖಡ್ಗಹಸ್ತನಾಗಿದ್ದನು. ರಕ್ತಚಂದನವನ್ನು ಪೂಸಿಕೊಂಡಿದ್ದನು. ಕತ್ತಿನಲ್ಲಿ ಜಾಜ್ವಲ್ಯಮಾನವಾದ

ಚಿನ್ನದ ಸರವನ್ನು ಹಾಕಿಕೊಂಡಿದ್ದನು. ಅವನ ವಕ್ಷಃಸ್ಥಳವು ಪದಕದಿಂದ ಅಲಂಕೃತವಾಗಿದ್ದಿತು. ಪ್ರಕಾಶಮಾನವಾದ ಕಂಠಸೂತ್ರವನ್ನೂ ಧರಿಸಿದ್ದನು. ರಣಾಂಗಣದಲ್ಲಿ ಸುವರ್ಣಮಯವಾದ ಧನುಸ್ಸನ್ನು ಟೇಂಕರಿಸುತ್ತಾ ಜಲಸಂಧನು ವಿದ್ಯುತ್ತಿನಿಂದ ಕೂಡಿದ ಮೇಘದಂತೆಯೇ ಪ್ರಕಾಶಿಸಿದನು. ಅತ್ಯಂತತ್ವರೆಯಿಂದ ತನ್ನ ಮೇಲೆ ಬೀಳಲು ಬರುತ್ತಿದ್ದ ಮಗಧರಾಜನ ಆ ಗಜರಾಜನನ್ನು ಸಾತ್ಯಕಿಯು-ಉಕ್ಕಿಬರುತ್ತಿರುವ ಸಮುದ್ರವನ್ನು ತೀರ ಪ್ರದೇಶವು ತಡೆದು ನಿಲ್ಲಿಸುವಂತೆ-ತಡೆದು ನಿಲ್ಲಿಸಿದನು. ಶೈನೇಯನು ತನ್ನ ಶ್ರೇಷ್ಠವಾದ ಬಾಣಗಳಿಂದ ಮಹಾಬಲಿಷ್ಠವಾದ ಆನೆಯನ್ನೂ ತಡೆದುದನ್ನು ಕಂಡು ಮಹಾಬಲನಾದ ಜಲಸಂಧನು ಬಹಳ ಕುಪಿತನಾದನು. ಮಹಾರಾಜ! ಕ್ರುದ್ಧನಾದ ಜಲಸಂಧನು ಮಹಾವೇಗವನ್ನೂ ಸಹಿಸಿಕೊಳ್ಳಲು ಸಮರ್ಥ ವಾಗಿದ್ದ ಬಾಣಗಳಿಂದ ಶಿನಿಯ ಮೊಮ್ಮಗನನ್ನು ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಅನಂತರ ಎಣ್ಣೆಯನ್ನು ಕುಡಿದಿದ್ದ ನಿಶಿತವಾಗಿದ್ದ ಮತ್ತೊಂದು ಭಲ್ಲದಿಂದ, ನಿಶಿತವಾದ ಬಾಣಗಳನ್ನು ಪುಂಖಾನುಪುಂಖವಾಗಿ ಹೊರ ಹಾಕುತ್ತಿದ್ದ ಶೈನೇಯನ ಧನುಸ್ಸನ್ನೇ ಕತ್ತರಿಸಿದನು. ಪುನಃ ಗಹಗಹಿಸಿ ನಗುತ್ತಾ ಧನುಸ್ಸಿನಿಂದ ವಿಹೀನನಾಗಿದ್ದ ಸಾತ್ಯಕಿಯನ್ನು ನಿಶಿತವಾದ ಐದು ಬಾಣಗಳಿಂದ ಪ್ರಹರಿಸಿದನು. ಜಲಸಂಧನು ನಿಶಿತವಾದ ಅನೇಕ ಬಾಣಗಳನ್ನು ಪ್ರಹರಿಸಿ ಸಾತ್ಯಕಿಯನ್ನು ಗಾಯಗೊಳಿಸಿದರೂ, ಮಹಾಬಾಹುವಾದ ವೀರನಾದ ಸಾತ್ಯಕಿಯು ಸ್ವಲ್ಪವೂ ವಿಚಲಿತನಾಗಲಿಲ್ಲ. ಅದು ನಮಗೆ ಪರಮಾದ್ಭುತವಾಗಿ ಕಾಣಿಸಿತು. ಸಾತ್ಯಕಿಯು ತನ್ನ ಮೇಲೆ ಬಾಣಗಳು ಬೀಳುತ್ತಿವೆಯೆಂಬುದನ್ನೇ ಪರಿಗಣಿಸಲಿಲ್ಲ. ಇದೇ ಕಾರಣದಿಂದಲೇ ಗಾಬರಿಗೊಳ್ಳಲೂ ಇಲ್ಲ. ಮತ್ತೊಂದು ಧನುಸ್ಸನ್ನು ತೆಗೆದುಕೊಂಡು 'ನಿಲ್ಲು-ನಿಲ್ಲು' ಎಂದು ಜಲಸಂಧ ನನ್ನು ಕೂಗಿ ಹೇಳಿದನು. ಇಷ್ಟುಮಾತ್ರ ಹೇಳಿ ಗಹಗಹಿಸಿ ನಗುತ್ತಾ ಶೈನೇಯನು ಅರುವತ್ತು ಬಾಣಗಳಿಂದ ಜಲಸಂಧನ ವಕ್ಷಃಸ್ಥಳದಲ್ಲಿ ಪ್ರಹರಿಸಿ ವಿಪರೀತವಾಗಿ ಗಾಯಗೊಳಿಸಿದನು. ಪುನಃ ಸುತೀಕ್ಷ್ಣವಾದ ಕ್ಷುರಪ್ರವೆಂಬ ಬಾಣದಿಂದ ಜಲಸಂಧನ ಮಹಾಧನುಸ್ಸನ್ನು ಮುಷ್ಟಿಪ್ರದೇಶದಲ್ಲಿ ಕತ್ತರಿಸಿ,

ಬಳಿಕ ಮತ್ತೆ ಮೂರು ಬಾಣಗಳಿಂದ ಜಲಸಂಧನನ್ನು ಪ್ರಹರಿಸಿದನು. ಮರುಕ್ಷಣದಲ್ಲಿಯೇ ಜಲಸಂಧನು ಬಾಣಗಳಿಂದ ಯುಕ್ತವಾಗಿದ್ದ ಭಿನ್ನವಾಗಿದ್ದ ಧನುಸ್ಸನ್ನು ವಿಸರ್ಜಿಸಿ ತೋಮರವನ್ನು ಕೈಗೆತ್ತಿಕೊಂಡು ಸಾತ್ಯಕಿಯ ಕಡೆಗೆ ರಭಸದಿಂದೆಸೆದನು. ಮಹಾಘೋರವಾಗಿದ್ದ ಆ ತೋಮರವು ವೇಗವಾಗಿ ಹೋಗಿ ಸಾತ್ಯಕಿಯ ಎಡಭುಜವನ್ನು ಗಾಯಗೊಳಿಸಿ ಮಹಾಸರ್ಪವು ನಿಟ್ಟುಸಿರುಬಿಡುವಂತೆ 'ಸೊಯ್'ಎಂಬ ಶಬ್ದದೊಡನೆ ಭೂಮಿಯನ್ನು ಸೇರಿತು.

ಎಡಭುಜವು ಗಾಯಗೊಳ್ಳಲಾಗಿ ಮಹಾಕ್ರುದ್ಧನಾದ, ಸತ್ಯ ಪರಾಕ್ರಮನಾದ ಸಾತ್ಯಕಿಯು ತೀಕ್ಷ್ಣವಾದ ಮೂವತ್ತು ಬಾಣಗಳಿಂದ ಜಲಸಂಧನನ್ನು ಪ್ರಹರಿಸಿದನು. ಅದಕ್ಕೆ ಪ್ರತಿಯಾಗಿ ಮಹಾಬಲನಾದ ಜಲಸಂಧನು ಖಡ್ಗವನ್ನೂ, ಎತ್ತಿನ ಚರ್ಮದಿಂದ ಮಾಡಿದ್ದ ಚಂದ್ರಾಕಾರದ ನೂರು ಚಿಹ್ನೆಗಳಿಂದ ಕೂಡಿದ್ದ ಗುರಾಣಿಯನ್ನೂ ತೆಗೆದುಕೊಂಡು ಕತ್ತಿಯನ್ನು ತಿರುಗಿಸಿ ಸಾತ್ವತನ ಮೇಲೆ ಎಸೆದನು. ಜಲಸಂಧನು ಎಸೆದ ಆ ಖಡ್ಗವು ಶೈನೇಯನ ಧನುಸ್ಸನ್ನು ಕತ್ತರಿಸಿ ಭೂಮಿಯ ಮೇಲೆ ಬಿದ್ದಿತು. ಭೂಮಿಯ ಮೇಲೆ ಬಿದ್ದಿದ್ದ ಆ ಖಡ್ಗವು ಕೊಳ್ಳಿಯ ಚಕ್ರದಂತೆಯೇ ಕಾಣುತ್ತಿದ್ದಿತು. ಒಡನೆಯೇ ಕ್ರುದ್ಧನಾದ ಸಾತ್ಯಕಿಯು ಎಲ್ಲರ ಶರೀರಗಳನ್ನೂ ಕತ್ತರಿಸಲು ಸಮರ್ಥವಾದ, ಶಾಲವೃಕ್ಷದ ಕೊಂಬೆಯಂತೆ ದೀರ್ಘವಾಗಿದ್ದ, ಇಂದ್ರನ ವಜ್ರಾಯುಧದ ಶಬ್ದಕ್ಕೆ ಸಮಾನವಾದ ಟೇಂಕಾರಶಬ್ದವುಳ್ಳದ್ದಾಗಿದ್ದ ಧನುಸ್ಸಿನ ಶಿಂಜಿನಿಯನ್ನು ಕಿವಿಯ ತುದಿಯವರೆಗೂ ಸೆಳೆದು ನಿಶಿತವಾದ ಬಾಣದಿಂದ ಜಲಸಂಧನನ್ನು ಪ್ರಹರಿಸಿದನು. ಅನಂತರ ಮಧುವಂಶೀಯರಲ್ಲಿ ಶ್ರೇಷ್ಠನಾದ ಯುಯುಧಾನನು ಗಹಗಹಿಸಿ ನಗುತ್ತಾ ಆಭರಣಗಳಿಂದ (ಭುಜಕೀರ್ತಿ ಗಳಿಂದ) ಕೂಡಿದ್ದ ಜಲಸಂಧನ ಎರಡು ತೋಳುಗಳನ್ನೂ ಎರಡು ಕ್ಷುರಪ್ರಗಳಿಂದ ಕತ್ತರಿಸಿಬಿಟ್ಟನು. ಪರಿಘೋಪಮವಾಗಿದ್ದ ಜಲಸಂಧನ ಎರಡು ತೋಳುಗಳೂ ಪರ್ವತದ ಮೇಲಿನಿಂದ ಜಾರಿಬಿದ್ದ ಐದು ಹೆಡೆಗಳುಳ್ಳ ಸರ್ಪಗಳಂತೆಯೇ–ಆನೆಯ ಮೇಲಿನಿಂದ ಕೆಳಕ್ಕೆ ಬಿದ್ದುವು. ಅನಂತರ ಸಾತ್ಯಕಿಯು ಮುತ್ತಿನಂತಹ ಸುಂದರವಾದ ಹಲ್ಲುಗಳನ್ನು ಹೊಂದಿದ್ದ-ಮನೋಹರವಾದ ಕರ್ಣಕುಂಡಲಗಳಿಂದ ಸಮಲಂಕೃತವಾಗಿದ್ದ, ವಿಶಾಲ

ವಾಗಿದ್ದ, ಜಲಸಂಧನ ಶಿರಸ್ಸನ್ನು ಮೂರನೆಯದಾದ ಕ್ಷುರಪ್ರದಿಂದ ಕತ್ತರಿಸಿದನು. ತಲೆಯೂ ಮತ್ತು ಎರಡೂ ಭುಜಗಳೂ ಸಾತ್ಯಕಿಯ ಕ್ಷುರಪ್ರಗಳಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದು ಹೋದನಂತರ ಆನೆಯ ಮೇಲೆಯೇ ಇದ್ದ ಅತ್ಯಂತ ಭಯಂಕರವಾಗಿ ಕಾಣುತ್ತಿದ್ದ ಜಲಸಂಧನ ಕಬಂಧವು (ಮುಂಡವು) ಚಿಮ್ಮುತ್ತಿರುವ ರಕ್ತದಿಂದ ಆನೆಯನ್ನು ಅಭಿಷೇಕಮಾಡಿತು. (ಆ ಕಬಂಧದ ರಕ್ತದಿಂದ ಆನೆಯು ತೋಯ್ದುಹೋಯಿತು.) ಈ ರೀತಿ ಸಾತ್ವತನು ಜಲಸಂಧನನ್ನು ಸಂಹರಿಸಿ ಬಹಳ ತ್ವರೆಯಿಂದ ಆನೆಯ ಮೇಲಿದ್ದ ಅಂಬಾರಿಯನ್ನೂ ಕೆಳಕ್ಕುರುಳಿಸಿದನು. ಆದರೆ ಅಂಬಾರಿಯನ್ನು ಬಲವಾಗಿ ಆನೆಗೆ ಬಿಗಿದಿದ್ದುದರಿಂದ ಅದು ತನ್ನ ಸ್ಥಳದಿಂದ ಚ್ಯುತವಾಯಿತೇ ಹೊರತು ಸಂಪೂರ್ಣವಾಗಿ ಕೆಳಕ್ಕೆ ಬೀಳಲಿಲ್ಲ. ರಕ್ತದಿಂದ ನೆನೆಯಲ್ಪಟ್ಟ ಶರೀರವನ್ನು ಹೊಂದಿದ್ದ ಜಲಸಂಧನ ಆನೆಯು ಜೋತಾಡುತ್ತಾ ತನಗೇ ಅಂಟಿಕೊಂಡಿದ್ದ ಶ್ರೇಷ್ಠವಾದ ಆ ಅಂಬಾರಿಯನ್ನು ಎಳೆದುಕೊಂಡೇ ಹೋಗುತ್ತಿದ್ದಿತು. ಸಾತ್ವತನ ಬಾಣಗಳಿಂದ ಪುನಃ ಪೀಡಿತವಾದ ಆ ದೊಡ್ಡ ಆನೆಯು ಭಯಂಕರವಾಗಿ ಚೀತ್ಕಾರಮಾಡುತ್ತಾ ತನ್ನ ಕಡೆಯ ಸೈನಿಕರನ್ನೇ ಪದಾಘಾತದಿಂದ ಮರ್ದನಮಾಡುತ್ತಾ ಓಡಿಹೋಯಿತು. ವೃಷ್ಣಿಶ್ರೇಷ್ಠನಾದ ಸಾತ್ಯಕಿಯು ಜಲಸಂಧನನ್ನು ಸಂಹರಿಸಿದುದನ್ನು ಕಂಡು ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಶತ್ರುಗಳನ್ನು ಜಯಿಸುವುದರಲ್ಲಿ ನಿರುತ್ಸಾಹಿಗಳಾಗಿದ್ದ ಮತ್ತು ಪಲಾಯನಮಾಡುವುದರಲ್ಲಿಯೇ ಉತ್ಸುಕರಾಗಿದ್ದ ನಿನ್ನ ಸೈನಿಕರು ಯುದ್ಧದಿಂದ ಹಿಮ್ಮೆಟ್ಟಿ ದಿಕ್ಕಾಪಾಲಾಗಿ ಓಡಿಹೋದರು. ಆ ಸಮಯಕ್ಕೆ ಸರಿಯಾಗಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ದ್ರೋಣರು ಶೀಘ್ರಗಾಮಿಗಳಾದ ಕುದುರೆಗಳ ಮೂಲಕವಾಗಿ ಮಹಾರಥನಾದ ಸಾತ್ಯಕಿಯ ಸಮೀಪಕ್ಕೆ ಬಂದರು. ಶೈನೇಯನು ಅಡಿಗಡಿಗೂ ಜಯಗಳಿಸುತ್ತಿರುವುದನ್ನು ಕಂಡು ಕ್ರುದ್ಧರಾದ ನಿನ್ನ ಕಡೆಯ ನರಶ್ರೇಷ್ಠರು ದ್ರೋಣರೊಡನೆ ತಾವೂ ಸೇರಿಕೊಂಡು ಸಾತ್ಯಕಿಯನ್ನು ಆಕ್ರಮಿಸಿದರು. ಅನಂತರ ದ್ರೋಣಪ್ರಮುಖರಾದ ಕೌರವರಿಗೂ ಮತ್ತು ಸಾತ್ಯಕಿಗೂ ನಡುವೆ ದೇವಾಸುರರ ಯುದ್ಧಕ್ಕೆ ಸಮಾನವಾದ ಮಹತ್ತಾದ ಕಾಳಗವು ಪ್ರಾರಂಭವಾಯಿತು."

೧೧೫ನೆಯ ಅಧ್ಯಾಯವು ಮುಗಿಯಿತು.

(೧೮೩)—೧೬

## ಸಾತ್ಯಕಿಯ ಪರಾಕ್ರಮವರ್ಣನೆ: ದುರ್ಯೋಧನ-ಕೃತವರ್ಮರು ಪರಾಜಿತರಾದುದು

ಸಂಜಯನು ಸಾತ್ಯಕಿಯ ಪರಾಕ್ರಮವನ್ನು ವರ್ಣಿಸುತ್ತಾ ಯುದ್ಧವಾರ್ತೆಯನ್ನು ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ಪ್ರಹಾರಕುಶಲರಾದ ದ್ರೋಣಪ್ರಮುಖರಾದ ಕೌರವಯೋಧರು ಪ್ರಯತ್ನಪೂರ್ವಕವಾಗಿ ಅತಿತ್ವರೆಯಿಂದ ಬಾಣಗಳ ಸಮೂಹಗಳನ್ನು ಸಾತ್ಯಕಿಯ ಮೇಲೆ ಸುರಿಸುತ್ತಾ ಸಾತ್ಯಕಿಯೊಡನೆ ಯುದ್ಧವನ್ನು ಪ್ರಾರಂಭಿಸಿದರು. ದ್ರೋಣರು ಸಾತ್ಯಕಿಯನ್ನು ನಿಶಿತವಾದ ಎಪ್ಪತ್ತೇಳು ಬಾಣಗಳಿಂದ ಪ್ರಹರಿಸಿದರು. ದುರ್ಮರ್ಷಣನು ಹನ್ನೆರಡು ಬಾಣಗಳಿಂದಲೂ, ದುಃಸಹನು ಹತ್ತು ಬಾಣಗಳಿಂದಲೂ ಸಾತ್ಯಕಿಯನ್ನು ಪ್ರಹರಿಸಿದರು. ವಿಕರ್ಣನೂ ಸಹ ರಣಹದ್ದಿನ ರೆಕ್ಕೆಗಳನ್ನು ಹೊಂದಿದ್ದ ನಿಶಿತವಾದ ಮೂವತ್ತು ಬಾಣಗಳಿಂದ ಸಾತ್ಯಕಿಯ ಎಡಪಾರ್ಶ್ವವನ್ನೂ ಮತ್ತು ವಕ್ಷಃಸ್ಥಳವನ್ನೂ ಪ್ರಹರಿಸಿದನು. ದುರ್ಮುಖನು ಹತ್ತು ಬಾಣಗಳಿಂದಲೂ, ದುಃಶಾಸನನು ಎಂಟು ಬಾಣಗಳಿಂದಲೂ, ಚಿತ್ರಸೇನನು ಎರಡು ಬಾಣಗಳಿಂದಲೂ, ಯುಯುಧಾನನನ್ನು ಪ್ರಹರಿಸಿದರು. ದುರ್ಯೋಧನನೂ ಮತ್ತು ಇತರ ಮಹಾರಥರೂ ಸಾತ್ಯಕಿಯ ಮೇಲೆ ದೊಡ್ಡದಾದ ಬಾಣಗಳ ಮಳೆಯನ್ನೇ ಸುರಿಸಿ ಅವನನ್ನು ಬಹಳವಾಗಿ ಗಾಯಗೊಳಿಸಿದರು. ಮಹಾರಥರಾದ ನಿನ್ನ ಮಕ್ಕಳಿಂದ ಎಲ್ಲ ದಿಕ್ಕುಗಳಿಂದಲೂ ಪ್ರಹೃತನಾದ ವಾರ್ಷ್ಣೇಯನು ಪ್ರತಿಯೊಬ್ಬ ಕೌರವಯೋಧನನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ನೇರವಾಗಿ ಹೋಗುವ ತೀಕ್ಷ್ಣವಾದ ಬಾಣಗಳಿಂದ ಪ್ರಹರಿಸಿದನು. ಭಾರದ್ವಾಜರನ್ನು ಮೂರು ಬಾಣಗಳಿಂದಲೂ, ದುಃಸಹನನ್ನು ಒಂಬತ್ತು ಬಾಣಗಳಿಂದಲೂ, ವಿಕರ್ಣನನ್ನು ಇಪ್ಪತ್ತೈದು ಬಾಣಗಳಿಂದಲೂ, ಚಿತ್ರಸೇನನನ್ನು ಏಳು ಬಾಣಗಳಿಂದಲೂ, ದುರ್ಮರ್ಷಣನನ್ನು ಹನ್ನೆರಡು ಬಾಣಗಳಿಂದಲೂ, ವಿವಿಂಶತಿಯನ್ನು ಎಂಟು ಬಾಣಗಳಿಂದಲೂ, ಸತ್ಯವ್ರತನನ್ನು ಒಂಬತ್ತು ಬಾಣಗಳಿಂದಲೂ, ವಿಜಯನನ್ನು ಹತ್ತು ಬಾಣಗಳಿಂದಲೂ ಸಾತ್ಯಕಿಯು ಪ್ರಹರಿಸಿದನು. ಅನಂತರ ಮಹಾರಥನಾದ

ಸಾತ್ಯಕಿಯು ಧನುಸ್ಸನ್ನು ಟೇಂಕರಿಸುವುದರ ಮೂಲಕವಾಗಿ ಅಳ್ಳಾಡಿಸುತ್ತಾ, ಮಹಾರಥನಾದ, ಚಿನ್ನದ ಭುಜಕೀರ್ತಿಯನ್ನು ಧರಿಸಿದ್ದ, ನಿನ್ನ ಮಗನಾದ ದುರ್ಯೋಧನನನ್ನು ಆಕ್ರಮಿಸಿದನು. ಅಖಂಡಭೂಮಂಡಲಕ್ಕೂ ರಾಜ ನಾಗಿದ್ದ, ಎಲ್ಲ ಲೋಕಗಳಲ್ಲಿಯೂ ಸುವಿಖ್ಯಾತನಾದ, ಮಹಾರಥನಾದ ದುರ್ಯೋಧನನನ್ನು ಸಾತ್ಯಕಿಯು ಬಾಣಗಳಿಂದ ಗಾಢವಾಗಿ ಪ್ರಹರಿಸಿದನು. ಅನಂತರ ಆ ಇಬ್ಬರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು. ಮಹಾರಥರಾದ ದುರ್ಯೋಧನ-ಸಾತ್ಯಕಿಗಳು ಸಮರಾಂಗಣದಲ್ಲಿ ಧನುಸ್ಸಿ ನಲ್ಲಿ ಬಾಣಗಳನ್ನು ಅನುಸಂಧಾನಮಾಡುತ್ತಾ ಒಬ್ಬರು ಮತ್ತೊಬ್ಬರ ಮೇಲೆ ತೀಕ್ಷ್ಣವಾದ ಬಾಣಗಳನ್ನು ಬಿಡುತ್ತಾ ಇಬ್ಬರೂ ಬಾಣಗಳಿಂದಲೇ ಮುಚ್ಚಿಹೋದರು. (ಇಬ್ಬರೂ ಅದೃಶ್ಯರಾಗಿ ಹೋದರು.) ಚಂದನವೃಕ್ಷವು ಕೆಂಪುರಸವನ್ನು ಸುರಿಸುತ್ತಾ ಶೋಭಾಯಮಾನವಾಗಿ ಕಾಣುವಂತೆ– ಕುರುರಾಜನಾದ ದುರ್ಯೋಧನನ ಬಾಣಗಳಿಂದ ಬಹಳವಾಗಿ ಗಾಯಗೊಂಡ ಸಾತ್ಯಕಿಯು ಗಾಯಗಳ ಮುಖದಿಂದ ಹೊರಡುತ್ತಿದ್ದ ರಕ್ತರಸದಿಂದ ಬಹಳ ಶೋಭಾಯಮಾನನಾಗಿ ಕಾಣುತ್ತಿದ್ದನು. ಸಾತ್ಯಕಿಯ ಬಾಣಗಳ ಸಮೂಹಗಳಿಂದ ಪ್ರಹೃತನಾದ ನಿನ್ನ ಮಗನು ಸುವರ್ಣಮಯ ವಾದ ಶಿರೋಭೂಷಣವಿರುವ ಎತ್ತರವಾದ ಯೂಪಸ್ತಂಭದಂತೆ ಪ್ರಕಾಶಿಸಿದನು. ಮಾಧವನು ನಗು-ನಗುತ್ತಲೇ ಧನುಷ್ಮಂತನಾದ ಕುರುರಾಜ ನಾದ, ದುರ್ಯೋಧನನ ಧನುಸ್ಸನ್ನು ಕ್ಷುರಪ್ರದಿಂದ ಕತ್ತರಿಸಿದನು.

ಸಾತ್ಯಕಿಯು ಭಿನ್ನವಾದ ಧನುಸ್ಸಿನಿಂದ ಕೂಡಿದ್ದ ದುರ್ಯೋಧನನನ್ನು ಅನೇಕಬಾಣಗಳಿಂದ ಪ್ರಹರಿಸಿದನು. ಕ್ಷಿಪ್ರವಾಗಿ ಆದಾನ-ಸಂಧಾನ-ಪ್ರಯೋಗಕ್ರಿಯೆಗಳನ್ನು ಮಾಡುತ್ತಿದ್ದ ಶತ್ರುವಿನ ಶರಪ್ರಹಾರಗಳಿಂದ ದುರ್ಯೋಧನನು ಬಹಳವಾಗಿ ಗಾಯಗೊಂಡನು. ಆದರೆ ಶತ್ರುವಿನ ವಿಜಯಸೂಚಕವಾದ ಆ ಪರಾಕ್ರಮವನ್ನು ದುರ್ಯೋಧನನು ಸಹಿಸಿಕೊಳ್ಳ ಲಿಲ್ಲ. ಕೂಡಲೇ ದುರ್ಯೋಧನನು ಸುವರ್ಣಮಯವಾದ ಹಿಂಭಾಗದಿಂದ ಕೂಡಿದ್ದ ದುರಾಸದವಾದ ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ನೂರುಬಾಣಗಳಿಂದ ಸಾತ್ಯಕಿಯನ್ನು ಬಹಳ ಬೇಗ ಪ್ರಹರಿಸಿದನು. ಬಲಿಷ್ಠನಾದ ನಿನ್ನ ಮಗನಿಂದ ಬಹಳವಾಗಿ ಪೀಡಿತನಾದ ಸಾತ್ಯಕಿಯು

ಸಹನೆಯನ್ನು ಕಳೆದುಕೊಂಡು ಕ್ರೋಧಪರವಶನಾಗಿ ನಿಶಿತವಾದ ಬಾಣ ಗಳಿಂದ ನಿನ್ನ ಮಗನನ್ನು ಬಹಳವಾಗಿ ಪೀಡಿಸಿದನು. ರಾಜನು ಸಾತ್ಯಕಿಯಿಂದ ಪೀಡಿಸಲ್ಪಡುತ್ತಿದ್ದುದನ್ನು ಕಂಡು ಮಹಾರಥರಾದ ನಿನ್ನ ಮಕ್ಕಳು ಪರಾಕ್ರಮವನ್ನು ತೋರಿಸುತ್ತಾ ಸಾತ್ಯಕಿಯನ್ನು ಬಾಣಗಳ ವರ್ಷದಿಂದ ಮುಚ್ಚಿಬಿಟ್ಟರು.

ಮಹಾರಥರಾದ ನಿನ್ನ ಮಕ್ಕಳು ಅವ್ಯಾಹತವಾಗಿ ಬಿಟ್ಟ ಬಾಣಗಳಿಂದ ಆಚ್ಛಾದಿತನಾದ ಸಾತ್ಯಕಿಯು ಆ ಬಾಣಗಳೆಲ್ಲವನ್ನೂ ಪ್ರತಿಬಾಣಗಳಿಂದ ನಾಶಗೊಳಿಸಿ, ಒಬ್ಬೊಬ್ಬರು ಮಹಾರಥರನ್ನೂ ಐದೈದು ಬಾಣಗಳಿಂದ ಪ್ರಹರಿಸಿ ಪುನಃ ಏಳೇಳು ಬಾಣಗಳಿಂದ ಪ್ರಹರಿಸಿದನು. ಪುನಃ ಸಾತ್ಯಕಿಯು ತ್ವರೆಯಿಂದ ದುರ್ಯೋಧನನನ್ನು ಶೀಘ್ರವಾಗಿ ಹೋಗುವ ಎಂಟು ಬಾಣಗಳಿಂದ ಪ್ರಹರಿಸಿದನು. ಗಹ-ಗಹಿಸಿ ನಗುತ್ತಿದ್ದ ಸಾತ್ಯಕಿಯು ಶತ್ರುಭಯಂಕರವಾದ ದುರ್ಯೋಧನನ ಧನುಸ್ಸನ್ನು ಕತ್ತರಿಸಿದನು. ಬಳಿಕ ಮಣಿಮಯವಾದ ನಾಗದ (ಆನೆಯ) ಚಿಹ್ನೆಯಿಂದ ಕೂಡಿದ್ದ ದುರ್ಯೋಧನನ ಧ್ವಜವನ್ನೂ ಬಾಣಗಳಿಂದ ಕತ್ತರಿಸಿ ಕೆಳಗೆ ಬೀಳುವಂತೆ ಮಾಡಿದನು. ನಿಶಿತವಾದ ನಾಲ್ಕು ಬಾಣಗಳಿಂದ ದುರ್ಯೋಧನನ ನಾಲ್ಕು ಕುದುರೆಗಳನ್ನೂ ಸಂಹರಿಸಿ ಮಹಾಯಶೋವಂತನಾದ ಸಾತ್ಯಕಿಯು ಕ್ಷುರಪ್ರ ದಿಂದ ಅವನ ಸಾರಥಿಯನ್ನೂ ಸಂಹರಿಸಿದನು. ಈ ಮಧ್ಯದಲ್ಲಿಯೇ ಹೃಷ್ಟ ನಾದ ಸಾತ್ಯಕಿಯು ಮಹಾರಥನಾದ, ಕುರುರಾಜನಾದ ದುರ್ಯೋಧನನನ್ನು ಮರ್ಮಭೇದಿಗಳಾದ ಬಾಣಗಳಿಂದ ಮುಚ್ಚಿದನು. ಈ ರೀತಿಯಲ್ಲಿ ಶೈನೇಯನ ಶ್ರೇಷ್ಠವಾದ ಬಾಣಗಳಿಂದ ಕ್ಷತ-ವಿಕ್ಷತನಾದ ನಿನ್ನ ಮಗನಾದ ದುರ್ಯೋಧನನು ಓಡಿಹೋದನು. ಓಡಿಹೋಗುತ್ತಿದ್ದಾಗ ಮಧ್ಯದಲ್ಲಿ ಸಿಕ್ಕಿದ ಧನುಷ್ಮಂತನಾದ ಚಿತ್ರಸೇನನ ರಥಕ್ಕೆ ನೆಗೆದು ಕುಳಿತುಕೊಂಡನು. ಆಕಾಶದಲ್ಲಿ ರಾಹುವು ಚಂದ್ರನನ್ನು ನುಂಗುವಂತೆ–ಸಾತ್ಯಕಿಯು ದುರ್ಯೋಧನನನ್ನು ನುಂಗುತ್ತಿರುವುದನ್ನು (ಶಕ್ತಿಹೀನನನ್ನಾಗಿ ಮಾಡುತ್ತಿರುವುದನ್ನು) ಕಂಡು ಕೌರವರ ಸೈನ್ಯದಲ್ಲಿ ಹಾಹಾಕಾರವೆದ್ದಿತು. ಆ ಹಾಹಾಕಾರಗಳ ಮಹಾಶಬ್ದ ವನ್ನು ಕೇಳಿದೊಡನೆಯೇ ಮಹಾರಥನಾದ ಕೃತವರ್ಮನು ಮಾಧವನಿದ್ದ ಸ್ಥಳಕ್ಕೆ ತ್ವರೆಯಿಂದ ಧಾವಿಸಿದನು. ಧನುಸ್ಸನ್ನು ಟೇಂಕಾರದ ಮೂಲಕವಾಗಿ

ಅಳ್ಳಾಡಿಸುತ್ತಾ, ಕುದುರೆಗಳನ್ನು ಬೇಗಹೋಗುವಂತೆ ಚಪ್ಪರಿಸುತ್ತಾ "ಬೇಗ ಹೋಗು! ಯಾಕಿಷ್ಟು ತಡಮಾಡುತ್ತಿರುವೆ? ಹಾಹಾಕಾರಶಬ್ದವು ಕೇಳಿಸುತ್ತಿಲ್ಲವೇ?"–ಇವೇ ಮುಂತಾದ ಮಾತುಗಳಿಂದ ಸಾರಥಿಯನ್ನು ಗದರಿಸುತ್ತಾ ಕೃತವರ್ಮನು ಸಾತ್ಯಕಿಯ ಬಳಿಗೆ ಹೋದನು. ಬಾಯ್ದೆರೆದ ಅಂತಕನಂತೆಯೇ ತನ್ನ ಮೇಲೆ ಬೀಳಲು ಬರುತ್ತಿದ್ದ ಕೃತವರ್ಮನನ್ನು ನೋಡಿ ಯುಯುಧಾನನು ಸಾರಥಿಯನ್ನು ಕುರಿತು ಹೇಳಿದನು:

"ಸೂತ! ಈ ಕೃತವರ್ಮನು ಕೈಯಲ್ಲಿ ಬಾಣವನ್ನು ಹಿಡಿದು, ರಥದಲ್ಲಿ ಕುಳಿತು ತೀವ್ರವಾದ ವೇಗದಿಂದ ನನ್ನ ಕಡೆಗೇ ಬರುತ್ತಿದ್ದಾನೆ. ಸರ್ವಧನುಷ್ಮಂತರಲ್ಲಿ ಶ್ರೇಷ್ಠನಾದ ಈ ಕೃತವರ್ಮನನ್ನು ನಮ್ಮ ರಥದಿಂದ ಎದುರಿಸು. (ನಮ್ಮ ರಥವನ್ನು ಅವನ ರಥಕ್ಕೆ ಎದುರಾಗಿ ನಿಲ್ಲಿಸು.)"

ಅನಂತರ ವಿಧಿಪೂರ್ವಕವಾಗಿ ಸಜ್ಜುಗೊಳಿಸಿದ್ದ, ವೇಗವುಳ್ಳ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಕುಳಿತು ಸಾತ್ಯಕಿಯು ಧನುಷ್ಮಂತರಿಗೆ ಆದರ್ಶಭೂತನಾಗಿದ್ದ ಕೃತವರ್ಮನ ಸಮೀಪಕ್ಕೆ ಹೋದನು.

ಅನಂತರ ಪರಮಕ್ರುದ್ಧರಾಗಿದ್ದ, ಪ್ರಜ್ವಲಿಸುವ ಅಗ್ನಿಗಳಂತೆಯೇ ಕಾಣುತ್ತಿದ್ದ, ವೇಗಶಾಲಿಗಳಾದ, ನರಶ್ರೇಷ್ಠರಾದ ಸಾತ್ಯಕಿ-ಕೃತವರ್ಮರಿಬ್ಬರೂ ಎರಡು ಕೊಬ್ಬಿದ ವ್ಯಾಘ್ರಗಳೋಪಾದಿಯಲ್ಲಿ ಯುದ್ಧದಲ್ಲಿ ತೊಡಗಿದರು. ಕೃತವರ್ಮನು ಶೈನೇಯನನ್ನು ಇಪ್ಪತ್ತಾರು ಬಾಣಗಳಿಂದ ಪ್ರಹರಿಸಿ ಅವನ ಸಾರಥಿಯನ್ನೂ ನಿಶಿತವಾದ ಮತ್ತು ತೀಕ್ಷ್ಣವಾದ ಐದು ಬಾಣಗಳಿಂದ ಪ್ರಹರಿಸಿದನು. ಪುನಃ ಕೃತವರ್ಮನು ಶ್ರೇಷ್ಠವಾದ ನಾಲ್ಕು ಬಾಣಗಳಿಂದ ಸುಶಿಕ್ಷಿತವಾಗಿದ್ದ, ವಿನೀತವಾಗಿದ್ದ, ಸಾತ್ಯಕಿಯ ನಾಲ್ಕು ಸಿಂಧೀಕುದುರೆಗಳನ್ನು ಪ್ರಹರಿಸಿದನು. ಸುವರ್ಣಮಯವಾದ ಭುಜಕೀರ್ತಿಗಳನ್ನು ಹೊಂದಿದ್ದ, ಸುವರ್ಣಮಯವಾದ ಕವಚವನ್ನು ತೊಟ್ಟಿದ್ದ ಕೃತವರ್ಮನು ಸುವರ್ಣಮಯ ವಾದ ಹಿಂಭಾಗದಿಂದ ಕೂಡಿದ್ದ ಬಾಣಗಳಿಂದ ಸಾತ್ಯಕಿಯನ್ನು ಮುಚ್ಚಿಬಿಟ್ಟನು. ಧನಂಜಯನನ್ನು ನೋಡಬೇಕೆಂಬ ಅವಸರದಲ್ಲಿದ್ದ ಶಿನಿಯ ಮೊಮ್ಮಗನಾದ ಸಾತ್ಯಕಿಯು ಎಂಬತ್ತು ಬಾಣಗಳನ್ನು ಕೃತವರ್ಮನ ಮೇಲೆ ಪ್ರಯೋಗಿಸಿದನು. ಶತ್ರುತಾಪನನಾದ ದುರ್ಧರ್ಷನಾದ ಕೃತವರ್ಮನು ಬಲಿಷ್ಠನಾದ ಶತ್ರುವಿನ

ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡು ಭೂಕಂಪವಾದಾಗ ಪರ್ವತವೂ ನಡುಗುವಂತೆ ನಡುಗಿದನು. ಕೃತವರ್ಮನು ಭ್ರಾಂತನಾಗಿದ್ದ ಅದೇ ಸಮಯದಲ್ಲಿ ಸತ್ಯವಿಕ್ರಮನಾದ ಸಾತ್ಯಕಿಯು ನಿಶಿತವಾದ ಅರುವತ್ತು ಮೂರು ಬಾಣಗಳಿಂದ ಭೋಜನ ಕುದುರೆಗಳನ್ನೂ, ಏಳು ಬಾಣಗಳಿಂದ ಅವನ ಸಾರಥಿಯನ್ನೂ ಪ್ರಹರಿಸಿದನು. ಪುನಃ ಸಾತ್ಯಕಿಯು ಚಿನ್ನದ ರೆಕ್ಕೆಯನ್ನು ಹೊಂದಿದ್ದ, ಕೋಪಗೊಂಡ ಸರ್ಪದಂತಿದ್ದ, ಮಹಾಜ್ವಾಲೆಯಿಂದ ಯುಕ್ತವಾಗಿದ್ದ ಬಾಣವನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಕಿವಿಯ ತುದಿಯವರೆಗೂ ಸೆಳೆದು ಕೃತವರ್ಮನ ಮೇಲೆ ಪ್ರಯೋಗಿಸಿದನು. ಯಮದಂಡ ಸದೃಶವಾಗಿದ್ದ ಅತ್ಯುಗ್ರವಾಗಿದ್ದ ಆ ಬಾಣವು, ಸುವರ್ಣಮಯವಾಗಿದ್ದ, ಚಿತ್ರಿತವಾಗಿದ್ದ ಮತ್ತು ಪ್ರಕಾಶಮಾನವಾಗಿದ್ದ ಕೃತವರ್ಮನ ಕವಚವನ್ನು ಭೇದಿಸಿಕೊಂಡು ಅವನ ಶರೀರವನ್ನು ಹೊಕ್ಕು ರಕ್ತದಿಂದ ನೆನೆಸಲ್ಪಟ್ಟು ಪುನಃ ಹೊರಬಂದು ಭೂಮಿಯ ಮೇಲೆ ಬಿದ್ದಿತು. ಕೃತವರ್ಮನು ಸಾತ್ಯಕಿಯ ಬಾಣಗಳ ಪ್ರಹಾರದಿಂದ ಬಹಳವಾಗಿ ಗಾಯಗೊಂಡನು. ಗಾಯಗಳ ಮೂಲಕವಾಗಿ ರಕ್ತವು ಧಾರಾಕಾರವಾಗಿ ಹೊರಬರುತ್ತಿದ್ದಿತು. ಶಕ್ತಿಗುಂದಿದ ಕೃತವರ್ಮನ ಧನುರ್ಬಾಣಗಳು ಅವನ ಕೈಗಳಿಂದ ಜಾರಿ ಕೆಳಕ್ಕೆ ಬಿದ್ದುವು. ಕೃತವರ್ಮನೂ ಶ್ರೇಷ್ಠವಾದ ತನ್ನ ರಥದ ಪೀಠದಿಂದ ಪಕ್ಕಕ್ಕುರುಳಿದನು. * ಸಿಂಹದ ಹಲ್ಲುಗಳಿಗೆ ಸಮಾನವಾದ ಹಲ್ಲುಗಳನ್ನು ಹೊಂದಿದ್ದ (ಉಬ್ಬಿದ ಹಲ್ಲುಗಳಿಂದ ಕೂಡಿದ್ದ) ಅಮಿತವಿಕ್ರಮನಾದ ಸಾತ್ಯಕಿಯ ಬಾಣಗಳಿಂದ ಪೀಡಿತನಾದ ಕೃತವರ್ಮನು ಮಂಡಿಗಳನ್ನು ಊರಿದ್ದಂತೆಯೇ ಆಸನದ ಪಕ್ಕದಲ್ಲಿ ಬಿದ್ದನು.

ಸಹಸ್ರಬಾಹುವಾದ ಕಾರ್ತವೀರ್ಯಾರ್ಜುನನಿಗೆ ಸಮಾನನಾಗಿದ್ದ, ಸಾಗರದೋಪಾದಿಯಲ್ಲಿ ಕದಲಿಸಲು ಅಶಕ್ಯನಾಗಿದ್ದ ಕೃತವರ್ಮನನ್ನು ಪರಾಜಯಗೊಳಿಸಿ ಸಾತ್ಯಕಿಯು ಅಲ್ಲಿಂದ ಹೊರಟುಬಿಟ್ಟನು. ಖಡ್ಗ

---

*ಸಿಂಹದಂಷ್ಟ್ರಃ:- ಸಿಂಹದಂತೆ ಹಲ್ಲುಗಳುಳ್ಳವನು. ಆಪಾತವಾದ ಅರ್ಥ. ಸಿಂಹದಂಷ್ಟ್ರನು ಯಾರೆಂಬುದನ್ನು ಲಕ್ಷಣಕಾರರು ಹೀಗೆ ಹೇಳಿದ್ದಾರೆ . **ದಂಷ್ಟ್ರಾಶ್ಚತಸ್ರೋ ಯಸ್ಯ ಸ್ಯುರ್ದರ್ಶನೇಭ್ಯಃ ಸಮುಚ್ಛ್ರಿತಾಃ । ಸಿಂಹದಂಷ್ಟ್ರಃ ಸ ಗದಿತಶ್ಚತುರ್ದಂಷ್ಟ್ರಶ್ಚ ಸೂರಿಭಿಃ॥** ಯಾವಾತನ ನಾಲ್ಕುಹಲ್ಲುಗಳು ಹೊರಕ್ಕೆ ಕಾಣುವ ರೀತಿಯಲ್ಲಿ ಉಬ್ಬಿಕೊಂಡಿವೆಯೋ ಅವನಿಗೆ ಸಿಂಹದಂಷ್ಟ್ರ ಅಥವಾ ಚತುರ್ದಂಷ್ಟ್ರನೆಂದು ವಿದ್ವಾಂಸರಾದವರು ಹೇಳುತ್ತಾರೆ.

ಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಧನುಸ್ಸುಗಳಿಂದಲೂ ವ್ಯಾಪ್ತ ವಾಗಿದ್ದ, ಗಜಾಶ್ವ-ರಥಸೈನ್ಯಗಳಿಂದ ತುಂಬಿಹೋಗಿದ್ದ, ನೂರಾರು ಕ್ಷತ್ರಿಯ ರಿಂದ ಪ್ರವರ್ತಿತವಾದ ಭಯಂಕರರಕ್ತದ ಕೋಡಿಯಿಂದ ಸಮಾಕುಲವಾಗಿದ್ದ ವಾಹಿನಿಯನ್ನು ಬಿಟ್ಟು–ದೇವೇಂದ್ರನು ರಾಕ್ಷಸರ ಸೈನ್ಯವನ್ನು ಬಿಟ್ಟುಹೋಗು ವಂತೆ–ಶಿನಿಪುಂಗವನು ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ಸೇನಾವ್ಯೂಹದ ಮಧ್ಯಭಾಗದಿಂದ ಹೊರಟುಹೋದನು. ಆ ವೇಳೆಗೆ ಬಲಿಷ್ಠನಾದ ಕೃತವರ್ಮನೂ ಚೇತರಿಸಿಕೊಂಡು, ಮತ್ತೊಂದು ಮಹಾಧನುಸ್ಸನ್ನು ಕೈಗೆತ್ತಿ ಕೊಂಡು ಪಾಂಡವರನ್ನು ಮುಂದೆ ಹೋಗದಂತೆ ತಡೆಯುತ್ತಾ ಅಲ್ಲಿಯೇ ನಿಂತನು."

೧೧೬ನೆಯ ಅಧ್ಯಾಯವು ಮುಗಿಯಿತು.

೧೧೭ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿ ಮತ್ತು ದ್ರೋಣರ ಕಾಳಗ: ದ್ರೋಣರ ಪರಾಜಯ: ಕೌರವಸೇನೆಯ ಪಲಾಯನ

ಸಂಜಯನು ಸಾತ್ಯಕಿಯ ಯುದ್ಧದ ವರ್ಣನೆಯನ್ನೇ ಮುಂದುವರಿಸಿ ಧೃತರಾಷ್ಟ್ರನಿಗೆ ಹೇಳುತ್ತಾನೆ:

"ಮಹಾರಾಜ! ಹೋಗುವ ಮಾರ್ಗದಲ್ಲಿದ್ದ ಕೌರವಸೈನ್ಯವನ್ನು ಬಾಣಗಳ ಸಮೂಹದಿಂದ ಶೈನೇಯನು ಕದಡುತ್ತಿದ್ದಾಗ, ದ್ರೋಣರು ಬಾಣಗಳ ದೊಡ್ಡ ದೊಡ್ಡ ಗುಂಪುಗಳಿಂದ ಸಾತ್ಯಕಿಯನ್ನು ಮುಚ್ಚಿದರು. ಎಲ್ಲ ಸೈನಿಕರೂ ನೋಡುತ್ತಿದ್ದಂತೆಯೇ ದ್ರೋಣ-ಸಾತ್ವತರ ಆ ಮಹಾಯುದ್ಧವು ಬಲಿ ಮತ್ತು ಇಂದ್ರರ ಯುದ್ಧದಂತೆ–ಬಹಳ ಭಯಂಕರವಾಗಿ ಪರಿಣಮಿಸಿತು. ದ್ರೋಣರು ಶಿನಿಯ ಮೊಮ್ಮಗನನ್ನು ಚಿತ್ರಿತವಾಗಿದ್ದ, ಲೋಹಮಯವಾಗಿದ್ದ, ಸರ್ಪ ಸದೃಶವಾಗಿದ್ದ ಮೂರು ಬಾಣಗಳಿಂದ ಅವನ ನೆತ್ತಿಯಲ್ಲಿ ಪ್ರಹರಿಸಿದರು. ಹಣೆಗೆ ಗುರಿಯಿಟ್ಟು ಹೊಡೆದ, ನೇರವಾಗಿ ಹೋಗುವ ಆ ಬಾಣಗಳು ಸಾತ್ಯಕಿಯ ಹಣೆಗೆ ಚುಚ್ಚಿಕೊಂಡುವು. ಅದರಿಂದ ಸಾತ್ಯಕಿಯು ಮೂರು ಶಿಖರಗಳುಳ್ಳ ಪರ್ವತದಂತೆಯೇ ಪ್ರಕಾಶಿಸಿದನು. ಶತ್ರುವಿನ

ಛಿದ್ರವನ್ನೇ ಹುಡುಕುತ್ತಿದ್ದ ದ್ರೋಣರು–ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಧ್ವನಿಯಿಂದ ಕೂಡಿದ್ದ ಇನ್ನೂ ಅನೇಕ ಬಾಣಗಳನ್ನು ಸಾತ್ಯಕಿಯ ಮೇಲೆ ಸಮಯವರಿತು ಪ್ರಯೋಗಿಸಿದರು. ಶ್ರೇಷ್ಠವಾದ ಅಸ್ತ್ರಗಳ ಆದಾನ-ಸಂಧಾನ-ಪ್ರಯೋಗಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದ ಸಾತ್ಯಕಿಯು ದ್ರೋಣರ ಧನುಸ್ಸಿನಿಂದ ಹೊರಟು ತನ್ನ ಮೇಲೆ ಬೀಳಲು ಬರುತ್ತಿದ್ದ ಎಲ್ಲ ಬಾಣಗಳನ್ನೂ ಒಳ್ಳೆಯ ರೆಕ್ಕೆಗಳನ್ನು ಹೊಂದಿದ್ದ ಎರಡೆರಡು ಬಾಣಗಳಿಂದ ಕತ್ತರಿಸಿದನು. ಮಹಾರಾಜ! ಶಿನಿಪುಂಗವನ ಹಸ್ತಲಾಘವವನ್ನು ಕಂಡು ದ್ರೋಣರು ಗಹಗಹಿಸಿ ನಗುತ್ತಾ ಬಹಳ ಶೀಘ್ರವಾಗಿಯೇ ಮೂವತ್ತು ಬಾಣಗಳಿಂದ ಸಾತ್ಯಕಿಯನ್ನು ಗಾಯಗೊಳಿಸಿದರು. ಯುಯುಧಾನನ ಹಸ್ತ ಲಾಘವಕ್ಕಿಂತಲೂ ತಮ್ಮ ಹಸ್ತಲಾಘವವೇ ವಿಶಿಷ್ಟವಾದುದೆಂಬುದನ್ನು ಪ್ರದರ್ಶಿಸುತ್ತಾ ಪುನಃ ಸಾತ್ಯಕಿಯನ್ನು ನಿಶಿತವಾದ ಐವತ್ತು ಬಾಣಗಳಿಂದ ಪ್ರಹರಿಸಿದರು. ಕ್ರುದ್ಧವಾದ ಮಹಾಸರ್ಪಗಳು ಯಾವ ರೀತಿಯಲ್ಲಿ ಹುತ್ತದಿಂದ ಒಂದಾದ ಮೇಲೆ ಮತ್ತೊಂದು ಹೊರಬರುತ್ತಿರು ತ್ತವೆಯೋ–ಅದೇ ರೀತಿಯಲ್ಲಿ ಶರೀರವನ್ನು ಛಿದ್ರಗೊಳಿಸುವ ಬಾಣಗಳು ದ್ರೋಣರ ರಥದಿಂದ ಪುಂಖಾನುಪುಂಖವಾಗಿ ಹೊರಬರುತ್ತಿದ್ದುವು. ಅದೇ ರೀತಿಯಲ್ಲಿ ಯುಯುಧಾನನಿಂದ ಸೃಷ್ಟವಾದ, ರಕ್ತವನ್ನು ಭುಂಜಿಸುವ ಲಕ್ಷೋಪಲಕ್ಷ ಬಾಣಗಳು ದ್ರೋಣರ ರಥವನ್ನು ಮುತ್ತಿದುವು. ದ್ವಿಜಮುಖ್ಯರಾದ ದ್ರೋಣರಿಗೂ-ಸಾತ್ವತನಿಗೂ ಹಸ್ತಲಾಘವದಲ್ಲಿ ನಾವು ಯಾವ ವಿಶೇಷವಾದ ವ್ಯತ್ಯಾಸವನ್ನೂ ಕಾಣಲಿಲ್ಲ. ನರರ್ಷಭರಾದ ಆ ಇಬ್ಬರೂ ಒಂದೇ ವಿಧವಾದ ಶ್ರೇಷ್ಠರೀತಿಯ ಹಸ್ತಲಾಘವದಿಂದ ಕೂಡಿದವರಾಗಿದ್ದರು. ಕ್ರುದ್ಧನಾದ ಸಾತ್ಯಕಿಯು ಬಗ್ಗಿದ ಗಿಣ್ಣುಗಳಿದ್ದ ಒಂಬತ್ತು ಬಾಣಗಳಿಂದ ದ್ರೋಣರನ್ನು ಪ್ರಹರಿಸಿದನು. ನಿಶಿತವಾದ ಅನೇಕ ಬಾಣಗಳಿಂದ ದ್ರೋಣರ ಧ್ವಜವನ್ನೂ ಪ್ರಹರಿಸಿದನು. ಪುನಃ ಸಾತ್ಯಕಿಯು ದ್ರೋಣರು ನೋಡುತ್ತಿದ್ದಂತೆಯೇ ಅವರ ಸಾರಥಿಯನ್ನು ನೂರು ಬಾಣ ಗಳಿಂದ ಪ್ರಹರಿಸಿದನು. ಯುಯುಧಾನನ ಹಸ್ತಲಾಘವವನ್ನು ನೋಡಿ ಮಹಾರಥರಾದ ದ್ರೋಣರು ಎಪ್ಪತ್ತು ಬಾಣಗಳಿಂದ ಸಾತ್ಯಕಿಯ ಸಾರಥಿ ಯನ್ನು ಪ್ರಹರಿಸಿದರು. ಅವನ ನಾಲ್ಕು ಕುದುರೆಗಳನ್ನು ಮೂರು-ಮೂರು ಬಾಣಗಳಿಂದಲೂ ಪ್ರಹರಿಸಿ ಮಾಧವನ ರಥದಲ್ಲಿದ್ದ ಧ್ವಜವನ್ನು ಒಂದೇ ಬಾಣದಿಂದ ಕತ್ತರಿಸಿ ಕೆಳಕ್ಕೆ ಕೆಡವಿದರು. ಚಿನ್ನದ ರೆಕ್ಕೆಯಿದ್ದ ಮತ್ತೊಂದು

ಭಲ್ಲದಿಂದ ದ್ರೋಣರು ಮಹಾತ್ಮನಾದ ಸಾತ್ಯಕಿಯ ಧನುಸ್ಸನ್ನೂ ಕತ್ತರಿಸಿ ಬಿಟ್ಟರು. ಮಹಾರಥನಾದ ಸಾತ್ಯಕಿಯು ಒಡನೆಯೇ ಛಿದ್ರವಾಗಿದ್ದ ಧನುಸ್ಸನ್ನು ಬಿಸುಟು ದೊಡ್ಡದಾದ ಗದೆಯನ್ನೆತ್ತಿಕೊಂಡು ರಭಸದಿಂದ ಭಾರದ್ವಾಜರ ಮೇಲೆಸೆದನು. ಮೇಲೆ ಬೀಳಲು ತಮ್ಮ ಕಡೆಗೆ ರಭಸದಿಂದ ಬರುತ್ತಿದ್ದ, ಚಿನ್ನದ ಪಟ್ಟಿಯಿಂದ ಸುತ್ತಲ್ಪಟ್ಟಿದ್ದ, ಲೋಹಮಯವಾಗಿದ್ದ ಗದೆಯನ್ನು ಅನೇಕ ರೂಪಗಳುಳ್ಳ ಅನೇಕಬಾಣಗಳಿಂದ ದ್ರೋಣರು ಬಹಳ ಬೇಗ ನಿರಸನಗೊಳಿಸಿದರು. ಒಡನೆಯೇ ಸಾತ್ಯಕಿಯು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ಅನೇಕಬಾಣ ಗಳಿಂದ ದ್ರೋಣರನ್ನು ಪ್ರಹರಿಸಿದನು. ಹೀಗೆ ದ್ವೈರಥಯುದ್ಧದಲ್ಲಿ ದ್ರೋಣರನ್ನು ಬಹಳವಾಗಿ ಗಾಯಗೊಳಿಸಿದ ಸಾತ್ಯಕಿಯು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಸರ್ವಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠರಾದ ದ್ರೋಣರು ಸಾತ್ಯಕಿಯು ಮಾಡಿದ ವಿಜಯಸೂಚಕವಾದ ಸಿಂಹನಾದವನ್ನು ಸಹಿಸಿಕೊಳ್ಳಲಿಲ್ಲ. ಚಿನ್ನದ ದಂಡದಿಂದ ಕೂಡಿದ್ದ ಲೋಹಮಯವಾಗಿದ್ದ ಶಕ್ತ್ಯಾಯುಧವನ್ನೆತ್ತಿಕೊಂಡು ದ್ರೋಣರು ಮಾಧವನ ರಥದ ಕಡೆಗೆ ರಭಸದಿಂದೆಸೆದರು. ಯಮಸದೃಶವಾಗಿದ್ದ, ದಾರುಣವಾಗಿ ಧ್ವನಿಮಾಡುತ್ತಿದ್ದ, ಭಯಂಕರವಾಗಿದ್ದ ಆ ಶಕ್ತ್ಯಾಯುಧವು ಶೈನೇಯನಿಗೆ ತಗುಲದೆ ಅವನ ರಥವನ್ನು ಮಾತ್ರವೇ ಭಗ್ನಗೊಳಿಸಿ (ಸ್ಪರ್ಶಿಸಿ) ಭೂಮಿಯ ಮೇಲೆ ಬಿದ್ದಿತು. ಅನಂತರ ಶಿನಿಯ ಮೊಮ್ಮಗನಾದ ಸಾತ್ಯಕಿಯು ದ್ರೋಣರನ್ನು ಬಾಣದಿಂದ ಪ್ರಹರಿಸಿದನು. ಆ ಬಾಣವು ದ್ರೋಣರ ಬಲತೋಳನ್ನು ಪ್ರಹರಿಸಿ ಅವರಿಗೆ ಹೆಚ್ಚು ಪೀಡೆಯನ್ನುಂಟುಮಾಡಿತು. ದ್ರೋಣರೂ ಸಹ ಅರ್ಧಚಂದ್ರವೆಂಬ ಆಯುಧದಿಂದ ಮಾಧವನ ಮಹಾಧನುಸ್ಸನ್ನು ಕತ್ತರಿಸಿದರು. ಪುನಃ *ರಥಶಕ್ತಿಯಿಂದ ಅವನ ಸಾರಥಿಯನ್ನು ಗಾಯಗೊಳಿಸಿದರು. ರಥಶಕ್ತಿಯಿಂದ ಪ್ರಹೃತ ನಾದ ಸಾತ್ಯಕಿಯ ಸಾರಥಿಯು ಬುದ್ಧಿಭ್ರಮಣೆಯನ್ನು ಹೊಂದಿ ರಥಪೀಠದ ಹಿಂಬದಿಯಲ್ಲಿ ಮುಹೂರ್ತಪರ್ಯಂತವಾಗಿ ಸುಮ್ಮನೇ ಕುಳಿತಿದ್ದನು. ಆ

---

*ರಥಶಕ್ತ್ಯಾ- ಎಂಬುದಕ್ಕೆ ವ್ಯಾಖ್ಯಾನಕಾರರು 'ಕೇತಕಪತ್ರಾಕಾರಮುಖಯಾ ಶಕ್ತ್ಯಾ ಕೇದಗೆಯ ಪತ್ರದ (ತಾಳೇಗರಿಯ) ಆಕಾರವುಳ್ಳ ಮುಖದಿಂದ ಕೂಡಿದ ಶಕ್ತ್ಯಾಯುಧದಿಂದ' ಎಂದು ಅರ್ಥಮಾಡಿರುತ್ತಾರೆ.

ಸಮಯದಲ್ಲಿ ಸಾತ್ಯಕಿಯು ಅತಿಮಾನುಷವಾದ (ಮಾನವಸಾಮಾನ್ಯನಿಂದ ಮಾಡಲು ಸಾಧ್ಯವಾಗದೇ ಇರುವ) ಸಾರಥಿಯ ಕಾರ್ಯವನ್ನೂ ಮತ್ತು ಯೋಧನ ಕಾರ್ಯವನ್ನೂ ಒಬ್ಬನೇ ಮಾಡತೊಡಗಿದನು. ತಾನೇ ಸ್ವತಃ ಕುದುರೆಗಳ ಕಡಿವಾಣಗಳನ್ನೂ ಹಿಡಿದುಕೊಂಡು ಅವುಗಳನ್ನು ನಿಯಂತ್ರಿಸುತ್ತಾ ದ್ರೋಣರೊಡನೆ ಯುದ್ಧವನ್ನೂ ಮಾಡುತ್ತಿದ್ದನು. ಅಂತಹ ಕ್ಲಿಷ್ಟವಾದ ಸಂದರ್ಭದಲ್ಲಿಯೂ ಸಹ ಮಹಾರಥನಾದ ಯುಯುಧಾನನು ಸಂತೋಷ ವನ್ನೇ ವ್ಯಕ್ತಪಡಿಸುತ್ತಾ ಬ್ರಾಹ್ಮಣೋತ್ತಮರಾದ ದ್ರೋಣರನ್ನು ನೂರು ಬಾಣಗಳಿಂದ ಪ್ರಹರಿಸಿದನು. ಅನಂತರ ದ್ರೋಣರು ಸಾತ್ಯಕಿಯನ್ನು ಐದು ಬಾಣಗಳಿಂದ ಪ್ರಹರಿಸಿದರು. ಘೋರವಾದ ಆ ಬಾಣಗಳು ಸಾತ್ಯಕಿಯ ಕವಚವನ್ನು ಭೇದಿಸಿ ಅವನ ರಕ್ತವನ್ನು ಪಾನಮಾಡಿದುವು. ಘೋರವಾದ ಬಾಣಗಳಿಂದ ಕ್ಷತ-ವಿಕ್ಷತನಾದ ಸಾತ್ಯಕಿಯು ಒಡನೆಯೇ ಪರಮ ಕ್ರುದ್ಧನಾದನು. ವೀರನಾದ ಸಾತ್ಯಕಿಯು ರುಕ್ಮರಥರಾದ ದ್ರೋಣರ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ಅನಂತರ ಸಾತ್ಯಕಿಯು ಒಂದೇ ಒಂದು ಬಾಣದಿಂದ ದ್ರೋಣರ ಸಾರಥಿಯನ್ನು ಸಂಹರಿಸಿ ರಥದಿಂದ ಕೆಳಕ್ಕೆ ಬೀಳಿಸಿ ನಿಯಂತ್ರವಿಲ್ಲದಿದ್ದ ಆ ಕುದುರೆಗಳನ್ನೂ ಬಾಣಗಳಿಂದ ಗಾಯಗೊಳಿಸಿ ದಿಕ್ಕಾಪಾಲಾಗಿ ಓಡಿಸಿಬಿಟ್ಟನು. ಬೆಳ್ಳಿಯಂತೆ ಪ್ರಕಾಶಮಾನವಾಗಿದ್ದ ದ್ರೋಣರ ಆ ರಥವು ರಣರಂಗದಲ್ಲಿ ಓಡಿಹೋಗುತ್ತಾ ಇದ್ದಾಗ ಸಾವಿರಾರು ಬಾರಿ ಮಂಡಲಾಕಾರವಾಗಿ ಸುತ್ತುತ್ತಾ ಸೂರ್ಯನೋಪಾದಿಯಲ್ಲಿ ಪ್ರಕಾಶಿಸಿತು. ಆ ಸಮಯದಲ್ಲಿ ಅಲ್ಲಿದ್ದ ಎಲ್ಲ ರಾಜಪುತ್ರರೂ ಮತ್ತು ರಾಜರೂ 'ಓಡಿಹೋಗಿರಿ! ಹಿಡಿಯಿರಿ! ದ್ರೋಣರ ಕುದುರೆಗಳನ್ನು ಅಡ್ಡಹಾಕಿರಿ!' -ಎಂಬುದಾಗಿ ಕೂಗಿಕೊಂಡರು. ಆ ಎಲ್ಲ ಮಹಾರಥರೂ ಸಾತ್ಯಕಿಯನ್ನು ಅಲ್ಲಿಯೇ ಬಿಟ್ಟು ದ್ರೋಣರ ರಥವು ಹೋಗುತ್ತಿದ್ದ ಕಡೆಗೇ ತಮ್ಮ ರಥಗಳ ಕುದುರೆಗಳನ್ನು ಅಡ್ಡಗಟ್ಟಿ ನಿಲ್ಲಿಸಲು ಓಡಿಹೋದರು. ಸಾತ್ಯಕಿಯ ಬಾಣಗಳಿಂದ ಪೀಡಿತರಾಗಿ ಓಡಿಹೋಗುತ್ತಿದ್ದ ರಾಜರನ್ನೂ ರಾಜಪುತ್ರರನ್ನೂ ನೋಡಿ ಸಂಘಟನೆ ಯಿಂದಿದ್ದ ನಿನ್ನ ಸೈನ್ಯವು ಪುನಃ ಭಗ್ನವಾಗಿ ಹೋಯಿತು. ಸಾತ್ಯಕಿಯ ಬಾಣಗಳಿಂದ ಗಾಯಗೊಂಡು ವಾಯುವೇಗದಿಂದ ಓಡಿಹೋಗುತ್ತಿದ್ದ ಕುದುರೆಗಳಿಂದಲೇ ಪುನಃ ಹಿಂದಕ್ಕೆ ಕರೆತರಲ್ಪಟ್ಟ ದ್ರೋಣರು ವ್ಯೂಹದ

ಮಹಾದ್ವಾರಕ್ಕೆ ಪುನಃ ಹೋಗಿ ಅಲ್ಲಿಯೇ ವ್ಯವಸ್ಥಿತರಾದರು. ಪರಾಕ್ರಮಿಗಳಾದ ದ್ರೋಣರು ಪಾಂಡವಯೋಧರಿಂದಲೂ ಮತ್ತು ಪಾಂಚಾಲಯೋಧರಿಂದಲೂ ತಮ್ಮ ವ್ಯೂಹವು ಭಗ್ನವಾಗುತ್ತಿರುವುದನ್ನು ನೋಡಿ ಶೈನೇಯನನ್ನು ಪುನಃ ಹಿಂಬಾಲಿಸಲು ಪ್ರಯತ್ನಿಸದೇ ವ್ಯೂಹದ ರಕ್ಷಣೆಯಲ್ಲಿಯೇ ನಿರತರಾಗಿದ್ದರು. ಕೋಪವೆಂಬ ಕಟ್ಟಿಗೆಯಿಂದ ಪ್ರಜ್ವಲಿಸುತ್ತಿದ್ದ ಅಗ್ನಿರೂಪರಾದ ದ್ರೋಣರು ಪಾಂಡು-ಪಾಂಚಾಲಯೋಧರನ್ನು ದಹಿಸಿಬಿಡುವರೋ ಎಂಬಂತೆ ವ್ಯೂಹದ ಅಗ್ರಭಾಗದಲ್ಲಿ ನಿಂತಿದ್ದರು. ಆ ಸಮಯದಲ್ಲವರು ಪ್ರಳಯಕಾಲದಲ್ಲಿ ಹುಟ್ಟಿದ ಸೂರ್ಯನಂತೆಯೇ ಕಾಣುತ್ತಿದ್ದರು."

೧೧೭ನೆಯ ಅಧ್ಯಾಯವು ಮುಗಿಯಿತು.

೧೧೮ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯಿಂದ ಸುದರ್ಶನನ ಸಂಹಾರ

ಸಂಜಯನು ಸಾತ್ಯಕಿಯ ಪೌರುಷದ ವರ್ಣನೆಯನ್ನೇ ಮುಂದುವರಿಸುತ್ತಾನೆ:

"ಕುರುಪುಂಗವರಲ್ಲಿ ಅಗ್ರಗಣ್ಯನಾದವನೇ! ಮಹಾರಾಜ! ಪುರುಷಶ್ರೇಷ್ಠನಾದ ಶೈನೇಯನು ದ್ರೋಣರನ್ನೂ ಮತ್ತು ಹಾರ್ದಿಕ್ಯನೇ ಮೊದಲಾದ ನಿನ್ನ ಕಡೆಯ ಮಹಾರಥರನ್ನೂ ಜಯಿಸಿ ಅಟ್ಟಹಾಸದಿಂದ ನಗುತ್ತಾ ತನ್ನ ಸೂತನೊಡನೆ ಈ ಮಾತುಗಳನ್ನು ಹೇಳಿದನು:

"ಸೂತ! ಈ ಶತ್ರುಗಳ ಸಂಹಾರದಲ್ಲಿ ನಾವು ಕೇವಲ ನಿಮಿತ್ತ ಮಾತ್ರರಾಗಿದ್ದೇವೆ. ಕೇಶವ-ಫಾಲ್ಗುನರಿಂದ ಎಲ್ಲ ಶತ್ರುಗಳೂ ಈ ಮೊದಲೇ ಸುಡಲ್ಪಟ್ಟಿದ್ದಾರೆ. ನರರ್ಷಭನಾದ ಇಂದ್ರನ ಆತ್ಮಜನಾದ ಅರ್ಜುನನಿಂದ ಕೊಲ್ಲಲ್ಪಟ್ಟ ಈ ಶತ್ರುವೀರರನ್ನು ನಾವು ಈಗ ನೆಪಮಾತ್ರಕ್ಕೆ ಕೊಲ್ಲುತ್ತಿದ್ದೇವೆ. (ಮಹಾವೀರನಾದ ಅರ್ಜುನನಿಂದಲೇ ಇವರ ಅವಸಾನವು ಆಗಿಹೋಗಿದೆ. ನಾವಾದರೋ ಸತ್ತವರನ್ನೇ ಪುನಃ ಸಾಯಿಸುತ್ತಿದ್ದೇವೆ.)"

ಮಹಾರಾಜ! ಶ್ರೇಷ್ಠಧನುರ್ಧರನಾದ, ಶತ್ರುನಾಶಕನಾದ, ಬಲಿಷ್ಠನಾದ, ಶಿನಿಪುಂಗವನಾದ ಸಾತ್ಯಕಿಯು ಆ ಮಹಾಯುದ್ಧದ ಸಮಯದಲ್ಲಿ

ಸೂತನೊಡನೆ ಹೀಗೆ ಹೇಳಿ ರಣಾಂಗಣದ ಸುತ್ತಲೂ ಬಾಣಗಳನ್ನೆರಚುತ್ತಾ–ಗಿಡಗಪಕ್ಷಿಯು ಮಾಂಸವನ್ನು ಕಂಡೊಡನೆಯೇ ಅದರ ಮೇಲೆ ಎರಗಿ ಬೀಳುವಂತೆ–ಶತ್ರುಗಳ ಮೇಲೆ ಎರಗಿಬಿದ್ದನು. ಚಂದ್ರನ ಮತ್ತು ಶಂಖದ ಬಣ್ಣಕ್ಕೆ ಸಮಾನವಾದ ಶ್ವೇತವರ್ಣದಿಂದ ಬೆಳಗುತ್ತಿದ್ದ ಕುದುರೆಗಳ ಮೂಲಕವಾಗಿ ಕೌರವಸೇನೆಯೊಳಕ್ಕೆ ಮುನ್ನುಗ್ಗಿ ಹೋಗುತ್ತಿದ್ದ, ಸೂರ್ಯನ ರಶ್ಮಿಗಳಿಗೆ ಸಮಾನವಾದ ಮಹಾತೇಜಸ್ಸಿನಿಂದ ಬೆಳಗುತ್ತಿದ್ದ, ರಥಿಗಳಲ್ಲಿ ಶ್ರೇಷ್ಠನಾದ, ನರಶ್ರೇಷ್ಠನಾದ ಸಾತ್ಯಕಿಯನ್ನು ಯಾವ ದಿಕ್ಕಿನಲ್ಲೂ ಯಾವ ಯೋಧರೂ ತಡೆಯಲು ಸಮರ್ಥರಾಗಲಿಲ್ಲ.

ಸಹಿಸಲು ಅಸಾಧ್ಯವಾದ ಪರಾಕ್ರಮವನ್ನು ಹೊಂದಿದ್ದ, ಮಹಾಬಲಶಾಲಿಯಾಗಿದ್ದ, ಸಹಸ್ರನೇತ್ರನಾದ ಇಂದ್ರನಿಗೆ ಸಮಾನವಾದ ಪರಾಕ್ರಮವನ್ನು ಹೊಂದಿದ್ದ, ಮೋಡಗಳಿಲ್ಲದೇ ಇರುವ ಶರತ್ಕಾಲದಲ್ಲಿ ಆಕಾಶದಲ್ಲಿ ಬೆಳಗುವ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಸಾತ್ಯಕಿಯನ್ನು ಸಂಘಟಿತರಾದ ನಿನ್ನ ಎಲ್ಲ ಸೈನಿಕರೂ ತಡೆಯಲಾರದೇ ಹೋದರು.

ಆ ಸಮಯದಲ್ಲಿ ಕೋಪಪೂರ್ಣನಾಗಿದ್ದ, ವಿಚಿತ್ರವಾದ ರೀತಿಯಲ್ಲಿ ಯುದ್ಧಮಾಡುವ ಕೌಶಲವಿದ್ದ, ಸುವರ್ಣಮಯವಾದ ಕವಚವನ್ನು ಧರಿಸಿದ್ದ, ಧನುರ್ಧರನಾದ, ರಾಜಶ್ರೇಷ್ಠನಾದ ಸುದರ್ಶನನು ತನ್ನ ಕಡೆಗೆ ಬರುತ್ತಿದ್ದ ಸಾತ್ಯಕಿಯನ್ನು ಬಲಪೂರ್ವಕವಾಗಿ ತಡೆದನು. ಮಹಾರಾಜ! ಸುದರ್ಶನ-ಸಾತ್ಯಕಿಯರ ನಡುವೆ ಸುದಾರುಣವಾದ ಯುದ್ಧವು ನಡೆಯಿತು. ವೃತ್ರನಿಗೂ ಮತ್ತು ಇಂದ್ರನಿಗೂ ನಡೆಯುತ್ತಿದ್ದ ಯುದ್ಧವನ್ನು ದೇವತೆಗಳು ನೋಡುತ್ತಿದ್ದಂತೆ-ಸಾತ್ಯಕಿ-ಸುದರ್ಶನರ ಯುದ್ಧವನ್ನು ನಿನ್ನ ಕಡೆಯ ಯೋಧರೂ ಮತ್ತು ಸೋಮಕರೂ ಬಹಳವಾಗಿ ಪ್ರಶಂಸೆಮಾಡುತ್ತಾ ನೋಡುತ್ತಿದ್ದರು. ಆ ಮಹಾಯುದ್ಧದಲ್ಲಿ ಸುದರ್ಶನನು ಸುತೀಕ್ಷ್ಣವಾದ ನೂರಾರು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದನು. ಆ ಬಾಣಗಳು ತನ್ನ ಬಳಿಗೆ ಬರುವ ಮೊದಲೇ ಶಿನಿಪುಂಗವನು ಅವುಗಳನ್ನು ಕತ್ತರಿಸಿಬಿಡುತ್ತಿದ್ದನು.

ಅದೇ ರೀತಿಯಲ್ಲಿ ಇಂದ್ರಸದೃಶನಾದ ಸಾತ್ಯಕಿಯು ಸುದರ್ಶನನ ಮೇಲೆ ಅನೇಕ ಬಾಣಗಳನ್ನು ಬಿಡುತ್ತಿದ್ದನು. ಅವುಗಳು ತನ್ನ ಸಮೀಪಕ್ಕೆ ಬರುವ

ಮೊದಲೇ ಶ್ರೇಷ್ಠವಾದ ರಥದಲ್ಲಿ ಕುಳಿತಿದ್ದ ಸುದರ್ಶನನು ತನ್ನ ಶ್ರೇಷ್ಠವಾದ ಬಾಣಗಳಿಂದ ಎರಡು-ಮೂರು ಭಾಗಗಳಾಗಿ ಕತ್ತರಿಸಿಬಿಟ್ಟನು. ಸಾತ್ಯಕಿಯು ಬಿಡುತ್ತಿದ್ದ ಬಾಣಗಳ ವೇಗದಿಂದ ತಾನು ಬಿಟ್ಟ ಬಾಣಗಳೆಲ್ಲವೂ ವ್ಯರ್ಥ ವಾಗುತ್ತಿದ್ದುದನ್ನು ಕಂಡು ಪ್ರಚಂಡವಾದ ತೇಜಸ್ಸಿನಿಂದ ಕೂಡಿದ್ದ ಸುದರ್ಶನನು ರೋಷದಿಂದಲೇ ಸಾತ್ಯಕಿಯನ್ನು ದಹಿಸಿಬಿಡುವನೋ ಎಂಬಂತೆ ಆವೇಶಪೂರ್ಣನಾಗಿ ಸುವರ್ಣದ ರೇಖೆಗಳಿಂದ ಚಿತ್ರಿತವಾಗಿದ್ದ ಬಾಣಗಳನ್ನು ಸಾತ್ಯಕಿಯ ಮೇಲೆ ಪ್ರಯೋಗಿಸಿದನು. ಪುನಃ ಸುದರ್ಶನನು ಅಗ್ನಿಸದೃಶ ವಾಗಿದ್ದ, ಸುಂದರವಾದ ರೆಕ್ಕೆಗಳನ್ನು ಹೊಂದಿದ್ದ, ನಿಶಿತವಾಗಿದ್ದ ಕಿವಿಯ ತುದಿಯವರೆಗೂ ಸೆಳೆದಿದ್ದ ಮೂರು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿ ದನು. ಆ ಮೂರು ಬಾಣಗಳೂ ಸಾತ್ಯಕಿಯ ಕವಚವನ್ನು ಭೇದಿಸಿಕೊಂಡು ಶರೀರವನ್ನು ಹೊಕ್ಕುವು. ಅನಂತರ ರಾಜಕುಮಾರನಾದ ಸುದರ್ಶನನು ಪ್ರಜ್ವಲಿಸುತ್ತಿದ್ದ ನಾಲ್ಕು ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಆ ಬಾಣಗಳಿಂದ ಬೆಳ್ಳಿಯಂತೆ ಪ್ರಕಾಶಿಸುತ್ತಿದ್ದ ಸಾತ್ಯಕಿಯ ನಾಲ್ಕು ಕುದುರೆಗಳನ್ನೂ ಬಲಪೂರ್ವಕವಾಗಿ ಪ್ರಹರಿಸಿದನು. ಆ ರೀತಿಯಲ್ಲಿ ಸುದರ್ಶನನ ಬಾಣಗಳಿಂದ ಪ್ರಹೃತನಾದ ಶಿನಿಯ ಮೊಮ್ಮಗನಾದ, ಇಂದ್ರನ ಪರಾಕ್ರಮಕ್ಕೆ ಅನುರೂಪವಾದ ಪರಾಕ್ರಮವನ್ನು ಹೊಂದಿದ್ದ, ವೇಗಶಾಲಿ ಯಾದ ಸಾತ್ಯಕಿಯು ಸುತೀಕ್ಷ್ಣವಾದ ಬಾಣಗಳ ಸಮೂಹದಿಂದ ಸುದರ್ಶನನ ಕುದುರೆಗಳನ್ನು ಸಂಹರಿಸಿ ಸಿಂಹನಾದವನ್ನು ಮಾಡಿದನು. ಕುದುರೆಗಳನ್ನು ಸಂಹರಿಸಿದಂತೆಯೇ ಶಿನಿಪ್ರವೀರನಾದ ಸಾತ್ಯಕಿಯು ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಭಲ್ಲದಿಂದ ಸುದರ್ಶನನ ಸೂತನ ತಲೆಯನ್ನೂ ಕತ್ತರಿಸಿ ಅನಂತರ ಪ್ರಳಯಕಾಲದ ಅಗ್ನಿಗೆ ಸಮಾನವಾಗಿದ್ದ ಕ್ಷುರಪ್ರದಿಂದ, ಕರ್ಣಕುಂಡಲಗಳಿಂದ ಯುಕ್ತವಾಗಿದ್ದ, ಪೂರ್ಣಚಂದ್ರನಂತೆ ಪ್ರಕಾಶಮಾನ ವಾಗಿದ್ದ, ಸುದರ್ಶನನ ಮುಖವನ್ನು (ತಲೆಯನ್ನು)–ಹಿಂದೆ ಇಂದ್ರನು ಯುದ್ಧದಲ್ಲಿ ಅತಿಬಲಿಷ್ಠನಾಗಿದ್ದ ಬಲಾಸುರನ ತಲೆಯನ್ನು ಕತ್ತರಿಸಿದಂತೆ ಕತ್ತರಿಸಿದನು. ಯಾದವರ್ಷಭನಾದ, ವೇಗಶಾಲಿಯಾದ, ಮಹಾತ್ಮನಾದ, ದೇವರಾಜಸದೃಶನಾದ ಸಾತ್ಯಕಿಯು ಒಬ್ಬ ರಾಜನ ಪುತ್ರನೂ ಮತ್ತೊಬ್ಬ ರಾಜನ ಪೌತ್ರನೂ ಆಗಿದ್ದ ಸುದರ್ಶನನನ್ನು ಸಂಹರಿಸಿ ಅತ್ಯಂತ ಸಂತೋಷ

ಯುಕ್ತನಾಗಿ ಪ್ರಕಾಶಿಸಿದನು. ಮಹಾರಾಜ! ಲೋಕವನ್ನೇ ಆಶ್ಚರ್ಯಚಕಿತ ವನ್ನಾಗಿ ಮಾಡುವ ಇಚ್ಛೆಯಿಂದ ಸಾತ್ಯಕಿಯು ಒಳ್ಳೆಯ ಕುದುರೆಗಳಿಂದ ಯುಕ್ತವಾಗಿದ್ದ ರಥದ ಮೂಲಕವಾಗಿ ಅರ್ಜುನನು ಯಾವ ಮಾರ್ಗದಿಂದ ಸೈಂಧವನ ಬಳಿಗೆ ಹೋಗಿದ್ದನೋ ಅದೇ ಮಾರ್ಗದ ಮೂಲಕವಾಗಿ, ತಡೆಯಲು ಬರುತ್ತಿದ್ದ ನಿನ್ನ ಸೈನಿಕರನ್ನು ಬಾಣಗಳ ಸಮೂಹದಿಂದ ನಿವಾರಣೆಮಾಡುತ್ತಾ ಹೊರಟುಹೋದನು. ಆಶ್ಚರ್ಯಜನಕವಾದ ಸಾತ್ಯಕಿಯ ಶ್ರೇಷ್ಠಪರಾಕ್ರಮವನ್ನು ಏಕತ್ರಮಿಳಿತರಾಗಿದ್ದ ಅನೇಕ ಯೋಧ ಶ್ರೇಷ್ಠರು ಪ್ರಶಂಸಿಸುತ್ತಿದ್ದರು. ಸಾತ್ಯಕಿಯು ತನ್ನ ಗಮನಕ್ಕೆ ಅಡ್ಡಲಾಗಿ ಬರುತ್ತಿದ್ದ ಮತ್ತು ಬಾಣಕ್ಕೆ ಲಕ್ಷ್ಯರಾಗುತ್ತಿದ್ದ ಶತ್ರುಯೋಧರನ್ನು ಅಗ್ನಿದೇವನಂತೆಯೇ ಬಾಣಗಳಿಂದ ದಹಿಸಿಬಿಡುತ್ತಿದ್ದನು. ”

೧೧೮ನೆಯ ಅಧ್ಯಾಯವು ಮುಗಿಯಿತು.

೧೧೯ನೆಯ ಅಧ್ಯಾಯ — ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಗೂ ಮತ್ತು ಅವನ ಸಾರಥಿಗೂ ನಡೆದ ಸಂಭಾಷಣೆ : ಸಾತ್ಯಕಿಯು ಕಾಂಬೋಜರನ್ನೂ ಮ್ಲೇಚ್ಛರನ್ನೂ ಪರಾಜಯಗೊಳಿಸಿದುದು

ಸಂಜಯನು ಹೇಳುತ್ತಾನೆ:

“ಕುರುಪುಂಗವ ! ಮಹಾತ್ಮನಾದ, ಬುದ್ಧಿವಂತನಾದ, ವೃಷ್ಣಿಶ್ರೇಷ್ಠನಾದ ಸಾತ್ಯಕಿಯು ಯುದ್ಧದಲ್ಲಿ ಸುದರ್ಶನನನ್ನು ಸಂಹರಿಸಿದನಂತರ ಸಾರಥಿಯನ್ನು ಕುರಿತು ಹೇಳಿದನು :

“ತಾತ! ಗಜಾಶ್ವ-ರಥಸೈನಿಕರಿಂದ ಸಮೃದ್ಧವಾಗಿದ್ದ, ದ್ರೋಣರ ಅನೀಕವೆಂಬ ಮಹಾಸಮುದ್ರವನ್ನು ದಾಟಿದ್ದೇವೆ. ಬಾಣ ಮತ್ತು ಶಕ್ತಿಗಳೇ ದ್ರೋಣಾನೀಕಮಹಾರ್ಣವದ ಅಲೆಗಳ ಸಾಲುಗಳಂತಿದ್ದುವು. ಖಡ್ಗಗಳೇ ಮೀನುಗಳಂತಿದ್ದುವು. ಗದೆಗಳು ಮೊಸಳೆಗಳಂತಿದ್ದುವು. ಶೂರಯೋಧರ ಆಯುಧಗಳ ಸಂಘರ್ಷಣಶಬ್ದವೇ ಮಹಾರ್ಣವದ ಭೋರ್ಗರೆಯುವ ಶಬ್ದ ವಾಗಿದ್ದಿತು. ಸಮುದ್ರವು ಪ್ರಾಣಾಪಹಾರಿಯಾಗಿರುವಂತೆ ಸೇನಾಸಮುದ್ರವೂ ಪ್ರಾಣಾಪಹಾರಿಯಾಗಿದ್ದಿತು. ಭಯಂಕರವಾಗಿದ್ದಿತು. ರಣವಾದ್ಯಗಳಿಂದ

ಅನೀಕಮಹಾಸಮುದ್ರವು ಕ್ಷಣ-ಕ್ಷಣಕ್ಕೂ ನಿನಾದಿತವಾಗುತ್ತಿದ್ದಿತು. ಯೋಧರಿಗೆ ಅನೀಕಸಮುದ್ರದ ಸ್ಪರ್ಶವು ಸಮುದ್ರದ ಸ್ಪರ್ಶದಂತೆಯೇ ಸುಖಸ್ಪರ್ಶಿಯಾಗಿರಲಿಲ್ಲ. ಯುದ್ಧದಲ್ಲಿ ವಿಜಯವನ್ನು ಇಚ್ಛಿಸದೇ ಇದ್ದವರಿಗೆ ಆ ಸಮುದ್ರವು ದಾಟಲು ಅಸಾಧ್ಯವಾಗಿತ್ತು. ಜಲಸಂಧನ ಸೈನ್ಯದ ಉಪಸ್ಥಿತಿಯಿದ್ದ ದ್ರೋಣಾನೀಕಾರ್ಣವವು ದೈತ್ಯರಿಂದ ಆವೃತವಾದ ಸಮುದ್ರದಂತೆಯೇ ಇದ್ದಿತು. ಇಂತಹ ದ್ರೋಣಸೇನಾರ್ಣವವನ್ನು ನಾವು ದಾಟಿದ್ದೇವೆ. ನಾವಿನ್ನೂ ಜಯಿಸದೇ ಉಳಿದಿರುವ ಮತ್ತೊಂದು ಸೈನ್ಯವಿದೆ. ಆದರೆ ಆ ಸೈನ್ಯದ ವಿಷಯವಾಗಿ ನಾವು ಭ್ರಾಂತರಾಗಬೇಕಾಗಿಲ್ಲ. ಸ್ವಲ್ಪವೇ ನೀರಿನಿಂದ ಕೂಡಿರುವ ಚಿಕ್ಕನದಿಯನ್ನು ಸುಲಭವಾಗಿ ದಾಟುವಂತೆ–ಆ ಸೈನ್ಯವನ್ನೂ ನಾವು ಸುಲಭವಾಗಿಯೇ ದಾಟಬಹುದಾಗಿದೆ. ಆದುದರಿಂದ ನೀನು ಸ್ವಲ್ಪವಾದರೂ ಗಾಬರಿಗೊಳ್ಳದೇ ಆ ಸೈನ್ಯದ ಸಮೀಪಕ್ಕೆ ಹೋಗುವಂತೆ ಕುದುರೆಗಳನ್ನು ಚಪ್ಪರಿಸು. ಸೈನ್ಯಸಮೇತರಾಗಿದ್ದ, ದುರ್ಧರರಾಗಿದ್ದ ದ್ರೋಣರನ್ನು ನಾವು ಜಯಿಸಿದನಂತರ ಸವ್ಯಸಾಚಿಯು ನಮ್ಮ ಕೈಗೆ ಎಟುಕಿದನೆಂದೇ ನಾನು ಭಾವಿಸಿದ್ದೇನೆ. (ಅವನನ್ನು ಸೇರಿಕೊಳ್ಳಲು ಮುಂದೆ ಹೆಚ್ಚು ತೊಂದರೆಯಾಗಲಾರದು.) ಯೋಧಶ್ರೇಷ್ಠನಾದ ಹಾರ್ದಿಕ್ಯನನ್ನೂ ಪರಾಜಯಗೊಳಿಸಿದನಂತರ ಧನಂಜಯನು ನನ್ನ ಸಮೀಪಗತನಾದ ನೆಂಬುವುದರಲ್ಲಿ ಯಾವ ಸಂಶಯವೂ ಇಲ್ಲ. ಅಸಂಖ್ಯಾತರಾದ ಸೈನಿಕರನ್ನು ನೋಡಿದರೂ ನನಗೆ ಯಾವ ವಿಧವಾದ ಭಯವೂ ಉಂಟಾಗುವುದಿಲ್ಲ. ಪ್ರಜ್ವಲಿಸುತ್ತಿರುವ ಅಗ್ನಿಗೆ ಅರಣ್ಯದಲ್ಲಿರುವ ಹುಲ್ಲಾಗಲೀ, ಲತೆಗಳಾಗಲೀ ಯಾವ ವಿಧವಾದ ತೊಂದರೆಯನ್ನೂ ಉಂಟುಮಾಡದಂತೆ–ಈ ಸೈನಿಕರು ನನ್ನ ಗಮನದಲ್ಲಿ ಪ್ರತಿಬಂಧಕವನ್ನುಂಟುಮಾಡಲಾರರು. ಅರ್ಜುನನ ಬಾಣ ಗಳಿಂದ ಹತವಾಗಿ ಬಿದ್ದಿರುವ ಗಜಾಶ್ವ-ರಥ-ಪದಾತಿಗಳಿಂದ ನಿಮ್ನೋನ್ನತ ವಾಗಿರುವ ಈ ಹಾದಿಯನ್ನು ನೋಡು, ಸೂತ ! ಈ ಮಾರ್ಗದ ಮೂಲಕ ವಾಗಿಯೇ ಅರ್ಜುನನು ಸೈಂಧವನ ಸಮೀಪಕ್ಕೆ ಹೋಗಿದ್ದಾನೆ. ಮಹಾತ್ಮನಾದ ಅರ್ಜುನನಿಂದ ಭಗ್ನವಾದ ಸೈನ್ಯವು ದಿಕ್ಕಾಪಾಲಾಗಿ ಓಡಿಹೋಗುತ್ತಿರುವಂತೆ ಕಾಣುತ್ತಿದೆ. ದಿಕ್ಕುಗಾಣದೇ ಓಡಿಹೋಗುತ್ತಿರುವ ರಥ-ಗಜಾಶ್ವಸೈನಿಕರಿಂದ ಸಮುದ್ಭೂತವಾಗಿರುವ ಕೆಂಪುರೇಷ್ಮೆಗೆ ಸಮಾನವಾದ ಬಣ್ಣವಿರುವ ಧೂಳು

ಮೇಲೇಳುತ್ತಿದೆ. ಇದರಿಂದ ಕೃಷ್ಣಸಾರಥಿಯಾದ ಶ್ವೇತಾಶ್ವನು ನಮಗೆ ಅನತಿ ದೂರದಲ್ಲಿಯೇ ಇರುವನೆಂದು ನಾನು ಭಾವಿಸುತ್ತೇನೆ. ಇದೋ ! ಅಮಿತ ವಾದ ಶಕ್ತಿಯುಳ್ಳ ಗಾಂಡೀವಧನುಸ್ಸಿನ ಟೇಂಕಾರಶಬ್ದವೂ ಕೇಳಿಬರುತ್ತಿದೆ. ನನಗೆ ಕಾಣಿಸುತ್ತಿರುವ ಶುಭಶಕುನಗಳನ್ನು ನೋಡಿದರೆ ಸೂರ್ಯನು ಅಸ್ತಮಿಸುವುದರೊಳಗಾಗಿಯೇ ಅರ್ಜುನನು ಸೈಂಧವನನ್ನು ಸಂಹರಿಸುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ.

ಸೂತ ! ಅವಸರಪಟ್ಟುಕೊಳ್ಳದೇ ಕುದುರೆಗಳು ದಣಿವಾರಿಸಿಕೊಳ್ಳಲು ಅವಕಾಶಮಾಡಿಕೊಟ್ಟು ಅನಂತರ ತಲತ್ರಾಣಗಳನ್ನು (ಕೈಚೀಲಗಳನ್ನು) ಹೊಂದಿರುವ ದುರ್ಯೋಧನಪುರಃಸರರಾದ ಸೈನಿಕರು ಎಲ್ಲಿರುವರೋ ಅಲ್ಲಿಗೆ ಹೋಗು. ಕವಚಗಳನ್ನೂ ಧನುರ್ಬಾಣಗಳನ್ನೂ ಧರಿಸಿರುವ ಯುದ್ಧ ದುರ್ಮದರಾದ ಕಾಂಬೋಜರು, ಪ್ರಹಾರಕುಶಲರಾದ ಯವನರು, ಶಕರು, ಕಿರಾತರು, ದರದರು, ಬರ್ಬರರು, ತಾಮ್ರಲಿಪ್ತರು ಇವರೇ ಅಲ್ಲದೇ ಇನ್ನೂ ಅನೇಕ ರೀತಿಯ ಆಯುಧಗಳನ್ನೂ–ಚರ್ಮದ ಕೈಚೀಲಗಳನ್ನೂ ಧರಿಸಿರುವ ದುರ್ಯೋಧನಪುರಃಸರರಾದ ಮ್ಲೇಚ್ಛರೂ ನನ್ನೊಡನೆ ಯುದ್ಧವನ್ನಾಶಿಸಿ ನನ್ನನ್ನೇ ಅಭಿಮುಖನನ್ನಾಗಿ ಮಾಡಿಕೊಂಡು ಯುದ್ಧಸನ್ನದ್ಧರಾಗಿ ನಿಂತಿದ್ದಾರೆ. ಗಜಾಶ್ವ-ರಥ-ಪದಾತಿಸೈನಿಕರಿಂದ ಕೂಡಿರುವ ಇವರನ್ನು ಯುದ್ಧದಲ್ಲಿ ಸಂಹರಿಸಿದನಂತರ ಮಹಾಘೋರವಾದ ಅತ್ಯಂತ ದುರ್ಗಮವಾದ ಸಂಕಟದಿಂದ ಪಾರಾದೆವೆಂದು ಭಾವಿಸು."

"ವಾರ್ಷ್ಣೇಯ ! ಸತ್ಯವಿಕ್ರಮನೇ ! ಕ್ರುದ್ಧನಾದ ಪರುಶುರಾಮನೇ ಯುದ್ಧಮಾಡಲು ನಿನ್ನೆದುರಾಗಿ ನಿಂತರೂ ನನಗೆ ಭಯವಿಲ್ಲ. ಮಹಾ ಭುಜನೇ! ರಥಿಗಳಲ್ಲಿ ಶ್ರೇಷ್ಠರಾದ ದ್ರೋಣರು, ಕೃಪರು, ಮದ್ರೇಶ್ವರನಾದ ಶಲ್ಯ, ಇವರುಗಳೇ ನಿನ್ನೊಡನೆ ಯುದ್ಧಮಾಡಲು ಬಂದರೂ ನಿನ್ನನ್ನಾಶ್ರಯಿ ಸಿರುವ ನನಗೆ ಭಯವೆಂಬುದೇ ಇಲ್ಲ. ಶತ್ರುಸೂದನನೇ! ಈ ಹಿಂದೆಯೂ ಕ್ರೂರಕರ್ಮಿಗಳಾದ, ಕವಚಧಾರಿಗಳಾದ, ಯುದ್ಧದುರ್ಮದರಾದ ಕಾಂಬೋಜರು ನಿನ್ನಿಂದ ಪರಾಜಿತರಾಗಿದ್ದರು. ಧನುರ್ಬಾಣಗಳನ್ನು ಧರಿಸಿದ್ದ ಯವನರು, ಪ್ರಹಾರಕುಶಲರಾದ ಶಕರು, ಕಿರಾತರು, ದರದರು, ಬರ್ಬರರು, ತಾಮ್ರಲಿಪ್ತರು–ಇವರೇ ಅಲ್ಲದೇ ಇನ್ನೂ ಅನೇಕವಿಧವಾದ ಆಯುಧಗಳನ್ನು ಧರಿಸಿದ್ದ ಮ್ಲೇಚ್ಛರೂ ನಿನ್ನಿಂದ ಪರಾಜಿತರಾಗಿದ್ದರು. (ಆ ಎಲ್ಲ

ಯುದ್ಧಗಳಲ್ಲಿಯೂ ನಾನೇ ನಿನ್ನ ಸಾರಥಿಯಾಗಿದ್ದೆನು.) ಅವರೊಡನೆ ನೀನು ಯುದ್ಧಮಾಡಿದಾಗಲೂ ನಾನು ಸ್ವಲ್ಪವಾದರೂ ಭ್ರಾಂತನಾಗಲಿಲ್ಲ. ಈಗ ನೀನು ಧೀರರ ಸಮೂಹದಲ್ಲಿ ಯುದ್ಧಮಾಡಲು ಹೋಗುತ್ತಿರುವುದು ಗೋಷ್ಪಾದದಷ್ಟು ಮಾತ್ರವಾಗಿದೆ. (ಅತ್ಯಲ್ಪಸಂಖ್ಯೆಯ ಯೋಧರನ್ನು ಮಾತ್ರವೇ ನೀನೀಗ ಎದುರಿಸಬೇಕಾಗಿದೆ.) ಆದುದರಿಂದ ನನಗೆ ಭಯಲೇಶವೂ ಇಲ್ಲ. ಆಯುಷ್ಮಂತನೇ ! ನಿನ್ನನ್ನು ಯಾವ ಮಾರ್ಗದ ಮೂಲಕವಾಗಿ ಧನಂಜಯನ ಸಮೀಪಕ್ಕೆ ಒಯ್ಯಲಿ? ಅದನ್ನು ನಿರ್ದೇಶಿಸು. ವಾರ್ಷ್ಣೇಯ! ನೀನಿಂದು ಯಾರಮೇಲೆ ಕೋಪಗೊಂಡಿರುವೆ? (ನೀನು ಯಾರಮೇಲೆ ಕೋಪಗೊಂಡಿರುವೆಯೋ ಅವರಿಗೆ ಮೃತ್ಯುವು ಸನ್ನಿಹಿತ ವಾಗಿರುವುದಂತೂ ನಿಜ.) ಆದುದರಿಂದ ಯಾರಿಗೆ ಮೃತ್ಯುವು ಸನ್ನಿಹಿತ ವಾಗಿದೆ? ಯಾರ ಮನಸ್ಸು ಯಮಪುರಿಗೆ ಹೋಗಲು ಉತ್ಸಾಹಗೊಂಡಿದೆ? ಯುದ್ಧದಲ್ಲಿ ಕಾಲ, ಅಂತಕ ಮತ್ತು ಯಮರಿಗೆ ಸಮಾನವಾಗಿ ಪರಾಕ್ರಮವನ್ನು ತೋರಿಸುವ ಬಲ-ವಿಕ್ರಮಸಂಪನ್ನನಾದ ನಿನ್ನನ್ನು ಯುದ್ಧದಲ್ಲಿ ನೋಡಿ ಯಾರು ಪಲಾಯನಮಾಡುವರು? ಮಹಾಭುಜನೇ! ಯಮರಾಜನು ಇಂದು ಯಾರನ್ನು ಸ್ಮರಿಸಿಕೊಳ್ಳುತ್ತಾನೆ? (ನೀನು ಯುದ್ಧದಲ್ಲಿ ತೊಡಗಿದರೆ ಶತ್ರುಗಳು ಪಲಾಯನಮಾಡುವುದೋ ಅಥವಾ ಅಸುವನ್ನು ತೊರೆದು ರಣಾಂಗಣದಲ್ಲಿ ಮಲಗುವುದೋ–ಎರಡರಲ್ಲಿ ಒಂದಂತೂ ನಿಶ್ಚಯ. ಇಂತಹ ಅವಸ್ಥೆಯು ಯಾರಿಗೆ ಕಾದುನಿಂತಿದೆ? ಅರ್ಥಾತ್ ನೀನು ಯಾರೊಡನೆ ಯುದ್ಧಮಾಡಲು ಇಚ್ಛಿಸಿರುವೆ? ಅದನ್ನು ಹೇಳು. ಅಲ್ಲಿಗೆ ನಾನು ನಿನ್ನನ್ನು ಒಯ್ಯುತ್ತೇನೆ.) ”

“ಸೂತ ! ಇಂದ್ರನು ದಾನವರನ್ನು ವಧಿಸಿದಂತೆ–ಈಗ ನಾನು ತಲೆಗಳನ್ನು ಮುಂಡನಮಾಡಿಕೊಂಡಿರುವ ಕಾಂಬೋಜರನ್ನೇ ಸಂಹರಿಸಿ ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳುತ್ತೇನೆ. ಈಗ ನಾನು ಇವರೆಲ್ಲರನ್ನೂ ಸಂಹರಿಸಿ ಪ್ರಿಯಸುಹೃದನಾದ ಅರ್ಜುನನ ಸಮೀಪಕ್ಕೆ ಹೋಗು (೧೮೪)—೧೬

ತ್ತೇನೆ. ಸೂತ! ಸುಯೋಧನಸಹಿತರಾದ ಕೌರವರು ಇಂದು ನನ್ನ ಪರಾಕ್ರಮವನ್ನು ಕಾಣುತ್ತಾರೆ. ಬೋಳುತಲೆಯ ಆ ಕಾಂಬೋಜಸೈನಿಕರೆಲ್ಲರೂ ಹತರಾಗಿ ಹೋದನಂತರ ಯುದ್ಧದಲ್ಲಿ ಕ್ಷತ-ವಿಕ್ಷತವಾಗುವ ಈ ಕೌರವಮಹಾಸೈನ್ಯದ ಅನೇಕಪ್ರಕಾರವಾದ ಆರ್ತಧ್ವನಿಗಳನ್ನು ಕೇಳಿ ದುರ್ಯೋಧನನು ಸಂತಾಪ ಪಡುತ್ತಾನೆ. ಮಹಾತ್ಮನಾದ, ಪಾಂಡವಮುಖ್ಯನಾದ, ನನ್ನ ಆಚಾರ್ಯನಾದ ಶ್ವೇತಾಶ್ವನ ಮಾರ್ಗವನ್ನೇ (ಯುದ್ಧಮಾಡುವ ವಿಧಾನವನ್ನೇ) ನಾನೂ ಈಗ ಯುದ್ಧದಲ್ಲಿ ತೋರಿಸುತ್ತೇನೆ. ಈಗ ನನ್ನ ಬಾಣಗಳಿಂದ ಹತರಾಗುವ ಸಾವಿರಾರು ಯೋಧಮುಖ್ಯರನ್ನು ನೋಡಿ ದುರ್ಯೋಧನರಾಜನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ಉತ್ತಮೋತ್ತಮವಾದ ಬಾಣಗಳನ್ನು ಪುಂಖಾನುಪುಂಖವಾಗಿ ಬಿಡುವ, ಕ್ಷಿಪ್ರಹಸ್ತನಾದ (ಶೀಘ್ರಾತಿಶೀಘ್ರವಾಗಿ ಬಾಣಗಳ ಆದಾನ-ಸಂಧಾನ-ಪ್ರಯೋಗಗಳನ್ನು ಮಾಡುವ), ಕೊಳ್ಳಿಯ ಚಕ್ರಕ್ಕೆ ಸಮಾನವಾದ ನನ್ನ ಧನುಸ್ಸನ್ನು ಇಂದು ಕೌರವರು ನೋಡುತ್ತಾರೆ. ನನ್ನ ಬಾಣಗಳ ಪ್ರಹಾರದಿಂದ ಕ್ಷತ-ವಿಕ್ಷತವಾದ ಶರೀರದಿಂದ ಕೂಡಿ ರಕ್ತವನ್ನು ಅನುಸ್ಯೂತವಾಗಿ ಸುರಿಸುತ್ತಾ ಪ್ರಾಣ ತೊರೆಯುವ ಸೈನಿಕರನ್ನು ನೋಡಿ ದುರ್ಯೋಧನನು ಸಂತಾಪಪಡುತ್ತಾನೆ. ಕೋಪಾಭಿಭೂತನಾದ ನನ್ನ ಸ್ವರೂಪವನ್ನೂ ಮತ್ತು ಉತ್ತಮೋತ್ತಮರಾದ ಯೋಧರನ್ನೇ ಸಂಹರಿಸುವ ನನ್ನ ಭಯಂಕರಕರ್ಮವನ್ನೂ ನೋಡಿದ ಸುಯೋಧನನು ಈ ಲೋಕವು ಇಬ್ಬರು ಅರ್ಜುನರಿಂದ ಕೂಡಿರುವುದೆಂದು ಭಾವಿಸುತ್ತಾನೆ. ಈಗಿನ ಮಹಾಯುದ್ಧದಲ್ಲಿ ಸಾವಿರಾರು ರಾಜರು ನನ್ನಿಂದ ವಧಿಸಲ್ಪಡುವುದನ್ನು ನೋಡಿ ದುರ್ಯೋಧನರಾಜನು ಪರಿತಾಪಪಡುತ್ತಾನೆ. ಈಗ ನಾನು ಅಗಣಿತರಾಜರನ್ನು ಸಂಹರಿಸಿ ಮಹಾತ್ಮರಾದ ಪಾಂಡವರ ವಿಷಯದಲ್ಲಿ ನನಗಿರುವ ಅಪಾರವಾದ ಸ್ನೇಹವನ್ನೂ ಮತ್ತು ಭಕ್ತಿಯನ್ನೂ ಭೂಮಂಡಲದ ರಾಜರಿಗೆ ತೋರಿಸಿಕೊಡುತ್ತೇನೆ. ಕೌರವರೂ ಸಹ ನನಗಿರುವ ಬಲ-ಪರಾಕ್ರಮಗಳನ್ನೂ ಮತ್ತು ಆಚಾರ್ಯನಾದ ಅರ್ಜುನನಲ್ಲಿ ನನಗಿರುವ ಕೃತಜ್ಞತೆಯನ್ನೂ ಅರಿತುಕೊಳ್ಳುತ್ತಾರೆ."

ಮಹಾರಾಜ! ಸಾತ್ಯಕಿಯು ಸೂತನನ್ನು ಕುರಿತು ಹೀಗೆ ಹೇಳಿದನಂತರ ಸೂತನು ಒಳ್ಳೆಯ ಶಿಕ್ಷಣವನ್ನು ಪಡೆದಿದ್ದ, ಒಳ್ಳೆಯ ರೀತಿಯಲ್ಲಿ ರಥವನ್ನು

ಒಯ್ಯುವ, ಚಂದ್ರನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ಕುದುರೆಗಳನ್ನು ಮುಂದೆ ಹೋಗುವಂತೆ ಹುರಿದುಂಬಿಸಿದನು. ವಾಯುವೇಗ-ಮನೋವೇಗಗಳಿಗೆ ಸಮಾನವಾದ ವೇಗದಿಂದ ಕೂಡಿದ್ದ, ಉತ್ತಮೋತ್ತಮವಾದ ಆ ಕುದುರೆಗಳು ಆಕಾಶವನ್ನೇ ನುಂಗುತ್ತಾ ಹೋಗುತ್ತಿವೆಯೋ ಎಂಬಷ್ಟು ವೇಗವಾಗಿ ಓಡುತ್ತಾ ನಿಮೇಷಾಂತರದಲ್ಲಿ ಯವನರ ಸೈನ್ಯದ ಸಮೀಪಕ್ಕೆ ಸಾತ್ಯಕಿಯನ್ನು ಒಯ್ದುವು. ಯುದ್ಧದಲ್ಲಿ ಯಾವಾಗಲೂ ಹಿಮ್ಮೆಟ್ಟದಿರುವ ಸಾತ್ಯಕಿಯ ರಥವನ್ನು ನೋಡಿದೊಡನೆಯೇ ಲಘುಹಸ್ತರಾದ ಅನೇಕ ಯವನಸೈನಿಕರು ಅವನನ್ನು ಸುತ್ತುವರಿದು ಬಾಣಗಳ ಮಳೆಯಿಂದ ಮುಚ್ಚಿದರು. ವೇಗಶಾಲಿಯಾದ ಸಾತ್ಯಕಿಯು ಯವನರು ಬಿಟ್ಟ ಬಾಣಗಳನ್ನೂ ಮತ್ತು ಅಸ್ತ್ರಗಳನ್ನೂ ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಕತ್ತರಿಸಿದನು. ಅದರಿಂದಾಗಿ ಯವನರು ಬಿಟ್ಟ ಯಾವ ಬಾಣಗಳೂ ಸಾತ್ಯಕಿಯ ಸಮೀಪಕ್ಕೂ ಬರಲಿಲ್ಲ. ಅನಂತರ ಉಗ್ರನಾದ ಸಾತ್ಯಕಿಯು ಸುವರ್ಣಮಯವಾದ ಮೂಲಭಾಗವಿದ್ದ, ಸುನಿಶಿತವಾಗಿದ್ದ, ಹದ್ದಿನ ರೆಕ್ಕೆಗಳಿದ್ದ, ನೇರವಾಗಿ ಹೋಗುವ ಬಾಣಗಳಿಂದ ಯವನರ ಶಿರಸ್ಸುಗಳನ್ನೂ, ಭುಜಗಳನ್ನೂ, ಕೆಂಪು ಲೋಹದಿಂದಲೂ ಮತ್ತು ಕಂಚಿನಿಂದಲೂ ನಿರ್ಮಿತವಾಗಿದ್ದ ಯೋಧರ ಕವಚಗಳನ್ನೂ ಕತ್ತರಿಸಿದನು. ಸಾತ್ಯಕಿಯು ಬಿಟ್ಟ ಬಾಣಗಳು ಯವನರ ಶರೀರಗಳನ್ನು ಭೇದಿಸಿಕೊಂಡು ನೆಲದ ಮೇಲೆ ಬೀಳುತ್ತಿದ್ದುವು. ವೀರನಾದ ಸಾತ್ಯಕಿಯಿಂದ ಹತರಾದ ನೂರಾರು ಮ್ಲೇಚ್ಛರು ಪ್ರಾಣಗಳನ್ನು ತೊರೆದು ಭೂಮಿಯ ಮೇಲೆ ಬಿದ್ದಿದ್ದರು. ಶಿಂಜಿನಿಯನ್ನು ಕಿವಿಯ ತುದಿಯವರೆಗೂ ಸೆಳೆದು ಮಧ್ಯದಲ್ಲಿ ವಿಚ್ಛಿತ್ತಿಯಿಲ್ಲದೇ ಒಂದಕ್ಕೊಂದು ಅಂಟಿಕೊಂಡಿರುವಂತೆಯೇ ಬಿಡುತ್ತಿದ್ದ ಬಾಣಗಳಿಂದ ಸಾತ್ಯಕಿಯು ಐದು ಮಂದಿ, ಆರು ಮಂದಿ, ಏಳು ಮಂದಿ, ಕೆಲವು ಸಮಯಗಳಲ್ಲಿ ಎಂಟು ಮಂದಿ ಯವನರನ್ನೂ ಒಂದೇ ಬಾರಿಗೆ ಸಂಹರಿಸುತ್ತಿದ್ದನು.

ಮಹಾರಾಜ ! ಶೈನೇಯನು ನಿನ್ನ ಸೈನ್ಯವನ್ನು ವಿನಾಶಗೊಳಿಸುತ್ತಾ ಅನೇಕಸಹಸ್ರಕಾಂಬೋಜರನ್ನೂ, ಶಕರನ್ನೂ, ಶಬರರನ್ನೂ, ಕಿರಾತರನ್ನೂ, ಬರ್ಬರರನ್ನೂ ಸಂಹರಿಸಿ, ರಣಭೂಮಿಯನ್ನು ಮಾಂಸ ಮತ್ತು ರಕ್ತಗಳಿಂದ ಮಿಶ್ರಿತವಾದ ಕೆಸರುಳ್ಳದ್ದನ್ನಾಗಿಯೂ, ಸಂಚರಿಸಲು ದುಃಸಾಧ್ಯವಾದುದನ್ನಾಗಿಯೂ ಮಾಡಿದನು. ಉದ್ದವಾಗಿದ್ದ ಗಡ್ಡಗಳಿಂದಲೂ,

ಶಿರಸ್ತ್ರಾಣಗಳಿಂದಲೂ (ಉಷ್ಣೀಷಗಳಿಂದಲೂ) ಕೂಡಿದ್ದ, ಕೂದಲಿನಿಂದ ವಿಹೀನವಾಗಿದ್ದ (ಬೋಳಾಗಿದ್ದ) ದಸ್ಯುಗಳ ತಲೆಗಳು ರಣಾಂಗಣದ ಸುತ್ತಲೂ ವ್ಯಾಪ್ತವಾಗಿದ್ದು ಪುಕ್ಕಗಳನ್ನು ತರಚಿದ ಪಕ್ಷಿಗಳಿಂದ ವ್ಯಾಪ್ತವಾಗಿರುವಂತೆಯೇ ಕಾಣುತ್ತಿದ್ದಿತು. ರಕ್ತದಿಂದ ತೋಯ್ದುಹೋಗಿದ್ದ, ಸರ್ವಾಂಗಗಳಿಂದ ಕೂಡಿದ್ದ ಕಬಂಧಗಳಿಂದ (ಮುಂಡಗಳಿಂದ) ಆ ರಣಾಂಗಣವು ಕೆಂಪಾದ ಮೇಘಗಳಿಂದ ಆವೃತವಾಗಿರುವ ಆಕಾಶದಂತೆಯೇ ಕಾಣುತ್ತಿದ್ದಿತು. ವಜ್ರಾಯುಧಕ್ಕೂ ಮತ್ತು ಸಿಡಿಲಿಗೂ ಸಮಾನವಾದ ಕಠೋರಸ್ಪರ್ಶವುಳ್ಳ, ಒಳ್ಳೆಯ ಗಿಣ್ಣುಗಳನ್ನು ಹೊಂದಿದ್ದ, ನೇರವಾಗಿ ಹೋಗುವ ಬಾಣಗಳ ಮೂಲಕವಾಗಿ ಸಾತ್ಯಕಿಯಿಂದ ಹತರಾದ ಯವನರು ರಣಾಂಗಣವನ್ನೇ ಆವರಿಸಿಕೊಂಡಿದ್ದರು. ಕವಚಗಳನ್ನು ಧರಿಸಿದ್ದ ಎಲ್ಲ ಯವನರನ್ನೂ ಯುಯುಧಾನನು ಜಯಿಸಿದನು. ಸಂಪೂರ್ಣವಾಗಿ ಭಗ್ನವಾಗಿದ್ದ ಆ ಯವನಸೈನ್ಯದಲ್ಲಿ ಕೆಲವರು ಮಾತ್ರವೇ ಬಹಳ ಕಷ್ಟದಿಂದ ತಮ್ಮ ಪ್ರಾಣಗಳನ್ನು ಉಳಿಸಿಕೊಂಡಿದ್ದರು. ಅನೇಕರು ಮೂರ್ಛಿತರಾಗಿದ್ದರು. ಅಳಿದುಳಿದಿದ್ದ ಅಲ್ಪಸಂಖ್ಯಾತರಾದ ಯೋಧರು ಹಿಮ್ಮಡಿಗಳಿಂದಲೂ ಚಾವಟಿಗಳಿಂದಲೂ ಕುದುರೆಗಳನ್ನು ಪ್ರಹರಿಸುತ್ತಾ ಸಾತ್ಯಕಿಯ ಭಯದಿಂದಾಗಿ ಅತ್ಯಂತವೇಗವನ್ನು ಆಶ್ರಯಿಸಿ ದಿಕ್ಕಾಪಾಲಾಗಿ ಓಡಿಹೋದರು.

ಮಹಾರಾಜ ! ಸತ್ಯವಿಕ್ರಮನಾದ, ಪುರುಷವ್ಯಾಘ್ರನಾದ ಸಾತ್ಯಕಿಯು ಈ ರೀತಿಯಾಗಿ ಅತ್ಯಂತ ದುರ್ಜಯವಾಗಿದ್ದ ಕಾಂಬೋಜ, ಯವನ, ಶಕರ ಮಹಾ-ಮಹಾಸೈನ್ಯಗಳನ್ನೂ ಪಲಾಯನಗೊಳಿಸಿ ನಿನ್ನ ಸೈನ್ಯದೊಳಗೆ ನುಗ್ಗಿ ಅದನ್ನೂ ಸಹ ಜಯಿಸಿ ಮುಂದೆ ಹೋಗುವಂತೆ ಸೂತನನ್ನು ಪ್ರಚೋದಿಸಿದನು. ಹಿಂದೆ ಯಾರೂ ಮಾಡದೇ ಇದ್ದ, ಈಗ ಸಮರಾಂಗಣದಲ್ಲಿ ಸಾತ್ಯಕಿಯು ತೋರಿದ ಸಾಹಸಕರ್ಮವನ್ನು ನೋಡಿ ಗಂಧರ್ವಸಹಿತರಾದ ಚಾರಣರು ಸಾತ್ಯಕಿಯನ್ನು ಬಹಳವಾಗಿ ಪ್ರಶಂಸಿಸಿ ದರು. ಅರ್ಜುನನ ಪೃಷ್ಠರಕ್ಷಕನಾದ ಸಾತ್ಯಕಿಯು ಅರ್ಜುನನು ಇರುವ

ಸ್ಥಳಕ್ಕೆ ಹೋಗುತ್ತಿರುವುದನ್ನು ಕಂಡು ಚಾರಣರು ಪರಮಹೃಷ್ಟರಾದರು. ನಿನ್ನ ಕಡೆಯ ಯೋಧರೂ ಸಹ ಸಾತ್ಯಕಿಯನ್ನು ಬಹಳವಾಗಿ ಶ್ಲಾಘಿಸಿದರು."

೧೧೯ನೆಯ ಅಧ್ಯಾಯವು ಮುಗಿಯಿತು.

೧೨೦ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ದುರ್ಯೋಧನನ ಸೈನ್ಯವನ್ನು ಸಂಹರಿಸಿದುದು: ಅನುಜರೊಡನೆ ದುರ್ಯೋಧನನ ಪಲಾಯನ

ಸಂಜಯನು ಸಾತ್ಯಕಿಯ ಪರಾಕ್ರಮವನ್ನೇ ಮುಂದುವರಿಸಿ ಹೇಳುತ್ತಾನೆ:

"ಮಹಾರಾಜ! ರಥಿಗಳಲ್ಲಿ ಶ್ರೇಷ್ಠನಾದ ಯುಯುಧಾನನು ಯವನ ಕಾಂಬೋಜರನ್ನು ಗೆದ್ದು ನಿನ್ನ ಸೈನ್ಯವ್ಯೂಹದ ಮಧ್ಯದಲ್ಲಿದ್ದ ಮಾರ್ಗದಿಂದಲೇ ಅರ್ಜುನನಿರುವೆಡೆಗೆ ಹೊರಟನು.

ಸುಂದರವಾದ ಹಲ್ಲುಗಳನ್ನು ಹೊಂದಿದ್ದ, ನರವ್ಯಾಘ್ರನಾದ, ವಿಚಿತ್ರವಾದ ಕವಚವನ್ನೂ ಮತ್ತು ಧ್ವಜವನ್ನೂ ಹೊಂದಿದ್ದ ಸಾತ್ಯಕಿಯು ವ್ಯಾಘ್ರವು ಮೃಗದ ವಾಸನೆಯನ್ನೇ ಹಿಡಿದು ಹೋಗುತ್ತಿರುವಂತೆ ನಿನ್ನ ಸೈನ್ಯಗಳಿರುವೆಡೆಗೇ ಹೋಗುತ್ತಾ ಅವರನ್ನು ಭಯಪಡಿಸುತ್ತಿದ್ದನು. ಯುಯುಧಾನನು ತನ್ನ ರಥದ ಮೂಲಕವಾಗಿ ವಿಭಿನ್ನವಾದ ಮಾರ್ಗದಲ್ಲಿ ಸಂಚರಿಸುತ್ತಾ ಸುವರ್ಣಮಯವಾದ ಬೆನ್ನಿನ ಭಾಗವಿದ್ದ, ಮಹಾವೇಗಯುಕ್ತವಾಗಿದ್ದ, ಸುವರ್ಣಮಯವಾದ ಚಂದ್ರನ ಚಿಹ್ನೆಗಳನ್ನು ಹೊಂದಿದ್ದ ಧನುಸ್ಸನ್ನು ಬಹಳ ಜೋರಾಗಿ ತಿರುಗಿಸುತ್ತಿದ್ದನು. ಸುವರ್ಣಮಯವಾದ ಭುಜಕೀರ್ತಿಯನ್ನು ಧರಿಸಿದ್ದ, ಸುವರ್ಣಮಯವಾದ ಕಿರೀಟವನ್ನು ಧರಿಸಿದ್ದ, ಸುವರ್ಣಮಯವಾದ ಕವಚದಿಂದ ಸಂವೃತನಾಗಿದ್ದ, ಸುವರ್ಣಮಯವಾದ ಧನುಸ್ಸನ್ನೂ ಮತ್ತು ಧ್ವಜವನ್ನೂ ಹೊಂದಿದ್ದ, ಶೂರನಾದ ಸಾತ್ಯಕಿಯು ಮೇರುಶೃಂಗದಂತೆಯೇ ಪ್ರಕಾಶಿಸುತ್ತಿದ್ದನು. ಯುದ್ಧದಲ್ಲಿ ಯಾವಾಗಲೂ ಮಂಡಲಾಕಾರವಾಗಿರುತ್ತಿದ್ದ ಧನುಸ್ಸನ್ನೇ ಮಂಡಲರೂಪವಾಗಿ ಹೊಂದಿದ್ದ, ಸೂರ್ಯನ ರಶ್ಮಿಗೆ ಸಮಾನವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಆ ಮಾನವಸೂರ್ಯನು

ಶರತ್ಕಾಲದಲ್ಲಿ ನಿರಭ್ರವಾದ ಆಕಾಶದಲ್ಲಿ ಹುಟ್ಟಿದ ಸೂರ್ಯನಂತೆಯೇ ಪ್ರಕಾಶಿಸಿದನು. ಎತ್ತಿನ ಹೆಗಲಿನಂತೆ ಹೆಗಲುಗಳನ್ನು ಹೊಂದಿದ್ದ, ಮಹಾ ಪರಾಕ್ರಮಿಯಾದ, ಎತ್ತಿನ ಕಣ್ಣುಗಳಂತೆ ಕಣ್ಣುಗಳುಳ್ಳ, ನರರ್ಷಭನಾದ, ವೀರನಾದ ಸಾತ್ಯಕಿಯು ನಿನ್ನ ಸೈನ್ಯದ ಮಧ್ಯದಲ್ಲಿ–ಹಸುಗಳ ಮಧ್ಯದಲ್ಲಿರುವ ಹೋರಿಯಂತೆಯೇ ಪ್ರಕಾಶಿಸಿದನು. ಮದಿಸಿದ ಆನೆಗೆ ಸಮಾನನಾಗಿದ್ದ, ಮದಿಸಿದ ಆನೆಯಂತೆ ನಡಿಗೆಯುಳ್ಳ, ಮದೋದಕವನ್ನು ಸುರಿಸುತ್ತಿರುವ ಸಲಗನಂತೆಯೇ ಕಾಣುತ್ತಿದ್ದ, ಕೌರವಸೈನ್ಯದ ಮಧ್ಯಭಾಗದಲ್ಲಿದ್ದ ಸಾತ್ಯಕಿಯನ್ನು ನಿನ್ನ ಕಡೆಯ ಯೋಧರು ಸಂಹರಿಸಲು ಇಚ್ಛಿಸಿದವರಾಗಿ ಹಸಿದ ವ್ಯಾಘ್ರಗಳೋಪಾದಿಯಲ್ಲಿ ಸಾತ್ಯಕಿಯ ಮೇಲೆ ಬಿದ್ದರು. ದ್ರೋಣರ ಮಹಾಸೈನ್ಯವನ್ನೂ, ದುಸ್ತರವಾದ ಹಾರ್ದಿಕ್ಯನ ವಾಹಿನಿಯನ್ನೂ ಅತಿಕ್ರಮಿಸಿ ಬಂದಿದ್ದ, ಜಲಸಂಧಸಮುದ್ರವನ್ನೂ ದಾಟಿ, ಕಾಂಬೋಜರ ಸೈನ್ಯಸಮೂಹ ವನ್ನೆದುರಿಸಿ, ಕಾಂಬೋಜ-ಯವನರನ್ನೂ ಪರಾಜಯಗೊಳಿಸಿ, ಹಾರ್ದಿಕ್ಯ ನೆಂಬ ಮೊಸಳೆಯಿಂದಲೂ ಮುಕ್ತನಾಗಿ, ಅದ್ಭುತವಾದ ಸೈನ್ಯಸಾಗರವನ್ನೇ ದಾಟಿ ಮುಂದೆ ಬಂದ ಸಾತ್ಯಕಿಯನ್ನು ಕ್ರುದ್ಧರಾದ ನಿನ್ನ ಕಡೆಯ ಮಹಾರಥರು ನಾಲ್ಕು ಕಡೆಗಳಿಂದಲೂ ಸುತ್ತುಗಟ್ಟಿದರು. ದುರ್ಯೋಧನ, ಚಿತ್ರಸೇನ, ದುಃಶಾಸನ, ವಿವಿಂಶತಿ, ಶಕುನಿ, ದುಃಸಹ, ಯುವಕನಾದ ದುರ್ಧರ್ಷಣ, ಕ್ರಥ–ಇವರುಗಳೂ ಮತ್ತು ದುರಾಸದರಾದ, ಶಸ್ತ್ರಧಾರಿಗಳಾದ, ಅಸಹನ ಶೀಲರಾದ, ಶೂರರಾದ ಇನ್ನೂ ಅನೇಕ ಕೌರವಯೋಧರೂ ಅರ್ಜುನನ ಬಳಿಗೆ ಹೋಗುತ್ತಿದ್ದ ಸಾತ್ಯಕಿಯನ್ನು ಹಿಂಬಾಲಿಸಿದರು. ಪರ್ವಸಮಯದಲ್ಲಿ (ಹುಣ್ಣಿಮೆಯಂದು) ಗಾಳಿಯ ಬಡಿತದಿಂದ ವೇಗವಾಗಿ ಉಕ್ಕಿಬರುವ ಸಮುದ್ರದ ಭೋರ್ಗರೆಯುವ ಶಬ್ದದಂತೆ ನಿನ್ನ ಸೈನ್ಯದಲ್ಲಿ ಭಯಂಕರವಾದ ಗರ್ಜನ-ತರ್ಜನಶಬ್ದಗಳಾಗತೊಡಗಿದುವು. ತನ್ನನ್ನು ಆಕ್ರಮಿಸಲು ಹಿಂದುಗಡೆಯಲ್ಲಿ ವೇಗವಾಗಿ ಬರುತ್ತಿದ್ದ ಕೌರವಯೋಧರನ್ನು ನೋಡಿ ಶಿನಿಪುಂಗವನಾದ ಸಾತ್ಯಕಿಯು ಗಹಗಹಿಸಿ ನಗುತ್ತಾ ಸಾರಥಿಯನ್ನು ಕುರಿತು ಹೇಳಿದನು: "ಸೂತ! ನಿಧಾನವಾಗಿಯೇ ಹೋಗು. ಗಜಾಶ್ವ- ರಥ-ಪದಾತಿಗಳಿಂದ ಸಮಾಕುಲವಾಗಿರುವ, ಯುದ್ಧಕ್ಕೆ ಸಜ್ಜಾಗಿ ಹೊರಟಿರುವ, ರಥಚಕ್ರಗಳ ಗಡ-ಗಡಾ ಶಬ್ದದಿಂದ ಎಲ್ಲ ದಿಕ್ಕುಗಳಲ್ಲಿಯೂ ಪ್ರತಿಧ್ವನಿ ಯನ್ನುಂಟುಮಾಡುತ್ತಿರುವ, ಪೃಥಿವಿಯನ್ನೂ, ಅಂತರಿಕ್ಷವನ್ನೂ ಮತ್ತು

ಸಾಗರಗಳನ್ನೂ ಭಯಂಕರಶಬ್ದದಿಂದ ಕಂಪನಗೊಳಿಸುತ್ತಿರುವ ಈ ಮಹಾಸೈನ್ಯವು ನನ್ನನ್ನೇ ಎದುರಿಸುವ ಸಲುವಾಗಿ ಬಹಳ ಶೀಘ್ರಗತಿಯಿಂದ ಇತ್ತ ಕಡೆಗೇ ಬರುತ್ತಿದೆ. ಹುಣ್ಣಿಮೆಯ ದಿನ ಉಕ್ಕಿಬರುವ ಸಮುದ್ರವನ್ನು ತೀರಪ್ರದೇಶವು ತಡೆದು ನಿಲ್ಲಿಸುವಂತೆ–ನಾನೂ ಸಹ ಈ ಸೇನಾಸಮುದ್ರವನ್ನು ತಡೆದು ನಿಲ್ಲಿಸುತ್ತೇನೆ. ಸೂತ! ಈಗ ನಡೆಯಲಿರುವ ಮಹಾಯುದ್ಧದಲ್ಲಿ ಇಂದ್ರನ ಪರಾಕ್ರಮಕ್ಕೆ ಅನುರೂಪವಾಗಿರುವ ನನ್ನ ಪರಾಕ್ರಮವನ್ನು ನೋಡು. ಶತ್ರುಗಳ ಈ ಸೈನ್ಯವನ್ನು ನಿಶಿತವಾದ ಬಾಣಗಳಿಂದ ಧ್ವಂಸಮಾಡುತ್ತೇನೆ. ಅಗ್ನಿಸದೃಶವಾದ ನನ್ನ ಬಾಣಗಳಿಂದ ಪ್ರಹೃತವಾದ ಶರೀರಗಳಿಂದ ಕೂಡಿ ಅಸುನೀಗಿ ಕೆಳಕ್ಕೆ ಬೀಳುವ ಸಾವಿರಾರು ಗಜಾಶ್ವ-ರಥ-ಪದಾತಿಸೈನಿಕರನ್ನು ನೋಡು."

ಮಹಾರಾಜ! ಇವೇ ಮುಂತಾಗಿ ಸೂತನೊಡನೆ ಹೇಳುತ್ತಿದ್ದ ಅಮಿತೌಜಸ್ಕನಾದ ಸಾತ್ಯಕಿಯ ಸಮೀಪಕ್ಕೆ ಯುದ್ಧೇಚ್ಛುಗಳಾದ ನಿನ್ನ ಸೈನಿಕರು ತ್ವರೆಯಿಂದ ಬಂದರು. ಆ ಸೈನಿಕರೆಲ್ಲರೂ ರಣೋತ್ಸಾಹದಿಂದ ಕೂಡಿದವರಾಗಿ– "ಹೊಡಿ! ಓಡು! ನಿಲ್ಲು! ನೋಡು-ನೋಡು!"–ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು.

ಹೀಗೆಲ್ಲಾ ಕೂಗಿಕೊಳ್ಳುತ್ತಿದ್ದ ವೀರರಾದ ಮೂರು ನೂರು ಅಶ್ವ ಸೈನಿಕರನ್ನೂ, ನಾಲ್ಕು ನೂರು ಗಜಸೈನಿಕರನ್ನೂ ಸಾತ್ಯಕಿಯು ನಿಶಿತವಾದ ಬಾಣಗಳಿಂದ ಸಂಹರಿಸಿದನು. ಸಾತ್ಯಕಿಗೂ ಮತ್ತು ನಿನ್ನ ಕಡೆಯ ಧನುಷ್ಮಂತರಿಗೂ ಜನಕ್ಷಯಕರವಾದ, ಭಯಂಕರವಾದ ಯುದ್ಧವು–ದೇವಾಸುರರಿಗೆ ನಡೆದ ಯುದ್ಧದಂತೆಯೇ ನಡೆಯಿತು. ಶಿನಿಯ ಮೊಮ್ಮಗನಾದ ಸಾತ್ಯಕಿಯು ಮೇಘಗಳ ಸಮೂಹಕ್ಕೆ ಸಮಾನವಾಗಿದ್ದ ನಿನ್ನ ಮಗನ ಸೈನ್ಯವನ್ನು ಸರ್ಪೋಪಮವಾಗಿದ್ದ ಬಾಣಗಳಿಂದ ಎದುರಿಸಿದನು. ವೀರ್ಯವಂತನಾದ ಸಾತ್ಯಕಿಯು ಏಕಾಕಿಯಾಗಿಯೇ ಯುದ್ಧಮಾಡುತ್ತಿದ್ದರೂ ಸ್ವಲ್ಪವಾದರೂ ಭ್ರಾಂತನಾಗದೇ ಬಾಣಗಳ ಸಮೂಹಗಳಿಂದ ನಿನ್ನ ಸೈನ್ಯವನ್ನು ಮುಚ್ಚುತ್ತಾ ನಿನ್ನ ಕಡೆಯ ಅನೇಕಸೈನಿಕರನ್ನು ಸಂಹರಿಸಿದನು. ರಾಜೇಂದ್ರ! ಸಾತ್ಯಕಿಯು ನಮ್ಮೊಡನೆ ಯುದ್ಧಮಾಡುತ್ತಿದ್ದ ಆ ಸಮಯದಲ್ಲಿ ನಾನು ಅತ್ಯಾಶ್ಚರ್ಯಕರವಾದ ಘಟನೆಯನ್ನು ನೋಡಿದೆನು. ಸಾತ್ಯಕಿಯು ಬಿಡುತ್ತಿದ್ದ

ಒಂದೇ ಒಂದು ಬಾಣವೂ ಸಹ ವ್ಯರ್ಥವಾಗುತ್ತಿರಲಿಲ್ಲ. ರಥ-ನಾಗಾಶ್ವಸೈನ್ಯಗಳಿಂದ ಸಮೃದ್ಧವಾದ, ಪದಾತಿಗಳೆಂಬ ಅಲೆಗಳಿಂದ ವ್ಯಾಪ್ತವಾದ ಕೌರವಸೈನ್ಯವೆಂಬ ಮಹಾಸಮುದ್ರವು ಶೈನೇಯನೆಂಬ ತೀರಪ್ರದೇಶಕ್ಕೆ ಬರುತ್ತಲೇ ಸ್ತಬ್ಧವಾಗಿ ನಿಂತುಬಿಡುತ್ತಿದ್ದಿತು. ಸಾತ್ಯಕಿಯ ಬಾಣಗಳಿಂದ ಬಾರಿ-ಬಾರಿಗೂ ಪ್ರಹರಿಸಲ್ಪಡುತ್ತಿದ್ದ ನರ-ನಾಗಾಶ್ವಸೈನ್ಯಗಳು ಗಾಬರಿಗೊಂಡು ರಣಾಂಗಣದ ಸುತ್ತಲೂ ಸುತ್ತುತ್ತಿದ್ದುವು. ಶೀತವ್ಯಾಧಿಯಿಂದ ಪೀಡಿತವಾದ ಹಸುಗಳಂತೆ-ನಮ್ಮ ಎಲ್ಲ ಸೈನ್ಯಗಳೂ ಅಲ್ಲಲ್ಲಿಯೇ ಸುತ್ತುತ್ತಿದ್ದುವು. ಯುಯುಧಾನನ ಬಾಣಗಳಿಂದ ಗಾಯಗೊಳ್ಳದಿದ್ದ ಒಬ್ಬನೇ ಒಬ್ಬ ಪದಾತಿಯನ್ನಾಗಲೀ, ಒಬ್ಬನೇ ಒಬ್ಬ ರಥಿಯನ್ನಾಗಲೀ, ಒಂದೇ ಒಂದು ಆನೆಯನ್ನಾಗಲೀ, ಒಬ್ಬನೇ ಒಬ್ಬ ಕುದುರೆಸವಾರನನ್ನಾಗಲೀ, ಒಂದೇ ಒಂದು ಕುದುರೆಯನ್ನಾಗಲೀ ನಾನು ನೋಡಲಿಲ್ಲ. ಯಾವ ರೀತಿಯಲ್ಲಿ ಸಾತ್ಯಕಿಯು ನಮ್ಮ ಸೈನ್ಯಗಳನ್ನು ಸಂಹರಿಸಿದನೋ ಹಾಗೆ ಅರ್ಜುನನೂ ನಮ್ಮ ಸೈನಿಕರನ್ನು ಸಂಹಾರಮಾಡಲಿಲ್ಲ. ಶಿನಿಯ ಪೌತ್ರನಾದ ಪುರುಷಶ್ರೇಷ್ಠನಾದ ಸಾತ್ಯಕಿಯು ಭಯರಹಿತನಾಗಿ, ಹಸ್ತಲಾಘವದಿಂದ ಕೂಡಿದವನಾಗಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸುತ್ತಾ ಅರ್ಜುನನನ್ನೂ ಮೀರಿಸಿ ಯುದ್ಧಮಾಡುತ್ತಿದ್ದನು. ಅನಂತರ ಅವನ ಉಪಟಳವನ್ನು ಸಹಿಸಲಾರದೇ ಅಸಹನೆಯಿಂದ ಕೂಡಿದ್ದ ದುರ್ಯೋಧನನು ಮೂರು ಬಾಣಗಳಿಂದ ಸಾತ್ವತನ ಸೂತನನ್ನೂ, ನಿಶಿತವಾದ ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನೂ, ಮೂರು ಬಾಣಗಳಿಂದ ಸಾತ್ಯಕಿಯನ್ನೂ ಪ್ರಹರಿಸಿ, ಪುನಃ ಎಂಟು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದನು. ದುಃಶಾಸನನು ಹದಿನಾರು ಬಾಣಗಳಿಂದಲೂ, ಶಕುನಿಯು ಇಪ್ಪತ್ತೈದು ಬಾಣಗಳಿಂದಲೂ, ಚಿತ್ರಸೇನನು ಐದು ಬಾಣಗಳಿಂದಲೂ ಶಿನಿಪುಂಗವನನ್ನು ಪ್ರಹರಿಸಿದರು. ದುಃಸಹನು ಹದಿನೈದು ಬಾಣಗಳಿಂದ ಸಾತ್ಯಕಿಯ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಈ ರೀತಿಯಲ್ಲಿ ಕುರುಪುಂಗವರಿಂದ ಪ್ರಹೃತನಾದ ವೃಷ್ಣಿಸಿಂಹನು ನಸುನಗುತ್ತಾ ಆ ಎಲ್ಲ ಮಹಾರಥರನ್ನೂ ಮೂರು ಮೂರು ಬಾಣಗಳಿಂದ ಪ್ರಹರಿಸಿದನು. ಲಘು ವಿಕ್ರಮನಾದ ಶೈನೇಯನು ಬಹಳ ಹರಿತವಾಗಿದ್ದ ಬಾಣಗಳಿಂದ ಶತ್ರುಗಳನ್ನು ಗಾಢವಾಗಿ ಪ್ರಹರಿಸಿ ಗಿಡಗದಹಕ್ಕಿಯೋಪಾದಿಯಲ್ಲಿ ಸಂಚರಿಸುತ್ತಿದ್ದನು.

ಶಕುನಿಯ ಧನುಸ್ಸನ್ನೂ ಮತ್ತು ಕೈಚೀಲವನ್ನೂ ಕತ್ತರಿಸಿ, ದುರ್ಯೋಧನನನ್ನು ಮೂರು ಬಾಣಗಳಿಂದ ಅವನ ವಕ್ಷಃಸ್ಥಳದಲ್ಲಿ ಪ್ರಹರಿಸಿದನು. ಚಿತ್ರಸೇನನನ್ನು ನೂರು ಬಾಣಗಳಿಂದಲೂ, ದುಃಸಹನನ್ನು ಮೂರು ಬಾಣಗಳಿಂದಲೂ, ದುಃಶಾಸನನನ್ನು ಮೂವತ್ತು ಬಾಣಗಳಿಂದಲೂ ಶಿನಿಪುಂಗವನು ಪ್ರಹರಿಸಿದನು. ಮಹಾರಾಜ! ನಿನ್ನ ಭಾವಮೈದುನನು ಪುನಃ ಮತ್ತೊಂದು ಧನುಸ್ಸನ್ನು ಕೈಗೆತ್ತಿಕೊಂಡು ಸಾತ್ಯಕಿಯನ್ನು ಎಂಟು ಬಾಣಗಳಿಂದ ಪ್ರಹರಿಸಿ, ಪುನಃ ಐದು ಬಾಣಗಳಿಂದ ಪ್ರಹರಿಸಿದನು. ಅನಂತರ ದುಃಶಾಸನನು ಹತ್ತು ಬಾಣಗಳಿಂದಲೂ ದುಃಸಹನು ಮೂರು ಬಾಣಗಳಿಂದಲೂ ಸಾತ್ಯಕಿಯನ್ನು ಪ್ರಹರಿಸಿದರು. ದುರ್ಮುಖನು ಹನ್ನೆರಡು ಬಾಣಗಳಿಂದ ಸಾತ್ಯಕಿಯನ್ನು ಪ್ರಹರಿಸಿದನು. ದುರ್ಯೋಧನನು ಎಪ್ಪತ್ತು ಮೂರು ಬಾಣಗಳಿಂದ ಶಿನಿಪುಂಗವನನ್ನು ಪ್ರಹರಿಸಿ, ಅನಂತರ ಅವನ ಸಾರಥಿಯನ್ನು ನಿಶಿತವಾದ ಮೂರು ಬಾಣಗಳಿಂದ ಪ್ರಹರಿಸಿದನು. ಸಂಘಟಿತರಾಗಿ ಸಾತ್ಯಕಿಯನ್ನು ಜಯಿಸಲು ಪ್ರಯತ್ನಿಸುತ್ತಿದ್ದ ಆ ಎಲ್ಲ ಮಹಾರಥರನ್ನೂ ಸಾತ್ಯಕಿಯು ಐದೈದು ಬಾಣಗಳಿಂದ ಪ್ರಹರಿಸಿದನು. ಅನಂತರ ರಥಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯು ನಿನ್ನ ಮಗನ ಸಾರಥಿಯನ್ನು ಭಲ್ಲದಿಂದ ಪ್ರಹರಿಸಿದನು. ಒಡನೆಯೇ ದುರ್ಯೋಧನನ ಸಾರಥಿಯು ಹತನಾಗಿ ರಥದಿಂದ ಕೆಳಕ್ಕೆ ಬಿದ್ದನು. ಸಾರಥಿಯು ಹತನಾಗಿ ಕೆಳಕ್ಕೆ ಬಿದ್ದೊಡನೆಯೇ ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿದ್ದ ಕುದುರೆಗಳು ದುರ್ಯೋಧನನ ರಥವನ್ನೆಳೆದುಕೊಂಡು ರಣಾಂಗಣದಿಂದ ಹೊರಟುಹೋದುವು. ಅನಂತರ ನಿನ್ನ ಮಕ್ಕಳೂ ಮತ್ತು ಸೈನಿಕರೂ ರಾಜನ ರಥವೇ ಓಡಿಹೋಗುತ್ತಿರುವುದನ್ನು ಕಂಡು ನೂರಾರು ಭಾಗಗಳಾಗಿ ಒಡೆದು ಓಡಿಹೋದರು. (ಸಂಘಟಿತರಾಗಿ ಬಂದಿದ್ದವರು ಛಿದ್ರ-ವಿಚ್ಛಿದ್ರರಾಗಿ ಪಲಾಯನಮಾಡಿದರು.) ಓಡಿಹೋಗುತ್ತಿದ್ದ ಕೌರವಸೈನ್ಯವನ್ನು ನೋಡಿ ಸಾತ್ಯಕಿಯು ಚಿನ್ನದ ಮೂಲಪ್ರದೇಶವನ್ನು ಹೊಂದಿದ್ದ, ಮಸೆಗಲ್ಲಿನಿಂದ ನಿಶಿತವಾಗಿ ಮಾಡಲ್ಪಟ್ಟಿದ್ದ ತೀಕ್ಷ್ಣವಾದ ಬಾಣಗಳಿಂದ ನಿನ್ನ ಸೈನ್ಯವನ್ನು ಮುಚ್ಚಿಬಿಟ್ಟನು. ಈ ರೀತಿಯಲ್ಲಿ ನಿನ್ನ ಸಾವಿರಾರು ಸೈನಿಕರನ್ನೂ ಪಲಾಯಿತರನ್ನಾಗಿ ಮಾಡಿ ಸಾತ್ಯಕಿಯು ಶ್ವೇತಾಶ್ವನ ರಥದ ಬಳಿಗೆ ಹೊರಟನು. ಸಾತ್ಯಕಿಯು ಬಾಣಗಳನ್ನು ತೆಗೆದುಕೊಳ್ಳುತ್ತಿದ್ದುದನ್ನೂ, ಸಾರಥಿ

ಯನ್ನು ರಕ್ಷಿಸುತ್ತಿದ್ದುದನ್ನೂ ಮತ್ತು ತನ್ನನ್ನೂ ರಕ್ಷಿಸಿಕೊಳ್ಳುತ್ತಿದ್ದುದನ್ನೂ ನೋಡಿ ನಿನ್ನವರೂ ಸಹ ಅವನನ್ನು ಬಹಳವಾಗಿ ಶ್ಲಾಘಿಸಿದರು."

೧೨೦ನೆಯ ಅಧ್ಯಾಯವು ಮುಗಿಯಿತು.

೧೨೧ನೆಯ ಅಧ್ಯಾಯ ಜಯದ್ರಥವಧಪರ್ವ (ಮುಂದುವರಿದಿದೆ.)

## ಸಾತ್ಯಕಿಯು ಪಾಷಾಣಯೋಧಿಗಳಾದ ಮ್ಲೇಚ್ಛರನ್ನು ಸಂಹರಿಸಿದುದು: ದುಃಶಾಸನನು ಸೇನಾಸಹಿತನಾಗಿ ದ್ರೋಣರ ಬಳಿಗೆ ಓಡಿಹೋದುದು

ಶೈನೇಯನಿಂದ ತನ್ನ ಮಕ್ಕಳು ಹೊಂದಿದ ಪರಾಭವವನ್ನು ಕೇಳಿ ಮನನೊಂದ ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ:

"ಸಂಜಯ ! ಶೈನೇಯನು ನಮ್ಮ ವಿಶಾಲಸೈನ್ಯವನ್ನು ಭಗ್ನಗೊಳಿಸಿ ಅರ್ಜುನನ ಸಮೀಪಕ್ಕೆ ಹೊರಟನಂತರ ನಿರ್ಲಜ್ಜರಾದ ನನ್ನ ಮಕ್ಕಳೇನು ಮಾಡಿದರು? ಅರ್ಜುನನಿಗೆ ಯಾವ ಪರಾಕ್ರಮವಿರುವುದೋ ಅದೇ ವಿಧವಾದ ಪರಾಕ್ರಮದಿಂದ ಯುದ್ಧಮಾಡಿದ ಸಾತ್ಯಕಿಯನ್ನು ನೋಡಿ ಯುದ್ಧದಲ್ಲಿ ಪ್ರಾಣತೊರೆಯಲೂ ಸಿದ್ಧರಾಗಿದ್ದ ನಮ್ಮ ಕಡೆಯ ಯೋಧರ ಧೈರ್ಯವು ಹೇಗಿದ್ದಿತು? ಅಸಂಖ್ಯಾತವಾದ ಸೈನ್ಯದ ಮಧ್ಯದಲ್ಲಿದ್ದ ಮಹಾರಥರು ಏಕಾಕಿಯಾದ ಸಾತ್ಯಕಿಯಿಂದ ಪರಾಜಯಹೊಂದಿದನಂತರ ಕ್ಷಾತ್ರಧರ್ಮದ ವಿಷಯವಾಗಿ ಈಗ ಅವರೇನು ಮಾತನಾಡುತ್ತಾರೆ? ಮಹಾಯಶೋವಂತನಾದ ಸಾತ್ಯಕಿಯು ಯುದ್ಧದಲ್ಲಿ ಸಾಗರೋಪಮವಾದ ನನ್ನ ಸೈನ್ಯವನ್ನು ಅತಿಕ್ರಮಿಸಿ ಹೇಗೆ ಹೋದನು? ಸಂಜಯ! ಯುದ್ಧಸ್ಥಳದಲ್ಲಿದ್ದ ನನ್ನ ಮಕ್ಕಳಿನ್ನೂ ಅಲ್ಲಿಯೇ ಜೀವಂತರಾಗಿರುವಾಗಲೇ ಶೈನೇಯನು ಹೊರಟುಹೋದುದು ಹೇಗೆ?–ಈ ವಿಷಯವನ್ನು ನನಗೆ ವಿವರಿಸಿ ಹೇಳು. ಸಂಜಯ! ಅತ್ಯದ್ಭುತವಾದ ಈ ವಿಷಯವನ್ನು ನಾನು ನಿನ್ನಿಂದ ಕೇಳುತ್ತಿದ್ದೇನೆ. ಅಪಾರಸೈನ್ಯದೊಡನೆ ಕೂಡಿದ ಮಹಾರಥರು ಒಬ್ಬನೇ ಒಬ್ಬ ವೀರನೊಡನೆ ಯುದ್ಧಮಾಡಿದರೆಂಬುದು ನಿಜವಾಗಿಯೂ ಅದ್ಭುತವಾದ ವಿಷಯವೇ ಆಗಿದೆ. ಇದಕ್ಕಿಂತಲೂ ಅದ್ಭುತವಾದ ವಿಷಯವೆಂದರೆ ಆ ಒಬ್ಬ ವೀರ ನಿಂದಲೇ ಮಹಾರಥರೆಲ್ಲರೂ ಪರಾಜಿತರಾದುದು ಮಂದಭಾಗ್ಯನಾದ ನನ್ನ

ಮಗನ ವಿಷಯದಲ್ಲಿ ಎಲ್ಲವೂ ವಿಪರೀತವಾಗಿಯೇ ಪರಿಣಮಿಸುತ್ತಿದೆ. ಹೇಗೆಂದರೆ: ಏಕಾಕಿಯಾದ ಸಾತ್ವತನಿಂದ ಯುದ್ಧದಲ್ಲಿ ಅನೇಕಮಹಾರಥರೂ ಹತರಾಗಿ ಹೋದರು.

**ಏಕಸ್ಯ ಹಿ ನ ಪರ್ಯಾಪ್ತಂ ಯತ್ಸೈನ್ಯಂ ತಸ್ಯ ಸಂಜಯ ।**
**ಕ್ರುದ್ಧಸ್ಯ ಯುಯುಧಾನಸ್ಯ ಸರ್ವೇ ತಿಷ್ಠನ್ತು ಪಾಣ್ಡವಾಃ ॥೭॥**

ಸಂಜಯ! ಎಲ್ಲ ಪಾಂಡವರೂ ಒತ್ತಟ್ಟಿಗಿರಲಿ. ಒಬ್ಬನೇ ಒಬ್ಬ ಕ್ರುದ್ಧನಾದ ಯುಯುಧಾನನ ಪರಾಕ್ರಮಕ್ಕೆ ಮಹಾರಥರಿಂದ ಕೂಡಿದ ನನ್ನ ಅಪಾರಸೈನ್ಯವೂ ಸಾಟಿಯಾಗಲಿಲ್ಲ.

ಚಿತ್ರಯೋಧಿಗಳಾದ, ಯುದ್ಧಪಂಡಿತರಾದ ದ್ರೋಣರನ್ನು ಯುದ್ಧದಲ್ಲಿ ಪರಾಜಯಗೊಳಿಸಿದ ಸಾತ್ಯಕಿಯು–ಸಿಂಹವು ಪಶುಗಳ ಸಮೂಹವನ್ನು ಮರ್ದನಮಾಡುವಂತೆ–ನನ್ನ ಎಲ್ಲ ಮಕ್ಕಳನ್ನೂ ಮರ್ದನಮಾಡಬಲ್ಲನು. ಕೃತವರ್ಮನೇ ಮೊದಲಾದ ಅನೇಕಶೂರರು ಅನೇಕಪ್ರಕಾರಗಳಿಂದ ಪ್ರಯತ್ನಿಸಿದರೂ ಪುರುಷರ್ಷಭನಾದ ಸಾತ್ಯಕಿಯೊಬ್ಬನನ್ನು ಸಂಹರಿಸಲಾಗಲಿಲ್ಲ. ಸಂಜಯ! ನೀನು ಹೇಳುವುದನ್ನು ನೋಡಿದರೆ ಮಹಾಯಶೋವಂತನಾದ, ಶಿನಿಯ ಪೌತ್ರನಾದ ಯುಯುಧಾನನು ಯುದ್ಧಮಾಡಿದ ರೀತಿಯಲ್ಲಿ ಫಾಲ್ಗುನನೂ ಸಹ ಯುದ್ಧಮಾಡಲಿಲ್ಲ."

"ಮಹಾರಾಜ! ನಿಜ. ನೀನು ಹೇಳಿದಂತೆ ಎಲ್ಲವೂ ಪರಮಾದ್ಭುತವೇ ಆಗಿದೆ. ಇದಕ್ಕೆ ಮುಖ್ಯಕಾರಣ: ನಿನ್ನ ದುರ್ಮಂತ್ರಿತ್ವ. (ಕೆಟ್ಟ ಸಲಹೆಯನ್ನು ಕೊಟ್ಟುದು ಅಥವಾ ಕೆಟ್ಟ ಸಲಹೆಗೆ ಒಪ್ಪಿದುದು.) ಎರಡನೆಯದಾಗಿ ದುರ್ಯೋಧನನು ಧರ್ಮಾತ್ಮರ ವಿಷಯದಲ್ಲಿ ಮಾಡಿದ ಅಕೃತ್ಯ. ಈ ಎರಡು ಕಾರಣಗಳಿಂದ ನಿನ್ನ ಪಕ್ಷದಲ್ಲಿ ಈ ವಿಧವಾದ ವೈಪರೀತ್ಯಗಳೇ ನಡೆಯುತ್ತಿವೆ. ಕುರುಪುಂಗವ! ನಾನು ಇನ್ನೂ ಅನೇಕವಿಷಯಗಳನ್ನು ಹೇಳುತ್ತೇನೆ. ಸಾವಧಾನವಾದ ಮನಸ್ಸಿನಿಂದ ಕೇಳು.

ನಿನ್ನ ಮಗನ ಆಜ್ಞೆಯಂತೆ ನಿನ್ನ ಕಡೆಯ ಸೈನಿಕರು ರಹಸ್ಯದಲ್ಲಿ ಸಂಶಪ್ತಕಪ್ರತಿಜ್ಞೆಗಳನ್ನು ಮಾಡಿ ಹಿಮ್ಮೆಟ್ಟದ ಯುದ್ಧವನ್ನೇ ಮಾಡಬೇಕೆಂದು ಮನಸ್ಸಿನಲ್ಲಿ ಕಠೋರವಾದ ನಿಶ್ಚಯಮಾಡಿ ಪುನಃ ಯುದ್ಧಕ್ಕೆ ಹಿಂದಿರುಗಿದರು. ಮೂರು ಸಾವಿರ ಕುದುರೆಸವಾರರೂ, ಮೂರು ಸಾವಿರ ಗಜಸೈನಿಕರೂ

ದುರ್ಯೋಧನನನ್ನೇ ಮುಂದೆಮಾಡಿಕೊಂಡು ಯುದ್ಧಕ್ಕೆ ಹೊರಟರು. ಅವರ ಜೊತೆಯಲ್ಲಿ ಶಕ-ಕಾಂಬೋಜ-ಬಾಹ್ಲೀಕರೂ, ಯವನರೂ, ಪಾರದರೂ, ಕುಲಿಂದರೂ, ತಂಗಣರೂ, ಅಂಬಷ್ಠರೂ, ಪೈಶಾಚರೂ, ಬರ್ಬರರೂ, ಪರ್ವತೀಯರೂ ಕ್ರುದ್ಧರಾಗಿ ಕಲ್ಲುಗಳನ್ನೇ ಆಯುಧವನ್ನಾಗಿಟ್ಟುಕೊಂಡು–ಮಿಡತೆಗಳು ಅಗ್ನಿಯನ್ನು ಮುತ್ತಿಕೊಳ್ಳುವಂತೆ ಶೈನೇಯನನ್ನು ಆಕ್ರಮಿಸಿದರು. ಕಲ್ಲುಗಳ ಮೂಲಕವಾಗಿ ಯುದ್ಧಮಾಡುವ ಐದು ನೂರು ಪರ್ವತೀಯ ರಥಿಕರು ಸುಸಜ್ಜಿತರಾಗಿ ಸಾತ್ಯಕಿಯನ್ನು ಆಕ್ರಮಿಸಿದರು. ಒಂದು ಸಾವಿರ ರಥಿಗಳಿಂದಲೂ, ಎರಡು ಸಾವಿರ ಅಶ್ವಸೈನ್ಯದಿಂದಲೂ ಕೌರವಮಹಾರಥರು ಕೂಡಿಕೊಂಡು ವಿಧ-ವಿಧವಾದ ಬಾಣಗಳನ್ನು ಸುರಿಸುತ್ತಾ ಶೈನೇಯನನ್ನು ಆಕ್ರಮಿಸಿದರು. ಪದಾತಿಗಳ ಸಂಖ್ಯೆಯಂತೂ ಅಗಣಿತವಾಗಿದ್ದಿತು. ಆ ಎಲ್ಲ ಸೈನಿಕರನ್ನೂ 'ಘ್ನತೈನಂ' 'ಇವನನ್ನು ಕೊಂದುಬಿಡಿರಿ' ಎಂದು ಪ್ರಚೋದಿಸುತ್ತಾ ದುಃಶಾಸನನೂ ತನ್ನ ಸೈನ್ಯದೊಡನೆ ನಾಲ್ಕು ಕಡೆಗಳಿಂದಲೂ ಸಾತ್ಯಕಿಯನ್ನು ಆಕ್ರಮಿಸಿದನು. ಶೈನೇಯನ ಸಾಹಸಕಾರ್ಯವನ್ನು ನಾವಲ್ಲಿ ಪುನಃ ನೋಡಿದೆವು. ಒಬ್ಬನೇ ಒಬ್ಬನು ಅನೇಕರೊಡನೆ ಸ್ವಲ್ಪವಾದರೂ ಗಾಬರಿಗೊಳ್ಳದೇ ಯುದ್ಧಮಾಡುತ್ತಿದ್ದನು. ಅಂತಹ ಪರಮಾದ್ಭುತವಾದ ದೃಶ್ಯವನ್ನು ನಾವಾಗ ಕಂಡೆವು. ಸಾತ್ಯಕಿಯು ರಥಿಗಳನ್ನೂ, ಗಜಸೈನಿಕರನ್ನೂ, ಅಶ್ವಸೈನಿಕರನ್ನೂ, ಎಲ್ಲ ದಸ್ಯುಗಳನ್ನೂ ಸಂಹರಿಸಿದನು. ಆ ಸಮಯದಲ್ಲಿ ಆ ರಣಾಂಗಣವು ಭಗ್ನವಾಗಿಹೋದ ಚಕ್ರಾಯುಧಗಳಿಂದಲೂ, ಶ್ರೇಷ್ಠವಾದ ಇತರ ಆಯುಧಗಳಿಂದಲೂ, ಹತವಾದ ಆನೆಗಳಿಂದಲೂ, ಕೆಳಕ್ಕೆ ಬೀಳಿಸಲ್ಪಟ್ಟ ಧ್ವಜಗಳಿಂದಲೂ, ಕವಚಗಳಿಂದಲೂ, ರಥಗಳ ಅಚ್ಚುಮಣೆಗಳಿಂದಲೂ, ಈಷಾದಂಡಗಳಿಂದಲೂ, ಮೂಕಿಯ ಕಂಬಗಳಿಂದಲೂ ಮತ್ತು ಗತಪ್ರಾಣರಾದ ಸೈನಿಕರಿಂದಲೂ, ಸರ್ವತ್ರವ್ಯಾಪ್ತವಾಗಿದ್ದಿತು. ಯೋಧರು ಧರಿಸಿದ್ದ ಹಾರಗಳಿಂದಲೂ, ಆಭರಣಗಳಿಂದಲೂ, ವಸ್ತ್ರಗಳಿಂದಲೂ, ತೋಳುಮರಗಳಿಂದಲೂ ಮುಚ್ಚಿಹೋಗಿದ್ದ ಆ ರಣಾಂಗಣವು ಗ್ರಹಗಳಿಂದ ಕೂಡಿದ ಆಕಾಶದಂತೆಯೇ ಕಾಣುತ್ತಿದ್ದಿತು. ಅಂಜನ-ವಾಮನದಿಗ್ಗಜಗಳ ವಂಶದಲ್ಲಿ ಹುಟ್ಟಿದ್ದ, ಪರ್ವತೋಪಮವಾದ ಆಕಾರಗಳನ್ನು ಹೊಂದಿದ್ದ, ಶ್ರೇಷ್ಠವಾದ ಆನೆಗಳೂ ಸಹ ಆ ರಣಾಂಗಣದ ಸುತ್ತಲೂ ಸಾತ್ಯಕಿಯಿಂದ ಹತವಾಗಿ ಬಿದ್ದಿದ್ದುವು. ಸುಪ್ರತೀಕ-ಮಹಾಪದ್ಮ-ಐರಾವತದಿಗ್ಗಜಗಳ ಕುಲದಲ್ಲಿ ಮತ್ತು ಇನ್ನೂ ಅನೇಕ ಸುಪ್ರತಿಷ್ಠಿತವಾದ ವಂಶಗಳಲ್ಲಿ ಹುಟ್ಟಿದ್ದ ಶ್ರೇಷ್ಠವಾದ ಅನೇಕ

ಆನೆಗಳು ರಣಾಂಗಣದಲ್ಲಿ ಪ್ರಾಣತೊರೆದು ಬಿದ್ದಿದ್ದುವು. ವನಾಯುಜ, ಪರ್ವತೀಯ, ಕಾಂಬೋಜ, ಬಾಹ್ಲೀಕ ಇವೇ ಮುಂತಾದ ಶ್ರೇಷ್ಠಜಾತಿಗಳ ಕುದುರೆಗಳನ್ನು ಸಾತ್ಯಕಿಯು ಆ ಮಹಾಸಂಗ್ರಾಮದಲ್ಲಿ ಸಂಹರಿಸಿದನು. ನಾನಾದೇಶಗಳಲ್ಲಿ ಹುಟ್ಟಿದ್ದ, ನಾನಾಜಾತಿಗಳಿಗೆ ಸೇರಿದ್ದ ಶ್ರೇಷ್ಠವಾದ ಆನೆಗಳನ್ನು ನೂರಾರು-ಸಾವಿರಾರು ಸಂಖ್ಯೆಯಲ್ಲಿ ಸಾತ್ಯಕಿಯು ಸಂಹರಿಸಿದನು. ಈ ರೀತಿಯಲ್ಲಿ ಗಜಸೇನೆಯು ಕಾಲಗತಿಯನ್ನೈದುತ್ತಿರಲಾಗಿ, ಅಸಹನೆಯಿಂದ ಕೂಡಿದ್ದ ದುಃಶಾಸನನು ದಸ್ಯುಗಳನ್ನು ಕುರಿತು ಹೇಳಿದನು: "ಧರ್ಮವೆಂದರೇನೆಂಬುದನ್ನೇ ತಿಳಿಯದೇ ಇರುವ ಯೋಧರೇ! ಯುದ್ಧಕ್ಕೆ ಹಿಂತಿರುಗಿ ಬನ್ನಿರಿ. ಕ್ಷಾತ್ರಧರ್ಮಾನುಸಾರವಾಗಿ ಯುದ್ಧಮಾಡಿರಿ. ಓಡಿ ಹೋಗುವುದರಿಂದ ನಿಮಗೆ ಆಗುವ ಲಾಭವೇನು?"

ಹೀಗೆ ಹೇಳಿದನಂತರವೂ ಓಡಿಹೋಗುತ್ತಲೇ ಇದ್ದ ದಸ್ಯುಗಳನ್ನು ನೋಡಿ ನಿನ್ನ ಮಗನಾದ ದುಃಶಾಸನನು ಪಾಷಾಣಯೋಧಿಗಳಾದ, ಶೂರರಾದ ಪಾರ್ವತೀಯರನ್ನು ಸಾತ್ಯಕಿಯೊಡನೆ ಯುದ್ಧಮಾಡುವಂತೆ ಪ್ರಚೋದಿಸಿದನು.

**ಅಶ್ಮಯುದ್ಧೇಷು ಕುಶಲಾ ನೈತಜ್ಜಾನಾತಿ ಸಾತ್ಯಕಿಃ।**
**ಅಶ್ಮಯುದ್ಧಮಜಾನನ್ತಂ ಘ್ನತೈನಂ ಯುದ್ಧಕಾಮುಕಮ್ ॥೩೧॥**

"ಅಶ್ಮಯುದ್ಧಕುಶಲರೇ! ಅಶ್ಮಯುದ್ಧವನ್ನು ಸಾತ್ಯಕಿಯು ತಿಳಿದವನಾಗಿಲ್ಲ. ಕಲ್ಲನ್ನೇ ಆಯುಧವನ್ನಾಗಿ ಮಾಡಿಕೊಂಡು ಯುದ್ಧಮಾಡುವ ಕಲೆಯನ್ನು ತಿಳಿಯದೇ ಇರುವ ಯುದ್ಧಕಾಮುಕನಾದ ಈ ಸಾತ್ಯಕಿಯನ್ನು ಬೇಗ ಕೊಲ್ಲಿರಿ. ಸಾತ್ಯಕಿಯಂತೆಯೇ ಕುರುಗಳೂ ಸಹ ಅಶ್ಮಯುದ್ಧದ ಪ್ರಕ್ರಿಯೆಯನ್ನು ತಿಳಿದವರಾಗಿಲ್ಲ. ಆದರೂ ನೀವು (ಕುರುಗಳು) ಭಯಪಡುವ ಕಾರಣವಿಲ್ಲ. ಸಾತ್ಯಕಿಯ ಕಡೆಗೆ ನುಗ್ಗಿರಿ. ಪಾಷಾಣಯೋಧಿಗಳೊಡನೆ ಸಾತ್ಯಕಿಯು ಯುದ್ಧದಲ್ಲಿ ತೊಡಗಿರುವಾಗ ನಿಮ್ಮ ಸಮೀಪಕ್ಕೆ ಬರಲಾರನು."

ದುಃಶಾಸನನು ಹೇಳಿದ ಈ ಮಾತುಗಳನ್ನು ಕೇಳಿ ಪಾಷಾಣಯೋಧಿಗಳಾದ ಎಲ್ಲ ಪರ್ವತೀಯರಾಜರೂ–ರಾಜನ ಸಮೀಪಕ್ಕೆ ಮಂತ್ರಿಗಳು ಹೋಗುವ ರೀತಿಯಲ್ಲಿ ಸಾತ್ಯಕಿಯ ಬಳಿಗೆ ಧಾವಿಸಿದರು. ಅನಂತರ

ಶೈಲವಾಸಿಗಳಾದ ಯೋಧರು ಆನೆಯ ತಲೆಗಳಷ್ಟು ದಪ್ಪವಾದ ಕಲ್ಲುಗಳನ್ನು ಕೈಗಳಲ್ಲೆತ್ತಿಕೊಂಡು ಯುಯುಧಾನನ ಮುಂಭಾಗದಲ್ಲಿ ನಿಂತರು. ನಿನ್ನ ಮಗನಾದ ದುಃಶಾಸನನಿಂದ ಪ್ರೇರಿತರಾಗಿ ಸಾತ್ಯಕಿಯನ್ನು ವಧಿಸಲಿಚ್ಛಿಸಿದ್ದ ಇನ್ನೂ ಅನೇಕಯೋಧರು ಸಾತ್ಯಕಿಯ ಮೇಲೆ ಎಸೆಯಬಹುದಾದ ಗದೆ, ಶಕ್ತಿ, ಪ್ರಾಸ ಮೊದಲಾದ ಆಯುಧಗಳನ್ನೆತ್ತಿಕೊಂಡು ನಾಲ್ಕು ದಿಕ್ಕುಗಳಿಂದಲೂ ಸಾತ್ಯಕಿಯನ್ನು ಮುತ್ತಿದರು. ಶಿಲಾಯುದ್ಧವನ್ನು ಮಾಡಲಿಚ್ಛಿಸಿ ತನ್ನ ಮೇಲೆ ಬೀಳಲು ಬರುತ್ತಿದ್ದ ಯೋಧರ ಮೇಲೆ ಸಾತ್ಯಕಿಯು ನಿಶಿತವಾದ ಬಾಣಗಳನ್ನು ಧನುಸ್ಸಿನಲ್ಲಿ ಅನುಸಂಧಾನಮಾಡಿ ಪ್ರಹರಿಸಿದನು. ಪರ್ವತೀಯರು ತನ್ನ ಮೇಲೆ ಸುರಿಸುತ್ತಿದ್ದ ಅಶ್ಮವೃಷ್ಟಿಯನ್ನೂ ಶಿನಿಪುಂಗವನು ಸರ್ಪೋಪಮವಾಗಿದ್ದ ಬಾಣಗಳಿಂದ ಚೂರು-ಚೂರುಮಾಡಿಬಿಟ್ಟನು. ಬೆಂಕಿಯ ಹುಳುಗಳ ಸಮೂಹದಂತೆ ಪ್ರದೀಪ್ತವಾಗಿದ್ದ ಕಲ್ಲುಗಳ ಚೂರುಗಳಿಂದ ಪ್ರಾಯಶಃ ನಿನ್ನ ಸೈನಿಕರೇ ಹತರಾದರು. ಅದರಿಂದ ರಣಾಂಗಣದಲ್ಲಿ ಹಾಹಾಕಾರವೆದ್ದಿತು. ದೊಡ್ಡದಾದ ಬಂಡೆಗಳನ್ನೇ ಎತ್ತಿಕೊಂಡು ಬಂದಿದ್ದ ಐದು ನೂರು ಮಹಾಶೂರಯೋಧರು ಸಾತ್ಯಕಿಯ ಬಾಣಗಳ ಪ್ರಹಾರದಿಂದ ತಮ್ಮ ತೋಳುಗಳನ್ನೇ ಕಳೆದುಕೊಂಡು ಭೂಮಿಯ ಮೇಲೆ ಬಿದ್ದರು. ಪುನಃ ಸಾವಿರ ಯೋಧರೂ, ಬೇರೆಯ ಲಕ್ಷಯೋಧರೂ ಅಶ್ಮಪಾಣಿಗಳಾಗಿ ಬಂದು ಸಾತ್ಯಕಿಯನ್ನು ಸಮೀಪಿಸುವ ಮೊದಲೇ ಅವನ ಬಾಣಗಳ ಪ್ರಹಾರದಿಂದ ಅಶ್ಮಸಹಿತವಾದ ಕೈಗಳನ್ನು ಕಳೆದುಕೊಂಡು ಕೆಳಕ್ಕೆ ಬಿದ್ದರು. ಸಾತ್ಯಕಿಯನ್ನು ಜಯಿಸಬೇಕೆಂದು ಬಹಳವಾಗಿ ಪ್ರಯತ್ನಿಸುತ್ತಾ, ರಣರಂಗದಲ್ಲಿಯೇ ಇದ್ದ ಅನೇಕ ಸಹಸ್ರಪಾಷಾಣಯೋಧರನ್ನು ಸಾತ್ಯಕಿಯು ಸಂಹರಿಸಿದನು. ನಿಶ್ಚಯವಾಗಿಯೂ ಅದು ನಮಗೆ ಪರಮಾದ್ಭುತವಾಗಿ ಕಂಡಿತು. ಪುನಃ ಕಬ್ಬಿಣದ ಗುಂಡುಗಳನ್ನೂ, ಶೂಲಗಳನ್ನೂ ಕೈಗಳಲ್ಲಿಟ್ಟುಕೊಂಡಿದ್ದ ದರದರು, ತಂಗಣರು, ಖಸರು, ಲಂಪಾಕರು, ಕುಲಿಂದರು ತೆರೆದಬಾಯಿಗಳಿಂದ ಕೂಡಿದವರಾಗಿ ಸಾತ್ಯಕಿಯ ಮೇಲೆ ಎಲ್ಲ ಕಡೆಗಳಿಂದಲೂ ಕಲ್ಲುಗಳ ಮಳೆ ಗರೆದರು. ಪ್ರತೀಕಾರಮಾಡುವುದರಲ್ಲಿ ಬಹಳ ನಿಷ್ಣಾತನಾದ ಸಾತ್ಯಕಿಯು ತನ್ನ ಮೇಲೆ ಬೀಳುತ್ತಿದ್ದ ಎಲ್ಲ ಶಿಲೆಗಳನ್ನೂ ನಾರಾಚಗಳಿಂದ ಭಿನ್ನ-ಭಿನ್ನಮಾಡಿಬಿಟ್ಟನು.

ನಿಶಿತವಾದ ಬಾಣಗಳಿಂದ ಅಂತರಿಕ್ಷದಲ್ಲಿ ಛಿನ್ನ-ಭಿನ್ನವಾಗುತ್ತಿದ್ದ ಕಲ್ಲುಬಂಡೆಗಳ ಶಬ್ದದಿಂದ ಭಯಗೊಂಡ ರಥಾಶ್ವ-ಗಜ-ಪದಾತಿಗಳು ಪಲಾಯನಮಾಡಿದುವು. ಕಲ್ಲುಗಳ ಚೂರುಗಳಿಂದ ವ್ಯಾಪ್ತರಾಗಿದ್ದ ಗಜಾಶ್ವ-ಮನುಷ್ಯರಿಗೆ-ದುಂಬಿಗಳಿಂದ ಕಡಿಯಲ್ಪಟ್ಟವರಂತೆ–ರಣಾಂಗಣ ದಲ್ಲಿರಲು ಸಾಧ್ಯವೇ ಆಗಲಿಲ್ಲ. ಅಳಿದುಳಿದಿದ್ದ ಆನೆಗಳೂ ಸಹ ರಕ್ತದಿಂದ ತೋಯ್ದುಹೋಗಿದ್ದುವು. ಅವುಗಳ ಗಂಡಸ್ಥಳಗಳು ಮತ್ತು ತಲೆಗಳು ಶಿಲಾವರ್ಷದಿಂದಲೂ ಮತ್ತು ಸಾತ್ಯಕಿಯ ಬಾಣಪ್ರಹಾರದಿಂದಲೂ ಛಿನ್ನ-ಭಿನ್ನವಾಗಿದ್ದುವು. ಅಂತಹ ಅವಸ್ಥೆಯಲ್ಲಿದ್ದ ಆನೆಗಳು ಯುಯುಧಾನನ ರಥವನ್ನು ಬಿಟ್ಟು ಓಡಿಹೋದುವು. ಪೂರ್ಣಿಮೆಯಂದು ಉಕ್ಕಿಬರುವ ಸಮುದ್ರವು ಭೋರ್ಗರೆಯುವಂತೆ ಸಾತ್ಯಕಿಯಿಂದ ಮರ್ದಿತವಾಗುತ್ತಿದ್ದ ನಿನ್ನ ಸೈನ್ಯದಲ್ಲಿ ದೊಡ್ಡ ಕೋಲಾಹಲಶಬ್ದವುಂಟಾಯಿತು. ಆ ಕೋಲಾಹಲ ಶಬ್ದವನ್ನು ಕೇಳಿದ ದ್ರೋಣರು ಸಾರಥಿಯನ್ನು ಕುರಿತು: "ಸೂತ! ಸಾತ್ವತವಂಶೋತ್ಪನ್ನನಾದ, ಮಹಾರಥನಾದ ಸಾತ್ಯಕಿಯು ಅತ್ಯಂತಕ್ರುದ್ಧನಾಗಿ ಕೌರವರ ಸೈನ್ಯವನ್ನು ಅನೇಕಪ್ರಕಾರವಾಗಿ ಕ್ಷತ-ವಿಕ್ಷತಗೊಳಿಸುತ್ತಾ ರಣಾಂಗಣ ದಲ್ಲಿ ಕಾಲಪುರುಷನಂತೆಯೇ ಸಂಚರಿಸುತ್ತಿದ್ದಾನೆ. ಭಯಂಕರವಾದ ಈ ಕೋಲಾಹಲಶಬ್ದವು ಎಲ್ಲಿಂದ ಬರುತ್ತಿರುವುದೋ ಅಲ್ಲಿಗೇ ರಥವನ್ನು ಒಯ್ಯುವವನಾಗು. ನಿಶ್ಚಯವಾಗಿಯೂ ಪಾಷಾಣಯೋಧಿಗಳೊಡನೆ ಸಾತ್ವತನು ಯುದ್ಧದಲ್ಲಿ ತೊಡಗಿದ್ದಾನೆ. ಆದುದರಿಂದಲೇ ರಥಿಗಳು ವೇಗ ವಾಗಿ ಹೋಗುವ ಕುದುರೆಗಳಿಂದ ರಣಾಂಗಣದ ಹೊರಭಾಗಕ್ಕೆ ಒಯ್ಯಲ್ಪಡು ತ್ತಿದ್ದಾರೆ. ಶಸ್ತ್ರರಹಿತರಾದ, ಕವಚದಿಂದ ಹೀನರಾದ, ಬಹಳವಾಗಿ ಗಾಯಗೊಂಡ ಆ ರಥಿಗಳು ಅಲ್ಲಲ್ಲಿಯೇ ಬೀಳುತ್ತಿದ್ದಾರೆ. ಆ ಭಯಂಕರವಾದ ಯುದ್ಧದಲ್ಲಿ ಸಾರಥಿಗಳು ಕುದುರೆಗಳನ್ನು ನಿಯಂತ್ರಿಸಲು ಅಸಮರ್ಥ ರಾಗಿದ್ದಾರೆ."

ಮಹಾರಾಜ! ಭಾರದ್ವಾಜರ ಮಾತುಗಳನ್ನು ಕೇಳಿ ದ್ರೋಣರ ಸಾರಥಿಯು ಎಲ್ಲ ಶಸ್ತ್ರಧಾರಿಗಳಲ್ಲಿಯೂ ಶ್ರೇಷ್ಠರಾದ ದ್ರೋಣರನ್ನು ಕುರಿತು ಹೇಳಿದನು:

"ಆಯುಷ್ಮಂತರೇ! ಕೌರವರ ಸೈನ್ಯವು ಎಲ್ಲ ಕಡೆಗಳಿಗೂ ಓಡಿ

ಹೋಗುತ್ತಿದೆ. ಅಲ್ಲಿ ನೋಡಿರಿ! ಪರಾಜಿತರಾದ ಯೋಧರು ದಿಕ್ಕುಗಾಣದೇ ಎಲ್ಲೆಲ್ಲಿಗೋ ಓಡಿಹೋಗುತ್ತಿದ್ದಾರೆ. ಇಲ್ಲಿ ಪಾಂಚಾಲಯೋಧರು ಪಾಂಡವರೊಡನೆ ಸಂಘಟಿತರಾಗಿ ನಿಮ್ಮನ್ನೇ ಸಂಹರಿಸುವ ಆಕಾಂಕ್ಷೆಯಿಂದ ನಾಲ್ಕು ಕಡೆಗಳಿಂದಲೂ ನಿಮ್ಮನ್ನು ಮುತ್ತುತ್ತಿದ್ದಾರೆ. ಆದುದರಿಂದ, ಅರಿಂದಮರೇ! ಈ ಸಮಯಕ್ಕೆ ತಕ್ಕುದಾಗಿ ಕೆಲಸವನ್ನು ಕೈಗೊಳ್ಳಿರಿ. ಇಲ್ಲಿರುವುದರಲ್ಲಿ ಅಥವಾ ಅಲ್ಲಿಗೆ ಹೋಗುವುದರಲ್ಲಿ ಯಾವುದು ಉಚಿತವೆಂಬುದನ್ನು ತಾವೇ ಯೋಚಿಸಿರಿ. ಸಾತ್ಯಕಿಯು ಈಗಾಗಲೇ ಬಹಳ ದೂರ ಹೊರಟುಹೋಗಿದ್ದಾನೆ.”

ಮಹಾರಾಜ! ಭಾರದ್ವಾಜರ ಸಾರಥಿಯು ಹೀಗೆಂದು ಹೇಳುತ್ತಿರಲಾಗಿ ಶೈನೇಯನು ಅನೇಕವಿಧವಾದ ರಥಗಳನ್ನು ಧ್ವಂಸಮಾಡುತ್ತಿದ್ದುದು ಕಂಡು ಬಂದಿತು. ನಿನ್ನ ಸೈನಿಕರೆಲ್ಲರೂ ಯುದ್ಧದಲ್ಲಿ ಯುಯುಧಾನನಿಂದ ವಧಿಸಲ್ಪಡುತ್ತಿರಲಾಗಿ, ಅಳಿದುಳಿದ ಸೈನಿಕರು ಸಾತ್ಯಕಿಯ ರಥವನ್ನು ಪರಿತ್ಯಜಿಸಿ ದ್ರೋಣರ ಸೇನೆಯ ಕಡೆಗೇ ಓಡಿದರು. ಹಿಂದೆ ದುಃಶಾಸನನು ಯಾವ ರಥಿಗಳೊಡನೆ ಸೇರಿಕೊಂಡು ಸಾತ್ಯಕಿಯೊಡನೆ ಯುದ್ಧಮಾಡಲು ಹೋಗಿದ್ದನೋ ಆ ರಥಿಗಳೆಲ್ಲರೂ ಸಾತ್ಯಕಿಗೆ ಭಯಪಟ್ಟು ದ್ರೋಣರ ರಥವಿದ್ದ ಕಡೆಗೇ ಓಡಿಹೋದರು.”

೧೨೧ನೆಯ ಅಧ್ಯಾಯವು ಮುಗಿಯಿತು.

ಹದಿನಾರನೆಯ ಸಂಪುಟವು ಮುಗಿಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥
॥ ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು॥
॥ ಓಂ ತತ್ಸತ್ ॥

